# ಸ್ನೇಹ ಕಾರ್ತೀಕ

ಸಂಪಾದಕರು

ಎಸ್. ವಿದ್ಯಾಶಂಕರ

ಆರ್. ರಾಚಪ್ಪ

ಕ. ವೆಂ. ರಾಜಗೋಪಾಲ್

ತ. ವೆಂ. ಸ್ಮಾರಕ ಗ್ರಂಥಮಾಲೆ

ಕೃಷ್ಣಮೂರ್ತಿಪುರಂ, ಮೈಸೂರು-೪

*SNEHA KARTIKA*—Felicitation Volume Presented to Dr. G. S. Sivarudrappa. Editors: S. Vidyashankar, R. Rachappa, K. V. Rajagopal. Publisher: T. V. Memorial Series, Krishnamurthipuram, Mysore-4. First Edition: 1977; pp. 671 + xii. Price: Rs. 40/-

ಪ್ರಥಮ ಮುದ್ರಣ : ೧೯೭೭



ಬೆಲೆ ರೂ. 40-00

ಪ್ರಕಾಶಕರು : ತ. ವೆಂ. ಸ್ಮಾರಕ ಗ್ರಂಥಮಾಲೆ, ಕೃಷ್ಣಮೂರ್ತಿಪುರಂ, ಮೈಸೂರು-೪

ಮುದ್ರಕರು : ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್, ಮೈಸೂರು-೧

# ಸಂಪಾದಕರ ಮಾತು

ಡಾ. ಜಿ. ಎಸ್. ಶಿವರುದ್ರಪ್ಪನವರು ಇಂದಿನ ಮಹತ್ವದ ಕವಿಗಳಲ್ಲಿ ಒಬ್ಬರು. ಕನ್ನಡದ ಶ್ರೇಷ್ಠ ವಿಮರ್ಶಕರಲ್ಲಿ ಗಣ್ಯರು. ಮೇಲಾಗಿ ಸಹೃದಯರು. ಪಾಂಡಿತ್ಯ, ಪ್ರತಿಭೆ, ಲೋಕಾನುಭವ ಈ ಶಕ್ತಿತ್ರಯ ವಿಶೇಷದಿಂದ ರೂಪುಗೊಂಡಿರುವ ವ್ಯಕ್ತಿತ್ವದ ಬಲವುಳ್ಳವರು. ಹೊಸ ಸಾಹಿತ್ಯದ ಬಗೆಗೆ ಆಸಕ್ತಿ, ಹಳೆಯದರಲ್ಲಿ ಆಳವಾದ ಪಾಂಡಿತ್ಯ, ಅದನ್ನು ವಿವೇಚಿಸುವಲ್ಲಿ ಹೊಸ ಪೀಳಿಗೆಯ ನವೀನವಾದ ಹರಿತವಾದ ವಿಮರ್ಶನಬುದ್ಧಿ–ಇವರದು. ಮಿತ-ಹಿತ ಮಾತುಗಾರರಾದ ಇವರು ಒಳ್ಳೆಯ ಕೆಲಸಗಾರರು. ಹಿಡಿದ ಪಟ್ಟು ಬಿಡದೆ ಕಾರ್ಯ ಸಾಧಿಸುವ ಸಮರ್ಥರು. ತಾವು ಮಾಡುವ ಕಾರ್ಯದಲ್ಲಿ ತೋರುವ ಶ್ರದ್ಧೆ ಉತ್ಸಾಹಗಳನ್ನು ಇತರರಲ್ಲೂ ನಿರೀಕ್ಷಿಸುವರು. (ಒಮ್ಮೊಮ್ಮೆ ಇದು ಅವರನ್ನು ನಿರಾಶೆಗೊಳಿಸಿರುವುದೂ ಉಂಟು). ಉತ್ಸಾಹದ ಜೊತೆಗೆ ಈಡುಜೋಡಾಗಿ ಕರ್ತೃತ್ವಶಕ್ತಿಯೂ ಇವರಲ್ಲಿದೆ. ತಮ್ಮ ಕನಸನ್ನು ನನಸಾಗಿಸುವುದರಲ್ಲಿ ಪ್ರಾಮಾಣಿಕ ಮನದಿಂದ, ಯಾವ ಆಡಂಬರ ಆಟಾಟೋಪಗಳಿಲ್ಲದೆ ಮೌನವಾಗಿ ಕಾರ್ಯತತ್ಪರರಾಗುವುದು ಇವರ ಹಿರಿಯ ಗುಣಗಳಲ್ಲಿ ಒಂದು. ಕರ್ನಾಟಕದ ರಾಜಧಾನಿ ಬೆಂಗಳೂರಿನಲ್ಲಿ ಕನ್ನಡ ನಿರ್ಲಕ್ಷ್ಯಕ್ಕೊಳಗಾಗಿದ್ದ ಕಾಲದಲ್ಲಿ, ಅದಾಗ ತಾನೆ ಕಣ್ಣುಬಿಡುತ್ತಿದ್ದ ಬೆಂಗಳೂರು ವಿಶ್ವವಿದ್ಯಾಲಯದ 'ಕನ್ನಡ ವಿಭಾಗ' ಇನ್ನೂ ಬೆಳೆದು ತನ್ನ ಅಸ್ತಿತ್ವವನ್ನು ಸಮರ್ಥಿಸಿಕೊಳ್ಳಬೇಕಾಗಿದ್ದ ಸಂದರ್ಭದಲ್ಲಿ ಕನ್ನಡಕ್ಕೆ ಧೀಮಂತಿಕೆಯನ್ನು ತರುವುದರ ಜೊತೆಗೆ, ಕನ್ನಡದ ಕಾರ್ಯ-ಚಟುವಟಿಕೆ ವ್ಯವಸ್ಥಿತ ರೂಪಕ್ಕೆ ಒಳಗಾಗಿ, ಇಡೀ ಕರ್ನಾಟಕದ ವಿದ್ವಾಂಸರ ಕಣ್ಣು ಅದರತ್ತ ಬೀಳುವಂತೆ ಮಾಡಿದ ಕೀರ್ತಿ ಡಾ. ಜಿ.ಎಸ್.ಎಸ್.ರವರಿಗೆ ಸೇರಿದ್ದು. ಅವರ ಪ್ರಯತ್ನದಿಂದಾಗಿ 'ಕನ್ನಡ ವಿಭಾಗ'ವು 'ಕನ್ನಡ ಅಧ್ಯಯನ ಕೇಂದ್ರ'ವಾಯಿತು. ಅದು ತನ್ನ ಹಲವಾರು ಯೋಜನೆಗಳನ್ನು ಹಾಕಿಕೊಂಡು ಮುನ್ನಡೆಯುವುದರ ಮೂಲಕ ಕ್ರಮ ಕ್ರಮವಾಗಿ ವಿಸ್ತರಣಗೊಂಡಿತು. ಇಂದು ಕರ್ನಾಟಕದಲ್ಲಿ 'ಕನ್ನಡ ಅಧ್ಯಯನ ಕೇಂದ್ರ' ಪ್ರಸಿದ್ಧವಾಗಿರುವುದಕ್ಕೆ ಹಿನ್ನೆಲೆಯಾಗಿ ಡಾ. ಜಿ.ಎಸ್.ಎಸ್ ಅವರ ಅಪಾರ ಶ್ರಮ, ಮುಂದಾಲೋಚನೆ ಕೆಲಸಮಾಡಿದೆಯೆಂಬುದನ್ನು ಯಾರೂ ಅಲ್ಲಗಳೆಯಲಾಗದು. ಹೊಸ ಪೀಳಿಗೆಯ ತರುಣ ಕವಿಚೇತನಗಳಿಗೆ ಸ್ಫೂರ್ತಿಶಕ್ತಿಯಾಗಿರುವ ಅವರು ಗುಣಗ್ರಾಹಿಗಳಾಗಿ ಪ್ರತಿಭೆಯರಿತು ಪ್ರೋತ್ಸಾಹಿಸಿರುವರು. 'ಕನ್ನಡ ಅಧ್ಯಯನ ಕೇಂದ್ರ'ವು ವರ್ಷಂ-ಪ್ರತಿ ನಡೆಸುವ ವಿಚಾರ ಸಂಕಿರಣಗಳಲ್ಲಿ ಪ್ರತಿಭಾವಂತ ಲೇಖಕರಿಗೆ ಹಿರಿಯ-ಕಿರಿಯರೆಂಬ ಭೇದಭಾವ ಮಾಡದೆ ಮನ್ನಣೆ ನೀಡಿರುವರು. 'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ'ಯಲ್ಲಿ ಕರ್ನಾಟಕದ ಎಲ್ಲ ಹಿರಿ-ಕಿರಿಯ ವಿದ್ವಾಂಸರು, ಸಂಶೋಧಕರು ಪಾಲ್ಗೊಳ್ಳುವಂತೆ ಯೋಜನೆ ಮಾಡಿ ಪ್ರತಿಭೆಯನ್ನು ಗುರುತಿಸಿ ಗೌರವಿಸಿರುವರು. 'ಸಾಹಿತ್ಯ

ವಾರ್ಷಿಕ', 'ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ', 'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ' —ಇವು ಡಾ. ಜಿ.ಎಸ್.ಎಸ್. ಅವರ ಕರ್ತೃತ್ವಶಕ್ತಿಗೆ ನಿದರ್ಶನಗಳಾಗಿವೆ.

ಡಾ. ಜಿ.ಎಸ್.ಎಸ್. ಅವರದು ನೇರವಾದ ನಡೆ, ನುಡಿ. ಆರೋಗ್ಯವಂತ ಜೀವನ ದೃಷ್ಟಿ, ರೂಪ–ಸತ್ವವೆರಡರಲ್ಲೂ ಓಜಸ್ವಿ ಎನಿಸುವ ಕಾವ್ಯಸೃಷ್ಟಿ ತನ್ನದಾಗಿಸಿಕೊಂಡಿರುವ ಇವರಿಗೆ ೭–೨–೧೯೭೬ಕ್ಕೆ ಐವತ್ತು ತುಂಬಿತು. ಆ ವೇಳೆಗೆ ಅವರ ಸಾಧನೆ-ಸಿದ್ಧಿ, ಕೃತಿಗಳ ಸಹೃದಯ ಪರಿಶೀಲನ, ಸಾರಸ್ವತಲೋಕಕ್ಕೆ ಕೊಡುಗೆ ಇತ್ಯಾದಿಗಳನ್ನು ಪರಿಚಯಿಸುವ ಒಂದು ಅಭಿನಂದನ ಗ್ರಂಥ ಹೊರತಂದು ಅದನ್ನು ಡಾ. ಜಿ.ಎಸ್.ಎಸ್. ಅವರಿಗೆ ಅರ್ಪಿಸಿ ಗೌರವಿಸುವ ಆಲೋಚನೆ ಮಾಡಿದ್ದೆವು. ಆ ವೇಳೆಗೆ ಹೊರಬರಬೇಕಾಗಿದ್ದ ಅಭಿನಂದನ ಗ್ರಂಥವು ಇದೀಗ, ಒಂದು ವರ್ಷ ತಡವಾಗಿ, ಹೊರ ಬರುತ್ತಿದೆ. ನಮ್ಮ ಕಾರ್ಯಯೋಜನೆ ಅನಿವಾರ್ಯ ಕಾರಣಗಳಿಂದಾಗಿ ಮುಂದೂಡಲ್ಪಟ್ಟರೂ ಒಂದು ಒಳ್ಳೆಯ ಪರಾಮರ್ಶನ ಗ್ರಂಥವನ್ನು ಇನ್ನಷ್ಟು ಚೆನ್ನಾಗಿ ಹೊರತಂದಿದ್ದೇವೆ ಎಂಬ ತೃಪ್ತಿ ನಮಗಿದೆ. ಈ ಸಂಪುಟದಲ್ಲಿ ಏಳು ಭಾಗಗಳಿವೆ. ಮೊದಲನೆಯದರಲ್ಲಿ ಜಿ.ಎಸ್.ಎಸ್. ಅವರು ಕರ್ನಾಟಕದ ಹಿರಿಯ ಸಮಕಾಲೀನ ಮತ್ತು ಕಿರಿಯ ವಿದ್ವಾಂಸರಿಗೆ ಹೇಗೆ ಕಂಡರೆಂಬುದನ್ನೂ, ಎರಡನೆಯದರಲ್ಲಿ ಜಿ.ಎಸ್.ಎಸ್. ಹಾಗೂ ಅವರ ಕೃತಿಗಳ ಸಮಗ್ರ ಅಧ್ಯಯನವನ್ನೂ, ಮೂರನೆಯದರಲ್ಲಿ ಜಿ.ಎಸ್.ಎಸ್. ಕೃತಿಗಳ ವಿಭಿನ್ನ ಕೋನದ ಪರಿಶೀಲನವನ್ನೂ, ನಾಲ್ಕನೆಯದರಲ್ಲಿ ಜಿ.ಎಸ್.ಎಸ್ ಅವರ ಆಯ್ದ ಕವನಗಳ ಪ್ರಾಯೋಗಿಕ ವಿಮರ್ಶೆಯನ್ನೂ, ಐದನೆಯದರಲ್ಲಿ ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಹಲವು ಸಂಶೋಧನ ಲೇಖನಗಳನ್ನೂ, ಆರನೆಯದರಲ್ಲಿ ಜಿ.ಎಸ್.ಎಸ್. ಅವರ ವ್ಯಕ್ತಿತ್ವವನ್ನು ಪರಿಚಯಿಸುವ ಸಂದರ್ಶನ ಲೇಖನಗಳನ್ನೂ, ಏಳನೆಯದರಲ್ಲಿ ತಡವಾಗಿ ನಮಗೆ ಬಂದ ಕೆಲವು ಲೇಖನಗಳನ್ನೂ ಕೊಡಲಾಗಿದೆ. ಕರ್ನಾಟಕದ ಎಲ್ಲೆಡೆಯಿಂದ ನಮ್ಮ ಕೋರಿಕೆಗೆ ಒಪ್ಪಿ ಲೇಖನಗಳು ಬಂದುವು. ನಮ್ಮ ಗ್ರಂಥದ ಲೇಖಕ ಬಳಗ ನಮಗಿತ್ತಿರುವ ಪ್ರೋತ್ಸಾಹ, ಸಹಕಾರ ಮರೆಯಲಾಗದ್ದು. ಅವರಿಗೆ ನಮ್ಮ ಧನ್ಯವಾದಗಳು.

ನಮ್ಮೊಂದಿಗೆ ಉದ್ದಕ್ಕೂ ಶ್ರಮಿಸಿರುವ ಡಾ. ಎಂ. ಚಿದಾನಂದಮೂರ್ತಿಯವರು ಗ್ರಂಥ ಅಚ್ಚುಕಟ್ಟಾಗಿ ಬರಲಿಕ್ಕೆ ಕಾರಣರಾಗಿರುವರು. ನಮ್ಮ ಉತ್ಸಾಹ ಬತ್ತದಂತೆ ಪ್ರೋತ್ಸಾಹಿಸಿರುವರು. ತಮ್ಮ ಅಮೂಲ್ಯ ಸಲಹೆ ಸೂಚನೆಗಳಿಂದ ನಮ್ಮ ಅನೇಕ ಸಮಸ್ಯೆಗಳನ್ನು ಪರಿಹರಿಸಿರುವರು. ಅಚ್ಚಿನ ತಪ್ಪುಗಳಿಂದ ಮುಕ್ತವಾಗಿ ಕೃತಿ ಹೊರಬರಬೇಕೆಂದು ನಮ್ಮನ್ನು ಮೇಲಿಂದ ಮೇಲೆ ಎಚ್ಚರಿಸಿ, ನಮ್ಮೊಂದಿಗೆ ಸೇರಿ ಕರಡು ತಿದ್ದಿರುವರು. ಇವರ ಸಹಕಾರ ಪ್ರೋತ್ಸಾಹವನ್ನು ನೆನೆಯಲು ನಮ್ಮ ಮಾತುಗಳಿಗೆ ಶಕ್ತಿ ಸಾಲದು.

ಮುದ್ರಣಕ್ಕೆ ಗ್ರಂಥ ಸಿದ್ಧವಾದಾಗ ಪ್ರಕಟಣೆಯ ಸಮಸ್ಯೆ ಎದುರಾಯಿತು. ಡಾ. ಜಿ.ಎಸ್.ಎಸ್. ಕೃತಿಗಳಲ್ಲಿ ಬಹುಪಾಲನ್ನು ಪ್ರಕಟಿಸಿರುವವರು ತ.ವೆಂ. ಸ್ಮಾರಕ ಗ್ರಂಥ ಮಾಲೆಯವರು; ಅವರ ನೆರವು ಕೇಳಿ ಎಂದು ಸಮಯೋಚಿತ ಸಲಹೆ ನೀಡಿದರು ಕೆಲವು ಮಿತ್ರರು. ಗ್ರಂಥ ಪ್ರಕಟಿಸಲು ಒಮ್ಮೆಲೇ ಒಪ್ಪಿ ಉತ್ಸಾಹ ತೋರಿದವರು ಗೆಳೆಯರಾದ

ಶ್ರೀ ಛಾಯಾಪತಿಯವರು. ಗ್ರಂಥಕ್ಕೆ ಏನು ಹೆಸರಿಡಬೇಕು ಎಂಬ ವಿಷಯದಲ್ಲಿ ಚರ್ಚೆ ನಡೆದು ಒಂದು ತೀರ್ಮಾನಕ್ಕೆ ಬರದೆ ಕೈಕಟ್ಟಿ ಕುಳಿತಿದ್ದಾಗ ಯಾರಿಂದಲೋ ನಮ್ಮ ಕಷ್ಟ ತಿಳಿದು ಸುಂದರ ಹಾಗೂ ಅರ್ಥಪೂರ್ಣವಾದ 'ಸ್ನೇಹ ಕಾರ್ತೀಕ' ಎಂಬ ಹೆಸರನ್ನು ತಿಳಿಸಿ ಸಕಾಲದಲ್ಲಿ ಸಹಕರಿಸಿದವರು ಹಿರಿಯರಾದ ಶ್ರೀ ಚೆನ್ನವೀರ ಕಣವಿಯವರು. ಈ ಗ್ರಂಥದ ಯೋಜನೆಯ ಆರಂಭದಲ್ಲಿ ನಮ್ಮೊಡನೆ ಸಹಕರಿಸಿ ಪ್ರೋತ್ಸಾಹಿಸಿದವರು ಶ್ರೀ. ಕೆ. ಮರುಳಸಿದ್ದಪ್ಪ ಮತ್ತು ಶ್ರೀ ಎಸ್. ಶಿವಣ್ಣ. ಅಲ್ಪವೇಳೆಯಲ್ಲಿ ತಮ್ಮ ತೊಂದರೆಗಳನ್ನೆಲ್ಲಾ ಬದಿಗೊತ್ತಿ 'ಸ್ನೇಹ ಕಾರ್ತೀಕ'ವನ್ನು ಚೆನ್ನಾಗಿ ಮುದ್ರಿಸಿಕೊಟ್ಟವರು ಮಿತ್ರರಾದ ಶ್ರೀ ಜಿ. ಎಚ್ ಕೃಷ್ಣಮೂರ್ತಿಗಳು. ಗ್ರಂಥದ ರಕ್ಷಾಕವಚದ ಚಿತ್ರ ಬರೆದುಕೊಟ್ಟವರು ಪ್ರತಿಭಾವಂತ ತರುಣ ಚಿತ್ರಕಾರರಾದ ಶ್ರೀ ಪ. ಸು. ಕುಮಾರ್ ಅವರು. ಇನ್ನೂ ಹಲವರು ಈ ಗ್ರಂಥಕ್ಕಾಗಿ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಸಹಕರಿಸಿದ್ದಾರೆ. ಇವರೆಲ್ಲರಿಗೂ ನಾವು ಆಭಾರಿಗಳು.

ಫೆಬ್ರವರಿ ೭, ೧೯೭೭ — ಎಸ್. ವಿದ್ಯಾಶಂಕರ
ಬೆಂಗಳೂರು — ಆರ್. ರಾಚಪ್ಪ
ಕೆ. ವೆಂ. ರಾಜಗೋಪಾಲ್

# ಪರಿವಿಡಿ


ಸಂಪಾದಕರ ಮಾತು ... ... ... ... v

ಸ್ನೇಹ ಕಾರ್ತೀಕ (ಕವಿತೆ)—ಚೆನ್ನವೀರ ಕಣವಿ ... ... ... ೩

**ಹರಕೆ-ಹಾರೈಕೆ** (ಜಿ.ಎಸ್.ಎಸ್.–ವ್ಯಕ್ತಿಯಾಗಿ)

— ಶಿವಕುಮಾರ ಸ್ವಾಮಿಗಳು ... ... ... ... ೪
— ಕುವೆಂಪು ... ... ... ... ... ೫
— ದ. ರಾ. ಬೇಂದ್ರೆ ... ... ... ... ೬
— ಮಾಸ್ತಿ ವೆಂಕಟೇಶ ಅಯ್ಯಂಗಾರ್ ... ... ... ೭
— ಆರ್. ಸಿ. ಹಿರೇಮಠ ... ... ... ... ೯
— ವಿ. ಕೃ. ಗೋಕಾಕ್ ... ... ... ... ೧೨
— ಸ. ಸ. ಮಾಳವಾಡ ... ... ... ... ೧೪
— ಪು. ತಿ. ನರಸಿಂಹಾಚಾರ್ ... ... ... ... ೧೫
— ಕೆ. ಎಸ್. ನರಸಿಂಹಸ್ವಾಮಿ ... ... ... ... ೧೯
— ಎಂ. ವಿ. ಸೀತಾರಾಮಯ್ಯ ... ... ... ... ೨೧
— ವಿ. ಎಂ. ಇನಾಂದಾರ್ ... ... ... ... ೨೭
— ಕೆ. ಬಿ. ಪ್ರಭುಪ್ರಸಾದ ... ... ... ... ೩೧
— ಸ. ಸುಬ್ರಹ್ಮಣ್ಯಂ ... ... ... ... ೫೧
— ಎಚ್. ದೇವೀರಪ್ಪ ... ... ... ... ೬೫
— ಎಂ. ಚಿದಾನಂದಮೂರ್ತಿ ... ... ... ... ೭೦
— ಎಸ್. ಎಂ. ವೃಷಭೇಂದ್ರಸ್ವಾಮಿ ... ... ... ೭೭
— ಜಿ. ಗುಂಡಣ್ಣ ... ... ... ... ... ೮೪
— ಜಿ. ಬ್ರಹ್ಮಪ್ಪ ... ... ... ... ೮೮
— ಶಂಕರ ಮೊಕಾಶಿ ಪುಣೇಕರ ... ... ... ... ೯೧
— ಟಿ. ವಿ. ವೆಂಕಟಾಚಲಶಾಸ್ತ್ರಿ ... ... ... ... ೯೩
— ತಂಗಿರಾಲ ವೆಂಕಟಸುಬ್ಬಾರಾವು ... ... ... ೯೭
— ಎನ್. ವಿ. ವಿಮಲ ... ... ... ... ೧೦೨
— ಸಿ. ಎಸ್. ವಿಜಯಲಕ್ಷ್ಮಿ ... ... ... ... ೧೦೫

ಆತ್ಮೀಯರು (ಕವಿತೆ)—ಸುಮತೀಂದ್ರ ನಾಡಿಗ ... ... ... ೧೦೮

ಜಿ.ಎಸ್.ಎಸ್. (ಕವಿತೆ)—ಎಂ. ಎನ್. ವ್ಯಾಸರಾವ್ ... ... ೧೧೦

**ಕವಿ-ಕೃತಿ-ದರ್ಶನ**

ನಾನು ಕಂಡ ಕವಿ ಶಿವರುದ್ರಪ್ಪನವರು—ಶಂ. ಶ್ರೀ. ಮುಗಳಿ ... ... ೧೧೫

ಬೆರಗಿನಿಂದ ನಿಬ್ಬೆರಗಿಗೆ—ಚೆನ್ನವೀರ ಕಣವಿ ... ... ... ೧೨೪

ಶಿವರುದ್ರಪ್ಪನವರ ಕಾವ್ಯ—ಒಂದು ದೃಷ್ಟಿಯಿಂದ
— ಎಲ್. ಎಸ್. ಶೇಷಗಿರಿರಾವ್ ... ... ... ೧೨೬
ಜಿ.ಎಸ್.ಎಸ್-ಸಂಪ್ರದಾಯ-ಹೊಣೆಗಾರಿಕೆ—ಕ. ವೆಂ. ರಾಜಗೋಪಾಲ್ ... ೧೫೨
ಜಿ.ಎಸ್.ಎಸ್—ಕವಿಯಾಗಿ—ರಾಘವೇಂದ್ರ ಖಾಸನೀಸ್ ... ... ೧೬೨
ಶಿವರುದ್ರಪ್ಪನವರ ಕವನಗಳು—ವಿಜಯಭಾರತಿ ರಾಂ ... ... ೧೬೭
ಸಾಮಗಾನ—ಎಚ್. ಎಸ್. ಮಾಧವರಾವ್ ... ... ... ೨೦೭
ಚೆಲುವು-ಒಲವು—ಎಸ್. ಎಂ. ವೃಷಭೇಂದ್ರಸ್ವಾಮಿ ... ... ೨೧೧
ಜಿ.ಎಸ್.ಎಸ್. ಅವರ ಚೆಲುವು-ಒಲವು—ದೊಡ್ಡರಂಗೇಗೌಡ ... ... ೨೧೫
ದೇವಶಿಲ್ಪ—ಪ್ರಭುಶಂಕರ ... ... ... ... ೨೨೦
ದೇವಶಿಲ್ಪ—ಎಚ್. ವಿ. ಶ್ರೀನಿವಾಸಶರ್ಮ ... ... ... ೨೨೮
ದೀಪದ ಹೆಜ್ಜೆಯಲ್ಲಿ ನವೀನತೆ—ವಸಂತ ಕುಷ್ಟಗಿ ... ... ... ೨೩೬
ಕಾರ್ತೀಕ—ಜಿ. ಎಸ್. ಕಾಪ್ಸೆ ... ... ... ... ೨೪೨
ತೀರ್ಥವಾಣಿ—ಆರ್. ಜಿ. ಕುಲಕರ್ಣಿ ... ... ... ೨೫೧
ಅನಾವರಣ—ಟಿ. ಎಸ್. ನಾಗರಾಜಶೆಟ್ಟಿ ... ... ... ೨೫೯
ತೆರೆದ ದಾರಿ—ಎನ್. ವಿ. ಭಾಗ್ಯಲಕ್ಷ್ಮಿ ... ... ... ೨೭೮
ಸೌಂದರ್ಯ ಸಮೀಕ್ಷೆ—ಎಸ್. ಎಲ್. ಭೈರಪ್ಪ ... ... ... ೨೮೩
ಸೌಂದರ್ಯ ಸಮೀಕ್ಷೆ—ಕೆ. ಕೃಷ್ಣಮೂರ್ತಿ ... ... ... ೨೮೪
'ಸೌಂದರ್ಯ ಸಮೀಕ್ಷೆ' ಮತ್ತು ನವೋದಯ ಸಾಹಿತ್ಯ ಮೀಮಾಂಸೆ
— ಕೆ. ವಿ. ನಾರಾಯಣ ... ... ... ... ೨೮೯
ಪರಿಶೀಲನ—ಪಿ. ವಿ. ನಾರಾಯಣ ... ... ... ... ೨೯೬
ಗತಿಬಿಂಬ—ಒಂದು ಸಮೀಕ್ಷೆ—ಬಸವರಾಜ ಕಲ್ಗುಡಿ ... ... ೩೦೬
ವಿಮರ್ಶೆಯ ವಿಮರ್ಶೆ—ಶ್ರೀರಂಗ ... ... ... ... ೩೧೫
ವಿಮರ್ಶೆಯ ಸಾಂಸ್ಕೃತಿಕ ಹೊಣೆಗಾರಿಕೆ—ಕಿ. ರಂ. ನಾಗರಾಜ ... ... ೩೧೮
ಕರ್ಮಯೋಗಿ—ಉಷಾಕಿರಣ್ ... ... ... ... ೩೨೩
ಮಾಸ್ಕೋದಲ್ಲಿ ಇಪ್ಪತ್ತೆರಡು ದಿನ—ಜಿ. ಎಚ್. ನಾಯಕ್ ... ... ೩೨೭
ಮಾಸ್ಕೋದಲ್ಲಿ ಇಪ್ಪತ್ತೆರಡು ದಿನ—ಸಿ. ವೀರಣ್ಣ ... ... ... ೩೨೮
ಡಾ|| ಜಿ.ಎಸ್.ಎಸ್. ಅವರ ನಾಟಕಗಳು—ಹು. ಕಾ. ಜಯದೇವ್ ... ೩೩೩
ಶಬರಶಂಕರವಿಳಾಸ ಸಂಗ್ರಹ—ಎಂ. ಎಂ. ಕಲ್ಬುರ್ಗಿ ... ... ೩೪೩
ಡಾ|| ಜಿ.ಎಸ್.ಎಸ್. ಅವರು ಸಂಪಾದಿಸಿರುವ ಕೃತಿಗಳು—ಎನ್. ಬಸವಾರಾಧ್ಯ ೩೪೬

## ಪರಿಶೀಲನ

ಕಾವ್ಯಪ್ರಜ್ಞೆ—ವೇಣುಗೋಪಾಲ ಸೊರಬ ... ... ... ೩೫೩
ಕಾವ್ಯ ಮತ್ತು ಸಂಪ್ರದಾಯ—ಎಚ್. ಎಸ್. ರಾಘವೇಂದ್ರರಾವ್ ... ೩೬೨

ಪ್ರಕೃತಿ—ಆರ್. ರಾಜಪ್ಪ ... ... ... ... ೩೭೦
ಸಮಾಜ—ಸಿ. ಯು. ಮಂಜುನಾಥ್ ... ... ... ೩೮೭
ವಿಡಂಬನೆ—ಕಾಳೇಗೌಡ ನಾಗವಾರ ... ... ... ... ೪೦೬
ಕಾವ್ಯ ಮತ್ತು ಭಾಷೆ—ಕೃಷ್ಣ ಪರಮೇಶ್ವರ ಭಟ್ಟ ... ... ... ೪೧೪
ಧೋರಣೆ ಮತ್ತು ಬಂಧ—ಡಿ. ಆರ್. ನಾಗರಾಜ್ ... ... ... ೪೨೮
ಜಿ.ಎಸ್.ಎಸ್. ಕವನಗಳಲ್ಲಿ ಗಾಂಧಿ—ಬರಗೂರು ರಾಮಚಂದ್ರಪ್ಪ ... ೪೩೭

## ಪ್ರಾಯೋಗಿಕ ವಿಮರ್ಶೆ

ಮಬ್ಬಿನಿಂದ ಮಬ್ಬಿಗೆ—ಜಿ. ಎಚ್. ನಾಯಕ್ ... ... ... ೪೪೭
ಮಬ್ಬಿನಿಂದ ಮಬ್ಬಿಗೆ—ಅ. ರಾ. ಮಿತ್ರ ... ... ... ೪೫೯
ಮಬ್ಬಿನಿಂದ ಮಬ್ಬಿಗೆ—ರಾಮದಾಸ್ ... ... ... ೪೭೩
'ಶರತ್-ಶಾರದೆ' (ಒಂದು ವಿವೇಚನೆ)—ಕ. ವೆಂ. ರಾಜಗೋಪಾಲ್ ... ೪೮೩
ಗೋಡೆ—ಡಿ. ರಘುನಾಥರಾವ್ ... ... ... ... ೪೯೧
ನನ್ನ ಹಣತೆ—ಸೋಮಶೇಖರ ಇಮ್ರಾಪೂರ ... ... ... ೪೯೭
ಸಂಜೆದಾರಿ—ಡಿ. ಲಿಂಗಯ್ಯ ... ... ... ... ೫೦೮
ನಿರ್ಧಾರ—ಚಿ. ಶ್ರೀನಿವಾಸರಾಜು ... ... ... ... ೫೧೭
'ಸಂಜೆದಾರಿ'—ಎಚ್. ಎಸ್. ವೆಂಕಟೇಶಮೂರ್ತಿ ... ... ... ೫೨೮
'ದುಃಸ್ವಪ್ನ'—ಟಿ. ಎಸ್. ದಕ್ಷಿಣಾಮೂರ್ತಿ ... ... ... ೫೩೨

## ಸಂಶೋಧನೆ

ವೀರಶೈವ ಸಾಹಿತ್ಯಕ್ಕೆ ಸಾಂಗತ್ಯಗಳ ಕೊಡುಗೆ—ಎನ್. ವಿಜಯಲಕ್ಷ್ಮಿ ... ೫೪೦
'ಪುರಾಣ' ಮತ್ತು 'ಕಾವ್ಯ'—ಬಸವಣ್ಣನ ಬಗ್ಗೆ—ಎಂ. ಚಿದಾನಂದಮೂರ್ತಿ ... ೫೪೫
'ಕನ್ನಡದಲ್ಲಿ ಗದ್ಯ ಸಾಹಿತ್ಯದ ಬೆಳವಣಿಗೆ'—ಬಿ. ಸಿ. ಜವಳಿ ... ... ೫೪೯
ವಚನಕಾರರ ದೃಷ್ಟಿಯಲ್ಲಿ ಮರ್ತ್ಯಲೋಕ-ಕೈಲಾಸ—ಎಸ್. ವಿದ್ಯಾಶಂಕರ ... ೫೭೭
ದಾಸಿಮಯ್ಯಗಳು—ಆರ್. ರಾಜಪ್ಪ ... ... ... ೫೮೨
ಸಾಹಿತ್ಯ ವಿಮರ್ಶೆಯ ನೆಲೆ-ನಿಲವು—ಆರ್. ಪೂರ್ಣಿಮಾ ... ... ೫೯೯
ಬೀರಗೊಳು-ವೀರಗೊಳು-ರಣಗೊಳ್—ರಾ. ಶೇಷಶಾಸ್ತ್ರಿ ... ... ೬೦೮
ಕನ್ನಡ ಸಾಹಿತ್ಯಕ್ಕೆ ಜೈನರ ಕೊಡುಗೆ—ವಿ. ಶಿವಾನಂದ ... ... ೬೧೩
ಕೆಲವು ಅಪ್ರಕಟಿತ ತ್ರಿಪದಿಗಳು—ಎಸ್. ಶಿವಣ್ಣ ... ... ... ೬೨೬
ಮೇದಾರ ಕೇತಯ್ಯಗಳ ಸಾಂಗತ್ಯ—ಎಸ್. ಉಮಾಪತಿ ... ... ೬೩೩

## ಸಂದರ್ಶನ

ಜಿ. ಎಸ್. ಶಿವರುದ್ರಪ್ಪ—ಜಿ. ಎಸ್. ಭಟ್ಟ ... ... ... ೬೩೯
ಜಿ. ಎಸ್. ಶಿವರುದ್ರಪ್ಪ—ಶ್ರೀನಿವಾಸ್ ... ... ... ೬೪೯

## ಇನ್ನಷ್ಟು ಲೇಖನಗಳು

ನಮ್ಮ ಮೇಷ್ಟ್ರು ಮತ್ತು ಗೆಳೆಯ ಜಿ.ಎಸ್.ಎಸ್.—ಪಿ. ಲಂಕೇಶ್ ... ೬೫೫
'ಮುಕ್ತಪ್ರಜ್ಞೆ'ಯ ಕವಿ ಜಿ. ಎಸ್. ಶಿವರುದ್ರಪ್ಪ—ಜಯಸುದರ್ಶನ ... ೬೫೮

ಚೆನ್ನವೀರ ಕಣವಿ

# ಸ್ನೇಹ ಕಾರ್ತೀಕ

ಮುಖವಾಡಗಳ ಆಟಮಟದ ನಟನೆಯು ನಡುವೆ
ದಿಟವ ದಿಟ್ಟಿಸಿ, ಧೈರ್ಯದಲಿ ಮುಂದಿಟ್ಟ ಹೆಜ್ಜೆ-
ಬುಟ್ಟಿಗಟ್ಟಲೆ ಮಾತು ಹೊರಿಸಿದವಂಗೆ ಒಜ್ಜೆ.
ಶ್ರುತಿಗೆ ಸರಿಯಾದ ಕೃತಿ ; ಏಕೆ ಉಪಕೃತಿ ಗೊಡವೆ?
ಕತ್ತಲೆಯ ಜೀರುಂಡೆಮೇಳಕುತ್ತರವಾಗಿ
ನಕ್ಷತ್ರಗಳ ಮುಗುಳುನಗೆ, ಬಾನ ಗಂಭೀರ
ಬಗೆ: ಧ್ಯಾನ. ನಸುಕಿನಲಿ ನಿದ್ದೆ ತಿಳಿದೆದ್ದವರ
ಕಂಡರಳುವದು ಕೈಮುಗಿದ ಮೊಗ್ಗೆ ತಾನಾಗಿ.
ನೋವು ತುಂಬಿದ ನಾವೆ ನಡೆಸಿ ಕವಿತೆಯ ಹುಟ್ಟು-
ಅಟ್ಟಹಾಸದ ದೂರ ತೆರೆಯಾಚೆ ಸೌಂದರ್ಯ
ಶೋಧ. ಚಿಂತನ ಕ್ಷಿತಿಜ : ಗುರಿ ನಿರಿಗೊಳಿಪ ಕಾರ್ಯ
ತತ್ಪರತೆ. ಸತ್ತ್ವವೆಲ್ಲಿದೆ ರಜ ತಮವ ಬಿಟ್ಟು?
ನೂರು ಶರದ್ಸಿರಿಗೆ ಏರಬೇಕಿದೆ ಜೀಕ-
ತೂಕ. ಅದಕೆ ಹಾರೈಕೆ: ಸ್ನೇಹ ಕಾರ್ತೀಕ.

## ಶ್ರೀ ಶಿವಕುಮಾರಸ್ವಾಮಿಗಳು

# ಕಷ್ಟಸಹಿಷ್ಣು

ಡಾ. ಜಿ. ಎಸ್. ಶಿವರುದ್ರಪ್ಪನವರು ಕನ್ನಡ ಸಾರಸ್ವತ ಪ್ರಪಂಚದಲ್ಲಿ ಗಣ್ಯಸ್ಥಾನವನ್ನು ಗಳಿಸಿರುವುದಲ್ಲದೆ ತಮ್ಮ ಹಲವಾರು ಕೊಡುಗೆಗಳಿಂದ ಕನ್ನಡದ ಶ್ರೀಮಂತಿಕೆಯನ್ನು ಬೆಳಸಿದ್ದಾರೆ. ಅವರ ಕೃತಿಗಳು ಅಪಾರ ಜನಪ್ರಿಯತೆಯನ್ನು ಗಳಿಸಿವೆ.

ಅಧ್ಯಾಪಕವೃತ್ತಿಯ ಬಗ್ಗೆ ವಿಶೇಷ ಗೌರವವನ್ನುಳ್ಳ ಶ್ರೀಯುತರು ಉನ್ನತಮಟ್ಟದ ಬೋಧಕರಾಗಿ ಶಿಷ್ಯರ ಹೃದಯವನ್ನು ಸೂರೆಗೊಂಡಿದ್ದಾರೆ. ಅವರ ಮಾರ್ಗದರ್ಶನದಿಂದ ಪ್ರಭಾವಿತರಾದ ಸಹಸ್ರಾರು ಮಂದಿ ತರುಣರು ವಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸುತ್ತಿರುವುದೂ ಅವರನ್ನು ಅಭಿಮಾನದಿಂದ ಸ್ಮರಿಸುತ್ತಿರುವುದೂ ಅವರ ನೈಜ ವ್ಯಕ್ತಿತ್ವವನ್ನು ಪ್ರತಿಬಿಂಬಿಸುತ್ತದೆ. ಜೊತೆಗೆ, ಎಲ್ಲ ಹಂತಗಳಲ್ಲಿ ಶ್ರಮವನ್ನು ಅವಲಂಬಿಸಿ ಮುನ್ನಡೆದ ಶಿವರುದ್ರಪ್ಪನವರು ಕಷ್ಟಸಹಿಷ್ಣು. ನೇರ ಸ್ವಭಾವದ ಸರಳ ಸಹಜಜೀವಿ.

ಅವರು ಐವತ್ತುವರ್ಷಗಳು ತುಂಬುಜೀವನ ಸಾಗಿಸಿ ಐವತ್ತೊಂದರ ಹೊಸ್ತಿಲಲ್ಲಿರುವಾಗ ಅಭಿನಂದಿಸಿ ಗ್ರಂಥವೊಂದನ್ನರ್ಪಿಸುತ್ತಿರುವುದು ಆನಂದದ ವಿಷಯ. ಅವರ ಜೀವನದ ಹಲವಾರು ಮುಖಗಳನ್ನು ಪ್ರತಿಬಿಂಬಿಸುವ ಈ ಗ್ರಂಥ ಉಪಯುಕ್ತವೂ ಆದೀತು. ಸಾಹಿತಿಯ ಅಭಿಮಾನಿಗಳ ಈ ಪ್ರಯತ್ನ ಯಶಸ್ವಿಯಾಗಲೆಂದೂ, ಶ್ರೀ ಶಿವರುದ್ರಪ್ಪನವರು ಇನ್ನೂ ಅಧಿಕಕಾಲ ನಾಡುನುಡಿಗಳ ಇತೋಽಪ್ಯತಿಶಯವಾದ ಸೇವೆಯನ್ನು ಸಲ್ಲಿಸಲು ಅಗತ್ಯವಾದ ಶಕ್ತಿ ಸಾಮರ್ಥ್ಯಗಳನ್ನು ದಯಾಮಯನಾದ ಪರಮಾತ್ಮನು ಅನುಗ್ರಹಿಸಲೆಂದು ಹಾರೈಸುತ್ತೇವೆ.

## ಕುವೆಂಪು

# ಅಭಿನಂದನೀಯ

ಮಾನ್ಯರೆ,

ಡಾ|| ಜಿ. ಎಸ್. ಶಿವರುದ್ರಪ್ಪನವರ 50ನೆಯ ವರ್ಷದ ಹುಟ್ಟುಹಬ್ಬದ ಸಂದರ್ಭದಲ್ಲಿ ಒಂದು ಅಭಿನಂದನ ಗ್ರಂಥವನ್ನು ತರಲಿದ್ದೀರಿ ಎಂಬುದು ತಿಳಿದು ಸಂತೋಷವಾಗಿದೆ.

ತಾವೇ ಸ್ವಯಂ ಸಾಹಿತಿಯಾಗಿ ಕನ್ನಡ ಸಾಹಿತ್ಯದ ವಿವಿಧ ಕ್ಷೇತ್ರಗಳಲ್ಲಿ ಅದರಲ್ಲೂ ಮುಖ್ಯವಾಗಿ ಕಾವ್ಯ ಮತ್ತು ವಿಮರ್ಶೆಯ ಕ್ಷೇತ್ರಗಳಲ್ಲಿ ಕೆಲಸಮಾಡಿ ಕನ್ನಡದ ಶ್ರೀಮಂತಿಕೆಯನ್ನು ಹೆಚ್ಚಿಸಿರುವುದಲ್ಲದೆ ನೂರಾರು ವಿದ್ಯಾರ್ಥಿಗಳಿಗೆ ಶ್ರದ್ಧೆಯಿಂದ ಪಾಠ ಹೇಳಿ ಅವರೂ ಸಾಹಿತ್ಯಕ್ಕಾಗಿ ದುಡಿಯುವಂತೆ ಮಾಡಿರುವ ಡಾ|| ಶಿವರುದ್ರಪ್ಪನವರು ಅಭಿನಂದನೀಯರು. ಈ ಸಂದರ್ಭದಲ್ಲಿ ಅವರಿಗೆ ಹೃತ್ಪೂರ್ವಕವಾದ ಶುಭಾಶಯಗಳು.

ವಂದನೆಗಳೊಡನೆ.

# ದ. ರಾ. ಬೇಂದ್ರೆ

# ಪ್ರತಿಭಾವಂತ

ಎಷ್ಟು ಬೇಗ ಶ್ರೀ. ಜಿ. ಎಸ್. ಶಿವರುದ್ರಪ್ಪನವರಿಗೆ ಐವತ್ತು ತುಂಬಿದವಲ್ಲಾ ಎನಿಸುತ್ತಾ ಇದೆ. ಆದರೂ, ಅವರು ಸಾಹಿತಿ ಎಂದು ಕೆಲಸಮಾಡಲು ಪ್ರಾರಂಭಿಸಿ ಸುಮಾರು ಎರಡು ದಶಕಗಳಾಗಿ ಹೋದವು. ಅವರ 'ಸಾಮಗಾನ'—ಅದರೊಳಗಿನ ಕೆಲ ಪದ್ಯಗಳು ಆಗ ನನ್ನ ಮನಸ್ಸನ್ನು ಸೆಳೆದಿದ್ದವು. ಅವರನ್ನು ಚಿತ್ರದುರ್ಗದಲ್ಲಿ ಕಂಡೆ. ಕೆಲಸದ ನಿಮಿತ್ತದಿಂದ ಬೇರೆ ಊರಿಗೆ ಹೋದಾಗಲೂ, ಏನೋ ಋಣಾನುಬಂಧದಿಂದ ಭೆಟ್ಟಿ ಆಗುತ್ತಿತ್ತು. ಅವರಿಗೆ ಡಾಕ್ಟರೇಟ್ ತಂದ 'ಸೌಂದರ್ಯ ಸಮೀಕ್ಷೆ'ಯನ್ನು ಬರೆಯುವಾಗ ಮತ್ತು ತದನಂತರ ಆದ ಚಿತ್ತದ ವಿಕ್ಷೇಪ, ಆಕ್ಷೇಪ ಕೇಳಿ, ಈ ಬೆಳೆಯುತ್ತಿರುವ ಪ್ರತಿಭಾವಂತನು ಜೀವನದ ಚುರುಕು ಕಾಣುತ್ತಿದ್ದಾನೆ. ಅದು ಒಳಿತೇ ಎಂದುಕೊಳ್ಳುತ್ತಿದ್ದೆ. ತದನಂತರದ ಅವರ 'ಪರಿಶೀಲನೆ'ಯೊಳಗಿನ ಹಲಕೆಲವು ಪ್ರಬಂಧಗಳನ್ನು ಅಲ್ಲಲ್ಲಿ ಓದಿದಾಗ—ಅವರದೇ ಒಂದು ರೀತಿಯ ವಿಮರ್ಶೆ, ವಿಚಾರ ಎಂದುಕೊಳ್ಳುತ್ತಿದ್ದೆ. ಅವರ ಮತ್ತು ಧಾರವಾಡದ ಗಣ್ಯಕವಿ—ಚೆನ್ನವೀರ ಕಣವಿ ಇವರ ಸ್ನೇಹ ಕಾಲಕಾಲಕ್ಕೆ ಕಂಡಾಗ, ಒಳ್ಳೆಯ ಜೋಡಿ ಎಂದುಕೊಳ್ಳುತ್ತಿದ್ದೆ. 'ಅನಾವರಣ'ದೊಳಗಿನ ಅವರ ಕೆಲ ಕವಿತೆಗಳಲ್ಲಿ ಸಹಜತೆ, ಅದರಂತೆಯೆ ಯಾವುದೋ ತಿರುವು ಕೊಡುವ ಅವರ ಜಾಣ್ಮೆ ಇವುಗಳನ್ನು ಮೆಚ್ಚಿಕೊಳ್ಳುತ್ತಿದ್ದೆ.

ಈಗ ಡಾಕ್ಟರ್ ಜಿ. ಎಸ್. ಶಿವರುದ್ರಪ್ಪನವರು ಪ್ರೌಢರಾಗಿದ್ದಾರೆ. ತಮ್ಮ ಸಾಹಿತ್ಯ ನಿರ್ಮಿತಿಯೊಡನೆ, ಇತರರ ಸಾಹಿತ್ಯದ ನಿರ್ವಾಹವನ್ನೂ ನೋಡಿಕೊಳ್ಳುತ್ತಿದ್ದಾರೆ. ಅವರಿಗೆ ಕೆಲಸದ ತೂಕ ಹೆಚ್ಚುತ್ತಿದೆ. ನನಗೆ ವಯಸ್ಸಾದಂತೆ ತರುಣ ಸಾಹಿತಿಗಳ ಬೆಳವಣಿಗೆಯನ್ನು ತಟಸ್ಥನಾಗಿ ಕುಳಿತು ನೋಡುವ, ಚಟಾ ಎನ್ನಲೋ ಛಲಾ ಎನ್ನಲೋ ಹೆಚ್ಚಾಗುತ್ತಿದೆ. ಅದರಿಂದಾಗಿ ಸದ್ಯದ ಸಂದರ್ಭದಲ್ಲಿ ಅವರಿಗಾಗಿ ನಾನು ಏನೂ ಬರವಣಿಗೆ ಕಳಿಸಲಾಗಲಿಲ್ಲಾ.

ಅವರು ಆರೋಗ್ಯದಿಂದ ದೃಢಕಾಯರಾಗಿ, ಬಂದ ಜವಾಬುದಾರಿಯನ್ನು ಸರಿಯಾಗಿ ನಿರ್ವಹಿಸಲು ಸಮರ್ಥರಾಗಲಿ ಎಂದು ಅವರ ಭಾಗ್ಯದೇವತೆಯಲ್ಲಿಯೆ ನನ್ನ ಪ್ರಾರ್ಥನೆ. ಅವರ ಮನೆಯವರಿಗೂ ನನ್ನ ಸದಿಚ್ಛೆ.

## ಮಾಸ್ತಿ ವೆಂಕಟೇಶ ಅಯ್ಯಂಗಾರ್

# ಸಾಹಿತ್ಯಾಭಿಮಾನಿ

ಪ್ರಾಧ್ಯಾಪಕ ಮಹನೀಯ ಶ್ರೀಮಾನ್ ಡಾಕ್ಟರ್ ಜಿ. ಎಸ್. ಶಿವರುದ್ರಪ್ಪನವರಿಗೆ, ಐವತ್ತು ವರ್ಷ ತುಂಬುವ ಶುಭಸಂದರ್ಭದಲ್ಲಿ ಅವರ ಮಿತ್ರರು ಅವರಿಗೆ ಒಂದು ಅಭಿನಂದನ ಗ್ರಂಥವನ್ನು ಒಪ್ಪಿಸಲು ನಿಶ್ಚೈಸಿರುವುದು ಸಂತೋಷದ ಸಂಗತಿ. ಈ ವೇಳೆ ನನ್ನವೂ ನಾಲ್ಕು ಮಾತು ಗ್ರಂಥದಲ್ಲಿರಬೇಕೆಂದು ಮಿತ್ರರು ಅಪೇಕ್ಷಿಸಿದ್ದಾರೆ. ಈ ಮಾತನ್ನು ಹೇಳುವುದು ನನಗೂ ಇಷ್ಟ.

ಶ್ರೀ ಶಿವರುದ್ರಪ್ಪನವರು ನನಗೆ ಮುಖ್ಯವಾಗಿ ಒಬ್ಬ ಸಾಹಿತಿ ಮಿತ್ರರು. ಇದರ ಮೇಲೆ ಅವರು ಹಿರಿಯ ಒಬ್ಬ ಸಾಹಿತ್ಯಾಭಿಮಾನಿ. ಅದಕ್ಕೂ ಮೇಲೆ ಅತ್ಯಂತ ಸಜ್ಜನರಾದ ಭಾಷಾ ಸೋದರರು.

ಶಿವರುದ್ರಪ್ಪನವರ ಮತ್ತು ನನ್ನ ಪರಿಚಯ ಹತ್ತಿರ ಹತ್ತಿರ ಮೂವತ್ತು ವರುಷ ಗಳ ಹಿಂದಿನದು. ವಿದ್ಯಾರ್ಥಿಯಾಗಿದ್ದಾಗ ಇವರು ರಚಿಸಿದ ಪದ್ಯ 'ಜೀವನ'ಪತ್ರಿಕೆಯ ಸಂಪಾದಕನೆಂಬ ಕಾರಣದಿಂದ ನನ್ನ ಬಳಿಗೆ ಬಂದವು. ಲೇಖಕರು ಪ್ರತಿಭಾವಂತರು. ಪದ್ಯ ಗಳು ಚೆನ್ನಾಗಿದ್ದವು. ನಾನು ಅದನ್ನು 'ಜೀವನ'ಪತ್ರಿಕೆಯಲ್ಲಿ ಪ್ರಕಟಿಸಿದೆನು.

ಹೀಗೆ ಆರಂಭವಾದ ಪರಿಚಯ ಆ ಮೇಲಿನ ದಿನಗಳಲ್ಲಿ ಚೆನ್ನಾಗಿ ಬೆಳೆಯಿತು. ಶ್ರೀಯುತರು, ನನ್ನ ಮಿತ್ರರಾದರು. ನನ್ನ ಕೆಲಸವನ್ನು ಒಪ್ಪಿಕೊಂಡು ನನ್ನ ವಿಷಯ ದಲ್ಲಿ ಅಭಿಮಾನದಿಂದ ನಡೆದುಕೊಂಡರು.

ಯಾವ ವಿವರಗಳಲ್ಲಿ ಈ ಅಭಿಮಾನ ಪ್ರಕಟವಾಯಿತು ಎನ್ನುವುದನ್ನು ಇಲ್ಲಿ ಬೇರೆಯಾಗಿ ಹೇಳುವುದು ಅನವಶ್ಯಕ. ಮುಖ್ಯವಾಗಿ ಇವರ ಈ ಅಭಿಮಾನ ಸಾಹಿತಿ ಗಳಾದವರಿಗೆ ತಮ್ಮಿಂದಾದ ನೆರವನ್ನು ನೀಡುವ ದಾರಿಗಳಲ್ಲಿ ಕಂಡಿದೆ. ಇದು ನನ್ನೊಬ್ಬ ನದ್ದಲ್ಲ; ಇತರ ಸಾಹಿತಿಮಿತ್ರರನ್ನೂ ಒಳಗೊಂಡಿದೆ.

ಶ್ರೀಯುತರ ಸಾಹಿತ್ಯರಚನೆ ಉತ್ತಮ ರೀತಿಯದು. ಅವರ ಪಾಂಡಿತ್ಯ ಉನ್ನತ ಮಟ್ಟದ್ದು, ಅವರ ವಿಮರ್ಶೆ ಪ್ರಾಯಶಃ ಸಹೃದಯ ಆದದ್ದು. ಹೀಗಾಗಿ ಇವರು ಕವಿಯಾಗಿ, ಉಪಾಧ್ಯಾಯರಾಗಿ, ವಿಮರ್ಶಕರಾಗಿ ನಮ್ಮ ಇಂದಿನ ಸಾಹಿತ್ಯದಲ್ಲಿ ಭಾಷಾವ್ಯಾಸಂಗದಲ್ಲಿ ಉನ್ನತಮಟ್ಟದ ಸೇವೆಯನ್ನು ಸಲ್ಲಿಸಿದ್ದಾರೆ.

ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದ ನಿರ್ದೇಶಕರಾದಮೇಲೆ ಇವರು

ಏರ್ಪಡಿಸಿಕೊಂಡು ಬಂದಿರುವ ವಿಚಾರಗೋಷ್ಠಿಗಳು ಸಾಹಿತ್ಯವನ್ನು ಕುರಿತ ಈ ತಲೆಮಾರಿನ ಲೇಖಕ ಸಮುದಾಯದ ಆಲೋಚನೆಗಳನ್ನು ಜನರ ಗಮನಕ್ಕೆ ತರಲು ತುಂಬ ಸಾಧಕ ಆಗಿವೆ.

ಐವತ್ತು ವರುಷ ತುಂಬಿದರೂ ಶಿವರುದ್ರಪ್ಪನವರ ಮನಸ್ಸು ಸರಳವಾಗಿದೆ, ಅಚ್ಚವಾಗಿದೆ. ಈ ಸ್ವಭಾವ ಮುಂದೆ ಇವರಿಂದ ಸಾಹಿತ್ಯಕ್ಕೆ ನೆರವಾಗುವ ಹತ್ತಾರು ಮಾರ್ಗಗಳಲ್ಲಿ ಸಫಲ ಆಗುವುದು ಸಾಧ್ಯ. ನಾಡಿನ ಭಾಗ್ಯದ ಅಧಿದೈವ ಸರ್ವ ಜನಪ್ರಿಯರಾದ ಈ ನನ್ನ ಮಿತ್ರರಿಂದ ಈ ಎಲ್ಲ ಮಾರ್ಗಗಳಲ್ಲಿ ಉನ್ನತ ಸೇವೆ ಸಲ್ಲುವಂತೆ ಅನುಗ್ರಹಿಸಲಿ ಎಂದು ಇವರ ಎಲ್ಲ ಮಿತ್ರರೊಡನೆ ನಾನೂ ಪ್ರಾರ್ಥಿಸುತ್ತೇನೆ.

ಆರ್. ಸಿ. ಹಿರೇಮಠ

# ಸಾಧನೆಯ ಶಿವರುದ್ರಪ್ಪನವರು

ಬಿ. ಎಂ. ಶ್ರೀಯವರು ಹೊಸಗನ್ನಡ ಸಾಹಿತ್ಯಕ್ಕೆ ಒಂದು ಹೊಸ ಹಾದಿ ಹಾಕಿ ಕೊಟ್ಟರು ; ಕುವೆಂಪು ಅವರು ಅದನ್ನು ಸರ್ವಾಂಗ ಸುಂದರವೂ ಭವ್ಯವೂ ಆದ ಮಾರ್ಗ ವನ್ನಾಗಿ ಮಾಡಿದರು. ಈ ಮಾರ್ಗದಲ್ಲಿ ಮುನ್ನಡೆಯುತ್ತಿರುವ ಕೆಲವು ಪ್ರತಿಭಾನ್ವಿತ ವ್ಯಕ್ತಿಗಳಲ್ಲಿ ಶಿವರುದ್ರಪ್ಪನವರು ಎದ್ದು ಕಾಣುತ್ತಾರೆ. ಶಿವರುದ್ರಪ್ಪನವರ ಕಾವ್ಯದ ಬೆಳವಣಿಗೆಯಲ್ಲಿ, ವಿಮರ್ಶೆಯ ವ್ಯಾಪ್ತಿಯಲ್ಲಿ, ಪ್ರಾಧ್ಯಾಪಕತ್ವದ ಗೆಯ್ಮೆಯಲ್ಲಿ ಕನ್ನಡದ ಅಭಿವೃದ್ಧಿಯ ಸಾಧನೆಯ ಹಂತಗಳೇ ಇರುವುದನ್ನು ಕಾಣಬಹುದು.

ಶಿವರುದ್ರಪ್ಪನವರು 'ಸಾಮಗಾನ', 'ಚೆಲುವು ಒಲವು', 'ದೀಪದ ಹೆಜ್ಜೆ'ಗಳನ್ನು ನಿರ್ಮಿಸುತ್ತ ಕಾವ್ಯಪಥದಲ್ಲಿ ಬಹುದೂರ ನಡೆದು ಬಂದಿದ್ದಾರೆ. ಅವರ ಕಾವ್ಯದ ತೆರೆದ ದಾರಿಯಲ್ಲಿ ನವೋದಯ, ನವ್ಯಗಳ ಪಕ್ಷ-ಪಂಗಡಗಳಿಲ್ಲ; ಸದ್ದು-ಗದ್ದಲಗಳಿಲ್ಲ. ಸಮ ಚಿತ್ತದಿಂದ, ಸಮತೂಕದಿಂದ, ಸಮನ್ವಯ ಮನೋಧರ್ಮದಿಂದ ಅವರು ತಮ್ಮದೇ ಆದ ರೀತಿಯಲ್ಲಿ ನಡೆದವರು. ಅವರ ಕಾವ್ಯ ಒಮ್ಮೆ ಅಬ್ಬರಣೆ ತೋರಿ, ಇನ್ನೊಮ್ಮೆ ಮಟಾ ಮಾಯವಾಗುವ ವಿಕ್ಷಿಪ್ತತೆಯಿಂದ ಕೂಡಿದ್ದಲ್ಲ. ಅದು ನಿರಂತರವೂ ತುಂಬು ಪ್ರವಾಹ ವಾಗಿ ಹರಿಯುವ ಹೊಳೆಯಂತಹದು. ಸಮಕಾಲೀನ ಜೀವನದ ಏರು-ಪೇರುಗಳನ್ನು ಅವರ ಈಚೆಗಿನ ಕಾವ್ಯ, ಸ್ಪಷ್ಟವಾಗಿ ಅಭಿವ್ಯಕ್ತಗೊಳಿಸುತ್ತಿದ್ದರೂ ಅದು ಸುಸಂಸ್ಕೃತ ವಾದುದು, ಸೌಂದರ್ಯನಿಷ್ಠವಾದುದು.

ಇಂದಿನ ವಿಮರ್ಶಕರಲ್ಲಿ ಶಿವರುದ್ರಪ್ಪನವರು ಖಂಡಿತವಾಗಿ ಮುಂಚೂಣಿಯಲ್ಲಿ ನಿಲ್ಲುವ ವ್ಯಕ್ತಿ. ಅವರ 'ಸೌಂದರ್ಯ ಸಮೀಕ್ಷೆ' ನಮ್ಮ ಕಾವ್ಯಮೀಮಾಂಸೆಗೆ ಒಂದು ಬಹು ದೊಡ್ಡ ಕೊಡುಗೆ. ಇಂಥ ಅಮೂರ್ತ ವಿಷಯವನ್ನು ಕುರಿತು, ಸಪ್ರಮಾಣವಾಗಿ ಚರ್ಚಿಸುವ ಗ್ರಂಥಗಳು ನಮ್ಮಲ್ಲಿ ಬಹಳಿಲ್ಲ. ಶಿವರುದ್ರಪ್ಪನವರ ಆಳವಾದ, ವ್ಯಾಪಕ ವಾದ, ಖಚಿತವಾದ ಅಧ್ಯಯನಕ್ಕೆ ಈ ಗ್ರಂಥ ಒಂದು ಹೆಗ್ಗುರುತು. ಅವರ 'ವಿಮರ್ಶೆಯ ಪೂರ್ವಪಶ್ಚಿಮ', 'ಪರಿಶೀಲನ', 'ಗತಿಬಿಂಬ' ಈ ಕೃತಿಗಳೂ ಕೂಡ ಕನ್ನಡಕ್ಕೆ ಮಹತ್ವದ ಕಾಣಿಕೆಗಳಾಗಿವೆ. ಈ ಎಲ್ಲ ಕೃತಿಗಳ ಪುಟ-ಪುಟಗಳಲ್ಲಿ ಶಿವರುದ್ರಪ್ಪನವರ ವಿಮರ್ಶೆಯ ವಿಚಕ್ಷಣತೆಯನ್ನು ಗುರುತಿಸಬಹುದು.

ಶಿವರುದ್ರಪ್ಪನವರು ಸುಮಾರು ಎರಡು ದಶಕಗಳಿಂದಲೂ ನನಗೆ ಪರಿಚಿತರು. ಈ

ಎರಡು ದಶಕಗಳಲ್ಲಿ ಅವರು ಪಡೆದ ಸ್ಥಿತ್ಯಂತರಗಳನ್ನೂ, ಸ್ಥಾನಾಂತರಗಳನ್ನೂ ನಾನು ಬಲ್ಲೆ. ಮೃದು-ಕೋಮಲ ಸ್ವಭಾವದವರಾದ ಅವರು ಎಲ್ಲ ಬದಲಾವಣೆಗಳನ್ನು ಹೊಂದಿಸಿಕೊಂಡು, ನೋವು-ನಲಿವುಗಳೆರಡನ್ನೂ ಸಮುಚಿತ್ತದಿಂದ ಬರಮಾಡಿಕೊಂಡು ಮುನ್ನಡೆದಿರುವುದನ್ನು ನಾನು ಕಂಡಿದ್ದೇನೆ. ಅವರು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿರುವುದು ನನಗೆ ಅತ್ಯಂತ ಸಂತೋಷವನ್ನುಂಟುಮಾಡಿದ ವಿಷಯ. ಕರ್ನಾಟಕ ರಾಜಧಾನಿಯ ಸ್ಥಳದಲ್ಲಿ ಪೌರ್ವಾತ್ಯ, ಪಾಶ್ಚಾತ್ಯ ವಿಮರ್ಶೆಗಳ ನೆಲೆ-ಬೆಲೆಗಳನ್ನು ಚೆನ್ನಾಗಿ ತಿಳಿದವರು, ಹೊಸಹೊಸ ಕಾರ್ಯಗಳನ್ನು ಹಮ್ಮಿಕೊಳ್ಳುವ ಸಾಮರ್ಥ್ಯವುಳ್ಳವರು, ಹಳೆ-ಹೊಸ ಸಾಹಿತ್ಯಗಳಿಗೆ ಸೇತುವೆ ಕಟ್ಟಿ, ಪರಸ್ಪರ ಸಂಚಾರವನ್ನು ಸುಭಗಗೊಳಿಸಬಲ್ಲವರೂ ಆದ ವ್ಯಕ್ತಿಗಳೇ ಬೇಕಾಗಿದ್ದರು. ಈ ಎಲ್ಲ ಕಾರ್ಯಕ್ಕೆ ಶಿವರುದ್ರಪ್ಪನವರು ಹೇಳಿ ಮಾಡಿಸಿದಂಥವರೆಂದು ಬೇರೆ ಹೇಳಬೇಕಾಗಿಲ್ಲ. ಅವರು ಆ ಸ್ಥಾನಕ್ಕೆ ಬಂದುದು ಕನ್ನಡ ಸಾಹಿತಿಗಳು ಅಭಿಮಾನ ಪಡಬೇಕಾದ ವಿಷಯವೂ ಅಹುದು.

ಶಿವರುದ್ರಪ್ಪನವರು ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾದ ಮೇಲೆ ಅದಕ್ಕೆ ಆನೆಯ ಶಕ್ತಿ ಬಂದಿದೆ. ಅದು ಅನೇಕ ಹಸ್ತಗಳುಳ್ಳ ಐರಾವತವೂ ಆಗಿದೆ. ಅಲ್ಲಿ ನಡೆಯುತ್ತಿರುವ ಸಾಹಿತ್ಯಿಕ ಕಾರ್ಯ ಪ್ರಶಂಸನೀಯವಾದುದು. ೧೯೭೧ರಿಂದ ಪ್ರಾರಂಭವಾದ 'ಸಾಹಿತ್ಯವಾರ್ಷಿಕ' ಪ್ರಕಟನಾ ಯೋಜನೆ ಆ ದೃಷ್ಟಿಯಿಂದ ಎತ್ತಿ ಹೇಳುವಂತಹದು. ಕನ್ನಡದಲ್ಲಿ ಪ್ರಕಟವಾಗುವ ಎಲ್ಲ ಪುಸ್ತಕಗಳ ಸಮಾಲೋಚನೆ ನಡೆಸುವ ಈ ಯೋಜನೆ ಶಿವರುದ್ರಪ್ಪನವರು ಕನ್ನಡಕ್ಕೆ ಕೊಟ್ಟ ಒಂದು ಅಪೂರ್ವ ಕೊಡುಗೆಯೆಂದೇ ಹೇಳಬೇಕು.

ಪ್ರತಿವರುಷ ತಪ್ಪದೆ ಏರ್ಪಡಿಸುವ ಅವರ ಸಾಹಿತ್ಯಿಕ 'ವಿಚಾರ ಸಂಕಿರಣ' ಯೋಜನೆಯೂ ಒಂದು ನೂತನವಾದ ಕೊಡುಗೆಯೇ ಆಗಿದೆ. ಈ 'ವಿಚಾರ ಸಂಕಿರಣ'ದಲ್ಲಿ ಆಧುನಿಕ ಸಾಹಿತ್ಯಿಕ ವಿಷಯಗಳೇ ಹೆಚ್ಚಾಗಿದ್ದರೂ ಪ್ರಾಚೀನ ಸಾಹಿತ್ಯವನ್ನು ಅವರು ಮರೆತಿಲ್ಲ. ಇದಕ್ಕೆ 'ಪಂಪ ಒಂದು ಅಧ್ಯಯನ' ಎಂಬ ವಿಚಾರ ಸಂಕಿರಣವೇ ಉದಾಹರಣೆ. ಈ ವಿಚಾರ ಸಂಕಿರಣದ ಒಂದು ಗೋಷ್ಠಿಯ ಅಧ್ಯಕ್ಷನಾಗಿ ಅಲ್ಲಿಯ ಕಾರ್ಯಕಲಾಪಗಳನ್ನು ನೋಡುವ ಅವಕಾಶ ನನಗೆ ದೊರೆತದ್ದರಿಂದ ನಾನಿಲ್ಲಿ ಒಂದು ಮಾತನ್ನು ಹೇಳುವುದು ಅಗತ್ಯವೆನಿಸುತ್ತದೆ. ಈ ಸಂಕಿರಣದಲ್ಲಿ ಮಂಡಿಸುವ ಪ್ರಬಂಧಗಳೆಲ್ಲ ಅಭ್ಯಾಸಪೂರ್ಣವಾದವುಗಳು, ಇಲ್ಲಿ ನಡೆಯುವ ಚರ್ಚೆ ಮುಕ್ತ ಮನಸ್ಸಿನದು. ಒಂದು ವಿಷಯದ ಎಲ್ಲ ಮೈಗಳನ್ನು ಹೊರಳಿಸಿ ಹೊರಳಿಸಿ ನೋಡುವ ಕಾರ್ಯವಿಲ್ಲಿ ನಡೆಯುತ್ತದೆ. ಅದರ ಪರಿಣಾಮ ಅತ್ಯಂತ ಫಲಪ್ರದವಾದುದು. ಒಂದೊಂದು 'ವಿಚಾರ ಸಂಕಿರಣ'ದ ಪ್ರಕಟಿತ ಗ್ರಂಥಗಳು ಕನ್ನಡ ಸಾಹಿತ್ಯಕ್ಕೆ ಪ್ರಮಾಣಭೂತವಾದ ಗ್ರಂಥಗಳೇ ಆಗಿ ನಿಂತಿರುವುದನ್ನು ಕಾಣಬಹುದು. ಈಚೆಗೆ 'ಸಾಹಿತ್ಯ ಮತ್ತು ಸಾಮಾನ್ಯ ಮನುಷ್ಯ' ಎಂಬ ವಿಷಯವನ್ನು ಕುರಿತು ವಿಚಾರಸಂಕಿರಣ ಏರ್ಪಡಿಸಿದ್ದು. ಇಂದಿನ

ಸಂದರ್ಭದಲ್ಲಿ ಅತ್ಯಂತ ಔಚಿತ್ಯಪೂರ್ಣವಾದದ್ದೆಂದು ಹೇಳಬೇಕು. ಶಿವರುದ್ರಪ್ಪನವರು ವಿಷಯವನ್ನು ಆಯ್ದುಕೊಳ್ಳುವುದರಲ್ಲಿ ಹಾಗೂ ಚರ್ಚೆಯಲ್ಲಿ ಭಾಗವಹಿಸುವವರನ್ನು ಆಯ್ಕೆ ಮಾಡುವುದರಲ್ಲಿ ನಿಷ್ಣಾತರೆಂಬುದು ಈ ಎಲ್ಲ ವಿಚಾರಸಂಕಿರಣಗಳು ತೋರಿಸಿ ಕೊಡುತ್ತವೆ.

ಬಹಳ ದಿನಗಳ ನಮ್ಮೆಲ್ಲರ ಬಯಕೆಯಾಗಿದ್ದ 'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ'ಯ ರಚನೆಯ ಕಾರ್ಯದಲ್ಲಿಯೂ ಅವರು ದಿಟ್ಟ ಹೆಜ್ಜೆಯನ್ನಿಟ್ಟರು. ಈಗಾಗಲೇ ಪ್ರಕಟವಾದ ಎರಡು ಸಂಪುಟಗಳು ಈ ಮಾತಿಗೆ ಸಾಕ್ಷಿಯಾಗಿವೆ. ಅಷ್ಟಲ್ಲದೆ ಸಾಮಾನ್ಯನಿಗಾಗಿ ಸಾಹಿತ್ಯ ಚರಿತ್ರೆಯನ್ನು ಹತ್ತು ಸಂಪುಟಗಳಲ್ಲಿ ಕೊಡುವ ಕಾರ್ಯವನ್ನು ಅವರು ಮೊನ್ನೆ ಮೊನ್ನೆ ಮಾಡಿದರು.

ಪ್ರಾಯೋಗಿಕ ವಿಮರ್ಶೆ, ತೌಲನಿಕ ವಿಮರ್ಶೆಯಂಥ ಕಾರ್ಯಗಳಲ್ಲಿಯೂ ಶಿವರುದ್ರಪ್ಪನವರಿಗೆ ತುಂಬ ಆಸಕ್ತಿ. ಕನ್ನಡದಲ್ಲಿ ವಿಮರ್ಶಾಸಾಹಿತ್ಯ ಬೆಳೆಯಬೇಕಾದುದರ ಅಗತ್ಯ ಸಾಕಷ್ಟಿತ್ತು. ಆ ಅಗತ್ಯವನ್ನು ಪೂರೈಸಲು ಪಣತೊಟ್ಟೇ ಶಿವರುದ್ರಪ್ಪನವರು ನಿಂತಂತೆ ತೋರುತ್ತದೆ. ಸಾಧನೆಯಿಲ್ಲದೆ ಸಿದ್ಧಿ ದೊರೆಯುವುದೇ? ಕನ್ನಡಕ್ಕೆ ಅಂಥ ಸಾಧಕರ ಅಗತ್ಯ ಇನ್ನೂ ಇದೆ. ಸದ್ಯಕ್ಕೆ ಶಿವರುದ್ರಪ್ಪನವರು ಕನ್ನಡ ವಿಮರ್ಶಾ ಕ್ಷೇತ್ರವನ್ನು ಸಮೃದ್ಧವಾಗಿ ಬೆಳೆಸಲು ನಿಂತ ಒಬ್ಬ ಸಾಧಕರಾಗಿದ್ದಾರೆಂದು ಹೇಳಬಹುದು.

ಸಾದಾ ಜೀವನದ, ಸರಳ ಮನಸ್ಸಿನ, ಪ್ರತಿಭೆ-ಪಾಂಡಿತ್ಯಗಳ ಸಾಮರಸ್ಯವುಳ್ಳ ವ್ಯಕ್ತಿತ್ವದ ಶಿವರುದ್ರಪ್ಪನವರ ಕಾರ್ಯ ಉತ್ತರೋತ್ತರ ಅಭಿವೃದ್ಧಿಯನ್ನು ಹೊಂದಲಿ, ಕನ್ನಡ ತಾಯಿ ಭುವನೇಶ್ವರಿ ಅವರಿಗೆ ಆಯುರಾರೋಗ್ಯವನ್ನು ದಯಪಾಲಿಸಲೆಂದು ಹಾರೈಸುತ್ತೇನೆ.

## ವಿ. ಕೃ. ಗೋಕಾಕ್

# ಖ್ಯಾತ ಕವಿ-ವಿಮರ್ಶಕ-ನಿರ್ದೇಶಕರು

ಕವಿ, ವಿಮರ್ಶಕ, ಪ್ರಾಧ್ಯಾಪಕ, ನಿರ್ದೇಶಕ, ಹೀಗೆ ಅನೇಕ ಕ್ಷೇತ್ರಗಳಲ್ಲಿ ಡಾ. ಜಿ. ಎಸ್. ಶಿವರುದ್ರಪ್ಪನವರು ಕೀರ್ತಿಯನ್ನು ಗಳಿಸಿದ್ದಾರೆ. ಅವರು ಸಂಶೋಧನೆಯಲ್ಲಿ ಸೌಂದರ್ಯಶಾಸ್ತ್ರವನ್ನು ಕುರಿತು ತೊಡಗಿದ್ದಾಗ ನಾನು ಕರ್ನಾಟಕ ಕಾಲೇಜಿನಲ್ಲಿದ್ದೆ. ಅವರು ಧಾರವಾಡಕ್ಕೆ ಬಂದಾಗ ನನ್ನನ್ನು ಕಂಡು ಸೌಂದರ್ಯಶಾಸ್ತ್ರವನ್ನು ಕುರಿತು ಕೆಲವು ವಿಷಯಗಳನ್ನು ಚರ್ಚಿಸಿದರು. ಅದೇ ನಮ್ಮ ಪ್ರಥಮ ಭೇಟಿಯೆನ್ನಬಹುದು.

ನಾನು ಹೈದ್ರಾಬಾದಿನಲ್ಲಿದ್ದಾಗ ಉಸ್ಮಾನಿಯ ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಪ್ರಾಧ್ಯಾಪಕರೊಬ್ಬರು ಬೇಕಾಗಿದ್ದರು. ವಿಶ್ವವಿದ್ಯಾನಿಲಯ ಡಾ|| ಶಿವರುದ್ರಪ್ಪನವರ ಸೇವೆಯನ್ನು ಎರಡು ವರ್ಷ ಮೈಸೂರು ವಿಶ್ವವಿದ್ಯಾನಿಲಯದಿಂದ ಬಿನ್ನವಿಸಿಕೊಂಡು ಸ್ವೀಕರಿಸಿತು. ಆಗ ವಿಶ್ವವಿದ್ಯಾನಿಲಯದ ಕರ್ನಾಟಕ ಸಂಘದಲ್ಲಿಯೂ ಹೈದ್ರಾಬಾದಿನ ಕರ್ನಾಟಕ ಸಾಹಿತ್ಯಮಂದಿರದಲ್ಲಿಯೂ ಕೂಡಿ ಕೆಲಸಮಾಡಲು ಅನೇಕ ಸಂಧಿಗಳು ದೊರೆಯುತ್ತಿದ್ದವು. ಪರಸ್ಪರ ಪರಿಚಯ ದೃಢವಾಗಿ ಅಲ್ಲಿ ಸ್ನೇಹವಾಗಿ ಸಂವರ್ಧಿಸಿತು.

ಅವರು ರೀಡರ್ ಎಂದು ಬೆಂಗಳೂರು ವಿಶ್ವವಿದ್ಯಾನಿಲಯಕ್ಕೆ ಬಂದಮೇಲೆ ಅಲ್ಪಾವಧಿಯಲ್ಲಿಯೇ ನಾನೂ ಆ ವಿಶ್ವವಿದ್ಯಾನಿಲಯಕ್ಕೆ ಬಂದೆ—ಅಕ್ಟೋಬರ್ ೧೯೬೬ರಲ್ಲಿ. ಈ ಮೂರು ವರ್ಷ ಡಾ|| ಶಿವರುದ್ರಪ್ಪನವರು ಸಮೀಪದ ಸ್ನೇಹಿತರೆನ್ನಲು ಯಾವ ಅಭ್ಯಂತರವೂ ಇಲ್ಲ. ೧೯೬೭ನೆಯ ಇಸ್ವಿಯಲ್ಲಿ 'ಸಮನ್ವಯ'ದ ವಿಚಾರವನ್ನು ಶ್ರೀ. ಪ. ಸು. ಭಟ್ಟ ಹಾಗು ಶ್ರೀ. ನಿರಂಜನರೊಡನೆ ನಿರ್ಣಯಿಸಿ ಅದರ ಸೂತ್ರಗಳ ಕರಡು ಪ್ರತಿಯೊಂದನ್ನು ತಯಾರಿಸಿ 'ಸಮನ್ವಯ'ದ ಒಲವಿದ್ದ ಕೆಲವು ಸ್ನೇಹಿತರೊಡನೆ ಅದನ್ನು ಚರ್ಚಿಸಬೇಕೆಂದೂ ಸಮನ್ವಯ ಸಮಿತಿಗೆ ಅವರನ್ನು ಆಮಂತ್ರಿಸಬೇಕೆಂದೂ ನಮಗೆನ್ನಿಸಿತು. ಆಗ ಸಹಜವಾಗಿಯೇ ಡಾ. ಶಿವರುದ್ರಪ್ಪನವರೂ ಸಮಿತಿಯ ಸದಸ್ಯರಲ್ಲಿ ಒಬ್ಬರಾದರು.

ವರ್ಷಗಳು ಎಷ್ಟು ಬೇಗ ಉರುಳುತ್ತವೆ! ಇತ್ತೀಚೆಗೆ ಕನ್ನಡ ಇಲಾಖೆಯ ಮುಖ್ಯಸ್ಥರಾದ ಡಾ|| ಶಿವರುದ್ರಪ್ಪನವರು ಈಗ ಐವತ್ತರಲ್ಲಿ ಕಾಲಿಡುತ್ತಿದಾರೆ. ಕಾವ್ಯದಲ್ಲಿ, ಸೌಂದರ್ಯಶಾಸ್ತ್ರದಲ್ಲಿ, ವಿಮರ್ಶೆಯಲ್ಲಿ, ತಮ್ಮವೇ ಆದ ಅನೇಕ ವೈಶಿಷ್ಟ್ಯಗಳನ್ನು ಡಾ|| ಶಿವರುದ್ರಪ್ಪನವರು ಸಾಧಿಸಿದ್ದಾರೆ. ಸಿದ್ಧಹಸ್ತರಾದ ಅವರ ಬಳಿಗೆ

ಇನ್ನೂ ಅನೇಕ ಸಿದ್ಧಿಗಳು ಕಾದಿರುವದು ಸಹಜವಾಗಿದೆ. ಕನ್ನಡ ಇಲಾಖೆಯ ಮುಖ್ಯಸ್ಥರಾಗಿಯೂ ಹಲವಾರು ವಿಕ್ರಮಗಳನ್ನು ಅವರು ಸ್ಥಾಪಿಸಿದ್ದಾರೆ. ತುಂಬಿದ ಸಾರ್ಥಕ ಜೀವನ, ಉಜ್ವಲತರ ಕಾವ್ಯ ಹಾಗೂ ವಿಮರ್ಶೆ ಹಾಗೂ ಇನ್ನೂ ಹೆಚ್ಚು ಸ್ಮರಣೀಯ ವಿಧಾಯಕ ಕಾರ್ಯ ಅವರದಾಗಲೆಂದು ನಾನು ಹಾರೈಸುತ್ತೇನೆ.

## ಸ. ಸ. ಮಾಳವಾಡ

# ಮೇಧಾವಿ ವಿದ್ಯಾರ್ಥಿ

ಡಾ. ಜಿ. ಎಸ್. ಶಿವರುದ್ರಪ್ಪ ಮೇಧಾವಿ ವಿದ್ಯಾರ್ಥಿ. ಈ ಮಾತಿಗೆ ಅವರ ಪದವಿ ಪರೀಕ್ಷೆಗಳ ಉತ್ತರ ಪತ್ರಿಕೆ, ಮೌಖಿಕ ಪರೀಕ್ಷೆಯಲ್ಲಿಯ ಉತ್ತರ ಮತ್ತು ಮಹಾ ಪ್ರಬಂಧರಚನೆಗಳು ಪರಿಶೀಲನಕಾರರಿಗೆ ಸ್ಪಷ್ಟವಾದ ಸಾಕ್ಷ್ಯ ಒದಗಿಸಿದವು. ಅವರು ವ್ಯಾಸಂಗನಿಷ್ಠ ಅಧ್ಯಾಪಕರು. ಅಧ್ಯಾಪನ ರಂಗದಲ್ಲಿ ಅವರು ಹಂತ ಹಂತವಾಗಿ ಉನ್ನತ ಸ್ಥಾನಗಳಿಗೆ ಆಯ್ಕೆಗೊಳ್ಳುವಾಗ ಆಯ್ಕೆಗಾರರಿಗೆ ಈ ಮಾತಿನ ರುಜುವಾತು ಒದಗಿ ಬಂದವು. ಅವರ ನಿಸ್ಪೃಹತೆಯೂ ಆಗ ಒಡೆದು ಕಾಣುವಂತಿತ್ತು.

ಬಾಳಿನ ಉತ್ತಮ ಮೌಲ್ಯಗಳತ್ತ ಗಮನವಿಟ್ಟು ಸ್ವತಂತ್ರವಾದ ಬಗೆಯಲ್ಲಿ ಬಾಳುವು ದನ್ನು ಅವರು ವಿದ್ಯಾರ್ಥಿ ದೆಸೆಯಿಂದಲೂ ರೂಢಿಸಿಕೊಂಡಿದ್ದಾರೆ. ಅವರಲ್ಲಿ ಆಗಲೂ ವ್ಯಾಪಕವಾದ ಆಸ್ಥೆ ಆಧ್ಯಾತ್ಮಿಕ ದೃಷ್ಟಿಗಳು ಕಂಡುಬರುತ್ತಿದ್ದವು.

ಸೂಕ್ಷ್ಮ ಸಂವೇದನಾಶೀಲತೆ, ಸಾಮಾಜಿಕಪ್ರಜ್ಞೆ ಕಲ್ಪಕತೆಗಳಿಂದ ಕೂಡಿದ ಶಿವಮಯ ಕವನ ಸೃಷ್ಟಿ; ಕೃತಕ, ಕೀಳು ವ್ಯವಹಾರಗಳನ್ನು ಕಂಡಾಗ ಕನಲಿ ನಿರ್ದಾಕ್ಷಿಣ್ಯವಾಗಿ ಖಂಡಿಸಬಲ್ಲ ರುದ್ರಮಯ ದೃಷ್ಟಿ ಅವರವಾಗಿದೆ. ಆದರೆ ಖಂಡಿಸು ವಾಗ ಸದಭಿರುಚಿಯ ಎಲ್ಲೆಯನ್ನು ಮೀರದ ವಿವೇಕವನ್ನು ಅವರು ತಾರುಣ್ಯದ ಭರ ದಲ್ಲಿಯೂ ತೋರಿದುದನ್ನು ನಾನು ಮೆಚ್ಚಿಕೊಂಡೆ. ಈಚೆಗೆ ಅವರು ಬೆಳೆದಿದ್ದಾರೆ.

ಹೊಸ ಪೀಳಿಗೆಯ ಹೊಸ ರುಚಿಯ ಕವಿಗಳಲ್ಲಿ ಅವರ ಕವನ ರಚನೆ ನಿರ್ದುಷ್ಟ, ಸ್ಪಷ್ಟ, ಅರ್ಥಪೂರ್ಣ, ರಮಣೀಯ, ಪರಿಣಾಮಕಾರಿಯೆಂಬುದನ್ನು ಬಹುಜನರು ಒಪ್ಪುತ್ತಾರೆ. ಅವರ ವಿಮರ್ಶೆಯಲ್ಲಿ ಪಾಂಡಿತ್ಯ, ಖಚಿತತ್ವ ಸಮತೂಕ, ಸಮರ್ಪಕ ಮೌಲ್ಯಮಾಪನ ಗಳು ಕಂಡುಬರುತ್ತಿವೆ.

ಹೊಸ ತಲೆಮಾರಿನ ಪ್ರಾಧ್ಯಾಪಕ-ಸಾಹಿತಿಗಳಲ್ಲಿ ಅವರು ಒಳ್ಳೆಯ ಹೆಸರಿಗೆ ಅರ್ಹರಾಗಿದ್ದಾರೆ. ಅವರಿಗೆ ಐವತ್ತು ತುಂಬಿದ ಶುಭ ಸನ್ನಿವೇಶದಲ್ಲಿ ಅವರು ಇನ್ನಷ್ಟು ಬೆಳೆಯಲೆಂದು ಹಾರೈಸುತ್ತೇನೆ—ಶುಭಾಶಯಗಳೊಂದಿಗೆ.

## ಪು. ತಿ. ನರಸಿಂಹಾಚಾರ್

# ಸಹೃದಯ ಭಾವುಕ

ಈ ಕವಿಗೆ ಸಹೃದಯರಿಗಿಂತ ಆಪ್ತರಿಲ್ಲ. ಶ್ರೀಮಾನ್ ಶಿವರುದ್ರಪ್ಪನವರು ನನಗಂತಹ ಆಪ್ತರು. ನನ್ನ ಕೃತಿಗಳ ವಿಚಾರದಲ್ಲಿ ಈತ ತುಂಬ ಮಮತೆಯನ್ನು ತೋರಿಸಿದ್ದಾರೆ. ಈಗಿನದಕ್ಕಿಂತಲೂ ಹೆಚ್ಚಿನ ಜನಪ್ರೀತಿ ಅವಕ್ಕೆ ಲಭಿಸಬೇಕೆಂದು ಆಸೆ ಪಟ್ಟಿದ್ದಾರೆ. "ಮಲೆದೇಗುಲ"ದ ಮೇಲಣ ಅವರ ವಿಮರ್ಶೆ ತುಂಬ ಹಾರ್ದವಾಗಿದೆ, ಅಭಿಜ್ಞವಾಗಿದೆ. ಈ ಕಾಲಕ್ಕೆ ಎದುರು ಹಾಯುವ ಆ ಕೃತಿ ಇಂಥ ಸಹೃದಯರ ಮೆಚ್ಚುಗೆಗೂ ವ್ಯಾಖ್ಯಾನಕ್ಕೂ ಪಾತ್ರವಾಗಿರುವುದು ನನಗೆ ಹರ್ಷ ತಂದಿದೆ. 'ಕಾಲವಶ'ನಾಗಿ ಬರೆಯುವುದು ನನಗೆ ಸೇರದು. ತನ್ನ ಕಸಬಿಗೆ ಅತ್ಯವಶ್ಯವಾದ ನೈಜತೆಯನ್ನೂ ಸಮಾಹಿತ ಚಿತ್ತತೆಯನ್ನೂ ಅದು ಕೆಡಿಸುತ್ತದೆ. ಗಾಳಿಗೆ ಅಲೆಗಳೇಳುವುದು ಕಡಲಿನ ಸ್ವಭಾವ. ಅದರಲ್ಲಿ ತೇಲಬೇಕಾದ ದೋಣಿ ಮೇಲು ಗಾಳಿಗೆಂತೋ ಚಂಡಮಾರುತಕ್ಕೂ ಸ್ಪರ್ಧಿಯಾಗಿಯೇ ಬಾಳಬೇಕು. ಈ ಮಾತು ಶಿವರುದ್ರಪ್ಪನವರಿಗೂ ಸಮ್ಮತವಾಗಿರುವುದು ಅವರು ಶ್ರೀ ಲಕ್ಷ್ಮೀನಾರಾಯಣಭಟ್ಟರ 'ವೃತ್ತ' ಎಂಬ ಪದ್ಯ ಸಂಕಲನಕ್ಕೆ ಬರೆದ ಮುನ್ನುಡಿಯಲ್ಲಿ ಗೋಚರಿಸುತ್ತದೆ. ಅವರ ಈ ಮನೋವೃತ್ತಿಯೇ ನನ್ನ ಕೃತಿಗಳ ವಿಚಾರದಲ್ಲೂ ಅವರು ವಿಶ್ವಾಸ ತಳೆಯುವಂತೆ ಮಾಡಿದೆ. ಅವುಗಳಲ್ಲಿ ಇವರಷ್ಟು ಆಳವಾಗಿ ಮನಪೂರಿಸಿ ರಸಾಸ್ವಾದ ಮಾಡಿರುವವರು ತುಂಬ ವಿರಳ.

ಅವರನ್ನು ನಾನು ಮೊದಲು ಕಂಡ ದಿನ ಈಗ ನೆನಪಿಗೆ ಬಾರದು. ವಯಸ್ಸಿಗೆ ತಕ್ಕ ವಿಸ್ಮರಣೆ, ಒಂದು ಕಾಲಾವಧಿಯಲ್ಲಿ ಇವರು ನನಗೆ ಅಪರಿಚಿತರಾದವರಾಗಿದ್ದರು ಎಂಬುದೇ ಈಗ ಆಶ್ಚರ್ಯವೆನಿಸಿದೆ. ಸುಮಾರು ಮೂವತ್ತು ವರ್ಷಗಳ ಹಿಂದಿನಿಂದ ನಾನು ಅವರನ್ನು ಬಲ್ಲೆ. ಪ್ರಾಯಶಃ ತೀನಂಶ್ರೀಯವರು ಪರಿಚಯ ಮಾಡಿಕೊಟ್ಟರೇನೋ. ಆತ ಈ ಶಿಷ್ಯನಲ್ಲಿ ತುಂಬ ಅಭಿಮಾನ ತಳೆದಿದ್ದರು. ಅದಕ್ಕೆ ಕಾರಣವಿಲ್ಲದಿಲ್ಲ. ಶಿವರುದ್ರಪ್ಪನವರು ಮೇಧಾವಿ, ಜತೆಗೆ ಸಹೃದಯ ಭಾವುಕ; ಎರಡೂ ತೀನಂಶ್ರೀಗೆ ಬಹುಪ್ರಿಯವಾದ ಗುಣಗಳು. ನಾನೂ ಶಿವರುದ್ರಪ್ಪನವರೂ ಪರಸ್ಪರ ಆತ್ಮೀಯರಾಗಿ ಬಿಟ್ಟಿದ್ದು ನನಗೇನೂ ಆಶ್ಚರ್ಯವಿಲ್ಲ. ಆಗ ತರುಣರ ಸುಸಂಸ್ಕೃತ ಮನಸ್ಸಿನಲ್ಲಿ ಕನಸಿಗೂ ಚೆಲುವಿಗೂ ಒಳ್ಳೆಯ ಜಾಗವಿತ್ತು. ಮೌಲ್ಯಾಭಿಕಾಂಕ್ಷೆ ವಿಕೃತವಾಗಿರಲಿಲ್ಲ. 'ರಸ' ಎಂಬ ಮಾತು ಸವೆಕಲು ಪಟ್ಟಿಗೆ ಸೇರಿರಲಿಲ್ಲ. ಈ ಪದವೇಕೆ ಸವೆಕಲು ನಾಣ್ಯವಾಗ

ಬೇಕೋ. ಭಾರತೀಯ ಕಾವ್ಯಮೀಮಾಂಸೆಯ ವಿಷಯದಲ್ಲಿ ಆಧುನಿಕ ಸಭ್ಯರು ಏಕೆ ಅವಜ್ಞತೆಯನ್ನು ತೋರಬೇಕೋ ನನಗೆ ತಿಳಿಯದು. ಬಹುಶಃ ಈ ಅವಜ್ಞತೆ ಅತಿ ಪರಿಚಯದಿಂದ ಆದುವಲ್ಲ; ಅಪರಿಚಯದಿಂದ ಆದುದು ಎನಿಸುತ್ತದೆ. ನನಗೆ ತಿಳಿದ ಮಟ್ಟಿಗೆ, 'ರಸ'ದ ಹಿಂದಿರುವ ಕಾವ್ಯ ಜಿಜ್ಞಾಸೆ ಅತ್ಯಾಶ್ಚರ್ಯಕರವಾದುದು. ಅದು 'ವೈರುಧ್ಯ ಸಾಮರಸ್ಯ' (Dialectic) ಎಂಬ ದಾರ್ಶನಿಕ ತತ್ತ್ವವನ್ನೇ ಬಹು ಸಮೀಚೀನವಾಗಿ ಸಂಕೇತಿಸುವ ಪಾರಿಭಾಷಿಕ ಪದ. ಪರಸ್ಪರ ವಿರುದ್ಧವಾದ ಸಂಚಾರಿ ಭಾವಗಳು ರಸದಲ್ಲಿ ವಿಶ್ರಾಂತಿ ಪಡೆದು ಭವಶ್ರಾಂತ ಮನಸ್ಸನ್ನು ಆರಾಧಿಸುವ ಕಲಾ ಪ್ರಕ್ರಿಯೆಯ ಪರಿಣತ ಫಲವೇ ರಸ. ಶ್ರೀಮಾನ್ ಶಿವರುದ್ರಪ್ಪನವರಂಥ ಮೇಧಾವಿಗಳು ಪಾಶ್ಚಾತ್ಯರ ವಿಮರ್ಶೆಯ ಜತೆಗೆ ಭಾರತೀಯ ಕಾವ್ಯಮೀಮಾಂಸೆಯನ್ನು ಆಳವಾಗಿ ಒಳ್ಳೆ ಗುರುಗಳ ನೇತೃತ್ವದಲ್ಲಿ ಅಭ್ಯಾಸ ಮಾಡಿರುವುದು ಕನ್ನಡ ಕವಿತೆಗೆ ಒಳ್ಳೆಯ ಕಾಲವಿನ್ನೂ ತೀರಿಲ್ಲವೆಂಬುದನ್ನು ದ್ಯೋತಿಸುತ್ತದೆ. ಈ ಮಾತುಗಳನ್ನಾಡುವಾಗ ನಾನೂ ಶಿವರುದ್ರಪ್ಪನವರೂ ರಸ ಜಿಜ್ಞಾಸೆಯಲ್ಲಿ ಕಳೆದ ಹಲವಾರು ದಿನಗಳ ಸವಿನೆನಪು ಎದ್ದು ಕಾಣಿಸಿಕೊಳ್ಳುತ್ತಿದೆ. ಇಂಥ ಜಿಜ್ಞಾಸೆಗಳಲ್ಲಿ ನನ್ನ ಮಾತು ಹದಮೀರಿ ಬೆಳೆಯುವುದೂ ಉಂಟು. ಹಾಗೆನಿಸಿದಾಗ ಇವರು ತಮಗೆ ಬೇಸರವಾಗಲಿಲ್ಲವೆಂದು ಆಶ್ವಾಸನೆ ಕೊಟ್ಟಿರು ವುದೂ ಅವರ ವಿಚಾರಪ್ರಿಯತೆಯನ್ನೂ ತಾಳ್ಮೆಯನ್ನೂ ನನ್ನ ಮೇಲಣ ವಿಶ್ವಾಸವನ್ನೂ ತೋರುತ್ತದೆ. 'ಗಂಧದವನೊಡನೆ ಗುದ್ದಾಡುವುದು ಲೇಸು'. ಸೌಂದರ್ಯದ ಮೇಲಣ ಅವರ ಉದ್ಗ್ರಂಥ ಮತ್ತು ಇತರ ಕಾವ್ಯಮೀಮಾಂಸೆ ಮತ್ತು ವಿಮರ್ಶೆಗಳು ಮನನೀಯ ವಾಗಿವೆ, ವಿದ್ವನ್ ಮಾನ್ಯವಾಗಿವೆ.

ಶಿವರುದ್ರಪ್ಪನವರು ವಿದ್ವಾಂಸರು ಮಾತ್ರವಲ್ಲ, ಸಹೃದಯ ರಸಿಕರು ಮಾತ್ರವಲ್ಲ, ಸ್ವತಃ ಉತ್ತಮ ಕವಿಗಳು. ಭಾವಕ್ಕೆ ತುಡಿಯದೆ ಉದ್ರೇಕಕ್ಕೆ ದುಡಿಯುವ ಕವಿತೆ ಯಾಗಲಿ ಕಲೆಯಾಗಲಿ ನನ್ನಂಥ 'ರಸ' ನಿಷ್ಠರಿಗೆ ಪ್ರಾಯಶಃ ಸೇರದು. ಲೋಕವನ್ನು ತಿದ್ದಲು ಹೊರಡುವಷ್ಟು ಶುದ್ಧಾತ್ಮನೆಂಬ ಧಾರ್ಷ್ಟ್ಯವೂ, ತಾತ್ವಿಕ ನಿಷ್ಠೆಯ ಕ್ರೌರ್ಯ ಕಾಠಿಣ್ಯಗಳೂ ನನ್ನಲ್ಲಿಲ್ಲ. ಕವಿಗಳಿಗಿರಬಾರದೆಂದೇ ನನ್ನೆಣಿಕೆ. ಕವಿಗೂ 'ಸಾಹಿತ್ಯ' ನಿರ್ಮಾಪಕರಿಗೂ ತುಂಬ ಬೇಕಾದುದು ಮಾತಿನ ಸಲಕರಣೆ. ಎಲ್ಲ ತತ್ತ್ವಗಳ ಯುದ್ಧ ಕೂಡ ಶಾಂತಿ ಸಮಾಧಾನ ಸಂತೋಷಗಳನ್ನು ಜಗತ್ತಿನಲ್ಲಿ ಹರಡಲೆಂದೇ ಪ್ರವರ್ತಿಸು ತ್ತವೆ. ಇದಕ್ಕೆ ಕವಿಯೂ ಬದ್ಧ. ಈ ದಿಸೆಯಲ್ಲಿ ಆತನ ಕೆಲಸ 'ಆಲೋಚನಾಮೃತ' ವಾದ ಸಾಹಿತ್ಯದ ನಿರ್ಮಿತಿ. "ರೀತಿರಾತ್ಮಾ ಕಾವ್ಯಸ್ಯ" ಎಂಬ ಲಕ್ಷಣದ ಕಡೆಗೆ ನನ್ನ ಮನಸ್ಸು ಈಗೀಗ ಹೆಚ್ಚಾಗಿ ಓಲುತ್ತಿದೆ. ಶಿವರುದ್ರಪ್ಪನವರದು ಬಹು ಸೊಗಸಾದ 'ರೀತಿ'. ಭಾವನೆಗಳಿಗೆ ದಾರಿದ್ರ್ಯವಿಲ್ಲ. ಸಾಮಾನ್ಯ ವಿಷಯಗಳಿಂದ ಉದ್ಬೋಧವಾದ ಹಗುರ ಬಗೆಯ ಮನೋವಿಲಾಸಗಳಿಗೆ ಒಂದು ಹೊಸ ತಿರುವನ್ನು ಕೊಡುವ ಚಮತ್ಕಾರ ಗಳಿವೆ. 'ಜಡೆ', 'ದೇವಶಿಲ್ಪಿ' 'ಚೆಲುವು'ಗಳಂಥ ಪ್ರತೀಕಭೂಯಿಷ್ಠವೂ ದರ್ಶನ ಬಂಧುರವೂ ಗಾಢವಾದ ಅನುಭವವನ್ನು ವ್ಯಕ್ತೀಕರಿಸುವಂಥವೂ ಆದ ಪದ್ಯಗಳನ್ನು

ಇವರ ಸಂಕಲನಗಳಲ್ಲಿ ಕಾಣುತ್ತೇವೆ. ಹೊಸ 'ರೀತಿ'ಯ ಕವಿಗಳೂ ಧಾರಾಳವಾಗಿ ಮೆಚ್ಚ ಬಹುದಾದ "ಬೆಳಗಾಗಲು ಉಜ್ಜುವುದೀ ನ್ಯೈಯನು ಸಾವಿರ ಬಗೆ ಸದ್ದಿನ ಹೆಜ್ಜೆ" ಎಂಬಂಥ ಸಾಲುಗಳನ್ನು ಚೆಲ್ಲಾಡುವ 'ಒಂದಿರುಳು', 'ನೆರಳಿಲ್ಲದ ದಾರಿ' ಮುಂತಾದ ಅನೇಕ ಪದ್ಯಗಳು ಇವರ ಲೇಖನಿಯಿಂದ ತುಳುಕಾಡಿವೆ. ಪ್ರಖರ ಬುದ್ಧಿಯೇ–ವಜ್ರ ಮಣಿಯೇ–ಕರಗಿ ಹರಿದಂತಿರುವ ಭಕ್ತರ ಮನಸ್ಸನ್ನು ಅರಿತ ಈತನಿಂದ 'ತೀರ್ಥವಾಣಿ' ಎಂಬಲ್ಲಿ ಬಹು ಮನೋಜ್ಞವಾದ ಭಾಷಾಂತರ ಗೀತಗಳು–ರಾಮಕೃಷ್ಣರ ವಚನಾಮೃತ ದಲ್ಲಿರುವುವು–ಹೊರಬಂದಿವೆ. ಈ ಕನ್ನಡ ಪದ್ಯಾನುವಾದಗಳನ್ನು ಹೊಗಳಿ ತೀರದು. ಶಿವರುದ್ರಪ್ಪನವರು ಹೃದಯ ಸಂಪನ್ನರು. ಅವರ ಭಾಷೆ ಬಹು ಹದವಾದ ಭಾಷೆ. ಅದು ಎಲ್ಲೂ ರೂಕ್ಷವಾಗುವುದಿಲ್ಲ. ಕಾಮಾದಿ ಚಿತ್ತ ವಿಕಾರಗಳಿಗೆ ಇವರ ಬರವಣಿಗೆ ಎಡೆ ಗೊಡದಿರುವುದು ಅದರ ವೈಶಿಷ್ಟ್ಯ. ಆಲೋಚನಾಪೂರ್ಣವೂ ಅನುಕಂಪೆಯಿಂದ ಕೂಡಿರುವುದೂ ಆದ ಮನೋವಿಲಾಸವನ್ನು ಇಲ್ಲಿ ಕಾಣುತ್ತೇವೆ. ನಾಡನ್ನೂ ಜನವನ್ನೂ ಕುರಿತು ಒಮ್ಮೊಮ್ಮೆ ಇವರಿಂದ ಹೊರಡುವ ಬೇಸರದ ನುಡಿಗಳೂ ಕೋಮಲ ಮನಸ್ಕರಿಗೆ ಸಹಜವಾದವು. 'ನಾಡೊಲುಮೆಯಿಂದ ತುಡಿಯುವ ವರ್ಧಿಷ್ಣುವಿನ ಹುಂಕಾರ ನಿಟ್ಟುಸಿರು ಗಳು.' ಶಿವರುದ್ರಪ್ಪನವರು ಒಳ್ಳೆ ಕವಿ.

ಇವರು ಒಳ್ಳೆಯ ಸ್ನೇಹಿತರೂ ಅಹುದು; ಆ ಸವಿಯನ್ನು ನಾನು ಬಲ್ಲೆ. ಅವರ ಮಡದಿಯೂ ಮಕ್ಕಳೂ ನನ್ನನ್ನು ಕಂಡರೆ ತುಂಬಾ ವಿಶ್ವಾಸದಿಂದ ನಡೆದುಕೊಳ್ಳುತ್ತಾರೆ. ಅಪೂರ್ವ ತಿಂಡಿಯಾದ 'ಬೆಣ್ಣೆಗಾರಿಗೆ'ಯ ಮಾಧುರ್ಯವನ್ನು ನಾನು ಅಲ್ಲೆ ಮೊದಲು ಕಂಡದ್ದು. ಶಿವರುದ್ರಪ್ಪನವರು ಹೇಳಿಸಿಕೊಂಡು ಉಪಕಾರವನ್ನು ಮಾಡುವಂಥವರಲ್ಲ. ನಾನು ಪದ್ಯ ಬರೆಯುವ ಹವ್ಯಾಸದಲ್ಲಿ ತೊಡಗಿದುದು ಒಳ್ಳೆಯದೇ ಆಯಿತು. ಅದು ಇಂಥ ತರುಣ ವಿದ್ವದ್ ರಸಿಕ ಮಿತ್ರರನ್ನೂ ನನಗೆ ಒದಗಿಸಿಕೊಟ್ಟಿದೆ. ತಮ್ಮ 'ಸೌಂದರ್ಯ ಸಮೀಕ್ಷೆ'ಯಲ್ಲಿ ಇವರು ಉದ್ಧರಿಸಿ ವ್ಯಾಖ್ಯಾನಿಸುವ ನನ್ನ ಪದ್ಯಗಳನ್ನು ಓದಿದರೆ 'ನಿಜ ವಾಗಿ, ಇವು ಇಷ್ಟು ಚೆಲುವಾಗಿವೆಯೇ, ಅರ್ಥಸಂಪತ್ತಿನಿಂದ ಕೂಡಿ ರಸ್ಯವಾಗಿವೆಯೇ' ಎಂದು ಸಂತೋಷಗೊಂಡಿದ್ದೇನೆ. ಭಾವಜ್ಞರ ಮಾತುಗಳವು, ತುಂಬ ವಿಶ್ವಾಸದಿಂದ ಮೂಡಿಬಂದವು. ನಾನು ಅರವತ್ತನ್ನು ಮುಟ್ಟಿದಾಗ ಪತ್ರಿಕೆಯಲ್ಲಿ ಅದನ್ನು ತಿಳಿದು, ಇವರು ನನಗೆ ಬರೆದ ಒಂದು ಕಾಗದದಲ್ಲಿ ಈ ಮಾತುಗಳಿವೆ "ನಿಮಗೆ ಅರವತ್ತು ವರ್ಷ ವಾಯಿತು—ಎಂದು ಎಣಿಸುವುದು ಕೇವಲ ಪರಿಗಣನ ಸಹಜವಾದ ಲೌಕಿಕ ಪ್ರವೃತ್ತಿ ಯಷ್ಟೆ. ಆದರೆ ನಿಮ್ಮ ಕವಿಚೇತನಕ್ಕೆ ಈ ಗಣನೆ ಅನ್ವಯಿಸುವುದಿಲ್ಲ. ಏಕೆಂದರೆ ಅದಕ್ಕೆ ಮುಪ್ಪಿಲ್ಲ, ಕಾಲದ ಉಪಹತಿಯಿಲ್ಲ. "ಅಜರಾಮರವಿದು ಅಚ್ಚರಿ ಪುರಾಣ ನೂತನವು" ಎಂದು. ನಿಜ, ಕವಿಗೆ ಜರೆಯನ್ನೂ ಮರಣವನ್ನೂ ತಡೆಯುವರು ವಿದ್ವದ್ ರಸಿಕ ಸಹೃದಯರು. ನನಗೆ ಈಗ ಎಪ್ಪತ್ತಾಯಿತು. ಆದರೂ ಒಂದು ದಿಸೆಯಲ್ಲಿ ಕಾವ್ಯ ಕ್ರಿಯೆ ನಡೆಯುತ್ತಿದೆ. ಕಾರಣ, ಸಹೃದಯ ಮಿತ್ರರ ಅಕ್ಷೀಣ ಮಮತೆ. ಶಿವರುದ್ರಪ್ಪ ನವರಿಗೆ ಐವತ್ತು ತುಂಬುತ್ತದೆಯೆಂದು ನಾನು ಕೇಳಿ ಆಶ್ಚರ್ಯಪಟ್ಟೆ. ತಾರುಣ್ಯದ ಎಡ

ಭಾಗಕ್ಕೆ ಇವರಾಗಲೇ ಬಂದರಲ್ಲ ಎಂದು. ಈಗ ಅವರನ್ನು ಸಹೃದಯರ ತೋಷದಿಂದ ಸೂಚಿಸುವುದು ತುಂಬ ಸಾಧುವಾದುದು. ಕವಿಚೇತನಕ್ಕೆ ಈ ಕಾಯಕಲ್ಪ ಆಗಾಗ ಅವಶ್ಯಕ. "ಜಗತಿ ಹಿ ಬಹು ದುಃಖೇ ದುರ್ಲಭಃ ಪ್ರೀತಿಯೋಗಃ." ಶಿಸರುದ್ರಪ್ಪ ನವರು ಪ್ರೀತಿ ಸಮೃದ್ಧರಾಗಿ ಎಂದಿಗೂ ಮನಸ್ಸಿನ ತಾರುಣ್ಯವನ್ನೂ ಹೃದಯದ ರಸ ಗ್ರಹಣ ಚಾತುರ್ಯವನ್ನೂ ದೇಹದ ಲವಲವಿಕೆಯನ್ನೂ ಕಳೆದುಕೊಳ್ಳದೆ ತಮ್ಮ ಸಾರವಾದ ಬರವಣಿಗೆಗಳಿಂದಲೂ ದೇಶಪ್ರೇಮ ಪ್ರೇರಿತವಾದ ಸತ್ಕಾರ್ಯಗಳಿಂದಲೂ ಜನರನ್ನು ಸಂತೋಷಗೊಳಿಸುತ್ತಾ ಚಿರಕಾಲ ಸಕಲ ಸೌಭಾಗ್ಯಗಳೊಡನೆ ಇರುವಂತೆ ಜಗದೀಶ್ವರನು ಅನುಗ್ರಹಿಸಲೆಂದು ಹಾರ್ದವಾಗಿ ಹಾರೈಸುತ್ತೇನೆ.

## ಕೆ. ಎಸ್. ನರಸಿಂಹಸ್ವಾಮಿ

# ಗೆಳೆಯ ಜಿ.ಎಸ್.ಎಸ್.

ನನ್ನ ಸ್ನೇಹಿತರಾದ ಡಾ. ಶಿವರುದ್ರಪ್ಪನವರಿಗೆ ಐವತ್ತು ತುಂಬುವ ಸಮಯದಲ್ಲಿ ಒಂದು ಅಭಿನಂದನ ಗ್ರಂಥವನ್ನರ್ಪಿಸುವುದು ಅತ್ಯುಚಿತವಾದ ಕೆಲಸ. ಇಂಥ ಸಾತ್ವಿಕ ಸ್ವಭಾವದವರು ಎಂದೂ ಅಭಿನಂದನಾರ್ಹರೇ ಎಂದೂ ಒಳ್ಳೆಯ ಕೆಲಸಕ್ಕೆ ಎಲ್ಲವೂ ಶುಭ ಕಾಲವೇ ಎಂದೂ ನಾನಿಲ್ಲಿ ದನಿಗೂಡಿಸುತ್ತಿದ್ದೇನೆ. ೨೫ ವರುಷಗಳನ್ನು ದಾಟಿದ ನನ್ನ ಅವರ ಸ್ನೇಹವನ್ನಿಲ್ಲಿ ನೆನೆಯುತ್ತಿದ್ದೇನೆ.

ಜಿ. ಎಸ್. ಎಸ್. ಸಮರ್ಥ ಶಿಕ್ಷಕರಾಗಿ, ಕನ್ನಡದ ಗಣ್ಯವಿದ್ವಾಂಸರಾಗಿ, ಸೂಕ್ಷ್ಮ ಸುಂದರ ಭಾವಗಳ ಕವಿಯಾಗಿ ಗಣನೀಯ ಪ್ರಮಾಣದ ಸೇವೆ ಸಲ್ಲಿಸಿದ್ದಾರೆ; ಬೆಂಗಳೂರು ವಿಶ್ವವಿದ್ಯಾಲಯದ ಪ್ರಮುಖ ವಿಭಾಗಗಳಲ್ಲೊಂದಾದ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿ, ಸಾಹಿತ್ಯ ಸಂಕಿರಣಗಳ ಸಂಚಾಲಕರಾಗಿ, ವಿಚಾರಪೂರ್ಣ ಪ್ರಕಟಣೆಗಳ ಸಂಪಾದಕರಾಗಿ ಅವರು ಬಹು ದಕ್ಷತೆಯಿಂದ ಕಾರ್ಯನಿರ್ವಹಿಸುತ್ತಿದ್ದಾರೆ. ಮತ್ತು ಇತರ ಅನೇಕ ಸಾಹಿತ್ಯಿಕ ಕಾರ್ಯಕ್ರಮಗಳಿಗೆ ಪ್ರೇರಕಶಕ್ತಿಯಾಗಿದ್ದಾರೆ.

ಅವರ ಸಾಹಿತ್ಯಾಸಕ್ತಿ ವಿದ್ಯಾರ್ಥಿದೆಶೆಯಲ್ಲೇ ಅಂಕುರಿಸಿತು. ಸತ್ಪ್ರಭಾವಗಳು ಅದು ಹೊರವಾಗಿ ಬೆಳೆಯುವಂತೆ ಮಾಡಿದವು. ಸನ್ಮಾನ್ಯರಾದ ಕುವೆಂಪು, ತೀ.ನಂ.ಶ್ರೀ, ಡಿ. ಎಲ್. ಎನ್ ಮುಂತಾದ ಹಿರಿಯರ ಮಾರ್ಗದರ್ಶನದಲ್ಲಿ ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳನ್ನು ಕ್ರಮವಾಗಿ ಅಧ್ಯಯನ ಮಾಡಿರುವ ಶಿವರುದ್ರಪ್ಪನವರು ನಮ್ಮ ಸಾಹಿತ್ಯ ಪಥವನ್ನು ಅರಿತವರಾದ್ದರಿಂದ ಅವರ ವಿಮರ್ಶೆ ತನ್ನದೇ ಆದ ಗಾಂಭೀರ್ಯವನ್ನು ಕಾಪಾಡಿಕೊಂಡು ಬಂದಿದೆ. ಈ ವಿದ್ವತ್ತಿನ ಮೌಲ್ಯವನ್ನು ಹತ್ತು ಪಟ್ಟು ಹೆಚ್ಚಿಸಿದೆ ಅವರ ವಿನಯ ಸೌಜನ್ಯಗಳ ನರುಗಂಪು.

'ಒಳ್ಳೆಯದು ಒಳ್ಳೆಯದನ್ನೇ ಮಾಡುತ್ತದೆ; ತಾನೂ ಬಂಗಾರವಾಗಿ ಬಾಳುತ್ತದೆ' ಎಂದು ನಾನು ಹೇಳಿದ್ದುಂಟು. ಮಂದಸ್ಮಿತದ ಜಿ. ಎಸ್. ಎಸ್ ಅದಕ್ಕೊಂದು ಉಜ್ವಲ ನಿದರ್ಶನವಾಗಿದ್ದಾರೆ. ಅವರ ಸ್ನೇಹಿತನೆಂದು ಹೇಳಿಕೊಳ್ಳಲು ನನಗೆ ಹೆಮ್ಮೆಯಾಗುತ್ತಿದೆ. ಈ ಸ್ನೇಹ ೨೫ ವರುಷಗಳಷ್ಟು ಹಿಂದಿನಿಂದ ಬಂದದ್ದು. 'ಮಗು ನಡೆದು ಮನೆಯ ನೆಲ ಮಿದುವಾಯಿತು' ಎಂಬ ಅವರದೇ ಒಂದು ಕಾವ್ಯಪಂಕ್ತಿ ನನ್ನನ್ನು ಅವರ ಮನೆಗೆ ಕರೆದೊಯ್ದಿತು. ಅಂದಿನಿಂದೀವರೆಗೆ ಅದು ಏಕಪ್ರಕಾರವಾಗಿ ಬೆಳೆಯುತ್ತ ಬಂದಿದೆ, ಸಂತೋಷವನ್ನು ತಂದಿದೆ.

ಗೆಳೆಯ ಶಿವರುದ್ರಪ್ಪನವರಿಗೆ ಐವತ್ತು ತುಂಬುತ್ತಿರುವ ಈ ಸಮಯದಲ್ಲಿ ಅವರಿಗೂ, ಅವರ ಕುಟುಂಬದವರಿಗೂ ಸಮಸ್ತ ಸನ್ಮಂಗಳಗಳೂ ಲಭಿಸಲೆಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

## ಎಂ. ವಿ. ಸೀತಾರಾಮಯ್ಯ

# ನಾನು ಕಂಡ ಶಿವರುದ್ರಪ್ಪನವರು

ಶಿವರುದ್ರಪ್ಪನವರು ಮೊತ್ತಮೊದಲಿಗೆ ನನಗೆ ಪರಿಚಯವಾದದ್ದು ಅವರ 'ಸಾಮಗಾನ'ದ ಮೂಲಕ; ಅನಂತರ, 'ಕರ್ಮಯೋಗಿ'ಯ ಲೇಖಕರಾಗಿ; ಮತ್ತು ಶ್ರೀನಿವಾಸರ 'ಚೆನ್ನಬಸವನಾಯಕ' ಕೃತಿ ರಾಹುಗ್ರಸ್ತವಾದಾಗ, ಆ ಸಂಬಂಧದ ಶಾಂತಿಕ್ರಿಯೆಯಲ್ಲಿ.

ಶಿವರುದ್ರಪ್ಪನವರ 'ಸಾಮಗಾನ' ಕನ್ನಡ ಕಾವ್ಯಪ್ರಪಂಚದಲ್ಲಿ ತನ್ನದೇ ಆದ ಮೆಲುಪುದನಿಯಲ್ಲಿ ಕೇಳಿಬರುವ ವೇಳೆಗೆ ಗೀತಲಕ್ಷಣದ ಕನ್ನಡ ಭಾವಕವಿತೆ ಒಂದು ತಲೆನೆಲೆಯಲ್ಲಿ ನಿಂತಿತ್ತು; 'ನವ್ಯಕಾವ್ಯ' ಕೂದಲು ಕೆದರಿಕೊಂಡು ತಲೆದೋರುವುದಕ್ಕೂ ಮುಂಚಿನ ಅಂಚಿನ ಕಾಲ ಅದು. ಆಗ ತುಂಬ ಹೆಸರಾಗಿದ್ದ ಹಸುರಾಗಿದ್ದ ಪ್ರಮುಖ ಕವಿಗಳ ಪ್ರಭಾವಕ್ಕೆ ಒಳಗಾಗದೆ—ಒಳಗಾದರೂ ಅವರ ಪ್ರಭಾವ ಮುದ್ರೆ ಸ್ಪಷ್ಟವಾಗಿ ಗೋಚರವಾಗದಂತೆ—ಕಾವ್ಯೋಪಾಸನೆಗೆ ತೊಡಗುತ್ತಿದ್ದ ತರುಣ ಕವಿಗಳು ಒಂದು ದೊಡ್ಡ ಸವಾಲನ್ನೆ ಎದುರಿಸಬೇಕಾಗಿತ್ತು. ಅಂಥ ಸವಾಲನ್ನು ಯಶಸ್ವಿಯಾಗಿ ಎದುರಿಸಿ ತನ್ನತನವನ್ನು ಕಾಯ್ದುಕೊಂಡ ಅಂದಿನ ತರುಣಕವಿಗಳಲ್ಲಿ ಇವರೂ ಒಬ್ಬ ರಾಗಿದ್ದರು. 'ಭರವಸೆ ಹುಟ್ಟಿಸುವ ಕವಿ' ಎನ್ನಬಹುದಾದದ್ದಕ್ಕಿಂತ ಬಲು ಮೇಲಿನ ಮಟ್ಟದ ಕವಿಯಲ್ಲಿ ನಿರೀಕ್ಷಿಸಬಹುದಾದ ಸ್ವಂತ ವ್ಯಕ್ತಿತ್ವದ ಚಹರೆಯನ್ನು 'ಸಾಮಗಾನ' ದಲ್ಲಿ ಕಂಡು ಸಂತೋಷಪಟ್ಟಿದ್ದೆ. ಮಾವಿನತೋಪಿನಲ್ಲಿ ಮಲ್ಲಿಗೆ ಹಂಬು ಹೊಬಿಡುವು ದನ್ನು ಕಂಡಂತಾಗಿತ್ತು. ಶಿವರುದ್ರಪ್ಪನವರನ್ನು ನಾನು ಮೊತ್ತಮೊದಲಿಗೆ ಕಂಡದ್ದು ಹೀಗೆ—ಒಬ್ಬ ಸಹೃದಯನ ರಸದೃಷ್ಟಿಯಿಂದ.

'ಸಾಮಗಾನ'ದ ಕವಿ ಬರೆದ 'ಕರ್ಮಯೋಗಿ'—ಮೊದಲ ಗದ್ಯಕೃತಿ—ಪಿ.ಯು.ಸಿ. ತರಗತಿಗೆ ಪಠ್ಯಪುಸ್ತಕವಾಗಿ ಗೊತ್ತಾಗಿತ್ತು. ಅದನ್ನು ವಿದ್ಯಾರ್ಥಿಗಳಿಗೆ ಬೋಧಿಸುವ ಸಂತೋಷದ ಕರ್ತವ್ಯ ನನ್ನ ಪಾಲಿಗೂ ಬಂದಿತ್ತು. 'ಪಠ್ಯಪುಸ್ತಕ ಆಗಬೇಕಾದರೆ ಒಂದು ಜೀವನ ಚರಿತ್ರೆ ಬರೆದು ಒಪ್ಪಿಸಬೇಕು' ಎಂಬ ರೂಢಿ ಬಲವಾಗಿ ಬೇರೂರಿದ್ದ ಕಾಲ ಅದು; ಬೇರೂರಿ ಬಿಳಲುಗಳನ್ನೂ ಇಳಿಯಬಿಟ್ಟಿತ್ತು. ಅದರ ಆಸರೆಯಲ್ಲಿ ಗ್ರಂಥಕರ್ತ ನಾಮಧಾರಕರಾದವರು ಎಷ್ಟೋ ಮಂದಿ. ಅದರ ನೆರಳಿನಲ್ಲಿ, ಗ್ರಂಥಕರ್ತರನ್ನು ಸಾಮಾನ್ಯ ವಾಗಿ ಬಾಧಿಸುವ ಆಮಿಷದ ಬಲಿಪೀಠದ ಮೇಲೆ, ಎಷ್ಟೋ ಮಂದಿ ಐತಿಹಾಸಿಕ ಮಹಾ ಪುರುಷರ ಚಿತ್ರಹಿಂಸೆ—ಕೊಲೆ ಕೂಡ—ನಡೆದಿದೆ. 'ಕರ್ಮಯೋಗಿ'ಯನ್ನು ಪಾಠ ಹೇಳು

ವುದಕ್ಕೆಂದು ಓದಿಕೊಂಡಾಗ, ಇದೊಂದು ಹೊಸಬಗೆಯ ಜೀವನಚರಿತ್ರೆ ಎನ್ನಿಸಿತು ನನಗೆ. ಒಬ್ಬ ಮಹಾಕವಿ ನಿರ್ಮಿಸಿದ್ದ ಮಹಾಪುರುಷನೊಬ್ಬನ ಜೀವಂತಮೂರ್ತಿಯನ್ನು, ರೆಕ್ಕೆ ಬಲಿತು ಸ್ವತಂತ್ರಕಲ್ಪನಾಕಾಶದಲ್ಲಿ ವಿಹರಿಸುತ್ತಿದ್ದ ಇನ್ನೊಬ್ಬ ಕವಿ ರಸಾರ್ದ್ರದೃಷ್ಟಿಯಿಂದ ನೋಡಿ, ಆ ಮೂರ್ತಿಯ ಚೈತನ್ಯವನ್ನು ಹೃದಯದಲ್ಲಿ ತುಂಬಿಕೊಂಡು, ಕಾವ್ಯ ಗುಣವುಳ್ಳ ವಿಶಿಷ್ಟ ಗದ್ಯಶೈಲಿಯಲ್ಲಿ ಕರುವಿಟ್ಟು. ಪವಾಡ ಪುರುಷನ ಸ್ಥಾನದಲ್ಲಿ ಕರ್ಮಯೋಗಿಯನ್ನು ನಿಲ್ಲಿಸಿದ್ದ ಕುಶಲಕರ್ಮ ನನಗೆ ಗೋಚರವಾಯಿತು. ಈ ಕೃತಿಯಲ್ಲಿ ಜೀವನಚರಿತ್ರೆಯ ಯಾಥಾರ್ಥ್ಯ ಗ್ರಹಣ ದೃಷ್ಟಿ, ಕಾದಂಬರಿಯ ನಿರೂಪಣಾ ಕೌಶಲ, ಕಾವ್ಯದ ರಸಸರತೆ—ಇವು ಮೂರೂ ಗುಣಗಳು ಮುಕ್ಕೂಟವಾಗಿ, ಒಂದು ಹೊಸ ಬಗೆಯ ಕೃತಿರಚನೆಗೆ ಕುರುಹು ದೋರಿತು. ಆದರೂ, ಇದರ ಮಾದರಿಯನ್ನು ಅನುಸರಿಸಿ, ಪೂರ್ವಕಾವ್ಯವೊಂದನ್ನು ಅವಲಂಬಿಸಿ, ಗಣನೀಯ ಸಂಖ್ಯೆಯಲ್ಲಿ ಕೃತಿರಚನೆಯಾದಂತೆ ಕಂಡುಬರುವುದಿಲ್ಲ. ಹಾಗೆ ರಚಿತವಾಗಿರಬಹುದಾದ ವಿರಳಸಂಖ್ಯೆಯ ಕೃತಿಗಳಲ್ಲಿ ಶ್ರೀ. ಎಚ್. ತಿಪ್ಪೇರುದ್ರಸ್ವಾಮಿಯವರ 'ಪರಿಪೂರ್ಣದೆಡೆಗೆ' ನನ್ನ ಮೆಚ್ಚುಗೆಗೆ ಪಾತ್ರವಾಗಿ, ನೆನಪಿನಲ್ಲಿ ನಿಂತಿದೆ.

ಹೀಗೆ, ಪ್ರಾರಂಭದಲ್ಲಿ ಕವಿತೆಯ ಮೂಲಕ, ಒಂದು ಹೊಸ ಬಗೆಯ 'ಜೀವನ ಕಾದಂಬರಿ'ಯ ಮೂಲಕ, ಶಿವರುದ್ರಪ್ಪನವರು ಚೈತನ್ಯರೂಪದ ಅಕ್ಷರಮೂರ್ತಿಯಾಗಿ ನನ್ನ ಮನಸ್ಸಿನಲ್ಲಿ ಅಳಿಸಲಾಗದ ರೀತಿಯಲ್ಲಿ ಎಡೆ ಪಡೆದರು.

'ಶ್ರೀನಿವಾಸ'ರ ಐತಿಹಾಸಿಕ ಕಾದಂಬರಿ ಒಂದು ಚೆಲುವಾದ ಚೊಕ್ಕ ದೃಷ್ಟಿಯ, ಒಂದು ಆದರ್ಶವಾದ ಜೀವನ ದರ್ಶನವನ್ನು ಒಳಗೊಂಡ, ಶ್ರೇಷ್ಠ ಕೃತಿ. ಇದು ಒಂದು ಮತದ ಕೀರ್ತಿ ಪ್ರತಿಷ್ಠೆಗಳಿಗೆ ಕಲಂಕದ ಮಸಿ ಹಚ್ಚುವಂತಿದೆ ಎಂದು ಖ್ಯಾತ ವಿದ್ವಾಂಸರು ಒಬ್ಬರು ಗಟ್ಟಿಯಾಗಿ ದನಿ ಎತ್ತಿದರು. ಆ ಸಮಯದಲ್ಲಿ, 'ಚೆನ್ನಬಸವನಾಯಕ' ಪ್ರಮುಖ ಭಾರತೀಯ ಭಾಷೆಗಳಿಗೆ ಭಾಷಾಂತರಗೊಳ್ಳುವಂತೆ ಕೇಂದ್ರ ಸಾಹಿತ್ಯ ಅಕಡೆಮಿಯಿಂದ ಆಯ್ಕೆಯಾಗಿತ್ತೆಂದು ಕೇಳಿಬಲ್ಲೆ. ಆ ವಿದ್ವಾಂಸರ ದನಿ ಆ ಕೇಂದ್ರಕ್ಕೂ ಕೇಳುವಂತಾಯಿತು. ಆ ಸಂದರ್ಭದಲ್ಲಿ, ವಿಶುದ್ಧ ದೃಷ್ಟಿಯ ಮೂವರು ಕಿರಿಯ ಸಹೃದಯೀಮಿತ್ರರು 'ಚೆನ್ನಬಸವನಾಯಕ' ಕೃತಿಯ ಶ್ರೇಷ್ಠ ಗುಣಮಟ್ಟವನ್ನು ಕೊಂಡಾಡಿ, ಯಾವ ಮತವನ್ನೂ ಕೀಳೆನಿಸುವ ದೃಷ್ಟಿ ಅದರಲ್ಲಿ ಇಲ್ಲ ಎಂದು ಪತ್ರಿಕೆಯ ಮೂಲಕ ಸಾರಿಹೇಳಿದರು. ಹುಯಿಲು ತಮಟೆಯ ಗಲಭೆಯಲ್ಲಿ ಹಕ್ಕಿಗಳ ಉಲಿ ಕೇಳಿ-ಸೀತೆ? ಒಂದು ಕನ್ನಡ ಕೃತಿಗೆ ಸಲ್ಲುವುದರಲ್ಲಿದ್ದ ಅಖಿಲ ಭಾರತದ ಮನ್ನಣೆ ಸಲ್ಲದೆ ಹೋಯಿತು. 'ಚೆನ್ನಬಸವನಾಯಕ' ಕೃತಿಯ ಪರವಾಗಿ ಟೊಂಕಕಟ್ಟಿ ನಿಂತ ಮೂವರು ಕೆಚ್ಚೆದೆಯ ಕಿರಿಯರಲ್ಲಿ ಶಿವರುದ್ರಪ್ಪನವರೂ ಒಬ್ಬರು. ಇನ್ನೊಬ್ಬರು ನನ್ನ ವಿದ್ಯಾರ್ಥಿ ಮಿತ್ರರು. ಈ ಪ್ರಸಂಗದಲ್ಲಿ, ಮತೀಯ ಭ್ರಾಂತಿಯಿಂದ ಕಲುಷಿತವಾಗದ ಇವರ ಹೃದಯನೈರ್ಮಲ್ಯ ನನಗೆ ತುಂಬ ಆಪ್ಯಾಯಮಾನವಾಯಿತು.

ಬಹುಶಃ ಈ ಸಂಸುಮಾರು ಕಾಲದಲ್ಲಿಯೇ 'ಸೌಭಾಗ್ಯವತಿ' ಎಂಬ ನನ್ನ ಕಾದಂ

ಬರಿಯೊಂದು ಪ್ರಕಟವಾಗಿತ್ತು. ಅದರ ವಿಮರ್ಶೆ 'ಪ್ರಬುದ್ಧ ಕರ್ಣಾಟಕ'ದಲ್ಲಿ ಪ್ರಕಟವಾಯಿತು; ಶಿವರುದ್ರಪ್ಪನವರೇ ವಿಮರ್ಶಕರು. ಆಗ್ಗೆಯೂ ನಾನು ಅವರನ್ನು ನೋಡಿರಲಿಲ್ಲ; ನಮ್ಮಿಬ್ಬರ ನಡುವೆ ಯಾವ ಬಗೆಯ ಪತ್ರವ್ಯವಹಾರವೂ ನಡೆದಿರಲಿಲ್ಲ. ಆದ್ದರಿಂದ ಅವರ ವಿಮರ್ಶೆ ನಿಷ್ಪಕ್ಷಪಾತದೃಷ್ಟಿಯದು ಎನ್ನುವಲ್ಲಿ ನನಗಂತೂ ಸಂದೇಹವಿರಲಿಲ್ಲ. ಕೃತಿಯ ಗುಣವನ್ನು ಗ್ರಹಿಸಿ, ದೋಷವೆಂದು ಕಂಡದ್ದನ್ನು ನಿರ್ದಾಕ್ಷಿಣ್ಯವಾಗಿ ತಿಳಿಸಿದ್ದರು. ಅವರ ವಿಮರ್ಶೆಯ ಬರವಣಿಗೆಯಲ್ಲಿ ಸಹಜವಾಗಿಯೇ ನನಗೆ ಸಂತೋಷವನ್ನು ಕೊಟ್ಟ ಗುಣಪ್ರಶಂಸೆಯ ಭಾಗವನ್ನು, ಅವರ ಗುಣಗ್ರಾಹೀದೃಷ್ಟಿಗೆ ನಿದರ್ಶನವಾಗಿ ಇಲ್ಲಿ ಉದ್ಧರಿಸಬಯಸುತ್ತೇನೆ:

> "ಈ ಕಾದಂಬರಿಯ ವಸ್ತು ರಮ್ಯವಾಗಿದೆ. ಕಥೆ ಬೆಳೆದುಕೊಂಡು ಬಂದಿರುವ ರೀತಿ ಮನೋಜ್ಞವಾಗಿದೆ....ಎಲ್ಲ ಪಾತ್ರಗಳೂ ಬೆಳೆದು ಜೀವಂತವಾಗಿವೆ...ಸಂಯಮ ನಿಜವಾದ ಕಲೆಗಾರಿಕೆಯ ಪ್ರಾಣಸ್ವರೂಪ. ಆ ಒಂದು ಸಂಯಮವನ್ನು ಕತೆಯ ಉದ್ದಕ್ಕೂ ಗುರುತಿಸಬಹುದು. ಹಿತಮಿತವಾದ ಶೈಲಿ, ಸಜೀವ ಪಾತ್ರ ಸನ್ನಿವೇಶಗಳಿಂದ ಕಾದಂಬರಿ ಒಂದು ರೀತಿಯಲ್ಲಿ, ಇಂದು ರಾಶಿರಾಶಿಯಾಗಿ ಬರುತ್ತಿರುವ ಕಾದಂಬರಿಗಳಿಗಿಂತ ಅನ್ಯವಾಗಿ, ಶುಚಿಯಾಗಿದೆ."

ಕನ್ನಡ ವಿಮರ್ಶಾಸಾಹಿತ್ಯದ ಆರೋಗ್ಯವನ್ನು ಕಾಪಾಡಿ, ಅದನ್ನು ಸರಿಯಾದ ದಿಕ್ಕಿನಲ್ಲಿ ಕೊಂಡೊಯ್ಯುವ ಕಾರ್ಯದಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರ ತನ್ನ ವಾರ್ಷಿಕ ವಿಚಾರ ಸಂಕಿರಣ ಸಮಾರಂಭಗಳ ಮೂಲಕ, 'ಸಾಹಿತ್ಯವಾರ್ಷಿಕ'ದ ಮೂಲಕ, ಒಂದು ಮಹತ್ತ್ವದ ಪಾತ್ರವನ್ನು ವಹಿಸುತ್ತಿದೆ. ಇದರ ಶ್ರೇಯಸ್ಸೆಲ್ಲವೂ ಅದರ ನಿರ್ದೇಶಕರಾದ ಶಿವರುದ್ರಪ್ಪನವರಿಗೆ ಸಲ್ಲಬೇಕು ಎಂದಾಗ, ಆ ಶ್ರೇಯಸ್ಸಿನ ಒಂದು ಗಣ್ಯವಾದ ಭಾಗ ಬಹು ವರ್ಷಗಳ ಹಿಂದೆಯೇ ನಿಜವಾದ ವಿಮರ್ಶೆಯ ಹದವನ್ನು ಕಂಡುಕೊಂಡಿದ್ದ ಅಂದಿನ ವಿಮರ್ಶಕ ಶಿವರುದ್ರಪ್ಪನವರಿಗೂ ಸಲ್ಲಬೇಕು. ನನ್ನ ಕೃತಿಯ ವಿಮರ್ಶೆಯಲ್ಲದೆ ಅವರ ಇತರ ವಿಮರ್ಶೆಗಳು, ವಿಮರ್ಶಾತ್ಮಕ ಲೇಖನಗಳು—ಇವುಗಳಲ್ಲಿ ಕೆಲವನ್ನು ಓದಿದ್ದ ನಾನು, ಒಬ್ಬ ಶ್ರೇಷ್ಠ ವಿಮರ್ಶಕನ ಉದಯವನ್ನು ಆಗಲೆ ಕಂಡುಕೊಂಡಿದ್ದೆ.

ಶಿವರುದ್ರಪ್ಪನವರನ್ನು ನಾನು ನೋಡಿರದಿದ್ದರೂ ಒಬ್ಬ ಕವಿಯಾಗಿ, ವಿಮರ್ಶಕನಾಗಿ, ಸಾಹಿತ್ಯಧರ್ಮದ ಸೋದರರಾಗಿ ಅವರು ನನಗೆ ಪ್ರಿಯವಾಗುತ್ತಿದ್ದರು; ಹತ್ತಿರವಾಗುತ್ತಿದ್ದರು. ಅವರು ಇನ್ನೂ ಹತ್ತಿರಕ್ಕೆ ಬಂದ ಸಂದರ್ಭ ಹೀಗೆ:

ವಿವೇಕಾನಂದರ ಶತಮಾನೋತ್ಸವ ಸಂದರ್ಭದಲ್ಲಿ ಬೆಂಗಳೂರಿನ ಶ್ರೀ ರಾಮಕೃಷ್ಣಾಶ್ರಮದಲ್ಲಿ ಮೂರು ದಿನಗಳ ಕಾರ್ಯಕ್ರಮ ಏರ್ಪಾಡಾಗಿತ್ತು. ಅದರ ಅಂಗವಾಗಿ ಕವಿಗೋಷ್ಠಿಯೊಂದು ನಡೆಯುವುದಿತ್ತು. ಅದರ ವ್ಯವಸ್ಥಾಪಕರು ದಿವಂಗತ ಕೋಲಾರದ ಸಂಪದ್ಗಿರಿರಾಯರು. ಆ ಹೊತ್ತಿಗೆಂದೇ ವಿವೇಕಾನಂದರನ್ನು ಕುರಿತು ಒಂದು ಕವಿತೆ

ಯನ್ನು ರಚಿಸಿ ಓದಬೇಕೆಂದು ನನ್ನನ್ನು ಒಪ್ಪಿಸಿಕೊಂಡಿದ್ದರು ರಾಯರು, ಕವಿತೆಯನ್ನು ರಚಿಸಿದೆ. ನನ್ನ ದುರ್ದೈವದಿಂದ ಕಾರ್ಯಕ್ರಮದ ದಿನ ಒಳಗೇ ಅಡಗಿದ್ದ ದೇಹಾಲಸ್ಯ ಕೆರಳಿತು. ಕಾರ್ಯಕ್ರಮದಲ್ಲಿ ಭಾಗವಹಿಸಲಾಗಲಿಲ್ಲ. ಗೋಷ್ಠಿಯ ರೇಡಿಯೋ ವರದಿಯ ಭಾಗವಾಗಿ, ಕವಿತೆಗಳ ವಾಚನವೂ ಪ್ರಸಾರವಾಯಿತು. ನಾನು ಸಾಧಾರಣ ಎಂದು ತಿಳಿದಿದ್ದ ನನ್ನ ಪದ್ಯಕ್ಕೆ ಶಿವರುದ್ರಪ್ಪನವರು ತಮ್ಮ ಗಂಭೀರ ವಾಣಿಯನ್ನು, ತಮ್ಮದೇ ಕೃತಿ ಎನ್ನುವ ಮಮತೆಯ ಧಾಟಿಯನ್ನು, ತುಂಬಿ ಕೊಟ್ಟಿದ್ದರು. ಅವರ ಸೋದರಿಕೆಯ ಸಹಕಾರ ನನಗೆ ತುಂಬ ಸಂತೋಷವನ್ನು ಕೊಟ್ಟಿತು. ಅವರು ಇನ್ನೂ ಹತ್ತಿರದವರಾದರು ನನಗೆ. ಅವರ ವಾಣಿಯನ್ನು ಕೇಳಿ, ಅವರನ್ನು ಬಹುಮಟ್ಟಿಗೆ ಕಂಡಂತೆಯೇ ಆಗಿತ್ತು; ಆದರೆ ನೋಡಿರಲಿಲ್ಲ.

ನಾನು ಅವರನ್ನು ಖುದ್ದಾಗಿ ನೋಡಿದ ಎರಡು ಸಂದರ್ಭಗಳನ್ನು ಈಗ ಜ್ಞಾಪಿಸಿಕೊಂಡರೆ ನಗು ಬರುತ್ತದೆ. ಅವರಿಗಿಂತ ಹತ್ತು ಹದಿನೈದು ವರ್ಷ ದೊಡ್ಡವನಾದ ನಾನು ಅವರನ್ನು ಕಂಡಮೇಲೂ, ನನಗೆ ಹತ್ತಿರ ಬಂದವರು ಎಂದು ತಿಳಿದಿದ್ದ ಅವರನ್ನು ನಾನಾಗಿ ಏಕೆ ಮಾತಾಡಿಸಿ ಪರಿಚಯ ಮಾಡಿಕೊಳ್ಳಲಿಲ್ಲ ಎಂದು ಈಗ ಆಶ್ಚರ್ಯವಾಗುತ್ತಿದೆ. ಬಹುಶಃ ಸಂದರ್ಭದ ಮಹಿಮೆಯ ಪ್ರಭಾವ ಇರಬೇಕು. ಎರಡು ಸಂದರ್ಭಗಳಲ್ಲಿಯೂ ಪ್ರಾಧ್ಯಾಪಕ ಹುದ್ದೆಗಳಿಗೆ ಇತರರೊಂದಿಗೆ ನಾವಿಬ್ಬರೂ ಅಭ್ಯರ್ಥಿಗಳು. ಇತರ ಕೆಲವು ಅಭ್ಯರ್ಥಿಗಳೊಂದಿಗೆ ನನಗಿದ್ದ ಬಹುಕಾಲದ ಸ್ನೇಹಸಂಬಂಧದ ಪರಿಣಾಮವಾಗಿ ನಾನು ಅವರೊಡನೆ ಸಲಿಗೆಯಿಂದಲೆ ಮಾತುಕತೆಯಾಡುತ್ತಿದ್ದಾಗ, ಬಲವಾದ ಒಬ್ಬ ಅಭ್ಯರ್ಥಿಗೆ ನಾವಿಬ್ಬರೇ ಬಲವಾದ ಸ್ಪರ್ಧಿಗಳು ಎಂಬ ಕಿವಿಮಾತು ಹಾರಾಡುತ್ತಿತ್ತು. ಬಹುಶಃ ಈ ಸಂದರ್ಭ ನನ್ನ ಅರಿವಿಲ್ಲದೆಯೇ ನನ್ನಲ್ಲಿ ಅಸೂಯಾಪ್ರವೃತ್ತಿಯನ್ನು ಬಿತ್ತಿತ್ತೋ ಏನೋ! ತಾತ್ಕಾಲಿಕವಾಗಿ ಮಂಜಾಗಿದ್ದ ನನ್ನ ದೃಷ್ಟಿಗೆ ಶಿವರುದ್ರಪ್ಪನವರು ಸ್ವಲ್ಪ 'ಬಿಗುವು' ಎಂದು ಕಂಡಿತ್ತು. ಮೊದಲ ಸಲದ ಅಭ್ಯರ್ಥನದಲ್ಲಿ ಇಬ್ಬರೂ ಸೋತಿದ್ದೆವು; ಎರಡನೆಯ ಸಲ ಗೆಲವು ಅವರದ್ದಾಗಿತ್ತು. ವಾಸ್ತವವಾಗಿ, ನೇಮಕಗೊಳ್ಳುವ ಕನಸೂ ಇರಲಿಲ್ಲ ನನಗೆ. ನನ್ನ 'ಪ್ರತಿಷ್ಠೆ'ಯನ್ನು ಕಾಯ್ದುಕೊಳ್ಳುವುದಕ್ಕಾಗಿ ಎಸಗಿದ್ದ ಅವಿವೇಕ ಅದು. ಕಿರಿಯರೊಂದಿಗೆ ನಾನು ಸ್ಪರ್ಧಿಸಬಾರದಾಗಿತ್ತು. ಹೋಗಲಿ, ಮುಂದೆ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಶ್ರೀ.ರಂ.ಶ್ರೀ. ಮುಗಳಿಯವರು ಕನ್ನಡ ವಿಭಾಗದ ಮುಖ್ಯರಾಗಿದ್ದ ಕಾಲದಲ್ಲಿ ಶಿವರುದ್ರಪ್ಪನವರು ರೀಡರಾಗಿ, ನಾನು ಯು ಜಿ.ಸಿ ಸಂಶೋಧನ-ಪ್ರಾಧ್ಯಾಪಕನಾಗಿ ಒಟ್ಟಿಗೆ ಸೇರಿದಾಗ, ಹಿಂದೆ ಏನೂ ನಡೆಯಲೇ ಇಲ್ಲವೇನೋ ಎಂಬಂತೆ ಸಂತೋಷದಿಂದ ಕಲೆತು ಕೆಲಸಮಾಡತೊಡಗಿದೆವು. ಮುಗಳಿಯವರು ನಿವೃತ್ತರಾದಮೇಲೆ ಶಿವರುದ್ರಪ್ಪನವರೇ ಕನ್ನಡ ವಿಭಾಗದ ಮುಖ್ಯರಾದರು; ಪ್ರಾಧ್ಯಾಪಕರಾದರು. ನಾನು ನಿವೃತ್ತನಾಗುವವರೆಗೆ ಎರಡು ಮೂರು ವರ್ಷಕಾಲ ಅವರು ನನ್ನನ್ನು ಗೌರವ ವಿಶ್ವಾಸಗಳಿಂದ ನಡೆಸಿಕೊಂಡ ರೀತಿಯನ್ನು ಬಲ್ಲೆನೇ ಹೊರತು ಬಣ್ಣಿಸಲಾರೆ.

ಶಿವರುದ್ರಪ್ಪನವರು ನನ್ನಲ್ಲಿ ಇಟ್ಟಿರುವ ಗೌರವ, ವಿಶ್ವಾಸ, ನಿರ್ವ್ಯಾಜವಾದವು; ಪ್ರತಿಫಲ ನಿರಪೇಕ್ಷವಾದವು. ಅವರಿಗೆ ಕೊಡುವುದಕ್ಕೆ ತಾನೆ ಏನಿದೆ ನನ್ನಲ್ಲಿ? ಅಧಿಕಾರ, ಸ್ಥಾನಮಾನ, ಯಾವುದೂ ಇಲ್ಲ. ಮೇಲುನೋಟಕ್ಕೆ ಅಲ್ಪವೆಂದು ಕಾಣಬಹುದಾದ ಒಂದು ಪ್ರಸಂಗ ಅವರು ನನ್ನ ವಿಷಯದಲ್ಲಿ ತಳೆದಿರುವ ಅನಲ್ಪವಾದ ಗೌರವಭಾವಕ್ಕೆ ಮಾಪನಸೂಚಿಯಂತಿದೆ: ನನ್ನ ಒಂದು ಹೊಸ ಪುಸ್ತಕದ ಪ್ರತಿಯನ್ನು ಅವರಿಗೆ ವಿಶ್ವಾಸದ ಗುರುತಾಗಿ ಕೊಟ್ಟೆ. ಪ್ರತಿಯ ಮೊದಲ ತೆರವು ಪುಟದಲ್ಲಿ 'ವಿಶ್ವಾಸಪೂರ್ವಕ ನಮಸ್ಕಾರಗಳೊಡನೆ' ಎಂದು ಬರೆದು, ನನ್ನ ಸಹಿ ಹಾಕಿ ಕೊಟ್ಟೆ. ಅವರು ತುಂಬ ಕಸಿವಿಸಿಗೊಂಡು, 'ನಮಸ್ಕಾರಗಳೊಡನೆ ಎನ್ನುವುದನ್ನು ಹೊಡೆದು ಹಾಕಿಕೊಡಿ' ಎಂದು ಸೂಚಿಸಿದರು. ಅವರ ಮನಸ್ಸು ನನಗೆ ಅರ್ಥವಾಯಿತು. ನಾನು ಎಷ್ಟು ಸಮಾಧಾನ ಕೊಟ್ಟರೂ ಅವರಿಗೆ ತೃಪ್ತಿಯಾಗಲಿಲ್ಲ. ನನ್ನ ಕೈಯಿಂದಲೆ ಹೊಡೆದು ಹಾಕಿಕೊಟ್ಟಲ್ಲದೆ, ಗ್ರಂಥಪ್ರತಿಯನ್ನು ಸ್ವೀಕರಿಸುವುದಿಲ್ಲವೆಂದು ಹಟತೊಟ್ಟರು. ಅವರ ಗೌರವಭಾವಕ್ಕೆ ನಾನು ಗೌರವ ತೋರಿಸದೆ ವಿಧಿಯಿರಲಿಲ್ಲ. ಅವರ ಮನಸ್ಸಿನಿಂದ ಬಂದ ಮಾತಿನಂತೆಯೇ ನಡೆದುಕೊಂಡೆ.

ಬರಹದಲ್ಲೂ ಬದುಕಿನಲ್ಲೂ ಅವರದ್ದು ಸೌಂದರ್ಯನಿಷ್ಠವಾದ 'ಸಮನ್ವಯ' ದೃಷ್ಟಿ ಎಂಬುದನ್ನು ಅವರ ಬರಹಗಳನ್ನು ಓದಿ ಅವರ ನಡವಳಿಯನ್ನು ನಿರೀಕ್ಷಿಸಿ, ನಾನು ಕಂಡುಕೊಂಡಿದ್ದೇನೆ. ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಕೇಂದ್ರದ ಸಮಸ್ತ ಕಾರ್ಯಕಲಾಪಗಳಲ್ಲೂ ಅವರ ಸಮನ್ವಯ ದೃಷ್ಟಿ ಪ್ರಗತಿಪರವೂ ಕನ್ನಡ ಭಾಷೆ ಸಾಹಿತ್ಯಗಳ ಹಿತಸಾಧನೆಗೆ ಸಹಾಯಕವೂ ಆದ ರೀತಿಯಲ್ಲಿ ವರ್ಚಸ್ಸನ್ನು ಬೀರುತ್ತಿದೆ. ಕರ್ನಾಟಕದ ಹೃದಯಸ್ಥಾನದಲ್ಲಿರುವ ಬೆಂಗಳೂರು ನಗರದಲ್ಲಿ ಕನ್ನಡದ ಸ್ಥಾನಮಾನ ಬಹಳವಾಗಿ ಬಲಗೊಳ್ಳಬೇಕಾಗಿದೆ. ಇದನ್ನು ಸಾಧಿಸುವಲ್ಲಿ ಕನ್ನಡ ಸಾಹಿತ್ಯಪರಿಷತ್ತಿನ ಪಾತ್ರದಷ್ಟೇ ಹಿರಿಯದಾಗಿದೆ ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಕೇಂದ್ರದ ಪಾತ್ರ. ಅದು ಪರಿಣಾಮಕಾರಿಯಾಗುವಂತೆ ಕಾರ್ಯ ನಿರ್ವಹಿಸಲು ಶಿವರುದ್ರಪ್ಪನವರಿಗೆ ಯಥೋಚಿತವಾಗಿ ಇನ್ನೂ ಮೇಲಿನ ಪದವಿ–ಹೆಚ್ಚಿನ ಅಧಿಕಾರ ಅನುಕೂಲತೆಗಳು ಲಭಿಸಲಿ, ನೂರುಕಾಲ ಕನ್ನಡದ ಸೇವೆಗೆ ಅವರ ಬದುಕು–ಬರಹ ಸಮರ್ಪಿತವಾಗುವಂತೆ ಪರಮಾತ್ಮನು ಅನುಗ್ರಹಿಸಲಿ–ಎಂದು, ಅವರಿಗೆ ಐವತ್ತು ವರ್ಷ ತುಂಬಲಿರುವ ಈ ಸಂತೋಷದ ಸಂದರ್ಭದಲ್ಲಿ, ಹಾರೈಸುತ್ತೇನೆ.

## ವಿ. ಎಂ. ಇನಾಂದಾರ್

# ಸಹೃದಯ

ಡಾಕ್ಟರ್ ಶಿವರುದ್ರಪ್ಪನವರ ಪ್ರತ್ಯಕ್ಷ ಸಂಪರ್ಕ ಹಾಗೂ ಅವರ ಸೌಹಾರ್ದಮಯವಾದ ಸ್ನೇಹ ನನ್ನ ಪಾಲಿಗೆ ಬಂದು ಕೆಲವು ವರ್ಷಗಳೇ ಸಂದಿವೆ. ಆದರೆ ಅವರ ಮೊದಲ ಪರಿಚಯ ನನಗಾದದ್ದು ಇನ್ನೂ ಹಿಂದೆ. ಅದು ಅಪ್ರತ್ಯಕ್ಷವಾಗಿ, ಸುಮಾರು ಇಪ್ಪತ್ತು ವರ್ಷಗಳ ಹಿಂದೆ. ೧೯೫೫ರ ಮೇ ತಿಂಗಳಲ್ಲಿ ಮೈಸೂರಿಗೆ ಬಂದಾಗ ನಮ್ಮಿಬ್ಬರಿಗೂ ಬೇಕಾದ ಸ್ನೇಹಿತರೂ ಶಾರದಾಮಂದಿರದ ಒಡೆಯರೂ ಆದ ಪ್ರೊ. ಎಚ್. ಎಂ. ಶಂಕರನಾರಾಯಣರಾಯರು ತಾವು ಅದೇ ಪ್ರಕಟಿಸಿದ ಕವನ ಸಂಗ್ರಹದ ಒಂದು ಪ್ರತಿಯನ್ನು ಪ್ರೀತಿಯಿಂದ ಕೊಟ್ಟು ಅದನ್ನು ಓದಲೇಬೇಕೆಂದು ಒತ್ತಾಯಿಸಿದರು. ಪದ್ಯವನ್ನು ನಾನು ಓದುವುದಿಲ್ಲ ಎಂದು ಹೇಳಲಾಗದಿದ್ದರೂ ಸಾಮಾನ್ಯವಾಗಿ ಗದ್ಯಸಾಹಿತ್ಯದಲ್ಲಿಯೇ ಹೆಚ್ಚಿನ ಒಲವು, ಆಸಕ್ತಿಗಳನ್ನು ಬೆಳೆಯಿಸಿಕೊಂಡವನಾದ್ದರಿಂದ ಕೈಗೆ ಬಂದ ಪುಸ್ತಕದ ವಿಷಯದಲ್ಲಿ ಹೆಚ್ಚಿನ ಭರವಸೆಯನ್ನು ತಾಳಿರಲಿಲ್ಲ. ಆದರೆ ಮನೆಗೆ ಬಂದು ಮೊದಲು ಮುನ್ನುಡಿಯಲ್ಲಿಯ ಮಾತುಗಳನ್ನು ಆಮೇಲೆ ಅವನ್ನು ಪ್ರತ್ಯಂಶದಲ್ಲಿಯೂ ಸಮರ್ಥಿಸಬಲ್ಲ ಕವನಗಳನ್ನು ಓದಿದಾಗ ಅವೆಲ್ಲವನ್ನು ಮತ್ತೆ ಓದಬೇಕೆನಿಸಿತು. ಒಮ್ಮೆ ಓದಿದ್ದನ್ನು ಮತ್ತೊಮ್ಮೆ ಓದಬೇಕೆನಿಸಿದಾಗ ಆ ಬರವಣಿಗೆಯಲ್ಲಿ ಮೊದಲ ನೋಟಕ್ಕೆ ಗೋಚರಿಸದ ಯಾವುದೋ ಒಂದು ಗುಣ, ಪೂರ್ತಿಯಾಗಿ ತತ್‌ಕ್ಷಣ ಬಿಡಿಸಿ ಹೇಳಲಾಗದ ಯಾವುದೋ ಒಂದು ಆಕರ್ಷಣೆ, ಬೆರಳಿಟ್ಟು ಹೇಳಲಾಗದಿದ್ದರೂ ಆ ಬರವಣಿಗೆಯ ಹಿಂದೆ ದುಡಿದ, ನುಡಿಯುವ ಮನಸ್ಸಿನ ಬಗೆಯ ವಿಶಿಷ್ಟವಾದ ಮಿಡಿತ, ಸಾಹಿತ್ಯದಲ್ಲಿ ಆಸಕ್ತಿಯುಳ್ಳವರ ಕುತೂಹಲವನ್ನು ಕೆರಳಿಸುತ್ತವೆ. ಅಂದು ನನ್ನ ಕೈಗೆ ಬಂದು ಆ ರೀತಿ ಕುತೂಹಲವನ್ನು ಕೆರಳಿಸಿದ ಪುಸ್ತಕವೆಂದರೆ ಡಾಕ್ಟರ್ ಶಿವರುದ್ರಪ್ಪನವರ "ದೇವಶಿಲ್ಪ." ಅದೇ ನನ್ನ ಅವರ ಮೊದಲ ಪರಿಚಯ. ಒಂದು ಸಾಹಿತ್ಯಕೃತಿಯ ಮೂಲಕ ಸಂಘಟಿಸಿದ ಸಂಪರ್ಕವೇ ಮುಂದೆ ಅನ್ಯೋನ್ಯ ಸ್ನೇಹಾರ್ದಭಾವನೆಗಳಿಗೆ ಅವಕಾಶವನ್ನು ಒದಗಿಸಿತು. ಒಂದು ದೃಷ್ಟಿಯಿಂದ ಈ ರೀತಿಯ ಸಂಪರ್ಕ ಪರಿಚಯಗಳು ನಮ್ಮಿಬ್ಬರ ಬಗೆಯಲ್ಲಿ ಅರ್ಥಪೂರ್ಣವೆಂದೆನಿಸಿದೆ ನನಗೆ. ಅಂದಿನಿಂದ ಇಂದಿನವರೆಗೆ, ಅವರ ಪ್ರತ್ಯಕ್ಷ ಪರಿಚಯವಾದನಂತರವೂ, ಅವರ ವಿಶಿಷ್ಟವಾದ ಸೌಹಾರ್ದಮಯವಾದ ಸ್ನೇಹಶೀಲತೆಯನ್ನು ಅನುಭವಿಸಿದ ಮೇಲೆಯೂ, ನನ್ನ ಅವರ ಸಂಬಂಧ ಸಾಹಿತ್ಯದ ಅನುಭವ ಮತ್ತು

ವಿಮರ್ಶೆಯ ಅನ್ವೇಷಣೆ ಈ ಎರಡಕ್ಕೆ ಸಂಬಂಧಿಸಿದಂತೆ ಪರಿಮಿತವಾಗಿದೆ. ಒಂದು ದೃಷ್ಟಿಯಿಂದ ನಮ್ಮಿಬ್ಬರದು ಸಾಹಿತ್ಯ ಬಾಂಧವ್ಯ ಎಂದು ಹೇಳಬಹುದು. ಹೆಚ್ಚಿನ ಸಂಪರ್ಕದ ಅವಕಾಶಗಳಿದ್ದಿದ್ದರೆ ವೈಯಕ್ತಿಕವಾಗಿ ಇನ್ನೂ ಹತ್ತಿರವಾಗಬಹುದಿತ್ತು. ಅವರದು ಬಿಗುಮಾನದ ರೀತಿ, ಅವರೊಡನೆ ಸ್ನೇಹ ಸುಲಭಸಾಧ್ಯವಲ್ಲ ಎಂದು ಯಾರು ಬೇಕಾದವರು ಹೇಳಿದರೂ ಅದನ್ನು ಅಲ್ಲಗಳೆಯಬಲ್ಲ ಸ್ನೇಹಶೀಲತೆಯನ್ನು ನಾನು ಅವರಲ್ಲಿ ಕಂಡಿದ್ದೇನೆ. ಕೆಲಮಟ್ಟಿಗೆ ಅನುಭವಿಸಿಯೂ ಇದ್ದೇನೆ.

ಏಳು ವರ್ಷಗಳ ಹಿಂದೆ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ನಾನು ಇಂಗ್ಲಿಷ್ ವಿಭಾಗದಲ್ಲಿ ಯು.ಜಿ.ಸಿ. ಪ್ರಾಧ್ಯಾಪಕನಾಗಿ ಕೆಲಸಮಾಡುತ್ತಿದ್ದ ಎರಡು ವರ್ಷಗಳ ಕಾಲಾವಧಿಯಲ್ಲಿ ಅವರೊಡನೆಯ ನನ್ನ ಪರಿಚಯ ನಿಕಟವಾಯಿತು. ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದ ಹಾಗೆ ಅನೇಕ ವಿಷಯಗಳನ್ನು ಕುರಿತು ಆಗೀಗ ಮಾತನಾಡುವ, ಚರ್ಚಿಸುವ, ಅವಕಾಶ ನನ್ನದಾಗಿತ್ತು, ಅಂಥ ಸಂದರ್ಭಗಳಲ್ಲಿ ಅವರಲ್ಲಿ ನಾನು ಮುಖ್ಯವಾಗಿ ಗುರುತಿಸಿದ್ದು ಸಾಹಿತ್ಯದ ವಿಷಯದಲ್ಲಿ ಅವರಲ್ಲಿಯ ಆಳವಾದ ಆಸಕ್ತಿ, ಅದರ ಶಕ್ತಿ ಸಾಮರ್ಥ್ಯಗಳನ್ನು ವಿಶ್ಲೇಷಿಸಿ ಅರ್ಥವಾಗಿಸಿಕೊಳ್ಳಬೇಕೆಂಬ ವಿಮರ್ಶಾಬುದ್ಧಿಯ ನಿತ್ಯ ಕುತೂಹಲ; ಈ ಎರಡಕ್ಕೂ ಆಧಾರವಾಗಿದ್ದ ಸಂವೇದನೆಯ ಸಾಮರ್ಥ್ಯ ಹಾಗೂ ಸೂಕ್ಷ್ಮಗ್ರಾಹಿಯಾದ ತೆರೆದ ಮನಸ್ಸಿನ ಉದಾರವಾದ ಧೋರಣೆಗಳು. ಇವೆಲ್ಲದರ ಫಲವಾಗಿ ಸಾಹಿತ್ಯದಲ್ಲಿ ಹಿರಿದಾದದ್ದನ್ನು—ಅದು ಯಾವ ಭಾಷೆಯಲ್ಲಿಯದೇ ಇರಲಿ—ಗುರುತಿಸುವ, ಅಪೇಕ್ಷಿಸುವ ಒಲವು ಒಂದು ಕಡೆಯಿಂದಾದರೆ ಅದರ ಸೂಕ್ಷ್ಮವನ್ನು ತಿಳಿಯಬೇಕೆಂಬ ಮನಸ್ಸಿನ ತುಡಿತ ಇನ್ನೊಂದು ಕಡೆಯಿಂದ ಬಂದು ಸೇರಿ ನಿರ್ಮಾಣಶೀಲವೂ ಆಗಿ ವಿಮರ್ಶೆಯ ವಿಚಕ್ಷಣೆಯನ್ನು ಪಡೆದ ಅಂತರಂಗದಲ್ಲಿ ಈ ಇಬ್ಬಗೆಯ ಮನೋವ್ಯಾಪಾರಗಳು ಏಕಕಾಲಕ್ಕೆ ನಡೆಯುತ್ತಿರುವುದನ್ನು ಕಂಡು ತಿಳಿಯುವುದು ಸಾಧ್ಯವಾಯಿತು. ಸಹೃದಯತೆ ಇಲ್ಲದೆ ಮನಸ್ಸಿನ ಈ ಎರಡು ಬಗೆಗಳೂ ಫಲಕಾರಿಯಾಗಿ ಕೆಲಸಮಾಡಲಾರವು. ಈ ಎರಡು ಬಗೆಗಳಲ್ಲಿಯೂ ಡಾ|| ಶಿವರುದ್ರಪ್ಪನವರ ಸಾಹಿತ್ಯಾಸಕ್ತಿ ಫಲಪ್ರದವಾಗಿ, ಗಮನಾರ್ಹವಾಗಿ ಕೆಲಸಮಾಡಿದೆ ಎನ್ನುವುದನ್ನು ಅವರ ಕವನ ಸಂಗ್ರಹಗಳು ಹಾಗೂ ವಿಮರ್ಶೆಯ ಕ್ಷೇತ್ರದಲ್ಲಿಯ ವಿಪುಲ ಬರಹಗಳು ತೋರಿಸಿಕೊಟ್ಟಿವೆ. ಅವರ ಮನಸ್ಸಿನ ಸ್ನೇಹಾರ್ದಕ್ಕೆ ಸಾಕ್ಷಿಯಾಗಿ ನಿಂತಿವೆ. ಇಷ್ಟೊಂದು ಹೃದಯವಂತಿಕೆಯನ್ನುಳ್ಳ ಒಂದು ಚೇತನ ತನ್ನ ಸಾಮಾಜಿಕ ಸಂಪರ್ಕಗಳಲ್ಲಿ ಸ್ನೇಹಮಯಿಯಾಗಿರದಿದ್ದರೆ ಅದೊಂದು ಆಶ್ಚರ್ಯಪಡಬೇಕಾದ ಸಂಗತಿಯಾದೀತು.

"ದೇವಶಿಲ್ಪ"ಕ್ಕೆ ಮೊದಲೇ "ಸಾಮಗಾನ"ವನ್ನು ಹಾಡಿದವರು. ಸಂಜೆದಾರಿಯ ಚೆಲುವುಒಲವುಗಳ ಅನುಭವವನ್ನು ಕಾವ್ಯವನ್ನಾಗಿಸಿದ ಡಾಕ್ಟರ್ ಶಿವರುದ್ರಪ್ಪನವರು ಕಾರ್ತೀಕದ ದೀಪದ ಹೆಜ್ಜೆಗಳಿಂದ ತೆರೆದ ದಾರಿಯನ್ನು ಮುಂದೆ ಮಾತ್ರ ಅನಾವರಣಗೊಳಿಸಿದ್ದಾರೆ. ಅವರು ಪ್ರಕಟಿಸಿದ ಕವನ ಸಂಗ್ರಹಗಳನ್ನು ವಿಮರ್ಶಿಸುವುದು ಇಲ್ಲಿ ಅಪ್ರಸ್ತುತ. ಆದರೆ ಒಂದು ಮಾತನ್ನು ಹೇಳಬೇಕು. ಬೆಳೆಯುತ್ತಿರುವ ಒಂದು ಮನಸ್ಸ

ಸಹಜವಾಗಿ, ಅನಿವಾರ್ಯವಾಗಿ, ಭಾವನೆಗಳ ಆಳವಿಸ್ತಾರಗಳನ್ನು ಅಭಿವ್ಯಕ್ತಿಯ ರೀತಿ ವೈವಿಧ್ಯವನ್ನೂ ಹೇಗೆ ಸಾಧಿಸಿಕೊಳ್ಳುತ್ತದೆ ಎನ್ನುವುದಕ್ಕೆ ಅವರ ಕವನಗಳು ಕಾಲಾನು ಕ್ರಮದಲ್ಲಿ ಬಿಟ್ಟ ಹೆಜ್ಜೆ ಗುರುತುಗಳು ಒಳ್ಳೆಯ ನಿದರ್ಶನಗಳಾಗಬಲ್ಲವು. ಸಾಂಪ್ರದಾಯಿಕ ವಾದ ವಿಷಯ ರೀತಿಗಳೆರಡರಿಂದಲೂ ಅವರ ಕವಿಹೃದಯ ನಿಧಾನವಾಗಿ ಬೇರೆ ಕಡೆಗಳಿಗೆ ಹಾತೊರೆಯುತ್ತಿರುವುದನ್ನು "ದೇವಶಿಲ್ಪ"ದಲ್ಲಿಯೇ ಕಾಣಬಹುದು. ಇಂದು ಹೊಸ ಕಾವ್ಯಮಾರ್ಗವನ್ನು ಅನುಸರಿಸಿ ಬರೆಯುತ್ತಿರುವ ಕವಿಗಳಲ್ಲಿ ಶಿವರುದ್ರಪ್ಪನವರಿಗೆ ಒಂದು ಹಿರಿಯ ಸ್ಥಾನವಿದೆ. ಆದರೆ ಅವರು ಹೊಸ ಮಾರ್ಗವನ್ನು ಹೊಸದು ಎಂಬುದಕ್ಕಾಗಿ ಅಂಗೀಕರಿಸಿದವರಲ್ಲ. ನವ್ಯತೆಯ ಆಕರ್ಷಣೆಗಾಗಿಯಾಗಲಿ, ಸಂಪ್ರದಾಯವನ್ನು ವಿರೋಧಿಸುವುದರಿಂದ ಸಾಧಿಸಬಹುದಾದ ಸುಲಭದ ಜನಪ್ರಿಯತೆಗಾಗಿಯಾಗಲಿ ಅದನ್ನು ಅವರು ಒಪ್ಪಿದವರಲ್ಲ. ಭಾವಕ್ಕೆ ತಕ್ಕಹಾಗೆ ಭಾಷೆ ತನ್ನ ರೂಪವನ್ನು ಮತ್ತು ನಡಿಗೆಯ ಗತಿಯನ್ನು ನಿರ್ಧರಿಸಿಕೊಂಡಾಗ, ಅಥವಾ ಹೇಳಬೇಕೆಂದದ್ದು ಹಾಗೆ ತಾನಾಗಿಯೇ ಮಾತಿನಲ್ಲಿ ಹೊಮ್ಮಿದಾಗ ನವ್ಯತೆ ನೈಜವಾಗುತ್ತದೆ. ಶಿವರುದ್ರಪ್ಪನವರ ಕಾವ್ಯದಲ್ಲಿಯ ನವ್ಯತೆ ಈ ಬಗೆಯದು ಎಂದು ನನಗೆನಿಸಿದೆ. ಹಿಂದಿನದರ ಸಂಬಂಧವನ್ನು ಬಲಾತ್ಕಾರ ವಾಗಿ ಅವರು ಕಿತ್ತೊಗೆದವರಲ್ಲ. ಹಿಂದಿನದೆಲ್ಲವೂ ಅರ್ಥಹೀನವೆಂದು ಬಗೆದವರಂತೂ ಅವರು ಅಲ್ಲವೇ ಅಲ್ಲ. ಹೀಗಾಗಿ ಅವರ ಕಾವ್ಯಪ್ರಜ್ಞೆ, ಸಂಪ್ರದಾಯದಿಂದ ಪಡೆದು ಉಳಿಸಿಕೊಳ್ಳಬೇಕಾದ ಸಾರವನ್ನು ಉಳಿಸಿ ನೈಗೂಡಿಸಿಕೊಂಡು ಹೊಸ ಕಾಲದ ಅನು ಭವವನ್ನು ಎದುರಿಸುತ್ತದೆ. ಹಾಗೆಂದೇ ಕಾವ್ಯದ ಅನುಭವ ಶಕ್ತಿಯುತವಾಗಿ ಬೆಳೆದು ರೂಪ ವೈವಿಧ್ಯವನ್ನು ಪಡೆಯುವುದು ಸಾಧ್ಯವಾಗುತ್ತದೆ. ಇಲ್ಲಿ ಕೆಲಸ ಮಾಡುತ್ತಿರು ವುದು ಒಂದು ಹಿತಮಿತಗಳನ್ನರಿತ ಮನಸ್ಸು; ಯಾವ ಸಂದರ್ಭದಲ್ಲಿಯೂ ತನ್ನ ತೂಕವನ್ನು ಕಳೆದುಕೊಳ್ಳದೆ, ಯಾವುದರಲ್ಲಿಯೂ ಅತಿರೇಕಗಳಿಗೆ ಎಡೆಕೊಡದೆ ದುಡಿಯು ವಂಥದು ಎಂಬ ಮನವರಿಕೆಯನ್ನು ಅವರ ಕಾವ್ಯ ತಂದುಕೊಡುತ್ತದೆ.

ಅದೇ ಸಮತೂಕ, ಅತಿರೇಕವಿದೂರವಾದ ಮನಸ್ಸಿನ ಬಗೆ ವಿಸ್ತಾರವಾದ ವ್ಯಾಸಂಗ ಪರಿಶ್ರಮಗಳೊಡನೆ ಸೇರಿಕೊಂಡು ಅವರ ವಿಮರ್ಶಾತ್ಮಕ ಬರಹವನ್ನು ಶ್ರೀಮಂತ ವಾಗಿಸಿದೆ. ಡಾಕ್ಟರ್ ಶಿವರುದ್ರಪ್ಪನವರು ಕವಿಗಳಾಗಿದ್ದಷ್ಟು ವಿಮರ್ಶಕರೂ ಆಗಿದ್ದಾರೆ. ಗಾತ್ರದ ದೃಷ್ಟಿಯಿಂದ ಅವರು ಪದ್ಯಕ್ಕಿಂತ ಹೆಚ್ಚಾಗಿ ಗದ್ಯವನ್ನೇ ಬರೆದಿದ್ದಾರೆ. ಆದರೆ ಗದ್ಯಪದ್ಯಗಳನ್ನು ಗಾತ್ರದ ದೃಷ್ಟಿಯಿಂದ ಹೋಲಿಸಿ ನೋಡಲಾಗುವುದಿಲ್ಲ. ಹಾಗೆ ಮಾಡುವುದು ಪದ್ಯಕ್ಕೆ ಅನ್ಯಾಯ. ಅದು ಹೇಗಿದ್ದರೂ, ನಿರ್ಮಿತ ಹಾಗೂ ವಿಮರ್ಶೆಯ ಕ್ಷೇತ್ರದಲ್ಲಿ ಸಮರ್ಥವಾಗಿ ಕೆಲಸಮಾಡಬಲ್ಲ ಇಬ್ಬಗೆಯ ಶಕ್ತಿ ಅವರದಾಗಿದೆ ಎಂಬುದನ್ನು ಮೊದಲಿಗೆಯೆ ಸೂಚಿಸಿದ್ದೇನೆ ಸಾಹಿತ್ಯದ ಸೊಗಸಿನ ಅನುಭವ ಅದು ಸೊಗಸಿನದೆಂಬ ಕಾರಣಕ್ಕೆ ಮಾತ್ರ ಅವರಿಗೆ ಅಪೇಕ್ಷಣೀಯವಾಗಿರದೆ ಅದನ್ನು ವಿಶ್ಲೇಷಿಸಿ ನೋಡಬೇಕು, ಅದರ ಅಂತಸ್ಸತ್ವವನ್ನು ತಿಳಿಯಬೇಕೆಂಬ ಬೌದ್ಧಿಕ ಕುತೂಹಲಕ್ಕಾಗಿಯೂ ಅಪೇಕ್ಷ ಣೀಯವಾಗಿದೆ. ಕವಿಸಹಜವಾದ ಸಹೃದಯತೆಯೊಡನೆ ಬುದ್ಧಿಗಮ್ಯವಾದ ಈ ಕುತೂ

ಹಲವೂ ಒಂದಾಗಿ ಕನ್ನಡ ಸಾಹಿತ್ಯದಲ್ಲಿಯ ರಸಸ್ಥಾನಗಳ ಪರಿಶೀಲನವನ್ನು ನಡೆಸು ವಂತೆ ಮಾಡಿವೆ. ಪಂಪ, ಲಕ್ಷ್ಮೀಶ, ರಾಘವಾಂಕ, ರತ್ನಾಕರವರ್ಣಿ, ದಾಸರು, ವಚನ ಕಾರರು, ಎಂದು ವಿಸ್ತಾರವಾಗಿ ಅವರ ಆಸಕ್ತಿ ಹರಿದಿದೆ. ಆದರೆ ಅವರ ವಿಮರ್ಶೆಯ ದೃಷ್ಟಿ ಸಿದ್ಧಕೃತಿಗಳ ಸೌಂದರ್ಯದರ್ಶನಕ್ಕೆ ಮಾತ್ರ ಪರಿಮಿತವಾಗಿಲ್ಲ. ಕೃತಿವಿಮರ್ಶೆಗೆ ಸರಿಸಮಾನವಾಗಿ ಸಾಹಿತ್ಯದ ಸತ್ವ, ಸ್ವರೂಪ, ಅದರ ಅನುಭೂತಿಯ ವೈಶಿಷ್ಟ್ಯ, ವಿಮರ್ಶೆಯ ರೀತಿ, ವಿಧಾನ, ಅದರ ಹಲವಾರು ಸಮಸ್ಯೆಗಳು ಎಂದು ಸಾಹಿತ್ಯ ಮತ್ತು ಅದರ ವಿಮರ್ಶೆಯ ತಾತ್ವಿಕ ಅನ್ವೇಷಣೆಗೂ ತಮ್ಮ ಗಮನವನ್ನು ಹರಿಸಿದ್ದಾರೆ. ವಿಮರ್ಶೆಯ ಪೂರ್ವಪಶ್ಚಿಮ, ಗತಿಬಿಂಬ ಎಂಬ ಗಮನಾರ್ಹವಾದ ವಿಮರ್ಶಾತ್ಮಕ ಲೇಖನಗಳ ಸಂಗ್ರಹಗಳನ್ನು ಒದಗಿಸಿದ್ದಾರೆ.

ಸೌಂದರ್ಯಾನುಭೂತಿಯ ಬೌದ್ಧಿಕ ವಿಶ್ಲೇಷಣೆ ಅತ್ಯಂತ ತೊಡಕಿನ ವಿಷಯ. ಸೌಂದರ್ಯ ಇರುವುದು ವಸ್ತುವಿಚಾರಗಳಲ್ಲಿಯೋ ಅಥವಾ ಅವನ್ನು ಕಾಣುವ ದೃಷ್ಟಿ ಯಲ್ಲಿಯೋ ; ಯಾವುದು ಸುಂದರ ? ಎಂದು ಮುಂತಾಗಿ ಮೊದಲಿನಿಂದ ಕೊನೆಯವರೆಗೆ ಪ್ರಶ್ನೆಗಳನ್ನೇ ಕೆರಳಿಸುವ ಇಂಥ ಒಂದು ದುರವಗಾಹ್ಯವಾದ ವಿಷಯವನ್ನು ಎತ್ತಿಕೊಂಡು ಡಾ|| ಶಿವರುದ್ರಪ್ಪನವರು ತಮ್ಮ "ಸೌಂದರ್ಯ ಸಮೀಕ್ಷೆ" ಎಂಬ ಬೃಹತ್ ವಿಮರ್ಶಾ ಗ್ರಂಥವನ್ನು ಬರೆದಿದ್ದಾರೆ. (ಮೈಸೂರು ವಿಶ್ವವಿದ್ಯಾನಿಲಯ ಅವರಿಗೆ ಅದಕ್ಕಾಗಿ ಡಾಕ್ಟರೇಟ್ ಪ್ರಶಸ್ತಿಯನ್ನು ಕೊಟ್ಟಿತು ಎನ್ನುವುದು ಅದರ ಮಹತ್ವದ ಒಂದು ಮುಖ). ಆ ಗ್ರಂಥದ ಮೊದಲ ಮಾತಿನಲ್ಲಿ ಅವರೇ ಹೇಳಿರುವಹಾಗೆ "ಕನ್ನಡ ಕವಿಗಳ ಸೌಂದರ್ಯಪ್ರಜ್ಞೆಯ ವಿವಿಧ ಅಭಿವ್ಯಕ್ತಿಗಳೇನು ಎನ್ನುವುದನ್ನು ವಿವೇಚಿಸುವ ಉದ್ದೇಶ ದಿಂದ ಹೊರಟ ನನ್ನನ್ನು ಈ ಸಂಗತಿ, ನಾನು ಅದ್ಯತನಕ್ಕೆ ಸೇರಿದವನಾದುದರಿಂದ ಪಾಶ್ಚಾತ್ಯ ಸೌಂದರ್ಯ ವಿಚಾರದ ಕಡೆಗೆ, ಭಾರತೀಯನಾಗಿರುವುದರಿಂದ ನಮ್ಮ ಕನ್ನಡ ಕವಿಗಳ ಪರಂಪರೆಯಾದ ಇಡೀ ಭಾರತೀಯ ಸೌಂದರ್ಯ ವಿಚಾರಗಳ ಕಡೆಗೆ ಎಳೆದು ಕೊಂಡು ಹೋಯಿತು. ಹೀಗಾಗಿ ಇಲ್ಲಿನ ವಿಚಾರದಲ್ಲಿ ಪೂರ್ವ-ಪಶ್ಚಿಮ, ಪ್ರಾಚೀನ-ನವೀನ ಆಲೋಚನಾಪರಂಪರೆಯನ್ನು ಕಾಣಬಹುದು". ಈ ಮಾತುಗಳು ಅವರ ಬೃಹತ್ ಗ್ರಂಥದಲ್ಲಿ ವಿಶ್ಲೇಷಿಸಲಾದ ವಿಷಯದ ವ್ಯಾಪ್ತಿಯನ್ನು ವಿವರಿಸುವುದಕ್ಕೆಂದು ಹೇಳಿದುವಾದರೂ ಅವು ಡಾಕ್ಟರ್ ಶಿವರುದ್ರಪ್ಪನವರ ಒಟ್ಟು ವಿಮರ್ಶನ ದೃಷ್ಟಿ ಹಾಗೂ ಅವರು ಅನುಸರಿಸುವ ವಿಧಾನಗಳ ಮೇಲೆ ಬೆಳಕನ್ನು ಬೀರುವಂಥವಾಗಿವೆ. ಬರೀ ಪರಂಪರೆಯ ಆಲೋಚನೆಯ ಕ್ರಮಕ್ಕೆ ಕಟ್ಟುಬೀಳದೆ, ಕೇವಲ ಕನ್ನಡಕ್ಕೆ ಮಾತ್ರ ಸೀಮಿತ ವಾಗದೆ, ವಿಷಯವನ್ನು ಸಾಧ್ಯವಿದ್ದಷ್ಟುಗಿನ ಸಮಗ್ರತೆಯಿಂದ ಕಾಣುವುದು ಅವರ ಅನ್ವೇಷಣೆಯ ಒಂದು ವೈಶಿಷ್ಟ್ಯವೆಂದು ಹೇಳಬಹುದಾಗಿದೆ. ಇಂಥ ಸಮಗ್ರದೃಷ್ಟಿಯ ಪರಿಚಯ ಈ ಗ್ರಂಥದಲ್ಲಿಯಲ್ಲದೆ ಅವರು ಬರೆದ ಬೇರೆ ಪ್ರಬಂಧಗಳಲ್ಲಿಯೂ ಸಿಕ್ಕುತ್ತದೆ. ಆದ್ದರಿಂದ ಈ ಮಾತು.

"ಕಾವ್ಯ ಮೂಲತಃ ಸೌಂದರ್ಯಾನುಭವದ ಅಭಿವ್ಯಕ್ತಿ" ಎಂಬ ಅವರ ಮಾತನ್ನು

ಎಲ್ಲ ಕಲಾಪ್ರಕಾರಗಳ ಪ್ರಕ್ರಿಯೆಗೆ ಅನ್ವಯಿಸಬಹುದಾದರೂ ವಿಮರ್ಶೆ ವಿಶ್ಲೇಷಿಸಲೇ ಬೇಕಾದ ಅನುಭೂತಿಯು ಒಂದು ಬಗೆಯನ್ನು ಆ ಮಾತು ಒತ್ತಿ ಹೇಳುತ್ತದೆ. ಅದರ ವೈವಿಧ್ಯದ ವೈಖರಿಗಳನ್ನು, ಅವುಗಳ ಬಗೆಯಲ್ಲಿ ಪಾಶ್ಚಿಮಾತ್ಯರೂ ಹಾಗೂ ನಮ್ಮವರು ನಡೆಸಿದ ಚಿಕಿತ್ಸಕವಾದ ಅನ್ವೇಷಣೆಯನ್ನು ವಿಮರ್ಶೆಯ ಕಾಣ್ಕೆಯನ್ನು ವಿಸ್ತರಿಸುವ ದೃಷ್ಟಿಯಿಂದ ಪರಿಶೀಲಿಸಿದ್ದಾರೆ. ಪರಿಶೀಲನ ಹಾಗೂ ಪೂರ್ವಪಶ್ಚಿಮ ಎಂಬ ಮಾತುಗಳು ಅವರ ವಿಚಾರಸರಣಿಯ ದ್ಯೋತಕವಾಗಿವೆ. ರಸಾನುಭೂತಿಯನ್ನು ಆಳವಾಗಿಸಿ, ಅದನ್ನು ಅರ್ಥವಿಸಿ ಅಳೆದು ನೋಡುವ ಕೆಲಸದಲ್ಲಿ ಉಪಕಾರ ಎಲ್ಲಿಂದ ಬಂದರೂ ಅದು ಅವರಿಗೆ ಸ್ವಾಗತಾರ್ಹವೇ. ಕನ್ನಡದಲ್ಲಿ ಇಲ್ಲದ್ದು ಸಂಸ್ಕೃತದಲ್ಲಿ ಏನಿದೆ ಎಂದು ಹಿಂದೆ ಒಬ್ಬರು ಕೇಳಿದರು. ಕನ್ನಡದಲ್ಲಿ ಇಲ್ಲದ್ದು ಇಂಗ್ಲೀಷಿನಲ್ಲಿ ಮಾತ್ರವೇಕೆ, ಎಲ್ಲಿ ಏನಿದೆ, ಎಂದು ಕೇಳುವವರು ಇಂದೂ ಇದ್ದಾರೆ. ಇಂಥ ಅಭಿಮಾನ ಒಂದು ದೃಷ್ಟಿಯಿಂದ ಅಗತ್ಯವಿರಬಹುದು. ಆದರೂ ಅಭಿಮಾನ ಒಂದು ಪೂರ್ವಗ್ರಹವಾಗಿ ತಿಳುವಳಿಕೆಯ ಕ್ಷೇತ್ರವನ್ನು ಸಂಕುಚಿತಗೊಳಿಸಬಾರದು. ಅಂಥ ಎಚ್ಚರವನ್ನು ಡಾಕ್ಟರ್ ಶಿವರುದ್ರಪ್ಪನವರು ವಹಿಸಿದ್ದಾರೆ. ಇದಕ್ಕೆ ಇತ್ತೀಚಿನ ಒಂದು ನಿದರ್ಶನ ಬೇಕಿದ್ದರೆ ಬೆಂಗಳೂರು ವಿಶ್ವವಿದ್ಯಾಲಯದ ಪತ್ರಿಕೆಯ ಸಂಚಿಕೆಗಳಲ್ಲಿ ಪ್ರಕಟವಾದ ಪ್ರತಿಭೆಯನ್ನು ಕುರಿತಾದ ಅವರ ವಿಸ್ತಾರ ವಿಶ್ಲೇಷಣೆಯನ್ನು ನೋಡಬೇಕು. ಸಾಹಿತ್ಯವಿಮರ್ಶೆ ಆಳವಾಗಿ, ಆರೋಗ್ಯಕರವಾಗಿ ಬೆಳೆಯಬೇಕೆಂಬ ಹಂಬಲ ಅವರದು. ಕವಿಕಾರ್ಯವನ್ನು ಒಳಗಿನಿಂದ ತಿಳಿದು ಅರ್ಥವಿಸಿಕೊಳ್ಳಬಲ್ಲ ಅವರು ಹೊರಗಿನಿಂದ ಪಡೆಯಬಹುದಾದ ವ್ಯಾಸಂಗ ಪರಿಶ್ರಮಗಳ ಸಹಕಾರದಿಂದ ತಮ್ಮ ವಿಮರ್ಶೆಗೆ ಅಧಿಕವಾದ ಅಧಿಕಾರವನ್ನು ತಂದುಕೊಂಡಿದ್ದಾರೆ. ಅವರ ಕಾವ್ಯಕ್ಕೆ ಹೇಗೊ ಹಾಗೆ ಅವರ ವಿಮರ್ಶೆಗೆ ಮೂಲಪ್ರೇರಣೆ–ಪ್ರೇಕ್ಷಣೆಗಳಾಗಿ ನಿಂತ ಅವರ ಸಹೃದಯತೆ ಎರಡು ಕ್ಷೇತ್ರಗಳಲ್ಲಿಯೂ ಇನ್ನೂ ಹೆಚ್ಚಿನದನ್ನು ಸಾಧಿಸುವಂತಾಗಲಿ ಎಂಬ ಹಾರೈಕೆಯೊಂದಿಗೆ ಈ ನಾಲ್ಕು ಮಾತುಗಳನ್ನು ಮುಕ್ತಾಯಗೊಳಿಸುತ್ತೇನೆ.

## ಕೆ. ಬಿ. ಪ್ರಭುಪ್ರಸಾದ

# ಸ್ನೇಹ ಸುಗಂಧ

'ಶಿವರುದ್ರಪ್ಪ ಈಗ ಇಲ್ಲಿಗೇ ಲೆಕ್ಚರರ್ ಆಗಿ ಬಂದಿದ್ದಾರೆ. ನೆನ್ನೆ ಸಿಕ್ಕಿದ್ದರು' ಎಂದು ಗೆ। ಎಸ್ಕೆ ಹೇಳಿದಾಗ, ನೆನಪಿನ ಚಕ್ರವನ್ನು ತಿರುಗಿಸತೊಡಗಿದೆ, 'ಯಾರು ಈ ಶಿವರುದ್ರಪ್ಪ?' ಎಂದು.

ದಾವಣಗೆರೆಯ ಹೊಸ ವಾಟರ್ ಟ್ಯಾಂಕ್ ದಾಟಿ ಕುಂದುವಾಡದ ಕೆರೆಯ ಕಡೆಗೆ ಸಂಜೆ ವಾಯುಸೇವನೆಗೆಂದು ಹೋಗುತ್ತಾ ಇದ್ದೆವು. ವಿಸ್ತಾರವಾದ ಬಯಲು. ಅದಕ್ಕಿಂತ ವಿಸ್ತಾರವಾದ ಆಕಾಶ. ತನ್ನ ವೈಭವವನ್ನೆಲ್ಲ ಮೆರೆದು ಮರೆಯಾಗುತ್ತಿದ್ದ ಸೂರ್ಯ. ತಲೆಯೊಳಗೆ ಸುತ್ತುತ್ತಿದ್ದ ಪ್ರಶ್ನೆಗೆ ಉತ್ತರ ಸಿಕ್ಕದೆ ಬಾಯಿಬಿಟ್ಟು ಕೇಳಿದೆ. "ಇದೇನು? ಇಷ್ಟು ಬೇಗ ಮರೆತುಬಿಟ್ಟೆಯಾ? ಸಿದ್ಧಗಂಗಾಶ್ರಮದಲ್ಲಿ ನನ್ನ ರೂಮ್‌ಮೇಟ್ ಆಗಿರಲಿಲ್ಲವೆ? ಕವಿತೆ ಬರೀತಿದ್ದರು. ನಿನ್ನ ರೂಮಿಗೂ ಬರುತ್ತಿದ್ದರು. ಅವರನ್ನು ಒಮ್ಮೆ ನೋಡಿದರೆ ಎಲ್ಲ ನೆನಪಾಗುತ್ತೆ ಬಿಡು. ನಾಳೆ ಸಂಜೆ ವಾಕಿಂಗಿಗೆ ಜೊತೆಗೆ ಹೋಗೋಣ ಅಂತ ಅವರಿಗೆ ಹೇಳಿದ್ದೀನಿ" ಎಂದು ಹೇಳುತ್ತ ನನ್ನ ನೆನಪಿಗೊಂದು ಮಾಟುಗೋಲು ಕೊಟ್ಟ ಎಸ್ಕೆ.

ಮಸುಕು ಮಸುಕಾಗಿ ಶಿವರುದ್ರಪ್ಪನವರ ಚಿತ್ರ ನೆನಪಿನ ಭಿತ್ತಿಯ ಮೇಲೆ ಮೂಡ ತೊಡಗಿತು. ಆದರೆ ಅದೇ ಅವರು ಎಂದು ನಿಶ್ಚಿತವಾಗಲಿಲ್ಲ.

ಮಾರನೆಯ ಸಂಜೆ ಅವರ ಭೆಟ್ಟಿಯಾಯಿತು. ಅವರು ನನ್ನನ್ನು ಗುರುತು ಹಿಡಿದು ಮುಗುಳು ನಕ್ಕರು. ಮರೆವಿನ ಕತ್ತಲಲ್ಲಿ ದೀಪ ಬೆಳಗಿದಂತೆ. ಯಾವ ಜನ್ಮದ ಮೈತ್ರಿಯೊ ಮತ್ತೆ ಹೊಸದಾಗಿ ಮೊಳಕೆಯೊಡೆದಂತೆ ನನ್ನ ಹೃದಯದಲ್ಲಿ ಪ್ರೀತಿ, ಸ್ನೇಹ ಎಂಬೆರಡು ಎಳೆಯ ದಳಗಳು ಮೈದೆಗೆದು ಅಲುಗಿದುವು. ಹಳೆಯ ನೆನಪಿನ ಸುರುಳಿ ಬಿಚ್ಚಿಕೊಂಡಿತು. ತುಮಕೂರು ಕಾಲೇಜಿನಲ್ಲಿ ಓದುತ್ತಿದ್ದ ಆ ದಿನಗಳು. ಸಿದ್ಧಗಂಗೆಯಲ್ಲಿ ಎಸ್ಕೆ ಅವರ ಪರಿಚಯ ಮಾಡಿಕೊಟ್ಟಾಗ ಅವರು ತಮ್ಮ ಸೈಕಲ್ಲನ್ನು ಒರೆಸುತ್ತ ಕುಳಿತಿದ್ದದ್ದು; ಕಾಲೇಜು ಹಾಸ್ಟೆಲಿನ ನನ್ನ ರೂಮಿಗೆ ಮಧ್ಯಾಹ್ನದ ಬಿಡುವಿನಲ್ಲಿ ಬಂದಾಗ ಬಹುಸಂಕೋಚದಿಂದ ಚಾಪೆಯ ತುದಿಯಲ್ಲಿ ಕೂತುಕೊಳ್ಳುತ್ತಿದ್ದುದು; ಎಸ್ಕೆ ಮುಖಾಂತರ ಅವರ ಕವನಗಳನ್ನು ನನಗೆ ತೋರಿಸಿ—ನಾನು ಮಹಾ ವಿಮರ್ಶಕನ ಧೋರಣೆಯಲ್ಲಿ ಗಂಭೀರವಾಗಿ "ಪರವಾಗಿಲ್ಲ. ರಚನೆ ಸುಲಲಿತವಾಗಿದೆ. ಹೀಗೇ

ಬರೀತಾ ಇದ್ರೆ ಇಂಪ್ರೂವ್ ಆಗುತ್ತೆ. ಆರೋಪಿತ ಪ್ರೌಢತೆ ಹೋಗಿ ಸಹಜತೆ ಬರುತ್ತೆ" ಎಂದುದೂ, ನಾನು ಅವರ ಕವಿತೆಗಳನ್ನು ಮೆಚ್ಚಿಕೊಂಡೆನೆಂದು ಎಸ್ಕೆ ತಿಳಿಸಿದಾಗ ಅವರು ಕೇಳಿ ಬಹಳ ಹಿಗ್ಗಿದುದೂ; ಕುಮಾರ್, ನಮ್ಮ ರಾಜಕುಮಾರ್ ಎಂದು ಎಸ್ಕೆ ಅವರನ್ನು ಪೂಸಿ ಮಾಡಿ ತನ್ನ ಸಣ್ಣ ಪುಟ್ಟ ಸೇವೆ ಮಾಡಿಸಿಕೊಳ್ಳುತ್ತಿದ್ದುದು—ಎಲ್ಲ ಒಂದೊಂದಾಗಿ ಚಿತ್ರ ಮೂಡಿದವು.

ವಾಕಿಂಗ್ ಹೋಗ್ತಾ ಕೇಳಿದೆ, "ಈಗಲೂ ಕವಿತೆ ಬರೀತಾ ಇರ್ತೀರಾ?"

"ಹೌದು" ಎಂದರು.

ಮೈಸೂರಲ್ಲಿ ಓದುತ್ತಿದ್ದಾಗ ಸಂಜೆಯ ತಿರುಗಾಟದಲ್ಲಿ ಮಾತಾಡಿ ಚರ್ಚಿಸಿದ ಗಹನ ವಿಷಯಗಳೆಲ್ಲ ಮಾರನೆ ದಿನ ಅವರ ಕೈಲಿ ಕವನವಾಗುತ್ತಿದ್ದ ವಿಚಾರವನ್ನು ಎಸ್ಕೆ ಅನಂತರ ನನಗೆ ಹೇಳಿ "ಈಗ ಅವರ ಕವಿತೆಗಳನ್ನು ಓದಿ ನೋಡು. ಏನೆನಿಸುತ್ತೆ ಹೇಳು" ಎಂದ. ಅವರು ತಮ್ಮ ಏಳೆಂಟು ಕವನಗಳನ್ನು ಕೊಟ್ಟರು. ಓದಿ ವಿಸ್ಮಿತ ನಾದೆ. ಶ್ರಮವಿಲ್ಲದೆ ಸಹಜವಾಗಿ ಲಲಿತವಾಗಿ ಜೋಡಿಸಿದ ಪದಗಳ ಸಾಲು, ಪ್ರಾಸ ದಿಂಪು. ಅಚ್ಚುಕಟ್ಟಾದ ಶಿಲ್ಪ. ಸುಂದರವಾದ ಮುಕ್ತಾಯ—ತುಮಕೂರಿನಲ್ಲಿ ನಾನು ಓದಿದ ಅವರ ಶಿಶುಗೀತೆಗಳಿಗೂ ಇವಕ್ಕೂ ಅಜಗಜಾಂತರ! ಪ್ರಕೃತಿ ಚಿತ್ರಗಳೇನೋ ಸರಿ—ಕವನಗಳಲ್ಲಿ ವ್ಯಕ್ತವಾದ ಗಹನವಾದ ತತ್ವಚಿಂತನ ಅವರದ್ದಲ್ಲ—ಕೇವಲ ಓದಿಂದ ಅನುಕರಿಸಿ ಬಂದುದಿರಬೇಕು ಎಂಬ ಶಂಕೆ ಮಾತ್ರ ಮೂಡಿತು.

ಈ ಕವನಗಳಲ್ಲಿ ನನಗೆ ತುಂಬ ಪರಿಚಿತವಾದುದೊಂದು ದನಿ, ಶೈಲಿ ಇದೆ ಎಂದೆನಿಸಿತು. ಅದು ನನ್ನ ಸ್ಫೂರ್ತಿಯ ಕೇಂದ್ರ, ಮೆಚ್ಚಿನ ಕವಿ ಕುವೆಂಪು ಅವರದ್ದೆಂದು ತಿಳಿಯಲು (ಕುವೆಂಪು ಕವನಗಳನ್ನು ನಿತ್ಯ ಪಾರಾಯಣದಂತೆ ಓದುತ್ತಿದ್ದ ನನಗೆ) ಬಹಳಕಾಲ ಹಿಡಿಯಲಿಲ್ಲ. ಒಮ್ಮೊಮ್ಮೆ ರೂಪದಲ್ಲಿ ಕುವೆಂಪು ಕವನಗಳ ಅನುಕರಣೆಯೇ ಎಂದೂ ಅನ್ನಿಸುತ್ತಿತ್ತು. ಆದರೂ ಇವು ಬಹು ಸೊಗಸಾದ ಕವನಗಳು. ಕುವೆಂಪು ಅವರ ಗಾಢವಾದ ಪ್ರಭಾವದ ತೆರೆಯೊಳಗೂ ಮಿಂಚುವ ಸ್ವಂತಿಕೆ ಇವುಗಳಲ್ಲಿದೆ. ಇಂತಹ ಕವಿತೆಗಳನ್ನು ಬರೆದ ಕವಿಯ ಭವಿಷ್ಯ ಪ್ರಕಾಶಮಾನವಾಗಿರುವುದು ಎಂದು ಭಾವದೃಷ್ಟಿ ಗ್ರಹಿಸಿದಾಗ ಮೈ ರೋಮಾಂಚಿತವಾಯಿತು. ಬಹು ಸಂಯಮದಿಂದ ಈ ಮಾತನ್ನು ಅವರಿಗೆ ತಿಳಿಸಿದೆ. ಅವರು ಏನೂ ಹೇಳಲಿಲ್ಲ. ಸ್ನೇಹದ ಮತ್ತೊಂದು ಕುಣಿಕೆ ಹಾಕುವಂತೆ ಮೋಹಕವಾಗಿ ನಕ್ಕರು. ಅವರ ಮುಖದಲ್ಲಿ ಪಸರಿಸಿದ ಸಂತೋಷಕ್ಕೆ ಸಂಜೆಯ ಹೊಂಬೆಳಕು ಮೆರುಗು ಕೊಟ್ಟಿತು.

ಅವರ ಇತರ ಕವನಗಳನ್ನೂ ಓದುವ ಅಪೇಕ್ಷೆಯನ್ನು ಸೂಚಿಸಿದೆ. ಕಾವ್ಯಲೋಕ ದಲ್ಲಿ ಇಬ್ಬರೂ ವಿಹರಿಸುವ ಸಂಕಲ್ಪವನ್ನು ಮಾಡಿದೆವು. ಸರಿ.

ಆದರೆ ವಾಸ್ತವ ಲೋಕದ ಒಂದು ಸಮಸ್ಯೆ ಅವರನ್ನು ಕಾಡುತ್ತಿತ್ತು. ಅದನ್ನು ಬಿಡಿಸುವ ಹೊಣೆ ನನ್ನ ಮತ್ತು ಎಸ್ಕೆಯದಾಗಿತ್ತು. ಡಿ.ಆರ್.ಎಂ. ಕಾಲೇಜಿಗೆ ಕನ್ನಡ ಲೆಕ್ಚರರ್ ಆಗಿ ಬಂದ ಶಿವರುದ್ರಪ್ಪ ಕ್ಲಾಸಿಗೆ ಯಾವ ಉಡುಪು ಹಾಕಿಕೊಂಡು ಹೋಗಬೇಕು?

ಇದೇ ಸಮಸ್ಯೆ. ಸೂಟು–ಟೈ ಸಾಮಾನ್ಯವಾಗಿ ಲೆಕ್ಚರರುಗಳ ಅಧಿಕೃತ ಉಡುಪೇ ಆಗಿರುವಾಗ ಇದೆಂತಹ ಸಮಸ್ಯೆ ಎನ್ನಬಹುದು. ನಿಜ. ಬೇರಾರಿಗೂ ಇದೊಂದು ಸಮಸ್ಯೆಯೇ ಅಲ್ಲ. ಕನ್ನಡ ಲೆಕ್ಚರರುಗಳಿಗೆ ಮಾತ್ರ ಈ ತಾಕಲಾಟವಾಗಿತ್ತು. ನಮಗಿದ್ದ ಆದರ್ಶ, ಕಚ್ಚೆಪಂಚೆ, ಕ್ಲೋಜ್ ಕಾಲರ್ ಲಾಂಗ್ ಕೋಟು ಹಾಕುತ್ತಿದ್ದ ಪ್ರೊ. ಪುಟ್ಟಪ್ಪನವರು. ಡಿ.ಎಲ್.ಎನ್., ವಿ.ಸೀ., ವೆಂಕಟರಾಮಪ್ಪ ಮೊದಲಾದ ಪ್ರಾಚಾರ್ಯರೆಲ್ಲ ತಲೆಗೆ ಪೇಟಾ ಸಹ ಹಾಕುತ್ತಿದ್ದರು. ಶ್ರೀ ಪರಮೇಶ್ವರಭಟ್ಟರು ಸೂಟುಧಾರಿಗಳಾಗಿ ಬಂದಾಗ ಅಪ್ರತಿಭರಾಗಿದ್ದೆವು. ಶ್ರೀ. ಜಿ. ಪಿ. ರಾಜರತ್ನಂ ಅವರನ್ನಂತೂ ಬೌದ್ಧಭಿಕ್ಷು ಎಂದೇ ಭಾವಿಸಿದ್ದೆವು. ಎಸ್ಕೆ ಸೂಟು ಹಾಕಲು ಸಲಹೆ ಕೊಟ್ಟ. ಪಂಚೆ ಉಟ್ಟರೇ ಚೆಂದ ಎಂದೆ ನಾನು. ಶಿವರುದ್ರಪ್ಪ ನನ್ನ ಮಾತು ಕೇಳಿ ಗಾಬರಿಯಾದರು. ಕಚ್ಚೆಪಂಚೆ ಉಡುವ ವಿಧಾನವೇ ಅವರಿಗೆ ಗೊತ್ತಿಲ್ಲದಿದ್ದುದು ಒಂದು ಕಾರಣವಾದರೆ—ಅದಕ್ಕಿಂತ ಪ್ರಬಲವಾದ ಕಾರಣ—ಅದನ್ನು ಹೇಗೋ ಕಲಿತು ಉಟ್ಟಾಗ ಆಗಬಹುದಾದ ಅವಾಂತರ. ಉಟ್ಟು ರೂಢಿಯಿಲ್ಲದ ಅವರು ಕ್ಲಾಸಿಗೆ ಹೋಗುವಾಗಲೊ, ಪಾಠ ಮಾಡುವಾಗಲೊ ನಡೆಯುವುದರಲ್ಲಿ ಎಡವಟ್ಟಾದರೆ ? ಅಂಚು ಕಾಲಿಗೆ ತೊಡರಿ ತಾವಾದರೂ ಬೀಳಬಹುದು ಇಲ್ಲವೆ ಪಂಚೆಯಾದರೂ ಬೀಳಬಹುದು. ಅದರ ವಿವರಗಳನ್ನು ಕಲ್ಪಿಸಿಕೊಳ್ಳಲೂ ಅವರಿಗೆ ಭಯ, ನಾಚಿಕೆ. ಹೊಸದಾಗಿ ಬಂದ ಲೆಕ್ಚರರ್ ಇಂಥದೊಂದು ಅವಾಂತರದಲ್ಲಿ ಸಿಕ್ಕು ವಿದ್ಯಾರ್ಥಿ ವಿದ್ಯಾರ್ಥಿನಿಯರ ಮುಂದೆ ನಗೆಪಾಟಲಾಗಿ ಹಾಸ್ಟೆಲಿನ ತಮ್ಮ ರೂಮಿಗೆ, ಸುತ್ತ ಯಾರ ಪರಿವೆಯೂ ಇಲ್ಲದೆ, ಪಂಚೆ ಕವಚಿಕೊಂಡು ಓಡುವ ಚಿತ್ರ ಕಲ್ಪನೆಯಲ್ಲಿ ವಿವರವಾಗಿ ಮೂಡಿ ನನಗೆ ನಗು ತಡೆಯಲಾಗಲಿಲ್ಲ. ಸದ್ಯಕ್ಕೆ ಎಸ್ಕೆಯ ಸಲಹೆಯೇ ಉಚಿತ ಎಂದು ಅನುಮೋದಿಸಿದೆ. ಅನಂತರ ಬಟ್ಟೆ ಅಂಗಡಿಗೂ ಟೇಲರ್ ಅಂಗಡಿಗೂ ಸಂಭ್ರಮದ ಓಡಾಟ. ಬಿಳಿ ಡ್ರಿಲ್ ಪ್ಯಾಂಟು. ವುಲನ್ ಅಡ್ ಕೋಟು. ಟೈ. ಮತ್ತು ಷೂಸ್. ಜಬರ್ಾಗಿ ಡ್ರೆಸ್ ಮಾಡಿಕೊಂಡು ಶಿ. ಕಾಲೇಜಿಗೆ ಹೋಗುವುದನ್ನು ನಾವು ಮಿತ್ರರಿಬ್ಬರೂ ಹೆಮ್ಮೆಯಿಂದ ನೋಡಿದೆವು.

ಮಾರನೆ ದಿನದಿಂದ ಕಚ್ಚೆಪಂಚೆ ಉಡುವ ಬಹು ನಾಜೂಕಾದ ಕಲೆಯನ್ನು ಶಿ. ಗೆ ಹೇಳಿಕೊಡತೊಡಗಿದೆ. ಅದು ಬಹು ತೊಡಕಾದುದೆಂದು ಭಾವಿಸಿದ್ದ ಅವರಿಗೆ ಮೊದಲ ದಿನ ನಾನೆ ಉಡಿಸುತ್ತ ಅದರ ಬಗೆಯನ್ನು ತೋರಿಸಿದಾಗ ಅದೆಷ್ಟು ಸರಳವಾದುದೆಂದು ತಿಳಿಯಿತು. ಆದರೆ ಅದನ್ನು ಉಟ್ಟು ಓಡಾಡುವುದನ್ನು ಅಭ್ಯಾಸ ಮಾಡುವುದೇ ಕಷ್ಟವಾದದ್ದು. ಕಾಲನ್ನು ಅಡ್ಡಾದಿಡ್ಡಿ ಹಾಕುವಂತಾಗುತ್ತೆ. ಎಡಗಾಲ ಹಿಂದುಗಡೆ ಪಾದದಿಂದ ಮೊಣಕಾಲುವರೆಗೆ ಬೆತ್ತಲೆಯಾಗಿರುವಂತೆನಿಸಿ ಹೇಗೆ ಹೇಗೊ ಆಗುತ್ತೆ. ಹೊರಗೆ ಗಾಳಿಗೆ ಪಂಚೆ ಹಾರಿದಾಗ ಎರಡೂ ಕಾಲು ಬರಿದಾಗಿ ಕಾಣುವಾಗ ಪೇಚಾಟ ಬೇಡ ! ಗಳಿಗೆ ಗಳಿಗೆಗೂ ಹಿಂದಿನ ಕಚ್ಚೆ ಬಿಚ್ಚಿ ಉದುರಿದ ಭಾಸವಾಗಿ ಭಯವಾಗುತ್ತೆ. ಈ ಎಲ್ಲ ಫಜೀತಿಗಿಂತ ಪ್ಯಾಂಟೇ ಸರಿ, ಸುಲಭ, ಸರಳ, ಎಂದು ತೀರ್ಮಾನಿಸಿದ ಶಿ. ಎರಡು ದಿವಸಗಳಲ್ಲಿ ಷೂಗಳಲ್ಲಿ ಇರಿಕಿಸಿದ ತಮ್ಮ ಪಾದಗಳಿಗಾದ ಯಮಯಾತನೆಯನ್ನು ಸಹಿಸ

ಲಾರವೆ ಸಂಜೆಯಾದರೂ ಸರಿ ಆ ಷೂ ಬೇಡ ಎಂದು ತವಕಿಸಿದರು. ಒಂದೆರಡು ವಾರಗಳಷ್ಟೆ ಆ ಸೂಟಿನ ಅಲ್ಪಾಯುಷ್ಯ. ಅನಂತರ ಕಚ್ಚೆಪಂಚೆ, ಪಂಜಾಬು ಸ್ಲಿಪರ್ಸ್. ಹೇಗೂ ಫ್ಲನ್ ಕೋಟು ಇದ್ದೇ ಇತ್ತು. ಎರಡು ದಿನಗಳಲ್ಲಿ ಪಂಚೆ ಯಾವ ಅವಾಂತರ ಮಾಡುತ್ತೊ ಎಂದುಕೊಂಡಿದ್ದ ಭಯವೆಲ್ಲ ಹೋಗಿ ನಿರಾತಂಕವಾಯಿತು.

ಆಗ ಶಿ. ತೆಳ್ಳಗೆ ಎತ್ತರವಾಗಿದ್ದರು. ತಮ್ಮ ಕಾಲು ಪ್ರದರ್ಶನ ಯೋಗ್ಯವಲ್ಲವೆಂದುಕೊಂಡರೂ ನಾವೆಲ್ಲ "ನಿಮ್ಮ ಕಚ್ಚೆಪಂಚೆ ಬಹಳ ಚೆನ್ನಾಗಿ ಒಪ್ಪುತ್ತೆ. ತುಂಬಾ ಲಕ್ಷಣವಾಗಿ ಕಾಣ್ತೀರಿ" ಎಂದದ್ದು ಪ್ರೋತ್ಸಾಹಕವಾಗಿ ಅವರು ಅದನ್ನೆ ಮುಂದುವರಿಸಿದರು. ಆರು ತಿಂಗಳ ಅನಂತರ "ನೋಡಿ ಪ್ರಸಾದ್, ಈಗ ಕಚ್ಚೆಪಂಚೆ ಉಡುವುದರಲ್ಲಿ ಎಕ್ಸ್‌ಪರ್ಟ್ ಆಗಿಬಿಟ್ಟಿದ್ದೀನಿ" ಎಂದದ್ದಲ್ಲದೆ ಆ ಕಲೆಯನ್ನು ಕಲಿಸಿದ ಗುರು ಎಂದು ನನ್ನನ್ನು ಮಿತ್ರರೆದುರು ಪ್ರಶಂಸಿಸಿದರು.

ನಿತ್ಯ ಸಂಜೆ ನಿಗದಿಯಾದ ವೇಳೆಗೆ ಅವರು ನನಗಾಗಿ ಕಾಯುವುದು, ನಾನು ಅವರ ರೂಮಿಗೆ ಹೋಗಿ ನಂತರ ಇಬ್ಬರೂ ಊರಾಚೆ ಬಹು ದೂರ ವಾಕ್ ಹೋಗುವುದು. ಸಾಹಿತ್ಯ, ಚಿತ್ರಕಲೆ, ಈಚೆಗೆ ಓದಿದ ಪುಸ್ತಕ ನೋಡಿದ ಸಿನಿಮಾ ಮುಂತಾಗಿ ಹಲವಾರು ವಿಷಯ ವಿಮರ್ಶೆ ಮಾಡುತ್ತ ಹರಟೆ ಹೊಡೆಯುವುದು, ಸಂಧ್ಯೆಯ ಸೊಬಗನ್ನು ನೋಡುತ್ತ ಕೊಂಚಹೊತ್ತು ಕೂತು ತಲ್ಲೀನರಾಗುವುದು—ಇದು ಪರಿಪಾಠವಾಯಿತು. ಒಂದು ದಿನ ತಪ್ಪಿದರೆ ಇಬ್ಬರಿಗೂ ಏನೊ ಕಳೆದುಹೋದಷ್ಟು ಬೇಸರ.

ಅವರ ಇತರ ಅನೇಕ ಕವನಗಳನ್ನೂ ಓದುವ ಅವಕಾಶ ಸಿಕ್ಕಿತು. ಬರೆದ ಕವನಗಳನ್ನೆಲ್ಲ ತಾರೀಖುವಾರು ಜೋಡಿಸಿ ಒಂದೊಂದು ವರ್ಷದ ಕಂತೆಯನ್ನಾಗಿ ಮಾಡಿ ಟ್ಯಾಗ್ ಹಾಕಿ ಇಟ್ಟಿದ್ದರು. ಸಣ್ಣಗೆ ಕೊರೆದಂತೆ, ಬಿಡಿಬಿಡಿಯಾಗಿದ್ದರೂ ಕರೀ ಇರುವೆ ಸಾಲು ಹಿಡಿದಂತೆ ಅವರ ಅಕ್ಷರ. ಒಂದು ಚಿತ್ತು, ಕಾಟು ಇಲ್ಲದೆ ನೀಟಾದ ಬರವಣಿಗೆ. ಕಣ್ಣಿನ ದೃಷ್ಟಿ ಚೆನ್ನಾಗಿರಬೇಕು ಅಷ್ಟೆ. ಬಹುಬೇಗ ಸುಪರಿಚಿತವಾಗುವ ಹಸ್ತಾಕ್ಷರ. ವಾರಕ್ಕೆ ಮೂರು ನಾಲ್ಕು ಕವನಗಳನ್ನು ಬರೆಯುವರು. ಕೆಲವು ವೇಳೆ, 'ಈಗೆರಡು ವಾರದಿಂದ ಏನೂ ಬರೆದೇ ಇಲ್ಲ', ಎನ್ನುವರು. ಬರೆದ ಹೊಸ ಬಿಸಿಯಲ್ಲೇ ನನಗೆ ಓದಿ ಹೇಳುವರು. ಅದು ಹೇಗೆ ಅಷ್ಟು ಲೀಲಾಜಾಲವಾಗಿ ರಚಿಸುತ್ತಾರೆ ಇವರು ಎಂದು ನನಗೆ ಆಶ್ಚರ್ಯ. ನಾವು ನೋಡಿದ, ಮಾತಾಡಿದ ವಿಷಯವೇ ಇರುತ್ತಿತ್ತು. ಕೆಲವು ಸಲ ತೀರ ಸಾಧಾರಣವೆಂಬ ನಮ್ಮ ಮಾತಿನ ವಸ್ತು ಅಸಾಧಾರಣವಾದ ರೀತಿಯಲ್ಲಿ ವ್ಯಕ್ತವಾಗಿರುತ್ತಿತ್ತು. ನವುರಾದ, ಸೂಕ್ಷ್ಮವಾದ ಭಾವಗಳು ಬಹು ಸುಂದರವಾಗಿ ಪಡಿಮೂಡುತ್ತಿದ್ದವು. ಅವುಗಳ ಸಹಜವಾದ ಸಂಗೀತಗುಣ ನನಗೆ ತುಂಬಾ ಇಷ್ಟವಾಗುತ್ತಿತ್ತು.

ನನಗೆ ಪ್ರಿಯರಾಗಿದ್ದ ಸ್ನೇಹಿತರನ್ನೆಲ್ಲ ಶಿ.ಗೂ ಪರಿಚಯ ಮಾಡಿಕೊಟ್ಟೆ. ಸಂಜೆ ನಾನೊಬ್ಬನೇ ಇರಲಿ, ಮಿತ್ರರೊಡನೆ ಇರಲಿ, ಹೊಸ ಟ್ಯಾಂಕಿನಾಚೆ ಹೊಲಗಳು ಏರಿಳಿತಗಳನ್ನು ದಾಟಿ ನನಗೆ ಪ್ರಿಯವಾದ ಒಂದು ಏಕಾಂತ ಸ್ಥಳಕ್ಕೆ ಹೋಗಿ ಕುಳಿತುಕೊಳ್ಳುವುದು ವಾಡಿಕೆಯಾಗಿತ್ತು. ಜನರ ಓಡಾಟದಿಂದ ಕೊಂಚ ಮರೆಯಾಗಿ ಏಕಾಕಿ

ಯಾಗಿ ಇದ್ದ ಒಂದು ದಿಬ್ಬ ಅದು. ಪಶ್ಚಿಮದ ಕಡೆ ಚಾಚಿಕೊಂಡ ಅದರ ತುದಿ ಕೊಂಚ ಎತ್ತರವಾಗಿತ್ತು. ಪೂರ್ವದ ತುದಿಯಲ್ಲಿ ಅದನ್ನು ಹತ್ತಿ ಅಲ್ಲೇ ಒಂದಷ್ಟು ಅಗಲ ಚಪ್ಪಟೆಯಾಗಿದ್ದ ದಿಬ್ಬದ ಮೇಲೆ ಮೊದಲು ಕೂತುಕೊಳ್ಳುತ್ತಿದ್ದೆವು. ಅದು ಮಾತಿನ ದಿಬ್ಬ. ಬೇಕಾದಷ್ಟು ಮಾತಾಡಬಹುದು. ಪಶ್ಚಿಮದ ತುದಿಯ ದಿಬ್ಬ ಮೌನದ ದಿಬ್ಬ. ಅಲ್ಲಿ ಕೂತಗೆ ಮಾತಾಡುವಂತಿಲ್ಲ. ಕೊಂಚಹೊತ್ತು ಮೌನವಾಗಿ ಕೂತು ಅಸ್ತಮಾನದ ವರ್ಣಗಳ ಮೆರವಣಿಗೆಯನ್ನೆ ದಿಟ್ಟಿಸಿ ನೋಡುತ್ತಿದ್ದು ನಂತರ ಧ್ಯಾನ ಮಾಡಿ ಕತ್ತಲಾವರಿಸುವಾಗ ಅಲ್ಲಿಂದೆದ್ದು ಹಿಂತಿರುಗುತ್ತಿದ್ದೆವು. ನನ್ನ ಈ ನಾಮಕರಣವನ್ನೂ ಅನುಸರಿಸಬೇಕಾದ ನಿಯಮವನ್ನೂ ನನ್ನ ಮಿತ್ರರೆಲ್ಲರೂ ಸಂತೋಷದಿಂದ ಒಪ್ಪಿದ್ದರು. ಶಿ.ಗೂ ಈ ಮಾತಿನ ದಿಬ್ಬ, ಮೌನದ ದಿಬ್ಬಗಳ ಪರಿಚಯ ಮಾಡಿದೆ. ಅವರಿಗೆ ತುಂಬಾ ಸಂತೋಷವಾಯಿತು. ಆ ದಿಬ್ಬ ಬಹಳ ಪ್ರಿಯವೂ ಆಯಿತು. ನಾನು ಶಿವಮೊಗ್ಗೆಗೆ ಹೋದ ಮೇಲೂ ಅವರೊಬ್ಬರೆ ಅಲ್ಲಿಗೆ ಹೋಗಿ ಬರುತ್ತಿದ್ದರು. ಅದನ್ನು ಕುರಿತು 'ನಮ್ಮ ದಿಬ್ಬ' ಎಂಬ ಒಂದು ಪ್ರಬಂಧವನ್ನೂ ಬರೆದರು. ಅದು ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟವಾಗಿ ಹಲವು ದೂರದ ಪರಿಚಿತ-ಅಪರಿಚಿತ ಸಾಹಿತ್ಯಪ್ರಿಯರ ಮನಸ್ಸನ್ನೂ ಸೆಳೆಯಿತು. ಕನ್ನಡದ ಸೊಗಸಾದ ಪ್ರಬಂಧಗಳ ಜೊತೆಗೆ ನಿಲ್ಲಬಲ್ಲ ಬರವಣಿಗೆ ಇದು ಎಂದು ನನ್ನ ಅಭಿಪ್ರಾಯ. ಶಿ. ಅವರದು ಮೋಹಕವಾದ, ಕಾವ್ಯಮಯವಾದ, ಗದ್ಯಶೈಲಿ. ಬಹು ಸಹಜವಾಗಿ ಸುಂದರವಾದ ರೂಪಕಗಳಲ್ಲಿ ಪ್ರತಿಮೆಗಳಲ್ಲಿ ಅವರ ಕವನವಾಗಲಿ ಗದ್ಯವಾಗಲಿ ಓಡಾಡಬಲ್ಲುದು. ಅವರು ಇನ್ನಷ್ಟು ಲಲಿತ ಪ್ರಬಂಧಗಳನ್ನೇಕೆ ಬರೆಯಲಿಲ್ಲವೊ ?

'ಚಕ್ರವ್ಯೂಹ' ಎಂಬ ಕಾದಂಬರಿಯನ್ನು ಬರೆದರು. ಸಮಾಜದಲ್ಲಿನ ಅನ್ಯಾಯ, ಭ್ರಷ್ಟಾಚಾರಗಳ ಚಕ್ರವ್ಯೂಹದಲ್ಲಿ ಸಿಕ್ಕು ಒದ್ದಾಡುವ ಪ್ರಾಮಾಣಿಕ ಗುಮಾಸ್ತೆಯೊಬ್ಬನ ಕತೆ. ಗುರುವರ್ಯರಾದ ಶ್ರೀ. ತ. ಸು. ಶಾ. ಅದನ್ನು ಪ್ರಕಟಿಸಬೇಕೆಂದು ಕೊಂಡಿದ್ದರು. ಆಮೇಲೆ ಅದು ಮರೆತೇಹೋಯಿತು. ಮಠಗಳು, ಸ್ವಾಮಿಗಳನ್ನು ಕುರಿತ ಇನ್ನೊಂದು ಕಾದಂಬರಿಯ ವಸ್ತು ಅವರ ಮನಸ್ಸಿನಲ್ಲಿ ಮೂಡಿ ಹಾಗೇ ಕರಗಿ ಹೋಯಿತು. ಬರವಣಿಗೆಗೆ ಅದು ಅವತರಿಸಲೇ ಇಲ್ಲ. ಅದರ ರೂಪ-ರೇಷೆಗಳನ್ನು ಮಾತ್ರ ನನಗೆ ಹೇಳಿದ್ದರು.

ನಗರಾಭಿವೃದ್ಧಿಯ ಟ್ರ್ಯಾಕ್ಟರ್ ಚಕ್ರದಡಿ ಸಿಕ್ಕ 'ನಮ್ಮ ದಿಬ್ಬ' ಪಾರ್ಥಿವ ಜಗತ್ತಿನಿಂದ ಅಳಿಸಿ ಹೋದರೂ ಶಿ. ಅವರ ಪ್ರೀತಿಯಿಂದಾಗಿ ಸಾಹಿತ್ಯಲೋಕದಲ್ಲಿ ನೆಲೆಗೊಂಡಿತು. ಗೆ| ಅಸುರಾಡೊಂದಿಗೆ ಹೋಟಲೊಂದರಲ್ಲಿ ಕಾಫಿ ಹೀರುತ್ತ ಪಡೆದ ಸ್ಫೂರ್ತಿಯಲ್ಲಿ ಕೊರವಂಜಿಗೆ ಹಾಸ್ಯಲೇಖನ ಬರೆದು ಕಳಿಸುವ ನಿರ್ಧಾರ ಮಾಡಿದ ಮೇಲೆ, ಕೊರವಂಜಿಯಲ್ಲಿ 'ದಿಬ್ಬಯ್ಯ'ನಾಗಿ ಕಾಣಿಸಿಕೊಂಡರು.

ನನಗೂ ಲೆಕ್ಚರರ್ ಕೆಲಸ ಸಿಕ್ಕಾಗ ಅವರಿಗೆ ಸಂತೋಷವಾದರೂ ನಾನು ಶಿವಮೊಗ್ಗೆಗೆ ಹೋಗಬೇಕೆಂದಾಗ ಅಗಲಿಕೆಯ ನೋವು ಇಬ್ಬರಿಗೂ ಅಸಹನೀಯವಾಯಿತು.

ನಾವಿಬ್ಬರೂ ಮತ್ತೆ ಒಟ್ಟಿಗೆ ಇದ್ದದ್ದು ಮೈಸೂರಲ್ಲಿ. ಅದು ಕೆಲವು ಕಾಲ ಮಾತ್ರ. ಉಳಿದ ಕಾಲವೆಲ್ಲ ನಾನು, ಅವರು ಬೇರೆಬೇರೆ ಊರುಗಳಲ್ಲೇ ಇರಬೇಕಾಯಿತು. ಆದರಿಂದ ಅವರ ಬಹು ಸುಂದರವಾದ ಪತ್ರಗಳನ್ನು ಪಡೆಯುವ ಅತಿಶಯವಾದ ಸಂತೋಷ ನನ್ನದಾಯಿತು.

ಶಿ. ಅವರ ಕವನಗಳಲ್ಲಿ ಪ್ರತಿಭೆಯ ಹೊಳಹನ್ನು ಕಂಡು "ಮುಂದೆ ಲೋಕ ವಿಖ್ಯಾತರಾಗಿ ಕೀರ್ತಿ–ಸನ್ಮಾನಗಳ ಪ್ರಖರವಾದ ಬೆಳಕಿನಲ್ಲಿ ಆರಾಧಕ ಜನಜಂಗುಳಿಯ ನಡುವೆ ಸಿಕ್ಕಿಕೊಂಡಾಗ ನಿಮ್ಮ ಈ ಮಿತ್ರನ ನೆನಪೂ ನಿಮಗೆ ಬಾರದೆ ಹೋಗಬಹುದು. ಆದರೆ ಅವನು ಯಾವುದೊ ಏಕಾಂತದಲ್ಲಿ ಒಬ್ಬನೇ ಕುಳಿತು ನಿಮ್ಮ ಶುಭಚಿಂತನೆ ಮಾಡುತ್ತಿರುತ್ತಾನೆ" ಎಂದು ಒಮ್ಮೆ ಅವರಿಗೆ ಬರೆದೆ. ಅವರು, "ಆ ಗದ್ದಲದಿಂದ ತಪ್ಪಿಸಿಕೊಂಡು ನೀವು ಕುಳಿತ ಏಕಾಂತ ಸ್ಥಳಕ್ಕೆ ಓಡಿಬರುತ್ತೇನೆ. ನನ್ನ ಕವನವನ್ನು ಮೆಚ್ಚುವ ನಿಮ್ಮದೊಂದು ಸಹೃದಯ ನನಗೆ ಸಾಕು" ಎಂದು ಉತ್ತರ ಬರೆದರು.

ದಾವಣಗೆರೆಯ ಕಾಲೇಜಲ್ಲಿ ಆಗ ಇಂಗ್ಲಿಷ್ ಪ್ರಾಧ್ಯಾಪಕರಾದ ಶ್ರೀ ವಿ. ಎ. ತ್ಯಾಗರಾಜನ್ ಪ್ರಿನ್ಸಿಪಾಲರಾಗಿದ್ದರು. ಅವರು ಕೇರಳದವರು. ಕನ್ನಡ ಅಷ್ಟು ಚೆನ್ನಾಗಿ ಬರುತ್ತಿರಲಿಲ್ಲ. ಮಹಾರಾಜಾ ಕಾಲೇಜಿನಲ್ಲಿ ದೊಡ್ಡ ವಿದ್ವಾಂಸರು, ಒಳ್ಳೆಯ ಅಧ್ಯಾಪಕರು ಎಂದು ಹೆಸರಾಗಿದ್ದವರು. ಒಂದು ಸಂಜೆ ಕಾಲೇಜು ಹಾಸ್ಟೆಲಿನ ಜಗುಲಿಯ ಮೇಲೆ ನಾನು ಶಿ. ಹರಟುತ್ತ ಕೂತಾಗ ಅವರು ಬಂದರು. ನಾವು ಗೌರವದಿಂದ ಎದ್ದು ನಮಸ್ಕಾರ ಮಾಡಿದೆವು. ಅವರು ನನ್ನ ಮುಖವನ್ನೇ ದಿಟ್ಟಿಸಿ ನೋಡುತ್ತಾ 'ಇವರು ಯಾರು?' ಎಂದರು ಇಂಗ್ಲಿಷಿನಲ್ಲಿ. ಶಿ. 'ನನ್ನ ಮಿತ್ರರು' ಎಂದು ಹೆಸರು ಹೇಳಿದರು. ಅವರು 'ನೀವು ಕವಿಯೊ?' ಎಂದು ಕೇಳಿದರು. ಈ ಪ್ರಶ್ನೆ ತೀರ ಅನಿರೀಕ್ಷಿತವಾಗಿತ್ತು. ಕ್ಷಣ ತಬ್ಬಿಬ್ಬಾದೆ. ನಂತರ 'ನಾನಲ್ಲ. ಇವರು' ಎಂದು ಶಿ. ರನ್ನು ತೋರಿಸಿದೆ. ಅವರು ನಗುತ್ತಾ, 'ಅವರು ಕವಿ. ಗೊತ್ತು. ನೀವೂ ಕವಿಯ ಹಾಗೆ ಕಾಣುತ್ತೀರಿ' ಎಂದರು. ಹೆಚ್ಚು ಹೊತ್ತು ನಿಲ್ಲದೆ, 'ಇಬ್ಬರೂ ಕವಿಗಳ ಆತ್ಮೀಯವಾದ ಮಾತುಕತೆ ಮುಂದುವರಿಯಲಿ' ಎನ್ನುತ್ತಾ ಹೊರಟುಹೋದರು.

"ಶಿವರುದ್ರಪ್ಪಾ, ನೀವು ಕವಿತೆ ಬರೆದರೂ ಸುರಕ್ಷಿತ. ನಾನು ಬರೆಯದಿದ್ದರೂ ಕವಿಯ ಹಾಗೆ ಕಾಣುವುದರಿಂದ ಅಪಾಯಕ್ಕೆ ಗುರಿಯಾಗುವ ಸಂಭವವುಂಟು" ಎಂದೆ. ಇಬ್ಬರೂ ನಕ್ಕೆವು.

ಜುಬ್ಬಾ, ಪಾಯಜಾಮ, ಮೇಲೊಂದು ಖಾದಿ ಛದ್ದರ್ ಹೊದ್ದು ತಿರುಗಿದರೆ ಕವಿ, ಸಾಹಿತಿ ಎಂದು ಜನ ತಿಳಿಯುತ್ತಿದ್ದುದೇನೊ ಸರಿ. ಆದರೆ ಪ್ರಾಜ್ಞರಾದ ಶ್ರೀ ತ್ಯಾಗರಾಜನ್ ಏಕೆ ಹಾಗೆಂದರು ಎಂದು ಯೋಚಿಸತೊಡಗಿದೆ.

ಶಿವಮೊಗ್ಗಾ ಕಾಲೇಜಿನ ಲಲಿತಕಲಾ ಸಂಘದ ಒಂದು ಉತ್ಸವಕ್ಕೆ ಮುಖ್ಯ ಅತಿಥಿಗಳಾಗಿ ಬಂದ ಶ್ರೀ ತ್ಯಾಗರಾಜನ್ ಒಮ್ಮೆ ಶಿ. ಅವರ ರೂಮಿಗೆ ಹೋದಾಗ ಅಲ್ಬಮ್‌ನಲ್ಲಿ ನೋಡಿದ ನನ್ನ ಫೋಟೋ ಮತ್ತು ನಾ ಬಿಡಿಸಿದ ಒಂದು ವರ್ಣಚಿತ್ರಗಳನ್ನು

ಪ್ರಸ್ತಾಪಿಸಿ 'ಕಲಾವಿದ ಮತ್ತು ಕಲೆ' ಎರಡೂ ಚಿತ್ರಗಳೂ ತಮ್ಮ ಮನಸ್ಸನ್ನು ಸೆಳೆದು ವೆಂದು ಆರಂಭಿಸಿ ಜೀವನ, ಕಲೆ, ಕಲಾವಿದನ ವ್ಯಕ್ತಿತ್ವಗಳಿಗಿರುವ ಅನ್ಯೋನ್ಯ ಸಂಬಂಧ ವನ್ನು ಕುರಿತು ಮಾತಾಡಿದರು.

ಈ ಎರಡೂ ಸಂದರ್ಭಗಳಿಂದ ಶ್ರೀ ತ್ಯಾಗರಾಜನ್ ಅವರಿಗೆ ಶಿ. ಅವರ ಕಾವ್ಯ, ಕಲಾಪ್ರಜ್ಞೆಗಳ ಬಗೆಗೆ ಎಂತಹ ಗೌರವ–ಮೆಚ್ಚುಗೆ ಇದ್ದುವೆಂದು ನನಗೆ ತಿಳಿಯಿತು.

"ನನಗೆ ಇರುವವರು ಈ ಲೋಕದಲ್ಲಿ ಇಬ್ಬರೇ ಅತ್ಯಂತ ಆತ್ಮೀಯರಾದ ಸ್ನೇಹಿತರು. ಒಬ್ಬರು ನೀವು. ಮತ್ತೊಬ್ಬರು ಪ್ರಭುಶಂಕರರು" ಎಂದು ಶಿ. ಒಂದು ಪತ್ರದಲ್ಲಿ ಬರೆದಿದ್ದರು. ಬಹಳ ಅಲ್ಪ ಕಾಲದಲ್ಲಿ ನಾವು ಮೂವರೂ ಅಷ್ಟು ಸ್ನೇಹಿತರಾಗಿಬಿಟ್ಟಿದ್ದೆವು. ಆದರೆ ಇದ್ದುದು ಒಬ್ಬೊಬ್ಬರು ಒಂದೊಂದು ಬೇರೆ ಊರಿನಲ್ಲಿ. ಮೈಸೂರು, ದಾವಣಗೆರೆ, ಶಿವಮೊಗ್ಗ—ಈ ತ್ರಿಕೋನದಲ್ಲಿ ಪತ್ರಗಳು ಓಡಾಡುತ್ತಿದ್ದವು. ಪ್ರಶಂ. ರ ಆತ್ಮೀಯ ಗೆಳೆಯರಾಗಿದ್ದ ರಾಮಚಂದ್ರ ಶಿ. ಗೂ ಪರಿಚಯವಾದ ಮೇಲೆ ನನಗೂ ಪ್ರಿಯರಾದರು. ಅವರ ಮುಖದಲ್ಲಿ ಏನೋ ಒಂದು ಬಗೆಯ ಆಧ್ಯಾತ್ಮಿಕ ತೇಜಸ್ಸು. ಅವರು ಶ್ರೀರಾಮಕೃಷ್ಣರ ಭಕ್ತರು. ತುಂಬಾ ಚೆನ್ನಾಗಿ (ಭಕ್ತಿಪರವಾದ) ಭಾವಗೀತೆಗಳನ್ನು ಹಾಡುತ್ತಿದ್ದರು. ಮಧುರವಾದ ಕಂಠ. ಅನುಕರಣೀಯವಾದ ಶೈಲಿ. ಭಾವತುಂಬಿ ಹಾಡುತ್ತ ಮೈಮರೆಯುವರು. ಕೇಳುವ ನಾವೂ ಪುಲಕಿತರಾಗಿ ಭಾವಪರವಶರಾಗು ತ್ತಿದ್ದೆವು. ಮೈಸೂರಲ್ಲಿ ಶಿ. ಅವರ ಮನೆಗೆ ಬೆಳಗ್ಗೆ ಅಷ್ಟೊತ್ತಿಗೆ ಬಂದ ಅವರ ಪರಿಚಯ ವಾಯಿತು. ಮೊಟ್ಟಮೊದಲ ಬಾರಿಗೆ ಅವರ ಭಕ್ತಿ—ಸಾತ್ವಿಕತೆಗಳಿಗೆ ಮಾರುಹೋದೆ. ತುಂಬ ಮೆತ್ತಗೆ ಮೃದುವಾಗಿ ಮಾತಾಡುತ್ತಿದ್ದರು. ಪ್ರಶಂ. ಅವರ ಹಾಗೆ ಅವರೂ ಹಾಸ್ಯಪ್ರಿಯರು. ಶಿ. ಅವರಿಗೆ ರಾಮಚಂದ್ರ ಎಂದರೆ ತುಂಬಾ ಪ್ರೀತಿ, ಗೌರವ. ಸಾಮ ಗಾನದಲ್ಲಿರುವ ಗೆಳೆಯನೊಬ್ಬನಿಗೆ ಬರೆದ ಕಾಗದ ಎಂಬ ಕವನದಲ್ಲಿ ಚೆನ್ನಾಗಿ ವ್ಯಕ್ತ ವಾಗಿದೆ. ಅದು ರಾಮಚಂದ್ರರನ್ನು ಕುರಿತೇ ಬರೆದುದು ಎಂದು ಶಿ. ನನಗೆ ಒಂದು ಸಲ ಹೇಳಿದ ನೆನಪು.

ಒಮ್ಮೆ ಮೂವರು ಉಡುಪಿ–ಮಂಗಳೂರು ಪ್ರವಾಸ ಹೊರಟೆವು. ಅವರಿಬ್ಬರೂ ಶಿವಮೊಗ್ಗೆಗೆ ಬಂದರು ಒಟ್ಟಿಗೆ ಆಗುಂಬೆಗೆ ಹೋಗಿ ಮಲೆನಾಡ ಕಾಡು-ಮೇಡುಗಳಲ್ಲಿ ಗೊತ್ತುಗುರಿಯಿಲ್ಲದೆ ಅಲೆದಾಡಿದೆವು. ಆಗುಂಬೆಯ ಪ್ರಸಿದ್ಧವಾದ ಸೂರ್ಯಾಸ್ತ ನಿರಾಸೆ ಗೊಳಿಸಿದರೂ ಮಲೆನಾಡು ಮಾತ್ರ ರೋಮಾಂಚನಗೊಳಿಸಿತು. ಆಗತಾನೆ ಪ್ರಕಟ ವಾಗಿದ್ದ ಶ್ರೀ ಕುವೆಂಪು ಅವರ 'ಶ್ರೀರಾಮಾಯಣದರ್ಶನ'ದ ಮೊದಲ ಸಂಪುಟವನ್ನು ನನ್ನ ಮಿತ್ರರಿಬ್ಬರೂ ಓದಿದ್ದರು. ಅದರ ಸಾಲುಸಾಲುಗಳು ಬಾಯಿಗೆ ಬರುತ್ತಿದ್ದವು. ಹೆಜ್ಜೆ ಹೆಜ್ಜೆಗೆ ಕುವೆಂಪು ಅವರ ಕಾವ್ಯ, ಕವನಗಳ ಸಾಲುಗಳನ್ನು ನೆನಪಿಗೆ ತರುವಂತೆ ಮಲೆನಾಡ ಕಾನನಾಂತರದ ವಿವಿಧ ನೋಟಗಳು ಎದುರಾಗುತ್ತಿದ್ದವು. ಆಯಾ ನೋಟಕ್ಕೆ ಹೊಂದುವ ಕುವೆಂಪು ವರ್ಣನೆಯ ಸಾಲುಗಳನ್ನು ಮಿತ್ರರು ಒಬ್ಬರಾದ ಮೇಲೊಬ್ಬರು ಜೋರಾಗಿ ಹೇಳುವರು. ಪರಿಚಿತ ಕಾವ್ಯವೇ ನೋಟವಾದ ಹಾಗೆ,

ನೋಟವೇ ಕಾವ್ಯವಾದ ಹಾಗೆ ಅನುಭವವಾಗಿ ಮೈ ಪುಲಕಿತವಾಗುವುದು. ಆ ಸೊಬಗಿನ ಕಡಲಿನಲ್ಲಿ ಒಂದು ಬೊಗಸೆ ಮಾತ್ರ ಕುವೆಂಪು ತಮ್ಮ ಕಾವ್ಯದಲ್ಲಿ ಅಭಿವ್ಯಕ್ತ ಮಾಡಿದ್ದಾರೆ ಎಂದರೂ ಆ ಬೊಗಸೆಯಲ್ಲೇ ಮಲೆನಾಡಿನ ಸಂಪೂರ್ಣ ಚಿತ್ರ ಪ್ರತಿಸೃಷ್ಟಿಯಾಗಿ ಪರಿಪೂರ್ಣವಾಗಿ ಮೂಡಿದೆ.

ವರ್ಷಗಳ ನಂತರ ಮತ್ತೆ ಅಲ್ಲೆಲ್ಲಾ ಓಡಾಡಿದ ಶಿ. ಅದರ ಸೊಗಸನ್ನೆಲ್ಲ ಕುಪ್ಪಳ್ಳಿಯಿಂದ ನನಗೆ ಬರೆದ ಒಂದು ಕಾಗದದಲ್ಲಿ ಬಹು ಸುಂದರವಾಗಿ ಬಣ್ಣಿಸಿ, 'ಈ ನಲವಿನ, ವಿರಾಮದ ನಡುವೆ ನೀವಿದ್ದಿದ್ದರೆ ಈ ಸೊಗಸು ನೂರ್ಮಡಿಸುತ್ತಿತ್ತು. ನಿಮ್ಮ ಕುಂಚಕ್ಕೆ ಈ ಮಲೆನಾಡಿನ ಬಣ್ಣ ತುಂಬಿಕೊಳ್ಳುತ್ತಿತ್ತು. ಏನು ಮಾಡುವುದು? ನೀವೀಗ ಅಲ್ಲಿ, ದೂರದ ಮೈಸೂರಿನಲ್ಲಿ. ಆದರೂ ನಾನು ಚೆಲುವಿನ ನೋಟವನ್ನು ಕಂಡಾಗ ನಿಮ್ಮ ನೆನಪು ಜೊತೆಗೆ ನಿಲ್ಲುತ್ತದೆ....ಒಂದು ಮಾತು. ಕುವೆಂಪು ಅವರ ಕಾವ್ಯಗಳನ್ನೋದಿ ನಾವು ಕಲ್ಪಿಸಿಕೊಂಡ ಚಿತ್ರದ ಮುಂದೆ ನಾವು ಕಾಣುವ ಈ ಮಲೆನಾಡಿನ ನೋಟಗಳು ಏನೇನೂ ಅಲ್ಲ ಅನ್ನಿಸುತ್ತದೆ! ಇವು ಏಕೋ ನನಗೆ ಅತೃಪ್ತಿಯನ್ನು ತಂದಿವೆ!" ಎಂದು ಮುಗಿಸಿದ್ದರು.

ಉಡುಪಿಯಲ್ಲಿ ನನ್ನ ಪ್ರಿಯಮಿತ್ರರಾಗಿದ್ದ ಶ್ರೀ ಕೆ. ಬಿ. ರಾಮಕೃಷ್ಣರಾಯರು M. G. M. ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದರು. ಅವರ ಮನೆಯಲ್ಲಿ ಸ್ನೇಹದ ಆತಿಥ್ಯವನ್ನು ಆನಂದಿಸಿ, 'ಕಾಣದ ಕಡಲಿಗೆ' ಎಂಬ ಕವನದಲ್ಲಿ ಶಿ. ಧ್ವನಿಸಿದ್ದ ಕಡಲನ್ನು ಕಾಣುವ ಹಂಬಲವನ್ನು ಈಡೇರಿಸುವುದರ ಜೊತೆಗೆ ನಾಲ್ವರು ಮಿತ್ರರೂ ಮಲ್ಪೆಯ ಚೆಲುವಾದ ಕಡಲ ತಡಿಯಲ್ಲಿ ನಿರಂತರವಾಗಿ ಉರುಳುರುಳಿ ಬಂದು ಮರಳಲೆಗಳನ್ನು ರೇಖಿಸುತ್ತಿದ್ದ ಕಡಲಲೆಗಳೊಂದಿಗೆ ಮಕ್ಕಳಾಗಿ ಆಟವಾಡಿದೆವು.

ಕಡಲ ಕರೆಯ ದಾರಿಯಲ್ಲೇ ಮಂಗಳೂರಿಗೆ ಹೊರಟೆವು. ನಡುವೆ ಹೋಟಲೊಂದರ ಬಳಿ ಬಸ್ ತಂಗಿದಾಗ ಕಾಫಿ ತಿಂಡಿ ಆಯಿತು. ಆ ಖುಷಿಗೊಂದು ಕಲಶವಿರಲೆಂದು ಪ್ರಶಂ. ಪಾನ್‌ಬೀಡಾ ತಂದು ಒಂದನ್ನು ಆಗಲೆ ಬಾಯಲ್ಲಿ ತುಂಬಿಕೊಂಡು ಮಾತಾಡಲು ಸಾಧ್ಯವಾಗದೆ ಇನ್ನೆರಡನ್ನು ನಮ್ಮ ಕೈಯಲ್ಲಿಟ್ಟು 'ಹಾಕಿಕೊಳ್ಳಿ' ಎಂದು ಕೈಸನ್ನೆ ಮಾಡಿದರು. ಮರುಕ್ಷಣ ಮುಖ ಬೆವತು ಕಣ್ಣು ಬಾಡಿ ಸುಸ್ತಾಗಿ ಕುಸಿದು ಕೂತರು. ನಾವು ಗಾಬರಿಯಾದೆವು. ತಲೆ ಸುತ್ತುತ್ತಾ ಇದೆ ಎಂದು ಸನ್ನೆ ಮಾಡುತ್ತ ಬಾಯಲ್ಲಿದ್ದುದನ್ನೆಲ್ಲ ಜಗುಲಿ ಬದಿಯ ಚರಂಡಿಯೊಳಕ್ಕೆ ಉಗಿದರು. ನಂತರ ಕಣ್ಣುಮುಚ್ಚಿ ಮಲಗಿಬಿಟ್ಟರು. ಹೋಟಲಿನವರಿಂದ ನೀರು ಪಡೆದು ಶೈತ್ಯೋಪಚಾರ ಮಾಡಿ ಗಾಳಿ ಬೀಸಿದೆವು. ಸ್ವಲ್ಪ ಹೊತ್ತಿನ ಮೇಲೆ ಚೇತರಿಸಿಕೊಂಡು ಎದ್ದವರೇ 'ಬೀಡಾ ಹಾಕಿಕೊಳ್ಳಬೇಡಿ' ಎಂದರು. ಬೀಡಾ ಬಿಚ್ಚಿ ನೋಡಿದರೆ ಹಸಿ ಅಡಕೆ ಚೂರು, ಹೊಗೆಸೊಪ್ಪಿನ ಚೂರು ಇದ್ದುವು. ಪ್ರಶಂ.ರ ಯುದ್ಧಕಾಂಡದ ಲಕ್ಷ್ಮಣಾವಸ್ಥೆಯ ಕಾರಣ ಆಗ ತಿಳಿಯಿತು.

ಈ ಯಾತ್ರೆ ಮೂವರಿಗೂ ಅತೀವ ಹರ್ಷವನ್ನುಂಟುಮಾಡಿತ್ತು. ಬುದ್ಧಿಯ

ಚುರುಕು, ಮಾತಿನ ಜಾಣ್ಮೆ, ಒಳ್ಳೆಯ ಹಾಸ್ಯಾಭಿರುಚಿಗಳಿದ್ದ ಪ್ರಶಂ.ರ ಸಂಭಾಷಣೆಯೇ ಕೇಳಲು ಚೆಂದ. ಜೊತೆಗೆ ಅಸುರಾ ಸೇರಿದರಂತೂ ಎಲ್ಲರ ಬುದ್ಧಿಯೂ ಸಾಣೆ ಹಿಡಿದ ವಜ್ರವಾಗುತ್ತಿತ್ತು. ಬೇರೆ ಬೇರೆ ಕಡೆ ಇದ್ದ ಸ್ನೇಹಿತರು ಮೈಸೂರಲ್ಲಿ ಒಟ್ಟಿಗೆ ಇರುವ ಸುಯೋಗ ಕೂಡಿ ಬಂತು. ಗೆ। ಅ. ವೆಂಕಟರಾವ್ ಒಬ್ಬರನ್ನು ಬಿಟ್ಟರೆ ಉಳಿದ ನಾಲ್ವರೂ ಕಾಫಿಯ ಪರಮಭಕ್ತರು. ರುಚಿ ರುಚಿಯಾದ ತಿಂಡಿಗಳನ್ನು ಆರಿಸುವುದರಲ್ಲಿ, ವಿಮರ್ಶಿಸುವುದರಲ್ಲಿ, ಎಲ್ಲರದೂ ನಿಷ್ಣಾತವಾದ ರಸನೆ. ಒಳ್ಳೆ ತಿಂಡಿಯೊ, ಸೊಗಸಾದ ಕಂಪುಳ್ಳ ಕಾಫಿಯೊ ದೊರೆಯುವುದೆಂದರೆ ಮೈಸೂರಿನ ಯಾವ ಮೂಲೆ ಹೋಟಲಾದರೂ ಸರಿ ವಾಸನೆ ಹಿಡಿದೇ ಪತ್ತೆಮಾಡಿ ಹೋಗುತ್ತಿದ್ದೆವು. ತಿಂಡಿ ಚೆನ್ನಾಗಿದ್ದ ಕಡೆ ಬರೀ ತಿಂಡಿ ತಿಂದು ಒಳ್ಳೆಯ ಕಾಫಿಗೆ ಹೆಸರಾದ ಬೇರೆ ಹೋಟೆಲಿಗೆ ಹೋಗುತ್ತಿದ್ದುದೂ ಉಂಟು.

ಸಂಜೆ ಕುಕ್ಕನಹಳ್ಳಿ ಕೆರೆಯ ಬಳಿಯ 'ರಾಮಸ್ವಾಮಿ ವಾಕ್'ನಲ್ಲಿ ನಿಗದಿಯಾದ ಕಲ್ಲು ಬೆಂಚಿನ ಮೇಲೆ ನಿಗದಿಯಾದ ವೇಳೆಗೆ ಸರಿಯಾಗಿ ಎಲ್ಲರೂ ಬಂದು ಕೂಡುತ್ತಿದ್ದೆವು. ಒಂದು ಸೆಕೆಂಡೂ ಹೆಚ್ಚುಕಮ್ಮಿಯಾಗದೆ ಕ್ಲುಪ್ತವಾಗಿ ಬಂದು ಕೂರುತ್ತಿದ್ದ ಅಸುರಾ ಒಂದೆರಡು ನಿಮಿಷ ತಡವಾದರೆ ಸಾಕು 'ಕಾಲದ ಬೆಲೆ ಗೊತ್ತಿಲ್ಲ' ಎಂದು ಹೀಯಾಳಿಸುತ್ತಿದ್ದರು. ಶಿ. ನಿಯಮಿತ ಕಾಲವನ್ನು ಬಹಳ ಚೆನ್ನಾಗಿ ಪರಿಪಾಲಿಸುತ್ತಿದ್ದರು. ಆದರೂ ಒಂದೆರಡು ನಿಮಿಷ ವ್ಯತ್ಯಾಸವಾದಾಗ ಅಸುರಾರ ತೀಕ್ಷ್ಣದೃಷ್ಟಿಗೆ ಗುರಿಯಾಗಬೇಕಾಗಿತ್ತು. ತಮ್ಮ ಗಡಿಯಾರದ ಪ್ರಕಾರ ಟೈಮ್ ಕರೆಕ್ಟಾಗಿದೆ ಎಂದು ಶಿ. ತೋರಿಸಿದರೆ ಅಸುರಾ ಪಕ್ಕದಲ್ಲಿದ್ದ ನಂಜನಗೂಡು ರೈಲುದಾರಿ ಕಂಬಿಗಳ ಮೇಲೆ ಆ ಗಡಿಯಾರವನ್ನಿಡಲು ಶಿಫಾರಸ್ಸು ಮಾಡುತ್ತಿದ್ದರು.

ಶಿ. ಮತ್ತು ಪ್ರಶಂ. ಕಾಲದ ಕ್ಲುಪ್ತತೆಯನ್ನು ಕರಾರುವಾಕ್ಕಾಗಿ ಪಾಲಿಸುತ್ತಿದ್ದರು. ಸಾರ್ವಜನಿಕ ಉಪನ್ಯಾಸದ ಅವಧಿ ಇಪ್ಪತ್ತು ನಿಮಿಷಕ್ಕಿಂತ ಹೆಚ್ಚಿರಬಾರದೆಂದು ಅವರ ಅಭಿಮತ. ಈಚೆಗಂತೂ ಪ್ರಶಂ. ಅದನ್ನು ಹತ್ತು ಹದಿನೈದು ನಿಮಿಷಗಳಿಗೆ ಇಳಿಸಿದ್ದಾರೆ. ಅಷ್ಟು ಅವಧಿಯಲ್ಲಿ ಮಾತಾಡಿ ಮುಗಿಸಿಬಿಡುತ್ತಾರೆ. ಪ್ರಶಂ. ಒಳ್ಳೆಯ ವಾಗ್ಮಿ. ಶಿ. ಅವರಲ್ಲಿ ಅಂತಹ ವಾಗ್ವೈಖರಿ ಇಲ್ಲದಿದ್ದರೂ ವಿಚಾರಗಳಲ್ಲಿ ಹೊಸತನ, ಹೊಸ ಅರ್ಥ ಸ್ಫುರಿಸುವಂತೆ ಮಾತಾಡುತ್ತಾರೆ. ಶಿ. ದಾವಣಗೆರೆಗೆ ಬಂದ ಹೊಸದರಲ್ಲೇ ಬಹಳ ಒಳ್ಳೆಯ ಅಧ್ಯಾಪಕರೆಂದು ವಿದ್ಯಾರ್ಥಿಗಳಿಗೆ ಅಚ್ಚುಮೆಚ್ಚಾಗಿದ್ದರು. ಕಾವ್ಯವನ್ನು ವ್ಯಾಖ್ಯಾನಿಸುವಾಗ ಕಾಣುತ್ತಿದ್ದ ಹೊಸ ದೃಷ್ಟಿ, ತಕ್ಷಣ ಮನಸ್ಸಿಗೆ ಹಿಡಿದು ಬಹುಕಾಲ ನೆನಪಿನಲ್ಲಿ ಉಳಿಯುವಂತಹ ಅವರ ವಾಕ್ಯಗಳು, ಪದಸಮುಚ್ಚಯಗಳು, ವಿದ್ಯಾರ್ಥಿಗಳಿಗೆ ತುಂಬಾ ಹಿಡಿಸಿದ್ದವು. ಅವರದು ಸೂತ್ರಶೈಲಿ ಎನ್ನಬಹುದು. ಶಿ. ದಾವಣಗೆರೆಯಲ್ಲಿದ್ದಾಗಲೆ ನಡೆದ ಮಹತ್ತ್ವದ ಘಟನೆ ಎಂದರೆ ಅವರ ಮದುವೆ. ಬಹು ಸರಳವಾದ ಒಕ್ಕಣೆಯಲ್ಲಿ ಮದುವೆಯ ಕರೆಯೋಲೆಯನ್ನು ಇಬ್ಬರೂ ಕೂತು ಬರೆದು ಅಚ್ಚು ಮಾಡಿಸಿದೆವು. ಹಾದಿಕೆರೆಯಲ್ಲಿ ಮದುವೆ. ಪಿ.ಜೆ. ಎಕ್ಸ್ಟೆನ್‌ಷನ್‌ನಲ್ಲಿ ಒಂದು ಅಚ್ಚುಕಟ್ಟಾದ ಮನೆಯೂ ಬಾಡಿಗೆಗೆ ಸಿಕ್ಕಿತು. ಎಲ್ಲ ಅನುಕೂಲತೆಗಳಿದ್ದು

ಪುಟ್ಟ ಕೈದೋಟವೂ ಇತ್ತು. ಪಶ್ಚಿಮದ ಕಡೆ ಮುಖ ಮಾಡಿದ ಕಾರ್ನರ್ ಮನೆ. ಮುಂಭಾಗದಲ್ಲಿ ಕೂತು ಸಂಧ್ಯೆಯ ಚೆಲುವನ್ನು ನೋಡಬಹುದಿತ್ತು. ಮನೆಯ ಹಣೆಯ ಮೇಲೆ ಮೂರು ನಕ್ಷತ್ರಗಳ ಉಬ್ಬುಚಿತ್ರ 'ಇದು ನಕ್ಷತ್ರ ಲೋಕ' ಎಂಬ ಕವನಕ್ಕೆ ಪ್ರೇರಣೆಯಾಯಿತು.

ಶಿ. ಮದುವೆಯಾದುದೇ ಸೋಜಿಗದ, ನಂಬಲು ಕಷ್ಟವಾದ ಸಂಗತಿ. ಅವರು ಬ್ರಹ್ಮಚಾರಿಯಾಗೇ ಉಳಿದು ಶ್ರೀರಾಮಕೃಷ್ಣಮಠ ಸೇರುವ ಸೂಚನೆಯೇನು ಕಾಣದಿದ್ದರೂ ಯಾವುದಾದರೂ ಒಂದು ಅಂತಹ ಮಠಕ್ಕೆ ಸ್ವಾಮಿಯಾಗಿ (ಅಪವಾದರಹಿತರಾಗಿ) ಇರಲು ಬೇಕಾದ ಎಲ್ಲ ಅರ್ಹತೆಗಳೂ ಅವರಲ್ಲಿದ್ದುವು. ಸಾಮಾನ್ಯವಾಗಿ ತಾರುಣ್ಯದ ಹೊಸ್ತಿಲಲ್ಲಿ ನಿಂತ ಯಾವ ಕವಿಯಾದರೂ ಪ್ರೇಮಗೀತೆಗಳನ್ನು ಬರೆಯದೆ ಇರುವುದೇ ಇಲ್ಲ. ಕೆಲವರಿಗಂತೂ ಪ್ರೇಮಗೀತೆಗಳನ್ನು ಬರೆದಾದ ಮೇಲೆ ಅಥವಾ ಬರೆಯುವ ವಯಸ್ಸನ್ನು ದಾಟಿದಮೇಲೆ ಕಾವ್ಯಸ್ಫೂರ್ತಿಯೆ ಉಳಿದಿರುವುದಿಲ್ಲ. ಅಂತಹದು ಸಹಜವಾದ ಕಾವ್ಯಶಕ್ತಿಯಿದ್ದೂ ಶಿ. ಆಗ ಒಂದು ಪ್ರೇಮಗೀತೆಯನ್ನೂ ಬರೆದಿರಲಿಲ್ಲ. ಒಂದು ಪ್ರಣಯದ ಕತೆಯನ್ನು ಸಹ ಬರೆದಿರಲಿಲ್ಲ. ಸದಾ ತೆರೆದ ಕಣ್ಣು ತೆರೆದ ಕಿವಿ ತೆರೆದ ಮನದಿಂದ ಅವರ ಕವಿಚೇತನ, ಕಲಾಪ್ರಜ್ಞೆ ಲೋಕದ ನಾನಾ ಅನುಭವಗಳಿಂದ ಆನಂದವನ್ನು ಹೀರುತ್ತಿತ್ತು. ಹೀಗೆ ಸದಾಜಾಗ್ರತವಾಗಿದ್ದ ಅವರ ಸೂಕ್ಷ್ಮ ಸಂವೇದನಾಶೀಲತೆಗೆ ಸಾಹಿತ್ಯಕ್ಕೆ ಅತ್ಯಂತ ಸುಲಭಸಿದ್ಧವಾದ ಪ್ರಣಯವಸ್ತು ಅದೇಕೆ ದೂರವಾಗೇ ಉಳಿಯಿತೊ ಎಂದು ನನಗೆ ಈಗಲೂ ಅಚ್ಚರಿ. ನಾವಿಬ್ಬರೂ ಸೇರಿ 'ಅವಳು ತೋರಿದ ಬೆಳಕು' ನಾಟಕ ಬರೆಯುತ್ತಿರುವಾಗ ಪ್ರೇಮಿಗಳಿಬ್ಬರ ಪ್ರೇಮಸಲ್ಲಾಪದ ಸನ್ನಿವೇಶ ದೊಡ್ಡ ಸಮಸ್ಯೆಯೇ ಆಯಿತು. ಅದು ತೀರ ನಾಟಕೀಯವಾಗಿ ಬಿಡದೆ ಆದಷ್ಟು ಸಹಜವಾಗಿರಬೇಕೆಂದು ನಮ್ಮ ಆಶಯ. ಆದರೆ ಬರೆಯುವುದು ಹೇಗೆ? ಇಬ್ಬರಿಗೂ ಪ್ರಣಯದ ಅನುಭವವಿಲ್ಲ. ಬರೆಯಲು ಹೋದರೆ ಹಳೆಯ ಕಾವ್ಯ, ಕಾದಂಬರಿಗಳಲ್ಲಿನ ಶೃಂಗಾರ ಸನ್ನಿವೇಶದಲ್ಲಿನ ನಾಯಕ ನಾಯಕಿಯರ ಮಾತುಗಳೇ ಬರುವುವು. ಈ ವಿಚಾರದಲ್ಲಿ ಮದುವೆಯಾದ ಶಿ. ಅವರೇ ನನಗಿಂತ ಉತ್ತಮ ಎಂದುಕೊಂಡರೆ ಅವರು ಬರೆದ ಸಂಭಾಷಣೆಯ ಸ್ಯಾಂಪಲ್ ನಾನು ಬರೆದುದಕ್ಕಿಂತ ಹೋಪಲೆಸ್ ಆಗಿತ್ತು. ಯಾರಾದರೂ ಇಬ್ಬರು ಪ್ರೇಮಿಗಳ ಮಾತುಕತೆಯನ್ನು ಹೊಂಚಿ ಕೇಳೋಣವೆಂದು ಸಲಹೆ ಕೊಟ್ಟೆ. ಮಹಾರಾಜಾ ಕಾಲೇಜು ಆವರಣದ ಮರಗಳ ನೆರಳಲ್ಲಿ ಘಂಟೆಗಟ್ಟಲೆ ನಿಲ್ಲುತ್ತಿದ್ದ ಜೋಡಿಗಳಿಗೂ ಅಭಾವವಿರಲಿಲ್ಲ. 'ಸುಮ್ಮನಿರಿ. ಅವರು ಮಾತಾಡುವುದೆಲ್ಲಾ ತುಂಬಾ ಸಿಲ್ಲಿ ಆಗಿರುತ್ತದೆ ಎಂದು ಕೇಳಿದ್ದೇನೆ' ಎಂದರು ಶಿ. ಕಡೆಗೆ ಇಬ್ಬರೂ ಕಲ್ಪನೆಯನ್ನೇ ಅವಲಂಬಿಸಿ ಆ ಸನ್ನಿವೇಶವನ್ನು ದಾಟಿದೆವು.

ದಾವಣಗೆರೆಯಲ್ಲಿದ್ದಾಗಲೆ ಶಿ. ಅವರ ಕವನಗಳ ಒಂದು ಸಂಕಲನವನ್ನು ಪ್ರಕಟಿಸಬೇಕೆಂಬ ಆಸೆ ಅವರಿಗೆ ಮೈಸೂರಿಗೆ ವರ್ಗವಾದ ಮೇಲೆ ಪ್ರೀತಿಯ ಗುರುಗಳಾದ ಶ್ರೀ ತ. ಸು. ಶಾ.ರಿಂದ ಈಡೇರಿತು. ತ. ಸು. ಶಾ.ರಿಗೆ ಶಿ. ಅವರ ಮೇಲೆ ಅಪಾರ

ವಾತ್ಸಲ್ಯ. ಶಿ. ಅವರಿಗೂ ತ.ಸು. ಶಾ.ರ ಬಗ್ಗೆ ಬಹಳ ಭಕ್ತಿ. ಶಿ. ಅವರಿಗೆ ತ. ಸು. ಶಾ. ಗುರು, ಹಿರಿಯ ಅಣ್ಣ. ತಮ್ಮ ಕಾವ್ಯದ ಪ್ರಥಮ ಸಹೃದಯ ಎಲ್ಲ ಆಗಿದ್ದರು. ಶಿ. ಎದೆತುಂಬಿ ಹಾಡಿದುದು ಅವರ ಮುಂದೆ. ಮನವಿಟ್ಟು ಅಂದು ಕೇಳಿದವರೂ, ಇಂದು ಸಹ ಕೇಳುವವರು ಅವರು. ಶಿ. ಅವರಿಗೆ ಅದೇ ತೃಪ್ತಿ. ಅದೇ ಬಹುಮಾನ. ಇದನ್ನೆ 'ತೃಪ್ತಿ' ಕವನದಲ್ಲಿ ಅಭಿವ್ಯಕ್ತಿಸಿದ್ದಾರೆ. ಸಂಕಲನದ ಹೆಸರು ದಾವಣಗೆರೆಯಲ್ಲಾಗಲೆ ತೀರ್ಮಾನವಾಗಿತ್ತು. ನಾನು ಬಿಡಿಸಿದ ನಿಸರ್ಗದ ಚಿತ್ರವನ್ನೊಂದು ದಿನ ಶಿ. ತದೇಕ ಚಿತ್ತರಾಗಿ ನೋಡುತ್ತ ಕುಳಿತರು. ನಿಸರ್ಗದ ಒಂದೊಂದು ಚೆಲುವೂ ಯಾವುದೊ ಅವ್ಯಕ್ತವಾದ ಮಧುರ ಶ್ರುತಿಗೆ ಸಮರಸವಾಗಿ ದನಿಗೂಡಿಸಿ ಸಮಸ್ತ ವೈವಿಧ್ಯವೂ ಗೋಷ್ಠಿಗಾನದಲ್ಲಿ ಪಾಲ್ಗೊಳ್ಳುತ್ತಿರುವಂತೆ ಅದರ ಭಾವ. ವೀಣೆಯನ್ನು ನುಡಿಸುತ್ತ ತನ್ಮಯಳಾಗಿ ಕುಳಿತ ಚೆಲುವೆ ಆ ಅಶ್ರುತವಾದ ವಿಶ್ವಗಾನಕ್ಕೆ ಸಂಕೇತ. ಅದಕ್ಕೆ ನಾನು ಕೊಟ್ಟ ಹೆಸರು 'ಸಾಮಗಾನ'. ಚಿತ್ರಕ್ಕೂ, ಅದಕ್ಕಿಂತ ಹೆಚ್ಚಾಗಿ ಹೆಸರಿಗೂ, ಮನ ಸೋತರು. ಶಿ. ಅವರ ಮೊದಲ ಕವನ ಸಂಕಲನಕ್ಕೆ ಅದೇ ಹೆಸರು, ಅದೇ ಮುಖ ಚಿತ್ರ ಆಗಬಹುದೆಂಬ ಸೂಚನೆಯನ್ನು ಅಂಗೀಕರಿಸಿದರು ಹೆಸರೇನೋ ಉಳಿಯಿತು. ಚಿತ್ರವನ್ನು ಸರಿಯಾದ ಸೈಜಿಗೆ ಬರೆದುಕೊಡಲು ಸಾಧ್ಯವಾಗಲಿಲ್ಲ. ಅವರ ಕವನ ಸಂಕಲನಕ್ಕೆ ಮುಖ ಚಿತ್ರ ಬರೆದುಕೊಡಬೇಕೆಂಬ ಉಭಯತ್ರರ ಅಪೇಕ್ಷೆ ಈಡೇರಿದ್ದು 'ದೀಪದ ಹೆಜ್ಜೆ' ಪ್ರಕಟವಾದಾಗಲೇ. ಕಾಲ, ಮಾನವ, ಮತ್ತು ಅವನ ಅಂತರಂಗ: ಗಡಿಯಾರದಲ್ಲಿ ನಡೆವ ಬದುಕಿನ ತುಡಿತ, ಸಾಧನೆ, ಸಿದ್ಧಿ ಇವುಗಳ ಪರಿಭಾವನೆ— ಈ ಕವನಗಳ ವಸ್ತು ಎಂದು ಅವರು ಹೇಳುತ್ತಿದ್ದಂತೆ ನನ್ನ ಮನಸ್ಸಿನಲ್ಲಿ ಆ ಚಿತ್ರ ರೂಪುಗೊಂಡಿತು.

ಕಲ್ಪನೆಗೊದವಿರೆ ಕುಂಚದ ನೆರವು
ಸಚಿತ್ರವಾಯಿತು ಸ್ನೇಹದ ಚೆಲುವು.

ಎಂದು ಶಿ. ಹರ್ಷಿಸಿ ಹಾಡಿದರು.

ಮೈಸೂರಲ್ಲಿ ತಮ್ಮ ಕವನಸಂಕಲನದ ಚೊಚ್ಚಿಲ ಸಂಭ್ರಮದಲ್ಲಿದ್ದ ಶಿ. ಪ್ರತಿ ಪತ್ರದಲ್ಲೂ ಅದರದೆ ವಿಷಯ ಬರೆಯುತ್ತಿದ್ದರು. ಇವತ್ತು ಇಷ್ಟು ಫಾರಂ ಅಚ್ಚಾದುವು, ಇವತ್ತು ಕುವೆಂಪು ಮುನ್ನುಡಿ ಕೊಟ್ಟರು, ಇವತ್ತು ಬೈಂಡಾಗುತ್ತಿದೆ ಇತ್ಯಾದಿ. ಈ ನಡುವೆ ಒಂದು ಪತ್ರದಲ್ಲಿ 'ನನ್ನ ಸಾಮಗಾನಕ್ಕೆ ಮುನ್ನವೇ ನನ್ನ ಮಡದಿ ತನ್ನ ಕಾವ್ಯವನ್ನು ಪ್ರಕಟಿಸಿದ್ದಾಳೆ. ಕಾವ್ಯ ಗಂಡುಕಾವ್ಯ' ಎಂದು ಬರೆದರು. ಸಾಮಗಾನವೂ ಅನಂತರ ಪ್ರಕಟವಾಯಿತು. ತಕ್ಷಣ ಅದರ ಪ್ರತಿಯೊಂದನ್ನು ಪ್ರೀತಿಯಿಂದ ನನಗೆ ಕಳಿಸಿದರು. ಅದನ್ನೋದಿ ನನ್ನ ಅನಿಸಿಕೆಗಳನ್ನೂ ಸಂತೋಷವನ್ನೂ ಪತ್ರದಲ್ಲಿ ಬರೆದು ತಿಳಿಸಿದೆ. "ನಿಮ್ಮೆದೆಯ ಹಿಗ್ಗು ನನ್ನ ಎದೆಯಲ್ಲಿ ಮೊರೆಯಿತು. ನಿಮ್ಮ ಪತ್ರ ಓದಿದ ಮೇಲೆ ನನಗೆ ನನ್ನ ಪುಸ್ತಕದ ಮೇಲೆ ಮೊದಲಿಲ್ಲದ ಅಭಿಮಾನವೊಂದು ಮೂಡಿತು. ಆ ಕೃತಿ

ನನ್ನದು ಎನ್ನಲೇ? ಮಹಾಪರಾಧ. ಅದು ನಿಮ್ಮದು. ನಮ್ಮೆಲ್ಲರದು : ಸೀಪ್ರ, ಪ್ರಭು, ತಸುಶಾ, ಕುವೆಂಪು ನನ್ನ ಮೇಲೆ ಸತ್ಪರಿಣಾಮ ಮಾಡಿದ ಎಲ್ಲರದು ಅದು" ಎಂದು ಶಿ. ಉತ್ತರಿಸಿದರು.

ಸಾಮಗಾನ ಹಲವರ ಮನಸ್ಸನ್ನು ಸೆಳೆಯಿತು. ಹಿರಿಯ ಕವಿಗಳೂ, ಸಾಹಿತಿಗಳೂ ಅದರ ಗುಣವನ್ನು ಮೆಚ್ಚಿಕೊಂಡರು. "ಶ್ರೀ ಮುಗಳಿಯವರು ಕಾಗದ ಬರೆದಿದಾರೆ. 'ನಿಮ್ಮ ಕಾವ್ಯಶಕ್ತಿ ಸಹಜ ಪ್ರಸನ್ನವಾಗಿದೆ'—ಎಂದು. ಈ ಹಿರಿಯರೆಲ್ಲರ ಹರಕೆಯ ಬಲವೊ ಏನೊ ಈ ವಾರ ನಾನು ಕಾವ್ಯತನ್ಮಯನಾಗೇ ಇದ್ದೆ. ಬರೆದೆ."—ಹೀಗೆಂದು ಶಿ. ನನಗೆ ಪತ್ರದಲ್ಲಿ ತಿಳಿಸಿದರು. ಸಾಮಗಾನದ ಹಲವು ಹಾಡುಗಳು ಪ್ರಸಾರವಾಗ ತೊಡಗಿದವು. 'ಜೀವ ಜಾತ್ರೆಯಲಿ ಪ್ರಾಣ ಪಾತ್ರೆಯಲಿ ತುಂಬಿ ಬಾ' ಎಂಬ ಹಾಡಂತೂ ಬಹಳ ಜನಪ್ರಿಯವಾಯಿತು. ಆಗ ಕನ್ನಡಗೀತೆಗಳನ್ನು ಹಾಡುವವರು ತೀರ ವಿರಳ. ಶಿ. ಅವರ ಕವನಗಳನ್ನು ಶ್ರೀ ಉಮಾಪತಿ ಎಂಬೊಬ್ಬ ನನ್ನ ಎಂಜಿನಿಯರ್ ಮಿತ್ರರೂ ನಾನೂ ಹಾಡುತ್ತಿದ್ದೆವು.

ಶಿ. ಹಾಡುಗಳನ್ನು ಬರೆದ ಹೊಸದರಲ್ಲೆ ನನ್ನ ಮುಂದೆ ಹಾಡಿ ತೋರಿಸುತ್ತಿದ್ದರು. ಅದೇ ರಾಗಕ್ಕೆ ಒಪ್ಪ ಓರಣ ಕೊಟ್ಟೊ, ಕೆಲವು ಸಲ ರಾಗವನ್ನು ಬದಲಿಸಿಯೊ ನಾನು ಹಾಡುತ್ತಿದ್ದೆ. ಶಿ. ಗೆ ಅದು ತುಂಬಾ ಹಿಡಿಸುತ್ತಿತ್ತು. ಮೊದಲ ಬಾರಿ ನಾನು ಮೈಸೂರು ಆಕಾಶವಾಣಿಯಲ್ಲಿ ಕನ್ನಡಗೀತೆಗಳನ್ನು ಹಾಡಿದ ದಿನ ಶಿ. ನನ್ನೊಡನೆಯೆ ರೇಡಿಯೋ ಸ್ಟೇಷನ್ನಿಗೆ ಬಂದು ಹೊರಗೆ ಕೂತಿದ್ದು, ಹಾಡಿ ನಾನು ಹೊರಗೆ ಬಂದಕೂಡಲೆ 'ತುಂಬಾ ಭಾವಪೂರ್ಣವಾಗಿ ಹಾಡಿದಿರಿ' ಎಂದು ಹೃದಯ ತುಂಬಿ ಹೇಳಿ ಅಭಿನಂದಿಸಿದರು. ನನಗೆರಡು ರೆಕ್ಕೆ ಮೂಡಿದಂತೆ ಉತ್ಸಾಹವುಕ್ಕಿತು ಎಂತಹ ಅವ್ಯಾಜವಾದ ಪ್ರೀತಿಯಿದು ಎಂದು ವಿಸ್ಮಿತನಾದೆ. ಹಿಂದೊಮ್ಮೆ ನನ್ನ ಕಾಗದಕ್ಕೆ ಉತ್ತರವಾಗಿ, "ನಿಮ್ಮ ಕಾಗದ ನನ್ನನ್ನು ಮೂಕವಿಸ್ಮಿತನನ್ನಾಗಿ ಮಾಡಿದೆ ಆ ಕಾಗದ ಓದಿದನಂತರ ಬಹು ಹೊತ್ತು ನಾನಾವುದೋ ಆನಂದದಲ್ಲಿ ತನ್ಮಯನಾಗಿದ್ದೆ. ಗೆಳೆತನದ ಮಧು ಕೊಡುವ ಮಧುರ ತೃಪ್ತಿಗೆ ಎಣೆಯಾದುದು ಇನ್ನೇನು ಉಂಟು ಈ ಲೋಕದಲ್ಲಿ?" ಎಂದು ಶಿ. ಬರೆದಿದ್ದರು. ಅದೇ ಭಾವದಲ್ಲಿ ನಾನೂ ಮುಳುಗಿದೆ.

ಸಾಮಗಾನವನ್ನು ಮೆಚ್ಚಿ ಕವಿ ಪುತಿನ ಅವರೂ ಕಾಗದ ಬರೆದರು. ಅನಂತರ ಒಮ್ಮೆ ಶಿ. ಬೆಂಗಳೂರಿಗೆ ಹೋದಾಗ ಅವರನ್ನು ಕಂಡರು. ಅದೇ ಮೊದಲ ಭೇಟಿ. ಪುತಿನ ಇವರನ್ನು ನೋಡಿ "OH, I have met you somewhere. My impression about your poetry, and your physical form coincide," ಎಂದರಂತೆ. 'Met somewhere !' ಎಲ್ಲೋ? ಕಾವ್ಯದಲ್ಲೇ? ಎಂದುಕೊಂಡರು ಶಿ. ಮಾರನೆ ದಿನ ಪುತಿನ ಮನೆಗೆ ಊಟಕ್ಕೆ ಕರೆದು ಉಪಚರಿಸಿ ಅದೂ ಇದೂ ಮಾತಾಡುತ್ತ, "Be individual. That is the only way to be universal" ಎಂದರಂತೆ.

ಇದಾದ ಕೆಲವು ತಿಂಗಳ ನಂತರ ಇನ್ನೊಂದು ಸಂಗತಿ ನಡೆಯಿತು. ಕಾಲೇಜುಗಳ ಇನ್ಸ್‌ಪೆಕ್ಷನ್ನಿಗೆಂದು ಹೊರಟ ಪ್ರೊ. ಕೆ. ವಿ ಪುಟ್ಟಪ್ಪ (ಕುವೆಂಪು) ಅವರು ಶಿವಮೊಗ್ಗೆಗೆ ಬಂದಿದ್ದರು. ಅದೇ ಕಾರ್ಯದ ಮೇಲೆ ದಾವಣಗೆರೆಗೆ ಹೋಗಬೇಕೆಂದಾಗ ಅವರ ಜೊತೆಗೆ ನಾನೂ ಹೊರಟೆ. ದಾರಿಯಲ್ಲಿ ಮಲೆನಾಡು ಬಯಲುಸೀಮೆ ಕೂಡುವೆಡೆಯಲ್ಲಿ ಕಾರನ್ನು ನಿಲ್ಲಿಸಿ,

ಸಹ್ಯಾದ್ರಿಯ ಪ್ರಕೃತಿಭಾಮೆ ಸೌಂದರ್ಯ ಪರಾಕ್ರಮಿ,
ಭಾದ್ರಪದದ ಬಯಲುಸೀಮೆ ರಮ್ಯತೆಯಲಿ ಸಂಯಮಿ
ಅಡವಿ ಹುಚ್ಚು ಬೆಟ್ಟಗೆಚ್ಚು ಇಲ್ಲವದಕೆ ಮಿತಿಯ ಮೆಚ್ಚು ಸೊಬಗಿನೊಳು ಸಂಯಮಿ

—ಎಂಬ ಅವರ ಕವನದ ಸಾಲುಗಳ ಸತ್ಯತೆಯನ್ನು ಅಲ್ಲಿನ ನೋಟ ನಿದರ್ಶಿಸುವುದನ್ನು ತೋರಿಸಿದೆ. ಅತ್ಯಂತ ಕುತೂಹಲಾವಿಷ್ಟರಾಗಿ ವಿಸ್ಫಾರಿತ ನಯನಗಳಿಂದ ಅದನ್ನು ಅವರು ನೋಡುತ್ತ ಮೈಮರೆತರು. ಅನಂತರ ನನ್ನ ಕಡೆ ತಿರುಗಿ, ಮತ್ತೆ ಮತ್ತೆ ತನ್ನನ್ನು ತಾನು ಸೃಷ್ಟಿಸಿಕೊಳ್ಳುವುದರಲ್ಲಿ ಕವನದ ಸಾರ್ಥಕತೆ ಇದೆ—ಇದರಲ್ಲಿ ಸಹೃದಯನ ಪಾತ್ರವೇ ಸಕ್ರಿಯವಾದುದು ಎಂಬ ಅರ್ಥದ ಮಾತುಗಳನ್ನು ಹೇಳುತ್ತ, ಈಚೆಗಿನ ಕಾವ್ಯದ ಬೆಳವಣಿಗೆ, ನವ್ಯತೆಯ ಹೊಸ ಕೂಗು, ಪ್ರಯೋಗಗಳ ಔಚಿತ್ಯ, ಕವಿಯ ಮನೋಧರ್ಮ ಮತ್ತು ಮೌಲ್ಯಪ್ರಜ್ಞೆಗಳನ್ನು ಕುರಿತು ಹೇಳುತ್ತ "ನೋಡಿ ಈಚಿನ ಕಿರಿಯ ಕವಿಗಳಲ್ಲಿ ನಮ್ಮ ಶಿವರುದ್ರಪ್ಪ ಒಳ್ಳೆಯ ಭವಿಷ್ಯವಿರುವ ಕವಿ. ಬಹಳ ಕಾಲ ನಿಲ್ಲುವ ಕವನಗಳನ್ನು ಅವರು ಈಗಾಗಲೇ ಬರೆದಿದ್ದಾರೆ. ಜೀವನದಲ್ಲಿಯೂ ಕಾವ್ಯದಲ್ಲಿಯೂ ಇರಬೇಕಾದ ಸಮನ್ವಯ ದೃಷ್ಟಿ ಅವರಲ್ಲಿದೆ. ಇನ್ನು ಹತ್ತು ವರ್ಷಗಳಲ್ಲಿ ನೋಡುತ್ತಿರಿ ಅವರು ಹೇಗೆ ಬೆಳೆದಿರುತ್ತಾರೆ" ಎಂದು (ಇದೇ ಮಾತುಗಳಲ್ಲವಾದರೂ ಈ ಅರ್ಥ ಬರುವಂತೆ) ನುಡಿದರು. ನನ್ನ ಪ್ರಿಯಮಿತ್ರರ ಕಾವ್ಯದ ಬಗ್ಗೆ ಈ ಮಾತು ಕೇಳುತ್ತ ಹರ್ಷರೋಮಾಂಚಿತನಾದೆ.

ಶಿ. ಅವರ ಜ್ಞಾಪಕಶಕ್ತಿ ಅಸಾಧಾರಣವಾದುದು. ಒಮ್ಮೆ ಓದಿದರೂ ಸಾಕು ಪುಸ್ತಕದಲ್ಲಿ ತಾವು ಮೆಚ್ಚಿದ ಭಾಗವನ್ನು ವಾಕ್ಯವಾಕ್ಯವಾಗಿ ಸ್ವಲ್ಪವೂ ವ್ಯತ್ಯಾಸವಿಲ್ಲದೆ ಜ್ಞಾಪಕದಿಂದಲೇ ಹೇಳಿಬಿಡುತ್ತಾರೆ. ಎಷ್ಟೋ ಕಾಲದ ನಂತರವೂ ಸಂದರ್ಭೋಚಿತವಾಗಿ ಆ ಮಾತುಗಳನ್ನು ನೆನಪಿಸಿಕೊಂಡು ಉದ್ಧರಿಸುತ್ತಾರೆ. ಈ ಶಕ್ತಿಗೆ ನಾನು ಬೆರಗಾಗಿ ಹೋಗಿದ್ದೇನೆ. ಇದಕ್ಕೊಂದು ಒಳ್ಳೆಯ ನಿದರ್ಶನವನ್ನು ನೆನೆದುಕೊಳ್ಳಬಹುದು. ಉಡುಪಿ ಮಂಗಳೂರು ಯಾತ್ರೆ ಮುಗಿದು ಊರಿಗೆ ಹಿಂತಿರುಗಿದ ಮೇಲೆ 'ಕಡಲನ್ನು ಕಂಡ ಬೆರಗು ಕವನವಾಗಿದೆ. ನೀವು ಬಂದಾಗ ತೋರಿಸುತ್ತೇನೆ' ಎಂದು ಶಿ. ದಾವಣಗೆರೆಯಿಂದ ಕಾಗದ ಬರೆದರು. ಅನಂತರ ಅವರೇ ಶಿವಮೊಗ್ಗೆಗೆ ಬರುವ ಸಂದರ್ಭ ಬಂದಿತು. ಆಗ ಜೊತೆಗೆ ಆ ಕವನವನ್ನೂ ತನ್ನಿ ಎಂದು ನಾನು ಬರೆದೆ. ಮಧ್ಯೆ ಏನಾಯಿತೊ ಅವರು ತಮ್ಮ ಫೈಲಿನಲ್ಲಿಟ್ಟುಕೊಂಡ ಕವನ ಎಲ್ಲೊ ನುಸುಳಿ ಮಾಯವಾಗಿತ್ತು. ನನಗಾದ ನಿರಾಸೆಯನ್ನು ನೋಡಲಾರದೆ 'ಒಂದೆರಡು ಬಿಳಿ ಹಾಳೆ ಕೊಡಿ' ಎಂದು

ಇಸಿದುಕೊಂಡು ರೂಮಲ್ಲೇ ಒಂದೆಡೆ ಕುಳಿತು ಐವತ್ತಾರು ಸಾಲಿನ ಆ ಇಡೀ ಕವನ ವನ್ನು ಚಾಚೂತಪ್ಪದೆ ಬರೆದುಕೊಟ್ಟರು. ಆಶ್ಚರ್ಯಸ್ತಂಭಿತನಾದೆ. ಆ ಕವನವನ್ನೆ ಉಡುಪಿಯ ಯುಗಪುರುಷ ಎಂಬ ಪತ್ರಿಕೆಗೆ ಕಳಿಸಿಕೊಟ್ಟೆ. ಅದರಲ್ಲಿ ಅದು ಪ್ರಕಟ ವಾಯಿತು. ಈಗ ಚೆಲುವು-ಒಲವಿನಲ್ಲಿ ಅದನ್ನು ನೋಡಬಹುದು.

ಶಿ. ಅವರ ವಿಷಯದಲ್ಲಿ ಕಾವ್ಯಸರಸ್ವತಿ ಸದಾ ಪ್ರಸನ್ನೆಯಾಗಿರುವಂತೆ ತೋರುತ್ತದೆ. ಅವರ ತಲೆಯೊಳಕ್ಕೆ ಯಾವ ಒಂದು ಒಳ್ಳೆಯ ವಿಚಾರವನ್ನೊ, ಭಾವನೆಯನ್ನೊ ಹಾಕಿದರೆ ಸಾಕು ಒಂದು Well-made ಕವನವಾಗಿ ಅದು ಈಚೆಗೆ ಬರುವುದು. ರಚನೆಯ ಕೌಶಲ ಅವರಿಗೆ ಸಿದ್ಧಿಸಿದೆ. ಆಯ್ದ ಸುಂದರ ಮಾತುಗಳು ತಮಗೆ ತಾವೇ ಕೋದುಕೊಳ್ಳುತ್ತವೆ. ಶಿವಮೊಗ್ಗೆಯಲ್ಲಿರುವಾಗ ಕಾಲೇಜು ಪತ್ರಿಕೆ 'ವಿಕಾಸ'ಕ್ಕೆ ಒಂದು ಕವಿತೆ ಕೇಳಿದೆ. ಪತ್ರಿಕೆಯ ಹೆಸರೇ ಸ್ಫೂರ್ತಿ ಕೊಟ್ಟಿತೆಂದು ಆಗಲೇ ಬರೆದ 'ವಿಕಾಸನ' ಕವನವನ್ನು ಕಳಿಸಿದರು. ಇನ್ನೊಂದು ಸಂದರ್ಭ—ದೀಪಾವಳಿಯನ್ನು ಕುರಿತ ಒಂದು ಕವಿತೆ ಬೇಕು ಎಂದು ಕೇಳಿದೆ. "ನೀವೇನೊ ಪದ್ಯ ಕೇಳಿದಿರಿ. ಏಕೊ ಏನೊ ನೀವು ಸೂಚಿಸಿದರೆ, ಕೇಳಿದರೆ ಕೂಡಲೆ ಸಹಜವೆಂಬಂತೆ ಕವಿತೆ ಬರುತ್ತದೆ ನನಗೆ. ಹಿಂದೆ ಹೀಗೇ ಆಗಿದೆ. ಇಂದೂ ಹೀಗೇ ಆಯಿತು ನಿಮ್ಮ ಪತ್ರ ಓದಿ ಅಗ್ನಿಸಾಕ್ಷಿ ಯಾಗಿ ಅನ್ನಮಾಡುತ್ತಿದ್ದೆ. ಆಗ—ದೀಪಾವಳಿಯೂ ಆದ್ದರಿಂದ ಈ ಕವನ ಬಂತು" ಎಂದು ಬರೆದು

ಇಳಿದು ಬಾ ಓ ಬೆಳಕೆ
ನನ್ನ ಎದೆಗೆ
ಎದೆಯ ಕತ್ತಲನೆಲ್ಲ
ತೊಳೆಯ ಬಲ್ಲುದೆ ಹೇಳು
ಮರ್ತ್ಯ ದೀವಳಿಗೆ ?—

ಎಂದು ಆರಂಭವಾಗುವ ಕವನವನ್ನು ಕಳಿಸಿದ್ದರು. ಮುಂದೆ ಇದು 'ದೇವಶಿಲ್ಪ' ಸಂಕಲನ ದಲ್ಲಿ ಸೇರಿತು.

ಒಮ್ಮೆ ಕ್ಲಾಸಿಗೆ ಹೋಗುವ ಮುನ್ನ ನನ್ನ ಕಾಗದ ಬಂತಂತೆ. ಮೊದಲು ಅದನ್ನು ಓದಿ ಕ್ಲಾಸಿಗೆ ಹೋದರು. ಅದೇ ಗುಂಗಿನಲ್ಲೊಂದು ಕವನ ತಲೆಯೊಳಗೆ ರೂಪುಗೊಂಡಿತು. ಕ್ಲಾಸ್ ಮುಗಿಸಿದ ಮೇಲೆ ಸ್ಟಾಫ್ ರೂಮಿನಲ್ಲೇ ಕೂತು ಅದನ್ನು ಬರೆದರು. ಪತ್ರ ಸ್ಫೂರ್ತಿತವಾಗಿ ಬಂದ ಕವಿತೆ ಎಂದು ಅದನ್ನು ನನಗೆ ಪತ್ರದಲ್ಲಿ ಬರೆದು ಕಳಿಸಿದರು.

ಮೈಸೂರಿನಲ್ಲಿ ಒಂದು ದಿನ ಕ್ಲಾಸ್ ಮುಗಿಸಿ ಕ್ಯಾಂಟೀನ್ ಕಡೆ ಹೊರಟಾಗ ದಾರಿಯ ಹುಡಿಯ ಮೇಲೆ ಬಿದ್ದ ಹೂವೊಂದನ್ನು ನೋಡಿದರು. ಯಾರೋ ವಿದ್ಯಾ ರ್ಥಿನಿಯ ಮುಡಿಯನ್ನೇರಿದ್ದ ಹೂ ಬಾಡುವ ಮುನ್ನವೇ ಹುಡಿಗುರುಳಿ ಕರುಣಾಜನಕ ವಾಗಿ ಕಂಡಿತು. ಕವಿಯ ಕೋಮಲವಾದ ಹೃದಯವನ್ನು ನಲುಗಿಸಿತು.

ಮನೆಯ ತಲುಪಿದ ಮೇಲೆ ಕೊರಗುವಳೆ ಆ ತರುಣಿ
ಹೂ ಜಾರಿ ಹೋದುದಕೆ ? ನಾನರಿಯೆ
ನಾನಿದಕೆ ಮರುಗುವೆನು ; ಯಾವ ವಸ್ತುವೊ ಏನೊ
ಸೆಳೆವುದಚ್ಚರಿಯಲ್ತೆ ನಮ್ಮೆದೆಯನು

ಎಂದು ಮುಂತಾಗಿ ಕವನವೊಂದು ಹೊಮ್ಮಿತು.

'ಕಾರ್ತೀಕ'ದಲ್ಲಿ ಪ್ರಕಟವಾಗಿರುವ 'ಕನಸಿನಿಂದ ನನಸಿಗೆ' ಒಂದು ಸೋಜಿಗದ ಕವನ. ಕನಸಿನಲ್ಲಿ ಹೊಳೆದ ಒಂದೇ ಒಂದು ಸಾಲು ಎಚ್ಚರವಾದ ಮೇಲೆ ಕೌತುಕದ ಒಗಟಾಗಿ ಕುಳಿತಿತು. ಚಿಂತನ ಅದರ ಉಳಿದ ಪರಿವಾರವನ್ನು ಒಂದೊಂದಾಗಿ ಹೊರ ತಂದು ಸಾಲಿಗೆ ಸಾಲು ನೇಯ್ದುಕೊಂಡರು. ಶಿ. ಅವರ ಕಾವ್ಯದ ಸೆಲೆ ಬತ್ತದ ಚಿಲುಮೆ. ಅವರ ಲೇಖನಿಯಿಂದ ನಿರರ್ಗಳವಾಗಿ ಹರಿಯುವ ಕವನದ ಸಾಲುಗಳನ್ನು ನೋಡುತ್ತ ನಾನೂ,

ಯಾವ ಮಗ್ಗ ಇದು ಯಾರು ನೇಯುವರೊ ಕಾಣದಲ್ಲ ಲಾಳಿ
ಕನಸಿನಿಂದ ಎಚ್ಚರದ ದಡಕೆ ಬಂದಿರುವ ಸೊಗದ ದಾಳಿ
(ಕನಸಿನಿಂದ ನನಸಿಗೆ)

ಎಂದು ಬೆರಗಾಗಿದ್ದೇನೆ.

ಇದು ರಜತದುದ್ಯಾನ
ಅವ್ಯಕ್ತ ಮಧುರಗಾನ
ಹೊಮ್ಮುತಿದೆ ತಾನ ತಾನ
ಮನವಿಲ್ಲಿ ಧ್ಯಾನ ಲೀನ

ಎಂದೇನೇನೊ ಸುಂದರ ಕಲ್ಪನೆಗಳನ್ನು ಕಟ್ಟಿಕೊಂಡು ಹಾಡಿದ ಸಾಮಗಾನದ ಕವಿ ದಾಸ್ಯವಿಮೋಚನೆಯಾದರೂ ಕಷ್ಟ—ಜಡತನಗಳಿಂದ ಮುಕ್ತವಾಗದ ಭಾರತದಲ್ಲಿ ಇಡೀ ದೇಶವನ್ನೆ ಮುಕ್ಕಿ ನುಂಗುತ್ತಿರುವ ಅತಿವ್ಯಾಪಕವಾದ ಶೋಷಣೆ, ಭ್ರಷ್ಟಾಚಾರಗಳ ವಿರುದ್ಧ ಸಿಡಿದೆದ್ದು ತೆರೆದ ದಾರಿಯಲ್ಲಿ ನಿಂತು,

ಸಾಕು ನಿಲ್ಲಿಸು ನಿನ್ನ ಸಾಮಗಾನ
..............................
ದೇಶದಾದ್ಯಂತ ಅಣೆಕಟ್ಟುಗಳ ಕಟ್ಟಿ ನಾವು
ಬೆಳದದ್ದೇನು ಬರೀ ಹಸಿವೆ ?
..............................
ಬರೀ ಮಾತುಗಳ ಕಡ್ಡಿ ಗೀಚುವೆಯಲ್ಲ
ನಿನಗೆ ನಾಚಿಕೆಯಿಲ್ಲ ?

ಎಂದು ಸಾತ್ವಿಕ ಸಂತಾಪದಿಂದ ಆಕ್ರೋಶಿಸುವವರೆಗೂ ನಡೆದು ಬಂದಿದ್ದಾರೆ.

ಶಿ., ಪ್ರಶಂ. ಮತ್ತು ನಾನು ಅತ್ಯಂತ ಆತ್ಮೀಯ ಸ್ನೇಹಿತರಾಗಿದ್ದುದು ಸರ್ವವಿದಿತ

ವಾಗಿತ್ತು. ವಿಧಿ ನಮ್ಮ ಸ್ನೇಹವನ್ನೊಮ್ಮೆ ಪರೀಕ್ಷಿಸಿ ನೋಡಿದ ಸಂದರ್ಭ ಸ್ವಾರಸ್ಯವಾಗಿದೆ. ನಾವು ಮೂವರೂ ದುರ್ಗಾಪೂಜೆ ನೋಡಲೆಂದು ನವರಾತ್ರಿಯಲ್ಲಿ ಕಲ್ಕತ್ತಾಕ್ಕೆ ಹೋದವರು ಕಾಶಿಗೂ ಹೋದೆವು. ಗಂಗಾನದಿಯು ದೇವಗಾಂಭೀರ್ಯದಿಂದ ವಿಸ್ತಾರವಾಗಿ ಹರಿಯುತ್ತಿದ್ದ ನೋಟ ಚೇತೋಹಾರಿಯಾಗಿತ್ತು. ಸ್ನಾನಘಟ್ಟಗಳ ತುಂಬ ಜನಸಂದಣಿ. ಜನವಿರಳವಾದೊಂದು ಕಡೆ ಹೋಗಿ ಮೆಟ್ಟಲಮೇಲೆ ಕೂತೆವು. ನಾನು, ಶಿ. ಸ್ನಾನಮಾಡಲು ಸಿದ್ಧರಾದೆವು ಪ್ರಶಂ. 'ನಾನಂತೂ ಸ್ನಾನಮಾಡೋದಿಲ್ಲಪ್ಪಾ, ನೀವೇ ಪುಣ್ಯ ಕಟ್ಟಿಕೊಳ್ಳಿ ಬೇಕಾದರೆ,' ಎಂದು ಸುಮ್ಮನೆ ಕೂತರು. ನಾವು ಅಂಚಿನಲ್ಲೇ ಸ್ವಲ್ಪ ನೀರಲ್ಲಿ ನಿಂತು ಮೈಗೆ ನೀರು ಹುಯ್ದುಕೊಳ್ಳತೊಡಗಿದೆವು. ಅಷ್ಟರಲ್ಲಿ ಪ್ರಶಂ. ಮನಸ್ಸು ಬದಲಾಯಿಸಿ ನೀರಿಗಿಳಿದು ಈಜು ಬರುವವರ ಹಾಗೆ ಸರಸರನೆ ಮುಂದೆ ಹೋಗಿ ಈಜು ಬಿದ್ದುದನ್ನು ನನ್ನ ಪಾಡಿಗೆ ಮೈಯುಜ್ಜಿಕೊಳ್ಳುತ್ತ ನಿಂತಿದ್ದ ನಾನು ಗಮನಿಸಲಿಲ್ಲ. ಇದ್ದಕ್ಕಿದ್ದಂತೆ ಶಿ. ಅವರ ಆರ್ತನಾದ ಕೇಳಿ ತಿರುಗಿ ನೋಡುತ್ತೇನೆ.! ಪ್ರಶಂ. ಗಾಬರಿಗಣ್ಣು ಬಿಡುತ್ತ ನೀರು ಬಡಿಯುತ್ತ ಮುಳುಗೇಳುತ್ತಿದ್ದಾರೆ. ಸ್ವಲ್ಪವೂ ಹಿಂದೆ ಮುಂದೆ ನೋಡದೆ ಶಿ. ಅವರು (ಪ್ರಶಂ.) ಚಾಚಿದ ಕೈ ಹಿಡಿದು ಎಳೆಯಲು ಹೋಗಿ ತಾವೇ ಸೆಳೆಯಲ್ಪಟ್ಟು ಆಯ ತಪ್ಪಿ ಬಿದ್ದು ಹೋ ಹೋ ಎಂದು ಆರ್ತನಾದ ಮಾಡುತ್ತ ಮುಳುಗೇಳುತ್ತಿದ್ದಾರೆ. ನೋಡಿದ ಕ್ಷಣ help, help ಎಂದು ಜೋರಾಗಿ ಕೂಗಿದವನೇ ನಾನು ಶಿ. ಅವರ ಕೈ ಹಿಡಿದು ಎಳೆಯಲು ಈಜು ಬಿದ್ದೆ. ಇಷ್ಟೆಲ್ಲ ಕ್ಷಣ ಎರಡು ಕ್ಷಣಗಳಲ್ಲಿ ಆಗಿಹೋಗಿತ್ತು. ಅದು ಯಾರೊ ಮಹಾನುಭಾವ ಈಜು ಬಿದ್ದು ತೇಲಿಹೋಗುವುದರಲ್ಲಿದ್ದ ನಮ್ಮನ್ನು ಒಬ್ಬೊಬ್ಬರನ್ನಾಗಿ ಹಿಡಿದೆಳೆದು ದಂಡೆಗೆ ಹಾಕಿದ. ಅವರಿಬ್ಬರೂ ಸುಮಾರು ನೀರು ಕುಡಿದಿದ್ದರು. ಒಂದೆರಡು ಗುಟುಕು ಮಾತ್ರ ನಾನು ರುಚಿ ನೋಡಿದ್ದೆ. ನಮ್ಮ ಪ್ರಾಣವುಳಿಸಿದ ಮಹಾಶಯನಿಗೆ ಕೃತಜ್ಞತೆಯನ್ನು ತಿಳಿಸಲು ನನಗಷ್ಟೆ ಚೈತನ್ಯ ಇದ್ದುದು. ನನ್ನ ವಂದನೆಗೆ ಆತ "ವಿಶ್ವನಾಥನ ಕೃಪೆ. ಅವನ ಹೆಸರು ಹೇಳಿ ನಾಲ್ಕು ಜನ ಬಡವರಿಗೆ ಭೋಜನ ಮಾಡಿಸಿರಿ" ಎಂದು ಹೇಳಿದವನೆ ಸದ್ದಿಲ್ಲದೆ ಹೊರಟುಹೋದ. ನಾನೆಷ್ಟು ಕೂಗಿಕೊಂಡರೂ ಹೆಜ್ಜೆ ಕೂಡ ಅಲುಗಿಸದೆ ನಿಂತ ಕಟ್ಟುಮಸ್ತಾದ ಆಸಾಮಿಯೊಬ್ಬ ಅದೇ ತಾನೇ ಚೇತರಿಸಿಕೊಂಡು ಇನ್ನೂ ದಿಗ್ಭ್ರಾಂತರಾಗಿ ಕೂತಿದ್ದ ನಮಗೆ 'ನೋಡಿ ಅಪರಿಚಿತವಾದ ನೀರಲ್ಲಿ ಎಂದೂ ಈಜುಬೀಳಬಾರದು. ಪುರಿಯಿಂದಿಲ್ಲಿಗೆ ಎಷ್ಟೊಸಲ ಬಂದು ಇಲ್ಲಿ ಈಜಾಡಿ ಇಷ್ಟು ಪರಿಚಿತವಾಗಿದ್ದರೂ ನನಗೇ ಭಯ. ಅದರಲ್ಲೂ ಗಂಗೆ ಬಹಳ ಅಪಾಯಕಾರಿ. ಮೇಲೆ ನೋಡಲು ಶಾಂತ. ಒಳಗೆ ಬೇರೊಂದೇ ಸೆಳವಿರುತ್ತೆ'—ಹಾಗೆ—ಹೀಗೆ ಎಂದು ಒಂದು ಉಪನ್ಯಾಸವನ್ನೇ ಕೊಟ್ಟ.

ಅಂದು ದೇಗುಲದಲ್ಲಿ ನಾವು ನೋಡಿದುದು ವಿಶ್ವನಾಥ ದೇವರನ್ನಲ್ಲ. ಆ ಅಪರಿಚಿತ ಮಹಾನುಭಾವನನ್ನು. ಕೃತಜ್ಞತೆಯನ್ನರ್ಪಿಸಿದುದು ನಮ್ಮ ಪ್ರಾಣವುಳಿಸಿದನೆಂಬ ಸಂತೋಷಕ್ಕಲ್ಲ. ವಿಚಾರ, ತರ್ಕ, ಕೊನೆಗೆ ಪ್ರಾಣ ಎಲ್ಲಕ್ಕೂ ಅತೀತವಾಗಿ ನಿಂತ

ಸ್ನೇಹದ ಆ ದೈವೀ ಭಾವವನ್ನು ಅರಿವಿಗೆ ತಂದುಕೊಟ್ಟ ಆ ಅಮೃತಗಳಿಗೆಯನ್ನು ಪರಿಭಾವಿಸಿ ಅನುಭವಿಸುವ ಬದುಕನ್ನು ಮತ್ತಷ್ಟು ವಿಸ್ತರಿಸಿದುದಕ್ಕಾಗಿ.

ಪ್ರತಿಭೆಯಲ್ಲಿ, ಕಾವ್ಯರಚನಾಶಕ್ತಿಯಲ್ಲಿ ಶಿ. ಅಭಿಜಾತರಾದ ಕವಿ ಬೇರೆಯಾಗಿಯೇ ನಿಲ್ಲುತ್ತಾರೆ. ಆದರೆ ಸಾಮಾನ್ಯವಾಗಿ ಶಿ. ಅವರದು ನನ್ನದು ಒಂದೇ ಬಗೆಯ ಮನೋಧರ್ಮ. ಒಂದೇ ಅಭಿರುಚಿ. ಸಾಹಿತ್ಯ ಹೇಗೊ ಹಾಗೆ ಸಂಗೀತ, ನೃತ್ಯ, ನಾಟಕ, ಚಿತ್ರಕಲೆ, ಶಿಲ್ಪ ಮುಂತಾದ ಕಲೆಗಳಲ್ಲೂ ಆಸಕ್ತಿ. ವೀಣೆ, ಸಿತಾರ್, ಕೊಳಲು ಇಬ್ಬರಿಗೂ ಇಷ್ಟವಾದವುಗಳು. ಸಿನಿಮ ಇಬ್ಬರಲ್ಲೂ ಉಪಲವಿಕೆಯನ್ನುಂಟುಮಾಡುವುದು. ಕಾಫಿ, ಊಟ, ತಿಂಡಿಗಳಲ್ಲಿ ಒಳ್ಳೆಯ ರುಚಿಯನ್ನು ಬಲ್ಲವರು. ಅನೇಕ ಗಂಭೀರವಾದ ಆಲೋಚನೆಗಳಲ್ಲಿಯೂ ಆಶ್ಚರ್ಯಕರವಾಗಿ ಒಮ್ಮತವುಳ್ಳವರು. ಈ ಸಮಾನ ಸ್ವಭಾವವೇ ಬಹುಶಃ ಕಾರಣವಾಗಿ ನಾವಿಬ್ಬರೂ ಜೊತೆಗೂಡಿ ಕೆಲವು ರೇಡಿಯೋ ನಾಟಕಗಳನ್ನು ಬರೆದೆವು. ಅಂತಹ ಯೋಚನೆ ಮೊದಲು ನಮ್ಮ ಮನಸ್ಸಿನಲ್ಲಿ ಹೇಗೆ ಸುಳಿಯಿತೋ ನೆನಪಿಲ್ಲ. ಬಸವಣ್ಣನವರ ಕಡೆಯ ದಿನಗಳ ಘಟನೆಗಳು ಇತಿಹಾಸದಲ್ಲಿ ಸಂದಿಗ್ಧವಾಗಿವೆ. ಅವರ ವ್ಯಕ್ತಿತ್ವದ ಆಧಾರದ ಮೇಲೆ ಆ ಸನ್ನಿವೇಶವನ್ನು ಊಹಿಸಿ ಒಂದು ಕಿರುನಾಟಕವನ್ನು ಬರೆಯುವ ಯೋಚನೆಯನ್ನು ಶಿ. ಅವರಲ್ಲಿ ಪ್ರಸ್ತಾಪಿಸಿದೆ. ಇಬ್ಬರೂ ಕೂತು ಚರ್ಚಿಸಿ ಸ್ಥೂಲವಾಗಿ ನಾಟಕದ ಚೌಕಟ್ಟನ್ನು ರೂಪಿಸಿಕೊಂಡೆವು. ಅದರ ಅಂತಿಮ ಫಲ 'ಮಹಾ ಸಂಗಮ.' ಮೈಸೂರಲ್ಲೇ ಇದ್ದ ಆಕಾಶವಾಣಿಯಿಂದ ಪ್ರಸಾರವಾಗಿ ತುಂಬ ಜನಪ್ರಿಯವಾಯಿತು. ಅನಂತರ ಧಾರವಾಡದ ಆಕಾಶವಾಣಿಯ ಕಲಾವಿದರು ಅದರ ನಿರ್ಮಾಪಕರಾದರು. ಡಾಕ್ಟರ್ ಎಚ್. ಕೆ. ರಂಗನಾಥ್, ಶ್ರೀ ಎಸ್. ಕೃಷ್ಣಮೂರ್ತಿಯವರಂಥ ಪ್ರತಿಭಾವಂತ ನಿರ್ದೇಶಕರ ಸ್ನೇಹಭಾಗ್ಯವನ್ನು ಈ ನಾಟಕ ನಮಗೆ ತಂದುಕೊಟ್ಟಿತು. ಕರ್ನಾಟಕ ವಿಶ್ವವಿದ್ಯಾನಿಲಯದ ಯುವಜನೋತ್ಸವದಲ್ಲಿ ರೇಡಿಯೋ ನಾಟಕ ಸ್ಪರ್ಧೆಯಲ್ಲಿ ಅಭೂತಪೂರ್ವ ಯಶಸ್ಸನ್ನು ಪಡೆದು ಪಾರಿತೋಷಕವನ್ನೂ 'ಮಹಾ ಸಂಗಮ' ಪಡೆಯಿತೆಂದು ಪರೋಕ್ಷವಾಗಿ ಕೇಳಿದೆ. ಅದರ ಶ್ರೇಯಸ್ಸು ಎಷ್ಟೇ ಆಗಲಿ ಆ ವಿದ್ಯಾರ್ಥಿ ಕಲಾವಿದರದು. ಹೀಗೆಯೇ ನಾವು ಅನಂತರ ಬರೆದ ನಾಟಕಗಳಲ್ಲಿ ನಾದ ಸೇತು, ಅವಳು ತೋರಿದ ಬೆಳಕು ವಿಶೇಷವಾದ ಜನ ಮನ್ನಣೆಯನ್ನು ಗಳಿಸಿದವು.

ನಾವಿಬ್ಬರೂ ಅದು ಹೇಗೆ ಜೊತೆಗೂಡಿ ನಾಟಕ ಬರೆಯುತ್ತೇವೆಂದು ಹಲವು ಜನ ಮಿತ್ರರಿಗೆ ಕುತೂಹಲ. ಕೆಲವರು ನಮ್ಮನ್ನು ನೇರವಾಗಿ ಕೇಳಿದ್ದೂ ಉಂಟು. ಯಾರು ಯಾವ ದೃಶ್ಯ ಬರೆದಿರಬಹುದೆಂದು ಕಂಡುಹಿಡಿಯಲೂ ಪ್ರಯತ್ನಿಸಿ ವಿಫಲರಾದರು. ನಾನು ಹೇಳುತ್ತಿದ್ದೆ : ಅದರಲ್ಲೇನು ಆಶ್ಚರ್ಯ ? ನಾವಿಬ್ಬರೂ ಬೇರೆ ಬೇರೆ ದೃಶ್ಯಗಳನ್ನು ಹಂಚಿಕೊಂಡು ಬೇರೆ ಬೇರೆ ವ್ಯಕ್ತಿಗಳಾಗಿ ಬರೆಯುವುದಿಲ್ಲ. ಪ್ರತಿಯೊಂದು ದೃಶ್ಯವನ್ನೂ ಇಬ್ಬರೂ ಒಬ್ಬ ವ್ಯಕ್ತಿಯಾಗಿ ಬರೆಯುತ್ತೇವೆ. ಒಬ್ಬ ವ್ಯಕ್ತಿಯೇ ಬರೆದರೂ ಬುದ್ಧಿ-ಭಾವ ಎರಡೂ ಸೇರಿ ತಾನೆ ಕಾವ್ಯಸೃಷ್ಟಿಯೇ ಆಗಲಿ ಕಲಾಸೃಷ್ಟಿಯೇ ಆಗಲಿ ಆಗುವುದು.

"ಹಾಗಾದರೆ ನಿಮ್ಮಿಬ್ಬರಲ್ಲಿ ಬುದ್ಧಿ ಯಾರು, ಭಾವ ಯಾರು?" ಎಂದೂ ಕೆಲವರು ಕೇಳಿದರು. ಎಂತಹ ಬೆಪ್ಪು ಪ್ರಶ್ನೆ?

"ಅವರು ಬುದ್ಧಿಯಾದಾಗ ನಾನು ಭಾವವಾಗುತ್ತೇನೆ. ನಾನು ಬುದ್ಧಿಯಾದಾಗ ಅವರು ಭಾವವಾಗುತ್ತಾರೆ" ಎಂದು ನನ್ನ ಉತ್ತರ.

ಇದು ಚತುರೋಕ್ತಿಯಾಗಿರಲಿಲ್ಲ. ಪ್ರಾಮಾಣಿಕವಾಗಿ ವಾಸ್ತವ ಸಂಗತಿಯನ್ನು ತಿಳಿಸುವುದಷ್ಟೆ ನನಗೆ ಸಾಧ್ಯ. ನಂಬಿಸುವುದು ಹೇಗೆ? ಎಂದು ಮುಂದೆ ಮಾತನಾಡದೆ ಸುಮ್ಮನಾಗುತ್ತಿದ್ದೆ.

ನಾವು ನಾಲ್ಕು ಜನ ಸ್ನೇಹಿತರು ಆದರ್ಶತತ್ವಗಳಿಂದ ಕೂಡಿದ ಸಾರಸ ವಿಹಾರ ಪ್ರಕಾಶನವನ್ನು ಆರಂಭಮಾಡಿದಾಗ ಶಿ. ಅವರನ್ನೆ ಅದರ ಸಂಚಾಲಕರನ್ನಾಗಿ ಮಾಡಿದೆವು. ಪ್ರಾಮಾಣಿಕತೆ, ಸತ್ಯನಿಷ್ಠೆ, ಘನತೆ, ವ್ಯವಹಾರದಲ್ಲಿ ನಿರ್ದಾಕ್ಷಿಣ್ಯ—ನಿಷ್ಠುರತೆ ಈ ಎಲ್ಲವೂ ಅವರಲ್ಲಿವೆ. ಇವರೇ ಸಂಚಾಲಕರಾಗಲು ತಕ್ಕವರು ಎಂದು ನಮ್ಮೆಲ್ಲರ ಅಭಿಪ್ರಾಯ. ಹಣಕಾಸಿನ ವ್ಯವಹಾರದಲ್ಲಿ ಶಿ. ಅವರದು ಗಾಂಧೀ ಜಾತಿ. ಒಂದು ಕಾಸು ಹೆಚ್ಚು ಕಮ್ಮಿ ಆಗಬಾರದು. ಸಾಲ ಎಂದು ಹತ್ತು ಪೈಸೆ ಇಸಿದುಕೊಂಡಿದ್ದರೂ ನೆನಪಿಟ್ಟು ಹಿಂತಿರುಗಿಸುತ್ತಿದ್ದರು. ಕಷ್ಟದಲ್ಲೇ ಬೆಳೆದು ವಿದ್ಯಾಭ್ಯಾಸ ಮಾಡಿದವರು. ಎಂತಹ ಆರ್ಥಿಕ ಮುಗ್ಗಟ್ಟಿನ ಸಮಯದಲ್ಲೂ ಹಣಕ್ಕಾಗಿ ಸಣ್ಣವರಾದವರಲ್ಲ. ಎಂದೂ ಹಣಕ್ಕೆ ದುರಾಸೆಪಟ್ಟವರಲ್ಲ. ನಮ್ಮ ಪ್ರಕಾಶನದ ವ್ಯವಹಾರದ ಲೆಕ್ಕವನ್ನು ಅಚ್ಚುಕಟ್ಟಾಗಿ, ಕರೆಕ್ಟಾಗಿ ಇಟ್ಟಿದ್ದರು. ಇತರರಲ್ಲೂ ಅದೇ ಮಟ್ಟದ ಪ್ರಾಮಾಣಿಕತೆಯನ್ನೂ ವ್ಯವಹಾರ ಶುದ್ಧಿಯನ್ನೂ ನಿರೀಕ್ಷಿಸುವರು. ಈ ವಿಚಾರದಲ್ಲೂ ಅವರೂ ನಾನೂ ಏಕಾಭಿಪ್ರಾಯದವರು. ಆದರೆ ಇದೆಲ್ಲ ವ್ಯವಹಾರ ಕ್ಷೇತ್ರಕ್ಕೆ ಸೀಮಿತವಾದುದೇ ವಿನಾ ಸ್ನೇಹ-ವಿಶ್ವಾಸಗಳ ಸಂಬಂಧಕ್ಕೆ ಅನ್ವಯವಾದುದಲ್ಲ.

ತುಂಬಾ ಗಂಭೀರವಾಗಿ ಕಾಣುವ ಶಿ. ಅವರಲ್ಲಿ ಲಘು ವಿನೋದ ಶೀಲತೆಯೂ ಅಡಗಿತ್ತು. ನವುರಾದ ಹಾಸ್ಯಾಭಿರುಚಿ ಅವರ ಕೆಲವು ಕವನಗಳಲ್ಲಿ, ಚುಟುಕಗಳಲ್ಲಿ ವ್ಯಕ್ತವಾಗಿರುವುದು ಸರ್ವವಿದಿತವಾದುದು. ಅಸುರಾರೊಂದಿಗೆ ಸೇರಿ ಕೆಲವು ಚೇಷ್ಟೆಗಳನ್ನೂ ಮಾಡುತ್ತಿದ್ದುದುಂಟು. ಪ್ರಿಯ ಸ್ನೇಹಿತರಾದ ಅವರ ಪತ್ರವನ್ನು ಬಹು ಕಾತರತೆಯಿಂದ ನಿರೀಕ್ಷಿಸುತ್ತಿದ್ದ ನನಗೆ ಒಂದು ಸಲ ಬಂದ ಪತ್ರ ಪೂರ್ತಿ ಖಾಲಿ ಕಾರ್ಡು—ಕಡೆಯಲ್ಲಿ ಇಂತೀ ನಮಸ್ಕಾರಗಳು ನಿಮ್ಮ, ಎಂದು ಅವರ ಮತ್ತು ಅಸುರಾರ ರುಜು. ಕೋಪದಿಂದ ನಾನು ಉರಿದು ಬೀಳುವುದನ್ನು ಊಹಿಸಿ ಅದೆಷ್ಟು ನಕ್ಕರೊ. ಮನೆಗಳಲ್ಲಿ ಸೇರಿದಾಗ ಆಗಲಿ, ಪ್ರವಾಸದಲ್ಲೇ ಆಗಲಿ ಸ್ನೇಹಿತರ ವಿನೋದಗೋಷ್ಠಿ ಇನ್ನಷ್ಟು ಕಳೆಗಟ್ಟಲು ಅವರೂ ಕಾರಣರಾಗುತ್ತಿದ್ದರು. ನಾವೆಲ್ಲರೂ ದೇಗುಲಗಳ ದಾರಿಯಲ್ಲಿ ಹೊರಟಾಗಿನ ಸ್ವಾರಸ್ಯವಾದ ಅನುಭವಗಳನ್ನೆಲ್ಲ ಅದರ ಪ್ರವಾಸಕಥನದಲ್ಲಿ ಬರೆದಿದ್ದೇನೆ. ಐದು ಜನ ಸ್ನೇಹಿತರ ನಮ್ಮ ಬಳಗಕ್ಕೆ ಮೈಸೂರಿಗೆ ವರ್ಗವಾಗಿ ಬಂದ ಚಿದಾನಂದಮೂರ್ತಿಯೂ ಆರನೆಯವರಾಗಿ ಸೇರಿಕೊಂಡರು. ನಮ್ಮೆಲ್ಲರ ನಚ್ಚಿನ 'ಮೂರ್ತಿ' ಆದರು. ಅಸುರಾ

ಅಮೆರಿಕೆಗೆ ಉನ್ನತ ವ್ಯಾಸಂಗಕ್ಕೆ ಹೋದಾಗ ಯಥಾರೀತಿ ನಾವು ಐದು ಜನ ಗೆಳೆಯರ ಗುಂಪಾಗೇ ಉಳಿದೆವು.

ನನ್ನ ಹಾಗೇ ಶಿ. ಸ್ನೇಹಜೀವಿಗಳು. ಅದೇ ಪುಷ್ಟಿ ಅದೇ ತುಷ್ಟಿ ಎಂದು ಸ್ನೇಹಸುಧೆಯನ್ನೇ ಪಾನ ಮಾಡುತ್ತಾ ಬೆಳೆದವರು. ಸ್ನೇಹಿತರು ಎಂದರೆ ಲೋಕವನ್ನೇ ಮರೆಯುವರು. ನಿತ್ಯವೂ ಸಂಜೆ ಮನೆಯ ಕೆಲಸಕಾರ್ಯಗಳಿಗೂ ಅವರನ್ನು ಬಿಡದೆ ನಮ್ಮೊಡನೆ ಕರೆದುಕೊಂಡು ಹೋಗುತ್ತಿದ್ದುದರಿಂದ ಅವರ ಶ್ರೀಮತಿಯವರಿಗೆ ನಮ್ಮ ಮೇಲೆಷ್ಟು ಕೋಪ, ಅಸಮಾಧಾನಗಳಾಗುತ್ತಿದ್ದುವೊ ಏನೊ. ಒಂದೊಂದು ದಿನ ನಮ್ಮೊಡನೆ ಬರುವ ಆಸೆಯನ್ನು ಪ್ರಯತ್ನಪೂರ್ವಕವಾಗಿಯೆ ಅದುಮಿಟ್ಟು, 'ಇವತ್ತು ನಾನು ಬರೋದಿಲ್ಲ. ಮಕ್ಕಳ ಜೊತೇಲಿ ಸ್ವಲ್ಪ ಕಾಲ ಕಳೆಯೋಣ ಅನ್ನಿಸಿದೆ' ಎನ್ನುವರು.' ಸರಿ. ಆದರೆ ಹಾಗೆ ಹೇಳುವಾಗ ಮುಖ ಏಕೆ ಊದಿಸಿಕೊಳ್ಳಬೇಕು? ನಮಗೆ ಒಳಗೊಳಗೇ ನಗು. ಅವರ ಪೇಚಾಟವನ್ನು ಗ್ರಹಿಸಿ ನಾವೇನಾದರೂ ಪ್ರಬಲವಾದ ಕಾರಣ ಹೇಳಿ ಅವರನ್ನು ಒತ್ತಾಯ ಮಾಡಬಹುದೇನೊ ಎಂದು ಒಂದು ಆಂತರಿಕ ಆಸೆ ಅವರಲ್ಲಿ ಹುದುಗಿದ್ದುದು ನಮಗೆ ತಿಳಿಯದೇ. ಆದರೂ ನಾವು ಬೇಕೆಂದೇ 'ಸರಿ. ನೀವು ಹಾಗೇ ಮಾಡಿ' ಎಂದು ಹೊರಟಾಗ ಅವರಿಗೆಷ್ಟು ನಿರಾಸೆಯಾಗುತ್ತಿತ್ತೊ.

ಹೆಂಡತಿಗೆ ಪತಿಯ ಆಪ್ತಸ್ನೇಹಿತರನ್ನು ಕಂಡರೆ ಮತ್ಸರ ಎಂದು ಸಂಸ್ಕೃತದಲ್ಲಿ ಒಂದು ಲೋಕೋಕ್ತಿ ಇದೆ. ಆದರೆ ಶಿ. ಅವರ ಪತ್ನಿ ಈ ವಿಚಾರದಲ್ಲಿ ನಮ್ಮ ಬಗ್ಗೆ ಬಹಳ ಉದಾರವಾಗಿ ನಡೆದುಕೊಂಡಿದ್ದಾರೆ. ನಾವು ಅವರ ಪ್ರೀತಿಯ ಪತಿಗೆ ತುಂಬ ಬೇಕಾದವರೆಂದು ಮನೆಗೆ ಹೋದಾಗಲೆಲ್ಲ ಅಕ್ಕರೆಯಿಂದ ಊಟ, ತಿಂಡಿ, ಸೊಗಸಾದ ಕಾಫಿ ಸಮಯಾನುಸಾರ ಕೊಟ್ಟು ಉಪಚರಿಸುತ್ತಾರೆ.

ನಾವು ಆರು ಜನ ಸ್ನೇಹಿತರಲ್ಲಿ ಶಿ. ಅವರನ್ನುಳಿದು ಉಳಿದೆಲ್ಲರೂ ಬ್ರಹ್ಮಚಾರಿಗಳಾಗಿದ್ದ ಕಾಲದಲ್ಲಿ ಅಸುರಾ ನಮ್ಮನ್ನು (ತಮ್ಮನ್ನೂ ಸೇರಿಸಿಕೊಂಡು) ಜವಾಬ್ದಾರಿ (ಲಂಗು ಲಗಾಮು) ಇಲ್ಲದೆ ತಿರುಗುವ ಉಂಡಾಡಿಗಳೆಂದು ಕರೆಯುತಿದ್ದರು. ನಾವು ಶಿ. ಅವರ ಪತ್ನಿ ತೌರಿಗೆ ಹೋಗುವುದನ್ನೇ ಕಾಯುತ್ತಿದ್ದು ಅವರು ಹೊರಟ ಮಾರನೆ ದಿನವೇ ಸ್ತ್ರೀಹಸ್ತಕ್ಷೇಪವಿಲ್ಲದ ಅಡಿಗೆ ಕಾರ್ಯಕ್ರಮವನ್ನು ಅವರ ಮನೆಯಲ್ಲಿ ಏರ್ಪಾಟು ಮಾಡುತ್ತಿದ್ದೆವು. ಅಸುರಾರಿಗೆ ಮದುವೆ ಗೊತ್ತಾದಾಗ ಅವರ ಸ್ವಾತಂತ್ರ್ಯದ ಕೊನೆಯ ದಿನ ಎಂದು ಇಂತಹ ಒಂದು ಕಾರ್ಯಕ್ರಮದಲ್ಲಿ ಔತಣವನ್ನೇ ಏರ್ಪಡಿಸಿದೆವು. ಶಿ. ಅವರ ಪತ್ನಿ–ಮಕ್ಕಳು ಊರಿಗೆ ಹೋಗಿದ್ದುದರಿಂದ ಇಡೀ ಮನೆ ನಮ್ಮದಾಗಿತ್ತು. ನಮ್ಮ ಗಲಾಟೆ, ಸಂಭ್ರಮದ ಓಡಾಟಗಳಿಗೆ ಮಿತಿಯೇ ಇಲ್ಲ. ನನ್ನ ಹೊರತು ಉಳಿದವರೆಲ್ಲ ಪಾಕಕಲೆಯಲ್ಲಿ ಸಿದ್ಧಹಸ್ತರು. ಸಿಹಿ ಭಕ್ಷ್ಯದ ಪರಿಣತರು ಒಬ್ಬರು. ತಿಳಿಸಾರಿನ ಪರಿಣತರು ಒಬ್ಬರು. ಹೀಗೆ ಎಲ್ಲರೂ ಐಟಮ್‌ಗಳನ್ನೆಲ್ಲ ಹಂಚಿಕೊಂಡು ನನಗೆ ಕೋಸುಂಬರಿ ಮಾಡುವ ಸುಲಭ ಕೆಲಸವನ್ನು ಮಾತ್ರ ವಹಿಸುತ್ತಿದ್ದರು. ಅದರಲ್ಲೂ ಕೈಬಾಯಿ ಹಾಕುತ್ತಿದ್ದುದೂ ಉಂಟು.

ಈಗ ಅದೆಲ್ಲ ದಂತಕಥೆ ಆಗಿಬಿಟ್ಟಿದೆ. ಎಲ್ಲರಿಗೂ ಮದುವೆಯಾಗಿ ನಮ್ಮ ನಮ್ಮ ಸಂಸಾರ ತಾಪತ್ರಯಗಳಲ್ಲಿ ಮುಳುಗಿದ್ದೇವೆ. ಅವೆಂ.ರಂತೂ ಅಮೆರಿಕೆಗೆ ಉನ್ನತ ವ್ಯಾಸಂಗಕ್ಕೆಂದು ಹೋದವರು ಪಿಎಚ್.ಡಿ. ಪಡೆದು ಇನ್ನೇನು ಭಾರತಕ್ಕೆ ಹಿಂತಿರುಗ ಬೇಕೆನ್ನುತ್ತಿರುವಾಗ ತಮ್ಮ ಬಾಳನ್ನೆ ತ್ಯಾಗದ ಅಮರತೆಗೆ ವಿನಿಮಯಮಾಡಿ ಮುಗಿಸಿ ಬಿಟ್ಟರು. ಅತೀವ ವ್ಯಥೆಯಲ್ಲಿ ಅವರ ಧವಳಕೀರ್ತಿಯ ಧ್ವಜವನ್ನು ನೆಟ್ಟು ನಾವು ಕೂತೆವು.

ಪ್ರೀತಿಯ ಅಣ್ಣತಮ್ಮಂದಿರಿಬ್ಬರು ಕಿರಿಯಂದು ತಮ್ಮ ಮನೆಯಂಗಳದಲ್ಲಿ ನೆಟ್ಟು ನೀರೆರೆಯುತ್ತಿದ್ದ ಸಸಿ ಬೆಳೆದು ದೊಡ್ಡ ಮರವಾಗಿ ನಿಂತಿತು. ನಿತ್ಯ ತಪ್ಪದೆ ಅದಕ್ಕೆ ಪಾತಿ ಮಾಡಿ ನೀರು ಹಾಕುವ ಸಂತೋಷದಲ್ಲಿ ಪಾಲುಗೊಳ್ಳುತ್ತಿದ್ದ ಅಣ್ಣತಮ್ಮಂದಿರೂ ಬೆಳೆದು ದೊಡ್ಡವರಾದರು. ಬೇರೆ ಬೇರೆ ಗಾಣಗಳಿಗೆ ಕಟ್ಟಿದ ಎತ್ತುಗಳಾಗಿ ತಮ್ಮ ಕರ್ಮದ ಪರಿವೃತ್ತದಲ್ಲೇ ಸುತ್ತುವುದರಲ್ಲಿ ಅವರ ಕಾಲವೆಲ್ಲ ಕಳೆಯಿತು. ಆ ಮರದ ನೆರಳಲ್ಲಿ ಎರಡು ನಿಮಿಷ ನಿಂತು ಮಾತಾಡಲೂ ಪುರುಸೊತ್ತಿಲ್ಲವಾಯಿತು. ಆದರೇನು ಮರ ಎಷ್ಟಾದರೂ ನಮ್ಮದು, ಮನೆಯಂಗಳದಿಂದ ಎಲ್ಲೂ ಓಡಿ ಹೋಗದಲ್ಲ, ಸಮಯ ವಾದರೆ ಅದರ ನೆರಳ ತಂಪಿನಲ್ಲಿ ಸೇರುತ್ತೇವೆ. ಬೆಳೆದು ನಿಂತ ಮರದ ವರ್ಣವೈಪುಲ್ಯ ವನ್ನು ನೋಡಿ ಆನಂದಿಸುತ್ತೇವೆ ಎಂದು ಇಬ್ಬರ ಮನಸ್ಸಿನಲ್ಲೂ ಒಂದು ಭರವಸೆ. ಅಲ್ಲಿಯ ವರೆಗೂ ಬರೀ ಕಾಯುವುದಷ್ಟೇ ಏಕೆ ಎಂದೆಂದೂ ನಿಂತಿರಬಲ್ಲ ಸ್ನೇಹವೃಕ್ಷ ಅದು. ಉಳಿದೆಲ್ಲ ದೃಶ್ಯಗಳೂ ಬದಲಾಗಬಹುದು. ಸ್ನೇಹದ ಹಾಡು ಮಾತ್ರ ಚಿರಂತನವಾದುದು. ಅದಕ್ಕೆ ಮೊದಲಿಲ್ಲ, ಕೊನೆಯಿಲ್ಲ. ಅದಿಲ್ಲದೆ ಬಾಳೇ ಇಲ್ಲ.



ನ. ಸುಬ್ರಹ್ಮಣ್ಯಂ

# ಸಹಾಧ್ಯಾಯಿ ಹಾಗೂ ಸನ್ಮಿತ್ರ ಜಿ.ಎಸ್.ಎಸ್.

ಚಂದನವ ಕಡಿದು ಕೊರೆದು ತೇದಡೆ
  ನೊಂದೆನೆಂದು ಕಂಪ ಬಿಟ್ಟಿತ್ತೆ ?
..............................
ಸಂದು ಸಂದನು ಕಡಿದ ಕಬ್ಬನು ತಂದು
  ಗಾಣದಲ್ಲಿಕ್ಕಿ ಅರೆದಡೆ
ಬೆಂದು ಪಾಕಾಗುಳ್ಳ ಸಕ್ಕರೆಯಾಗಿ
  ನೊಂದೆನೆಂದು ಸಿಹಿಯ ಬಿಟ್ಟಿತ್ತೆ ?
..............................

ಒಂದು ಪಾಳು ದೇವಾಲಯ. ಅದರ ಗೋಡೆಯ ಬಿರುಕಿನಲ್ಲಿ ಅರಳಿಹಣ್ಣಿನ ಸೂಕ್ಷ್ಮ ವಾದ ಬೀಜ ಯಾವಾಗ ಹೇಗೆ ಬಂದು ಸೇರಿತೋ ? ಮಳೆ ಬಂದಾಗ ಚಿಗುರೊಡೆಯಿತು, ನಾಲ್ಕು ಎಲೆಯಾಯಿತು. ಗಾಳಿಯೊಡನೆ ಲಾಸ್ಯವಾಡುತ್ತಾ ಬೆಳೆಯಿತು. ಅದಕ್ಕೆ ಪಾತಿ ಮಾಡಿ, ನೀರೆರೆದು, ಗೊಬ್ಬರಹಾಕಿ, ಬೇಲಿ ಕಟ್ಟಿ ಬೆಳೆಸುವುದಕ್ಕೆ ಯಾರೂ ಬರಲಿಲ್ಲ. ಅದಕ್ಕೆ ಗೋಡೆಯ ಮಣ್ಣೇ ಆಸರೆ. ಮಳೆಯ ನೀರೇ ಪೋಷಣೆ. ಗಿಡ ತಾನಾಗಿ ಮೇಲು ಮೇಲಕ್ಕೆ ಬೆಳೆಯಿತು. ನಡುವೆ ಒಂದೆರಡು ಸಲ ಮೇಕೆಗಳು ಚಿಗುರಿಗೆ ಬಾಯಿ ಹಾಕಿದ್ದೂ ಉಂಟು. ಆದರೂ ಗೋಡೆಯೊಳಕ್ಕೆ ಬೇರು ಆಳವಾಗಿ ಇಳಿಯಿತು. ಕಾಂಡ ಬಲಿಯಿತು. ಗೋಡೆ ಬಿರಿಯಿತು. ಗಿಡ ತಾನೇತಾನಾಗಿ ತಲೆಯೆತ್ತಿ ನಿಂತು ಎಂಟು ದಿಕ್ಕುಗಳಿಗೂ ತನ್ನ ರೆಂಬೆಗಳನ್ನು ಪಸರಿಸಿತು! ಡಾಕ್ಟರ್ ಜಿ.ಎಸ್.ಎಸ್.ರವರ ಬಾಳನ್ನು ಪರಿ ಭಾವಿಸಿದಾಗ ನನಗೆ ಇದರ ನೆನಪು ಬರುತ್ತೆ.

ಜಿ.ಎಸ್.ಎಸ್. ಅವರದು ಹೋರಾಟದ ಬದುಕು. ಹುಟ್ಟುತ್ತ ಚಿನ್ನದ ಚಮಚ ವನ್ನೇನೂ ಬಾಯಲ್ಲಿ ಇಟ್ಟುಕೊಂಡು ಬರಲಿಲ್ಲ. ಶಾಲಾ ಅಧ್ಯಾಪಕನ ಮನೆ. ಪ್ರಪಂಚಕ್ಕೆ ಕಣ್ಣುತೆರೆಯುವ ವೇಳೆಗೆ ತಾಯ ಮಮತೆಯನ್ನು ಕಳೆದುಕೊಂಡ ತಬ್ಬಲಿ. ಮಲತಾಯಿ ಪೋಷಣೆ. ದೊಡ್ಡ ಸಂಸಾರ. ಕೊರಟಗೆರೆಯ ಸಮೀಪದ ಒಂದು ಗ್ರಾಮದಲ್ಲಿ ಬಾಲ್ಯ ವಿದ್ಯಾಭ್ಯಾಸವನ್ನು ಕಳೆದರು. ಗುಬ್ಬಿಯಲ್ಲಿ ಸೆಕೆಂಡರಿ ಶಾಲೆಯ ಶಿಕ್ಷಣವನ್ನು ಮುಗಿ ಸುವ ವೇಳೆಗೆ, ಈ ಹಿರಿಯ ಮಗನೂ ಸಂಪಾದಿಸಿದರೆ ಸಂಸಾರಕ್ಕೆ ಸಹಾಯವಾದೀತೆಂದು ತಂದೆಯ ಚಿಂತೆ. ೧೬ನೇ ವರ್ಷಕ್ಕೇ ಮಗನಿಗೊಂದು ಕೆಲಸ ಕೊಡಿಸಲು ಯತ್ನಿಸಿದರು.

ಬೆಂಗಳೂರು ಮುನಿಸಿಪಾಲಿಟಿಯಲ್ಲಿ 'ಹಣವಸೂಲಿ ಗುಮಾಸ್ತೆ'ಯ ಕೆಲಸಕ್ಕೆ ಆಹ್ವಾನ ಬಂದಿತ್ತು. ಅಧಿಕಾರಿಗಳು ಹುಡುಗನನ್ನು ಸಂದರ್ಶಿಸಿದರು. ಎದುರಿಗೆ ಬಂದು ನಿಂತ ಬಡಕಲು ದೇಹದ ನೋಟದ ಹುಡುಗನನ್ನು ನೋಡಿ ಅವರಿಗೆ ನಗೆ ಬಂತು. ಹೊರಗಿದ್ದ ತಂದೆಯನ್ನು ಒಳಕ್ಕೆ ಕರೆಸಿ ಅಧ್ಯಾಪಕರಾಗಿದ್ದ ಅವರಿಗೆ ಮಗನಿಗೆ ವಿದ್ಯಾಭ್ಯಾಸ ಕೊಡಿಸುವಂತೆ ಬುದ್ಧಿವಾದ ಹೇಳಿ ಹಿಂದಕ್ಕಟ್ಟಿದರು! ಸರಿ, ಮುಂದುವರಿಯಿತು ವಿದ್ಯಾಭ್ಯಾಸ ತುಮಕೂರಿನ ಇಂಟರ್‌ಮೀಡಿಯೇಟ್ ಕಾಲೇಜಿನಲ್ಲಿ. ಸಿದ್ಧಗಂಗೆಯ ಮಠದಲ್ಲಿ ಉಚಿತ ಅಶನ ವಸತಿ. "ವಿದ್ಯಾತುರಾಣಾಂ ನ ಸುಖಂ ನ ನಿದ್ರಾ" ಎಂದು ನಿಗದಿ ಮಾಡಿಯೇ ಇದ್ದಾರಲ್ಲ! ಅಂತು ಶ್ರಮದ ಜೀವನ ನಡೆಸಿ ಎರಡು ವರ್ಷಗಳ ಗಡುವನ್ನು ದಾಟಿದ. ಮತ್ತೆ, ಮಗನಿಗೆ ಒಂದು ಸರ್ಕಾರಿ ಕೆಲಸವನ್ನು ಕೊಡಿಸುವ ಚಿಂತೆ ತಂದೆಗೆ. ಸಂಸಾರದ ಹೊರೆಯನ್ನು ಅವನ ಹೆಗಲಿಗಷ್ಟು ಹೊರಿಸಬಹುದಲ್ಲ ಎಂದು ಅವರ ಯೋಚನೆ. ಎರಡು ವರ್ಷಗಳ ನಡುವಿನ ಬೇಸಗೆ ರಜದಲ್ಲೂ ತಾತ್ಕಾಲಿಕ ಚಾಕರಿಯೊಂದನ್ನು ಮಾಡಿ ಸ್ವಲ್ಪ ಹಣ ಸಂಪಾದಿಸಿ ತಂದಿದ್ದ! ಇನ್ನು ಓದನ್ನು ಮುಂದುವರಿಸಬೇಕಾದರೆ ಮೈಸೂರಿಗೆ ಹೋಗಬೇಕು, ಎರಡೋ ಮೂರೋ ವರ್ಷ ಕಾಯಬೇಕು. ಕಾಯುವುದೂ ಇರಲಿ, ವಿದ್ಯಾಭ್ಯಾಸಕ್ಕೆ ಖರ್ಚು? ಎಲ್ಲಿಂದ ತರುವುದು? ಆದ್ದರಿಂದ ಕೆಲಸಕ್ಕೆ ಹೋಗಬೇಕೆಂದೇ ತಂದೆಯ ನಿರ್ಧಾರವಾಯಿತು. ಗುಬ್ಬಿಯಲ್ಲಿ ಶಾಲೆಯ ಮುಖ್ಯಾಧ್ಯಾಪಕರಾಗಿದ್ದ ತಂದೆ ಅಲ್ಲಿನ ಅಮಲ್ದಾರರನ್ನು ಬೇಡಿ ಮಗನಿಗೆ ಒಂದು ಗುಮಾಸ್ತೆಯ ಕೆಲಸ ದೊರಕಿಸಿಕೊಟ್ಟರು. ಹೊಸ ನೌಕರನೆಂದರೆ ಮೇಲಿನವರೆಲ್ಲ ದರ್ಬಾರು ನಡೆಸುವವರೇ! ಆದರೆ ಹುಡುಗ ಏನು ಕೆಲಸ ಕೊಟ್ಟರೂ ಅಚ್ಚುಕಟ್ಟಾಗಿ ಶ್ರದ್ಧೆಯಿಂದ ನಿರ್ವಹಿಸುತ್ತಿದ್ದ. ಅದನ್ನು ನೋಡಿ ಮೇಲಧಿಕಾರಿಗೆ ತುಂಬ ಮೆಚ್ಚಿಕೆಯಾಯಿತು. ಪರಿಣಾಮವಾಗಿ ಕೆಲವೇ ದಿನಗಳಲ್ಲಿ ಕೆಲಸ ಖಾಯಂ ಆಯಿತು.

ಆಗ ಎರಡನೆಯ ಮಹಾಯುದ್ಧ ನಡೆದ ಕಾಲ ಯುದ್ಧ ಅದೇ ತಾನೇ ಕೊನೆಗೊಂಡಿದ್ದರೂ ಯುದ್ಧದ ಬಿಸಿ ಭಾರತೀಯ ಸಮಾಜದ ಮೇಲೆ ಇನ್ನೂ ತೀವ್ರವಾಗಿತ್ತು. ಎಲ್ಲೆಲ್ಲೂ ಆಹಾರಾಭಾವ. ಪಡಿತರ ಪದ್ಧತಿ ಜಾರಿಯಲ್ಲಿತ್ತು. ಸರ್ಕಾರದ ಆಹಾರ ಇಲಾಖೆಯೇ ಮುಖ್ಯ ಆಹಾರ ವಸ್ತುಗಳ ವಿತರಣೆಯ ಕಾರ್ಯವನ್ನು ಕೈಗೊಂಡಿತ್ತು. ಈ ಹೊಸ ನೌಕರನ ಕಾರ್ಯದಕ್ಷತೆಯನ್ನೂ ವಿಚಕ್ಷಣತೆಯನ್ನೂ ಗಮನಿಸಿದ ಅಧಿಕಾರಿಗಳು ಆತನನ್ನು ಆಹಾರದ ಇಲಾಖೆಗೆ ವರ್ಗಾಯಿಸಿದರು.

ಒರೆಹಚ್ಚಿದಾಗಲೇ ಚಿನ್ನದ ಗುಣ ತಿಳಿಯುವುದು, ಪರೀಕ್ಷೆಗೆ ಒಡ್ಡಿದಾಗಲೇ ಮನುಷ್ಯನ ಗುಣ ತಿಳಿಯುವುದು!

ಜೇನುತುಪ್ಪ ಅಳೆಯುವಾಗ ಸಾಮಾನ್ಯವಾಗಿ ಕೈಗೆ ಅಂಟಿಯೇ ಅಂಟುತ್ತೆ. ಹಾಗೆ ಅಂಟಿದ ಜೇನುತುಪ್ಪವನ್ನು ನೆಕ್ಕಿ ಕೈ ತೊಳೆದುಕೊಳ್ಳುವುದು ಬುದ್ಧಿವಂತತನ. ಕೈಗೂ ಬಗ್ಗಿಸಿಕೊಂಡು ನೆಕ್ಕಿ ಕೈತೊಳೆದುಕೊಳ್ಳುವುದು ಇನ್ನೂ ಹೆಚ್ಚು ಬುದ್ಧಿವಂತತನ! ಅಂಥವರನ್ನು Worldly-wise ಎನ್ನುತ್ತೇವೆ. ಅದು 'ಬದುಕುವವರ ಲಕ್ಷಣ!' ಆದರೆ

ಕೈ ಅಂಟುಮಾಡಿಕೊಳ್ಳದೆಯೇ ಆಳಿಯುವವರೂ ಇರುತ್ತಾರೆ. ಅಂತಹವರಿಗೆ ಕೈನೆಕ್ಕುವ ಪ್ರಮೇಯವೂ ಇಲ್ಲ. ಹಾಗೇ ಕೈತೊಳೆದುಕೊಳ್ಳಬೇಕಾದ ಪ್ರಸಕ್ತಿಯೂ ಇಲ್ಲ.

ಕೆಲವು ಬರಡು ಇಲಾಖೆಗಳಿರುತ್ತವೆ. “ಕಬ್ಬಿಣದ ಅಂಗಡಿಯಲ್ಲಿ ನೊಣಕ್ಕೇನು ಕೆಲಸ” ಎಂಬಂತೆ ಅಲ್ಲಿ ಲಂಚ ಕೊಡುವವರೂ ಇಲ್ಲ ಕೇಳುವವರೂ ಇಲ್ಲ! ಆದರೆ ಕೆಲವು ಹುಲುಸು ಇಲಾಖೆಗಳಿರುತ್ತವೆ. ಅಲ್ಲಿ ಲಂಚ ಕೇಳಿ ತೆಗೆದುಕೊಳ್ಳುವುದಿಲ್ಲ. ಕೇಳುವುದು ಅವಮಾನ! ಜನ ತಾವಾಗಿಯೇ ಹುಡುಕಿಕೊಂಡು ಬಂದು ಕೊಡುವುದು ಸಂಪ್ರದಾಯ. ಅಂತಹ ಇಲಾಖೆಗಳಲ್ಲಿ ಆಹಾರದ ಇಲಾಖೆಯೂ ಒಂದು. ಅದೂ ಯುದ್ಧೋತ್ತರದ ಅಭಾವಕಾಲದಲ್ಲಿ!

ಕಾಲಿದಾಸ ಹೇಳುತ್ತಾನೆ—

ಲಭೇತ ವಾ ಪ್ರಾರ್ಥಯಿತಾ ನ ವಾ ಶ್ರಿಯಂ
ಶ್ರಿಯಾ ದುರಾಪಃ ಕಥಮೀಪ್ಸಿತೋ ಭವೇತ್

ಹಾಗೆ ನಾವೇ ಹುಡುಕಿಕೊಂಡು ಹೊರಟರೆ ಲಕ್ಷ್ಮಿ ಸಿಗಬಹುದು ಅಥವಾ ಸಿಗದಿರಬಹುದು. ಆದರೆ ಲಕ್ಷ್ಮಿಯೇ ನಮ್ಮನ್ನು ಹುಡುಕಿಕೊಂಡು ಬಂದು ಬಾಗಿಲು ತಟ್ಟಿದರೆ?

ಲಕ್ಷ್ಮಿ ಬಂದು ಜಿ.ಎಸ್.ಎಸ್.ರ ಮನೆಯ ಬಾಗಿಲು ತಟ್ಟಿದಳು. ಆದರೆ ಅವರು ಬಾಗಿಲು ತೆರೆಯಲೂ ಇಲ್ಲ. ಲಕ್ಷ್ಮಿಯನ್ನು ಒಳಕ್ಕೆ ಸ್ವಾಗತಿಸಲೂ ಇಲ್ಲ. ಸ್ವಾಗತಿಸಿದ್ದಿದ್ದರೆ?....ಇಂದಿನ ಜಿ. ಎಸ್. ಎಸ್. ಇರುತ್ತಿರಲಿಲ್ಲ!

ಒಂದು ಪಲ್ಲ ಅಕ್ಕಿಯ ಮೂಟೆಯಲ್ಲಿ ಕರಾರುವಾಕ್ಕಾಗಿ ೧೦೦ ಸೇರು ಮಾತ್ರವೇ ಇರುವುದಲ್ಲ. ಮತ್ತೆ ಮತ್ತೆ ಅಳೆಯುವಾಗ ಕೊರೆಬಿದ್ದೀತೆಂಬ ಕಾರಣದಿಂದ ನಾಲ್ಕೈದು ಸೇರು ಹೆಚ್ಚಾಗಿ ಹಾಕುವುದು ಸಂಪ್ರದಾಯ. ಅದು ಸಾಮಾನ್ಯವಾಗಿ ಚಿಲ್ಲರೆ ವ್ಯಾಪಾರಿಗಳಿಗೆ ಲಾಭಾಂಶ. ಸಹಕಾರಸಂಘಗಳಲ್ಲಿ ಲೆಕ್ಕಕ್ಕೆ ಆ ಭಾಗವನ್ನು ತಮ್ಮ ಸ್ವಂತಕ್ಕೆ ಉಪಯೋಗಿಸಿಕೊಳ್ಳುತ್ತಿದ್ದರು. ಆದರೆ ಈ ಮಹಾನುಭಾವ ಆ ಹೆಚ್ಚಿನ ಅಕ್ಕಿಯನ್ನೆಲ್ಲ ಸಂಗ್ರಹಿಸಿ ರಜೆಯ ದಿನ ದೀನದಲಿತರನ್ನೆಲ್ಲ ಸಾಲಾಗಿ ಕೂರಿಸಿ ಹಂಚಿಸಿಬಿಡುತ್ತಿದ್ದರು!

ಬಗೆಬಗೆಯಾಗಿ ಲಂಚದ ಆಮಿಷವನ್ನು ತೋರಿಸಿದ ಸಂಗತಿಯನ್ನೆಲ್ಲ ನೆನಪುಮಾಡಿಕೊಂಡು ನನ್ನೊಡನೆ ಹೇಳಿದ ವಿಷಯಗಳು ಮಸುಕುಮಸುಕಾಗಿ ನೆನಪಿದೆ. ಆ ಅನುಭವಗಳನ್ನೇ ಆಧರಿಸಿ ಅವರು ‘ಚಕ್ರವ್ಯೂಹ’ ಎಂಬ ಸ್ವಾರಸ್ಯವಾದ ಕಿರುಕಾದಂಬರಿಯನ್ನು ಬರೆದು ಅದನ್ನು ನನಗೂ ಓದಿಸಿದ್ದರು. ಪ್ರಕಟನೆಗೆ ಕೊಡಲಿಲ್ಲ. ಪ್ರಾಸಂಗಿಕವಾಗಿ ಅವರ ಬಗ್ಗೆ ಈಚೆಗೆ ನೆನಪಿಸಿದಾಗ “ಯಾರೋ ಓದಿಕೊಡುವುದಾಗಿ ತೆಗೆದುಕೊಂಡು ಹೋದವರು ಮತ್ತೆ ತಂದುಕೊಡಲೇ ಇಲ್ಲ” ಎಂದು ಪೇಚಾಡಿಕೊಂಡರು. ಆ ‘ಅನುಭವದ ಭಂಡಾರ’ ಈಗ ಕೈಗೆ ಸಿಕ್ಕಿದ್ದರೆ ಒಂದು ಬೃಹತ್ಕಾದಂಬರಿ ಕನ್ನಡ ಲೋಕಕ್ಕೆ ದೊರೆಯುತ್ತಿತ್ತೇನೋ!

“ರೋಮನ್ ರಾಜ್ಯದಲ್ಲಿ ಒಬ್ಬ ರೋಮಕನಂತೆಯೇ ಇರು” ಎಂಬುದೊಂದು

ಸಾಮಾನ್ಯ ನೀತಿ. ಹುಚ್ಚರ ರಾಜ್ಯದಲ್ಲಿ ಹುಚ್ಚರಂತೆಯೇ ಇರಬೇಕು! ಈತ ಇಲಾಖೆಯಲ್ಲಿ ಇತರರಂತೆ ಇಲ್ಲದಿದ್ದರೆ ಹೊಂದಿಕೊಂಡು ಉಳಿಯುವುದಕ್ಕೆ ಸಾಧ್ಯವೆ? ಏನೋ ಅಸಂದರ್ಭ ಬಂತು. ಒಂದು ದಿನದ ರಜೆಗೆ ಬರೆದುಕೊಂಡರು. ಮೇಲಧಿಕಾರಿ ಕರೆಸಿ ರಜೆ ಕೊಡುವುದಕ್ಕೆ ಸಾಧ್ಯವಿಲ್ಲ ಎಂದ. ಇವರು ಸಂದರ್ಭವನ್ನು ವಿವರಿಸಿ ಅನಿವಾರ್ಯವಾಗಿ ಬೇಕೇಬೇಕು ಎಂದರು. ಆತ ಅಸಹನೆಯಿಂದ ರಜೆಯನ್ನು ನಿರಾಕರಿಸಿ "ಬೇಕಿದ್ದರೆ ಕೆಲಸ ಬಿಟ್ಟು ಹೋಗಿ" ಎಂದ. ಸ್ವಾಭಿಮಾನಿಯಾದ ಇವರು ತತ್‌ಕ್ಷಣ ಬಂದುದೇ ಒಂದು ರಾಜೀನಾಮೆ ಪತ್ರವನ್ನು ಬರೆದು ಅವರ ಟೇಬಲಿನ ಮೇಲಿಟ್ಟು ಸೀದಾ ಮನೆಗೆ ನಡೆದರು!

ಆ ಇಲಾಖೆಯಲ್ಲಿ ಹಾಗೆಯೇ ಮುಂದುವರಿದಿದ್ದಿದ್ದರೆ ಇಂದಿಗೆ ಒಬ್ಬ ರೆವಿನ್ಯೂ ಇನ್ಸ್‌ಪೆಕ್ಟರೋ ತಹಶೀಲ್ದಾರೋ ಆಗಿರುತ್ತಿದ್ದರೆಂದು ಕಾಣುತ್ತೆ!

'ಮುಕ್ತಿರಾಹು' ನಮ್ಮನ್ನು ಹಿಡಿದು ಮುಕ್ತಿಗೆ ಒಯ್ಯಲೆಂದು ಕೈನೀಡಿ ಬರುತ್ತಿದ್ದರೆ ನಾವದನ್ನು, ನಮಗರಿವಿಲ್ಲದೆ, ನಮ್ಮ ವಿನಾಶಕ್ಕಾಗಿ ಬೆನ್ನಟ್ಟಿ ಬರುತ್ತಿರುವ ಭೂತ ಎಂದು ಪರಿಗಣಿಸುತ್ತೇವೆ! ಇದ್ದ ಕೆಲಸವನ್ನು ಇಷ್ಟು ಸುಲಭವಾಗಿ ಕಳೆದುಕೊಳ್ಳುವುದು ಎಂತಹ ಮೂರ್ಖತನ ಎಂದು ಆ ತಂದೆಗನ್ನಿಸಿದ್ದಿರಬೇಕು! ಆದರೆ ಅಂದಿನ ದುಃಖವೇ ಇಂದಿನ ಶ್ರೇಯಸ್ಸಿಗೆ ಕಾರಣವೆಂದು ಅಂದೇನು ತಿಳಿದಿತ್ತು?

ಓದನ್ನು ಮುಂದುವರಿಸುವ ಧೈರ್ಯಮಾಡಿ ಜಿ.ಎಸ್.ಎಸ್. ಮೈಸೂರಿಗೆ ಬಂದು ಮಹಾರಾಜಾ ಕಾಲೇಜಿನಲ್ಲಿ ಕನ್ನಡ ಆನರ್ಸ್ ತರಗತಿಗೆ ಸೇರಿದರು. ಅದೇನೋ ಆಯಿತು, ಆದರೆ ಅಶನ ವಸತಿಗಳಿಗೇನು ಮಾಡುವುದು? ಸದ್ಯಕ್ಕೆ ಗೀತಾರೋಡಿನಲ್ಲಿ ಗೆಳೆಯರೊಡನೆ ಒಂದು ಕೋಣೆ ಹಿಡಿದದ್ದಾಯಿತು. ಅಶನಕ್ಕೆ ಸುತ್ತೂರು ಸ್ವಾಮಿಗಳ ಅನುಗ್ರಹ. ಆದರೆ ಚಾಮುಂಡಿಬೆಟ್ಟದ ಕಿಬ್ಬಿಯಲ್ಲಿರುವ ಮಠಕ್ಕೆ ಹೋಗಿಬರಬೇಕು ಎರಡು ಹೊತ್ತೂ!

ಕೆಲವು ದಿನ ಕಳೆದು ವಸತಿ ಸರಿಬೀಳದೆ ಡಿ. ಸುಬ್ಬಯ್ಯ ರೋಡಿನಲ್ಲಿ ಒಂದು ಕೋಣೆ ತೆಗೆದುಕೊಂಡರು. ಅಲ್ಲಿ ಅವರೊಮ್ಮೆ ಎಣ್ಣೆ ಮಜ್ಜನ ಮಾಡಿದ ವೈಖರಿಯನ್ನು ನೋಡಬೇಕು! ಅವರೊಡನೆ ಇನ್ನಿಬ್ಬರು ಗೆಳೆಯರು ಅದೇ ಕೋಣೆಯಲ್ಲಿದ್ದರು. ಒಂದು ರಜೆಯ ದಿನ ಎಣ್ಣೆಮಜ್ಜನ ಏಕೆ ಮಾಡಬಾರದು ಎಂದು ಗೆಳೆಯರು ಆಲೋಚಿಸಿದರು. ತಮಗೆ ಅನುಕೂಲತೆಗಳಿಲ್ಲದಲ್ಲಿ ಅದು ಹೇಗೆ ಸಾಧ್ಯ? ಆದರೆ ಮನಸ್ಸಿದ್ದರೆ ಮಾರ್ಗವಿಲ್ಲವೆ? ಏರ್ಪಾಟುಗಳನ್ನು ನಡೆಸತೊಡಗಿದರು. ಎಲ್ಲರಿಗಾಗಿ ಅಂಗಳದಲ್ಲಿದ್ದ ನಲ್ಲಿಯಲ್ಲಿ ಅನೇಕ ಸಲ ಕಣ್ಣಲ್ಲಿ ನೀರು ಬರುತ್ತಿತ್ತೇ ಹೊರತು ಅದರಲ್ಲಿ ಬರುತ್ತಿರಲಿಲ್ಲ. ಸಮಯ ಕಾದು ನೀರನ್ನು ಸಂಗ್ರಹಿಸಿಟ್ಟುಕೊಳ್ಳಬೇಕು. ಆದರೆ ಯಾವುದರಲ್ಲಿ? ಕಾಸುವುದಕ್ಕೆ ಪಾತ್ರೆ? ಸರಿ, ಅದಕ್ಕೆಲ್ಲ ಏರ್ಪಾಟಾಯಿತು. ಸಂತೇಪೇಟೆಯಲ್ಲಿ ದೊಡ್ಡ ಮಡಕೆಯೊಂದನ್ನು ಕೊಂಡು ಗಲ್ಲಿಯ ಮೂಲಕ ಸಾಗಿಸಿ ಕೋಣೆಗೆ ತಲುಪಿಸಿದ್ದಾಯಿತು! ನಲ್ಲಿಯ ಕೆಳಗಿಟ್ಟು ನೀರನ್ನು ತುಂಬಿಸಿದ್ದೂ ಆಯಿತು. ಮೂರು ಕಲ್ಲುಗಳನ್ನಿಟ್ಟು ಒಲೆಯನ್ನು ಸಿದ್ಧಪಡಿಸಿದರು. ಒಣಗಿದ ಕಟ್ಟಿಗೆಯನ್ನು ಒಲೆಗಿಟ್ಟು ಅಣಿಮಾಡಿದರು. ಹರಳೆಣ್ಣೆ ಸೀಗೆಪುಡಿ

ಗಳನ್ನು ತರುವುದಕ್ಕೂ ಮರೆತಿರಲಿಲ್ಲ. ಕಡ್ಡಿಗೀರಿ ಒಲೆ ಹೊತ್ತಿಸಿದರು. ಚೆಕ್ಕೆ ಸೀಮೆ ಎಣ್ಣೆಗಳಿದ್ದುದರಿಂದ ಕ್ಷಣದಲ್ಲೇ ಒಲೆ ಹೊತ್ತಿ ಧಗಧಗನೆ ಉರಿಯತೊಡಗಿತು. ನಲ್ಲಿಯ ಕೆಳಗಿದ್ದ ನೀರಿನ ಮಡಕೆ ಭಾರವಾಗಿದ್ದುದರಿಂದ ಒಬ್ಬರೇ ತರುವುದು ಕಷ್ಟವಾಗಿತ್ತು. ಇಬ್ಬರು ಸೇರಿ ಆಚೆ ಈಚೆ ಹಿಡಿದು ಬಹಳ ಎಚ್ಚರಿಕೆಯಿಂದ ನಿಧಾನವಾಗಿ ಎತ್ತಿತಂದು ಒಲೆಯಮೇಲಿಟ್ಟರು. ಆಯತಪ್ಪಿ ಸ್ವಲ್ಪ ಜೋರಾಗಿಯೇ ಇಟ್ಟರು! ಅಗ್ನಿಗೆ ಪೂರ್ಣಾಭಿಷೇಕವಾಗಿ ಮಡಕೆ ಚೂರುಚೂರಾಗಿ ಕಂಠ ಮಾತ್ರ ಶೂನ್ಯಾಕಾರವಾಗಿ ಮೂರು ಕಲ್ಲು ಮೇಲೆ ಕುಳಿತಿತು! ಅಲ್ಲಿಗೆ ಮುಗಿಯಿತು ಮಜ್ಜನ!

ಮತ್ತೆ ಕೆಲವು ದಿನಗಳಮೇಲೆ ವಸತಿ ಬೆಟ್ಟದಪುರದ ಹಾಸ್ಟೆಲಿಗೆ ಸ್ಥಳಾಂತರವಾಯಿತು. ಆ ಮೂವರಿಗೂ ಒಂದು ಪ್ರತ್ಯೇಕವಾದ ಕೋಣೆ ಕೊಟ್ಟಿದ್ದರು. ಆ ಕೋಣೆ ಪಾಳ್ಯದ ವೆಂಕಟಾಚಲಪಂಡಿತರ ಮನೆಯ ಹಿಂಭಾಗದ ಗೋಡೆಗೇ ಸೇರಿದಂತೆ ಇದ್ದು, ಹಾಸ್ಟೆಲಿನ ಕಟ್ಟಡಕ್ಕೆ ಸಂಬಂಧವೇ ಇಲ್ಲವೇನೋ ಎಂಬಂತೆ ಅಸ್ಪೃಶ್ಯವಾಗಿ ಒಂದು ಮೂಲೆಯಲ್ಲಿತ್ತು. ಅದರ ಗೋಡೆಯ ಇಟ್ಟಿಗೆಗಳೆಲ್ಲ ಕರಗುತ್ತಿದ್ದುವು. ಕಿಟಕಿ ಬಾಗಿಲುಗಳೆಲ್ಲ ಗೆದ್ದಲಿಗೆ ಆಹಾರವಾಗುತ್ತಿದ್ದುವು. ಒಮ್ಮೆ ರಭಸದಿಂದ ಒದ್ದರೆ ಬಾಗಿಲು ಲಟಕ್ ಎನ್ನುವಂತಿತ್ತು! ಕಿಟಕಿಗೂ ಬಾಗಿಲುಗಳಿದ್ದುವು, ಹೆಸರಿಗೆ! ಒಳಕ್ಕೆ ಗಾಳಿ ಧೂಳುಗಳ ಪ್ರವೇಶಕ್ಕಂತೂ ಯಾವ ಅಡ್ಡಿಯೂ ಇಲ್ಲ! ಬೇಸಗೆಯ ಬಿಸಿಲು ಚಳಿಗಾಲದ ಚಳಿ ಎರಡಕ್ಕೂ ಅದು ಆವಾಸ ಸ್ಥಾನ. ಅಷ್ಟೇ ಅಲ್ಲ. ಸುತ್ತಿನ ಬಯಲುವಾಸಿಗಳಾದ ಹಾವು, ಚೇಳು, ಕಪ್ಪೆ, ಹಲ್ಲಿ, ಹೆಂಟೆಗೊದ್ದ, ಹಾವುರಾಣಿ, ಜಿರಳೆ ಇತ್ಯಾದಿಗಳೂ ಆಗಾಗ್ಗೆ ಅಲ್ಲಿ ಬಂದು ಆಶ್ರಯ ಪಡೆಯುತ್ತಿದ್ದುದುಂಟು! ಎಷ್ಟಾದರೂ ಅದು ಉಚಿತ ವಸತಿಯಷ್ಟೆ?

ಭಗವದ್ಗೀತೆಯ ಸ್ಥಿತಪ್ರಜ್ಞನ ಸ್ಮರಣೆ ಜಿ.ಎಸ್.ಎಸ್.ರವರ ಮನದಲ್ಲಿ ಮನೆ ಮಾಡಿದ್ದುದರಿಂದ ಅಶನವಸತಿಗಳ ಸುಖವಾಗಲಿ ದುಃಖವಾಗಲಿ ಓದಿನ ಕರ್ತವ್ಯದಿಂದ ಅವರನ್ನು ವಿಚಲಿತರನ್ನಾಗಿ ಮಾಡಲಿಲ್ಲ. ರಸಿಕತೆಯೊಂದಿದ್ದರೆ ಎಂತಹ ಕಷ್ಟಗಳೂ ನಗೆಯಲ್ಲಿ ತೇಲಿಹೋದಾವು! ವಿದ್ಯಾಭ್ಯಾಸ ಮಾತ್ರ ತನ್ನ ಪಾಡಿಗೆ ತಾನು ನಿರಾತಂಕವಾಗಿ ಸಾಗಿತು.

ನಾನು ಮತ್ತು ಜಿ ಎಸ್.ಎಸ್. ಆದಿಯಾಗಿ ಹನ್ನೊಂದು ಜನ ಮೊದಲ ಕನ್ನಡ ಆನರ್ಸ್ ತರಗತಿಗೆ ಸೇರಿದ್ದವರು. ತರಗತಿಗೆ ಕುರುಡು ಅಭಿಮಾನದಿಂದ ಸೇರಿದ್ದೇನೋ ಆಗಿತ್ತು. ಆದರೆ ಕನ್ನಡಕ್ಕೆ ಆಗಿದ್ದ ಸ್ಥಿತಿ ತುಂಬ ಶೋಚನೀಯ. ಇಂಗ್ಲೀಷರ ದಬ್ಬಾಳಿಕೆಯ ಕಾಲ ಇನ್ನೂ ನಡೆದಿತ್ತು. ಬ್ರಿಟಿಷರನ್ನು ತೊಲಗಿಸುವ ಚಳುವಳಿ ತೀವ್ರವಾಗಿ ನಡೆದಿತ್ತಾದರೂ ಇಂಗ್ಲಿಷ್ ಭಾಷಾ ಸಾಹಿತ್ಯಗಳ ಮೇಲಿನ ವ್ಯಾಮೋಹ ಜನರಲ್ಲಿ ಕಮ್ಮಿಯಾಗಿರಲಿಲ್ಲ. ಆಗಿನ ವಿದ್ಯಾರ್ಥಿಗಳಿಗೆ ‘Literature’ ಎಂದರೆ English Literature ಒಂದೇ! Literature Honours. ವಿದ್ಯಾರ್ಥಿ ಎಂದರೆ ಅಗ್ರಮಾನ್ಯ. ಸಮಾನಸ್ಕಂಧರಲ್ಲಿ ಹಾಗೂ ಮೇಲಧಿಕಾರಿಗಳಲ್ಲಿ ವ್ಯವಹಾರ ಇಂಗ್ಲಿಷಿನಲ್ಲಿ ನಡೆದರೇ ಮರ್ಯಾದೆ. ಕನ್ನಡದಲ್ಲಿ ಮಾತನಾಡಿದರೆ ಏನೋ ಅಪಚಾರ ಮಾಡಿದಂತೆ. ಉಳಿದ ಎಲ್ಲ ವಿಷಯಗಳ ಅಧ್ಯಾಪಕ

ರಿಗೂ ೭೫ ರೂ. ಸಂಬಳ ಕೊಟ್ಟರೆ ಕನ್ನಡದ ಅಧ್ಯಾಪಕರಿಗೆ ಕೇವಲ ೬೦ ರೂ. ಕೊಡುತ್ತಿದ್ದರು. (ಪುಣ್ಯವಶಾತ್ ಆಮೇಲೆ ಎಲ್ಲ ಅಧ್ಯಾಪಕರಿಗೂ ಸಮಾನವಾಗಿ ಸಂಬಳವನ್ನು ೧೦೦ ರೂ.ಗೆ ಹೆಚ್ಚಿಸಿದರು.

ಹೀಗಿದ್ದ ಕಾಲದಲ್ಲಿ ಕನ್ನಡವನ್ನು ಐಚ್ಛಿಕವಾಗಿ ತೆಗೆದುಕೊಂಡು ಅಧ್ಯಯನ ಮಾಡುವುದೆಂದರೆ ಕೆಲವರಿಗೆ ಅಪಹಾಸ್ಯದ ವಿಷಯವಾಗಿತ್ತು. ಕಾಲೇಜಿಗೆ ಸೇರಿದ ಹೊಸದರಲ್ಲಿ ಸಾಮಾನ್ಯವಾಗಿ ಗೆಳೆಯರು ಒಬ್ಬರನ್ನೊಬ್ಬರು ಸಂಧಿಸಿದಾಗ "ನೀವೇನು ಐಚ್ಛಿಕ ವಿಷಯವನ್ನು ತೆಗೆದುಕೊಂಡಿರಿ?" ಎಂದು ಕೇಳುವುದು ಸಂಪ್ರದಾಯ. ಆಗ Literature ಎಂದೋ, Economics ಎಂದೋ, Political Science ಎಂದೋ, Psychology ಎಂದೋ ಹೇಳಿಕೊಳ್ಳುವುದಕ್ಕೆ ಹೆಮ್ಮೆ. History, Sanskrit ಎಂದಿತ್ಯಾದಿಯಾಗಿ ಹೇಳಿಕೊಂಡರೂ ಆಗಬಹುದು. ಆದರೆ ಮಾತ್ರ 'ಕನ್ನಡ' ಎಂದರೆ 'ಅಯ್ಯೋ ಪಾಪ!" ಎಂಬಂತೆ ಕನಿಕರದ ದೃಷ್ಟಿ ಬೀರುತ್ತಿದ್ದರು. ಏನೋ ಅಕೃತ್ಯ ಮಾಡಿದವರಂತೆ ನಮಗೂ ಒಮ್ಮೊಮ್ಮೆ ಕಳವಳವಾಗಿದ್ದುಂಟು! ನಮ್ಮಲ್ಲಿ ಅಭಿಮಾನವುಳ್ಳ ಒಬ್ಬಿಬ್ಬರು ಕನ್ನಡ ಅಧ್ಯಾಪಕರೂ "ಯಾಕೆ ಕನ್ನಡ ತೆಗೆದುಕೊಳ್ಳುವುದಕ್ಕೆ ಹೋದೆ, ನಾವನುಭವಿಸುತ್ತಿರುವುದು ಸಾಲದೆ?" ಎಂದದ್ದೂ ಉಂಟು!

ಆದರೂ ಅದೊಂದು ಸಂಧಿಕಾಲ. ಕನ್ನಡದ ಕಿಡಿ ಅಲ್ಲಲ್ಲಿ ಹಲವು ತರುಣರ ಹೃದಯಕ್ಕೆ ಸಿಡಿದು ಕವರುತ್ತಿತ್ತು. ಸ್ವಾಭಿಮಾನ ಮೂಡುತ್ತಿತ್ತು. ಕನ್ನಡವನ್ನು ಮೂದಲಿಸುವವರನ್ನು ದಹಿಸುವ ಕಿಚ್ಚು ಕೆರಳುತ್ತಿತ್ತು!

ಕನ್ನಡದ ಅಭಿಮಾನವುಳ್ಳವರ ಪಾಡು ನಾಯಕನಿಲ್ಲದೆ ಅಲ್ಲಲ್ಲಿ ಚೆದುರಿಹೋದ ಸೈನ್ಯದಂತಾಗಿತ್ತು. ಅದನ್ನು ಒಂದುಗೂಡಿಸಿ ಹುರುಪೇರಿಸಲು ದಕ್ಷ ಸೇನಾನಿಯೊಬ್ಬನ ಅಗತ್ಯವಿತ್ತು. ಅದೃಷ್ಟವಶಾತ್ ಅಂತಹ ಸೇನಾನಿಯೊಬ್ಬ ದೊರೆತ! ಎಲ್ಲರ ಕಿವಿಗಳಲ್ಲೂ ಕನ್ನಡದ ಡಿಂಡಿಮವನ್ನು ಮೊಳಗಿಸುತ್ತಿದ್ದ ಕುವೆಂಪು ಅವರು ಪ್ರಾಚಾರ್ಯರಾಗಿ ಮೈಸೂರು ಮಹಾರಾಜಾ ಕಾಲೇಜಿಗೆ, ನಿವೃತ್ತರಾದ ಪ್ರೊ|| ಎ. ಆರ್. ಕೃಷ್ಣಶಾಸ್ತ್ರೀ ಅವರ ಸ್ಥಾನಕ್ಕೆ ಬಂದರು! ಅವರು ಬಂದುದೇ ನಮ್ಮ ಎದೆಯಲ್ಲಿ ನಂದಿಹೋಗುತ್ತಿದ್ದ ಕನ್ನಡದ ಕಿಚ್ಚನ್ನು ಊದಿ ಉಜ್ವಲಗೊಳಿಸಿದಂತಾಯಿತು! ಇತರರೆದುರು ನಾವು ತಲೆಯೆತ್ತಿ ಮೆರೆಯುವಂತಾಯಿತು! ಕನ್ನಡವನ್ನು ಹಳಿಯುತ್ತಿದ್ದವರ ಉಸಿರು ಬರಬರುತ್ತಾ ಕಟ್ಟಿಹೋಗುವಂತಾಯಿತು!

ಕುವೆಂಪು ಅವರು ರಸತಪಸ್ಯೆಯಲ್ಲಿ ನಿರತರಾಗಿ 'ರಾಮಾಯಣ ದರ್ಶನಂ' ಮೇರುಕೃತಿ ರಚನೆಗೆ ದೀಕ್ಷೆಯನ್ನು ಕೈಕೊಂಡಿದ್ದ ಕಾಲ ಅದು. ತರಗತಿಯ ವೇಳೆಯಲ್ಲಲ್ಲದೆ ಉಳಿದ ಸಮಯದಲ್ಲಿ ಅವರೆಲ್ಲೂ ಕಾಣಸಿಗುತ್ತಿರಲಿಲ್ಲ. ತರಗತಿಯಿದ್ದ ವೇಳೆಯಲ್ಲೂ ಮಹಾರಾಜಾ ಕಾಲೇಜಿನ ಹಿಂಭಾಗದಿಂದ ನುಸುಳಿ ಕೊಠಡಿಗೆ ಬಂದು ತರಗತಿ ಮುಗಿದೊಡನೆ ಅದೃಶ್ಯರಾಗಿಬಿಡುತ್ತಿದ್ದರು. ಅವರನ್ನು ನೋಡಬಯಸುವ ಕುತೂಹಲಿಗಳು ಸಮಯ ಕಾದಿದ್ದು ಮರೆಯಲ್ಲಿ ನಿಂತು ನೋಡುತ್ತಿದ್ದರು. ಅಂಥವರನ್ನು ನೋಡುವುದೇ

ಒಂದು ಭಾಗ್ಯ, ಅವರ ಮಾತು ಕೇಳುವುದೇ ಒಂದು ಭಾಗ್ಯ ಎಂದು ಜನ ಎಣಿಸುತ್ತಿದ್ದಾಗ ಅಂಥವರ ಸಾನ್ನಿಧ್ಯದಲ್ಲಿ ವಿದ್ಯೆಯನ್ನು ಕಲಿಯುವ ಭಾಗ್ಯ ನಮಗೆ ದೊರೆತಿತ್ತು ! ನಮ್ಮ ಅವರ ಮೊದಲ ದಿನದ ಭೇಟಿಯ ರೋಮಾಂಚಕಾರೀ ಅನುಭವವನ್ನು ನಾವೆಂದೂ ಮರೆಯುವಂತಿಲ್ಲ.

ಅಂದು ನಮಗೆ ಎಲ್ಲಿಲ್ಲದ ಸಂಭ್ರಮ. ಕುವೆಂಪು ಅವರು ಮೊದಲೇ ಬಂದು ಪ್ರಾಧ್ಯಾಪಕರ ಕೊಠಡಿಯಲ್ಲಿ ಕುಳಿತಿದ್ದರು ನಮ್ಮ ತರಗತಿ ನಡೆಯಬೇಕಾಗಿದ್ದುದೂ ಅಲ್ಲೇ. ಗಂಟೆ ಹೊಡೆಯುವುದನ್ನೇ ಕಾದಿದ್ದು ಮೆಲ್ಲನೆ ಸಾಲುಗಟ್ಟಿ ಒಳಕ್ಕೆ ಹೋಗಿ ಕುಳಿತೆವು. ಏನೋ ಕಾಗದಪತ್ರಗಳನ್ನು ನೋಡುತ್ತಿದ್ದ ಅವರು ನಿಲ್ಲಿಸಿ, ತಲೆಯೆತ್ತಿ ಸುತ್ತಲೂ ಒಮ್ಮೆ ನಮ್ಮನ್ನೆಲ್ಲ ನೋಡಿದರು.

"ನೀವು ಇಂಟರ್‌ಮೀಡಿಯೇಟ್‌ನಲ್ಲಿ ಏನೇನು ಪುಸ್ತಕ ಓದಿದ್ದೀರಿ ?" ಎಂದು ಎಲ್ಲರ ಮುಖಗಳ ಕಡೆಗೂ ದೃಷ್ಟಿ ಹಾಯಿಸಿದರು.

ನಾವು ಮರೆತಿದ್ದನ್ನು ನೆನಪು ಮಾಡಿಕೊಂಡು ಕನ್ನಡ ಪಠ್ಯಪುಸ್ತಕಗಳ ಪಟ್ಟಿಯನ್ನೇ ಕೊಡಹೋದೆವು.

"ಕನ್ನಡ ಇರಲಿ. ಇಂಗ್ಲಿಷಿನಲ್ಲಿ ಏನೇನು ಓದಿದ್ದೀರಿ ?" ಎಂದು ಕೇಳಿದರು. ಸರಿ, ಶೇಕ್ಸ್‌ಪಿಯರರ *Midsummer Nights Dream*, *Selected Essays*, *Three Hundred Years of English Poetry*. . . . ಎಂದು ಒಬ್ಬೊಬ್ಬರು ಒಂದೊಂದು ಹೇಳಿದೆವು.

"ಪದ್ಯ ಯಾವ ಯಾವುದು ಓದಿದ್ದಿರಿ ?"

"Milton ಕವಿಯ *L'Allegro* ಮತ್ತು *Il Penseroso*, Thomas Gray's *Elegy Written in a Country Churchyard*......

"Gray's Elegyಯಲ್ಲಿ ಯಾವುದಾದರೂ ಪದ್ಯ ಹೇಳಿ."

ಒಳ್ಳೇ ಕಷ್ಟಕ್ಕೆ ಬಂದಿತಲ್ಲ ಎಂದು ಎಲ್ಲರೂ ಕಣ್ಣು ಕಣ್ಣು ಬಿಟ್ಟೆವು! ಏನೊ ಪರೀಕ್ಷೆಗೆ ಆಸಕ್ತಿಯಿಂದ ಓದಿದ್ದುಂಟು. ಆಮೇಲೂ ಅದು ಬೇಕಾಗುತ್ತೆಂದು ನಮಗೇನು ಗೊತ್ತು ! ಪರೀಕ್ಷೆಗೆ Gray's *Elegy*ಯಿಂದ ಭಾವಾನುವಾದಕ್ಕೋ ಸಂದರ್ಭಕ್ಕೋ ಕೇಳಬಹುದೆಂದು ನಿರೀಕ್ಷಿಸಿದ್ದ ಪದ್ಯವೊಂದು ನನಗೆ ನೆನಪು ಬಂತು.

"Full many a gem of purest ray serene
The dark unfathomed caves of ocean bear..."

ಎಂದು ಕುರುಕಿದೆ. ನಮ್ಮ ಪೈಕಿಯೆಲ್ಲ ಹೆಚ್ಚು ಬುದ್ಧಿವಂತರು ಜಿ.ಎಸ್.ಎಸ್. ಅತ ನಿರರ್ಗಳವಾಗಿ ಮುಂದುವರೆಸಿಕೊಂಡು ಹೋದರು.

"Full many a flower is born to blush unseen
And waste its sweetness on the desert air
. . . . . . . . . . . . . . . . . . . . . . .

Can storied urn or animated bust
Back to its mansion call the fleeting breath ?
Can honour's voice provoke the silent dust
Or flattery soothe the dull cold ear of death ?"

ಅದುವರೆಗೆ ಸುಮ್ಮನೆ ಆಲಿಸುತ್ತ ಕುಳಿತಿದ್ದ ಕುವೆಂಪು ಅವರು ತಡೆದು "ಎಲ್ಲಿ, Can storied urn or animated bust....ಅದಕ್ಕೆ ಅರ್ಥ ಹೇಳಿ."

ಜಿ.ಎಸ್.ಎಸ್. ಇಂಗ್ಲೀಷಿನಲ್ಲಿ ತಡವರಿಸಿಕೊಂಡು ವಿವರಿಸಲು ಯತ್ನಿಸಿದರು.

"ಬೇಡ ಬೇಡ. ಇಂಗ್ಲೀಷಿನಲ್ಲಿ ನಿಮಗಾಗುವುದಿಲ್ಲವೆಂದು ಗೊತ್ತು! ಕನ್ನಡದಲ್ಲೇ ಹೇಳಿ."

ನಮಗೆ'earn' ಎಂಬುದು ಗೊತ್ತಿದ್ದೇ ಹೊರತು 'urn' ಎಂಬುದು ಗೊತ್ತಿರಲಿಲ್ಲ. ಬೆಬ್ಬೆಬ್ಬೆ ಎನ್ನುವಂತಾಯಿತು! ನಮ್ಮ ಕಷ್ಟವನ್ನು ನೋಡಲಾರದೆ ಅವರೇ ಅದರ ಅರ್ಥವನ್ನು ವಿವರಿಸಿದರು.

"urn ಎಂದರೆ ಸತ್ತವರ ಅವಶೇಷವನ್ನಿಡುವ ಪಾತ್ರೆ. 'ಭಸ್ಮಸಂಚಯ ಭಾಂಡ.' storied urn ಎಂದರೆ ಆ ಭಾಂಡದ ಮೇಲೆ ಸುತ್ತಲೂ ಸತ್ತ ಆ ವ್ಯಕ್ತಿಯ ಕಥೆಯನ್ನೋ ಜೀವನದ ಮುಖ್ಯ ಘಟನೆಗಳನ್ನೋ ಕೆತ್ತಿರುತ್ತಾರೆ. ಅದು ರಾಮಾಯಣ ಮಹಾಭಾರತದ ಕಥೆಯನ್ನು ಬೇಲೂರಿನ ದೇವಾಲಯದ ಗೋಡೆಯ ಮೇಲೆ ಕೆತ್ತಿಲ್ಲವೇ, ಹಾಗೆ!...."

ಇಷ್ಟು ಹೇಳಿ ಮಾರ್ಮಿಕವಾಗಿ ಎಲ್ಲರ ಕಡೆ ನೋಡಿ "ಏನೇನೂ ಸಾಲದು!" ಎಂದು ತುಂಬ ಅಸಮಾಧಾನವನ್ನು ವ್ಯಕ್ತಪಡಿಸಿದರು. ನಮಗೆ ಕಶಾಘಾತವಾದಂತಾಯಿತು. ಹುರುಪಿನಿಂದ ಹೋಗಿ ಕುಳಿತಿದ್ದ ನಮಗೆ ಲಜ್ಜೆಯಿಂದ ತಲೆ ತಗ್ಗಿಸುವಂತಾಯಿತು. ಬೆಂಗಳೂರಿನಲ್ಲಿ, ಕನ್ನಡದ ಬಗ್ಗೆ ಅನಾಸಕ್ತರಾಗಿದ್ದ ವಿಜ್ಞಾನದ ವಿದ್ಯಾರ್ಥಿಗಳಿಗೆ ಕನ್ನಡವನ್ನು ಬೋಧಿಸುತ್ತಿದ್ದ ಕುವೆಂಪು ಅವರು ಮೈಸೂರಿನಲ್ಲಿ ಕಲಾ ವಿದ್ಯಾರ್ಥಿಗಳಿಗೆ, ಅದರಲ್ಲೂ ಕನ್ನಡ ಆನರ್ಸ್ ಮತ್ತು ಎಂ.ಎ. ವಿದ್ಯಾರ್ಥಿಗಳಿಗೆ ಕನ್ನಡ ಬೋಧಿಸುವುದೆಂದರೆ ಅವರ ಕಲ್ಪನೆ ಏನಿತ್ತೋ, ಅವರ ಆಶೋತ್ತರಗಳೇನಿದ್ದುವೋ! ಅಂತು, ನಾವು ಅವರ ನಿರೀಕ್ಷೆಯ ಮಟ್ಟಕ್ಕೇರಲಿಲ್ಲ! ನಮ್ಮ ಪೆಚ್ಚುಮೋರೆಗಳನ್ನು ನೋಡಿ ಅವರಿಗೇ ಅಯ್ಯೋ ಪಾಪ ಎನ್ನಿಸಿರಬೇಕು! ಅಲ್ಲದೆ "ಇವರನ್ನು ಕಟ್ಟಿಕೊಂಡು ಏಗಲೇಬೇಕಲ್ಲ!" ಅನ್ನಿಸಿರಬೇಕು! ಆದ್ದರಿಂದ, ಹೇಗೆ ನಾವು ಇಂಗ್ಲಿಷ್ ಕಾವ್ಯಗಳನ್ನು ವಿಮರ್ಶೆಗಳನ್ನು ಓದಿ ಪುಷ್ಟಿಯನ್ನು ಪಡೆಯಬೇಕು, ನಾವೇ ದುರ್ಬಲರಾದರೆ ನಮ್ಮ ಭಾಷೆ ಸಾಹಿತ್ಯವನ್ನು ಹೇಗೆ ಪೋಷಿಸಲಾರೆವು ಎಂದು ಉಪದೇಶಿಸಿದರು. ಅಪರಾಧಿಗಳಂತೆ ತಲೆತಗ್ಗಿಸಿ ನಾವು ಉಪದೇಶವನ್ನು ಕೇಳುತ್ತಿದ್ದೆವು. ನಮ್ಮ ಪುಣ್ಯಕ್ಕೆ ಗಂಟೆ ಬಾರಿಸಿತು!

ಕಡೆಯಲ್ಲಿ ಕುವೆಂಪು ಅವರಿಗೇ ಏನೆನ್ನಿಸಿತೋ ಏನೋ, ನಮ್ಮನ್ನು ನೋಡಿ ಕನಿಕರಿಸಿ "ಈ ದಿನ ನಾನು ನಿಮ್ಮನ್ನು ಬೇರುಹಿಡಿದು ಅಲ್ಲಾಡಿಸಿಬಿಟ್ಟಿದ್ದೇನೆ. ನೋಡೋಣ

ಮುಂದೆ ನೀವು ಹೇಗೆ ಮಾಡ್ತೀರೋ!" ಎಂದು ಪ್ರೋತ್ಸಾಹಕರ ನುಡಿಗಳನ್ನಾಡಿದರು.

ಸದ್ಯ, ಬದುಕಿದೆಯಾ ಬಡಜೀವವೇ ಎಂದು ಎದ್ದು ಬಂದೆವು!

ಕನ್ನಡ ಭಾಷೆ ಮತ್ತು ಸಾಹಿತ್ಯಾಧ್ಯಯನದಲ್ಲಿ ಕುವೆಂಪು ಅವರು ನಮಗೆ ಹೊಸ ದೃಷ್ಟಿಯನ್ನು ತಂದುಕೊಟ್ಟರು. ಕನ್ನಡವೆಂದರೆ ಶಾಲು ಹೊದೆಯುವ ಪಂಡಿತರುಗಳು ಮಾತ್ರ ಓದಬೇಕಾದ ವಿಷಯವಲ್ಲ ಎಂಬ ಅರಿವು ಮೂಡಿಸಿದರು. ಸಂಸ್ಕೃತಪ್ರಭಾವಿತ ಕನ್ನಡಕ್ಕೆ ಮಾತ್ರ ಸೀಮಿತವಾಗದಂತೆ ನಮ್ಮ ದೃಷ್ಟಿಯನ್ನು ವಿಶಾಲ ವಿಶ್ವದತ್ತ ತಿರುಗಿಸಿದರು. ಸ್ವತಂತ್ರ ವಿಚಾರಧಾರೆಯನ್ನು ಕಲಿಸಿ ಕೂಪಮಂಡೂಕಗಳಾಗಿದ್ದ ನಮಗೆ ಸಾಗರದ ದರ್ಶನ ಮಾಡಿಸಿದರು.

ಅವರು ನಮಗೆ ತೆಗೆದುಕೊಳ್ಳುತ್ತಿದ್ದ ಪಾಠಗಳು ಆದಿಪುರಾಣ, ಅಂಬಿಗರ ಚೌಡಯ್ಯನ ವಚನಗಳು ಮತ್ತು ಕಾವ್ಯಮೀಮಾಂಸೆ. ಅವರ ಸಾಹಿತ್ಯರಚನೆಯಂತೆಯೇ ಅವರ ಬೋಧನಕ್ರಮವೂ ಅವರಿಗೇ ವಿಶಿಷ್ಟವಾದುದು. ಅಕ್ಷರ ಅಕ್ಷರ ಓದಿ ಹೇಳುವ ಪಾಠವಲ್ಲ ಅವರದು. ಅಲ್ಲೊಂದು ಇಲ್ಲೊಂದು ಅಗುಳನ್ನು ಹಿಚಿಕಿ ಯಾವುದು ಅರೆಬೆಂದುದು ಯಾವುದು ಪೂರ್ಣ ಬೆಂದುದು ಎಂದು ತೋರಿಸುವ ರೀತಿಯದು. ಅವಶ್ಯಬಿದ್ದಲ್ಲಿ ಎಳೆಎಳೆಯಾಗಿ ಬಿಡಿಸಿ ಪರಿಷ್ಕಾರವಾಗಿ ನಿರೂಪಿಸುವಂಥದು. ಮಾತುಗಳಲ್ಲಿ ಚರ್ವಿತ ಚರ್ವಣವಿಲ್ಲ. ಕೇಳುವವರಿಗೆ ಕ್ಲೇಶಕೊಡುವಂತಹ, ಅಭ್ಯಾಸಬಲದಮೇಲೆ ಬರುವ ಕ್ಲೀಶೆ (cliche)ಗಳಿಲ್ಲ. ಯಥೋಚಿತವಾದ ಮಾತು, ಎಷ್ಟು ಬೇಕೋ ಅಷ್ಟು ಮಾತು.

ಜೈನಧರ್ಮದ ಹಿನ್ನೆಲೆಯಲ್ಲಿ ಆದಿಪುರಾಣವನ್ನೂ ವೀರಶೈವಧರ್ಮದ ಹಿನ್ನೆಲೆಯಲ್ಲಿ ಅಂಬಿಗರಚೌಡಯ್ಯನ ವಚನಗಳನ್ನೂ ತೂಗಿ ತೋರಿಸಿದರು.

ಕಾವ್ಯಮೀಮಾಂಸೆ ಅವರಿಗೆ ಸ್ವಕ್ಷೇತ್ರ! ಸ್ವಯಂ ಪ್ರತಿಭಾವಂತ ಕವಿಯಾಗಿದ್ದು, ಪಾಶ್ಚಾತ್ಯ ಪೌರ್ವಾತ್ಯ ಕಾವ್ಯಮೀಮಾಂಸಾ ತತ್ತ್ವಗಳನ್ನು ಕೂಲಂಕಷವಾಗಿ ಶೋಧಿಸಿ ಸ್ವಂತ ಅಭಿಪ್ರಾಯಗಳನ್ನು ರೂಪಿಸಿಕೊಂಡಿದ್ದುದರಿಂದ ಆ ಕ್ಷೇತ್ರದಲ್ಲಿ ಅವರು ಗರುಡನಂತೆ ಗರಿಗೆದರಿ ಸಾಹಿತ್ಯವಿಯತ್ತಳದಲ್ಲಿ ಹಾರಾಡುತ್ತಿದ್ದರು. ಕಾವ್ಯ, ರಸ, ಧ್ವನಿ, ಅಲಂಕಾರ, ಮಾರ್ಗ, ರೀತಿ, ಶೈಲಿ ಇತ್ಯಾದಿಗಳನ್ನು ಹೇಗೆ ಅರ್ಥಯಿಸಬೇಕೆಂದು ಸ್ವತಂತ್ರವಾಗಿ ವ್ಯಾಖ್ಯಾನಿಸುತ್ತಿದ್ದರು.

ನಮ್ಮೆಲ್ಲರಲ್ಲ ಅತ್ಯಂತ ಶ್ರದ್ಧಾವಂತ ವಿದ್ಯಾರ್ಥಿಯಾಗಿದ್ದು ಸಮಾನ ಒಲವು ಸಾಮರ್ಥ್ಯಗಳಿಂದ ಕೂಡಿದ್ದ ಜಿ.ಎಸ್.ಎಸ್. ಮೇಲಿನ ಎಲ್ಲ ಗುಣಗಳನ್ನೂ ಗುರುವಿನಿಂದ ಬಳುವಳಿಯಾಗಿ ಸ್ವೀಕರಿಸಿದರು. ಬಹುಶಃ ಅವರೊಬ್ಬರೇ ಗುರುವಿನ ನಿರೀಕ್ಷೆಯ ಮಟ್ಟಕ್ಕೇರಿದವರೆಂದು ತೋರುತ್ತದೆ! ಕುವೆಂಪು ಅವರೂ ಅದನ್ನು ಗುರುತಿಸಿದ್ದರು. ತರಗತಿಯಲ್ಲಿ ತಾವು ಮಾಡಿದ ಕಾವ್ಯಮೀಮಾಂಸೆಯ ಪಾಠವನ್ನು ಒಮ್ಮೆ ಪುನರಾಲೋಕನ ಮಾಡುವುದಕ್ಕಾಗಿ ಕುವೆಂಪು ಅವರು ಜಿ.ಎಸ್.ಎಸ್.ರವರ ಟಿಪ್ಪಣಿಯ ಪುಸ್ತಕವನ್ನು ಕೇಳಿ ಪಡೆದರು! ಮುಂದೆ ಜಿ.ಎಸ್.ಎಸ್.ರವರಿಗೆ ಕಾವ್ಯಮೀಮಾಂಸೆಯನ್ನು ಕುರಿತ ಸಂಶೋಧನೆಗೆ ದಿಗ್ದರ್ಶಕರಾದವರು ಕುವೆಂಪು ಅವರೇ. ಅದರ ಫಲವೇ 'ಸೌಂದರ್ಯಸಮೀಕ್ಷೆ' ಗ್ರಂಥ!

ವಿದ್ಯಾರ್ಥಿ ದೆಸೆಯುಲ್ಲಿ ತಮ್ಮ ಪದ್ಯವೊಂದಕ್ಕೆ ಬಿ.ಎಂ. ಶ್ರೀಯವರ ಪದಕ ದೊರೆತಾಗ ಕುವೆಂಪು ಅವರೇ ಅವರಿಗೆ ಅದನ್ನು ಪ್ರದಾನಮಾಡಿದರು. ಮರುದಿನ ಅವರನ್ನು ಕರೆದು ಆದುವರೆಗೆ ಅವರು ಬರೆದಿದ್ದ ಕವನಗಳನ್ನು ತರಿಸಿಕೊಂಡು ಓದಿ, ಸಲಹೆಕೊಟ್ಟು ಅವು ಗಳನ್ನು ಪ್ರಬುದ್ಧ ಕರ್ಣಾಟಕದಲ್ಲಿ ಅಚ್ಚುಮಾಡುವಂತೆ ಏರ್ಪಡಿಸಿದರು. ಗುರುಗಳ ಅಭಿನಂದನೆಗಳೊಡನೆ ಅವರ ಆಶೀರ್ವಾದವೂ ಜಿ.ಎಸ್.ಎಸ್.ರಿಗೆ ದೊರೆಯಿತು.

ನಮ್ಮ ಪಠ್ಯೇತರ ಚಟುವಟಿಕೆಗಳನ್ನು ಗಮನಿಸಿದಾಗ ನಡೆದ ಒಂದು ಸ್ವಾರಸ್ಯಕರ ಘಟನೆ ಇದು—

ನಮ್ಮ ಅಧ್ಯಾಪಕರೊಬ್ಬರು ಗರಡಿಮಸ್ತಾದಿಗಳು. ತಮ್ಮ ವಿದ್ಯಾರ್ಥಿದೆಸೆಯಿಂದ ಅವರು ಕುಸ್ತಿಯ ಸ್ಪರ್ಧೆಗಳಲ್ಲಿ ಅನೇಕ ಪಾರಿತೋಷಕಗಳನ್ನು ಪಡೆದಿದ್ದರು. ಅನೇಕ ಮಸ್ತಾದಿಗಳನ್ನೂ ತಯಾರು ಮಾಡಿದ್ದರು. ಅವರು ಮಡಿವಂತರು, ಆಚಾರವಂತರು, ನಿತ್ಯಕರ್ಮಾನುಷ್ಠಾನಪರರು, ದೊಡ್ಡ ವಿದ್ವಾಂಸರು, ಸಹೃದಯರು, ಸರಸಿಗಳು. ಕೆಲವು ವಿಷಯಗಳಲ್ಲಿ ಅವರು ಚಲಿಸುವ ವಿಶ್ವಕೋಶವಿದ್ದಂತೆ! ಏನನ್ನಾದರೂ ಕುರಿತು ಅವ ರನ್ನು ಪ್ರಶ್ನಿಸಿದರೆ ಅದು ತಮಗೆ ತಿಳಿಯದೆಂಬ ಪ್ರಶ್ನೆಯೇ ಇಲ್ಲ! ಅದರ ಬಗ್ಗೆ ನಿರರ್ಗಳ ವಾಗಿ ಒಂದು ಉಪನ್ಯಾಸವನ್ನೇ ಬಿಗಿದಾರು! ಒಂದು ಸಲ ಬಿಡುವಿನ ವೇಳೆಯಲ್ಲಿ ನಾನು ಜಿ.ಎಸ್.ಎಸ್. ಮಹಾರಾಜಾ ಕಾಲೇಜಿನ ಪ್ರಾಂಗಣದಲ್ಲಿ ನಿಂತಿದ್ದೆವು. ಅತ್ತ ಕಡೆಯಿಂದ ಅಧ್ಯಾಪಕರು ಬಂದರು. ವಂದಿಸಿದೆವು. ಅದೂ ಇದೂ ಮಾತನಾಡುತ್ತಿದ್ದಂತೆಯೇ ವಿಷಯ ಇಂದಿನ ತರುಣರ ಕಡೆಗೆ ಹೊರಳಿತು ಎದುರಿಗೆ ಹರಟೆಕೊಚ್ಚುತ್ತ ನಿಂತಿದ್ದ ತರುಣರ ಗುಂಪೊಂದನ್ನು ತೋರಿಸಿ "ಈಗಿನ ಕಾಲದ ಯುವಕರನ್ನು ನೋಡ್ರಯ್ಯ, ದೇಹದಾರ್ಢ್ಯವೇ ಇಲ್ಲದೆ ಹೇಗೆ ನಿರ್ವೀರ್ಯರಾಗುತ್ತಿದ್ದಾರೆ! ಎರಡು ಕಾಲುಗಳ ಮೇಲೆ ನೆಟ್ಟಗೆ ನಿಲ್ಲುವುದಕ್ಕೆ ಬರುವುದಿಲ್ಲ. ಒಂದು ಕಾಲನ್ನು ಬಾಗಿಸಿ ಸೊಂಟ ಮುರಿದು ಹೋದವರ ಹಾಗೆ ನಿಂತ್ಕೊತಾರೆ! ಬೆನ್ನು ಗೂನು! ತಲೆ ವಾಲಿಕೊಂಡಿದೆ!" ಎಂದರು. ಹೌದು ಅವರು ಹೇಳಿದ್ದು ಸತ್ಯ. ನಾವೂ ಅವರಿಗಿಂತೇನೂ ಹೊರತಾಗಿರಲಿಲ್ಲ. ಅದರೂ ಈಗ ಎಚ್ಚತ್ತುಕೊಂಡೆವು! ಅದಕ್ಕೆ ಸರಿಯಾಗಿ ಮಾರನೆಯ ದಿವಸ ಕಾಲೇಜು ಮುಗಿಸಿ ಕೊಂಡು ಹೋಗುತ್ತಿದ್ದ ನಮ್ಮನ್ನು "ಬನ್ರಯ್ಯ ನನ್ನ ಜೊತೇಲಿ" ಎಂದು ಕಾಲೇಜಿನ ಗರಡಿಯ ಮನೆಗೆ ಕರೆದುಕೊಂಡು ಹೋದರು. ಅಲ್ಲಿ ನಮ್ಮಿಬ್ಬರಿಗೂ ಬಟ್ಟೆ ಬಿಚ್ಚಿಸಿ ಬೈಠಕ್ ದಂಡೆ ಇತ್ಯಾದಿ ಮೂರು ನಾಲ್ಕು ಬಗೆಯ ವ್ಯಾಯಾಮವನ್ನು ಕಲಿಸಿ "ಇಷ್ಟು ಸಾಕು ಈವತ್ತಿಗೆ. ನಾಳೆ ಮೈಕೈ ನೋವಿರುತ್ತೆ. ಆದರೂ ಬಿಡದೆ ನಾಳೇನೂ ವ್ಯಾಯಾಮ ಮಾಡಿ. ಆಮೇಲೆ ಎಲ್ಲಾ ಸರಿಹೋಗುತ್ತೆ" ಎಂದುಪದೇಶಿಸಿ, Health Kitchenನಲ್ಲಿ (ಅದು ಮಹಾರಾಜಾ ಕಾಲೇಜಿನ ಉಪಾಹಾರ ಗೃಹ. ಅಲ್ಲಿ Kitchen ಏನೋ ಇತ್ತು. Health ಮಾತ್ರ ಅಷ್ಟಕ್ಕಷ್ಟೇ!) ಇಬ್ಬರಿಗೂ ಬಾದಾಮಿಹಾಲಿನ ಲಂಚವನ್ನೂ ಕೊಟ್ಟರು!

ಅನಂತರ ಇಬ್ಬರೂ ಕೆಲವು ದಿವಸ ಶ್ರದ್ಧೆಯಿಂದ ಗರಡಿಗೆ ಹೋಗಿ ಶಕ್ತಿಮೀರಿ ಅಂಗ

ಸಾಧನೆ ಮಾಡುತ್ತಿದ್ದೆವು. ಮೈ ಚೆನ್ನಾಗಿ ಬೆವರಿಡುತ್ತಿತ್ತು. ಮಟ್ಟಿಯಲ್ಲಿ ಮಲಗಿ ಒಬ್ಬರಿಗೊಬ್ಬರು ಕತ್ತಿನವರೆಗೆ ಕೆಮ್ಮಣ್ಣನ್ನು ಸುರಿದು ಹೂಳಿಸಿಕೊಂಡು, ಜೆಪರಾರಿ ವಿಶ್ರಾಂತಿ ದೊರೆತ ಮೇಲೆ 'ಸಮಾಧಿ'ಯಿಂದ ಎದ್ದು ಬಂದು ಬಟ್ಟೆ ಧರಿಸಿ ಹೊರಬರುತ್ತಿದ್ದೆವು.

ಗರಡಿಗೆ ಹೋಗುವ ನಮಗೆ ಏನೋ ಒಂದು ಬಗೆಯ ಅಭಿಮಾನ. ಬೇರೆಯವರಿಗಿಂತ ನಾವೆಷ್ಟೋ ಮೇಲು ಎಂಬ ಸಂತೋಷ. ಕನ್ನಡಿಯ ಮುಂದೆ ನಿಂತು ಮಾಂಸಖಂಡಗಳು ಹೇಗುಬ್ಬುತ್ತವೆಯೆಂದು ತೋಳುಗಳನ್ನು ಮಡಿಚಿ ನೋಡಿಕೊಂಡಿದ್ದೂ ನೋಡಿಕೊಂಡಿದ್ದೇ! ಆದರೂ ನಾವಿಬ್ಬರೂ ಕದಿರುಕಡ್ಡಿ ಪೈಲ್ವಾನರೇ! 'ಉಚಿತ ವಿದ್ಯಾರ್ಥಿನಿಲಯ'ದಲ್ಲಿ ಊಟಮಾಡುತ್ತಿದ್ದ ಜಿ.ಎಸ್.ಎಸ್. ಆಗಲಿ, 'ಅನಾಥಾಲಯ'ದಲ್ಲಿ ಊಟಮಾಡುತ್ತಿದ್ದ ನನಗಾಗಲಿ ಶರೀರಪೋಷಕ ಆಹಾರವೇ ದೊರೆಯದಮೇಲೆ ಏನು ಅಂಗಸಾಧನೆ ಮಾಡಿ ಏನು ಪ್ರಯೋಜನ! ಮೊದಲ ದಿನವೇನೋ ಬಾದಾಮಿ ಹಾಲು ಸಿಕ್ಕಿತು, ನಮಗದನ್ನು ದಿನಾ ಕೊಡಿಸುವವರಾರು? ಶರೀರ ನಶಿಸಿತೇ ಹೊರತು ನಾವು ಪೈಲ್ವಾನರಾಗಲು ಸಾಧ್ಯವಾಗಲಿಲ್ಲ!

ಈ ನಡುವೆ, ಗರಡಿಯ ಮಟ್ಟಿಯನ್ನು ಮೆಟ್ಟಿದ ಮಾರನೆಯ ದಿನವೇ ಸುತ್ತೂರು ಹಾಸ್ಟೆಲಿನ ಒಂದು ಸಮಾರಂಭ ನಡೆಯಿತು. ಆಹ್ವಾನಿತರಾಗಿ ಬಂದಿದ್ದ ಸಿದ್ಧಗಂಗೆ ಸ್ವಾಮಿಗಳು 'ಇಚ್ಛಾಶಕ್ತಿ' (Will-Power)ಯ ಮೇಲೆ ಪ್ರಚೋದಕ ಭಾಷಣವನ್ನು ಕೊಟ್ಟರು. ಸರಿ, ಆದರಿಂದ ಪ್ರಭಾವಿತರಾದ ನಾವಿಬ್ಬರೂ ನಮ್ಮ ಇಚ್ಛಾಶಕ್ತಿಯನ್ನು ಪರೀಕ್ಷೆಗೊಡ್ಡಿದೆವು. ಇಬ್ಬರೂ ಅಂದಿನಿಂದ ಕಾಫಿ ಕುಡಿಯುವುದನ್ನು ಬಿಟ್ಟೆವು!

ಸುಮಾರು ಒಂದು ತಿಂಗಳ ಕಾಲ ನಮ್ಮ ವ್ರತ, ಅಂಗಸಾಧನೆ ನಡೆದಿರಬಹುದು. ಬರಬರುತ್ತಾ ನಮ್ಮ ದೇಹದಲ್ಲಿ ದೌರ್ಬಲ್ಯ ಬೆಳೆಯತೊಡಗಿತು ನಿಸ್ತೇಜರಾಗತೊಡಗಿದೆವು. ನಿರುತ್ಸಾಹವುಂಟಾಗತೊಡಗಿತು. ಒಂದು ಸಂಜೆ ವಾಯುಸಂಚಾರಕ್ಕೆಂದು ನೂರಡಿ ರಸ್ತೆಯಲ್ಲಿ ಇಬ್ಬರೂ ಹೋಗುತ್ತಿದ್ದಾಗ ಜಿ.ಎಸ್.ಎಸ್.ಗೆ ಕಣ್ಣು ಕತ್ತಲೆಕಟ್ಟಿ ಹಾಗೆಯೇ ಕುಸಿದು ಬಿದ್ದರು! ರಸ್ತೆಯಲ್ಲಿ ಬರುತ್ತಿದ್ದ ಜನರ ಸಹಾಯದಿಂದ ಅವರನ್ನು ಹತ್ತಿರದ ಒಬ್ಬ ವೈದ್ಯರ ಅಂಗಡಿಗೆ ಒಯ್ದು 'ಪ್ರಥಮ ಚಿಕಿತ್ಸೆ' ನಡೆಸಿ. ಗಾಡಿ ಮಾಡಿಕೊಂಡು ಕೋಣೆಯನ್ನು ತಲುಪಿದೆವು!

ಅಂದಿನಿಂದ

ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂ ಕುತಃ
ತಸ್ಮಾತ್ ಸರ್ವಪ್ರಯತ್ನೇನ ಋಣಂ ಕೃತ್ವಾ ಘೃತಂ ಪಿಬ

ಎಂಬ ಚಾರ್ವಾಕರ ಮಾತೇ ನಮಗೆ ತುಂಬ ಪ್ರಿಯವೆನಿಸಿತು. ಗರಡಿಯ ಮನೆಗೆ ಶರಣು ಹೊಡೆದೆವು. ಕಾಫಿ ಸೇವನೆ ಯಥಾ ಪ್ರಕಾರ ಮುಂದುವರಿಯಿತು ಸ್ವಲ್ಪ ದಿನ ನಮ್ಮ 'ಗರಡಿ'—ಅಧ್ಯಾಪಕರಿಗೆ ಮುಖ ತೋರಿಸುವುದಕ್ಕೆ ಹಿಂಜರಿಕೆಯುಂಟಾಗುತ್ತಿತ್ತಷ್ಟೆ!

ಜಿ.ಎಸ್.ಎಸ್.ರವರ ಸರಸತೆಯೂ ಬಳಿಯಲ್ಲಿದ್ದವರಿಗೆ ಅಪರಿಚಿತವಲ್ಲ. ಒಂದು ಸಣ್ಣ ಘಟನೆ ಇಲ್ಲಿ ಸ್ಮರಣೆಗೆ ಬರುತ್ತದೆ. ಮೊದಲ ವರ್ಷದಲ್ಲಿ ಒಬ್ಬ ಅಧ್ಯಾಪಕರು ಕಾವ್ಯ ವಿಮರ್ಶೆಗೆ ಸಂಬಂಧಿಸಿದ ಒಂದು ಪಾಠವನ್ನು ಮಾಡುತ್ತಿದ್ದರು. ಅವರು ದೊಡ್ಡ ವಿದ್ವಾಂಸರು, ವಾಗ್ಮಿಗಳು, ಸವ್ಯಸಾಚಿಗಳು—ಇಂಗ್ಲಿಷು ಕನ್ನಡ ಎರಡರಲ್ಲೂ ನಿರರ್ಗಳ ವಾಗಿ ಒಂದಕ್ಕೊಂದು ಹೊಯ್‌ಕಯ್ ಆಗುವಂತೆ ಮಾತನಾಡುತ್ತಿದ್ದರು. ಕನ್ನಡ ತರಗತಿಯೆಂಬ ಮಡಿವಂತಿಕೆಯಿಲ್ಲದೆ ಮನಸಿನ ಭಾವಕ್ಕೆ ಹೊಂದುವ ಭಾಷೆಯನ್ನು ಬಳಸುತ್ತಿದ್ದರು. ಕೇಳುವುದಕ್ಕೆ ತುಂಬ ಹಿತವಾಗಿರುತ್ತಿತ್ತು. ಆದರೆ ಏನು ಮಾತನಾಡಿದರೆಂದು ಅನಂತರ ಯೋಚಿಸಿದರೆ ತಲೆಯಲ್ಲಿ ಏನೂ ಉಳಿದಿರುತ್ತಿರಲಿಲ್ಲ!

ಅವರ ಬಾಯಿ ಮಾತನಾಡುತ್ತಿದ್ದಂತೆ ಅವರ ಕೈಯೂ ಸುಮ್ಮನಿರುತ್ತಿರಲಿಲ್ಲ. ಸೀಮೆ ಸುಣ್ಣ ಹಿಡಿದು ಬೆನ್ನ ಹಿಂದಿದ್ದ ಕರಿಹಲಗೆಯ ಮೇಲೆ ತಾವಾಡಿದ ಮುಖ್ಯ ಶಬ್ದಗಳನ್ನು ಉಲ್ಲೇಖಿಸುತ್ತಿದ್ದರು. ಮುಖ ನಮ್ಮ ಕಡೆಗಿದ್ದರೂ ಕೈ ಕರಿಹಲಗೆಯಮೇಲೆ ಕೆಲಸ ಮಾಡುತ್ತಿತ್ತು. ಅವರ ಭಾಷಣದ ವೇಗಕ್ಕನುಗುಣವಾಗಿಯೇ ಕೈಯೂ ಕೆಲಸಮಾಡು ತ್ತಿತ್ತು. ಕಡೆಗೆ ಆ ಬರೆದ ಶಬ್ದಗಳಿಗೆಲ್ಲ ಒಂದು ಸೊನ್ನೆ ಸುತ್ತಿ ಮುಕ್ತಾಯಗೊಳಿಸು ತ್ತಿದ್ದರು.

ಮಿಕಿಮಿಗ ನೋಡುತ್ತಾ ಕಿವಿಯರಳಿಸಿಕೊಂಡು ಕೇಳುತ್ತಾ ಕುಳಿತುಕೊಳ್ಳುವುದಷ್ಟೇ ನಮ್ಮ ಕೆಲಸ. ಒಂದು ಸಲ, ಪಕ್ಕದಲ್ಲಿ ಕುಳಿತಿದ್ದ ಜಿ.ಎಸ್.ಎಸ್. ಕಿವಿಯಲ್ಲಿ ಪಿಸು ಗುಟ್ಟಿದರು "ನೋಡು, ಕೊನೆಯಲ್ಲಿ ಹಾಕಿದರಲ್ಲ ಆ ದೊಡ್ಡ ಸೊನ್ನೆ, ಅದೇ ನಮ್ಮ ತಲೆ ಯಲ್ಲಿ ಉಳಿಯುವುದು!"

ನಾವು ನಡೆಸಿದ ಒಂದು ಸಾಹಸದ ಕೆಲಸವನ್ನು ನಾನು ಮರೆಯಲಾರೆ. ಡಾ. ಎಸ್. ಶ್ರೀಕಂಠಶಾಸ್ತ್ರೀ ಅವರು ಕರ್ನಾಟಕದ ರಾಜಕೀಯ ಹಾಗೂ ಸಾಂಸ್ಕೃತಿಕ ಇತಿಹಾಸವನ್ನು ನಮಗೆ ಬೋಧಿಸುತ್ತಿದ್ದರು. ಎರಡನೇ ವರ್ಷದ ಅಂತ್ಯದಲ್ಲಿ ಪರೀಕ್ಷೆ. ಪರೀಕ್ಷೆಯಲ್ಲಿ ಏನು ಕೇಳುವರೋ ಎಂಬ ಆತಂಕ. ಕೊನೆಯ ತರಗತಿಯಲ್ಲಿ ಪರೀಕ್ಷೆಗೆ ವಿಶೇಷವಾಗಿ ಗಮನ ಕೊಡಬೇಕಾದ ಭಾಗಗಳಾವುವೆಂದು ಡಾ. ಶಾಸ್ತ್ರೀಯವರನ್ನು ಕೆದಕಿ ಕೇಳಿದೆವು. ಅವರ ಮಾತಿನ ಧಾಟಿಯಲ್ಲಿ ಹೊಯ್ಸಳ ವಾಸ್ತುಶಿಲ್ಪದ ಬಗ್ಗೆ ಪ್ರಶ್ನೆ ಇರಲೇಬಹುದೆಂದು ಸುಳಿವು ಸಿಕ್ಕಿತು. ಸರಿ, ಹೊಯ್ಸಳ ಪದ್ಧತಿಯ ದೇವಾಲಯ ರಚನೆಯ ಬಗ್ಗೆ ಪುಸ್ತಕ ದಲ್ಲಿ ಓದುವುದಕ್ಕಿಂತ ಕಣ್ಣಿನಿಂದಲೇ ಯಾಕೆ ಹೋಗಿ ದೇವಾಲಯವನ್ನು ವಿವರವಾಗಿ ನೋಡಿ ಬರಬಾರದು ಎಂದು ಯೋಚನೆ ಬಂತು. ಗೆಳೆಯರು ಮೂವರಲ್ಲಿ ಸಮಾ ಲೋಚನೆ ನಡೆಯಿತು—ನಾನು, ಜಿ.ಎಸ್.ಎಸ್. ಮತ್ತು ಎಸ್.ಕೆ.ಆರ್. ಹೋಗು ವುದೆಲ್ಲಿಗೆ? ಬೇಲೂರಿಗೋ ಹಳೆಯಬೀಡಿಗೋ ಸೋಮನಾಥಪುರಕ್ಕೋ? ಮೊದಲೆರಡೂ ಊರುಗಳು ದೂರ; ಹತ್ತಿರದ ಸೋಮನಾಥಪುರಕ್ಕೇ ಹೋಗುವುದೆಂದು ನಿಶ್ಚಯ ವಾಯಿತು. ಹೋಗುವುದು ಹೇಗೆ? ಬೈಸಿಕಲ್ಲುಗಳ ಮೇಲೆ.

ಮಾರನೆಯ ದಿನ ಬೆಳಗ್ಗೆ ಮೂವರೂ ಉಪಾಹಾರ ಮುಗಿಸಿ ಮೂರು ಬೈಸಿಕಲ್

ಹತ್ತಿದೆವು. "ಬಾಗಿಲೊಳು ಕೈ ಮುಗಿದು ಒಳಗೆ ಬಾ ಯಾತ್ರಿಕನೆ, ಶಿಲೆಯಲ್ಲವೀ ಗುಡಿಯುಉ ಕಲೆಯು ಬಲೆಯುಉ!" ಎಂಬ ಕುವೆಂಪು ಅವರ ಹಾಡು ನಮ್ಮ ಕಿವಿಯಲ್ಲಿ ಮೊಳಗುತ್ತಿತ್ತು. ಸುಲಭವಾಗಿ ದಾರಿ ಸಾಗಿತು. ಆದರೆ ೨೨ ಮೈಲಿ ಮುಗಿಸುವ ವೇಳೆಗೆ ಕೈಕಾಲು ಸೋತಿತ್ತು, ಹಸಿವಾಗುತ್ತಿತ್ತು. ಆ ದಿನಗಳಲ್ಲಿ ಸೋಮನಾಥಪುರದಲ್ಲಿ ಒಂದು ಗುಡಿಸಿಲಿನ ಹೋಟಲು ಸಹ ಇರಲಿಲ್ಲ. 'ಶರೀರಮಾದ್ಯಂ ಖಲು ಧರ್ಮಸಾಧನಂ!' ಹೇಗೂ ದೇವಸ್ಥಾನವನ್ನು ನೋಡುವುದಾಗುತ್ತದೆ. ಹೊಟ್ಟೆಯ ಪಾಡು? ಮತ್ತೆ ಸಂಜೆಯ ವೇಳೆಗೆ ಮೈಸೂರಿಗೆ ಬೇರೆ ಹಿಂತಿರುಗಬೇಕು, ತ್ರಾಣ ಬೇಡವೆ?

ಪುಣ್ಯವಶಾತ್ ಮಹಾನುಭಾವರೊಬ್ಬರು ಸಲಹೆ ಕೊಟ್ಟರು—ಶಾನುಭೋಗರ ಮನೆಯಲ್ಲಿ ತಿಳಿಸಿದರೆ ಊಟ ಹಾಕುತಾರೆಂದು. ಸರಿ, ಶಾನುಭೋಗರ ಮನೆಗೆ ಹೋದೆವು. ವಿದ್ಯಾರ್ಥಿಗಳೆಂದು ಪರಿಚಯ ಹೇಳಿಕೊಂಡೆವು. ಶಾನುಭೋಗರು ಸಂತೋಷದಿಂದ ಸ್ವಾಗತಿಸಿ "ಹೊಳೆಯಲ್ಲಿ ಸ್ನಾನಮಾಡಿ ದೇವಾಲಯವನ್ನು ನೋಡಿಕೊಂಡು ಬನ್ನಿ. ಆ ವೇಳೆಗೆ ಅಡಿಗೆ ಸಿದ್ಧವಾಗಿರುತ್ತೆ" ಎಂದರು. ನಮಗೂ ಪರಮ ಸಂತೋಷವಾಯಿತು. ನಾವು ಅಲ್ಲಿಂದ ಹೊರಟಾಗ ಶಾನುಭೋಗರು "ನೀವು ನಮ್ಮವರೇ ತಾನೇ?" ಎಂದರು. ನಾನು "ಹೌದು" ಎಂದು ತಲೆ ಕುಣಿಸಿಬಿಟ್ಟೆ.

ನಾವು ಮೂವರೂ ತ್ರಿಮತಸ್ಥರು! ನಾನು ಹೌದೆಂದುದಕ್ಕೆ ನನ್ನ ಮಿತ್ರರಿಬ್ಬರೂ ನನ್ನನ್ನು ಆಕ್ಷೇಪಿಸಿದರು. ಅದಕ್ಕೆ ನಾನು "ನಮಗೆ ಈಗ ಊಟ ಬೇಕೇಬೇಕು. ಅವರಿಗೆ ಹೇಳಿದ್ದಾಯಿತು. ಸುಮ್ಮನಿರಿ. 'ನ ಬ್ರೂಯಾತ್ ಸತ್ಯಮಪ್ರಿಯಂ' ಎಂದು ಮನು ಹೇಳಿದ್ದಾನೆ! ಆದ್ದರಿಂದ ಅವರಿಗೆ ಅಪ್ರಿಯವಾಗುವ ಸತ್ಯವನ್ನೇಕೆ ಹೇಳಬೇಕು?" ಎಂದು ಸಮಾಧಾನ ಪಡಿಸಿದೆ. ಊಟಕ್ಕೆ ಕುಳಿತುಕೊಳ್ಳುವಾಗ ನನ್ನನ್ನೇ ನೋಡುತ್ತಿದ್ದು ನಾನು ಮಾಡಿದಂತೆ ಮಾಡಿಬಿಡಿ ಎಂದು ಸಲಹೆ ಕೊಟ್ಟೆ.

ಕಾವೇರಿಯ ಸ್ನಾನ ಆನಂದವಾಗಿತ್ತು. ನಮ್ಮ ಪ್ರಯಾಣದ ಆಯಾಸವೆಲ್ಲ ಪರಿಹಾರವಾಯಿತು. ದೇವಾಲಯವನ್ನು ನೋಡಿದ ಮೇಲೆ ಮನಸ್ಸು ಪ್ರಫುಲ್ಲವಾಯಿತು. ಶಾನುಭೋಗರೂ ವಿಶಾಲ ಮನೋಭಾವದವರು. ಆಕಸ್ಮಾತ್ ಅವರ ಅಳಿಯನೂ ಮನೆಗೆ ಬಂದಿದ್ದುದರಿಂದ—ಬರುವಾಗ ಮಾವಿನ ಹಣ್ಣುಗಳನ್ನೂ ತಂದಿದ್ದುದರಿಂದ—ನಾವು ನಿರೀಕ್ಷಿಸಿದ್ದುದಕ್ಕಿಂತ ಅಚ್ಚುಕಟ್ಟಾದ ಊಟವೇ ದೊರೆಯಿತು. ನಾನು ಮಿತ್ರರಿಗೆ ಕಲಿಸಿದ್ದ ನಾಟಕವೂ ಯಶಸ್ವಿಯಾಗಿ ನೆರವೇರಿತು! ಸುರಕ್ಷಿತವಾಗಿ ಮೈಸೂರಿಗೆ ಹಿಂತಿರುಗಿದೆವು. ಪರೀಕ್ಷೆಯಲ್ಲಿ ಹೊಯ್ಸಳ ವಾಸ್ತುಶಿಲ್ಪದ ಬಗ್ಗೆ ಚೆನ್ನಾಗಿ ಬರೆದೆವು!

ಒಂದೇ ಅಭಿರುಚಿಯ ಜನ ಪರಸ್ಪರ ಆಕೃಷ್ಟರಾಗುವುದು ಸ್ವಾಭಾವಿಕ. ಸಹಾಧ್ಯಾಯಿಗಳಾಗಿದ್ದ ನಾವಿಬ್ಬರೂ ಪರಸ್ಪರ ಹತ್ತಿರ ಬಂದೆವು. ಒಬ್ಬರನ್ನೊಬ್ಬರು ಅರ್ಥಮಾಡಿಕೊಂಡೆವು. ಇಬ್ಬರಲ್ಲೂ ಪರಸ್ಪರ ಆತ್ಮೀಯತೆ ಬೆಳೆಯಿತು. ಏಕವಚನದ ಗೆಳೆಯರಾದೆವು. ವಾರವಾರ ಜೊತೆಗೂಡಿ ರಾಮಕೃಷ್ಣಾಶ್ರಮಕ್ಕೆ ಹೋಗಿ ಬರುತ್ತಿದ್ದೆವು. ಕಾಸ್ಮೊಪಾಲಿಟನ್ ಕ್ಲಬ್ಬಿನ ಹಿಂದಿದ್ದ ಉದ್ಯಾನದ ನೆರಳಿನಲ್ಲಿ ಕುಳಿತು ಭಾವೆಯವರ

"ಗೀತಾಪ್ರವಚನ"ವನ್ನು ಓದಿದೆವು. ಶ್ರೀರಂಗಪಟ್ಟಣದ ನದೀತೀರದಲ್ಲಿ Gospel of Sri Ramakrishna ಓದಿದೆವು. ವಿನೋದ ಪ್ರಸಂಗಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುತ್ತಿದ್ದೆವು. ಎಷ್ಟೋ ವೇಳೆ ವೈಯಕ್ತಿಕ ಸುಖದುಃಖಗಳ ವಿನಿಮಯವೂ ನಡೆದಿದೆ.

ದರ್ಶನೇ ಸ್ಪರ್ಶನೇ ವಾಪಿ ಶ್ರವಣೇ ಭಾಷಣೇಽಪಿ ವಾ
ಯತ್ರ ದ್ರವತ್ಯಂತರಂಗಂ ಸ ಸ್ನೇಹ ಇತಿ ಕಥ್ಯತೇ

ಯೋಗಾಯೋಗದಿಂದ ನಮ್ಮಿಬ್ಬರ ಸ್ನೇಹ ಅಂತಹದಾಯಿತು.

## ಎಚ್. ದೇವೀರಪ್ಪ

# ಬೆಳುವಲದ ಬೆಳಕು

ಬೆಳುವಲನಾಡು ಕರ್ನಾಟಕದ ಮೋಟೆಯಿದ್ದಂತೆ. ಆ ಹೆಸರೇ ಸೂಚಿಸುವಂತೆ ಬಹು ಸಾರವತ್ತಾದ ಫಲವತ್ತಾದ ನೆಲ. ಬಹು ಪ್ರಾಚೀನ ಕಾಲದಿಂದಲೂ ತನ್ನ ಗುಣವನ್ನು ಉಳಿಸಿಕೊಂಡು ಬೆಳೆಸಿಕೊಂಡು ಬಂದಿದೆ. ಪ್ರಾಕೃತಿಕವಾಗಿ ಅಷ್ಟೇ ಅಲ್ಲ, ಧಾರ್ಮಿಕ, ಸಾಂಸ್ಕೃತಿಕ, ಸಾಹಿತ್ಯಿಕ ದೃಷ್ಟಿಗಳಿಂದಲೂ ಅಷ್ಟೇ ಹುಲುಸಾದ ಬೆಳೆ ಅದರದ್ದು. ಕರ್ನಾಟಕದ ಪ್ರಪ್ರಥಮ ವಿಶ್ವವಿದ್ಯಾನಿಲಯ (ಕೋಡಿ ಮಠ) ಮೂಡಿಬಂದುದು ಅಲ್ಲಿ. ಮಹಾಕವಿ ಪಂಪನು "ಅರಂಕುಸಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ" ಎಂದಿದ್ದಾನಲ್ಲ. ಆ ಬನವಾಸಿ ಬೆಳುವಲದ ಒಂದು ಪಟ್ಟಣ. ಅಲ್ಲಮ, ಮಹಾದೇವಿಯಕ್ಕ, ಆದಯ್ಯ, ಏಕಾಂತದ ರಾಮಯ್ಯ, ಕುಮಾರವ್ಯಾಸ, ಕನಕದಾಸ, ಷರೀಫ್ ಸಾಹೇಬ್– ಮುಂತಾದ ಮಹಾಜ್ಞಾನಿಗಳು, ಅನುಭಾವಿಗಳು ವಚನಕಾರರು, ಧರ್ಮಾಭಿಮಾನಿಗಳು, ಕವಿಕುಲಗುರುಗಳು, ಭಕ್ತರು, ಆರೂಢರು—ಈ ಮುಂತಾದವರು ಬೆಳುವಲನಾಡಿನ ಭಾಗ್ಯತಾರೆಗಳು. ಶರಣ ಶಿವರುದ್ರಪ್ಪನವರು ಅದೇ ಪರಂಪರೆಗೆ ಸೇರಿದವರು. ಅದೇ ನಾಡಿನಲ್ಲಿ ಹುಟ್ಟಿ ಬೆಳೆದವರು ; ಬೆಳೆಯುತ್ತಲೇ 'ಇರು'ವವರು.

ನಾಗರ ಖಂಡ ಬೆಳುವಲ ನಾಡಿನ ಕೇಂದ್ರ ಬಿಂದು. ಅಲ್ಲಿಯ ಒಂದು ಪುಟ್ಟ ಹಳ್ಳಿಯಲ್ಲಿ ಜನ್ಮವೆತ್ತ ಈ ಬೆಳಕು ಬೆಳೆದು ಬಳ್ಳಿವರಿದು ಅದರ ಹೆಜ್ಜೆ ಶಿವಮೊಗ್ಗ, ಮೈಸೂರು, ಬೆಂಗಳೂರು, ಪಾಂಡಿಚೆರಿ, ದಿಳ್ಳಿ, ಮಾಸ್ಕೊ—ಎಷ್ಟು ಕಡೆ ಮೂಡಿರುತ್ತದೆ! ಅದು ಹೋದೆಡೆಯಲ್ಲೆಲ್ಲ ಬೆಳಕೇ ಬೆಳಕು!

ದೊಡ್ಡವರಲ್ಲಿ ಮೂರು ಬಗೆಯಂತೆ. ಒಂದು ಬಗೆಯವರು ತಾವಾಗಿಯೇ ದೊಡ್ಡವರಾದವರು; ಬೇರೆಯವರ ಪ್ರಯತ್ನದಿಂದ ದೊಡ್ಡವರಾದವರು ಕೆಲವರು ; ದೊಡ್ಡತನವನ್ನು ಹೇರಿಸಿಕೊಂಡವರು ಹಲವರು. ಶಿವರುದ್ರಪ್ಪನವರು ತಾವೇ 'ಆದ' ಮನುಷ್ಯರು. ಸನ್ನಿವೇಶ, ಸಮಾಜ, ಸದ್ಗುರುಗಳು, ಸತ್ಕಾರ್ಯಗಳು ಅಂತಹವರನ್ನು ಮತ್ತಷ್ಟು ಶಕ್ತಿವಂತರನ್ನಾಗಿ ಧೀಮಂತರನ್ನಾಗಿ ಮಾಡಬಲ್ಲುವು. ಅವರನ್ನೇ ಮಾಡುವುದಿಲ್ಲವಲ್ಲ. ಅದಕ್ಕೆ 'ಮಾರಾರಿಯ ಸತ್ಕೃಪೆ' ಅಗತ್ಯ. ಶಿವರುದ್ರಪ್ಪನವರು ಈ ನಿಯಮಕ್ಕೆ ಹೊರತಲ್ಲ.

ತಂದೆ ವೃತ್ತಿಯಿಂದ ಉಪಾಧ್ಯಾಯರು ; ಮಗ ಪ್ರವೃತ್ತಿಯಿಂದ ಉಪಾಧ್ಯಾಯರು. ಹಿರಿಯರು ಹಿಡಿದಿದ್ದ ಕಾಯಕವನ್ನೇ ಕಿರಿಯರು, ಮಕ್ಕಳು ಕೈಕೊಂಡಿರುವುದಕ್ಕೆ ಸಾವಿರ ಉದಾಹರಣೆಗಳಿವೆ. ಆದರೆ ಶಿವರುದ್ರಪ್ಪನವರಂತೆ ಉಪಾಧ್ಯಾಯರಾಗಿರುವವರು

ಎಷ್ಟು ಜನ? ಆದರ ಜೊತೆಗೆ ಕವಿ, ವಿಮರ್ಶಕ, ಕಲಾವಿಮರ್ಶಕ, ಜೀವನಚರಿತ ಕಾರ, ಸಂಪಾದಕ, ಭಾಷಣಕಾರ, ಇನ್ನೂ ಏನೇನೊ ಅವರಿಗೇ ಗೊತ್ತು! ಇವರಿಗೆ ಐವತ್ತು ತುಂಬಿದರೆ ಐವತ್ತೇ ವರ್ಷ ಎಂದು ಲೆಕ್ಕವೆ?

ಮೈಸೂರು ಮಹಾರಾಜಾ ಕಾಲೇಜಿನ ಬಿ.ಎ. (ಆನರ್ಸ್) ಪರೀಕ್ಷೆಗೆ ವ್ಯಾಸಂಗ ಮಾಡುತ್ತಿದ್ದಾಗಲೇ ಶಿವರುದ್ರಪ್ಪ ಪ್ರತಿಭಾವಂತ ವಿದ್ಯಾರ್ಥಿ ಎಂದು ವಿಖ್ಯಾತರಾಗಿದ್ದರು. ತಾವಾಯಿತು, ತಮ್ಮ ವ್ಯಾಸಂಗವಾಯಿತು. ಮತ್ತಾವ ಗೋಜಿಗೂ ಹೋದವರಲ್ಲ. ಕೆ. ವಿ. ಪುಟ್ಟಪ್ಪನವರು, ತೀ. ನಂ. ಶ್ರೀಕಂಠಯ್ಯನವರು, ಡೊ. ಲ. ನರಸಿಂಹಾ ಚಾರ್ಯರು, ವಿ. ಸೀತಾರಾಮಯ್ಯನವರು–ಮುಂತಾದ ವಿದ್ವತ್ ಗರುಡಿಯಲ್ಲಿ ಸಾಧನೆ ಮಾಡಿದವರಿವರು. ಬಿ.ಎ. (ಆನರ್ಸ್) ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣ ರಾದುದು ಮಾತ್ರವಲ್ಲ; ಆ ವರ್ಷದ ಬಿ.ಎ. (ಆನರ್ಸ್) ಪದವೀಧರರಲ್ಲೆಲ್ಲ ಪ್ರಪ್ರಥಮ ಸ್ಥಾನ ಪಡೆದರು. ಪ್ರಥಮ ವೈಸ್‌ಛಾನ್ಸಲರ್ ಎಚ್. ವಿ. ನಂಜುಂಡಯ್ಯನವರ ಸುವರ್ಣ ಪದಕ ಮೊದಲಾಗಿ ಅನೇಕ ಬಹುಮಾನಗಳನ್ನು ಪಡೆದರು. ಮುಂದೆ, ಎಂ.ಎ. ಪರೀಕ್ಷೆಯಲ್ಲಿಯೂ ತಮ್ಮ ಸ್ಥಾನವನ್ನು ಉಳಿಸಿಕೊಂಡರು.

ಇನ್ನೂ ವಿದ್ಯಾರ್ಥಿದೆಶೆಯಲ್ಲಿರುವಾಗಲೇ ಇವರ ಲೇಖನ ಕಾರ್ಯ ಪ್ರಾರಂಭ ವಾಗಿದ್ದಿತು. ಇವರ ಗುರುಗಳಲ್ಲೊಬ್ಬರಾದ ತ. ಸು. ಶಾಮರಾಯರಲ್ಲಿ ಒಂದು ದೊಡ್ಡ ಗುಣವಿದೆ. ಪ್ರತಿಭಾವಂತರಾದ ವಿದ್ಯಾರ್ಥಿಗಳು, ಲೇಖಕರು ಅವರು ಯಾರೇ ಆಗಿರಲಿ, ಅವರ ಯೋಗಕ್ಷೇಮ ವಿಚಾರಿಸುವುದು; ಕಷ್ಟದಲ್ಲಿದ್ದರೆ ತಮ್ಮ ಕಯ್ಯಲ್ಲಾದ ಸಹಾಯ ಮಾಡುವುದು. ಮನೆಗೆ ಕರೆದುಕೊಂಡು ಹೋಗಿ ರುಚಿರುಚಿಯಾದ ಊಟ, ತಿಂಡಿ ಹಾಕಿಸಿ ಪ್ರೋತ್ಸಾಹದ ಮಾತುಗಳನ್ನಾಡಿ ಅವರನ್ನು ಹುರಿದುಂಬಿಸುವುದು ಅವರ, ಅಲ್ಲ, ಅವರ ಮನೆತನದ ಪದ್ಧತಿ. ಶಿವರುದ್ರಪ್ಪ ಅವರನ್ನು ಆಕರ್ಷಿಸದೆ ಇದ್ದಾರೆ: "ನನ್ನ ಅಸ್ತವ್ಯಸ್ತವಾದ ಬದುಕಿನಲ್ಲಿ ಅವರಿಂದ ನನಗೆ ಆಗಿರುವ ಉಪಕಾರವನ್ನು ನಾನು ಈ ಜನ್ಮದಲ್ಲಿ ಎಣಿಸಿ ಮುಗಿಸುವುದು ಸಾಧ್ಯವಿಲ್ಲ" ಎಂದಿದ್ದಾರೆ ಅವರೆ. ಕೆ. ವಿ. ಪುಟ್ಟಪ್ಪ ನವರಿಗಂತೂ ಉದಯೋನ್ಮುಖ ಸಾಹಿತಿಗಳನ್ನು ಕಂಡರೆ ಎಲ್ಲೆಯಿಲ್ಲದ ಅಕ್ಕರೆ, ಅಭಿಮಾನ. ಎಳೆಯರಾಗಿದ್ದ ಶಿವರುದ್ರಪ್ಪ ಇಂತಹ ವಿದ್ವನ್‌ಮಣಿಗಳ, ರಸಿಕ ಸಜ್ಜನರ ಸಂಗದಲ್ಲಿ ಬೆಳೆದರು. ಇದು ಇವರ ಪುಣ್ಯವಿಶೇಷ.

ಅಧ್ಯಾಪಕನಾಗುವುದಕ್ಕೇ ಹುಟ್ಟಿರುವೆನೆಂದು ತಿಳಿದಿದ್ದ ಇವರಿಗೆ ಬೇರೆ ಹುದ್ದೆಗಳ ಆಶೆ ಒಂದುಸಲವಾದರೂ ಉಂಟಾಗಲಿಲ್ಲವೆಂದು ತೋರುತ್ತದೆ. ವ್ಯಾಸಂಗ ಮುಗಿದ ಕೂಡಲೇ ಅಧ್ಯಾಪಕ ಕೆಲಸ ಇವರಿಗಾಗಿ ಕಾದಿತ್ತು, ಅಧ್ಯಾಪಕರಾದರು. ಗ್ರಂಥಾವ ಲೋಕನ, ಲೇಖನ, ಅಧ್ಯಾಪನ ಕಾರ್ಯಗಳು ಜೊತೆ ಜೊತೆಗೇ ನಡೆಯಲಾರಂಭಿಸಿದುವು. ಸುಪ್ರಸಿದ್ಧ ಆಂಗ್ಲಕವಿಗಳ, ಕಲಾವಿಮರ್ಶಕರ, ಸಾಹಿತಿಗಳ ಉತ್ತಮ ಗ್ರಂಥಗಳ ಅಧ್ಯಯನ ನಿರಂತರವೂ ನಡೆಯುತ್ತಲೇ ಇತ್ತು. ಇವರ ಪಾಂಡಿತ್ಯ ಪರಿಪಕ್ವಗೊಳ್ಳ ಲಾರಂಭಿಸಿತು; ಪ್ರತಿಭೆ ಹೊಗರಿಕೊಂಡು ವಿಕಾಸಗೊಳ್ಳಲು ಆರಂಭಿಸಿತ್ತು. ಅಭಿರುಚಿ

ಅಭಿನವಗೊಳ್ಳುತ್ತಿದ್ದಿತು. ಲೇಖನ, ಕವಿತೆ, ವಿಮರ್ಶೆ ಒಂದೊಂದಾಗಿ ಇವರ ಲೇಖನಿಯಿಂದಿಳಿದು ಪ್ರಕಟವಾಗಲಾರಂಭಿಸಿದುವು. 'ಸಾಮಗಾನ' ಇವರ ಚೊಚ್ಚಿಲ ಕವನ ಸಂಗ್ರಹ. ಅದು ತ. ಸು. ಶಾಮರಾಯರು ಆರಂಭಿಸಿದ್ದ 'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ'ಯಲ್ಲಿ ಪ್ರಕಟಗೊಂಡಿತ್ತು. ಇನ್ನು ಪುಟ್ಟಪ್ಪನವರ ಪ್ರಭಾವಲಯದೊಳಗೇ ಇದ್ದ ಕವನಗಳ ಆ ಸಂಗ್ರಹಕ್ಕೆ ನಾವು ಕೆಲವರು 'ಶಾಮಗಾನ' ಎಂದು ಹಾಸ್ಯ ಮಾಡಿದ್ದುಂಟು.

ಇವರದೊಂದು ಚಿಕ್ಕ ಬಳಗವಿತ್ತು ಆ ದಿನಮಾನಗಳಲ್ಲಿ. ಶ್ರೀಯುತರಾದ ಪ್ರಭುಶಂಕರ, ಪ್ರಭು ಪ್ರಸಾದ್, ಇನ್ನಿತರರು ಇಬ್ಬರೋ ಮೂವರೋ—ಸಮಹೃದಯದ, ಸಮಾನಾಭಿರುಚಿಯ, ಹೊಸ ಹುರುಪಿನ ಹೊಸ ಹುಡುಗರು. ಇವರೆಲ್ಲ ಕೂಡಿ ಮೈಸೂರು ನಗರದ ಹೆದ್ದಾರಿಗಳಲ್ಲಿ ನಡೆಯುತ್ತಿದ್ದರೆ ಕನ್ನಡದ ನಿಜವಾದ ಕಲ್ಯಾಣವನ್ನು ಕಟ್ಟಿಲೆಳಸುವವರಿವರು ಎನ್ನಿಸುತ್ತಿತ್ತು, ನೋಡಿದವರಿಗೆ. ಆದುದೂ ಹಾಗೆಯೆ. ಇವರಲ್ಲೊಬ್ಬೊಬ್ಬರೂ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಔನ್ನತ್ಯವನ್ನು ಸಾಧಿಸಿಯೇ ಇದ್ದಾರೆ. ತಮ್ಮ ಹಿತೈಷಿಗಳ ನಿರೀಕ್ಷೆಯನ್ನು ಹುಸಿಗೊಳಿಸಲಿಲ್ಲ.

ಈ ಮಧ್ಯೆ ಶಿವರುದ್ರಪ್ಪನವರು ವರಕವಿ ಪುಟ್ಟಪ್ಪನವರ ಮಾರ್ಗದರ್ಶನದಲ್ಲಿ 'ಸೌಂದರ್ಯ ಸಮೀಕ್ಷೆ' ಎಂಬ ಸುಪ್ರೌಢ ನಿಬಂಧವನ್ನು ಬರೆದು ಮೈಸೂರು ವಿಶ್ವವಿದ್ಯಾನಿಲಯದ ಪಿ.ಎಚ್.ಡಿ. ಪದವಿ ಪಡೆದರು. ಪ್ರಾಚ್ಯ ಪಾಶ್ಚಾತ್ಯ ಕಲಾ ವಿಮರ್ಶಕರ, ಮುಖ್ಯವಾದ ಕನ್ನಡ ಕವಿಕುಲದ ಸೌಂದರ್ಯ ಪ್ರಜ್ಞೆಯನ್ನು ಕುರಿತ ಆ ಉದ್‌ಗ್ರಂಥ ಇಂದಿಗೂ ಒಂದು ಉತ್ತಮ ಸಂದರ್ಭಗ್ರಂಥವಾಗಿರುತ್ತದೆ.

ಒಂದುಸಲ— ಅದು ಯಾವ ವರ್ಷವೋ ತಿಳಿಯದು—ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದಲ್ಲಿ ಕನ್ನಡ ಪಾಠಕ (ರೀಡರ್)ನ ಸ್ಥಾನ ತೆರವಾಗಿದ್ದಿತು. ಇನ್ನೇನು, ಶಿವರುದ್ರಪ್ಪನವರೇ ಆ ಸ್ಥಾನಕ್ಕೆ ಆಯ್ಕೆಯಾಗುವರೆಂದು ಇವರ ಅಭಿಮಾನಿಗಳ ನಿರೀಕ್ಷೆ. ಆದರೆ, ವಯಸ್ಸಿನಲ್ಲಿಯೂ ವಿದ್ವತ್ತಿನಲ್ಲಿಯೂ ಇವರಿಗಿಂತ ಹಿರಿಯರಾದ ಶ್ರೀ ಎಲ್. ಬಸವರಾಜು ಡಿ.ಲಿಟ್ ಅವರೂ ಅದೇ ಹುದ್ದೆಗೆ ಅಭ್ಯರ್ಥಿಗಳಾಗಿದ್ದರು. ಅವರಿಗೆ ರೀಡರ್ ಕೆಲಸ ಸಿಕ್ಕಿತು. ಇದರಿಂದ ಎಲ್ಲರಿಗಿಂತ ಹೆಚ್ಚಾಗಿ ಶಿವರುದ್ರಪ್ಪನವರಿಗೇ ಸಮಾಧಾನ ಸಂತೋಷ ಆಯಿತೆಂದು ತೋರುತ್ತದೆ. 'ಕೊಡುವ ಶಿವ ಎಲ್ಲಿದ್ದರೂ ಪಡಿ ಅಳೆಯುತ್ತಾನೆ.' ಇವರಿಗೂ ಹೈದರಾಬಾದಿನ ಉಸ್ಮಾನಿಯ ವಿಶ್ವವಿದ್ಯಾಲಯದಲ್ಲಿ ಕನ್ನಡ ರೀಡರ್ ಹುದ್ದೆ ಸಿಕ್ಕಿತ್ತು. ಆಂಧ್ರರ ಕೇಂದ್ರವಾಗಿದ್ದ ಹೈದರಾಬಾದಿನಲ್ಲಿಯೂ ಕನ್ನಡದ ವಿದ್ಯಾಮಂಟಪವನ್ನು ಕಟ್ಟಿ ಬೆಳೆಸುವ ಕಾರ್ಯವನ್ನು ಹಮ್ಮಿಕೊಂಡರು. ಆದರೆ ಆ ತೆಲುಗು ಸೀಮೆಯ ಬಿರುಬಿಸಿಲು, ಉರಿಮೆಣಸಿನಕಾಯಿ! ಆಂಧ್ರ, ಉರ್ದುಗಳ ನಡುವೆ ಕನ್ನಡದ ಕುರುಮ! ಗರಿಗೆದರಿ ಸುವಿಶಾಲ ಸುಂದರ ಗಗನದಲ್ಲಿ ನಿರಾತಂಕವಾಗಿ ತೇಲಾಡುತ್ತಿದ್ದ ಈ ಬೆಳ್ಳಕ್ಕಿಗೆ ಬಹಳ ಇಕ್ಕಟ್ಟು, ಕಿರಿಕಿರಿ ಆಗಿರಬೇಕು. ಮತ್ತೆ ಮೈಸೂರಿಗೆ ಮರಳಿತು.

ಶಿವರುದ್ರಪ್ಪನವರು ತಮ್ಮದೇ ಆದ ಒಂದು ದಾರಿಯನ್ನೂ ನಡಗೆಯನ್ನೂ ನೆಲೆಯನ್ನೂ ಕಂಡುಕೊಂಡವರು. ಬೇರೆಯವರ ನೆಲೆ, ಕಲೆ, ಬೆಲೆಗಳನ್ನು ಇವರು ಅರಿತಿಲ್ಲವೆಂದಲ್ಲ. ಅವೆಲ್ಲವನ್ನೂ ಅರಿತುಕೊಂಡು ಅರಗಿಸಿಕೊಂಡು ಮತ್ತೂ ತಮ್ಮದೇ ಆದ ನಿಲವಿನಲ್ಲಿಯೇ ನಿಂತಾರು. ಕೆ. ವಿ. ಪುಟ್ಟಪ್ಪನವರ ಪ್ರಭಾವ ಇವರ ಮೊದಮೊದಲಿನ ಕವನಗಳಲ್ಲಿ ಲೇಖನಗಳಲ್ಲಿ ಕಾಣಿಸಿಕೊಂಡಿತ್ತು. ಬೆಳೆಯುತ್ತ ಬೆಳೆಯುತ್ತ ತಮ್ಮತನವನ್ನು ಕಂಡುಕೊಂಡುದು ಇವರ ಒಂದು ಹೆಚ್ಚುಗಾರಿಕೆ. ಬಾಲಬಡುಕತನಕ್ಕೂ ಇವರಿಗೂ ಬಲುದೂರ. ಮಾತು ಕಡಿಮೆ. ಮಾತಾಡಿದರೆ ಇದ್ದುದನ್ನು ಇದ್ದಂತೆಯೇ ಗುಂಡು ಹೊಡೆದಂತೆ ಹೇಳಬಲ್ಲ ಎದೆಗಾರಿಕೆ. ತಾನು ಮೇಲಾದ ಕವಿ ಎಂಬ ಸಂತೃಪ್ತ ಮನೋಭಾವ ಬೇರೆ; ಯಾವ 'ಮತ', 'ಮಠ'ಕ್ಕೂ ಸೇರಲೆಳಸದ ಹಿಂಡನಗಲಿದ ಗಜದಂತಹ 'ಸರ್ವಜ್ಞಸ್ವಭಾವ,' ಈ ಗುಣಗಳೇ ಕೆಲವರಿಗೆ ದೋಷವೆಂಬಂತೆ ಕಂಡುದರಿಂದಲೋ ಏನೋ, ಮೈಸೂರಿನಲ್ಲಿ ಇವರ ದಕ್ಷತೆ, ಯೋಗ್ಯತೆ, ಪ್ರತಿಭೆ, ಪಾಂಡಿತ್ಯ, ಪ್ರಾಮಾಣಿಕತೆಗಳಿಗೆ ತಕ್ಕಂತಹ ಸ್ಥಾನಮಾನಗಳು ಸಿಕ್ಕುವ ಸಂಭವ ಇರಲಿಲ್ಲವೆಂದು ನನಗೆನ್ನಿಸುತ್ತದೆ.

ಕೆಲವು ದಿನಗಳು ಸರಿದುವು. ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ಒಂದು ಕನ್ನಡ ರೀಡರ್ ಸ್ಥಾನ ತೆರವಾಗಿದ್ದು ಆ ಸ್ಥಾನಕ್ಕೆ ಅರ್ಜಿಗಳನ್ನು ಕರೆಯಲಾಗಿತ್ತು. ಇವರೂ ಅರ್ಜಿ ಹಾಕಿದ್ದರು ; ಬೇರೆಯವರೂ ಹಾಕಿದ್ದರು. ಕೆಲವು ಆಸುರೀ ಶಕ್ತಿಗಳು ನೆಲಮುಗಿಲುಗಳನ್ನಲುಗಿಸುತ್ತ ಇವರಿಗೆ ವಿರೋಧವಾಗಿದ್ದುವು. ಆದರೂ ದೈವಕೃಪೆ ನಿಜವಾದ ವಿದ್ಯಾಭಿಮಾನಿಗಳ ಸತತ ಪ್ರಯತ್ನಗಳ ಫಲವಾಗಿ ಶಿವರುಪ್ರಪ್ಪನವರು 'ರೀಡರ್' ಸ್ಥಾನಕ್ಕೇರಿದರು.

ಕನ್ನಡ ಜನತೆಯಲ್ಲಿ ಒಂದು ನಂಬಿಕೆ ಇದೆ. ಕೆಲವು ದಯ್ಯಗಳಿರುತ್ತವೆಯಂತೆ. ಅವುಗಳಿಗೆ ಶಿರಬಾಗಿ ಮಣಿದು ಧೂಪ, ದೀಪ, ಹಿಂಡೆಕೊಳು ಹಾಕಿದವರಿಗೆ ಅವು ಏನೂ ಮಾಡುವುದಿಲ್ಲವಂತೆ. ಅಂತಹ ಭಕ್ತರು ಅವೇಳೆಯಲ್ಲಿ ಕತ್ತಲ ರಾತ್ರಿಯಲ್ಲಿ ತಮ್ಮ ಸೀಮೆಗೆ ಬಂದರೆ ಅವರಿಗೆ ಕೊಳ್ಳಿ ಹಿಡಿದು ದಾರಿ ತೋರಿಸಿ ತನ್ನ ಗಡಿ ದಾಟಿಸಿ ಹೋಗುತ್ತವೆಯಂತೆ. ಅವುಗಳ ಆಧಿಪತ್ಯಕ್ಕೂ ಸೀಮಾರೇಖೆ ಇರುತ್ತವೆಯಂತೆ. ಅವಕ್ಕೆ ಮಣಿಯದೆ ಸೆಟೆದುನಿಂತವರನ್ನು ಮುರಿದು ಮುಕ್ಕಿ ಮುಗಿಸಿಬಿಡುತ್ತವೆಯಂತೆ. ಅದೃಷ್ಟಗಟ್ಟಿಯಾಗಿದ್ದವರು ತಮ್ಮ ಬುದ್ಧಿ, ಮಂತ್ರಸಿದ್ಧಿ, ತಂತ್ರ ವಿದ್ಯೆಯ ಬಲದಿಂದ ವಿಶ್ವಪ್ರಯತ್ನ ಮಾಡಿ ತಪ್ಪಿಸಿಕೊಂಡು ಹೋದರೆನ್ನಿ. ಆಗ ಅವು, 'ಗಡಿದಾಟಿ ಬದುಕಿದೆ ಹೋಗು' ಎಂದು ಗದರಿ ಹಿಂದಕ್ಕೆ ಹೋಗುತ್ತವೆಯಂತೆ.

ಡಾ. ರಂ. ಶ್ರೀ. ಮುಗಳಿ ಅವರು ನಿವೃತ್ತರಾದ ಮೇಲೆ ಶಿವರುದ್ರಪ್ಪನವರು ಪ್ರಾಧ್ಯಾಪಕ ಪದವಿಗೆ ಏರಿ ಕನ್ನಡ ಅಧ್ಯಯನ ಕೇಂದ್ರದ ಮುಖ್ಯರೂ ಆಗಿ ನಾಡುನುಡಿಗಳ ಸೇವೆಯನ್ನು ಕನ್ನಡದ ಅಭಿಮಾನಿಗಳಿಗೆ ಮೆಚ್ಚುಗೆಯಾಗುವಂತೆ ನಡೆಸುತ್ತಿರುವರು.

ಸಾಮಗಾನ, ಚೆಲುವು–ಒಲವು, ದೇವಶಿಲ್ಪ, ದೀಪದ ಹೆಜ್ಜೆ, ಕಾರ್ತೀಕ, ತೀರ್ಥವಾಣಿ, ಅನಾವರಣ, ಗೋಡೆ–ಇವು ಶಿವರುದ್ರಪ್ಪನವರ ಕೆಲವು ಕವನ ಸಂಗ್ರಹಗಳು. ಹೆಸರಿಡುವುದರಲ್ಲಿಯೂ ಔಚಿತ್ಯ ಅಚ್ಚುಕಟ್ಟುತನ. ಕರ್ಮಯೋಗಿ, ವಿಮರ್ಶೆಯ ಪೂರ್ವಪಶ್ಚಿಮ, ಪರಿಶೀಲನ, ಗತಿಬಿಂಬ ಮುಂತಾದುವು ಇವರ ಗದ್ಯಕೃತಿಗಳು. ಇತ್ತೀಚೆಗೆ ತಮ್ಮ ರಷ್ಯಾ ಪ್ರವಾಸವನ್ನು ಕುರಿತು ಒಂದು ಪ್ರವಾಸ ಸಾಹಿತ್ಯಕೃತಿಯನ್ನೂ ರಚಿಸಿದ್ದಾರೆ. ಇವರ ಹಲವಾರು ಲೇಖನಗಳು ಅನೇಕ ನಿಯತಕಾಲಿಕಗಳಲ್ಲಿ ಅಚ್ಚಾಗಿವೆ. ಇವರ ನವ್ಯಕವಿತೆಗಳು ಎಲ್ಲರಿಗೂ ಅರ್ಥವಾಗುವಂತಿರುತ್ತವೆ. ಯಾವ ಬಗೆಯ ಯಾವ ಶೈಲಿಯ ಬರವಣಿಗೆಯೇ ಆಗಲಿ ಹೊಚ್ಚಹೊಸವಾದ ಭಾವಭಾಸನೆಗಳು; ಆಲೋಚನೆಗಳಿಂದ ತುಂಬಿಕೊಂಡಿರುತ್ತವೆ. ಗದ್ಯಲೇಖನ ಭಾಷಣಗಳಲ್ಲಿ ಅದೇ ನವುರು, ನಾಜೂಕು, ನಾವೀನ್ಯ; ಇವರ ದೃಷ್ಟಿ ಸೃಷ್ಟಿಗಳೆರಡೂ ಕಾಲಮಾನದೊಂದಿಗೇ ಬೆಳೆಯುತ್ತ ಬಂದಿವೆ; ಬೆಳೆಯುತ್ತ ಹೋಗುತ್ತಿವೆ.

ಈಗಿನ ವೃದ್ಧಕವಿಗಳಲ್ಲಿ ಕೆಲವರು ಯಾವುದಾದರೊಂದು 'ಆಶ್ರಮ'ದ ವಿದ್ಯಾರ್ಥಿಗಳಾಗಿ ಜನತೆಯನ್ನು ಕೈಬಿಟ್ಟು ನಿರಾಶೆಗೊಳಿಸಿರುವುದುಂಟು. ಆದರೆ ಶಿವರುದ್ರಪ್ಪನವರು ಆ ಶ್ರಮವನ್ನು ಮಾಡಿಲ್ಲ ಈವರೆಗೂ; ಯಾವ ಮಠವನ್ನೂ ಕಟ್ಟಿಲ್ಲ. ಕಟ್ಟಿದ ಮಠಕ್ಕೆ ಸೇರಿಯೂ ಇಲ್ಲ. ಹೀಗಿರುವುದೇ ಸರಿ, ಎಲ್ಲರವ ತಾನಾಗಿ, ಎಲ್ಲರಿಗೂ ಬೇಕಾಗಿ.

ಶಿವರುದ್ರಪ್ಪನವರು ಕನ್ನಡ 'ಭಾರತಿ'ಯ, ಆ ಮೂಲಕ ಭಾರತ ಭಾರತಿಯ ಸೇವೆಯನ್ನು ಇನ್ನೂ ಹೆಚ್ಚಾಗಿ ಮಾಡುವಂತಾಗಲಿ. ಇವರ ಮಣಿಹ ಇನ್ನೂ ಹಲವು ಕಾಲ, ಇವರಿಗೆ ನೂರು ತುಂಬುವವರೆಗೆ, ಬೇರೆ ಬೇರೆ ರೂಪಗಳಲ್ಲಿ ಸಲ್ಲುವಂತಾಗಲಿ. ಇವರೊಳಗಿರುವ 'ಶಿವರುದ್ರ'ನು ಹಿಂಸೆ, ಅನಾಚಾರ, ಭ್ರಷ್ಟಾಚಾರಗಳನ್ನು ಅವಿರುವವರೆಗೆ ಅನಾವರಣ ಮಾಡುತ್ತಿರಲಿ; ಇವರು ಬೆಳಗುವ ದೀಪದ ಹೆಜ್ಜೆ ಶ್ರೀಸಾಮಾನ್ಯನಿಗೂ ದಾರಿದೋರುತ್ತಿರಲಿ; ಇವರು ಸದಾಕಾಲವೂ ಜನಮನದ ಮನೆಯಲ್ಲಿ ಕಾರ್ತೀಕ ದೀಪೋತ್ಸವವನ್ನು ನಡೆಸುತ್ತಿರಲಿ.

## ಎಂ. ಚಿದಾನಂದಮೂರ್ತಿ

# ಕೃತಜ್ಞತೆಯ ಸ್ಮರಣೆ

ಇಪ್ಪತ್ತೈದು ವರ್ಷಗಳ ಹಿಂದಿನ ಮಾತು—ಸರಿಯಾಗಿ ಹೇಳಬೇಕೆಂದರೆ 1949–50ನೇ ವರ್ಷಕ್ಕೆ ಸಂಬಂಧಿಸಿದ್ದು. ಆ ವರ್ಷ ನಾನು ದಾವಣಗೆರೆಯ ಧರ್ಮರತ್ನಾಕರ ಮದ್ದೂರಾಯಪ್ಪ (ಇಂಟರ್‌ಮಿಡಿಯೆಟ್) ಕಾಲೇಜಿನಲ್ಲಿ ಎರಡನೆಯ ಇಂಟರ್ ಮಿಡಿಯಟ್ ವಿದ್ಯಾರ್ಥಿಯಾಗಿದ್ದೆ. ಆ ವರ್ಷವು ನಮಗೆಲ್ಲ ಒಂದು ರೀತಿಯಲ್ಲಿ ಅಸಮಾಧಾನವಾಗುವ ರೀತಿಯಲ್ಲೇ ಆರಂಭವಾಯಿತೆಂದು ಹೇಳಬೇಕು. ಕಾರಣ ಇಷ್ಟೇ—ಜೂನಿಯರ್ ಇಂಟರ್‌ನಲ್ಲಿ ನಮಗೆ ಕನ್ನಡ ಉಪಾಧ್ಯಾಯರಾಗಿದ್ದ ಎಲ್. ಬಸವರಾಜು ಉನ್ನತ ಅಧ್ಯಯನಕ್ಕಾಗಿ ಮೈಸೂರಿಗೆ ಹೋಗುವವರಿದ್ದರು. ಅವರಿಗೆ ಮೈಸೂರಿನ ಕಾಲೇಜ್ ಒಂದಕ್ಕೆ ವರ್ಗವಾಗಿತ್ತು.

ನಾನು ವಿಜ್ಞಾನದ ವಿದ್ಯಾರ್ಥಿಯಾಗಿದ್ದು, ವಿಜ್ಞಾನದ ವಿಷಯಗಳಲ್ಲಿ (ಭೌತಶಾಸ್ತ್ರ, ರಸಾಯನಶಾಸ್ತ್ರ, ಗಣಿತ) ನನಗೆ ಆಸಕ್ತಿಯೇನೋ ಇತ್ತು. ಆದರೆ ಜೂನಿಯರ್ ಇಂಟರ್‌ನಲ್ಲಿ ನಮಗೆ ಬಹು ಒಳ್ಳೆಯ ಕನ್ನಡ ಉಪಾಧ್ಯಾಯರಿಬ್ಬರು ದೊರೆತಿದ್ದು ಅವರು ಅದರ ಬಗ್ಗೆ ವಿಶೇಷ ಮಮತೆ ಹುಟ್ಟುವುದಕ್ಕೆ ಕಾರಣರಾಗಿದ್ದರು. ಒಬ್ಬರು—ನಾಡಿಗೇರ್ ಗೋವಿಂದರಾಯರು (ಇವರು ಪ್ರೌಢಶಾಲೆಯಲ್ಲೂ ನನಗೆ ಕನ್ನಡ ಹೇಳಿದವರು) ಮತ್ತು ಎಲ್. ಬಸವರಾಜು ಅವರು. ಇಬ್ಬರ ಬಗ್ಗೆಯೂ ನಾನು ಸ್ವತಂತ್ರ ಲೇಖನಗಳನ್ನು ಬರೆಯುವಷ್ಟು ನೆನಪಿನ ಸಾಮಗ್ರಿಯಿದೆ. ಇಬ್ಬರೂ ನನ್ನನ್ನು—ವಾಸ್ತವವಾಗಿ ನಮ್ಮೆಲ್ಲರನ್ನು, ನಾನು ಮತ್ತು ನನ್ನ ಇತರ ಸಹಾಧ್ಯಾಯಿಗಳನ್ನು—ಹತ್ತಿರಕ್ಕೆ ಕರೆದುಕೊಂಡಿದ್ದರು. ಅವರ ಪಾಠಗಳಷ್ಟೇ ಅವರ ಆತ್ಮೀಯತೆಯೂ ನಮ್ಮನ್ನು ಕನ್ನಡ ಪ್ರಿಯರನ್ನಾಗಿ ಮಾಡಿತು. ಇಂತಹ ಉಪಾಧ್ಯಾಯರಲ್ಲೊಬ್ಬರಾದ ಎಲ್. ಬಸವರಾಜು ಮೈಸೂರಿಗೆ ಹೋಗುವರೆಂಬ ಸುದ್ದಿ ನಮಗೆಲ್ಲ ತೀವ್ರ ನಿರಾಸೆ ಉಂಟುಮಾಡಿತ್ತು. ಅವರಿಗೂ ನಾನಿದ್ದ ಜಯದೇವ ವಿದ್ಯಾರ್ಥಿನಿಲಯಕ್ಕೂ ತೀರ ಹತ್ತಿರದ ಸಂಬಂಧ—ಅವರು ಕೆಲಕಾಲ ವಿದ್ಯಾರ್ಥಿನಿಲಯದ ಕೊಠಡಿಯೊಂದರಲ್ಲಿ ವಾಸವಾಗಿದ್ದು, ಎಲ್ಲರ ಜೊತೆ ಸ್ನೇಹ, ಪ್ರೀತಿ, ವಾತ್ಸಲ್ಯಗಳಿಂದ ನಡೆದುಕೊಳ್ಳುತ್ತಿದ್ದುದರಿಂದ ಅವರು ಎಲ್ಲರಿಗೂ ಆತ್ಮೀಯರಾಗಿದ್ದರು.

ಇಂತಹ ಸಂದರ್ಭದಲ್ಲಿ ಅವರ ಜಾಗಕ್ಕೆ ಜಿ. ಎಸ್. ಶಿವರುದ್ರಪ್ಪನವರು ಕನ್ನಡ ಉಪಾಧ್ಯಾಯರಾಗಿ ಬಂದರು. ಅವರನ್ನು ನಾವು ನೋಡಿದ್ದೇ ಮೊದಲು ತರಗತಿಯಲ್ಲಿ.

ಸೂಟ್ ಹಾಕಿ ಕಾಲಲ್ಲಿ ಷೂ ಧರಿಸಿ ಮೊದಲ ತರಗತಿಗೆ ಬಂದರು (ಅವರು ಅದರ ಹಿಂದಿನ ದಿನ ರಾತ್ರಿ ತಾನೇ 'ನೀರಿನ ಟಾಕಿ'ಯ ಉದ್ಯಾನವನದಲ್ಲಿ ಷೂ ಹಾಕಿ ಓಡಾಡಿ ಅವುಗಳನ್ನು ಕಾಲಿಗೆ ಹೊಂದಿಸಿಕೊಳ್ಳುವ ಪ್ರಯತ್ನ ಮಾಡಿದ್ದರೆಂದು ಆಮೇಲೆ ತಿಳಿಯಿತು). ನಾವು ಕುತೂಹಲಿಗಳಾಗಿ ಅವರ ಪಾಠಕ್ಕೆ ಸಿದ್ಧರಾದೆವು. ನಮಗೆ ಆ ವರ್ಷ ಕುವೆಂಪುರವರ ಚಿತ್ರಾಂಗದಾ ಕಾವ್ಯ ಪಠ್ಯಪುಸ್ತಕವಾಗಿ ನಿಯಮಿತವಾಯಿತ್ತು. ಅವರು ಆ ದಿನ ವಾಸ್ತವವಾಗಿ ಚಿತ್ರಾಂಗದಾ ಕಾವ್ಯದ ಬಗ್ಗೆ ಏನೂ ಹೇಳಲಿಲ್ಲ. ತಾವು ಬಿ.ಎ. ಆನರ್ಸ್‌ನಲ್ಲಿ ಓದಿದ್ದ ಅಲಂಕಾರಶಾಸ್ತ್ರ, ಉಪಮೆ ಇವುಗಳನ್ನೆಲ್ಲ ಹೇಳಿ, ಮಹೋಪಮೆಯ ಬಗ್ಗೆ ಉಜ್ವಲ ಉಪನ್ಯಾಸವನ್ನು ಬಿಗಿದರು. ನಿಜವಾಗಿಯೂ ಉಜ್ವಲ !—ಏಕೆಂದರೆ ಯಾರಿಗೂ ಏನೂ ಅರ್ಥವಾಗಲಿಲ್ಲ. ಬಿಗಿದರು !—ಏಕೆಂದರೆ ನಾವೆಲ್ಲ ಬೆದರಿ ಕಣ್ಣು ಕಣ್ಣು ಬಿಡುತ್ತ ನಡುಗುತ್ತ ಕೂತಿದ್ದೆವು. ಕುವೆಂಪುರವರ 'ಮಹೋಪಮೆ' ಎಂಬ ಹೆಸರಿನ ಪ್ರಬಂಧದ ಸಾಲುಸಾಲುಗಳನ್ನೇ ಆ ದಿನ ಉದ್ಧರಿಸಿದರು. 'ತಗುಳ್ಚುವುದು', 'ಸಾದೃಶ್ಯಶ್ರೀ', 'ಭೂಮ', 'ಮಹತ್ತು', 'ಬೃಹತ್ತು' (ಇವೆಲ್ಲ ಕುವೆಂಪು ಉಕ್ತಿಗಳೇ) ಮುಂತಾದ ಪದಗಳು, ಪದಪುಂಜಗಳು, ಇನ್ನೂ ಎಷ್ಟೋ ಸಂಸ್ಕೃತಭೂಯಿಷ್ಠವೂ ಕಷ್ಟವೂ ಜಟಿಲವೂ ಆದ ವಾಕ್ಯಗಳು ಅವರ ಬಾಯಿಂದ ಧಾರಾಕಾರವಾಗಿ ಸುರಿದುವು. ಅವರ ಮಾತಿನ ಪ್ರವಾಹವನ್ನು ಮೆಚ್ಚಿಕೊಂಡೆವು ಎಂದು ಹೇಳಿದರೆ ಸುಳ್ಳಾದೀತು. ದಡದ ಮೇಲೆ ಇದ್ದರೆ ತಾನೇ ಪ್ರವಾಹವನ್ನು ಮೆಚ್ಚುವುದು! ತೇಲಿದರೆ, ಮುಳುಗಿದರೆ, ನೀರು ಕುಡಿದು ಕಣ್ಣು ಬಿಟ್ಟರೆ—ಏನಾದೀತು ಊಹಿಸಿಕೊಳ್ಳಬಹುದು. ಹೊಸಬರಾದರೂ ಪರವಾಯಿಲ್ಲ, ಜೋರಾಗಿದಾರೆ ಎಂದು ಅಂದುಕೊಂಡೆವು.

ಅವರು ದಾವಣಗೆರೆಯ ನಾನಿದ್ದ ವಿದ್ಯಾರ್ಥಿನಿಲಯದಲ್ಲೇ ಹಿಂದೆ ವಿದ್ಯಾರ್ಥಿಯಾಗಿದ್ದವರು. ಅವರಿಗೆ ದಾವಣಗೆರೆ ಹುಡುಗರ ಪರಿಚಯವಿತ್ತು. ಜೊತೆಗೆ ಆದೇ ಬಿ.ಎ. ಆನರ್ಸ್ ಮುಗಿಸಿ ಬಂದಿದ್ದರು. ಪಾಠ ಹೇಳುವ ಉಪಾಧ್ಯಾಯರೆಲ್ಲರಿಗೂ ಆರಂಭದಲ್ಲಿ ಇರುವ ಹೆದರಿಕೆ ಅವರಿಗೂ ಇದ್ದಿರಬೇಕು. ಅದರಲ್ಲೂ ಆ ಕಾಲದ ದಾವಣಗೆರೆ ಹುಡುಗರು ! (ಈಗ ಆ ಕೀರ್ತಿಯನ್ನು ಅವರು ಉಳಿಸಿಕೊಂಡಂತೆ ಕಾಣಿಸಲಿಲ್ಲ) ಹೀಗಾಗಿ ಅವರ ಮಿತ್ರರು ಬುದ್ಧಿವಾದ ಹೇಳಿದ್ದರಂತೆ—'ಮೊದಲ ದಿನವೇ ಹುಡುಗರಿಗೆ ಅರ್ಥವಾಗದ ರೀತಿ ಪಾಠಮಾಡಿ ಹೆದರಿಸಿಬಿಡಿ. ಆಮೇಲೆ ಸರಿಹೋಗುತ್ತಾರೆ' ಎಂದು. ಅದನ್ನು ಅಕ್ಷರಶಃ ಪರಿಪಾಲಿಸಿ, ಅವರ ಸ್ನೇಹಿತರ ಊಹೆಗೂ ಮೀರಿದ ಯಶಸ್ಸನ್ನು ಸಂಪಾದಿಸಿದರು. (ನಾನೂ ಮುಂದೆ ಹೊಸದಾಗಿ ಉಪಾಧ್ಯಾಯನಾದಾಗ ಈ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ ಯಶಸ್ವಿಯಾದೆ. ಈ ಕಾಲಕ್ಕೆ ಆ ಬ್ರಹ್ಮಾಸ್ತ್ರಗಳಿಂದ ಪ್ರಯೋಜನವಿದೆಯೋ ಇಲ್ಲವೋ ತಿಳಿಯದು. ಅಣುಬಾಂಬುಗಳನ್ನು ಪ್ರಯೋಗಿಸಿ ನೋಡಬೇಕು !).

ಮುಂದಿನ ತರಗತಿಗಳ ವಿವರಗಳು ಮರೆತಿವೆ—ಆದರೆ, ಕ್ರಮೇಣ ಅವರ ಪಾಠಗಳು ಅರ್ಥವಾಗುವ ಮಟ್ಟಕ್ಕೆ ಇಳಿದುವು. ಬಹುಬೇಗ ಅವರು ಬಹು ಒಳ್ಳೆಯ ಉಪಾಧ್ಯಾಯರೆನ್ನಿಸಿಕೊಂಡು ನಮ್ಮ ಕೊರಗನ್ನು ಮರೆಸಿದರು.

ನನಗೆ ನೆನಪಿರುವ ಮಟ್ಟಿಗೆ, ಅವರು ಆ ವರ್ಷದ ಉದ್ದಕ್ಕೂ ಪಾಠ ಮಾಡಿದ್ದು ಆಲಂಕಾರಿಕವಾದ, ಆದರೆ ಅರ್ಥವಾಗುವ ಭಾಷೆಯಲ್ಲಿ. ಸ್ವತಃ ಕವಿಗಳು, ಅದರಲ್ಲೂ ತಾರುಣ್ಯದ ಉತ್ಸಾಹ. ಇನ್ನೂ ಮದುವೆ ಆಗಿರಲಿಲ್ಲ. ಚಿತ್ರಾಂಗದಾ ಕಾವ್ಯವನ್ನು ಬರೆದಾಗ ಕುವೆಂಪು ಅವರಿಗೂ ಮದುವೆಯಾಗಿರಲಿಲ್ಲ—ಹಾಗೇಂದು ತಾವೇ ಕಾವ್ಯದಲ್ಲಿ ಸ್ಪಷ್ಟವಾಗಿ ಸೂಚಿಸಿದ್ದಾರೆ. ಚಿತ್ರಾಂಗದೆಯ ಪ್ರಣಯ ಜೀವನವನ್ನು ತಾವು 'ಅನನುಭವಿ'ಯಾದ್ದರಿಂದ ವರ್ಣಿಸಲು ಅಶಕ್ತರೆಂದೂ, ಆದ್ದರಿಂದ (ಅನುಭವಿಯಾದ) ತಾಯಿ ಶಾರದೆಯನ್ನೇ ಮರೆಹೊಕ್ಕು 'ವರ್ಣನೆಯಲ್ಲಿ ನನ್ನನ್ನು ಮುನ್ನಡೆಯಿಸು' ಎಂದು ಕವಿಗಳು ಆರ್ತರಾಗಿ ಕೇಳಿಕೊಂಡಿದ್ದಾರೆ. ತಾಯಿ ಕೃಪೆಮಾಡಿದಂತೆ ತೋರುವುದಿಲ್ಲ! ಆ ಕಾರಣದಿಂದಾಗಿ ಕುವೆಂಪು ತಮ್ಮ ಕಲ್ಪನೆಯನ್ನೇ ಅವಲಂಬಿಸಿ ವರ್ಣಿಸಿದ್ದಾರೆ. ಹಾಗಾದದ್ದು ಒಳ್ಳೆಯದೇ ಆಯಿತು—ಆ ಪ್ರಮಾಣದ ಶೃಂಗಾರವು ತಾಯಿ ಕೃಪೆ ಮಾಡಿದ್ದರೆ ನಮಗೆ ದೊರಕುತ್ತಿರಲಿಲ್ಲವೆಂದು ಘಂಟಾಘೋಷವಾಗಿ ಹೇಳಬಲ್ಲೆ. ಸರಿ, ಅಂತಹ ಭಾಗಕ್ಕೆ ಒಂದು ದಿನ ಜಿ.ಎಸ್.ಎಸ್. ಬಂದಿದ್ದರು. ನಾವೋ—(1950ನೇ ಇಸವಿಯ) ದಾವಣಗೆರೆ ಹುಡುಗರು. ತಮ್ಮ ಮೆಚ್ಚಿನ ಉಪಾಧ್ಯಾಯರೆಂದರೆ ಅವರಿಗಾಗಿ ಏನು ಮಾಡಲು ಸಿದ್ಧ. (ಇಷ್ಟವಾಗದ ಉಪಾಧ್ಯಾಯರಿಗೂ ಏನು ಬೇಕಾದರೂ ಮಾಡಲೂ ಕೂಡ ಸಿದ್ಧ). ಆದರೆ, ತುಂಟತನ—ವಯಸ್ಸಿಗೆ ಸಹಜವಾದದ್ದು—ಹೇಗೆ ತಾನೇ ಹೋದೀತು! ಜಿ.ಎಸ್.ಎಸ್. ಅವರ ಶೃಂಗಾರದ ವರ್ಣನೆಗಳನ್ನು ಆಗಾಗ್ಗೆ ಕೇಳಿ ನಾವು ಮುಗುಳ್ನಗೆ ನಕ್ಕದ್ದುಂಟು. ಒಮ್ಮೊಮ್ಮೆ ನಗು ಬಗಿಹಿಡಿದದ್ದುಂಟು. ಆದರೆ, ಆ ದಿನ ಚಿತ್ರಾಂಗಿನಿ ಮತ್ತು ಅರ್ಜುನರ ಪ್ರಣಯಭಾಗದ ಕಾವ್ಯವನ್ನು ವರ್ಣಿಸಲು ಹೊರಟಾಗ ನಮ್ಮ ಇಡೀ ತರಗತಿಗೆ, ಇದ್ದುದರಲ್ಲಿ ಗಂಭೀರವಾಗಿರುತ್ತಿದ್ದ ನನ್ನಂತಹ ಇಬ್ಬರು ಮೂವರನ್ನೂ ಸೇರಿಕೊಂಡು—ತಡೆಯಲಾಗಲಿಲ್ಲ. ಈಗಲೂ ಜ್ಞಾಪಿಸಿಕೊಂಡಾಗ ನನಗೆ ನಕ್ಕುಬಿಡುವಷ್ಟು ಕಚಕುಳಿಯಾಗುತ್ತದೆ. ಅವರು ಏನು ಹೇಳಿದರು ಅದನ್ನಲ್ಲ, ಏಕೆಂದರೆ ಆ ವಿವರಗಳು ಮರೆತಿವೆ; ಆದರೆ ಅವರ ವರ್ಣನೆಯನ್ನು ಕೇಳಿ ಇಡೀ ತರಗತಿ ನಕ್ಕದ್ದನ್ನು ಜ್ಞಾಪಿಸಿಕೊಂಡಾಗ. ಮೇಷ್ಟ್ರು ತಾವು ವರ್ಣಿಸುತ್ತಿದ್ದ ಭಾಗದಲ್ಲೇ ಮಗ್ನರಾಗಿ, ತಮ್ಮನ್ನು ಮರೆತು ಭಾವಪರವಶತೆಯ ಮಟ್ಟಕ್ಕೇ ಏರಿ ಮಾತನಾಡುತ್ತಿರುವಾಗ, ಹುಡುಗರು ಕಿಲಕ್ಕನೆ ನಕ್ಕದ್ದು ಒಂದು ಬಗೆಯ ಕುಚೋದ್ಯವಾಗಿ ಅವರಿಗೆ ಕಾಣಿಸಿರಬೇಕು. ಅದು ತೀರ ಸಹಜ! ಆದರೆ, ನಾನು ಈಗ ಉಪಾಧ್ಯಾಯನಾಗಿದ್ದರೂ ಮತ್ತು ಹುಡುಗರು ಹಾಗೆ ನಕ್ಕಾಗ ಮೇಷ್ಟ್ರು ಹಾಗೆ ತೆಗೆದುಕೊಂಡದ್ದು ಸಹಜವೇ ಎಂದು ಜಿ.ಎಸ್.ಎಸ್. ಅವರ ಪರವಾಗಿ ವಾದಿಸಲು ಸಿದ್ಧವಾಗಿದ್ದರೂ, ಹುಡುಗರದೂ ಹಾಗೇ ನಡೆದುಕೊಂಡದ್ದು ಸಹಜ ಎಂದು ಇಡೀ ತರಗತಿಯನ್ನು ಸಮರ್ಥಿಸಲು ಈಗಲೂ ಸಿದ್ಧನಿದ್ದೇನೆ. ಸಿನಿಮಾ ಮೂಲಕ 'ದಿವ್ಯಪ್ರೇಮ' ಜಗತ್ತಿನಲ್ಲಿ ಅಡಿಯಿಡುತ್ತಿದ್ದ ಹುಡುಗರ ಮುಂದೆ ಹಾಗೆ ವರ್ಣನೆ ಮಾಡಿದರೆ ಹೇಗೆ ಸುಮ್ಮನಿರಲಿಕ್ಕಾಗುತ್ತದೆ! ಹಾಗೆ ನಕ್ಕದ್ದು ತೀರ ತೀರ ಸಹಜ! ಮೇಷ್ಟ್ರರಿಗೆ ಕೋಪ ಬಂದಿತ್ತು. ಒಂದು ಕ್ಷಣ ಪಾಠ ನಿಲ್ಲಿಸಿ ಹೇಗೆ

ಹೇಳಿದ್ದು ಇನ್ನೂ ಜ್ಞಾಪಕವಿದೆ—"ನೀವು, ನೀವು ದಾವಣಗೆರೆ ಹುಡುಗರು. ನಿಮಗೆ ಕಾವ್ಯ ಗೀವ್ಯ ಅರ್ಥವಾಗೋಲ್ಲ, ಹೋಗಿ ಶೇಂಗಾ ತಿನ್ನಿ, ಶೇಂಗಾ!" ಹುಡುಗರು ಸುಮ್ಮನಾದರು. ದಾವಣಗೆರೆ ಚರ್ಮ ಬಹಳ ದಪ್ಪವೆಂದು ಕೇಳಿದ್ದೇನೆ. ಇವೆಲ್ಲ ಅಂಟುವುದಿಲ್ಲ, ಅಂಟಿದರೂ ಎಲ್ಲೋ ಚರ್ಮದ ಮೇಲ್ಪದರಕ್ಕೆ ನಟ್ಟಿರುತ್ತವೆ, ಸುಲಭವಾಗಿ ಒರಸಿ ಹಾಕಿಬಿಡುತ್ತಾರೆ.

ಆದರೆ ದಾವಣಗೆರೆ ಹುಡುಗರು ಆ ದಿನ ಜಿ.ಎಸ್.ಎಸ್. ಹೇಳಿದ್ದು ಕಾವ್ಯ ಆಗಿದ್ದರೆ, ಕೊನೆಯ ಪಕ್ಷ ಗೀವ್ಯ ಆಗಿದ್ದರೂ ನಗುತ್ತಿರಲಿಲ್ಲ. ಅವರು ಆ ದಿನ ಹೇಳಿದ್ದು ಅಥವಾ ವರ್ಣಿಸಿದ್ದು ಕಾವ್ಯ ಎಂದು ಹೇಗೆ ಹೇಳೋಣ. ದಾವಣಗೆರೆ ಹುಡುಗರು ಕಾವ್ಯ ಎಂದರೆ ನಗುವುದಿಲ್ಲ, ಗೌರವಿಸುತ್ತಾರೆ ಮತ್ತು ಸುಮ್ಮನಿರುತ್ತಾರೆ.

ಜಿ.ಎಸ್.ಎಸ್. ಅವರ ಪಾಠದ ದೊಡ್ಡ ಗುಣವೆಂದರೆ ತನ್ಮಯತೆ. ವಿದ್ಯಾರ್ಥಿಗಳಿಗೆ ತಿಳಿಯಿತೋ ಇಲ್ಲವೋ ಅದು ಅವರಿಗೆ ಆಗ ಮುಖ್ಯವಾಗಿರಲಿಲ್ಲ. ಅವರು ನಮ್ಮನ್ನು ಎದುರಿಸಿ, ಎಂದರೆ ನಮ್ಮನ್ನು ನೋಡುತ್ತ ಪಾಠ ಮಾಡುತ್ತಿದ್ದರೆಂದು ಈಗ ಅನ್ನಿಸುತ್ತಿಲ್ಲ. ಪಕ್ಕಕ್ಕೆ ತಿರುಗಿ ಎಲ್ಲೋ ನೋಡುತ್ತ, ಏನನ್ನೋ ಕಲ್ಪಿಸುತ್ತ, ತಮಗೆ ತಾವೆ ಪಾಠ ಹೇಳಿಕೊಳ್ಳುತ್ತಿದ್ದರು. ನಾವು ಕುಳಿತು ಕೇಳುತ್ತಿದ್ದೆವು. ಅವರ ಪಾಠಗಳನ್ನು ನಾವೆಲ್ಲ ಬಹಳವಾಗಿ ಮೆಚ್ಚಿಕೊಂಡಿದ್ದೆವು ಎಂದು ಬಾಯಿಬಿಟ್ಟು ಹೇಳಬೇಕೇ!

ಅವರು ನಾನಿದ್ದ ಜಯದೇವ ವಿದ್ಯಾರ್ಥಿನಿಲಯದ ಹಳೆಯ ವಿದ್ಯಾರ್ಥಿ ಎಂದು ಹಿಂದೆ ಹೇಳಿದ್ದೆನಲ್ಲವೇ! ನಮ್ಮ ಅದೃಷ್ಟಕ್ಕೆ ಅವರು ವಿದ್ಯಾರ್ಥಿನಿಲಯದ ವಾರ್ಡನ್ ಆಗಿ ವಿದ್ಯಾರ್ಥಿನಿಲಯದ ಪಕ್ಕದ ಚಿಕ್ಕಮನೆಯೊಂದರ ಕೊಠಡಿಗೆ ವಾಸಕ್ಕೆ ಬಂದರು. ಅವರ ಕೊಠಡಿಯಲ್ಲಿ ರಾಮಕೃಷ್ಣಪರಮಹಂಸರ ಚಿತ್ರವಿದ್ದಿತು. ಅವರಷ್ಟೇ ಅವರ ಭಕ್ತಿಗೆ ಪಾತ್ರರಾಗಿದ್ದವರು ಕುವೆಂಪು ಅವರು. ಮೈಸೂರಿನ ಮಹಾರಾಜಾ ಕಾಲೇಜು, ರಾಮಕೃಷ್ಣಾಶ್ರಮ, ಕುವೆಂಪು, ತಮ್ಮ ಸ್ನೇಹವೃಂದ, ಆದರ್ಶಪ್ರಿಯತೆ ಈ ಬಗ್ಗೆಯೆಲ್ಲ ಅವರು ಎಷ್ಟು ಹೇಳಿದರು! ನಮಗೆಲ್ಲ ಮೈಸೂರು ಎಂದರೆ ಯಾವುದೋ ನಂದನ, ಆದರ್ಶಲೋಕ ಎನ್ನಿಸಿಬಿಟ್ಟಿತ್ತು.

ಈ ಮಧ್ಯೆ ಒಂದು ಘಟನೆ ನಡೆಯಿತು. ಆ ವರ್ಷ ಕುವೆಂಪು ಅವರ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದ ಪ್ರಥಮ ಸಂಪುಟವು ಪ್ರಕಟವಾಗಿ ಅದರ ಒಂದು ಪ್ರತಿ ಅವರ ಕೈಯಲ್ಲಿತ್ತು. ದಿನವೂ ಅದನ್ನು ಓದುತ್ತಿದ್ದರು. ನಮಗೂ ಓದಿ ಹೇಳುವಂತೆ ವಿದ್ಯಾರ್ಥಿನಿಲಯದ ಇಂಟರ್ ವಿದ್ಯಾರ್ಥಿಗಳಾದ ನಾವು ಕೇಳಿಕೊಂಡೆವು. ದಾವಣಗೆರೆ ಹುಡುಗರಿಗೆ ಕಾವ್ಯ-ಗೀವ್ಯ ಅರ್ಥವಾಗದು ಎಂದು ಅವರು ರೇಗಿದ್ದು ನಿಜವಷ್ಟೇ! ಆದರೆ, ನಿಜ ಹೇಳುವುದಾದರೆ, ಸಾಹಿತ್ಯದಲ್ಲಿ ಆಸಕ್ತಿಯುಳ್ಳ ಹಲವರು ಇದ್ದುದು ನಿಜ ಮತ್ತು ಅದು ಅವರಿಗೂ ಗೊತ್ತಿತ್ತು. ಅವರು ಸಂತೋಷದಿಂದ ಒಪ್ಪಿದರು. ನಮ್ಮ ಕಾಲೇಜಿಗೆ ಆಗ ಪ್ರತ್ಯೇಕ ಮಂದಿರವಿರಲಿಲ್ಲವಾದ್ದರಿಂದ ನಮ್ಮ ತರಗತಿಗಳೆಲ್ಲ ಬೆಳಿಗ್ಗೆ ಸರ್ಕಾರಿ ಪ್ರೌಢ ಶಾಲೆಯಲ್ಲಿ ನಡೆಯುತ್ತಿದ್ದುವು. ಮಧ್ಯಾಹ್ನವೆಲ್ಲ ನಮಗೆ ಬಿಡುವು. ಸುಮಾರು 12

ಗಂಟೆಯ ಹೊತ್ತಿಗೆ ನಾವೆಲ್ಲ ಊಟ ಮುಗಿಸಿಕೊಂಡು ಅವರ ಕೊಠಡಿಗೆ ಹಾಜರಾಗುತ್ತಿದ್ದೆವು. ಅವರೂ ಖಾನಾವಳಿಯೊಂದರಲ್ಲಿ ಊಟ ತೀರಿಸಿಕೊಂಡು ಬರುತ್ತಿದ್ದರು. ಅವರು 'ರಾಮಾಯಣ ದರ್ಶನಂ' ಕಾವ್ಯವನ್ನು ಓದಿ, ಅಲ್ಲಲ್ಲಿ ವಿವರಿಸುತ್ತಿದ್ದರು. ಅದೊಂದು ಬಹಳ ಒಳ್ಳೆಯ ಅನುಭವ. ಇದು ಕೆಲವು ತಿಂಗಳು ನಡೆಯಿತು. ಮೊದಲ ಸಂಪುಟವನ್ನು ಪೂರ್ತಿ ಓದಿ ಮುಗಿಸಲು ಸಾಧ್ಯವಾಯಿತೋ ಇಲ್ಲವೋ ತಿಳಿಯದು. ಆದರೆ, ನಮ್ಮಲ್ಲಿ ಹಲವರಿಗೆ ಸಾಹಿತ್ಯದ ರುಚಿಯನ್ನು ತೋರಿಸಿಕೊಟ್ಟರು. ಉಳಿದವರ ವಿಷಯ ಹೇಗೋ—ನನ್ನ ಮನಸ್ಸಿನ ಮೇಲಂತೂ ಅದು ಆಳವಾದ ಮುದ್ರೆಯನ್ನು ಒತ್ತಿತು.

ಅವರು ಉಚಿತ ವಿದ್ಯಾರ್ಥಿನಿಲಯಗಳಲ್ಲಿದ್ದು ಅನುಭವ ಪಡೆದಿದ್ದರು. ಬಡತನವನ್ನು ಅನುಭವಿಸಿ ಬಲ್ಲವರು. ನಾನಿದ್ದ ಜಯದೇವ ವಿದ್ಯಾರ್ಥಿನಿಲಯ ಒಂದು ಉಚಿತ ವಿದ್ಯಾರ್ಥಿನಿಲಯವಾಗಿತ್ತು. ಆ ವಿದ್ಯಾರ್ಥಿನಿಲಯಕ್ಕೆ ನಾನು ಋಣಿಯಾಗಿರಬೇಕಾದುದು ನನ್ನ ಆದ್ಯ ಕರ್ತವ್ಯ. ಆದರೆ ಅಲ್ಲಿಯ ಊಟದ ವ್ಯವಸ್ಥೆ ಅಸಮರ್ಪಕವಾಗಿತ್ತು—ಎಂಬುದನ್ನು ಹೇಳಿದರೆ ಟೀಕಿಸುತ್ತಿದ್ದೇನೆಂದು ಯಾರೂ ಭಾವಿಸಬಾರದು. ಜಿ.ಎಸ್.ಎಸ್. ವಾರ್ಡನ್ ಆಗಿ ಬಂದಮೇಲೆ ಇದ್ದುದರಲ್ಲೇ ಊಟದ ಗುಣ ಎಷ್ಟೋ ಸುಧಾರಿಸಿತು. ನಮ್ಮ ಅನೇಕ ಸಮಸ್ಯೆಗಳನ್ನು ಅವರು ಆಡಳಿತವರ್ಗಕ್ಕೆ ತಿಳಿಸಿ ಅವುಗಳನ್ನು ಪರಿಹರಿಸಿದರು. ವಿದ್ಯಾರ್ಥಿಗಳಲ್ಲಿ ಶಿಸ್ತನ್ನು ಬೆಳೆಸಲು ಪ್ರಯತ್ನಿಸಿದರು. ರಾತ್ರಿ ಅವರ ಅಪ್ಪಣೆಯಿಲ್ಲದೆ ಸಿನಿಮಾಕ್ಕೆ ಹೋಗುವಂತಿರಲಿಲ್ಲ. ಅವರಿಗೆ ಹೆದರಿ ಅವರ ಅಪ್ಪಣೆ ಯಾರೂ ಕೇಳುತ್ತಲೂ ಇರಲಿಲ್ಲ. ಸೆಕೆಂಡ್ ಷೋ ಸಿನಿಮಾ ನೋಡದ ವಿದ್ಯಾರ್ಥಿಗೆ ಜೀವನದಲ್ಲಿ ಸ್ವಾರಸ್ಯ ಏನು ಉಳಿದೀತು! ಹುಡುಗರಿಗೆ ಜಿ.ಎಸ್.ಎಸ್. ಎಲ್ಲ ವಿಷಯದಲ್ಲೂ ಸೈಸ್ಟೆ ಆಗಿದ್ದರು—ಒಳ್ಳೆಯ ಉಪಾಧ್ಯಾಯರು, ಶಿಸ್ತಿನ ಸಿಪಾಯಿಗಳು, ಸದಾ ಅಧ್ಯಯನ ನಿರತರು, ಸರಳಜೀವಿಗಳು, ಮ್ಯಾನೇಜರ್ ಅವರಿಗೆ ಹೇಳಿ ವಿದ್ಯಾರ್ಥಿಗಳಿಗೆ ಒಳ್ಳೆಯದು ಮಾಡಿಸುತ್ತಿದ್ದರು. ಆದರೆ, ಅವರು ಸಿನಿಮಾಕ್ಕೆ ಹೋಗಬೇಡಿರೆಂದು ಕಟ್ಟು ಮಾಡಿದರೆ ಹೇಗೆ? ನಾವು ಇಂಟರ್ ಹುಡುಗರು—ಇದ್ದುದರಲ್ಲಿ ದೊಡ್ಡವರು, ಉಳಿದವರಿಗಿಂತ ಗಂಭೀರರು. ಹೈಸ್ಕೂಲಲ್ಲಿ ಓದುತ್ತಿದ್ದ ಹುಡುಗರು ರಾತ್ರಿ ಗೊತ್ತಾಗದಂತೆ ಹೋಗಿ ಬರುತ್ತಿದ್ದರು. ಯಾವುದೋ ಸಿನಿಮ—ಹಿರಿಯ ಹುಡುಗರಾದ ನಮಗೂ ಚಾಪಲ್ಯ. ನಮಗೋ ಮ್ಯಾಟನಿಗಿಂತ, ನಿದ್ದೆಗೆಟ್ಟು ಸೆಕೆಂಡ್‌ಷೋ ಸಿನಿಮಾನೇ ನೋಡಬೇಕು (ಮೊದಲ ಆಟ ನೋಡಲು ಹೋದರೆ ಊಟಕ್ಕೆ ಕಲ್ಲು ಬೀಳುತ್ತಿತ್ತು.) ಆ ದಿನ ನಾವು ಮೆತ್ತಗೆ ಹೊರಟೆವು. ನಮ್ಮಲ್ಲಿ ಒಂದಿಬ್ಬರು ತಲೆಗೆಲ್ಲ, ಮುಖಕ್ಕೆ ಟವೆಲ್ ಕಟ್ಟಿಕೊಂಡು ವೇಷ ಮರೆಸಿಕೊಂಡಿದ್ದರು. ಹಾಸ್ಟಲ್ಲಿನಿಂದ ಹೊರಡುತ್ತಿದ್ದಂತೆಯೇ ಎದುರಿಗೇ ಅವರು ಪ್ರತ್ಯಕ್ಷರಾಗಬೇಕೇ! ಅವರಿಗೆ ಆ ದಿನ ಕೋಪಕ್ಕಿಂತ ಬೇಸರ ಉಂಟಾಗಿ, 'ನಿಮಗೆ ನನ್ನ ಬಗ್ಗೆ ಬಹಳ ತಾತ್ಸಾರ ಭಾವನೆ ಇದೆ' ಎಂಬರ್ಥ ಬರುವಂತೆ ಮಾತನಾಡಿ ಹೋಗಿಬಿಟ್ಟರು. ಮಾರನೆಯ ದಿನ ಹೋಗಿ, ನಾವು ಪಶ್ಚಾತ್ತಾಪ ವ್ಯಕ್ತಪಡಿಸಿದ್ದು ಮಾತ್ರವಲ್ಲದೆ, ಅವರ

ಬಗ್ಗೆ ಬಹಳ ಗೌರವವಿದೆಯೆಂದು ಸ್ವಲ್ಪ ನಾಟಕೀಯವಾಗಿಯೇ ತಿಳಿಸಿದೆವು. ಅವರಿಗೆ ಉಕ್ಕಿದ ಅಸಮಾಧಾನ ಹಾಗೇ ಸರ್ರನೆ ಇಳಿದು ಹೋಗುತ್ತಿತ್ತೆಂದು ನಮಗೂ ಗೊತ್ತಿತ್ತು. ನಮ್ಮ ಸಂಬಂಧಗಳು ಎಂದಿಗೂ ಕೆಟ್ಟುಹೋಗಲಿಲ್ಲ.

ಆ ವರ್ಷ ಪರೀಕ್ಷೆಗಳು ಹತ್ತಿರ ಬರುತ್ತಿದ್ದಂತೆಯೇ ಬೇಸಗೆಯಲ್ಲಿ ಅವರ ಮದುವೆ ನಡೆಯಬೇಕೆಂಬುದೂ ಗೊತ್ತಾಯ್ತು. ಆಹ್ವಾನ ಪತ್ರಿಕೆಯನ್ನು ಕಳುಹಿಸುವುದಾಗಿ ಹೇಳಿ ನಮ್ಮೆಲ್ಲರ ವಿಳಾಸ ತೆಗೆದುಕೊಂಡರು. ಆಹ್ವಾನವೂ ಬಂದಿತು. ಮದುವೆಯೂ ನಡೆಯಿತು. ಅವರು ಇಷ್ಟು ಬೇಗ ಮದುವೆ ಆದದ್ದಕ್ಕೆ ಚಿತ್ರಾಂಗದಾ ಕಾವ್ಯ ಕಾರಣವೆಂದು ನಾನು ಹೇಳಲಾರೆ. ಆದರೆ ಆ ಕಾವ್ಯ ಮಾಡಿದ ಇನ್ನೊಂದು ಪರಿಣಾಮ ಉಂಟು. ಅದು ಸ್ವಲ್ಪಮಟ್ಟಿಗೆ ನನ್ನ ಕಥನವಾದ್ದರಿಂದ. ಕ್ಷಮೆಯೊಡನೆ ಅದನ್ನು ಹೇಳಿಕೊಳ್ಳುತ್ತಿದ್ದೇನೆ.

ಆ ವರ್ಷ ಪರೀಕ್ಷೆಯಲ್ಲಿ ಚನ್ನಾಗಿಯೇ ಉತ್ತರಿಸಿದೆ. ಪ್ರಥಮ ವರ್ಗದಲ್ಲಿ ಪಾಸಾಗುವುದಂತೂ ಖಂಡಿತವಿತ್ತು. ಗಣಿತದಲ್ಲಿ ನೂರಕ್ಕೆ ನೂರು ಬರುವುದು ಗೊತ್ತಿತ್ತು. ಉಳಿದ ವಿಜ್ಞಾನದ ವಿಷಯಗಳಲ್ಲೂ ಉತ್ತಮ ಅಂಕಗಳು ಬರುವ ವಿಶ್ವಾಸವಿತ್ತು. ವಿಜ್ಞಾನದ ವಿದ್ಯಾರ್ಥಿಗಳಿಗಿದ್ದ ಆದರ್ಶ—ಇಲ್ಲವೇ ವೈದ್ಯನಾಗುವುದು ಅಥವಾ ಇಂಜಿನಿಯರಾಗುವುದು. ಪರೀಕ್ಷೆಗೆ ಮುಂಚೆಯೇ ನಾನು ಕನ್ನಡ ಆನರ್ಸ್ ಓದುವ ಆಸೆಯನ್ನು ಒಂದಿಬ್ಬರು ಮಿತ್ರರ ಮುಂದೆ ವ್ಯಕ್ತಪಡಿಸಿದ್ದೆ. ಜಿ.ಎಸ್.ಎಸ್. ಅವರಿಗೂ ಹೇಳಿದ್ದೆ. ರಜದಲ್ಲಿ ಆ ಬಗ್ಗೆ ಒಂದು ಖಚಿತ ತೀರ್ಮಾನಕ್ಕೆ ಬಂದೆ. ನಾನು ಅರ್ಜಿ ಹಾಕಿದ್ದರೂ ಸಾಕು, ವೈದ್ಯಕೀಯದಲ್ಲಿ ಇಂಜಿನಿಯರಿಂಗ್‌ನಲ್ಲಿ ಅಥವಾ ಬಿ ಎಸ್.ಸಿ. (ಆನರ್ಸ್)ನಲ್ಲಿ ಅನಾಯಾಸವಾಗಿ ಜಾಗ ದೊರಕುತ್ತಿತ್ತೆಂಬ ವಿಶ್ವಾಸ ನನಗಿತ್ತು. ಎಲ್ಲರೂ ನನಗೆ ವೈದ್ಯ ಅಥವಾ ಇಂಜಿನಿಯರ್ ಆಗು ಎಂದು ಬುದ್ಧಿವಾದ ಹೇಳುವವರೇ! ಆದರೆ ನನ್ನ ತೀರ್ಮಾನ ಅವಿಚಲವಾಗಿತ್ತು. ಫಲಿತಾಂಶ ಬಂದಿತು—ಪ್ರಥಮ ದರ್ಜೆಯಲ್ಲಿ ಮಾತ್ರವಲ್ಲದೆ, ವಿಶ್ವವಿದ್ಯಾಲಯಕ್ಕೆ ಹತ್ತನೆಯ ರ್‍ಯಾಂಕನ್ನೂ ಪಡೆದಿದ್ದೆ. ನಾನು ಕನ್ನಡ ಓದುವ ವಿಷಯ ಅನೇಕರಿಗೆ ಹಾಸ್ಯಾಸ್ಪದವಾಗಿಯೂ ಹುಚ್ಚಾಗಿಯೂ ತೋರಿತು. ನನ್ನ ತಂದೆಯವರು ಆ ಬಗ್ಗೆ ತೀರ್ಮಾನವನ್ನು ಕೈಗೊಳ್ಳಲು ಸಂಪೂರ್ಣ ಸ್ವಾತಂತ್ರ್ಯ ಕೊಟ್ಟರು. ಕನ್ನಡ ಆನರ್ಸ್ ಓದಲು ಜಿ.ಎಸ್.ಎಸ್. ಅವರೇ ಕಾರಣ, ಅಥವಾ 'ರಾಮಾಯಣ ದರ್ಶನಂ'ನಂತಹ ಸಾಹಿತ್ಯ ಕೃತಿಗಳೇ ಕಾರಣ ಎಂದು ಖಚಿತವಾಗಿ ಹೇಳಲಾರೆ. ಇವರೆಲ್ಲರೂ ಕಾರಣ, ಮತ್ತು ನನಗೆ ಮಾಧ್ಯಮಿಕ ಶಾಲೆಯಿಂದ ಕಾಲೇಜಿನವರೆಗೆ ದೊರೆತ ಕನ್ನಡ ಉಪಾಧ್ಯಾಯರೂ ಕಾರಣರು. ಅವರೆಲ್ಲರ ಪಾಠದಂತೆ ಅವರ ನಡೆನುಡಿಗಳೂ ಕಾರಣ. ಆದರೆ, ಜಿ.ಎಸ್.ಎಸ್. ಅವರು ನನ್ನ ಮನಸ್ಸಿನ ಮಂಜುಮಂಜು ಹಂಬಲಕ್ಕೆ ಒಂದು ಆಕಾರ ದೊರೆಯಲು ಕಾರಣರಾದರು ಎಂಬುದಂತೂ ನಿರ್ವಿವಾದ. ನನ್ನ ಮಾರ್ಕ್ಸ್ ಕಾರ್ಡ್ ತೆಗೆದುಕೊಂಡು ಮೈಸೂರಿಗೆ ಹೋದೆ. ಅಲ್ಲಿಯ ವೈದ್ಯಕೀಯ ವಿದ್ಯಾರ್ಥಿಗಳೂ ನನಗೆ ಒತ್ತಾಯಪಡಿಸಿದರು. ಅಲ್ಲಿಗೂ ಅರ್ಜಿ ಹಾಕಿದೆ; ಕನ್ನಡ ಆನರ್ಸಿಗೂ ಅರ್ಜಿ ಹಾಕಿದೆ. ಎರಡರಲ್ಲೂ ಜಾಗ ದೊರಕಿತು. ನನ್ನ ಆಯ್ಕೆ ಯಾವುದು ಎಂಬುದರಲ್ಲಿ ನನಗೆ

ಅನುಮಾನವೇ ಇರಲಿಲ್ಲ. ನಾನು ಕನ್ನಡ ಆನರ್ಸ್ ಸೇರಲು ಜಿ.ಎಸ್.ಎಸ್. ಅವರ ಪ್ರಚೋದನೆಯೇ ಕಾರಣ ಎಂಬ ಸುದ್ದಿಯೂ ಹಬ್ಬಿತ್ತು.

ವೈದ್ಯಕೀಯ ಶಿಕ್ಷಣ ಮುಗಿಸಿದ್ದ ಒಬ್ಬರಿಗೆ ನಾನು ಕನ್ನಡ ಓದಲು ಹೋದದ್ದು ಮನಸ್ಸಿಗೆ ಬಹಳ ನೋವುಂಟುಮಾಡಿತ್ತು. ಅವರಿದ್ದುದು ಕಬ್ಬಳ್ಳಿ ವಿದ್ಯಾರ್ಥಿನಿಲಯ ದಲ್ಲಿ. ಆ ವರ್ಷ ಎಂ.ಎ. ತರಗತಿಯಲ್ಲಿದ್ದ ಪ್ರಭುಶಂಕರ್ ಅವರು ಆ ವಿದ್ಯಾರ್ಥಿ ನಿಲಯದ ಹತ್ತಿರದಲ್ಲಿ ಬಸ್ಸಿಗಾಗಿ ಕಾಯುತ್ತಿರುವಾಗ, ಆ ವೈದ್ಯರು ಅವರ ಬಳಿ ಹೋಗಿ, 'ನೀವೆಯೋ ಶಿವರುದ್ರಪ್ಪನವರು' ಎಂದು ಸ್ವಲ್ಪ ಜೋರಾಗಿ ಕೇಳಿದರಂತೆ. (ಅವರು ಕೇಳಿದ ಧಾಟಿಯಲ್ಲಿ, ನಾನು ಒಂದು ವೇಳೆ ಶಿವರುದ್ರಪ್ಪ ಆಗಿದ್ದರೂ ಅಲ್ಲ ಎಂದುಬಿಡುತ್ತಿದ್ದೆ ಎಂದು ಪ್ರಭುಶಂಕರ್ ಆಮೇಲೆ ನನಗೆ ತಮಾಷೆಯಾಗಿ ಹೇಳಿದರು). ಮುಂದುವರಿದು 'ಅವರು ಸಿಗಲಿ, ಚಿದಾನಂದಮೂರ್ತಿಗೆ ಹುಚ್ಚು ಹಿಡಿಸಿ ಅವನ ಜೀವನವನ್ನೇ ಹಾಳು ಮಾಡಿದರು' ಎಂದು ಗೊಣಗುತ್ತ ಹೊರಟುಹೋದರಂತೆ. ಇಲ್ಲಿಗೆ ಆ ಪ್ರಸಂಗವನ್ನು ನಿಲ್ಲಿಸುತ್ತೇನೆ.

ಒಬ್ಬ ವ್ಯಕ್ತಿಯ ಜೀವನದಲ್ಲಿ ಎಷ್ಟೋ ಘಟನೆಗಳು ನಡೆಯುತ್ತವೆ. ಆದರೆ ಅವು ಗಳಲ್ಲಿ ಒಂದೋ ಎರಡೋ ಮಾತ್ರ ಅವನ ಇಡೀ ಜೀವನವನ್ನು ನಿರ್ಧರಿಸುವಷ್ಟು ಮಹತ್ವ ವುಳ್ಳವಾಗಿರುತ್ತವೆ. ನನ್ನ ಜೀವನದ ಅಂತಹ ಘಟನೆಯೊಂದರಲ್ಲಿ ಜಿ.ಎಸ್.ಎಸ್. ಅವರು ಕೇಂದ್ರದಲ್ಲಿದ್ದಾರೆಂಬುದನ್ನು ಕೃತಜ್ಞತೆಯಿಂದ ನೆನೆಯುವುದು ನನಗೆ ಅತ್ಯಂತ ಸಂತೋಷವನ್ನು ತರುವ ಸಂಗತಿ.

ಈ ಇಪ್ಪತ್ತೈದು ವರ್ಷಗಳಲ್ಲಿ ಜಿ.ಎಸ್.ಎಸ್. ಅವರಿಗೂ ನನಗೂ ಬೆಳೆದು ಬಂದಿರುವ ಸಂಬಂಧದ ಒಂದು ಅಧ್ಯಾಯವನ್ನು ಮಾತ್ರ ಮೇಲೆ ನಿರೂಪಿಸಿದ್ದೇನೆ. ಇಲ್ಲಿಯವರೆಗೆ ನಾನು ಬರೆದಿರುವುದರಲ್ಲಿ ಯಾವುದೇ ಸಂಕೋಚವನ್ನೂ ಅನುಭವಿಸಿಲ್ಲ. ಆದರೆ, ಆನರ್ಸ್ ವಿದ್ಯಾರ್ಥಿಯಾಗಿ ಸೇರಿಕೊಂಡ ಎರಡನೆಯ ವರ್ಷದಿಂದ ಅವರನ್ನು ತೀರ ಆತ್ಮೀಯವಾಗಿ ತೀರ ಹತ್ತಿರದಿಂದ ನೋಡಿದ್ದೇನೆ. ಉದಾಹರಣೆಗೆ, ನಾನು ಎರಡ ನೆಯ ಆನರ್ಸ್ ವಿದ್ಯಾರ್ಥಿಯಾಗಿರುವಾಗ, ಅವರು ಮೈಸೂರಿಗೆ ಎಂ.ಎ. ಅಭ್ಯಾಸ ಮಾಡಲು ಬಂದರು. ಅವರು ಮನೆ ಮಾಡಿ, ಇನ್ನೂ ತಾವೊಬ್ಬರೇ ಕೆಲವು ತಿಂಗಳು ಇರಬೇಕಾಗಿದ್ದುದರಿಂದ ಜೊತೆಯಲ್ಲಿ ವಾಸಿಸಲು ನನ್ನನ್ನು ಕರೆದರು. ಆ ವರ್ಷದ ಕೊನೆಯಲ್ಲಿ ಅವರ ಪತ್ನಿ ರುದ್ರಾಣಿಯವರು ತಮ್ಮ ಚೊಚ್ಚಿಲ ಕೂಸು ಜಯಕುಮಾರ ನನ್ನು ಎತ್ತಿಕೊಂಡು ಮೈಸೂರಿಗೆ ಬಂದಾಗ, ಆ ಸಂಭ್ರಮದಲ್ಲಿ ಎಷ್ಟು ಸಂತೋಷದಿಂದ ಪಾಲ್ಗೊಂಡೆ. ಮೇಷ್ಟರನ್ನು ಸಾಕಿ ಸಲಹಿದ ಅಜ್ಜಿಯೂ ಬಂದರು—ಅವರ ಬಗ್ಗೆ ಇವರಿಗೆ ಎಷ್ಟೊಂದು ಪೂಜ್ಯಭಾವ! ಮೇಷ್ಟರೂ ಅವರ ಶ್ರೀಮತಿಯರೂ ಆ ಮನೆಯ ಮುಂಭಾ ಗದ ಪುಟ್ಟ ಕೊಠಡಿಯಲ್ಲಿ ನಾನು ವಾಸಿಸುತ್ತಿರುವಾಗ ತೋರಿದ ಆದರವನ್ನು ಮರೆಯಲು ಸಾಧ್ಯವೇ? ಆ ಎಲ್ಲ ಋಣವನ್ನು ಕೃತಜ್ಞತೆಯ ಸ್ಮರಣೆಯಿಂದ ಮಾತ್ರ ತೀರಿಸಲು ಸಾಧ್ಯವೆಂದು ಕಾಣುತ್ತದೆ. ಅದೆಲ್ಲವನ್ನೂ ಕುರಿತು ಬರೆಯುವುದು ಎಷ್ಟು ಕಷ್ಟವೆಂಬು ದನ್ನು ಅಂತಹ ಪ್ರಯತ್ನ ಮಾಡಿದವರಿಗೆ ಮಾತ್ರ ಗೊತ್ತು.

## ಎಸ್. ಎಂ. ವೃಷಭೇಂದ್ರಸ್ವಾಮಿ

# 'ಹಿತ-ಮಿತ-ಅತಿರಹಿತ' ಡಾ|| ಜಿ.ಎಸ್.ಎಸ್.

ಡಾ|| ಜಿ. ಎಸ್. ಶಿವರುದ್ರಪ್ಪನವರೇ 'ವಸ್ತು'ವಾಗಿರುವ ಸ್ನೇಹಿತರ ಮಾತುಗಳಲ್ಲಿ, ಅವರ ಸಾಹಿತ್ಯ ಕೃತಿಗಳ ವಿಚಾರ ವಿಮರ್ಶೆ ನಡೆಯುವಲ್ಲಿ, ಅವರ ವೈಯಕ್ತಿಕ ಜೀವನದ ನಿಕಟವರ್ತಿಗಳಾದ ಗೆಳೆಯರ ಹರಟೆಯಲ್ಲಿ ತಪ್ಪದೇ ಬರುವ ಮಾತು "ಅವರು ಹಾಗೆಯೇ ಬಿಡಿ, ಅವರದೇ ಒಂದು ಥರ". ಅದೇ ಅವರ ವ್ಯಕ್ತಿ ವೈಶಿಷ್ಟ್ಯ. ಅವರ ಹೆಸರು ಜಿ. ಎಸ್. ಎಸ್. ಎಂದಿದ್ದರೂ, ಅವರು ಯಾರಿಗೂ 'ಜೀ' ಎಂದವರಲ್ಲ, ಇತರರ ಸಂತೋಷಕ್ಕಾಗಿ ತಾರತಮ್ಯವಿಲ್ಲದೆ yes, yes ಎನ್ನುವವರಲ್ಲ. ಈ ಅವರ ಪ್ರವೃತ್ತಿ ಪ್ರವಾಹದ ಎದುರು ಈಜುವಂತೆ ಮಾಡಿದೆ. ಅಂಥ ವಿಪರೀತ ಸನ್ನಿವೇಶಗಳಲ್ಲಿಯೂ ಎದೆಗೆಡದೆ ನಡೆದಿದ್ದಾರೆ. ಪ್ರವಾಹದ ವಿರುದ್ಧ ದಿಕ್ಕಿನಲ್ಲಿಯೇ ಈಜಿ, ದಡ ಸೇರಿದ್ದಾರೆ. ಈಗ ಅವರೇ-ನಾಗಿರುವರೋ ಅದಾಗಿದ್ದಾರೆ. ಪರಿಸ್ಥಿತಿಗಳಿಗೆ ಹೊಂದಿಕೊಂಡು 'ಜೀ' ಎನ್ನುವ 'Yes, Yes' ಎನ್ನುವ ಮನೋಭಾವವನ್ನು ಬೆಳೆಯಿಸಿಕೊಂಡಿದ್ದರೆ, ಹತ್ತರಲ್ಲಿ ಹನ್ನೊಂದಾಗಿಬಿಡುತ್ತಿದ್ದರು. ಹನ್ನೊಂದರಲ್ಲಿ ಮತ್ತೊಂದು ಆಗಿಬಿಡುತ್ತಿದ್ದರೆಂದು ತೋರುತ್ತದೆ. ಹಾಗಾಗಿಲ್ಲದಿರುವುದೇ ಡಾ|| ಜಿ. ಎಸ್. ಶಿವರುದ್ರಪ್ಪನವರ ವ್ಯಕ್ತಿ ವೈಶಿಷ್ಟ್ಯ.

ನನ್ನ ಹಾಗೂ ಅವರ ಪರಿಚಯ 'ಬೆಳ್ಳಿಹಬ್ಬ'ವನ್ನಾಚರಿಸುವಷ್ಟು ಹಳೆಯದು ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ನಾನು ಕನ್ನಡ ಆನರ್ಸ್ ತರಗತಿಯಲ್ಲಿದ್ದಾಗ, ಶಿವರುದ್ರಪ್ಪನವರನ್ನು ದೂರದಿಂದ ಕಂಡೆ. ತೆಳ್ಳಗಿನ ಎತ್ತರದ ಆಕೃತಿ, ಕಾಲಿನಲ್ಲಿ ಚಪ್ಪಲಿ, ಬಿಳಿಯ ಪಂಚೆ, ಬಿಳಿಯ ಜುಬ್ಬ, ಮೇಲೊಂದು ಶಲ್ಯ. ಒಂದು ಕೈಯಲ್ಲಿ ಕೊಡೆ, ಇನ್ನೊಂದರಲ್ಲಿ ಮೂರು ನಾಲ್ಕು ಪುಸ್ತಕಗಳು, ಗುಂಗುರಗೂದಲು. ಬಂಗಾರ ಬಣ್ಣದ ಕನ್ನಡಕ! ಮೂರನೆಯ ಆನರ್ಸ್ ಪ್ರಶಸ್ತಿ ಪಡೆದು, ಮೂರು ನಾಲ್ಕು ವರ್ಷ ದಾವಣಗೆರೆಯಲ್ಲಿ ಅಧ್ಯಾಪಕರಾಗಿ, ಎಂ. ಎ. ಪದವಿಯ ಸಲುವಾಗಿ 'ಶಿಕ್ಷಕ ವಿದ್ಯಾರ್ಥಿ' ಯಾಗಿ ಮೈಸೂರಿಗೆ ಬಂದಿದ್ದರು. ಅವರ ತರಗತಿಯ ವಿಕ್ರಮಗಳು, ಕವಿತೆ ಬರೆಯುವ ಪ್ರವೃತ್ತಿ, ಶಿಕ್ಷಕ ವೃತ್ತಿಯ ಗುಣವಿಶೇಷಗಳು—ಕನ್ನಡ ಸಾಹಿತ್ಯಾಭ್ಯಾಸಿಗಳಿಗೆಲ್ಲ ಸುಪರಿಚಿತ. ಅಷ್ಟೇ ಅಲ್ಲ, ತರಗತಿಗಳಲ್ಲಿ, ಸೆಮಿನಾರುಗಳಲ್ಲಿ, ಜಿ.ಎಸ್.ಎಸ್ ಅವರ ಹೆಸರು ತಪ್ಪದೇ ಮಿಂಚುತ್ತಿತ್ತು. ಆಗ ಶಿವರುದ್ರಪ್ಪ—ಪ್ರಭುಶಂಕರ—ಸುಬ್ಬರಾಯಾಚಾರ್ಯರು ಕನ್ನಡ ವಿದ್ಯಾರ್ಥಿಲೋಕಕ್ಕೆ ಆದರ್ಶ ವ್ಯಕ್ತಿಗಳಾಗಿದ್ದರು.

ಕುವೆಂಪು, ತೀನಂಶ್ರೀ. ಡಿ. ಎಲ್.ಎನ್, ಕೆ. ವಿ. ರಾಘವಾಚಾರ್ಯರು, ಎಸ್. ಅನಂತರಂಗಾಚಾರ್ಯರು, ತ. ಸು. ಶಾಮರಾಯರು ಮುಂತಾದ ಆದರ್ಶ ಪ್ರಾಧ್ಯಾಪಕರನ್ನು ವಿಶೇಷವಾಗಿ ಮೆಚ್ಚಿ, ಅವರ ಆದರ್ಶಗಳನ್ನು ಅನುಸರಿಸುತ್ತಿರುವ 'ಕಿರಿಯ ಅಧ್ಯಾಪಕರು' ಇನ್ನೂ ಕಿರಿಯರಾದವರಿಗೆ ಆದರ್ಶಪ್ರಾಯರಾಗಿದ್ದರು. ಇಂದಿಗೂ ಮಹಾರಾಜಾ ಕಾಲೇಜಿನ 'ಪ್ರಾಧ್ಯಾಪಕ ಪರಂಪರೆ'—ಉಡುಪಿನಲ್ಲಿ ಮಾತ್ರವಲ್ಲ—ಅಭ್ಯಾಸದಲ್ಲಿ, ಬರವಣಿಗೆಯಲ್ಲಿ, ಸಾಹಿತ್ಯಕ್ಷೇತ್ರದಲ್ಲಿ, ಕನ್ನಡ 'ಡಿಪಾರ್ಟಮೆಂಟು'ಗಳಲ್ಲಿ ಜೀವಂತವಾಗಿದೆ. ಕುವೆಂಪು ಅವರ ಪ್ರತಿಭೆ, ತೀನಂಶ್ರೀಯವರ 'ರಸ ವಿಮರ್ಶೆ', ಡಿ.ಎಲ್.ಎನ್ ಅವರ 'ಬಹುಮುಖ ಪಾಂಡಿತ್ಯ', ತ. ಸು. ಶಾ.ರವರ 'ಶಿಷ್ಯವಾತ್ಸಲ್ಯ', ಪರಂಪರೆಯಾಗಿ ಬೆಳಗುತ್ತಿದೆ. ಡಾ|| ಜಿ. ಎಸ್. ಶಿವರುದ್ರಪ್ಪನವರ 'ಸಾಹಿತ್ಯ ವ್ಯಕ್ತಿತ್ವ'ದಲ್ಲಿ ಅವರು ರೂಪಿಸಿ, ಮುನ್ನಡೆಸುತ್ತಿರುವ ಬೆಂಗಳೂರು ವಿಶ್ವವಿದ್ಯಾಲಯದ 'ಕನ್ನಡ ಅಧ್ಯಯನಕೇಂದ್ರ'ದಲ್ಲಿ 'ಪ್ರತಿಭೆ–ಪಾಂಡಿತ್ಯ–ಸಹೃದಯತೆ'ಯ ಸರಸ ಸಮ್ಮಿಳನ ಮೈದೋರಿದೆ. ಮೈಸೂರಿನ 'ಮಾನಸ ಗಂಗೋತ್ರಿ'ಯಂತೆ ಸಂಸ್ಥೆ, ಬೆಂಗಳೂರಿನ 'ಜ್ಞಾನ ಗಂಗೋತ್ರಿ'ಯ ಕೇಂದ್ರ. ಈ ಪರಂಪರೆಯ ಪ್ರಾತಿನಿಧಿಕಗಳಾಗಿವೆ. ಬೆಂಗಳೂರಿನ 'ಕನ್ನಡ ಅಧ್ಯಯನ'ಕ್ಕೆ ಸಾಹಿತ್ಯಿಕ ಪರಂಪರೆಗೆಲ್ಲ—ಡಾ|| ಜಿ.ಎಸ್.ಎಸ್, ಕೇಂದ್ರವ್ಯಕ್ತಿ, ಹಾಗೂ 'ಶಕ್ತಿಕೇಂದ್ರ'ವಾಗಿದ್ದಾರೆ. ಅವರ 'ವ್ಯಕ್ತಿ ವೈಶಿಷ್ಟ್ಯ'ದ ಮುದ್ರೆ ಅಚ್ಚಳಿಯದೆ ಮೂಡಿದೆ ಇಲ್ಲಿ. ಆದರೂ ಅಂದು ಮೈಸೂರಿನಲ್ಲಿ ಕಂಡ ಡಾ|| ಜಿ.ಎಸ್.ಎಸ್ ಇಂದಿಗೂ ಹಾಗೆಯೇ ಇದ್ದಾರೆ—ಕೂದಲು ಬಿಳಿದಾಗಿವೆ, ಕೊಡೆ ಹೋಗಿ ಕಾರು ಬಂದಿದೆ, ಅಷ್ಟೆ ! ಅವರ ನಿಕಟ ಸಂಪರ್ಕ ಪಡೆದವರಿಗೆಲ್ಲ, ಅಂದು–ಇಂದಿನ ಶಿವರುದ್ರಪ್ಪ ಒಬ್ಬರೇ ಆಗಿದ್ದಾರೆ; ಕಾರ್ಯಕ್ಷೇತ್ರ ವಿಸ್ತಾರವಾಗಿದೆ. ಸಾಹಿತ್ಯ ಸೃಷ್ಟಿಯೂ ವಿಪುಲವಾಗಿದೆ. ಆದರೂ, 'ಜಿ.ಎಸ್.ಎಸ್'ತನ ಬದಲಾಗಿಲ್ಲ. ಸಂಯಮದ ಮಾತು–ಬರಹ, ಸಮಸ್ಥಿತಿಯ ಮನೋಭಾವ, ದೂರದೃಷ್ಟಿಯ ನಡೆ, ತಿಳಿಹಾಸ್ಯದ ನುಡಿ, ಹೀಗೆ, ಹೀಗೆಯೇ ಇರಬೇಕೆಂಬ ಖಚಿತ ನಡವಳಿ, ಯಾವುದಕ್ಕೂ ಅತಿಯಾಗಿ ಅಂಟಿಕೊಂಡು, ತನ್ನತನವನ್ನು ಅದಕ್ಕೆ ಶರಣಾಗಿಸದ ಸಂಯಮ, ಕುಟಿಲ–ಕುಹಕ–ತಂತ್ರಗಳಿಗೆಡೆಗೊಡದ ನೇರ ನಡಿಗೆ, ಪರಿಸ್ಥಿತಿಯೊಡನೆ ರಾಜಿಮಾಡಿಕೊಳ್ಳದೆ, ಸ್ವಸ್ಥಿತಿಯನ್ನು ಕೈಬಿಡದೆ ಬಾಳುವ ಎಚ್ಚರ, ಯಾವುದೂ ಅತಿಯಾಗದ ಮಿತ–ಹಿತ–ಮುಂತಾದ 'ವೈಶಿಷ್ಟ್ಯ'ಗಳ ವ್ಯಕ್ತಿ ಡಾ|| ಜಿ.ಎಸ್.ಎಸ್. ದೂರದಿಂದ ಕಂಡವರಿಗೆ, ಲಾಭದ ಕಣ್ಣಿನಿಂದ ನೋಡಿದವರಿಗೆ, ಲೋಭ ಮನೋಭಾವದಿಂದ ನಡೆವವರಿಗೆ—ಈ 'ವ್ಯಕ್ತಿತ್ವ' ಅರ್ಥವಾಗುವುದಿಲ್ಲ ; ಈ ವಿಶಿಷ್ಟತೆ ಕಾಣುವುದಿಲ್ಲ. ಇರಲಿ.

೨

ಡಾ|| ಜಿ.ಎಸ್. ಶಿವರುದ್ರಪ್ಪನವರ ವಿದ್ಯಾರ್ಥಿಯಾಗಿದ್ದು, ನನ್ನ ಸಹಪಾಠಿಯಾಗಿದ್ದ ಮಿತ್ರ ಚಿದಾನಂದಮೂರ್ತಿಯವರ ಮೂಲಕ ಜಿ. ಎಸ್.ಎಸ್ ಪರಿಚಯ ಮಾಡಿಕೊಂಡೆ.

ಮೈಸೂರಿನ ಸರಸ್ವತಿಪುರದ ಅವರ ಮನೆ–ಪುಟ್ಟದಾದರೂ ಸುಖಸಂಸಾರದ ಚೊಕ್ಕತನದ ಮಾದರಿಯ ಮನೆಯಾಗಿತ್ತು. ಮೊದಲು ಅವರ ಮನೆಗೆ ಹೋದಾಗ, ಅವರು ತೋರಿದ ಸ್ವಾಗತ, ಮಾಡಿದ ಆತಿಥ್ಯ–ಅದಕ್ಕಿಂತ ಹೆಚ್ಚಾಗಿ 'ಸಾಹಿತ್ಯ ಸರಸ ಸಂವಾದ'—ನನ್ನ ಬದುಕಿನಲ್ಲಿ ಎಂದೂ ಮರೆಯದ ನೆನಪಾಗಿ ಉಳಿದಿದೆ. ಮನೆಯ ಓರಣ, ಪುಸ್ತಕಗಳ ವ್ಯವಸ್ಥೆ, 'ಕುಮಾರ—ಜಯಂತಿ'ಯರ ಆಟ—ಪಾಟ, ಸರಸ—ಸಜ್ಜನಿಕೆಯ ಪತ್ನಿ, ಕೆಲವೇ ಜನ ಆತ್ಮೀಯ ಮಿತ್ರರು—'ಆದರ್ಶ ರಸಿಕಸಂಸಾರ'ವೆಂದರೆ ಹೀಗಿರಬೇಕು, ಎಂಬ ಭಾವನೆ ನನ್ನಲ್ಲಿ–ಅದರಲ್ಲೂ ವಿವೇಕಾನಂದರಂತೆ 'ಸಂನ್ಯಾಸಿ ಸ್ವಾಮಿ'ಯಾಗಬೇಕೆಂದಿದ್ದ ನನ್ನಲ್ಲಿ–'ಸಂಸಾರಿ ಸ್ವಾಮಿ'ಯಾಗುವ ಆಶೆಯನ್ನೂ ಮೂಡಿಸಿತು, ಜಿ.ಎಸ್.ಎಸ್. ಸಂಸಾರ! ಬರೆಬರೆದಂತೆಲ್ಲ ಅಚ್ಚುಕಟ್ಟಾಗಿ Tag ಮಾಡಿದ ಕವನಗಳ ಕಂತೆಯನ್ನು ತೆಗೆದು, ಆರಿಸಿದ ಕೆಲವನ್ನು ಓದಿದರು ಕವಿ ಜಿ.ಎಸ್.ಎಸ್. 'ಒಂದು ಸುಂದರ ಹೂವ ನರಳಿಸಿದ ಲತೆಯಂತೆ' ಒಂದೆ ಬೆಳ್ಮುಗಿಲನ್ನು ಮಡಿಲಲ್ಲಿ ಹಿಡಿದಿರುವ 'ಗಿರಿಕನ್ಯೆ'ಯಂತಿರುವ ಪತ್ನಿಯ ಮಾತೃಭಾವವನ್ನು

ನಿನ್ನ ಕಣ್ಣೊಳು ಹೊಳೆವ ವಾತ್ಸಲ್ಯ ಚಂದ್ರಿಕೆಯೊ
ಳದ್ದಿ ಶಿಶು ನಗುತಲಿದೆ ಚಿಕ್ಕೆಯಂತೆ!
ಜಗವನಾಳುವ ಒಲವು ಮೈದೋರಿದೀ ಪರಿಗೆ
ಬೆರಗು ಮೌನದೊಳಿರುವೆ ಬಾನಿನಂತೆ

ಮುಂತಾಗಿ ವರ್ಣಿಸುವ ಕವಿತೆಯನ್ನೋದಿದರು. ಹಾಗೆಯೇ 'ತುಂಟತನಕಿನ್ನೆರಡು ಕಾಲ್ ಬಂದ ತೆರದಿ'....ಮನೆಯ ಶಿಶು ಬಿರುಗಾಳಿಯಾದ ಮಗುವಿನ ಆಟ–ಪಾಟಗಳನ್ನು ಪರಿಪರಿಯಾಗಿ ವರ್ಣಿಸುವ 'ರಸಿಕ ಸಂಸಾರಿ'ಯನ್ನು ಕಂಡೆ,

ತುಂಬು ಕಿತ್ತಲೆಕೆನ್ನೆ, ನಗೆಮಿಂಚುಗಳ ಕುವರ
ಕ್ರಾಂತಿಕಾರ!
ಹೊಳೆವೆಳೆವ ಕಂಗಳಲಿ ಬೆಳುದಿಂಗಳನು ತುಂಬಿ
ತಂದು ಮನೆಯಂಗಳಕೆ ಸುರಿವ ಧೀರ......
ಮಹ ಮಹಾಪಂಡಿತರ ಉದ್ಗ್ರಂಥಗಳನೆಲ್ಲ
ನೆಕ್ಕಿ ರುಚಿನೋಡುವನು ರಸನೆಯಿಂದ
ಎಷ್ಟಾದರೂ ಎಲ್ಲ ಬರಿಯ ನೀರಸವೆಂದು
ಹರಿದೆಸೆದು ಬಿಸುಡುವನು ತಾತ್ಸಾರದಿಂದ!
ನನಗು ಅವಳಿಗು ನಡುವೆ ವ್ಯಕ್ತ ಪ್ರೇಮದ ಸೇತು;
ಇವ ಮಾಯಕಾರ
ಎರಡು ಬಾಳನು ಬೆಸೆದ ಸೂತ್ರಧಾರ! (ಕ್ರಾಂತಿಕಾರ)

ಮುಂತಾದ 'ನವ ಮೈಸೂರು ಮಲ್ಲಿಗೆ'ಯ ತನಿಸಾಲುಗಳನ್ನು ಇಂದಿಗೂ ಮರೆತಿಲ್ಲ ನಾನು.

ಮನೆಯ ಬಾಗಿಲ ಹೊರಗೆ ಸುಡುವ ಬೇಸಗೆ ಬಿಸಿಲು
ಮನ ಚಿಂತೆಗಳ ಹುತ್ತ, ಮೇಲೆ ಬೆವರಿನ ಜಳಕ

ಇಂಥ ಹೊರಜಗದಿಂದ ಮನೆಯ ಹೊಸಿಲಿಗೆ ಬಂದ-
ರಿದೆ ಸಂಸಾರ ವೃಕ್ಷದ ನೆಳಲು......

ಅಲ್ಲಿ 'ಊದುಬತ್ತಿಯ ನವುರು ಗಂಧದಂತೆ' ಮಡದಿಯ 'ಅಕ್ಕರೆ', 'ಮಗುವಿನೆಳೆನಗೆಯ ತಿಂಗಳಿನ ಬಳ್ಳಿ ತೋಳಿನ ಬಳಸು'ಗಳ 'ಒಲವಿನ ತೆರೆಯೊಳದ್ದಿ' ಬಾಳುವ ಕವಿ ಜೀವನನ್ನು ಕಂಡೆ. ಆ-ಈ 'ಜಡೆ'ಗಳನ್ನು ವರ್ಣಿಸಿ, 'ಜಡೆಯಾಚೆ ತಿರುಗಿಸಿದ ತಾಯ ಮುಖ ಮಾತ್ರ ಇಂದಿಗೂ ಕಾಣದಲ್ಲ' ಎಂಬ ಒಡಲಾಳದ ಸಂತಾಪದ ನುಡಿ ಇಂದಿಗೂ ಕರುಳು ತಟ್ಟುತ್ತಿದೆ. ಆ ಮಾತೃಮುಖವನ್ನು, ಮಗುವಿಗೆ ಹಾಲೂಡಿಸುವ 'ಪತ್ನಿ'ಯಲ್ಲಿ ಮೊಮ್ಮಗನನ್ನು ಲಾಲಿಸುವ 'ಮಗಳ'ಲ್ಲಿ ಕಂಡಿರಬೇಕು. 'ಮುನ್ನೀರು ಎಂಬುದೂ ಕಣ್ಣೀರೆ ಎಲ್ಲ' ಹಾಗೂ ಕ್ರಿಸ್ತನ 'ಕಣ್ಣುಗಳೆರಡು ಕರುಣಾರಸದ ಕಡಲುಗಳು'— ಮುಂತಾದ ಸಾಲುಗಳು....ಹೀಗೆಯೇ ಇನ್ನೂ ಹಲವಾರು ಸಾಲುಗಳು ಸಾಲುಸಾಲಾಗಿ ನೆನಪಿಗೆ ಬರುತ್ತಿವೆ ಇಪ್ಪತ್ತೈದು ವರ್ಷಗಳ ನಂತರವೂ. ನಿಜವಾದ ಕಾವ್ಯ ಮನದ 'ಒಲವ'ನ್ನೂ ಜಗದ 'ಚೆಲುವ'ನ್ನೂ ಬೆಸೆಯುವುದೆಂಬ ಅವರ ಅನುಭವದ ನುಡಿ ನನ್ನ ಅನುಭವ ಮಾಗಿದಂತೆಲ್ಲ 'ಸಾಹಿತ್ಯ ಮತ್ತು ಜೀವನ'ದ ಸಂಬಂಧವನ್ನರಿಯುವ 'ಕೀಲಿಕೈ' ಯಾಗಿ ಉಳಿದಿದೆ. ೧೯೫೪ರಲ್ಲಿ, ಅಂದು 'ಪ್ರಬುದ್ಧ ಕರ್ನಾಟಕ'ದ ಸಂಪಾದಕರಾಗಿದ್ದ ಶ್ರೀ ದೇ.ಜ.ಗೌ ಅವರ ಪ್ರೋತ್ಸಾಹದಿಂದ 'ಚೆಲುವು—ಒಲವು' ಕವನ ಸಂಗ್ರಹದ ರಸವಿಮರ್ಶೆ ಬರೆದು, ಕೆಲವು ಕೊರತೆಗಳನ್ನೂ ಎತ್ತಿ ತೋರಿದಾಗಲೂ, ಜಿ.ಎಸ್.ಎಸ್. ನನ್ನನ್ನು ಮೆಚ್ಚಿದ್ದರು, ನಾನೂ ಅವರನ್ನು ಮೆಚ್ಚಿಕೊಂಡೆ. ಅನಂತರ ಬಂದ ಅವರ 'ಕಾವ್ಯ ಕೃಷಿ'ಯನ್ನು-ಅಲ್ಲಿನ ರೂಪಕ ವಿಧಾನ. ತಂತ್ರ ನಾವೀನ್ಯತೆ, ವಿಡಂಬನೆ— ಕಟಕಿಗಳನ್ನು ಮೆಚ್ಚುತ್ತಾ ನಡೆದಿದ್ದೇನೆ. ಆದರೂ ಆ ಪ್ರಥಮ ಭೇಟಿಯ 'ರಸಿಕ ಸಂಸಾರಿಕವಿ' ಶಿವರುದ್ರಪ್ಪ ನನಗೆ ಅಚ್ಚು-ಮೆಚ್ಚು. ಅಂದು ಕೇಳಿದ ತನಿ ಭಾವದ ತನಿಗವಿತೆಗಳು—ಇತ್ತೀಚಿನ ಅವರ ಇತರ ಪ್ರಭಾವಶಾಲೀ ಕವಿತೆಗಳನ್ನು ಓದಿದ ಮೇಲೆಯೂ-'ತನಿ'ಯಾಗಿಯೇ ಉಳಿದಿವೆ. ಕಾವ್ಯ ಸೃಷ್ಟಿಸುವೆನೆಂಬ ಎಚ್ಚರ ಮೂಡುವ ಮೊದಲು, ಸಹಜ ವಿಲಾಸವಾಗಿ ಮೂಡುವ ಈ ಭಾವದ ತೆರೆಗಳಲ್ಲಿ ಹೊಸ ವಸಂತದ ನರುಗಂಪು ತೋರುವುದು ಸಹಜವಲ್ಲವೆ? ಸಾಮಾಜಿಕ ಪ್ರಜ್ಞೆ, ಕಾವ್ಯ ಸಿದ್ಧಾಂತಗಳ ಅಧ್ಯಯನ, ಇತರ ಕಾವ್ಯ-ಸಾಹಿತ್ಯಾಭ್ಯಾಸ, ಕವಿಯಲ್ಲಿ ಸಂಕೀರ್ಣತೆಯ ಸೊಗಸನ್ನು, ಶಾಶ್ವತತೆಯ ಗುಣವನ್ನು ರೂಪಿಸುತ್ತದೆ. ಈಚೆಗೆ ಮೂಡಿದ ಕವನಗಳಲ್ಲಿ ಇಂಥ 'ಭಾವ ಸಂಕೀರ್ಣತೆ'—'ರಚನಾತಂತ್ರ ನಾವೀನ್ಯತೆ' ಕಾಣುತ್ತದೆ. ಡಾ|| ಜಿ. ಎಸ್. ಎಸ್. ಅವರ ಇತ್ತೀಚೆಗಿನ ಕೃತಿಗಳಲ್ಲಿ ಈ ವಿಶೇಷಾಂಶಗಳು ಹೇರಳವಾಗಿ ತೋರಿ, ಅವರನ್ನು ರಮ್ಯ-ನವ್ಯ ಪಂಥಗಳ ಸೇತುವೆಯಾದ ಸಮರ್ಥ ಕವಿಯೆಂಬ ಮಾನ್ಯತೆಗೆ ಏರಿಸಿದೆ. ಕವಿ ಬೆಳೆದಂತೆ ಕವಿತೆಯೂ ಬೆಳೆಯಬೇಕಲ್ಲವೆ? ಅಲ್ಲಿಯೂ ಅವರ 'ವಿಶಿಷ್ಟತೆ' ಅಚ್ಚಳಿಯದೆ ಉಳಿದಿದೆ. ಅವರಿವರನ್ನು ಅನುಸರಿಸಲಿಲ್ಲ, ಪಂಥ ಪಂಗಡದ ಕವಿಯಾಗಲಿಲ್ಲ.

೩

ಡಾ|| ಜಿ. ಎಸ್. ಶಿವರುದ್ರಪ್ಪನವರು ಈ ಇಪ್ಪತ್ತೈದು ವರ್ಷಗಳಲ್ಲಿ ವಿಶೇಷವಾಗಿ ಬೆಳೆದು ನಿಂತಿದ್ದಾರೆ. 'ರಸಿಕ ಸಂಸಾರಿ' ಕವಿ ಜಿ.ಎಸ್.ಎಸ್. ಈಗ ಮೂವರು ಮಕ್ಕಳ ತಂದೆಯಾಗಿದ್ದಾರೆ. ಮೊಮ್ಮಗನನ್ನು ಪಡೆದು 'ಅಜ್ಜ'ನೂ ಆಗಿದ್ದಾರೆ. ಮಕ್ಕಳಿಗೆ ಯೋಗ್ಯ ಶಿಕ್ಷಣ ನೀಡಿದ್ದಾರೆ. ಹಿರಿಯ ಮಗನಿಗೆ ಸ್ವತಂತ್ರ ಉದ್ಯೋಗ ಕಲ್ಪಿಸಿದ್ದಾರೆ. ಕಿರಿಯ ಮಗ ಎಂ.ಬಿ.ಬಿ.ಎಸ್. ಅಭ್ಯಾಸದಲ್ಲಿದ್ದಾನೆ. ಮುದ್ದಿನ ಮಗಳು 'ಜಯಂತಿ' ಗೃಹಿಣಿಯಾಗಿ, ಮಗನನ್ನು ಪಡೆದು ಜಿ.ಎಸ್.ಎಸ್. ಸಂಸಾರದ ಕರುಳ ಬಳ್ಳಿಯನ್ನು ಹಬ್ಬಿಸಿದ್ದಾಳೆ. ಲೋಕವ್ಯವಹಾರದಲ್ಲಿ ನಿರತರಾಗಿರುವ ಜಿ.ಎಸ್.ಎಸ್. ಅವರಿಗೆ ಆತ್ಮೀಯ ಸಂಸಾರದ ರಸನಿಮಿಷಗಳನ್ನೊದಗಿಸಿದೆ ಈ ಪುಟ್ಟ 'ಅಮರೇಶ್ವರ'! (ಅಜ್ಜನು ಮನೆಯಲ್ಲಿದ್ದಾಗಲೆಲ್ಲ, ಈ ಮಗು ಅವರನ್ನು ಅಮರಿಕೊಂಡೇ ಇರುವುದರಿಂದ, ಅಜ್ಜನಿಟ್ಟ ಪ್ರೀತಿಯ ಹೆಸರು–'ಅಮರೇಶ್ವರ'!) ಅಜ್ಜಿಯ ವಾತ್ಸಲ್ಯವನ್ನುಂಡು ಬೆಳೆಯುತ್ತಿರುವ 'ಮಗು', ಪ್ರಬುದ್ಧಮಾನರಾಗುತ್ತಿರುವ ಮಕ್ಕಳು, ದಿನದಿನಕ್ಕೂ ವಿಸ್ತಾರವಾಗುತ್ತಿರುವ ಕಾರ್ಯಕ್ಷೇತ್ರ ಜಿ.ಎಸ್.ಎಸ್. ವ್ಯಕ್ತಿತ್ವಕ್ಕೆ ಪೂರ್ಣತೆಯನ್ನು ನೀಡುತ್ತಿವೆ. ಮನೆಯ ವ್ಯವಸ್ಥೆ, ಓರಣ–ಒಪ್ಪ, ನಿಯಮಿತವಾದ ದಿನನಿತ್ಯದ ಕಾರ್ಯಕ್ರಮ, ಪ್ರೊಫೆಸರ್‌ರ ಉದ್ಯೋಗ ನಿರ್ವಹಣೆಗೆ ಸಹಕಾರಿಯಾಗಿದೆ. ಮಗಳ ಮದುವೆಯನ್ನು ಅದೆಷ್ಟು ವೈಭವದಿಂದ, ಅಷ್ಟೇ ವ್ಯವಸ್ಥಿತವಾಗಿ ಬೆಂಗಳೂರಿನಲ್ಲಿ ನೆರವೇರಿಸಿದರು! ಸಾಂಸಾರಿಕ ಜವಾಬ್ದಾರಿಗಳನ್ನು—ತನ್ನ ಸಂಸಾರದ ಜೊತೆಗೆ, ತಂದೆ, ತಮ್ಮ, ತಂಗಿಯರು, ಬಂಧುಗಳು ಮೆಚ್ಚುವಂತೆ ನಿರ್ವಹಿಸಿದ್ದಾರೆ. ಅಲ್ಲೆಲ್ಲ ಅವರ ವ್ಯಕ್ತಿತ್ವದ ಗುಣ–'ಹಿತ-ಮಿತ-ಅತಿರಹಿತ' ಹಾಗೂ 'ಹಾಸಿಗೆ ಇದ್ದಷ್ಟು ಕಾಲು ಚಾಚುವ' ಆರ್ಥಿಕ ನೀತಿ, ಡಾಂಭಿಕತೆಯ ಸುಳಿವಿಲ್ಲದ ಕ್ರಿಯಾಶೀಲತೆ, ಯಾವುದನ್ನೂ ವಿಶೇಷವಾಗಿ ಹಚ್ಚಿಕೊಳ್ಳದ ನಿರ್ಲಿಪ್ತತೆಯ ಕರ್ತವ್ಯಪ್ರಜ್ಞೆ–ಸುವ್ಯಕ್ತವಾಗಿದೆ, ಅವರ 'ವ್ಯಾವಹಾರಿಕ ವ್ಯಕ್ತಿತ್ವ' ರೂಪಿತವಾಗಿದೆ. ಅನೇಕ ಜನ 'ಕವಿ'ಗಳಿಗೆ, 'ಸಾಹಿತಿ'ಗಳಿಗೆ, 'ಪ್ರಾಧ್ಯಾಪಕ'ರಿಗೆ ಇಂಥ 'ದುಂಡು ವ್ಯಕ್ತಿತ್ವ' (Round Character) ರೂಪಿತವಾಗಿಲ್ಲದ್ದು ಸುವಿದಿತ.

ಡಾ|| ಜಿ.ಎಸ್.ಎಸ್. ಅವರ ಮಿತ್ರಬಳಗ ಕಿರಿದು, ಆದರೂ ಮಧುರ ಸಂಬಂಧದ್ದು. ಅವರಿಗೆ ಅಪರಿಚಿತರು ಅನೇಕ, ಆದರೆ ಸ್ವಭಾವ, ಅಭಿರುಚಿಗಳನ್ನರಿತವರು ಕೆಲವರು ಮಾತ್ರ. ಯೌವನದಲ್ಲಿ ನಿಕಟವರ್ತಿಗಳಾದ ಕೆಲವು ಗೆಳೆಯರೂ ಅವರವರ ಜೀವನದ ಆದರ್ಶಗಳನ್ನು ಬದಲಿಸಿಕೊಂಡಿದ್ದರಿಂದ, ಈಗ ಕೊಂಚ ದೂರವಾಗಿದ್ದಾರೆ; ಹೊಸ ಗೆಳೆಯರು ಕೂಡಿಕೊಂಡಿದ್ದಾರೆ. ಅಲ್ಲಿಯೂ ಜಿ.ಎಸ್.ಎಸ್. ನಿರ್ಲಿಪ್ತ ಸ್ನೇಹಿತ! ಅನೇಕರಿಗೆ ಉಪಕಾರ ಮಾಡಿದ್ದಾರೆ, ಪ್ರತಿಫಲ ಅವರಿಗೂ ದೊರೆತಿಲ್ಲ. ಅವರು ನಿರೀಕ್ಷಿಸುವುದೂ ಇಲ್ಲ, ಆ ಮಾತು ಬೇರೆ.

ಮೈಸೂರಿನಲ್ಲಿದ್ದಾಗ, ಪ್ರತಿ ಭಾನುವಾರ ಸರಸ್ವತಿಪುರದಿಂದ ಶ್ರೀ ರಾಮಕೃಷ್ಣ

ಆಶ್ರಮಕ್ಕೆ ಜಿ.ಎಸ್.ಎಸ್. ಹಾಗೂ ಇತರ ಗೆಳೆಯರೊಡನೆ ನಡೆದು ಹೋಗಿ, ಸಂಜೆ ಅಲ್ಲಿನ ಪ್ರಾರ್ಥನಾ ಕಾರ್ಯಕ್ರಮಗಳನ್ನು ಮುಗಿಸಿ, ವಾಪಾಸು ನಡೆಯುತ್ತಲೇ ಬರುವಾಗಿನ ಗೆಳೆಯರ ಬಳಗದ 'ಸರಸ ಸಂಭಾಷಣೆ' ಎಂದಿಗೂ ಮರೆಯದಂಥದು. ಡಾ|| ಜಿ.ಎಸ್.ಎಸ್. ಹರಟೆಯಲ್ಲಿ ಕಾಲ ಕಳೆದದ್ದನ್ನು ಕಂಡವರೂ ಇಲ್ಲ. ಸತತ ಅಭ್ಯಾಸ ಶೀಲರಾದ, ಕೈಗೆ ದೊರೆಯುವ ಎಲ್ಲ ಹೊಸ ಗ್ರಂಥಗಳನ್ನು ಓದಿ, ರುಚಿ ನೋಡುವ ಸ್ವಭಾವದ ಅವರ ಮಿತ್ರ-ಶಿಷ್ಯ ಸಂಭಾಷಣೆಗಳಲ್ಲಿ ಸಾಹಿತ್ಯ-ಸಂಸ್ಕೃತಿಯೇ 'ವಸ್ತು'ವಾಗಿಬಿಡುತ್ತದೆ; ಅವರಿಗೆ ಪ್ರಿಯವಾದ ಪ್ರಾಚ್ಯ+ಪಾಶ್ಚಾತ್ಯ ಕಾವ್ಯತತ್ವ ವಿವೇಚನೆಯೇ ಮುಖ್ಯ ವಿಷಯವಾಗುತ್ತದೆ. ಸಮಕಾಲೀನ ಸಾಹಿತ್ಯದ ಸಮಸ್ಯೆಗಳ ಚರ್ಚೆ, ಸಾಹಿತ್ಯ ಪಂಗಡಗಳ ಚರ್ಚೆ, ವಿವರವಾಗಿ ಬರುತ್ತದೆ. ಅಲ್ಲೆಲ್ಲಿಯೂ ವ್ಯಕ್ತಿದೂಷಣೆ, ಆರೋಪಣೆಗಳು ನುಸುಳುವಂತಿಲ್ಲ. ಗೆಳೆಯರಾರಾದರೂ ಅತ್ತ ಸುಳಿದರೂ 'ಹೋಗಲಿ ಬಿಡಿ, ಅವೆಲ್ಲ ತಾತ್ಕಾಲಿಕ' ಎಂದಿಷ್ಟೇ ಹೇಳಿ ಚಿವುಟಿಬಿಡುತ್ತಾರೆ, ಆ ಆರೋಪದ ಬಳ್ಳಿಯ ಕುಡಿಯನ್ನು. ಅನೇಕ ಕಿರಿಯ ಲೇಖಕರಿಗೆ ಮಾರ್ಗದರ್ಶನ, ಸ್ಫೂರ್ತಿ ನೀಡಿದ್ದಾರೆ. ಅಂತೆಯೇ ಬಹುಶಃ ಎಲ್ಲ ಹಿರಿಯ ಲೇಖಕರ ವಿಶ್ವಾಸ ಗಳಿಸಿದ್ದಾರೆ. ಸಾಹಿತ್ಯ ಕ್ಷೇತ್ರದಲ್ಲಿ 'ಆ ಪಂಥದವನಲ್ಲ, ಈ ಪಂಥದವನಲ್ಲ, ಬಹು ಪಂಥಿಯಾನು' ಎಂಬ ಗುರುವಾಣಿಯನ್ನು ಅಕ್ಷರಶಃ ಅನುಸರಿಸುತ್ತಾರೆ, ಜಿ.ಎಸ್.ಎಸ್. ಅವರ ವ್ಯಕ್ತಿತ್ವದಲ್ಲಿಯೇ ಈ 'ತೆರೆದ ಮನಸ್ಸು' 'ಸಮನ್ವಯ ದೃಷ್ಟಿ' ಸಮ್ಮಿಳನವಾಗಿವೆ. ಅವರ ಜೀವನದ ವ್ಯವಹಾರಗಳಲ್ಲಿ, ಅಧ್ಯಯನ ಕೇಂದ್ರದ ಚಟುವಟಿಕೆಗಳಲ್ಲಿ, ಡಾ|| ಜಿ.ಎಸ್.ಎಸ್. ವ್ಯಕ್ತಿತ್ವದ ಪ್ರಭಾವ ಮುದ್ರೆ ಕಾಣುತ್ತಿದೆ, 'ವಿಶಿಷ್ಟತೆ' ಮೈದೋರಿದೆ.

೪

ಆಧುನಿಕ ಸಾಹಿತ್ಯ ಕ್ಷೇತ್ರದಲ್ಲಿ ಡಾ|| ಜಿ. ಎಸ್. ಶಿವರುದ್ರಪ್ಪನವರದು ಮರೆಯಲಾಗದ ವ್ಯಕ್ತಿತ್ವ. ಕವಿಯಾಗಿ ಸ್ಥಾನ ಪಡೆದಂತೆ, ವಿಮರ್ಶಕರಾಗಿ, ಸಾಹಿತ್ಯ ಶಾಸ್ತ್ರ ವಿವೇಚಕರಾಗಿ, ಒಳ್ಳೆಯ ಗದ್ಯ ಲೇಖಕರಾಗಿ ಹೆಸರು ಗಳಿಸಿದ್ದಾರೆ. ಪಿ.ಎಚ್.ಡಿ. ಪ್ರಬಂಧ, ವಿಮರ್ಶೆಯ ಪೂರ್ವ-ಪಶ್ಚಿಮ, ಸಾಹಿತ್ಯ ವಾರ್ಷಿಕದ ಲೇಖನಗಳು, ಬಿಡಿ ಕೃತಿಗಳ ವಿಮರ್ಶೆ, ಡಾ|| ಜಿ.ಎಸ್.ಎಸ್. ಅವರ ಸದಭಿರುಚಿಯ ಹಾಗೂ ಸೌಂದರ್ಯ ಪ್ರಜ್ಞೆಯ ನಿರ್ಮಿತಿಗಳು. ಕುಹಕ-ಕುಚೋದ್ಯವಿಲ್ಲದ, ನೇರ ಅಭಿಪ್ರಾಯ ಮಂಡನೆಯ ಅವರ 'ಸಾಹಿತ್ಯ-ವಿಮರ್ಶೆ' ಕುವೆಂಪು, ತೀ.ನಂ.ಶ್ರೀ. ಪರಂಪರೆಯನ್ನು ಮುಂದುವರಿಸಿದೆ; 'ಪ್ರಾಯೋಗಿಕ ವಿಮರ್ಶೆ'ಯ ಮಾರ್ಗವನ್ನು ಸ್ಥಾಪಿಸಿದೆ. 'ದರ್ಶನ ವಿಮರ್ಶೆ'ಯ ದಾರಿಯನ್ನು ವಿಶಾಲಗೊಳಿಸಿದೆ. ಕೆಲವೇ ಆದರೂ ಅವರ ಗದ್ಯಕೃತಿಗಳಲ್ಲಿಯೂ ಕೆಲವು ಗಣನೀಯಾಂಶಗಳಿವೆ. ಅವರ 'ಪ್ರವಾಸ ಕೃತಿ' ಒಳ್ಳೆಯ ದಾಖಲೆ, ತೆರೆದ ಮನಸ್ಸಿನ ಅಭಿವ್ಯಕ್ತಿ, ಕಂಡ ವ್ಯಕ್ತಿ ಘಟನೆಗಳ 'ಸೌಂದರ್ಯ'ವನ್ನೂ, ಆತ್ಮೀಯತೆಯನ್ನೂ ಬಿಂಬಿಸುವ ಕೃತಿ, ಸರಳ ಹಾಗೂ ಸಮರ್ಥ ಗದ್ಯದ ಮಾದರಿ. ಅಂತೆಯೇ, ಅಧ್ಯಯನ

ಕೇಂದ್ರದ ಪ್ರಕಟನೆಗಳಾದ 'ಸಾಹಿತ್ಯ ವಾರ್ಷಿಕ' ಹಾಗೂ 'ಸಾಹಿತ್ಯಚರಿತ್ರೆ'ಗಳಲ್ಲಿ ಡಾ|| ಜಿ.ಎಸ್.ಎಸ್. 'ಸಮಧಾತು' ಗುಣ ಸುವ್ಯಕ್ತವಾಗಿದೆ, 'ಹಿತ-ಮಿತ-ಅತಿರಹಿತ'ತೆ ಮೈದೋರಿದೆ; ಆ ಸಾಧನೆಗಳಲ್ಲಿ 'ಕ್ರಿಯಾಶೀಲತೆ,' ಕಾಲಕ್ರಮ ವಿಪರ್ಯಯವಾಗದ ನಿಚಿತತೆ ಕಾಣುತ್ತಿದೆ. ವಿಶ್ವವಿದ್ಯಾಲಯಗಳ ಇಂದಿನ ಪರಿಸ್ಥಿತಿಗಳನ್ನು ಗಮನಿಸಿದರೆ, ಇದೊಂದು ಗಣನೀಯ ಸಾಧನೆಯಲ್ಲದೆ ಮತ್ತೇನು? ವಿಶ್ವವಿದ್ಯಾಲಯಗಳ ಕನ್ನಡ ವಿಭಾಗಗಳ ಸಾಧನೆಗಳನ್ನು ಚಾರಿತ್ರಿಕವಾಗಿ, ನಿರ್ಮಮಭಾವದಿಂದ ಸಂವೀಕ್ಷಿಸುವಾಗ ಡಾ|| ಜಿ.ಎಸ್.ಎಸ್.ರವರ ಸಾಧನೆಗಳ ಬೆಲೆ ತಿಳಿಯುತ್ತದೆ.

ಡಾ|| ಜಿ. ಎಸ್. ಶಿವರುದ್ರಪ್ಪನವರ ಅಭಿರುಚಿಪ್ರೇರಿತವಾಗಿವೆ, ಕನ್ನಡ ಅಧ್ಯಯನ ಕೇಂದ್ರದ 'ವಿಚಾರ ಸಂಕಿರಣ'ಗಳು. ಪಂಪನ ಕೃತಿಗಳ ಮೌಲ್ಯಮಾಪನ, ರಮ್ಯ–ನವ್ಯ ಕಾವ್ಯ ಮಾರ್ಗಗಳ ಗುಣ–ದೋಷ ವಿಶ್ಲೇಷಣೆ, ಆಧುನಿಕ ರಂಗಭೂಮಿಯ ಸಮಸ್ಯೆಗಳ ಪರಿವೀಕ್ಷಣೆ ನಡೆಯಿಸಿದ ಆದರ್ಶಸಂಕಿರಣಗಳು ಅನುಕರಣೀಯ, ಆಯಾ ಕೃತಿಗಳು ವಿಶೇಷ ದಾಖಲೆಗಳು. ವಿಚಾರ ಸಂಕಿರಣಗಳ ನಿರ್ವಹಣೆಯಲ್ಲಿ 'ಕ್ರಿಯಾಶೀಲತೆ', ಗಾಳಿ–ಧೂಳೆದ್ದಾಗಲೂ 'ಸಮಭಾವ', ಪಕ್ಷ–ಸಂಘಗಳಿಗೆಡೆಗೊಡದ 'ಸಮನ್ವಯ,' ಎಲ್ಲ ವಾದವಿಚಾರಗಳಿಗೂ 'ಮಾನ್ಯತೆ'—ಡಾ|| ಜಿ.ಎಸ್.ಎಸ್.ರವರ ಸ್ವಭಾವದ ಗುಣಗಳು; ಅವರ ಸಮನ್ವಿತ ಜೀವನ ದೃಷ್ಟಿಯ ಪ್ರತೀಕ ಕ್ರಿಯೆಗಳು. ವೈಯಕ್ತಿಕ ಜೀವನದಲ್ಲಿಯೂ ಎದುರುಗೊಂಡ ಗಾಳಿ-ಧೂಳು-ಮಳೆಯನ್ನೂ ಇಂಥದೇ ಮನೋಭಾವದಿಂದ ಗೆದ್ದಿದ್ದಾರೆ, ಸ್ನೇಹ-ಸಮರಸವನ್ನು ರೂಪಿಸಿಕೊಂಡಿದ್ದಾರೆ. ಅವುಗಳನ್ನು ನಾನೇನೂ ಪವಾಡಗಳೆನ್ನುವುದಿಲ್ಲ. ಆದರೆ, ಅವೆಲ್ಲ ಎಚ್ಚರ-ಚುಚ್ಚರದ ವ್ಯಕ್ತಿತ್ವದ 'ಸಾಧನೆ'ಗಳು ಎನ್ನುತ್ತೇನೆ. ಒಟ್ಟಿನಲ್ಲಿ ಡಾ|| ಜಿ.ಎಸ್.ಎಸ್ 'ಜೀವನ ಸೌಂದರ್ಯ'ದ ಉಪಾಸನೆ ಹಾಗೂ ಸಾಧನೆಗಳ ಸಂಕೇತ, 'ಹಿತ-ಮಿತ-ಅತಿರಹಿತ'ತೆ ಅವರ ಜೀವನದ ಆದರ್ಶ. ಸ್ನೇಹದಲ್ಲಿ 'ಹಿತ', ಮಾತು 'ಮಿತ', ಜೀವನ 'ಅತಿರಹಿತ.'

# ಜಿ. ಗುಂಡಣ್ಣ
# ಒಂದು ಪರಿಚಯ

ಸುಮಾರು ಮೂವತ್ತು ವರ್ಷಗಳ ಹಿಂದೆ ಇಬ್ಬರೂ ಮಹಾರಾಜಕಾಲೇಜಿನಲ್ಲಿ ವಿದ್ಯಾರ್ಥಿಗಳಾಗಿದ್ದಾಗ ಡಾ॥ ಜಿ. ಎಸ್. ಶಿವರುದ್ರಪ್ಪನವರ ಮತ್ತು ನನ್ನ ಪರಸ್ಪರ ಪರಿಚಯವಾಯಿತು. ಡಾ॥ ಶಿವರುದ್ರಪ್ಪನವರು ನನಗಿಂತ ಕೊಂಚ ಚಿಕ್ಕವರಿರಬೇಕು, ವಯಸ್ಸಿನಲ್ಲಿ. ನಾನು ಬಿ.ಎ. ಪದವಿ ಪಡೆದ ನಂತರ ಒಂದು ವರ್ಷ ಗುಮಾಸ್ತೆಯಾಗಿದ್ದು ಮತ್ತೆ ೧೯೪೫ರಲ್ಲಿ ಒಂದನೆ ಕನ್ನಡ ಆನರ್ಸ್ ತರಗತಿಗೆ ಸೇರಿ ಓದಿದವನು. ನಾನು ಎರಡನೆ ಆನರ್ಸ್ ತರಗತಿಗೆ ಬಂದಾಗ ಡಾ॥ ಶಿವರುದ್ರಪ್ಪನವರು ಒಂದನೇ ಆನರ್ಸ್ ವಿದ್ಯಾರ್ಥಿಯಾಗಿ ಸೇರಿದರೆಂದು ನೆನಪು. ನನ್ನ ಅವರ ಪರಿಚಯ ಸ್ನೇಹಗಳು ಆತ್ಮೀಯವಾಗಿ ಬೆಳೆದುವು. ಅದೊಂದು ಸುಯೋಗ. ನನ್ನ ಬಾಳಿನ ಒಂದು ಚಿರಸ್ಮರಣೆ. ಆ ದಿನಗಳು ಅಮೃತಪ್ರಾಯವಾದ ದಿನಗಳು. ಕಾರಣ ಇಬ್ಬರೂ ಕವಿಗಳಾಗುವ ಇಚ್ಛೆಯುಳ್ಳ ತರುಣರಾಗಿದ್ದೆವು. ನಮ್ಮ ಪುಣ್ಯದಿಂದ ಕನ್ನಡದಲ್ಲಿ ಸುಪ್ರಸಿದ್ಧ ಪ್ರಾಚಾರ್ಯರುಗಳೆನಿಸಿದ ಡಿ.ಎಲ್.ಎನ್ ; ತೀ.ನಂ.ಶ್ರೀ ; ವಿ.ಸೀ ; ತ.ಸು.ಶಾ ಮುಂತಾದ ಗುರುವರ್ಯರುಗಳೆಲ್ಲರೂ ಮಹಾರಾಜಾ ಕಾಲೇಜಿನಲ್ಲಿ ನಮ್ಮ ವಿದ್ಯಾಗುರುಗಳಾಗಿದ್ದರು. ಸಾಲದುದಕ್ಕೆ ಕವಿವರ್ಯ ಶ್ರೀ ಕುವೆಂಪು ಅವರೂ ೧೯೪೬ರಲ್ಲಿ ಕನ್ನಡ ಇಲಾಖೆಯ ಮುಖ್ಯ ಪ್ರಾಧ್ಯಾಪಕರಾಗಿ ಬಂದರು. ಆದುದರಿಂದ ನಮ್ಮ ಹೆಮ್ಮೆ ಆನಂದಗಳಿಗೆ ಮಿತಿಯಿರಲಿಲ್ಲ.

ಡಾ॥ ಶಿವರುದ್ರಪ್ಪನವರೂ ನಾನೂ ಪ್ರತಿದಿನವೂ ಏನಾದರೊಂದು ಕವನವನ್ನು ಬರೆಯುವುದು ಪರಿಪಾಠವಾಗಿತ್ತು. ನಮ್ಮ ಕವನಗಳನ್ನು ಗುರುವರ್ಯ ತ ಸು. ಶಾಮರಾಯರು ಮೆಚ್ಚಿಕೊಂಡು ಪ್ರೋತ್ಸಾಹಿಸಿ ಆಶೀರ್ವದಿಸುತ್ತಿದ್ದುದೂ ಉಂಟು. ಹೀಗಾಗಿ ಡಾ॥ ಶಿವರುದ್ರಪ್ಪನವರ ಮತ್ತು ನನ್ನ ಹೃದಯಗಳು ಹತ್ತಿರವಾಗುತ್ತಿದ್ದುವು. ಪ್ರತಿದಿನವೂ ನಮ್ಮ ನಮ್ಮ ಹೊಸ ಕವನಗಳನ್ನು ಪರಸ್ಪರರಲ್ಲಿ ಓದುತ್ತಿದ್ದೆವು. ಪರಸ್ಪರ ಮೆಚ್ಚಿಕೊಳ್ಳುತ್ತಿದ್ದೆವು. ಅದಕ್ಕಾಗಿ ಡಾ॥ ಶಿವರುದ್ರಪ್ಪನವರು ಹಾಲಮ್ಮನ ಛತ್ರದಲ್ಲಿದ್ದ ನನ್ನಲ್ಲಿಗೆ ತಾವೇ ಬಂದು ಹೋಗುತ್ತಿದ್ದರು. ಒಮ್ಮೊಮ್ಮೆ ನಾನೂ ಅವರಲ್ಲಿಗೆ ಹೋಗಿ ಬರುತ್ತಿದ್ದೆ. ಹೀಗೆ ಒಂದು ರೀತಿಯಲ್ಲಿ ಡಾ॥ ಶಿವರುದ್ರಪ್ಪನವರೂ ನಾನೂ ಆ ದಿನಗಳಲ್ಲಿ ಸಾಹಿತ್ಯಸೋದರರಾಗಿದ್ದೆವೆಂದರೆ ಅತಿಶಯೋಕ್ತಿಯಲ್ಲ. ಗುರುಕೃಪೆ ಇಂದಿಗೂ ನಮ್ಮಿಬ್ಬರನ್ನು ಆ ಪವಿತ್ರಮಾರ್ಗದಲ್ಲಿ ಸಾಧಕರನ್ನಾಗಿರಿಸಿದೆ.

ವಯಸ್ಸಿನಲ್ಲಿ ನಾನು ಕೊಂಚ ದೊಡ್ಡವನಾಗಿದ್ದರೂ ಹೆಚ್ಚು ಭಾವುಕನೂ ಮುಗ್ಧನೂ ಆಗಿದ್ದೆನೆಂದು ನನ್ನ ಅನಿಸಿಕೆ. ಈಗಲೂ ಅದೇ ಅನಿಸಿಕೆ ಮುಂದುವರಿದಿದೆ. ಕೊಂಚ ಕಿರಿಯರಾಗಿದ್ದ ಡಾ|| ಶಿವರುದ್ರಪ್ಪನವರು ಹೆಚ್ಚು ಬೌದ್ಧಿಕ ಪ್ರಜ್ಞೆಯುಳ್ಳವರಾಗಿದ್ದರು. ಹೆಚ್ಚು ಪ್ರತಿಭಾವಂತರಾಗಿದ್ದರು. ಇದು ನನ್ನ ಹೃದಯಕ್ಕೆ ವೇದ್ಯವಾಗುತ್ತಿತ್ತು. ಆದುದರಿಂದ ಅವರಲ್ಲಿ ನಾನಿಟ್ಟಿದ್ದ ಪ್ರೀತಿವಿಶ್ವಾಸಗಳಲ್ಲಿ ಗೌರವವೂ ಮಿಶ್ರವಾಗಿರುತ್ತಿತ್ತು. ಇದು ಉತ್ಪ್ರೇಕ್ಷೆಯಲ್ಲ. ಸತ್ಯ. ಆದರೆ ಡಾ|| ಶಿವರುದ್ರಪ್ಪನವರ ಸೌಜನ್ಯ ಅನ್ಯಾದೃಶವಾದುದು. ಅವರ ಮನಸ್ಸು ಸರಳ. ಹೃದಯ ನಿಷ್ಕಪಟವಾದುದು. ಅವರ ಸ್ವಭಾವ ಪ್ರೀತಿಪ್ರಧಾನವಾದುದು. ಆದುದರಿಂದ ಅವರು ನನ್ನಲ್ಲಿಯೂ ಗೌರವಪ್ರೀತಿಗಳನ್ನು ಇಂದಿನವರೆಗೂ ತೋರಿಸುತ್ತಾ ಬಂದಿದ್ದಾರೆ. ಅದಕ್ಕೆ ನಾನು ಚಿರಕೃತಜ್ಞ.

ಡಾ|| ಶಿವರುದ್ರಪ್ಪನವರು ಆ ತರುಣದಲ್ಲಿಯೇ ಹೆಚ್ಚು ಬೌದ್ಧಿಕ ಪ್ರಜ್ಞೆ ಉಳ್ಳವರಾಗಿದ್ದರೆಂದು ಹೇಳಿದೆ, ಈಗ ಅದು ಲೋಕಕ್ಕೆ ವಿದಿತವಾಗಿದೆ. ಬಹುವಿಧದಲ್ಲಿ ಪ್ರಕಟವೂ ಆಗಿದೆ. ಆದರೂ ಅದಕ್ಕೆ ನಿದರ್ಶನವಾಗಿ ಅಂದಿನ ಒಂದು ಸಂಗತಿಯು ನನಗೆ ನೆನಪಿಗೆ ಬರುತ್ತದೆ. ಆದನ್ನು ತಿಳಿಸದಿರಲಾರೆ.

ನಾನು ೧೯೪೮ರಲ್ಲಿ ಕನ್ನಡ ಆನರ್ಸ್ ಪಾಸುಮಾಡಿಕೊಂಡು ಉಪನ್ಯಾಸಕ ಹುದ್ದೆಯನ್ನು ಪಡೆದು ಬೆಂಗಳೂರು ಇಂಟರ್‌ಮಿಡಿಯೇಟ್ ಕಾಲೇಜಿನಲ್ಲಿ (ಮುಂದೆ ಕಾಲೇಜ್ ಆಫ್ ಆರ್ಟ್ಸ್ ಅಂಡ್ ಸೈನ್ಸ್ ಆಗಿ, ಸರ್ಕಾರಿ ಕಾಲೇಜಾಗಿ ಈಗ ವಿಜ್ಞಾನ ಕಲಾ ವಿಭಾಗಗಳಿಗೆ ಪ್ರತ್ಯೇಕ ಎರಡು ಕಾಲೇಜ್‌ಗಳಾಗಿ ಒಡೆದಿದೆ.) ಎರಡು ವರ್ಷ ಸೇವೆ ಸಲ್ಲಿಸಿ ೧೯೫೦ರಲ್ಲಿ ಮೈಸೂರಿಗೆ ವರ್ಗವಾಗಿ ಬಂದಿದ್ದೆ. ಹಾಗೂ ಎಂ.ಎ. ತರಗತಿಯ ವಿದ್ಯಾರ್ಥಿಯೂ ಆಗಿ ಸೇರಿಕೊಂಡಿದ್ದೆ. ೧೯೫೧–೫೨ರಲ್ಲಿ ಎರಡನೆ ಎಂ.ಎ ತರಗತಿಯಲ್ಲಿ (ವೃತ್ತಿಯಲ್ಲಿದ್ದವರು ಎರಡು ವರ್ಷ ಎಂ.ಎ. ವ್ಯಾಸಂಗಮಾಡಬೇಕಾಗಿತ್ತು) ವ್ಯಾಸಂಗ ಮಾಡುತ್ತಿದ್ದೆ. ೧೯೪೯ರಲ್ಲಿ ಉಪನ್ಯಾಸಕ ವೃತ್ತಿಗೆ ಸೇರಿದ್ದ ಡಾ|| ಶಿವರುದ್ರಪ್ಪನವರು ಬಹುಶಃ ದಾವಣಗೆರೆಯಿಂದ ಮೈಸೂರಿಗೆ ವರ್ಗವಾಗಿ ಬಂದು ಒಂದನೆಯ ಎಂ.ಎ. ತರಗತಿಗೆ ಸೇರಿದ್ದರು. ನಮ್ಮ ಜೊತೆಗೆ ನೇರವಿದ್ಯಾರ್ಥಿಯಾಗಿದ್ದ ಡಾ|| ತಿಪ್ಪೇರುದ್ರಸ್ವಾಮಿಗಳೂ ಎರಡನೆ ಎಂ.ಎ. ತರಗತಿಯಲ್ಲಿ ನನ್ನ ಸಹಪಾಠಿಗಳಾಗಿದ್ದರು. ಅಲಂಕಾರಶಾಸ್ತ್ರ ಅಥವಾ ಕಾವ್ಯಮೀಮಾಂಸೆಯನ್ನು ನಮಗೆ ಕವಿವರ್ಯ ಶ್ರೀ ಕುವೆಂಪು ಅವರೇ ಪಾಠ ಹೇಳುತ್ತಿದ್ದರು. ಆ ತರಗತಿಗೆ ನಾವು ಮೂವರು ವಿದ್ಯಾರ್ಥಿಗಳೂ ಸೇರುತ್ತಿದ್ದೆವು. ಅದೊಂದು ಅಪೂರ್ವ ಸಂಗಮ ! ತ್ರಿವೇಣಿಸಂಗಮವೆಂದೇ ನನ್ನ ಭಾವನೆ. ಮಹಾರಾಜಾ ಕಾಲೇಜಿನ ನಾಲ್ಕನೆಯ ನಂಬರಿನ ಕೋಣೆ ಕನ್ನಡವನ್ನು ವಿಶೇಷವಾಗಿ ವ್ಯಾಸಂಗ ಮಾಡುತ್ತಿದ್ದವರಿಗೆ ಗುರುಕುಲಾಶ್ರಮಗಳ ಋಷಿಕುಟೀರದಂತೆ ಪೂಜ್ಯತಮ ವಾತಾವರಣದಿಂದ ತುಂಬಿತ್ತು.

ಹೀಗಿರುವಾಗ ಒಮ್ಮೆ ಪ್ರಾಧ್ಯಾಪಕ ಕವಿವರ್ಯ ಶ್ರೀ ಕುವೆಂಪು ಅವರು "ಪಕ್ಷಿ" ಎಂಬ ಅವರ ಆಗತಾನೆ ಪ್ರಕಟವಾಗಿದ್ದ ಕವನವನ್ನು ತರಗತಿಯಲ್ಲಿ ಓದಿ ಅದರ ಮೇಲೆ

ವಿಶ್ಲೇಷಣಾತ್ಮಕ ವಿಮರ್ಶೆಯನ್ನು ಬರೆದುಕೊಂಡು ಬರುವಂತೆ ನಮಗೆ ಮೂವರಿಗೂ ಆದೇಶವನ್ನಿತ್ತರು. ಮರುದಿನವೇ ಡಾ|| ಶಿವರುದ್ರಪ್ಪನವರೂ ಡಾ|| ತಿಪ್ಪೇರುದ್ರಸ್ವಾಮಿಗಳೂ ಆ ಕವನದ ಮೇಲೆ ಸಾಕಷ್ಟು ದೀರ್ಘವಾದ ವಿಮರ್ಶೆಗಳನ್ನು ಬರೆದುಕೊಂಡು ಬಂದರು. (ಸನ್ಮಾನ್ಯ ಶ್ರೀ ದೇ.ಜ.ಗೌ. ಅವರು ಸಂಪಾದಿಸಿದ 'ಕವಿದರ್ಶನ' ಎಂಬ ಸಂಕಲನ ಗ್ರಂಥದಲ್ಲಿ ಈ ಪ್ರಬಂಧಗಳು ಪ್ರಕಟವಾಗಿವೆ.) ನನಗೆ ಮಾತ್ರ ಆ ಕವನವು ಅರ್ಥವಾಗದೆ ಹೋದುದರಿಂದ ನಾನೇನನ್ನೂ ಬರೆದುಕೊಂಡು ಬಂದಿರಲಿಲ್ಲ. ಕುವೆಂಪು ಅವರು ಅವರಿಬ್ಬರ ವಿಮರ್ಶೆಗಳನ್ನು ತರಗತಿಯಲ್ಲಿ ಓದಿಸಿದರು. ನಾನೂ ಕಿವಿಗೊಟ್ಟು ಕೇಳಿದೆ. ಕವಿವರ್ಯರು ಮೆಚ್ಚಿಕೊಂಡರು. ಆಮೇಲೆ ನನ್ನದನ್ನೂ ಓದಲು ಕೇಳಿದಾಗ ನಾನು ಏನೂ ಬರೆದಿಲ್ಲವೆಂದು ಹೇಳಿದೆ. ಆದರೆ ಗುರುವರ್ಯರು "ನೀವೂ ಬರೆದುಕೊಂಡು ಬನ್ನಿ" ಎಂದು ಆದೇಶವಿತ್ತರು. ಮೊದಲಿಬ್ಬರ ವಿಮರ್ಶೆಗಳನ್ನು ಕೇಳಿದ್ದುದರಿಂದ ಕವನದ ಬಗ್ಗೆ ನನ್ನಲ್ಲಿ ಮೂಡಿದ್ದಿರಬಹುದಾದ ಸ್ಪಷ್ಟಭಾವಗಳು ಅಸ್ಪಷ್ಟಾಕೃತಿಯನ್ನು ತಾಳಲಾರಂಭಿಸಿದುವು. ಆಮೇಲೆ ನಾಲ್ಕಾರು ದಿನಗಳಲ್ಲಿ ನಾನೂ ಸುದೀರ್ಘ ವಿಮರ್ಶೆಯನ್ನು ಬರೆದು ಎಲ್ಲರ ಮೆಚ್ಚುಗೆಯನ್ನು ಪಡೆದೆ. ಆದರೆ ನಿಜವಾಗಿ ನನ್ನ ಇಬ್ಬರು ಪ್ರತಿಭಾವಂತ ಸಹಪಾಠಿಗಳ ವಿಮರ್ಶೆಗಳನ್ನು ಕೇಳಿ ವಿಷಯ ಪ್ರವೇಶವಾದುದರ ಪ್ರಭಾವದಿಂದ ನನ್ನ ವಿಶ್ಲೇಷಣಾತ್ಮಕ ಸುದೀರ್ಘವಿಮರ್ಶೆಯು ಸಾಧ್ಯವಾಯಿತೆಂದು ಹೇಳಬಯಸುತ್ತೇನೆ. ಇದು ಡಾ|| ಶಿವರುದ್ರಪ್ಪನವರ ಬೌದ್ಧಿಕ ಪ್ರಜ್ಞೆಯ ಹೆಚ್ಚುಳಕ್ಕೆ ನಾನು ಕಂಡರಿತ ನಿದರ್ಶನ.

ಇನ್ನೊಮ್ಮೆ ಡಾ|| ಶಿವರುದ್ರಪ್ಪನವರೂ ನಾನೂ ನಮ್ಮ ನಮ್ಮ ಒಂದೊಂದು ಕವನವನ್ನು ಶ್ರೀ ಕುವೆಂಪು ಅವರಿಗೆ ತೋರಿಸುವ ಧೈರ್ಯ ಮಾಡಿದೆವು. ಅಥವಾ ಅವರೇ ಕೇಳಿ ಈಸಿಕೊಂಡು ನೋಡಿದರು. ಎರಡನ್ನೂ ಪರಿಶೀಲಿಸಿದ ಕುವೆಂಪು ಅವರು ಕೊನೆಗೆ ನನ್ನ ದೀರ್ಘವಾದ ಕವನವನ್ನು ಅಷ್ಟಾಗಿ ಗಮನಕ್ಕೂ ತಂದುಕೊಳ್ಳದೆ ಡಾ|| ಶಿವರುದ್ರಪ್ಪನವರ ಚಿಕ್ಕ ಕವನದ ಲಾಲಿತ್ಯ, ಭಾಷಾಶುದ್ಧಿ, ಅರ್ಥಸಂಪತ್ತುಗಳನ್ನು ಮೆಚ್ಚಿಕೊಂಡರು. ಆಗ ಉಂಟಾದ ನನ್ನ ಸೋಲಿನಲ್ಲಿ ನೋವಿರಲಿಲ್ಲ. ಡಾ|| ಶಿವರುದ್ರಪ್ಪನವರ ಮೇಲಿನ ಪ್ರೀತಿವಿಶ್ವಾಸ ಅಧಿಕವಾಗಿ ಸಂತೋಷಗೊಂಡೆ.

ಮುಂದೆ ಡಾ|| ಶಿವರುದ್ರಪ್ಪನವರ ಪ್ರತಿಭೆ ಶುಕ್ಲಪಕ್ಷದ ಚಂದ್ರನಂತೆ ದಿನದಿನಕ್ಕೂ ವೃದ್ಧಿಯಾದ ಬಗೆಯನ್ನು ಕನ್ನಡ ಸಾರಸ್ವತಲೋಕವು ಪರಿಚಯಮಾಡಿಕೊಂಡಿದೆ. ಶ್ರೇಷ್ಠ ತರುಣ ಕವಿಗಳಿಗೆ ದೊರಕುತ್ತಿದ್ದ ಬಿ.ಎಂ.ಶ್ರೀಯವರ ಪುದುವಟ್ಟಿನ ಚಿನ್ನದ ಪದಕ ಅವರ ನೀಳ್ಗವಿತೆಗೆ ದೊರಕಿತು. ಕಾಲಕ್ರಮದಲ್ಲಿ ಅವರ ಸಾಮಗಾನ, ದೀಪದ ಹೆಜ್ಜೆ ಮುಂತಾದ ಕವನಕೃತಿಗಳು ಪ್ರಕಟವಾಗಿ ಕನ್ನಡಿಗರ ಹೃದಯದಲ್ಲಿ ಡಾ|| ಶಿವರುದ್ರಪ್ಪನವರ ಹೆಸರು ಸ್ಥಿರವಾಗಿ ನೆಲಸಿದೆ. ಅವರ ಕಾವ್ಯಪ್ರತಿಭೆ ಹೇಗೋ ಅವರ ವಿಮರ್ಶಾ ಪ್ರಜ್ಞೆಯೂ ಹಾಗೆಯೇ ಉನ್ನತವಾಗಿ ಬೆಳೆಯಿತು. ತತ್ಫಲವಾಗಿ ಅವರ ಪ್ರೌಢಪ್ರಬಂಧವಾದ "ಸೌಂದರ್ಯ ಸಮೀಕ್ಷೆ" "ವಿಮರ್ಶೆಯ ಪೂರ್ವಪಶ್ಚಿಮ" "ಪರಿಶೀಲನೆ" ಮುಂತಾದ

ಕೃತಿಗಳು ಕನ್ನಡಿಗರ ಮೆಚ್ಚಿನ ಆಸ್ತಿಗಳಾಗಿವೆ. ಇಂಥ ಇನ್ನೂ ಅನೇಕ ಕೃತಿಗಳನ್ನು ಅವರು ಕನ್ನಡ ಸಾಹಿತ್ಯಕ್ಕೆ ಕೊಡಲಿರುವರೆಂದು ನನ್ನ ದೃಢವಿಶ್ವಾಸ.

ಡಾ॥ ಶಿವರುದ್ರಪ್ಪನವರ ಕವನಗಳಲ್ಲಿ ನಾನು ಸಾತ್ವಿಕತೆ, ಇಂಪು, ಧ್ವನಿ, ಅರ್ಥ ಸಂಪತ್ತುಗಳನ್ನು ಅನುಭವಿಸಿದ್ದೇನೆ, ಆನಂದಿಸಿದ್ದೇನೆ. ಹಾಗೆಯೇ ಅವರ ವಿಮರ್ಶೆಯಲ್ಲಿ ಸೂಕ್ಷ್ಮ ಆಲೋಚನೆ ಸೌಂದರ್ಯಪ್ರಜ್ಞೆಗಳನ್ನು ಮನಗಂಡಿದ್ದೇನೆ. ಹಿರಿಯ ವಿದ್ವಾಂಸರ ಮತ್ತು ಕನ್ನಡ ಜನತೆಯ ಗೌರವಕ್ಕೆ ಭಾಜನರಾಗಿರುವ ಡಾ॥ ಶಿವರುದ್ರಪ್ಪನವರಿಗೆ ನನ್ನ ಹೊಗಳಿಕೆಯ ಅಗತ್ಯವಿಲ್ಲ.

ಎಂ.ಎ. ಪಾಸುಮಾಡಿದ ಮೇಲೆ ನಾನೂ ಡಾ॥ ಶಿವರುದ್ರಪ್ಪನವರೂ ಬೇರೆ ಬೇರೆ ಕಡೆ ಕೆಲಸ ಮಾಡುತ್ತಿದ್ದೇವೆ. ಒಂದೆಡೆ ಒಟ್ಟಾಗಿ ಕೆಲಸಮಾಡುವ ಯೋಗ ನಮ್ಮಿಬ್ಬರಿಗೆ ಎಂದೂ ಬರಲಿಲ್ಲ. ಅವರು ಗಳಿಸಿದ ಡಾಕ್ಟರೇಟ್ ಪದವಿಯಿಂದ ಅವರು ವಿಶ್ವವಿದ್ಯಾ ನಿಲಯಗಳ ವಲಯದಲ್ಲಿಯೇ ಆನರ್ಸ್ ಮತ್ತು ಸ್ನಾತಕೋತ್ತರ ತರಗತಿಗಳಿಗೆ ಪಾಠ ಹೇಳುವ ಹೆಚ್ಚಿನ ಕರ್ತವ್ಯವನ್ನು ಹೊತ್ತರು. ಮೈಸೂರು ವಿಶ್ವವಿದ್ಯಾನಿಲಯ ಮತ್ತು ಉಸ್ಮಾನಿಯಾ ವಿಶ್ವವಿದ್ಯಾನಿಲಯಗಳಲ್ಲಿ ತಮ್ಮ ಅಪೂರ್ವಸೇವೆಯನ್ನು ಸಲ್ಲಿಸಿ ಇಂದು ಕನ್ನಡನಾಡಿನ ಕೇಂದ್ರಸ್ಥಳವಾದ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರೂ ಪ್ರಾಧ್ಯಾಪಕರೂ ಆಗಿದ್ದಾರೆ.

ಸ್ಥಾನಮಾನಗಳೇನೇ ಇರಲಿ ನಾನು ಡಾ॥ ಶಿವರುದ್ರಪ್ಪನವರಲ್ಲಿ ಕಂಡದ್ದು, ಆನಂದಿಸಿದ್ದು, ಈಗಲೂ ಆನಂದಿಸುತ್ತಿರುವುದು ಅವರ ನಿಗರ್ವಿತನ, ಸಾತ್ವಿಕತೆ ಮತ್ತು ಪ್ರೀತಿ ಪ್ರಧಾನವಾದ ಸರಳ ಸ್ವಭಾವಗಳನ್ನು. ಇವು ಎಂದೂ ಅವರ ಪಾಲಿಗಿರಲಿ, ಅವರು ನಮ್ಮ ಹೃದಯಕ್ಕೆ ಅತ್ಯಂತ ಸಮೀಪ ವ್ಯಕ್ತಿಯಾಗಿರಲಿ, ಎಂಬುದೇ ನನ್ನ ನಿತ್ಯ ಹಾರೈಕೆ.

## ಜಿ. ಬ್ರಹ್ಮಪ್ಪ

# ಸಹೃದಯಾನ್ವೇಷಣೆ

೧೯೪೪೫ರಲ್ಲಿ ನಾನು ತುಮಕೂರಿನ ಇಂಟರ್‌ಮಿಡಿಯೆಟ್ ಕಾಲೇಜಿನಲ್ಲಿ ಓದುತ್ತಿದ್ದೆನು. ಆಗ ಶ್ರೀ ಜಿ. ಎಸ್. ಶಿವರುದ್ರಪ್ಪನವರೂ ನನ್ನ ಸಹಪಾಟಿಗಳಾಗಿದ್ದರು. ಅಂದಿಗೆ ಅವರು ಏನೇನೂ ಪ್ರಭಾವಶಾಲಿಗಳಾಗಿರಲಿಲ್ಲ. ಸಿದ್ಧಗಂಗೆಯ ಮಠದಲ್ಲಿ ಊಟ ವಸತಿ ಮಾಡಿಕೊಂಡು ನಿತ್ಯವೂ ಮೂರು ಮೈಲಿ ತುಮಕೂರಿಗೆ ಬರುವುದು, ಕಾಲೇಜು ತೀರಿಸಿಕೊಂಡು ಹಿಂದಿರುಗುವುದು. ಇದು ಅವರ ಪರಿಪಾಟಿಯಾಗಿದ್ದಿತು. ಕಾಲೇಜಿನ ಪಠ್ಯೇತರ ಚಟುವಟಿಕೆಯಲ್ಲೂ ಇವರು ಭಾಗವಹಿಸುತ್ತಿರಲಿಲ್ಲ. ಬಹುಮಟ್ಟಿಗೆ ಏಕಾಂತವಾಸಿಗಳಾಗಿದ್ದರು.

ನಾನು ತುಮಕೂರು ಕಾಲೇಜಿನಲ್ಲಿ ನಡೆಯುತ್ತಿದ್ದ ಪ್ರತಿಯೊಂದು ಚರ್ಚಾಕೂಟದಲ್ಲೂ ಭಾಗವಹಿಸಿ ಎಲ್ಲರ ಗಮನಕ್ಕೂ ಬಿದ್ದಿದ್ದೆನು. ಒಮ್ಮೆ ಸಿದ್ಧಗಂಗೆಯ ಮಠದಲ್ಲಿ ನಡೆದ ಚರ್ಚಾಕೂಟದಲ್ಲಿ ನನಗೂ ಬಹುಮಾನ ದೊರೆಯಿತು. ಆಗ ಶ್ರೀ ಜಿ. ಎಸ್. ಶಿವರುದ್ರಪ್ಪನವರು ನನ್ನನ್ನು ತಮ್ಮ ಕೋಣೆಗೆ ಕರೆದುಕೊಂಡು ಹೋಗಿ ತುಸು ಉಬ್ಬಿಸಿದರು. ಅಂದಿನಿಂದ ನನ್ನ ಅವರ ಸ್ನೇಹ ಪ್ರಾರಂಭವಾಯಿತು.

ನಮ್ಮ ಹಳ್ಳಿ ಕೊರಟಗೆರೆ ತಾಲ್ಲೂಕು ಅರಸಾಪುರ. ತುಮಕೂರಿಂದ ಹಳ್ಳಿಗೆ ನಾನು ಹೋಗಬೇಕಾದರೆ ನಡುವೆ ರಾಂಪುರ ಸಿಗುತ್ತಿತ್ತು. ಇಲ್ಲಿ ಶ್ರೀ ಜಿ. ಎಸ್. ಶಿವರುದ್ರಪ್ಪನವರ ತಂದೆಯವರು ಮಾಧ್ಯಮಿಕ ಶಾಲೆಯ ಮುಖ್ಯೋಪಾಧ್ಯಾಯರಾಗಿದ್ದರು. ನಾನು ತುಮಕೂರಿಂದ ಹಳ್ಳಿಯ ಕಡೆ ಹೊರಟಾಗಲೆಲ್ಲ ಒಂದು ಬಾಡಿಗೆ ಸೈಕಲ್ ತೆಗೆದುಕೊಂಡು ಪ್ರಯಾಣ ಮಾಡುತ್ತಿದ್ದೆ. ಆ ಸಂದರ್ಭದಲ್ಲಿ ಶ್ರೀ ಜಿ. ಎಸ್. ಶಿವರುದ್ರಪ್ಪನವರನ್ನೂ ರಾಂಪುರಕ್ಕೆ ಬರುವಂತೆ ಪುಸಲಾಯಿಸುತ್ತಿದ್ದೆ. ಸೈಕಲ್ ಬಾಡಿಗೆ ಹೊರೆ ಅರ್ಧ ತಗ್ಗುವುದೆಂದು ನನ್ನ ಎಣಿಕೆ. ಎಷ್ಟೋ ಬಾರಿ ನಾವಿಬ್ಬರೂ ಒಂದೇ ಸೈಕಲಲ್ಲಿ ೨೫ ಮೈಲಿ ಇಬ್ಬರೂ ತುಳಿದುಕೊಂಡು ನಮ್ಮ ನಮ್ಮ ಹಳ್ಳಿಗೆ ಸೇರಿ ಮತ್ತೆ ತುಮಕೂರಿಗೆ ಹಿಂದಿರುಗಿ ಬಂದಿದ್ದೇವೆ. ಈ ಸೈಕಲ್ ಪ್ರಯಾಣದ ಕಾಲ ನಮ್ಮಿಬ್ಬರ ಜೀವನದಲ್ಲೂ ಚಿರಸ್ಮರಣೀಯವಾದ ಕಾಲ. ಏಕೆಂದರೆ ನಾವಿಬ್ಬರೂ ಬರೆಯುವುದಕ್ಕಾಗೇ ಹುಟ್ಟಿದವರು. ಆಗಾಗಲೇ ಶ್ರೀ. ಜಿ.ಎಸ್. ಶಿವರುದ್ರಪ್ಪನವರು ಹಲವಾರು ಭಾವಗೀತೆಗಳನ್ನು ರಚಿಸಿದ್ದರು. ಛಂದೋಬದ್ಧವಾಗಿ ಅವರ ಕೈಯಲ್ಲಿ ಕಾವ್ಯಕನ್ನೆ ನರ್ತಿಸುತ್ತಿದ್ದಳು. ನಾನೋ ಅರೆಬರೆ ಛಂದಸ್ಸಿನಲ್ಲಿ ಭರತೇಶನ ಬಾಳ್ಗಬ್ಬಂ ಎಂಬ ನಾಟಕವನ್ನು ಹಳಗನ್ನಡದಲ್ಲಿ ಬರೆದಿದ್ದೆನು.

ನಮ್ಮಿಬ್ಬರ ಉತ್ಸಾಹದಲ್ಲಿ ಉಲ್ಲಾಸದ ರಂಗೇರಿಸಲು ಸಹೃದಯರು ಸಿಕ್ಕಿರಲಿಲ್ಲ. ಅವರಿಗೆ ನಾನು ಸಹೃದಯ, ನನಗೆ ಅವರು ಸಹೃದಯರು. ಇಬ್ಬರ ಪ್ರತಿಭೆ ಉದ್ದೀಪನ ವಾಗುತ್ತಿದ್ದುದು ನಮ್ಮ ಬಾಡಿಗೆ ಸೈಕಲ್ ಪ್ರಯಾಣದಲ್ಲೇ. ಯಾರ ಅಂಕೆಯೂ ಇಲ್ಲದೆ, ಲೀಲಾಜಾಲವಾಗಿ ನಾವಿಬ್ಬರೂ ನಮ್ಮ ನಮ್ಮ ಸಾರಸ್ವತ ಸರುಕನ್ನು ಪ್ರದರ್ಶಿ ಸುತ್ತಿದ್ದೆವು. ಆಗ ದಾರಿಯಲ್ಲಿ ವಾಹನಗಳ ಸಂಚಾರ ಈಗಿನಷ್ಟು ಇರಲಿಲ್ಲ. ಲಾರಿಗಳು ಕಡಿಮೆ. ಸ್ಕೂಟರ್‌ಗಳು ಇಲ್ಲವೇ ಇಲ್ಲ. ಆದರಿಂದ ಆಕಸ್ಮಿಕದ ಭಯವಿರಲಿಲ್ಲ. ನಾವು ಕಾವ್ಯವಾಚನಮಾಡಿಕೊಂಡು ೨೫ ಮೈಲಿ ರಸವಿಹಾರ ನಡೆಸುತ್ತಿದ್ದ ಕಾಲದಲ್ಲಿ ಸಾಲ್ ಮರಗಳೆಲ್ಲ ತಳಿರತೊಂಗಲನ್ನು ತೂಗಿ ತಾಳಹಾಕುತ್ತಿದ್ದವು. ಅಲ್ಲಲ್ಲೇ ಬತ್ತದ ಗದ್ದೆ ಹಸುರನಗೆಯನ್ನು ಸೂಸುತ್ತಿತ್ತು. ತರಟೆಯ ಬಳಿ ಬಜೆಯಗದ್ದೆ ನಿಜವನ್ನು ತಿಳಿಸುವಂತೆ ನಿಮಿರಿ ನಿಮಿರಿ ನರ್ತಿಸುತ್ತಿತ್ತು. ಈಗಲೂ ಆಗಾಗ ಆ ದಾರಿಯಲ್ಲಿ ನಾನು ಓಡಾಡುವೆನು. ಅಂದಿನ ರಸಪರಿಸರ ಇಂದು ಉಳಿದಿಲ್ಲ. ಎಲ್ಲಿ ನೋಡಿದರೂ ಬಿಕೋ ಎನಿಸುವುದು.

೧೯೪೬ರಿಂದ ೪೯ರ ತನಕ ನಾನು ಶ್ರೀ ಜಿ. ಎಸ್. ಶಿವರುದ್ರಪ್ಪನವರು ಮೈಸೂರು ಮಹಾರಾಜ ಕಾಲೇಜಿನಲ್ಲಿ ಕನ್ನಡ ಆನರ್ಸ್ ವಿದ್ಯಾರ್ಥಿಗಳಾಗಿದ್ದೆವು. ಮೈಸೂರಿಗೆ ಬರುತ್ತಿದ್ದಂತೆ ಶ್ರೀಯುತರ ಪ್ರತಿಭೆಯ ಪ್ರಕಾಶನಕ್ಕೆ ಅನುಕೂಲವಾದ ವಾತಾವರಣ ದೊರೆಯಿತು. ಪೂಜ್ಯ ತ. ಸು. ಶಾಮರಾಯರು ಇವರನ್ನು ಕಂಡು ಬೆನ್ನು ತಟ್ಟು ತ್ತಿದ್ದರು. ಆಗಾಗ ಮಹಾಕವಿ ಕುವೆಂಪುರವರ ಉದಯರವಿಗೂ ಇವರು ಹೋಗಿ ಬರು ತ್ತಿದ್ದರು. ಮಾರ್ಗದರ್ಶನ ಸಮೃದ್ಧವಾಗಿ ದೊರೆಯಿತು. ನನಗೆ ಯಾರೂ ಬೆನ್ನು ತಟ್ಟುವ ಆವಶ್ಯಕತೆಯಿರಲಿಲ್ಲ. ನನ್ನ ಬೆನ್ನನ್ನು ನಾನೇ ತಟ್ಟಿಕೊಂಡು ನನಗೆ ತಿಳಿದ ಹಾದಿಯಲ್ಲಿ ಸಾಗುವುದೇ ನನ್ನ ಸ್ವಭಾವ. ಶ್ರೀ ಜಿ. ಎಸ್. ಶಿವರುದ್ರಪ್ಪನವರು ಸಂಕೋಚಪ್ರವೃತ್ತಿಯವರು. ಜೊತೆಗೆ ಅಂತರ್ಮುಖಿಗಳು. ಆನರ್ಸ್ ತರಗತಿಯಲ್ಲಿ ಇವರು ಮಹಾರಾಜ ಕಾಲೇಜಿನ ಎಲ್ಲ ವಿದ್ಯಾರ್ಥಿಗಳನ್ನೂ ಮೀರಿಸಿ ೧೯೪೯ರಲ್ಲಿ ಪ್ರಪ್ರಥಮರಾಗಿ ಸುವರ್ಣ ಪದಕಗಳನ್ನು ಪಡೆದರು. ತುಮಕೂರಿನಲ್ಲಿ ಸರ್ವೇಸಾಧಾರಣ ವಿದ್ಯಾರ್ಥಿಯಾಗಿದ್ದ ಇವರು ಮೈಸೂರಿನಲ್ಲಿ ಅಸಾಧಾರಣ ವಿದ್ಯಾರ್ಥಿಯೆನಿಸಿದರು.

ನಾವಿಬ್ಬರೂ ಓದಿದ ಕಾಲ ಒಳ್ಳೆಯದು. ಮನೆಯ ಬಾಗಿಲಿಗೆ ಬಂದು ನಮ್ಮನ್ನು ಕೆಲಸಕ್ಕೆ ಕರೆಯುತ್ತಿದ್ದ ಕಾಲವದು. ಶ್ರೀ ಜಿ. ಎಸ್. ಶಿವರುದ್ರಪ್ಪನವರು ದಾವಣಗೆರೆ ಡಿ. ಆರ್. ಎಂ. ಕಾಲೇಜಿನಲ್ಲಿ ಅಧ್ಯಾಪಕರಾದರು. ಆಗಲೇ ಇವರಿಗೆ ಮದುವೆಯಾ ದುದು. ಶ್ರೀಯುತರಿಗೂ ತಾಯಿಯಿರಲಿಲ್ಲ. ಇವರ ಕೈಹಿಡಿದಾಕೆಗೂ ತಾಯಿ ಇರಲಿಲ್ಲ. ಶ್ರೀಯುತರಿಗೆ ಮಲತಾಯಿ ಇದ್ದರು. ೧೯೫೦ರಲ್ಲಿ ನಾನು ದಾವಣಗೆರೆಯ ಕಾಲೇಜಿನ ಅಧ್ಯಾಪಕನಾದೆನು. ಆಗ ಜಿ. ಎಸ್. ಶಿವರುದ್ರಪ್ಪನವರಿಗೆ ಬರುತ್ತಿದ್ದ ಸಂಬಳ ತಿಂಗಳಿಗೆ ೧೧೮/-ರೂ. ಆದರಲ್ಲಿ ೧೫ರೂ. ಇನ್‌ಷ್ಯೂರೆನ್ಸ್‌ಗೆ ಹೋಗಿ ೧೦೩ರೂ. ಕೈಗೆ ಬರುತ್ತಿತ್ತು. ಇವರ ತಾಯಿಯ ತಾಯಿ, ಹಾಗೂ ಇವರ ತಮ್ಮ (ಮಲತಾಯಿ ಮಗ) ಇಬ್ಬರೂ ಇವರೊಡನೆಯೇ ಇದ್ದರು. ಮನೆ ಬಾಡಿಗೆ ೪೦/-ರೂ ಕೊಡುತ್ತಿದ್ದರು.

ಉಳಿದ ೬೩/-ರೂ.ನಲ್ಲಿ ನಾಲ್ಕು ಜನ ಬದುಕಬೇಕಾಗಿತ್ತು. ಅಂದಿನ ಬವಣೆಯನ್ನು ಇವರು ಯಾರೊಡನೆಯೂ ಹೇಳಿಕೊಂಡವರಲ್ಲ. ಈ ಆರ್ಥಿಕ ಮುಗ್ಗಟ್ಟನ್ನು ಮರೆತು ಇವರು ಭಾವಗೀತೆಗಳನ್ನು ರಚಿಸಿದರು. ಇವರು ರಚಿಸಿದ ಸಾಹಿತ್ಯವನ್ನು ಕೇಳಲು ನಾನಿದ್ದೆ. ಜೊತೆಗೆ ಕಾಲೇಜಿನ ಮುಖ್ಯಾಧಿಕಾರಿಗಳಾಗಿದ್ದ ಪೂಜ್ಯ ಕಸ್ತೂರಿಗಳಿದ್ದರು. ಭಕ್ತಚೇತನವಾದ ಶ್ರೀಯುತರು ಬಡತನದಲ್ಲೂ ಭಾಗ್ಯವಂತರಂತೆ ಪ್ರಸನ್ನಚಿತ್ತರಾಗೇ ಇರುತ್ತಿದ್ದರು.

ಮರುವರ್ಷ ಶ್ರೀ ಜಿ. ಎಸ್. ಶಿವರುದ್ರಪ್ಪನವರು ಮೈಸೂರಿಗೆ ಎಂ.ಎ. ಓದಲು ತೆರಳಿದರು. ಈ ಸಂದರ್ಭದಲ್ಲಿ ಇವರ "ಸಾಮಗಾನ" ತ. ವೆಂ. ಗ್ರಂಥಮಾಲೆಯಲ್ಲಿ ಪ್ರಕಟವಾಯಿತು. ಆಗ ನಾನು ೧೦೦ ಪ್ರತಿಗಳನ್ನು ತರಿಸಿಕೊಂಡು ಸಹೃದಯರ ಮಡಿಲು ತುಂಬಿರುವೆನು (ಹಣ ತೆಗೆದುಕೊಂಡು). ಶ್ರೀ ಜಿ. ಎಸ್. ಶಿವರುದ್ರಪ್ಪನವರು ಶುದ್ಧ ಲೇಖಕರು. ತಾವು ಬರೆದುದನ್ನು ಕೊಂಡುಕೊಳ್ಳಿ ಎಂದು ಇನ್ನೊಬ್ಬರಿಗೆ ಹೇಳಲಾರರು. ಅತ್ತರೂ ಹಾಲುಕೊಡದ ಪರಿಸರದಲ್ಲಿ ಹುಟ್ಟಿದಾಗ ಮೌನವಾಗಿದ್ದರೆ ಬಾಳಬಹುದೆ? ನಾನು ಲೇಖಕ, ಅಂತೆ ಪ್ರಕಾಶಕ (ಮನೆಯ ಹಣ ಹಾಕದೆ); ಮೂರನೆಯದಾಗಿ ಮಾರಾಟಗಾರ. ಮನೆ ಮನೆಗೂ ಸರಸ್ವತಿಯನ್ನು ಪರಿಣಾಮಕಾರಿಯಾಗಿ ಹಂಚಿದವರಲ್ಲಿ (ಹಣ ತೆಗೆದುಕೊಂಡು) ನಾನು ಅಗ್ರಗಣ್ಯ. ಶ್ರೀ ಜಿ. ಎಸ್. ಶಿವರುದ್ರಪ್ಪನವರು ಅದೃಷ್ಟವಂತರು. ಅವರು ಬರೆದಾಗಲೆಲ್ಲ ಪ್ರಕಾಶಕರು ದೊರೆತರು. ಪ್ರಕಾಶನವಾದುದೆಲ್ಲ ಖರ್ಚೂ ಆಯಿತು. ಸೌಂದರ್ಯ ಸಮೀಕ್ಷೆಯಲ್ಲಿ ಇವರು ಸಿದ್ಧಹಸ್ತರೆನಿಸಿರುವರು. ಪೂರ್ವಪಶ್ಚಿಮವನ್ನು ಸರ್ವಾಂಗಸುಂದರವಾಗಿ ಅರಿತಿರುವರು. ಇವರ ಅಭಿರುಚಿ ಶುಚಿಯಾದುದು. ಇವರ ಬರವಣಿಗೆ ಭವ್ಯವಾದುದು. ಇಂದು ಇವರ ಬದುಕು ಬಂಗಾರವಾಗಿದೆ. ಇವರು ನೆನೆದುದೆಲ್ಲ ಸಿದ್ಧಿಸುತ್ತಿದೆ.

ಶಂಕರ ಮೊಕಾಶಿ ಪುಣೇಕರ

# ಜಿ. ಎಸ್. ಶಿವರುದ್ರಪ್ಪನವರು—ನಾನು ಕಂಡಂತೆ

ಜಿ. ಎಸ್. ಶಿವರುದ್ರಪ್ಪನವರ ಅರ್ಧ ಶತಮಾನೋತ್ಸವವನ್ನು ಆಚರಿಸುತ್ತಿರುವುದು ಸಂತೋಷಕರ. ಹೊಸ ಜನಾಂಗದ ಕಾರ್ಯಪ್ರವೃತ್ತ ವೃತ್ತಿ ಅವರಲ್ಲಿ ಓತಪ್ರೋತ ತುಂಬಿದೆ. 'ಕನ್ನಡಕ್ಕೆ ಒಳ್ಳೆಯದಾಗಲಿ', 'ಕನ್ನಡಿಗರಿಗೆ ಬೌದ್ಧಿಕ ಉಚ್ಚಸ್ತರಗಳ ಪರಿಚಯವಾಗಲಿ', 'ಜನಾಂಗ ನವೀಕರಿಸಲಿ' ಎಂದು ಕನವರಿಸುವವರಲ್ಲಿ ಅವರೊಬ್ಬರು. ಅಧಿಕಾರದಾಹ ಅವರಲ್ಲಿಲ್ಲ. ಅಧಿಕಾರವನ್ನು ತಮ್ಮ ಕಾರ್ಯದ ಒಂದು ಸಾಧನವೆಂದಾಗಿ, ಪರಿಣತಿಗೊಳಿಸಿದ ಯುವಕ ಶಿಕ್ಷಕರಲ್ಲಿ ಒಬ್ಬರಾದ್ದರಿಂದ ಅವರ ಬಗ್ಗೆ ನನಗೆ ಆದರವಿದೆ. ಬೆಂಗಳೂರು ವಿಶ್ವವಿದ್ಯಾಲಯ ಇನ್ನೂ ಮಗು. ಈ ಎಳೆಯ ವಯಸ್ಸಿನಲ್ಲಿ ಅನೇಕ ಮಹತ್ತರ ಕಾರ್ಯಗಳನ್ನು ಕನ್ನಡ ವಿಭಾಗದವರು ಸ್ವಯಂಸ್ಫೂರ್ತಿಯಿಂದ ಕೈಕೊಂಡದ್ದು ಶಿವರುದ್ರಪ್ಪನವರು ಅಧಿಕಾರ ವಹಿಸಿದ ಮೇಲೆಯೆ. ಇದರ ಮೇಲಿಂದ ಅವರ ಸಾಹಸ ಶಕ್ತಿಯ ಅರಿವಾಗುವದು. ನಮ್ಮಲ್ಲಿ ಇನ್ನೂ ವಿಭಾಗವನ್ನು ನಡೆಸಿಕೊಂಡು ಹೋಗುವುದೆಂದರೆ ಟೈಂಟೇಬಲನ್ನು ರಚಿಸುವುದು, ವಿದ್ಯಾರ್ಥಿಗಳ ಪ್ರವೇಶ, ರೋಲ್‌ಕಾಲ್ ತಯಾರಿಸುವದು, ಪರೀಕ್ಷೆ ನಡೆಸಿ ಮಾರ್ಕ್ಸ್ ಪ್ರದಾನ ಗೈಯ್ಯುವುದು, ಹೀಗೆಂದು ತಿಳಿದುಕೊಂಡವರು ಬಹಳ. ಕನ್ನಡದ ಸುದೈವವೆಂದರೆ ಕರ್ನಾಟಕದ ಮೂರೂ ವಿಶ್ವವಿದ್ಯಾಲಯಗಳ ಕನ್ನಡ ವಿಭಾಗಗಳು ತಮ್ಮ ಹೊಣೆಯನ್ನು ಅರಿತುಕೊಂಡಿವೆ; ಕನ್ನಡದ ಪುನರುಜ್ಜೀವನಕ್ಕಾಗಿ ತಮ್ಮ ತಮ್ಮ ರೀತಿಯಲ್ಲಿ ದುಡಿಯುತ್ತಿವೆ. ಸಮಷ್ಟಿ ಸಂಶೋಧನೆ (group research), ತೌಲನಿಕ ಅಭ್ಯಾಸ (inter-disciplinary study) ಮುಂತಾದ ಕೆಲಸಗಳನ್ನು ಸಂಘಟಿಸಿ ಇತರ ವಿಭಾಗಗಳಿಗೆ ಮೇಲ್ಪಂಕ್ತಿ ಹಾಕಿಕೊಟ್ಟಿವೆ. ಈ ಸೃಷ್ಟಿಶೀಲ ವಾತಾವರಣವನ್ನು ನಿರ್ಮಿಸುವಲ್ಲಿ ಶಿವರುದ್ರಪ್ಪನವರೂ ತಾಂಬೂಲ ಎತ್ತಿದ್ದಾರೆ. ನನಗೆ ಇವರ ಪ್ರತ್ಯಕ್ಷ ಪರಿಚಯವಾದದ್ದು ೧೯೬೮ರಲ್ಲಿ. ಡಾ. ಗೋಕಾಕರು ನಡೆಸಿದ 'ಸಮನ್ವಯ' ಪತ್ರಿಕೆಯ ಸಂಪಾದಕರಲ್ಲೊಬ್ಬರಾದ ಇವರು ಸಂಪಾದಕೀಯ ಸಭೆಯೊಂದರಲ್ಲಿ ಕಂಡರು. ಅಂದೇ ಅವರು ಮತ್ತು ಕಿ. ರಂ. ನಾಗರಾಜರು ನನ್ನ ಕೋಣೆಗೆ ಬಂದು ಹರಟೆಹೋದರು. ಇನ್ನೊಮ್ಮೆ ಬೆಂಗಳೂರಿಗೆ ಹೋದಾಗ ನನ್ನ ಹಾಟೆಲ್ಲಿಗೆ ಬಂದು ಊಟಕ್ಕೆ ಕರಕೊಂಡು ಹೋದರು. ಧಾರವಾಡಕ್ಕೆ ಬಂದಾಗೊಮ್ಮೆ ಭೆಟ್ಟಿಯಾಗುತ್ತದೆ. ತಮ್ಮ-ನಮ್ಮ ಸುಖ-ದುಃಖದ ವಿನಿಮಯವಾಗುತ್ತದೆ. ನಾನು

ಧಾರವಾಡಕ್ಕೆ ಬಂದಮೇಲೆ ಅನೇಕಬಾರಿ ಅವರ ಸೆಮಿನಾರುಗಳಲ್ಲಿ ಭಾಗವಹಿಸಿದ್ದೇನೆ. ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಸ್ಥಾನಿಕ ಕೀಟಕುಪದ್ರ ಬಹಳ. ಕೆಲಸವಿಲ್ಲದಾಗ ಶಿವರುದ್ರಪ್ಪನವರು ಅಸ್ವಸ್ಥರಾಗಿರುತ್ತಾರೆ. ಕೆಲಸ ನಡೆದಾಗ ಖುಶಿಯಲ್ಲಿರುತ್ತಾರೆ. ಅವರ 'ಸಾಹಿತ್ಯವಾರ್ಷಿಕ'ದ ಪ್ರಥಮ ಸಂಚಿಕೆಯನ್ನು ನೋಡಿ ಮೆಚ್ಚಿದೆ. ಅದರಲ್ಲಿ ಅವರು ಬರೆದ ಪ್ರಬಂಧ ಕಾದಂಬರಿಗಳ ಮೇಲೆ. ಕಾದಂಬರಿಗಳ ಮೊತ್ತ ಬಹಳ; ಓದಲಿಕ್ಕೆ ಸಾಕಷ್ಟು ತಾಳ್ಮೆ ಬೇಕು. 'ಇಂಥ ಕೆಲಸ ನೀವೇ ವಹಿಸಿಕೊಂಡರೆ ವಿಭಾಗ ನಡೆಸುವವರಾರು?' ಎಂದು ಪ್ರಶ್ನೆ ಕೇಳಿದೆ. ಸಮಷ್ಟಿ ಕಾರ್ಯದಲ್ಲಿ ಅವರು ಸ್ವತಃ ಮುಂಚೂಣಿಯಲ್ಲಿ ನಿಂತುಕೊಳ್ಳುವವರು. ಅನೇಕ ಬಾರಿ ಹಿಂದೆ ನಿಂತು ಯಜಮಾನಿಕೆ ವಹಿಸಿದರೆ ಸ್ವಂತದ ಮನಸ್ಸು ನಿಶ್ಚಿಂತವಾಗುವದು. ಆದರೆ ಇದು ಅವರಿಗೆ ಒಪ್ಪಿಗೆ ಯಿಲ್ಲ. ಕನ್ನಡ-ಇಂಗ್ಲೀಷ್ ಎರಡೂ ವಿಮರ್ಶೆಯ ಅಭ್ಯಾಸದಿಂದ ಅವರ ಮನಸ್ಸು ಸಂಸ್ಕಾರಗೊಂಡಿದೆ. ಅಂತೆಯೇ ವಿಮರ್ಶೆಯಲ್ಲಿ ಅವರು ಖಚಿತ ಅಭಿಪ್ರಾಯ ಹೇಳು ತ್ತಾರೆ. ಪ್ರಗತಿಪರರು, ಮೃದು ಸ್ವಭಾವದವರು, ಇಂಥ ಕನ್ನಡ ಭಕ್ತನಿಗೆ ಆಯುರಾ ರೋಗ್ಯಗಳು ಹೆಚ್ಚಲಿ, ಅವರ ಕಾರ್ಯ ಮುಂದುವರಿಯಲಿ, ಸಮಷ್ಟಿ ಕೆಲಸದಲ್ಲಿ ಅವರಿಂದ ಅನೇಕರು ಬೆಳಕು ಕಾಣಲಿ, ಎಂದು ಹಾರೈಸುತ್ತೇನೆ.

ಟಿ. ವಿ. ವೆಂಕಟಾಚಲಶಾಸ್ತ್ರಿ

# ಎರಡು ಸಂದರ್ಭಗಳು

ಡಾ|| ಜಿ. ಎಸ್. ಶಿವರುದ್ರಪ್ಪನವರು, ಈಗ್ಗೆ ಸು. ೧೦–೧೨ ವರ್ಷಗಳಿಗೆ ಹಿಂದೆ ಕೆಲ ಕಾಲ, ಹೈದರಾಬಾದಿನ ಉಸ್ಮಾನಿಯ ವಿಶ್ವವಿದ್ಯಾನಿಲಯದ ಸೇವೆಯಲ್ಲಿ ಕೂಡ ಇದ್ದರೆಂಬುದನ್ನು ಅವರ ಪರಿಚಯದವರೆಲ್ಲ ಬಲ್ಲರು. ಆ ವಿಶ್ವವಿದ್ಯಾನಿಲಯದ ಆಡಳಿತಾಧಿಕಾರಿಗಳ ಆಹ್ವಾನವನ್ನೊಪ್ಪಿ, ಕನ್ನಡ ವಿಭಾಗದ ಮುಖ್ಯಸ್ಥರಾಗಿ ಅವರು ಅಲ್ಲಿ ಕೆಲಸ ಮಾಡಿದರು. ಆ ಮೊದಲೇ ಅಲ್ಲಿ ಅಧ್ಯಾಪಕನಾಗಿದ್ದ ನನಗೆ, ಅವರ ಜೊತೆಯಲ್ಲಿ ಕೆಲಸ ಮಾಡುವ ಅವಕಾಶ ಸಿಕ್ಕಿದ್ದು ಒಂದು ಸುಸಂಘಟನೆಯೆಂದೇ ನಾನು ತಿಳಿಯುತ್ತೇನೆ. ಆ ಅವಧಿಯ ಎರಡು ಸಂದರ್ಭಗಳನ್ನು ಮಾತ್ರ, ಅವಕ್ಕಿರುವ ವೈಯಕ್ತಿಕ ಮಹತ್ವದ ದೃಷ್ಟಿಯಿಂದ, ಇಲ್ಲಿ ಉಲ್ಲೇಖಿಸಲು ಆಯ್ದುಕೊಂಡಿದ್ದೇನೆ.

ಮೊದಲನೆಯದು: ಶ್ರೀ. ಶಿವರುದ್ರಪ್ಪನವರು ಉಸ್ಮಾನಿಯದ ಕನ್ನಡ ವಿಭಾಗದ ಮುಖ್ಯರಾಗಿ ಅಧಿಕಾರ ವಹಿಸಿಕೊಂಡು ಬಹುಶಃ ನಾಲ್ಕಾರು ತಿಂಗಳಷ್ಟೇ ಆಗಿತ್ತು. ಅದೇ ತಾನೇ ನಾನು ವಾಸವಿದ್ದ ಮನೆ ಬದಲಾಯಿಸಿ, ನಲ್ಲಕುಂಟಾ ಬಡಾವಣೆಯಲ್ಲಿ ಮನೆಮಾಡಿದ್ದೆ. ಒಂದು ಸಂಜೆ ಅವರು ನನ್ನ ಜತೆಗೇ ನಮ್ಮ ಮನೆಗೆ ಹೊರಟುಬಂದರು. ದಾರಿಯಲ್ಲಿ ಹೀಗೆಯೇ ಮಾತಾಡುತ್ತ ಹೋಗುವಾಗ, ಅವರು ನನ್ನ ಕಡೆಗೆ ತಿರುಗಿ "ಶಾಸ್ತ್ರಿಗಳೇ, ನೀವು 'ನನ್ನನ್ನು ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ವಿಭಾಗಕ್ಕೆ ತೆಗೆದುಕೊಳ್ಳಬೇಕು' ಎಂದು ಒಂದು ಅರ್ಜಿಕೊಡಿ, ನಾನು ತಕ್ಕ ಶಿಫಾರಸು ಬರೆದು ನಿಮ್ಮನ್ನು ಅಲ್ಲಿಗೆ ತೆಗೆದುಕೊಳ್ಳುತ್ತೇನೆ"–ಎಂದರು. ಮಾತಿನ ನಡುವೆ ತೀರ ಇದು ಅನಿರೀಕ್ಷಿತವಾಗಿತ್ತು.

ಈ ಮೊದಲು ಯಾವಾಗಲೂ ಈ ವಿಚಾರ ನನ್ನ ತಲೆಗೆ ಹೊಕ್ಕಿರಲಿಲ್ಲ. ನಾನಿದ್ದ ಯೂನಿವರ್ಸಿಟಿ ವಿಮೆನ್ಸ್ ಕಾಲೇಜಿನಲ್ಲಿ ನನಗೆ ಅಂಥ ಅನನುಕೂಲಗಳೇನೂ ಇರಲಿಲ್ಲ; ಹಾಗೆ ನೋಡಿದರೆ ಅಲ್ಲಿಯೇ ಒಂದೆರಡು ಹೆಚ್ಚಿನ ಅನುಕೂಲಗಳಿದ್ದುವು. ಅಲ್ಲಿಯ ವಿಶಿಷ್ಟ ಸನ್ನಿವೇಶದಿಂದಾಗಿ, ಪಾಠದ ಕಾಲದಲ್ಲಿಯಷ್ಟೇ ಅಲ್ಲಿ ನಾನು ಹಾಜರಿದ್ದರೆ ಸಾಕಾಗಿತ್ತು; ಪ್ರಿನ್ಸಿಪಾಲರು ಸ್ವಯಂ ನನಗೆ ಆ ವಿನಾಯಿತಿಯನ್ನು ಕೊಟ್ಟಿದ್ದರು. ನನ್ನ ಓದುಬರೆಹಗಳು ಮನೆಯಲ್ಲಿಯೇ ಆತಂಕವಿಲ್ಲದೆ ಸಾಗಬಹುದಾಗಿತ್ತು. ಹೀಗಾಗಿ ಅವರ ಮಾತಿಗೆ ಏನು ಹೇಳಬೇಕೆಂದು ನನಗೆ ತೋರಲಿಲ್ಲ. ಆದರೂ "ಅದರ ಯೋಚನೆ

ಏಕೆ ಸಾರ್, ಅಲ್ಲದೆ ನೀವು ಈಗ ತಾನೇ ಮೈಸೂರಿನಿಂದ ಬಂದಿದ್ದೀರಿ, ನಾನೂ ಮೈಸೂರಿನವನು. ನೀವು ಬರುತ್ತಿದ್ದಂತೆಯೇ ನನ್ನನ್ನು ಸ್ನಾತಕೋತ್ತರ ವಿಭಾಗಕ್ಕೆ ತೆಗೆದುಕೊಂಡರೆ ನೋಡಿದವರು, ಮುಖ್ಯವಾಗಿ ವಿಶ್ವವಿದ್ಯಾನಿಲಯದವರು, ನಿಮ್ಮ ಬಗ್ಗೆ ತಪ್ಪು ತಿಳಿಯಲು ಅವಕಾಶವಾಗುತ್ತದೆ; ಇದೇನೂ ಬೇಡ" ಎಂದು ಹೇಳಿದೆ.

ಮಾತು ಹೀಗೇ ಇರದಿದ್ದರೂ, ಈ ಭಾವ ಸ್ಪಷ್ಟವಾಗುವಂತೆ ಅವರಿಗೆ ನನ್ನ ಮನಸ್ಸನ್ನು ತಿಳಿಸಿದೆ ಎಂಬುದು ನಿಶ್ಚಯ. "ಅವೆಲ್ಲಾ ನೀವು ಯೋಚಿಸಬೇಕಾದ್ದಿಲ್ಲ, ಅದರ ಎಚ್ಚರಿಕೆ ಜವಾಬ್ದಾರಿಗಳು ನನ್ನವು. ನಾನೇ ಸ್ವತಂತ್ರಿಸಿ ನಿಮ್ಮನ್ನು ತೆಗೆದುಕೊಂಡರೆ ಆಗ ಇಂಥ ಭಾವನೆಗೆ ಅವಕಾಶವಾಗಬಹುದು, ಅದು ಕೊಂಚ ಕಷ್ಟವೂ ಆಗಬಹುದು. ನಿಮ್ಮ ಅರ್ಜಿಯ ಮೇಲೆ ನಾನು ಶಿಫಾರಸು ಮಾಡುತ್ತೇನೆ, ಅಷ್ಟೆ. ನಾನು ಹೇಗೋ ಮಾಡುತ್ತೇನೆ, ನೀವು ಕೂಡಲೇ ಅರ್ಜಿಹಾಕಿ" ಎಂದರು ಅವರು.

ಈ ಘಟನೆ ನಡೆದ ಕೆಲವು ದಿವಸಗಳಲ್ಲಿಯೇ, ಐದು ವರ್ಷಗಳ ನನ್ನ ವಿಮೆನ್ಸ್ ಕಾಲೇಜ್ ಸೇವೆ ಕೊನೆಗೊಂಡು, ನಾನು ಸ್ನಾತಕೋತ್ತರ ವಿಭಾಗವಿದ್ದ ಆರ್ಟ್ಸ್ ಕಾಲೇಜ್ ಸೇರಿದೆ. ಮುಂದೆ ನನ್ನ ಅಧ್ಯಯನ ಅಧ್ಯಾಪನಗಳು ಹೊಸ ದಾರಿ ಹಿಡಿಯಲು ಆ ಸಂಜೆಯ ಘಟನೆ ಎಷ್ಟು ಮುಖ್ಯವಾಗಿತ್ತು ಎಂಬುದು ಈಗಲೂ ನನ್ನ ನೆನಪಿಗೆ ಬರುತ್ತಿರುತ್ತದೆ.

ಎರಡನೆಯದು: ಶ್ರೀ ಶಿವರುದ್ರಪ್ಪನವರು ಪಂಪಕವಿಯ ಭಕ್ತರಲ್ಲಿ ಒಬ್ಬರು. ಈಚೆಗೆ ಅವರು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಮುಖ್ಯರಾಗಿ ಅಧಿಕಾರ ವಹಿಸಿದ ಮೇಲೆ, ಪಂಪಕವಿಯನ್ನೂ ಆತನ ಕೃತಿಗಳನ್ನೂ ಕುರಿತ ಹಾಗೆ ದೊಡ್ಡ ವಿಚಾರ ಸಂಕಿರಣ ಒಂದನ್ನು ನಡೆಸಿದ್ದು ಅನೇಕರಿಗೆ ತಿಳಿದಿದೆ. ಅವರು ಹೈದರಾಬಾದಿಗೆ ಬಂದ ಹೊಸದರಲ್ಲಿ, ಅಲ್ಲಿಯ ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದ ಪಠ್ಯದಲ್ಲಿ ಪಂಪನ ಕೃತಿಗಳಲ್ಲಿ ಯಾವುದಾದರೊಂದು ಅಧ್ಯಯನ ವಿಷಯವಾಗಿತ್ತೇ ಎನ್ನುವುದು ನನ್ನ ನೆನಪಿನಲ್ಲಿಲ್ಲ. ಆದರೆ ವಿಭಾಗದ ಕನ್ನಡ ಅಧ್ಯಾಪಕರೆಲ್ಲ ಸೇರಿ ಪಂಪನನ್ನು ಅಭ್ಯಾಸ ಮಾಡಬೇಕು ಎಂದು ಒಮ್ಮೆ ತಮ್ಮ ಆಸೆಯನ್ನು ನಮ್ಮಲ್ಲಿ ತಿಳಿಸಿದರು. ನಾವು ಒಪ್ಪಿದ ಮೇಲೆ ಅದಕ್ಕಾಗಿ ಒಂದು ಕಾರ್ಯಕ್ರಮವನ್ನು ರೂಪಿಸಿದರು. ಅದು ಹೀಗೆ: ಪ್ರತಿ ಭಾನುವಾರವೂ ಸರದಿಯಂತೆ ಒಬ್ಬೊಬ್ಬ ಅಧ್ಯಾಪಕರ ಮನೆಯಲ್ಲಿ ಬೆಳಗ್ಗೆ ೮ ಗಂಟೆಗೆ ಸೇರುವುದು. ಸು. ೧೨ರ ವರೆಗೆ ಪಂಪಭಾರತದ ಅಭ್ಯಾಸ. ಆಮೇಲೆ ಉಪಾಹಾರ ಅಥವಾ ಭೋಜನ, ವಿರಾಮದ ಬಳಿಕ ನಿರ್ಗಮನ.

ಈ ಕಾರ್ಯಕ್ರಮದಲ್ಲಿ ನಾವು ಸುಮಾರು ೬ ಮಂದಿ ತಪ್ಪದೆ ಹಾಜರಿರುತ್ತಿದ್ದೆವು. ಸೆಂಟ್ರಲ್ ಇನ್ಸ್ಟಿಟ್ಯೂಟ್ ಆಫ್ ಇಂಗ್ಲಿಷ್ (ಈಗ ಫಾರಿನ್ ಲಾಂಗ್ವೆಜಸ್) ಅಧ್ಯಾಪಕರಾಗಿದ್ದ ಡಾ|| ನಾಡಕರ್ಣಿ ಎಂಬವರೂ ನಮ್ಮ ಜತೆಗೆ ಸೇರುತ್ತಿದ್ದರು. 'ಪಂಪಭಾರತ'ವನ್ನು ಓದುವುದು, ಅನ್ವಯಕ್ರಮದಲ್ಲಿ ಪ್ರತಿಪದಾರ್ಥವನ್ನು ಹೇಳುವುದು ನನ್ನ ಪಾಲಿನ ಕೆಲಸವಾಗಿತ್ತು. ಅಧ್ಯಾಪಕರೆದುರು ಮರ್ಯಾದೆ ಹೋಗಬಾರದು ಎಂದು ನಾನು ಚೆನ್ನಾಗಿ

ಪೂರ್ವಸಿದ್ಧತೆ ಮಾಡಿಕೊಂಡೇ ನನ್ನ ಕೆಲಸದಲ್ಲಿ ತೊಡಗುತ್ತಿದ್ದೆ. ಸು. ೨–೩ ಗಂಟೆಗಳಿಗೆ ಕಡಿಮೆಯಿಲ್ಲದೆ ನಡೆಯುತ್ತಿದ್ದ ಈ ಕಾರ್ಯಕ್ರಮದಲ್ಲಿ ನಮ್ಮ ಲಕ್ಷ್ಯ ಹೆಚ್ಚಾಗಿ ವಾಚ್ಯಾರ್ಥದ ಸ್ಪಷ್ಟತೆಯ ಕಡೆಗೇ ಇರುತ್ತಿತ್ತು. ಭಾಷೆಯ ವೈಲಕ್ಷಣ್ಯಗಳ ವಿಚಾರದಲ್ಲಿ ಶ್ರೀ. ಬಿ. ರಾಮಚಂದ್ರರಾಯರು (ಆಗ ಇವರು 'ಪಂಪಭಾರತದ ವರ್ಣಸಾತ್ಮಕ ವ್ಯಾಕರಣ'ವನ್ನು ಕುರಿತು ಕೆಲಸ ಮಾಡುತ್ತಿದ್ದರು; ಈಚೆಗೆ ಇದು ಗ್ರಂಥರೂಪವಾಗಿ ಪ್ರಕಟವಾಗಿದೆ.) ಪಾತ್ರ ಸನ್ನಿವೇಶ ಮೊದಲಾದವುಗಳಲ್ಲಿ ವಿರಳವಾಗಿ ಕಂಡುಬರುತ್ತಿದ್ದ ಅಸಾಮಂಜಸ್ಯಗಳ ವಿಚಾರದಲ್ಲಿ ಶ್ರೀ ಎಂ. ಎಸ್. ಮಹಾಂತಯ್ಯನವರು, ಪ್ರತಿಭೆ, ಕಲ್ಪನೆ, ರಸದೃಷ್ಟಿ, ಇವುಗಳ ವಿಚಾರದಲ್ಲಿ ಶ್ರೀ ಶಿವರುದ್ರಪ್ಪನವರು—ಆಗಾಗ ತಮ್ಮ ವಿಚಾರ ವಿಮರ್ಶೆಗಳನ್ನು ಸೇರಿಸುತ್ತಿದ್ದರು. ಹೀಗಾಗಿ ಅಧ್ಯಯನಕ್ಕೆ ಸಮಗ್ರತೆ, ಸಾಫಲ್ಯ ಸಿಕ್ಕುತ್ತಿದ್ದುವು.

ಉಪಯುಕ್ತವಾದ ಈ ವ್ಯಾಸಂಗಗೋಷ್ಠಿ ಸು. ಒಂದು–ಒಂದೂವರೆ ವರ್ಷಗಳ ಕಾಲ ನಿರಾತಂಕವಾಗಿ ಸಾಗಿತ್ತು. 'ಪಂಪಭಾರತ'ದ ೧೨ ಆಶ್ವಾಸಗಳಷ್ಟು ಭಾಗದ ಅಧ್ಯಯನ ಮುಗಿದಿತ್ತು. ಪ್ರಾಯಃ ಒಂದು ಬೇಸಗೆಯ ರಜ ಮುಗಿದು, ತಿರುಗಿ ಬಿಟ್ಟಲ್ಲಿಂದ ಅಧ್ಯಯನವನ್ನು ಮುಂದುವರಿಸಬೇಕು ಎಂದು ಶ್ರೀ ಶಿವರುದ್ರಪ್ಪನವರು ಚಡಪಡಿಸುತ್ತಿದ್ದಂತೆ, ಅವರು ಮೈಸೂರಿಗೆ ಮರಳಬೇಕಾಯಿತು. ಗೋಷ್ಠಿ ನಿಂತೇ ಹೋಯಿತು.

ಮೇಲೆ ಹೇಳಿದ ವಾಚನ ಕಾರ್ಯಕ್ರಮದಲ್ಲಿ ಶ್ರೀ ಶಿವರುದ್ರಪ್ಪನವರು ಹೆಚ್ಚಿನ ಉತ್ಸಾಹದಿಂದ ಪಾಲುಗೊಳ್ಳುತ್ತಿದ್ದರು. ಆ ಕಾರ್ಯಕ್ರಮದ ವ್ಯವಸ್ಥಾಪಕರೇ ಅವರು–ಎಂದ ಮೇಲೆ ಅದು ಸಹಜವೇ ಆಗಿತ್ತು. ನಾನು ರಾಗದ ಛಾಯೆ ತಂದು ಪದ್ಯಗಳನ್ನೂ ಗದ್ಯಭಾಗಗಳನ್ನೂ ಓದುತ್ತಿದ್ದುದು ಅವರಿಗೆ ಅಷ್ಟು ಹಿಡಿಸುತ್ತಿರಲಿಲ್ಲ. ಅರ್ಥ ಸ್ಫುಟವಾಗುವಂತೆ ಗದ್ಯದ ಧಾಟಿಯಲ್ಲಿ, ಅಲ್ಪಸ್ವಲ್ಪ ಧ್ವನಿಯ ಏರಿಳಿತ ಕೊಟ್ಟು, ಓದುವಂತೆ ನನಗೆ ಸಲಹೆ ಮಾಡುತ್ತಿದ್ದರು. ಆದರೆ ಅದರಲ್ಲಿ ಸ್ವಾರಸ್ಯವಿಲ್ಲ ಎಂದು, ಮೊದಲಿನ ಹಾಗೆಯೇ ನಾನು ಓದುತ್ತಿದ್ದೆ. ಒಂದೊಂದು ಸಲ, ಶಬ್ದ ಮತ್ತು ಅರ್ಥಕ್ಕೆ ಗಟ್ಟಿಯಾಗಿ ಅಂಟಿಕೊಂಡು ಪದ್ಯದ ಆಶಯವನ್ನು ವಿವರಿಸುವಲ್ಲಿ ಏಕೋ ಸುಗಮವಾಗಲಿಲ್ಲ, ಏನೋ ಕ್ಲೇಶವಿದೆ ಎಂದು ನಾನು ಸ್ವಲ್ಪ ಪೇಚಿಗೆ ಸಿಕ್ಕುತ್ತಿದ್ದೆ; ಆದರೆ ಇಂಥ ಸಂದರ್ಭಗಳು ಅಷ್ಟು ಹೆಚ್ಚಾಗಿ ಏನೂ ಇರುತ್ತಿರಲಿಲ್ಲ. ಅಂಥವು ಬಂದಾಗ್ಗೆ, ಶ್ರೀ ಶಿವರುದ್ರಪ್ಪನವರು ಶಬ್ದಾರ್ಥಗಳ ಗೊತ್ತಾದ ಗಡಿಗಳನ್ನು ಸ್ವಲ್ಪ ದಾಟಿ, ಕಲ್ಪನೆಯ ಬಣ್ಣವನ್ನಿಷ್ಟು ತುಂಬಿ, ಪದ್ಯದ ಆಶಯವನ್ನು ಸರಳವಾಗಿ ನಿರೂಪಿಸುತ್ತಿದ್ದುದುಂಟು. ಅದನ್ನು ಎಲ್ಲ ಸಂದರ್ಭಗಳಲ್ಲಿಯೂ ಒಪ್ಪಲು ನನಗೆ ಕಷ್ಟವಾಗುತ್ತಿತ್ತು; ಆದರೆ ಆ ನಿರೂಪಣೆಯ ಸ್ವಾರಸ್ಯಕ್ಕೆ, ಅದರಲ್ಲಿ ಕಳೆ ಮಿಂಚುವಂತೆ ಮಾಡಿದ ಸೂಕ್ಷ್ಮಸಂವೇದನೆಗೆ ಬೆಲೆ ಕೊಡದಿರುವುದೂ ಸಾಧ್ಯವಾಗುತ್ತಿರಲಿಲ್ಲ. ಪಂಪ ಕವಿಯ ಹೃದಯವನ್ನು ತಿಳಿಯಲು ಅವರು, ನಮ್ಮಲ್ಲಿ ಇತರ ಯಾರಿಗೂ ಸುಲಭವಲ್ಲದ ಕವಿಯ ದೃಷ್ಟಿ ವಿಶೇಷವನ್ನು ಬೀರುತ್ತಿದ್ದರು, ಪದ್ಯ

ಪಾದಗಳ ಹಿಂಬದಿಯ ಅಂತರ್ಯವನ್ನು ಭೇದಿಸುತ್ತಿದ್ದರು.

ಶ್ರೀ ಶಿವರುದ್ರಪ್ಪನವರು ಉಸ್ಮಾನಿಯ ವಿಶ್ವವಿದ್ಯಾನಿಲಯದಲ್ಲಿ, ಕನ್ನಡ ವಿಭಾಗ ಮುಖ್ಯರಾಗಿದ್ದಾಗ ಕೈಕೊಂಡ ಎಲ್ಲ ಕಾರ್ಯಕ್ರಮಗಳನ್ನೂ ಇಲ್ಲಿ ವಿವರಿಸುವುದು ನನ್ನ ಉದ್ದೇಶವಲ್ಲ. ನನ್ನ, ಅವರ ಸಹಯೋಗ ಸಂಬಂಧದಲ್ಲಿ–ಮುಖ್ಯವಾಗಿ ನನ್ನ ವೃತ್ತಿ ಮತ್ತು ಅಧ್ಯಯನ ಶೀಲ ಜೀವನದಲ್ಲಿ–ಗಣ್ಯವಾಗಿ ನನಗೆ ತೋರಿದ ಎರಡು ಸಂದರ್ಭಗಳನ್ನಷ್ಟೇ ಇಲ್ಲಿ ಹೇಳಿದ್ದೇನೆ. ಇದರಲ್ಲಿ ಯಾವ ಅಂಶವನ್ನೂ ನಾನು ಉತ್ಪ್ರೇಕ್ಷಿಸಿಲ್ಲ, ವೃಥಾ ಉತ್ಸಾಹದ ಸ್ಥಾಯಿಗೇರಿಸಿಲ್ಲ. ಆ ದಿನಗಳಲ್ಲಿ ಅವರೊಡನೆ ಕೆಲಸಮಾಡಿದ ಎಲ್ಲ ಸಹಾಧ್ಯಾಪಕರೂ, ಅವರು ಈ ಮಾತನ್ನು ಒಪ್ಪುತ್ತಾರೆ ಎಂಬ ಭರವಸೆ ನನಗಿದೆ.



ವರಕವಿ ಡಾ. ದ. ರಾ. ಬೇಂದ್ರೆಯವರೊಡನೆ



ಮಿತ್ರ ಶ್ರೀ ಚೆನ್ನವೀರಕಣವಿಯವರೊಡನೆ



ಮಿತ್ರವರ್ಗ : ಡಾ. ಸುಬ್ಬರಾವ್, ಜಿ. ಎಸ್. ಶಿವರುದ್ರಪ್ಪ, ವೆಂಕಟರಾಮ್, ಪ್ರಭುಶಂಕರ, ಪ್ರಭುಪ್ರಸಾದ್



ಗುರು ಹಿರಿಯರು ಮತ್ತು ಮಿತ್ರರೊಡನೆ

ತಂಗಿರಾಲ ವೆಂಕಟಸುಬ್ಬಾರಾವು

# ಸ್ನೇಹ-ಸಹೃದಯತೆ-ಸಂಸ್ಕೃತಿಗಳ ತ್ರಿವೇಣೀ ಸಂಗಮ

ಆಂಧ್ರರ ಆದಿಕವಿಯಾದ ನನ್ನಯಭಟ್ಟ ತನ್ನ ಭಾರತದ ಆದಿಪರ್ವದಲ್ಲಿ ಬ್ರಾಹ್ಮಣ ಮತ್ತು ಕ್ಷತ್ರಿಯರ ಸ್ವಭಾವವನ್ನು ಕುರಿತು ಒಂದು ಸೊಗಸಾದ ಪದ್ಯವನ್ನು ಬರೆದಿದ್ದಾನೆ:

ನಿಂಡುಮನಂಬು ನವ್ಯನವನೀತ ಸಮಾನಮು, ಪಲ್ಕುದಾರುಣಾ
ಖಂಡಲ ಶಸ್ತ್ರತುಲ್ಯಮು, ಜಗನ್ನುತ ! ವಿಪ್ರುಲಯಂದು ನಿಕ್ಕಮೀ
ರೆಂಡುನು ರಾಜುಲಂದು ವಿಪರೀತಮು, ಗಾವುನ ವಿಪ್ರುಡೋಪು, ನೋ
ಪಂ ಡತಿಶಾಂತು ಡಯ್ಯುನರಪಾಲುಡು ಶಾಪಮು ಗ್ರಮ್ಮರಿಂಪಗನ್

ಬ್ರಾಹ್ಮಣನ ತುಂಬು ಮನಸ್ಸು, ಆಗಲೇ ತೆಗೆದ ಬೆಣ್ಣೆಗೆ ಸಮಾನ; ಮಾತು, ಭಯಂಕರವಾದ ಇಂದ್ರನ ವಜ್ರಾಯುಧಕ್ಕೆ ಸಮಾನ. ಕ್ಷತ್ರಿಯನ ಸ್ವಭಾವ ಇದಕ್ಕೆ ವಿರುದ್ಧವಾಗಿರುತ್ತದೆ. (ಅಂದರೆ ಅವನ ಮಾತು ಹೊಸ ಬೆಣ್ಣೆ. ಮನಸ್ಸು ಕಠಿಣ ವಜ್ರಾಯುಧ). ಆದ್ದರಿಂದ ಬ್ರಾಹ್ಮಣನು ಒಂದು ವೇಳೆ ಕೋಪಗೊಂಡು ಶಾಪವನ್ನು ಕೊಟ್ಟರೂ ಕೂಡಲೇ ಮರುಕದಿಂದ ಅದನ್ನು ಹಿಂದಕ್ಕೆ ತೆಗೆದುಕೊಳ್ಳುತ್ತಾನೆ. ಕ್ಷತ್ರಿಯನು ಶಾಪಕೊಟ್ಟರೆ, ಅಷ್ಟೆ. ಅದಕ್ಕೆ ತಿರುಗಿಲ್ಲ. ಎಷ್ಟು ಬೇಡಿಕೊಂಡರೂ ಅವನ ಮನಸ್ಸು ಕರಗುವುದಿಲ್ಲ. ಅದು ವಜ್ರಾಯುಧವಲ್ಲವೆ ?

ಡಾ|| ಜಿ. ಎಸ್. ಶಿವರುದ್ರಪ್ಪನವರು ನನ್ನಯಭಟ್ಟ ಹೇಳಿದ ಬ್ರಾಹ್ಮಣನ ಸ್ವಭಾವವುಳ್ಳವರು. ಅವರ ಮಾತುಗಳು ಇಂದ್ರನ ವಜ್ರಾಯುಧದಂತೆ ಕಠಿನವಾಗಿರುತ್ತವೆ ; ಆದರೆ ಅವರ ಮನಸ್ಸು ಮಾತ್ರ ಆಗಲೇ ತೆಗೆದ ಬೆಣ್ಣೆಯಂತೆ ಅತಿಮೃದುವಾಗಿರುತ್ತದೆ. ನಾನು ಕಳೆದ ಆರು ವರ್ಷಗಳಿಂದ ಅವರನ್ನು ನೋಡುತ್ತಾ ಇದ್ದೇನೆ. ಐದು ವರ್ಷಗಳ ಕಾಲ ಅವರ ಕೈಕೆಳಗೆ ಕೆಲಸಮಾಡಿದ್ದೇನೆ. ಆ ಅನುಭವವನ್ನು ಪುರಸ್ಕರಿಸಿಕೊಂಡು ಅವರ ಸ್ವಭಾವವನ್ನು ಹೇಳುತ್ತಿದ್ದೇನೆ.

ನನಗೆ ಶ್ರೀಮಾನ್ ಜಿ.ಎಸ್.ಎಸ್.ರವರ ಪರಿಚಯವನ್ನು ಮೊಟ್ಟಮೊದಲನೆಯ ಸಲ ಮಾಡಿದ ಸಹೃದಯರು ಡಾ|| ಎಂ. ಚಿದಾನಂದಮೂರ್ತಿಯವರು. (ಇವರ ಸಹೃದ

ಯತೆ ಮತ್ತು ಸಂಸ್ಕೃತಿಗಳ ಬಗ್ಗೆ ಬರೆಯಬೇಕಾದರೆ ಅದೊಂದು ದೊಡ್ಡ ಪ್ರಬಂಧವಾಗುತ್ತದೆ) ಅದು ೧೯೬೯. ನಾನು ಆಗತಾನೇ ಬೆಂಗಳೂರಿಗೆ ಹೊಸದಾಗಿ ಬಂದಿದ್ದೆ. ನನಗೆ ಯಾರೂ ಗೊತ್ತಿರಲಿಲ್ಲ. ಕನ್ನಡ ಸ್ವಲ್ಪವಾದರೂ ಬರುತ್ತಿರಲಿಲ್ಲ (ಆನರ್ಸ್ ವಿದ್ಯಾರ್ಥಿಗಳಿಗೆ ಇಂಗ್ಲೀಷಿನಲ್ಲಿ ತೆಲುಗು ಹೇಳುತ್ತಿದ್ದೆ). ಮನಸ್ಸಿನಲ್ಲಿ ಏನೋ ಭಯ, ಸುತ್ತಮುತ್ತಲೂ ಹೊಸ ವಾತಾವರಣ. ಅಂತಹ ಸಮಯದಲ್ಲಿ ನನಗೆ ಅಭಯ ಹಸ್ತವನ್ನು ಕೊಟ್ಟ ಮಹನೀಯರು ಎಂ.ಸಿ.ಎಂ. ಅವರು. ಅವರೇ ನನ್ನನ್ನು ಡಾ|| ಜಿ.ಎಸ್.ಎಸ್‌ರವರಿಗೆ ಪರಿಚಯಮಾಡಿದವರು (ಆಗ ಅವರಿಬ್ಬರೂ ರೀಡರ್ಸ್ ಆಗಿದ್ದರು). ಆಗ ಜಿ.ಎಸ್.ಎಸ್ ಅವರು ಹೆಚ್ಚು ಮಾತನಾಡಲಿಲ್ಲ. ಅವರು ಹೈದರಾಬಾದ್‌ನಲ್ಲಿ ಎರಡು ವರ್ಷ ಕೆಲಸ ಮಾಡಿದರೆಂದು, ಇಲ್ಲಿ ಕನ್ನಡ ಎಂ.ಎ. ನಲ್ಲಿ ತೆಲುಗು ಒಂದು Elective ಆಗಿ ಇದೆಯೆಂದೂ, ಅದನ್ನು ನಾನು Teach ಮಾಡಬಹುದೆಂದು ಮಾತ್ರ ಹೇಳಿದರು. ಸಿಲ್ಕ್ ಜುಬ್ಬ ಧೋತಿ ಧರಿಸಿ ಗಂಭೀರವಾಗಿದ್ದು ಸ್ಟ್ಯಾಂಡರ್ಡ್ ಕಾರಿನಲ್ಲಿ ಬರುತ್ತಾ ಹೋಗುತ್ತಾ ಇರುವ ಜಿ. ಎಸ್. ಎಸ್. ಅವರಿಗೆ ಸ್ವಲ್ಪ ಅಹಂಭಾವ ಜಾಸ್ತಿ ಅಂಥ ನಾನು ಆಗ ತಿಳಿಕೊಂಡಿದ್ದೆ (ಅದು ತಪ್ಪು ತಿಳುವಳಿಕೆ ಎಂದು ಆಮೇಲೆ ಗೊತ್ತಾಯಿತು).

೧೯೭೦ರಲ್ಲಿ ಶಿವರುದ್ರಪ್ಪನವರು ಪ್ರೊಫೆಸರ್ ಆದರು. ಆಮೇಲೆ 'ಕನ್ನಡ ವಿಭಾಗ', 'ಕನ್ನಡ ಅಧ್ಯಯನ ಕೇಂದ್ರ'ವಾಯಿತು. ಶಿವರುದ್ರಪ್ಪನವರು ಡೈರೆಕ್ಟರ್ ಆದರು. ಅಂದಿನಿಂದ ಕನ್ನಡ ಅಧ್ಯಯನ ಕೇಂದ್ರದಲ್ಲಿ ತೆಲುಗಿಗೆ ಒಂದು ಪ್ರಮುಖ ಸ್ಥಾನ ಸಿಕ್ಕಿತು. ಅದಕ್ಕೆ ಮುಂಚೆ ಕನ್ನಡ ಎಂ.ಎ.ನಲ್ಲಿ ತೆಲುಗು Elective ಆಗಿತ್ತು. ಆದರೆ ಅದು ಇದೆ ಎಂದು ಯಾರಿಗೂ ಗೊತ್ತಿರಲಿಲ್ಲ. ಅದನ್ನು ಯಾರೂ ತೆಗೆದುಕೊಳ್ಳುತ್ತಿರಲಿಲ್ಲ. ಶಿವರುದ್ರಪ್ಪನವರಿಗೆ ಈ ವಿಷಯ ಹೇಳಿದ್ದೆ. ಅವರು "ನಿಮಗೆ ವಿದ್ಯಾರ್ಥಿಗಳನ್ನು ನಾನು ಕೊಡುತ್ತೇನೆ. ನೀವು ಏನೂ ಯೋಚನೆ ಮಾಡಬೇಡಿ" ಎಂದು ಭರವಸೆ ಕೊಟ್ಟಿದ್ದರು. ಅದೇ ದಿನ ಅವರು ತರಗತಿಗೆ ಹೋದಾಗ ವಿದ್ಯಾರ್ಥಿಗಳನ್ನು ಉದ್ದೇಶಿಸಿ, "ನಿಮ್ಮಲ್ಲಿ ಕೋಲಾರ ಜಿಲ್ಲೆಯವರು ಯಾರು ನಿಂತುಕೊಳ್ಳಿ" ಎಂದರು. ಐದು ಜನ ನಿಂತಿದ್ದರು. "ನೀವೆಲ್ಲರೂ ತೆಲುಗು ತಗೋ ಬೇಕು" ಎಂದು ಜಿ.ಎಸ್.ಎಸ್. ಆಜ್ಞಾಪಿಸಿದರು. ಅದು ಸುಗ್ರೀವಾಜ್ಞೆ, ಅಷ್ಟೆ. ಅವರೆಲ್ಲರೂ ಅಂಗೀಕರಿಸಿದರು. ಅಂದಿನಿಂದ ನನಗೆ ಕನ್ನಡಿಗರಿಗೆ ತೆಲುಗು ಪಾಠ ಹೇಳುವ ಅವಕಾಶ ಸಿಕ್ಕಿತು.

೧೯೭೧ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಆನರ್ಸ್ ಕೋರ್ಸ್‌ನ್ನು ತೆಗೆದುಬಿಟ್ಟರು. ನಾನು ಆನರ್ಸ್ ತರಗತಿಗಳಿಗೆ ೧೨ ಗಂಟೆ ಪಾಠ ಹೇಳುತ್ತಿದ್ದೆ. ಅದೆಲ್ಲಾ ಹೋಯಿತು. ಬರೀ ಕನ್ನಡ ಎಂ.ಎ.ಗೆ ೪ ಗಂಟೆಗಳ ಕೆಲಸ ಮಾತ್ರವಿದೆ. ಬೆಂಗಳೂರಿನಲ್ಲಿನ ಈರ್ಷ್ಯಾ ಪರಾಯಣರಾದ ಕೆಲವರು ತೆಲುಗು ಅಧ್ಯಾಪಕರು ನನ್ನನ್ನು ಭಯಗೊಳಿಸಿದ್ದರು. "೪ ಗಂಟೆಗಳ ಕೆಲಸಕ್ಕೋಸ್ಕರ ಒಬ್ಬ Full time lecturerರನ್ನು ಇಟ್ಟುಕೊಳ್ಳುವುದಿಲ್ಲ. ನಿನ್ನನ್ನು ತೆಗೆದುಬಿಡುತ್ತಾರೆ" ಎಂದು ಬಹಳ ಸಂತೋಷದಿಂದ ಹೇಳಿದ್ದರು. ನನಗೆ ತುಂಬಾ ಭಯವಾಯಿತು. ಕೂಡಲೆ ಜಿ. ಎಸ್. ಎಸ್. ಅವರನ್ನು ನೋಡಿ

ವಿಷಯ ಹೇಳಿದೆ. ಅವರು ನಗುತ್ತಾ "Don't bother about the Honours Course ! You are a permanent lecturer in the centre of Kannada Studies ! I will give you full work !" ಎಂದು ದೇವರಂತೆ ನನಗೆ ಅಭಯ ಹಸ್ತವನ್ನು ಕೊಟ್ಟರು. ಕನ್ನಡ ಎಂ.ಎ.ನಲ್ಲಿ Folklore Electiveನ್ನು ಪ್ರಾರಂಭಿಸಿ ನನಗೆ ಕೆಲಸ ಕೊಟ್ಟರು. ನನಗೋಸ್ಕರವಾಗಿ ತೆಲುಗು ಡಿಪ್ಲೊಮೊ ಕೋರ್ಸ್‌ನ್ನೂ ಆರಂಭಿಸಲು ಯತ್ನಿಸಿದರು. ನನ್ನ Bio-data ತೆಗೆದುಕೊಂಡು ವಿಶ್ವವಿದ್ಯಾಲಯದ ಅಧಿಕಾರಿಗಳಿಗೆ ತಿಳಿಸಿ ನನ್ನನ್ನು ತೆಲುಗು Board of Studiesನ ಸದಸ್ಯರನ್ನಾಗಿ ಮಾಡಿದರು. Examinershipಅನ್ನು ಕೊಡಿಸಿದರು. ಇದೆಲ್ಲಾ ನೆನೆಸಿಕೊಂಡರೆ ನನಗೆ ರೋಮಾಂಚನವಾಗುತ್ತದೆ. ಹೃದಯವೆಲ್ಲಾ ಕೃತಜ್ಞತೆಯಿಂದ ತುಂಬಿಹೋಗುತ್ತದೆ.

ಒಂದು ಸಲ ಜಿ.ಎಸ್.ಎಸ್. ಅವರು ನನಗೆ ಒಂದು Certificate ಕೊಡಬೇಕಾಯಿತು. ನಾನು ಐದು ವರ್ಷಗಳಿಂದ ಹೇಗೆ ಕೆಲಸ ಮಾಡುತ್ತೇನೆ, ನನ್ನ ಪ್ರವರ್ತನೆ ಹೇಗಿದೆ ಎಂಬುದನ್ನು ಅದರಲ್ಲಿ ಅವರು ಬರೆಯಬೇಕಿತ್ತು. ಆ Certificate ಮೇಲೆ ನನ್ನ ಭವಿಷ್ಯವೆಲ್ಲ ನಿರ್ಧರಿತವಾಗುವುದರಲ್ಲಿತ್ತು. ಸರ್ಟಿಫಿಕೇಟ್‌ನಲ್ಲಿ ಅವರು ನನ್ನ ಬಗೆಗೆ ಒಳ್ಳೆಯ ಮಾತುಗಳನ್ನು ಆಡಿ, ನನ್ನ ಸೇವೆ ವಿಶ್ವವಿದ್ಯಾಲಯಕ್ಕೆ ಅಗತ್ಯವಿದೆಯೆಂಬುದನ್ನು ಒತ್ತಿ ಹೇಳಿದ್ದರು. ನನ್ನ ಇಡೀ ನಲವತ್ತು ವರ್ಷಗಳ ಜೀವನದಲ್ಲಿ ಈ ರೀತಿ ಸಹಾಯ ಮಾಡಿದ ವ್ಯಕ್ತಿ ಮತ್ತೊಬ್ಬರಿಲ್ಲ. ಜಿ.ಎಸ್.ಎಸ್. ಅವರಿಗೆ ಜಿ.ಎಸ್.ಎಸ್. ಅವರೇ ಸಾಟಿ.

ಜಿ.ಎಸ್.ಎಸ್. ಅವರಿಗೆ ಜಾತಿ, ಮತ, ಕುಲಗಳ ಬಗ್ಗೆ ಯಾವುದೇ ರೀತಿಯ ಪರಿಗಣನೆಯಿಲ್ಲ. ಅವರ ದೃಷ್ಟಿಯಲ್ಲಿ ಎಲ್ಲರೂ ಸಮಾನ. ಅವರಿಗೆ ಮನುಷ್ಯ ಮತ್ತು ವಿಶ್ವಾಸ ಗುಣಮುಖ್ಯವೇ ಹೊರತೂ, ಜಾತಿಯಲ್ಲ. "Mr. Subba Rao, by chance we are born in a particular caste." ಎಂದು ಹಲವಾರುಬಾರಿ ನನಗೆ ಹೇಳಿದ್ದಾರೆ. ಈ ಕರ್ನಾಟಕದಲ್ಲಿ ನನಗೆ ಜಿ.ಎಸ್.ಎಸ್. ಅವರು ಕೊಟ್ಟ, ಕೊಡುತ್ತಿರುವ, ಕೊಡುವ ಪ್ರೋತ್ಸಾಹ, ಸಹಾಯ, ಬೆಂಬಲಗಳನ್ನು ಆಂಧ್ರದೇಶದಲ್ಲಿ ನನ್ನ ಪ್ರಿಯ ಗುರುಗಳು ಸಹ ನನಗೆ ಕೊಡಲಿಲ್ಲ. ನಿಜ ಹೇಳಬೇಕೆಂದರೆ ಇವರಿಗೂ ನನಗೂ ಯಾವ, ಏನು ಸಂಬಂಧ? ಅವರ ಹೃದಯ ವೈಶಾಲ್ಯವೇ ಇದಕ್ಕೆ ಸಮಾಧಾನ. ಆ ಅಮೃತ ಹೃದಯಕ್ಕೆ ನನ್ನ ನಮಸ್ಸುಮನಸ್ಸುಗಳು.

ಜಿ.ಎಸ್.ಎಸ್. ಅವರದು ಕರುಣಾಭರಿತವಾದ ಕವಿಹೃದಯ. "ನಿಮ್ಮನ್ನು ಕೊಲ್ಲುತ್ತೇವೆ" ಎಂದು ದುರ್ಭಾಷೆಗಳನ್ನಾಡಿದ ದುಷ್ಟರನ್ನು ಕ್ಷಮಿಸಿ, ಅವರ ಊರಿಗೆ, ಮನೆಗೆ ಹೋಗಿ ಅವರ ಕ್ಷೇಮಸಮಾಚಾರವನ್ನು ವಿಚಾರಿಸಿದ ಕ್ಷಮಾಮೂರ್ತಿ.

ಇವರ ಕವನಗಳನ್ನು ತೆಲುಗಿಗೆ ಭಾಷಾಂತರಿಸಿದ್ದೇನೆ. ಅವು ತೆಲುಗರ ಅಭಿಮಾನವನ್ನು ಪಡೆದಿವೆ. ನಮ್ಮಲ್ಲಿನ ವರವರರಾವ್ ಮುಂತಾದ ಕ್ರಾಂತಿ ಕವಿಗಳು ಗಾಂಧಿಯನ್ನು ದ್ವೇಷಿಸುವವರಾದರೂ, ಜಿ.ಎಸ್.ಎಸ್. ಅವರು ಬರೆದ 'ಗಾಂಧಿಶತ

ಮಾನೋತ್ಸವ'ವನ್ನು ಬಹಳವಾಗಿ ಪ್ರಶಂಸಿಸಿದರು.

ಜಿ.ಎಸ್.ಎಸ್. ಅವರಿಗೆ ತೆಲುಗರ ಬಗ್ಗೆ, ತೆಲುಗು ಭಾಷೆಯ ಬಗ್ಗೆ ಅವರ ಮನಸ್ಸಿನಲ್ಲಿ ಒಂದು Soft corner ಇದೆ. ಅವರ ಸುಸಂಸ್ಕೃತಿಯೇ ಇದಕ್ಕೆ ಕಾರಣ. ಇದಕ್ಕೆ ಪೋಷಕವಾಗಿ ಅವರು ಆಂಧ್ರದ ರಾಜಧಾನಿಯಲ್ಲಿ ಎರಡು ವರ್ಷಗಳ ಕಾಲ ಇದ್ದದ್ದು ಮತ್ತೊಂದು ಕಾರಣ. ಸುಸಂಸ್ಕೃತರಾದ ಜಿ.ಎಸ್.ಎಸ್. ಅವರನ್ನು ಆಕರ್ಷಿಸಿದ ಹಲವಾರು ತೆಲುಗಿನ ಸಾಂಸ್ಕೃತಿಕ ಅಂಶಗಳು ಇವು! ಇವರಿಗೆ ತೆಲುಗಿನ ಪೌರಾಣಿಕ ಚಿತ್ರಗಳೆಂದರೆ ಬಹಳ ಇಷ್ಟ. ಎನ್. ಟಿ. ರಾಮರಾವ್ ಅವರ ಶ್ರೀರಾಮ ಶ್ರೀಕೃಷ್ಣನ ಪಾತ್ರಗಳು, ದಿ|| ಎಸ್. ವಿ. ರಂಗಾರಾವ್ ಅವರ ಕೀಚಕನ ಪಾತ್ರ, ಸಾವಿತ್ರಿಯವರ ದ್ರೌಪದಿಯ ಪಾತ್ರ—ಇವುಗಳ ಬಗ್ಗೆ ಜಿ.ಎಸ್.ಎಸ್. ಅವರು ತನ್ಮಯತೆಯಿಂದ ಮಾಡುವ ವಿಶ್ಲೇಷಣೆ, ಅವರ ಸಾಹಿತ್ಯವಿಮರ್ಶೆಯಷ್ಟೆ ಗಂಭೀರವಾದದ್ದು. ತೆಲುಗರ ಸೀಸ ಪದ್ಯಗಳ ಗಾಯನ, ಅಷ್ಟಾವಧಾನಗಳ ಪ್ರೌಢಿಮೆ ಇವರನ್ನು ಆಕರ್ಷಿಸಿದೆ. "ನಿಮ್ಮ ತೆಲುಗು ಕವಿಗಳಿಗೆ ಕಂಠವೇ ಅರ್ಧ ಕೀರ್ತಿಯನ್ನು ತರುತ್ತದೆ" ಎಂದು ನಿರ್ಮತ್ಸರದಿಂದ ನುಡಿಯುತ್ತಾರೆ. ಇವರಷ್ಟೇ ಅಲ್ಲ, ಇವರ ಶ್ರೀಮತಿ ರುದ್ರಾಣಿಯಮ್ಮನವರೂ ಆಂಧ್ರರ ಸಿಹಿಯಾದ ಭಾಷೆಯನ್ನೇ ಅಲ್ಲದೆ ಅಲ್ಲಿನ ಖಾರವಾದ ಉಪ್ಪಿನಕಾಯಿಯನ್ನು ಹಾಕುವುದನ್ನೂ ಬಲ್ಲರು.

೧೯೭೧ರಲ್ಲಿ ನಾನು ಮತ್ತು ಕೆಲವರು ಮಿತ್ರರು ಆಂಧ್ರಪ್ರದೇಶ ಸರಕಾರಕ್ಕೆ ಒಂದು ಬಿನ್ನಹ ಪತ್ರವನ್ನು ಕಳುಹಿಸಿದೆವು. ಅದನ್ನು ನೋಡಿದ ಕೂಡಲೇ ಅಂದಿನ ಮುಖ್ಯಮಂತ್ರಿಯಾಗಿದ್ದ ಶ್ರೀಮಾನ್ ಪಿ. ವಿ. ನರಸಿಂಹರಾವ್ ಅವರು ನಮ್ಮ ವಿಶ್ವವಿದ್ಯಾಲಯಕ್ಕೆ ಮೂರು ಲಕ್ಷ ರೂಪಾಯಿಗಳನ್ನು ಕೊಟ್ಟರು. ಒಮ್ಮೆ ಕೂಟವೊಂದರಲ್ಲಿ ಜಿ.ಎಸ್.ಎಸ್. ಅವರು ನನ್ನನ್ನು ಉಪಕುಲಪತಿ ಶ್ರೀಮಾನ್ ತುಕೋಳ್ ಅವರಿಗೆ ಪರಿಚಯಿಸಿದರು. "ಆಂಧ್ರಪ್ರದೇಶ ಸರಕಾರ ಕೊಟ್ಟ ಹಣವನ್ನು ಏನು ಮಾಡಬೇಕು" ಎಂದು ಕೇಳಿದಾಗ ನಾನು "ತೆಲುಗು ಭಾಷೆಯಲ್ಲಿ ಸ್ನಾತಕೋತ್ತರ ತರಗತಿಗಳನ್ನು ಪ್ರಾರಂಭಿಸಿ" ಎಂದೆ. ಅದು ಕಾರ್ಯರೂಪವನ್ನು ಹೊಂದುವುದು ಮಾತ್ರ ಕಷ್ಟದ ಕೆಲಸವಾಯಿತು. ನಮ್ಮ ತೆಲುಗರೇ ಕೆಲವರು ಅದಕ್ಕೆ ಅಡ್ಡಬಂದರು. ಆಗ ಜಿ.ಎಸ್.ಎಸ್. ಅಕಡೆಮಿಕ್ ಕೌನ್ಸಿಲ್‌ನಲ್ಲಿ, ಸೆನೆಟ್‌ನಲ್ಲಿ ರೆಸೆಲ್ಯೂಷನ್ move ಮಾಡಿಸಿ, ಎಷ್ಟೋ ಸಲ ನನ್ನನ್ನು ಹೊಸ ಉಪಕುಲಪತಿ ಡಾ|| ಎಚ್. ನರಸಿಂಹಯ್ಯನವರ ಬಳಿ ಕರೆದುಕೊಂಡು ಹೋಗಿ, ಹೇಳಿ "ತೆಲುಗು ಎಂ. ಎ. ಕೂಡಲೇ ಪ್ರಾರಂಭಿಸಬೇಕು. ಆಂಧ್ರಸರಕಾರ ಅದಕ್ಕೆ ಹಣ ಕೊಟ್ಟಿದೆ" ಎಂದು ಒತ್ತಾಯಮಾಡಿದರು. ಇಷ್ಟು ಮಾಡಿದರೂ ಒಮ್ಮೆ ಸೆನೆಟ್‌ನಲ್ಲಿ ಪ್ರತಿಷ್ಟಂಭನೆ ಬಂತು. "ನಾವು ಬೆಂಗಳೂರಿನಲ್ಲಿ ತೆಲುಗು ಎಂ.ಎ. ಏಕೆ ಪ್ರಾರಂಭಿಸಬೇಕು? ಹೈದರಾಬಾದಿನಲ್ಲಿ ಕನ್ನಡ ಎಂ.ಎ. ಇದೆಯೋ?" ಎಂದು ಒಬ್ಬ ಸಭಿಕರು ಪ್ರಶ್ನಿಸಿದರಂತೆ. ಅವರಿಗೆ ಯಾರೂ ಉತ್ತರಿಸಲಿಲ್ಲ. ಆಗ ಪ್ರೊ. ಶಿವರುದ್ರಪ್ಪನವರು ಎದ್ದುನಿಂತು "ಹೈದರಾಬಾದಿನ ಉಸ್ಮಾನಿಯಾ ವಿಶ್ವವಿದ್ಯಾ

ಲಯದಲ್ಲಿ ಕನ್ನಡ ಎಂ.ಎ. ಎಷ್ಟೋ ವರ್ಷಗಳಿಂದಲೂ ಇದೆ. ನಾನೂ ಅಲ್ಲಿ ಮುಖ್ಯಸ್ಥನಾಗಿ ಎರಡು ವರ್ಷಗಳ ಕಾಲ ದುಡಿದಿದ್ದೇನೆ" ಎಂದು ಉತ್ತರಿಸಿ ಆ ಪ್ರತಿಷ್ಟಂಭನೆಯನ್ನು ಪಕ್ಕಕ್ಕೆ ತಳ್ಳಿ ದಾರಿಯನ್ನು ಸುಗಮ ಮಾಡಿದರು. ತೆಲುಗರೇ ತೆಲುಗು ಎಂ. ಎ. ತರಗತಿಗಳು ಆರಂಭವಾಗಲು ಅಡ್ಡ ಬಂದಾಗ, ತಮ್ಮ ವಿಭಾಗದ ಕೆಲಸಗಳೇ ನೂರಾರು ಇದ್ದಾಗ, ಎಲ್ಲರ ನಿಷ್ಠೂರವನ್ನು ಎದುರಿಸಿ, ತೆಲುಗು ವಿಭಾಗವನ್ನು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಪ್ರತಿಷ್ಠಾಪಿಸಿದ ಭಗೀರಥ ಪ್ರೊ. ಜಿ. ಎಸ್. ಶಿವರುದ್ರಪ್ಪನವರು.

ಇವರ ಈ ಪ್ರಯತ್ನಕ್ಕೆ ಐದು ಕೋಟಿ ಆಂಧ್ರರು ಕೃತಜ್ಞರಾಗಿದ್ದಾರೆ.

೧೯೭೩ ಮತ್ತು ೭೪. ಇದು ಜಿ.ಎಸ್.ಎಸ್. ಅವರಿಗೆ ಮನಃಕ್ಲೇಶವನ್ನು ತಂದ ವರ್ಷ. ಆಗ ಒಮ್ಮೆ ಕೆಲವರು (ಜಿ.ಎಸ್.ಎಸ್. ಅವರಿಂದಲೇ ಉಪಕೃತರಾದವರು) ನನ್ನ ಬಳಿ ಬಂದು, ನನ್ನ ಅವರ ಸಂಬಂಧವನ್ನು ವಿಶ್ಲೇಷಿಸತೊಡಗಿದರು ! ನಾನು ಅವರ ಮಾತುಗಳನ್ನು ಪ್ರತಿಭಟಿಸುತ್ತಾ "ನೀವು ಏನೇ ಹೇಳಿದರೂ ನನ್ನ ಮನಸ್ಸು ಜಿ.ಎಸ್.ಎಸ್. ಗೆ ವಿರುದ್ಧವಾಗಿ ಹೋಗುವುದಿಲ್ಲ" ಎಂದು ಹೇಳಿದೆ. ಆಗ ಆ ತಂತ್ರಜ್ಞರು ನನ್ನ ಈ ವಿಶ್ವಾಸಕ್ಕೆ ಮೆಚ್ಚಿ ಕೊಟ್ಟ ಪ್ರಶಸ್ತಿ ಇದು : "ದುರ್ಯೋಧನನನ್ನು ಕರ್ಣನು Support ಮಾಡಿದ ಹಾಗೆ, ಇಂದು ಜಿ.ಎಸ್.ಎಸ್. ಅನ್ನು ನೀನು Support ಮಾಡುತ್ತಿದ್ದೀಯೆ."

ಹೌದು ನಿಜ.

ಜಾತಿ, ಮತ, ಕುಲಗಳ ಸಂಕುಚಿತ ಯೋಚನೆಗಳಿಗೆ ವಿರುದ್ಧವಾಗಿ ಯುದ್ಧ ಮಾಡುವುದರಲ್ಲಿ ಜಿ.ಎಸ್.ಎಸ್. ಅವರು ಸುಯೋಧನರೇ !

ಇಂತಹ ಸುಯೋಧನನಿಗೆ 'ಕರ್ಣ'ನಾಗಿರುವುದು ನನಗೆ ಒಂದು ಹೆಮ್ಮೆಯ ವಿಷಯವಾಗಿದೆ.

ಎಸ್. ವಿ. ವಿಮಲ

# ನಾನು ಕಂಡ ಜಿ.ಎಸ್.ಎಸ್.

ನೋಡಿದರೆ, ನೋಡಿದಷ್ಟು ಇಷ್ಟ
ಮಾತೊ ಮಿತ, ಖಚಿತ, ನಿಷ್ಕೃಷ್ಟ
ಅಚ್ಚುಕಟ್ಟಿನ ಸ್ವಚ್ಛತೆಯ ಸಂಕೇತ
ಮೂಡಿದೊಂದೊಂದು ಕೃತಿಯೂ ಕೃತಾರ್ಥ
..............................
..............................

ತೀ.ನಂ.ಶ್ರೀ. ಅವರ ಬಗ್ಗೆ ಜಿ.ಎಸ್.ಎಸ್. ಅವರ ಈ ಹೇಳಿಕೆ ಜಿ.ಎಸ್.ಎಸ್. ಅವರಿಗೂ ಅನ್ವಯಿಸುತ್ತದೆ. ರೂಪ, ಆಕಾರ, ಉಡಿಗೆಗಳಲ್ಲಿ ಬಹುಪಟ್ಟಿಗೆ ಇವರಿಬ್ಬರಿಗೂ ಸಾದೃಶ್ಯ ಕಂಡುಬರುತ್ತದೆ. ಒಳ್ಳೆಯ ಕವಿಯಾಗಿ, ಶ್ರೇಷ್ಠ ವಿಮರ್ಶಕ ವಿದ್ವಾಂಸರಾಗಿ ಹಾಗೂ ಅಚ್ಚುಮೆಚ್ಚಿನ ಪ್ರಾಧ್ಯಾಪಕರಾಗಿ—ಇವರದು ಆಕರ್ಷಣೀಯ ಹಾಗೂ ಬಹುಮುಖ ವ್ಯಕ್ತಿತ್ವ.

ಜಿ.ಎಸ್.ಎಸ್. ಅವರನ್ನು ನಾನು ಮೊದಲು ಕಂಡದ್ದು ೧೯೬೬ರಲ್ಲಿ ನಾನು ಎಂ.ಎ. ತರಗತಿಗೆ ಸೇರಿದ ಮೇಲೆ. ರಗಳೆಯನ್ನು ಕುರಿತು ಅವರು ನಮಗೆ ಮಾಡಿದ ಮೊಟ್ಟ ಮೊದಲನೆಯ ಉಪನ್ಯಾಸ ನನ್ನ ಮೇಲೆ ವಿಶೇಷ ಪರಿಣಾಮ ಬೀರಿತು. ಅವರ ಬೋಧನಾ ವೈಖರಿ, ವಿಷಯ ವಿಶ್ಲೇಷಣೆ, ಸಂಶೋಧಕ–ವಿಮರ್ಶಕದೃಷ್ಟಿ—ಇವುಗಳಿಂದಾಗಿ ನಾನು ಯಾವುದಾದರೂ ವಿಷಯದ ಬಗ್ಗೆ ಆಳವಾದ ಅಧ್ಯಯನ ನಡೆಸಿದರೆ ಇವರ ಮಾರ್ಗದರ್ಶನದಲ್ಲಿಯೇ ಮಾಡಬೇಕು ಎಂಬ ಒಂದು ದೃಢನಿರ್ಧಾರ ಮೊದಲನೆಯ ದಿನದ ಒಂದು ಘಂಟೆಯ ಉಪನ್ಯಾಸ ಮುಗಿಯುವುದರೊಳಗಾಗಿ ನನ್ನಲ್ಲಿ ಮೂಡಿತು. ನಾನು ಆ ದಿನಗಳಲ್ಲಿ ಕಂಡ ಕನಸು ನನಸಾಗಿ, ಇಂದು ನನ್ನ ಮಹಾ ಪ್ರಬಂಧಕ್ಕೆ ಅವರೇ ಮಾರ್ಗದರ್ಶಕರಾದುದು ನನ್ನ ಸುದೈವ. ಕಾವ್ಯಮೀಮಾಂಸೆಯ ಅವರ ಒಂದೊಂದು ಉಪನ್ಯಾಸವೂ ನಮ್ಮ ಪಾಲಿಗೆ ರಸದೌತಣ. ಅನೇಕ ವಿದ್ಯಾರ್ಥಿಗಳ ಪಾಲಿಗೆ ಜಿ.ಎಸ್.ಎಸ್. ತರಗತಿ ಎಂದರೆ ಬಹು ಅಚ್ಚುಮೆಚ್ಚು.

ಈಗ ಆರು, ಏಳು ವರ್ಷಗಳಿಂದ ಜಿ.ಎಸ್.ಎಸ್. ಅವರ ನಿರ್ದೇಶನದಲ್ಲಿ ಕೆಲಸ ಮಾಡುವ ಸುಯೋಗ ನನ್ನ ಪಾಲಿಗೆ ಒದಗಿ ಬಂದಿದೆ. ನಾನು ಅವರಲ್ಲಿ ಕಂಡದ್ದು ಸರಳತೆ, ಸೌಹಾರ್ದತೆ, ಆತ್ಮೀಯತೆ, ಹಾಸ್ಯಪ್ರವೃತ್ತಿ ಹಾಗೂ ವಿಶ್ವಾಸ. ಇಷ್ಟು ವರ್ಷಗಳಲ್ಲಿ

ಅವರ ಶಿವ ಸ್ವರೂಪವೇ (ಸೌಮ್ಯ/ಶಾಂತ) ನನ್ನ ಅನುಭವಕ್ಕೆ ಹೆಚ್ಚಾಗಿ ಬಂದಿದೆ. ಆದರೆ ಎರಡೋ ಅಥವಾ ಮೂರು ಬಾರಿ ಇವರ 'ರುದ್ರ' ಸ್ವರೂಪವೂ ನನ್ನ ಅನುಭವಕ್ಕೆ ಬರದೆ ಇಲ್ಲ. ಅದೂ ಕೆಲಸದ ಒತ್ತಡದಿಂದಾಗಿ, ಮನಸ್ಸಿನ ಕಿರಿಕಿರಿಯಿಂದಾಗಿ ಬಹಳ ಅಲ್ಪ ಕಾರಣಕ್ಕೆ ರೇಗಿದ್ದೂ ಉಂಟು. ಈ ಮುಖದ ಹೆಚ್ಚಿನ ಅನುಭವವಿಲ್ಲದ ಅತಿ ಸೂಕ್ಷ್ಮ ಸ್ವಭಾವದ ನನಗೆ ಅವರು ರೇಗಿದ್ದ ಐದು/ಹತ್ತು ನಿಮಿಷಗಳಾದರೂ ನಾನು ಅದರಿಂದ ಚೇತರಿಸಿಕೊಳ್ಳಲು ಹದಿನೈದು/ಇಪ್ಪತ್ತು ದಿನಗಳಾದರೂ ಬೇಕಾಗುತ್ತಿತ್ತು. ಮನಸ್ಸಿಗೆ ಅತಿಯಾಗಿ ಬೇಸರವಾಗಿ ದುಃಖವಾಗುತ್ತಿತ್ತು. ಆದರೆ ಅವರು ಮಾತ್ರ ಮಾರನೆಯ ದಿನವೇ ಏನೂ ಆಗಿಲ್ಲವೆಂಬಂತೆ ಬಹಳ ಆತ್ಮೀಯತೆಯಿಂದ, ನಗುಮುಖದಿಂದ, ಸೌಜನ್ಯ ದಿಂದ ಮಾತನಾಡಿಸುತ್ತಿದ್ದರು. ಒಟ್ಟಿನಲ್ಲಿ ಇವರ ಸೌಮ್ಯಸ್ವಭಾವ, ಮೃದುತನ ಇವೇ ನನಗೆ ಹೆಚ್ಚು ಪರಿಚಯವಾಗಿದೆ.

ಒಂದು ಕೇಂದ್ರದ ನಿರ್ದೇಶಕರಾಗಿ, ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾಗಿ, ಅನೇಕ ಪುಸ್ತಕಗಳ ಸಂಪಾದಕರಾಗಿ ಇವರ ಜವಾಬ್ದಾರಿ ಬಹು ದೊಡ್ಡದು. ಕೆಲವು ಸಲ ಪುಸ್ತಕಗಳು ಪ್ರಕಟವಾಗಲು ವಿಳಂಬವಾದಾಗ, ಲೇಖನಗಳು ಸಕಾಲಕ್ಕೆ ತಲುಪದೇ ಹೋದಾಗ ಮತ್ತು ಇತರ ಕೆಲಸಗಳು ಬೇಗನೆ ನಡೆಯದಿದ್ದಾಗ—ಇವರು ಪಡುವ ಆತಂಕ, ಆತುರ, ಕಳವಳ, ಚಡಪಡಿಕೆ ನೋಡಿದರೆ ಇವರು ಏಳನೆಯ ತಿಂಗಳಿಗೆ ಹುಟ್ಟಿದ ವರೇನೋ ಎನ್ನಿಸುತ್ತದೆ. ಪ್ರತಿ ಕೆಲಸದಲ್ಲಿಯೂ ಕ್ಷಿಪ್ರತೆ, ಅಚ್ಚುಕಟ್ಟು, ಶಿಸ್ತು, ಕ್ರಮ ಬದ್ಧತೆ—ಇವನ್ನು ಮತ್ತೊಬ್ಬರಿಂದ ಇವರು ಬಯಸುತ್ತಾರೆ. ಇವರೂ ಇವನ್ನು ಪಾಲಿಸು ತ್ತಾರೆ. ಒಂದು ಕೆಲಸ ಆಗಬೇಕೆಂದು ಮನಸ್ಸಿಗೆ ಬಂದರೆ ಪಟ್ಟುಹಿಡಿದು ಸಾಧಿಸುವ ಛಲ ಇವರದು.

ನನ್ನ ಸಂಶೋಧನೆಯ ಮಾರ್ಗದರ್ಶಕರಾಗಿ ಇವರು ಮಾಡಿದ ಮಾರ್ಗದರ್ಶನ ಸಂಶೋಧನೆಯ ಉಗ್ರಾಣದ ಕೀಲಿಕೈಯಂತೆ ಇದ್ದಿತು. ಇವರಿಂದ ಈ ಸಮಯದಲ್ಲಿ ನಾನು ಪಡೆದ ಸಂಶೋಧನೆಯ—ವಿಮರ್ಶಕ ದೃಷ್ಟಿ ನನ್ನ ಮುಂದಿನ ಬಾಳಿಗೆ ಬುತ್ತಿ ಯಾಗುವುದರಲ್ಲಿ ಸಂಶಯವಿಲ್ಲ. ಅವರು ಸೂಚಿಸಿದ ಕೆಲವು ಅಂಶಗಳಿಗೆ ಸಂಬಂಧಿಸಿದಂತೆ ಹತ್ತಾರು ಪುಸ್ತಕಗಳನ್ನು ಓದಿ ವಿಷಯವನ್ನು ಸಂಗ್ರಹಿಸಿ ಇವರ ಬಳಿಗೆ ಚರ್ಚಿಸಲು ಬಂದರೆ ಇವರು ಬಹು ಉತ್ಸಾಹದಿಂದ ಮುಂದುವರೆಯುತ್ತಿದ್ದರು. ಸಲಹೆ, ಸೂಚನೆ ಗಳನ್ನು ಕೊಡುತ್ತಿದ್ದರು. ಇವರು ಇಷ್ಟು ಹೇಳಿದರೆ ನಾನು ಅಷ್ಟು ಗ್ರಹಿಸಿದರೆ ಇವರಿಗೆ ಬಹಳ ಪ್ರಿಯವಾಗುತ್ತಿತ್ತು. ನಾನು ಬರೆದುಕೊಟ್ಟಿದ್ದನ್ನೆಲ್ಲಾ ತಾಳ್ಮೆಯಿಂದ ನೋಡಿ, ತಿದ್ದಿ, ಸಮಸ್ಯೆಗಳನ್ನು ನನ್ನೊಡನೆ ಚರ್ಚಿಸಿ ಮುಂದಿನ ಬರವಣಿಗೆಗೆ ಪ್ರೋತ್ಸಾಹಿಸು ತ್ತಿದ್ದರು. ಪ್ರೇರೇಪಿಸುತ್ತಿದ್ದರು. ವಿಷಯದ ಆಳಕ್ಕಿಂತ ವಿಷಯದ ವಿಸ್ತಾರದೆಡೆಗೆ ಇವರ ಒಲವು ಹೆಚ್ಚು ಎಂದು ಎನ್ನಿಸುತ್ತದೆ.

ಜಿ.ಎಸ್.ಎಸ್. ಅವರ ಮಾರ್ಗದರ್ಶನದಲ್ಲಿ ನನ್ನದೇ ಮೊಟ್ಟಮೊದಲನೆಯ ಮಹಾ ಪ್ರಬಂಧ ಎಂಬುದು ಹೆಮ್ಮೆಯ ಸಂಗತಿ.

ಶುಭ್ರತೆಯ ಸಂಕೇತವಾದ ಗರಿಮುರಿಯಾದ ಅಚ್ಚ ಬಿಳಿಯ ಕಚ್ಚೆ ಪಂಚೆ, ಕೋಟು, ಎತ್ತರದ ನಿಲುವು, ವೈಕಟ್ಟು—ಇವು ಇವರ ವ್ಯಕ್ತಿತ್ವಕ್ಕೊಂದು ವಿಶೇಷ ಆಕರ್ಷಣೆ ನೀಡುತ್ತವೆ. ಇವರ ಬೆಳ್ಳಿ ಕೂದಲು ಇವರ ಪಾಂಡಿತ್ಯ-ಜ್ಞಾನದ ಸಂಕೇತವಾಗಿದೆ.

ಇವರ ಮನೆಯ ಶುಚಿ ರುಚಿಕಟ್ಟಾದ ತಿಂಡಿ, ತೀರ್ಥಗಳಂತೆ ಆದಕ್ಕೂ ಹೆಚ್ಚಿನ ಆದರ, ಸೌಹಾರ್ದತೆ, ಆತ್ಮೀಯತೆ, ಸ್ನೇಹಪ್ರಿಯತೆಯ ತುಂಬುಗುಣ ಇವರ ಮನೆಯವರದು. ಇದು ಚಿರಕಾಲ ನೆನಪಿನಲ್ಲುಳಿಯುವಂತಹುದು. ಸರಳತೆಯೇ ಮೂರ್ತಿವೆತ್ತ ಸಾತ್ವಿಕ ತೇಜಸ್ಸಿನ, ದೈವಿಕ ಕಳೆಯ ಶ್ರೀಮತಿ ರುದ್ರಾಣಿ ನಮ್ಮ ಅಚ್ಚುಮೆಚ್ಚಿನವರು.

ಜಿ.ಎಸ್.ಎಸ್. ಅವರಿಗೆ ಐವತ್ತು ವರ್ಷ ತುಂಬಿದ ಸುವರ್ಣ ಮಹೋತ್ಸವದ ಸಂದರ್ಭದ ಸವಿನೆನಪಿನ ಈ ಗ್ರಂಥದಲ್ಲಿ ಲೇಖನ ಬರೆಯಲು ಒದಗಿ ಬಂದಿರುವ ಈ ಸುವರ್ಣಾವಕಾಶ ಮತ್ತೊಮ್ಮೆ ಇವರಿಗೆ ನೀಡುವ ಶತಮಹೋತ್ಸವದ ಸವಿನೆನಪಿನ ಗ್ರಂಥದಲ್ಲಿಯೂ ಉಳಿದು ಬರಲಿ ಎಂದು ನನ್ನ ಶುಭ ಹಾರೈಕೆ.

ಸಿ. ಎಸ್. ವಿಜಯಲಕ್ಷ್ಮಿ

# ಜಿ.ಎಸ್.ಎಸ್.—ಒಂದು ಪ್ರತಿಕ್ರಿಯೆ

ಮಹಾರಾಣಿ ಕಾಲೇಜಿನ ವಿಜ್ಞಾನ ವಿದ್ಯಾರ್ಥಿನಿಯಾಗಿದ್ದೆ. ಅದೂ ೧೯೬೭ರಲ್ಲಿ ನಾಲ್ಕು ವರ್ಷಗಳ ನನ್ನ ವಿದ್ಯಾರ್ಥಿ ಜೀವನದಲ್ಲಿ ಜಿ.ಎಸ್.ಎಸ್—ಹೆಸರನ್ನು ಕೇಳುತ್ತಲೇ ಇದ್ದೆ. "ಪ್ರತಿಭಾವಂತ ಕವಿ"—ಎನ್ನುವುದು ನಮ್ಮ ಕನ್ನಡ ಉಪಾಧ್ಯಾಯರೆಲ್ಲರ—ಒಂದು ತೀರ್ಮಾನ. ಕಾಲೇಜು 'ಭಾವಗೀತ' ಸ್ಪರ್ಧೆಯಲ್ಲಿ ಸಹಪಾಠಿಯೊಬ್ಬಳಿಂದ ಜಿ.ಎಸ್.ಎಸ್.ರವರ,

ಉಡುಗಣವೇಷ್ಟಿತ ಚಂದ್ರಸುಶೋಭಿತ
ದಿವ್ಯಾಂಬರ ಸಂಚಾರಿ............

—ಎನ್ನುವ ಕವನ ಗಾಯನ. ಕೇಳುತ್ತಿದ್ದ ನನಗೆ ರೋಮಾಂಚನ. ಈ ಕವನದ ಕರ್ತೃವನ್ನು ಹೇಗಾದರೂ ನೋಡಲೇಬೇಕೆಂಬ ಛಲ ಹಂಬಲ. ಹಾಡನ್ನು ಕೇಳಿದ ಮಾತ್ರದಿಂದಲೇ,ಮನಸ್ಸಿನಲ್ಲಿ ರೂಪರೇಷೆಗಳ ಕಲ್ಪನೆಯ ಹುಚ್ಚು; ಕಾರಣ ಆಗಿನ Sentiments ಬೇರೆಯಾಗಿತ್ತು. ವಿಜ್ಞಾನ ಓದಿ ಜಡ್ಡುಹಿಡಿದ ಮನಸ್ಸಿಗೆ, ಸ್ವಯಂ ಸೃಷ್ಟಿಯಾದ ಭಾವಮಾಲೆ ಕವನವು ಉಪ್ಪು-ಹುಳಿಯ ಹಿತ. ಇಂಥ ಕವಿಯ ಕೈಕೆಳಗೆ ಶಿಷ್ಯವೃತ್ತಿಯನ್ನು ಪಡೆಯುವುದು 'ಮಹಾಭಾಗ್ಯ' ಎನ್ನುವಷ್ಟರ ಮಟ್ಟಿಗೆ ನನ್ನ Sentiment.

ಪತ್ತೆಹಚ್ಚಿದೆ. ಸೆಂಟ್ರಲ್ ಕಾಲೇಜ್ ಕನ್ನಡ ವಿಭಾಗದಲ್ಲಿ Reader—ಎಂದು ತಿಳಿದುಕೊಂಡೆ. ನಾನೂ ಅವರ ವಿದ್ಯಾರ್ಥಿನಿಯಾಗಬೇಕೆಂದೂ, ಅವರ ಸಾನ್ನಿಧ್ಯದಿಂದ ಸ್ಫೂರ್ತಿ ಪಡೆಯಬೇಕೆಂದೂ ಕಂಕಣ ತೊಟ್ಟೆ. ಆದರೆ ಒಂದು ಸಂಶಯ! ವಿಜ್ಞಾನ ವಿದ್ಯಾರ್ಥಿಗೆ ಕನ್ನಡ ಎಂ.ಎ.ಗೆ ಸೀಟು ಕೊಡುವ ಸೌಹಾರ್ದ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಇದೆಯೋ ಇಲ್ಲವೊ, ಎಂಬುದು. ಆದರೂ 'ಪ್ರಯತ್ನ ನಮ್ಮದು ಫಲ ಬಿಟ್ಟದ್ದು' ಎಂದುಕೊಂಡು ಪ್ರಯತ್ನಿಸಿದೆ. ನನ್ನ ಅದೃಷ್ಟವೋ ಎಂಬಂತೆ ಕನ್ನಡ ಎಂ.ಎ.ಗೆ ಸೀಟು ಗಿಟ್ಟಿತು, ಅನಿರೀಕ್ಷಿತವಾಗಿ.

ಪ್ರಾಮಾಣಿಕವಾಗಿ ಹೇಳುವುದಾದರೆ, ಜಿ.ಎಸ್.ಎಸ್ ಮೊಟ್ಟಮೊದಲಾಗಿ ನಮಗೆ ಪಾಠ ತೆಗೆದುಕೊಳ್ಳಲು ಬಂದಾಗ, ನಾನು ಅವರ ಪಾಠ ಕೇಳುವುದಕ್ಕಿಂತ ಹೆಚ್ಚಾಗಿ ಅವರ ಚರ್ಯೆಗಳನ್ನು, ಭಾವಾಭಿವ್ಯಕ್ತಿಯನ್ನು ಗಮನಿಸಿ, ವ್ಯಕ್ತಿತ್ವವನ್ನು ಅಳೆಯುತ್ತಿದ್ದೆ. ಅಳೆದಷ್ಟೂ ಅವರ ಬಗ್ಗೆ ಆದರ ಭಾವನೆ ಮೂಡುತ್ತಿತ್ತು. ವ್ಯಕ್ತಿಯೂ ನಯ;

ವ್ಯಕ್ತಿತ್ವವು ಮತ್ತೂ ನಯ; ಮಾತಂತೂ ಮೃದು ಬೆಣ್ಣೆ. ೬೭ರಿಂದ ೬೯ರ ವರೆಗೂ, ಎರಡು ವರ್ಷ ಕಾದು ಕುಳಿತಿದ್ದರೂ, ಒಂದು ದಿನವಾದರೂ 'ಸಿಟ್ಟಿನ ಸೊಟ್ಟಮುಖ' ನೋಡಲು ಸೊನ್ನೆ.

ಎಂ.ಎ. ಕೊನೆಯ ವರ್ಷ. ಕಾವ್ಯಮೀಮಾಂಸೆ—ಅವರು ನಮಗೆ ಹೇಳುತ್ತಿದ್ದ ಪಾಠ. ಮೇಜಿನ ಮೇಲೆ ಹತ್ತಾರು ಪುಸ್ತಕಗಳನ್ನು ಹರಡಿಕೊಂಡು ಗಂಭೀರ ವಿಷಯಗಳನ್ನು ಹಾಸ್ಯದ ರಸ ಸವರಿ ಆತ್ಮೀಯತೆಯೊಂದಿಗೆ ಹೇಳುತ್ತಿದ್ದ ಕ್ಷಣಗಳು ಅವಿಸ್ಮರಣೀಯ. 'ಹಳತು ಹೊಸತು' ವಿಚಾರಗಳ ಸಾಮರಸ್ಯಕ್ಕೆ ಜಿ.ಎಸ್.ಎಸ್. ಒಂದು ಉದಾಹರಣೆ. ಹಿರಿಯ ಕವಿಗಳ ಸಾಂಪ್ರದಾಯಿಕತೆ, ಕಿರಿಯ ಕವಿಗಳ ಕ್ರಾಂತಿ ಮನೋಧರ್ಮಗಳನ್ನು ಮೇಳವಿಸಿಕೊಂಡ ಅವರ ನಿಲವು, ಅವರನ್ನು ಅರಿತವರಿಗೇ ಅರ್ಥ.

ವ್ಯಕ್ತಿತ್ವದಲ್ಲಿನ ಕೋಮಲತೆಯೇ, ಅವರ ಕವನಗಳಲ್ಲಿಯೂ. ನುಣುಪಾದ ಮಾತುಗಳು; ಬೇಕಾದರೆ 'ಕೋಮಲ ಕಾಂತ ಪದಾವಳಿ' ಎಂದೇ ಕರೆಯಬಹುದು. ಬಳಸುವ ಪ್ರತೀಕಗಳು ಅವರ ಸೌಂದರ್ಯದೃಷ್ಟಿಗೆ ಉದಾಹರಣೆ. ಮನಸ್ಸು ಬಂದರೆ, ವಿದ್ಯಾರ್ಥಿಗಳೊಂದಿಗೆ ಗಂಟೆಗಟ್ಟಲೆ ಚರ್ಚೆ; ಹರಟೆ. ಆದರೆ ಕೆಲವು ಸಲ ಅವರ ಮಾತಿನ ಧೋರಣೆ, ಮಾತಾಡಬೇಕೆನ್ನುವವರಿಗೆ ಮಾತೇ ಮುಂದುವರಿಸಲಾಗದಂತೆ ! ಮಾತಿನ ಸರಣಿಯೇ ಮುರಿದಂತೆ ! ಆವಶ್ಯಕತೆಗಿಂತ ಹೆಚ್ಚು ಅಕ್ಷರವೂ ಅವರ ಬಾಯಿಂದ ಬರದು.

ಇನ್ನೊಂದು ವಿಷಯ ಹೇಳಬೇಕೆಂದರೆ, ವಿದ್ಯಾರ್ಥಿಗಳಿಗೆ ಅವರು ಕೊಡುವ ಪ್ರೋತ್ಸಾಹ. ಅವರಿಂದ ಮನಸ್ಸು ಮುರಿಸಿಕೊಂಡು ಬಂದ ವಿದ್ಯಾರ್ಥಿ ಇವತ್ತಿಗೂ ಕಾಣೆ. ಎಲ್ಲ ವಿದ್ಯಾರ್ಥಿಗಳೊಂದಿಗೂ ಪಕ್ಷಪಾತವಿಲ್ಲದೆ ಬೆರೆಯುವುದು ನೋಡಿದರೆ, ನೋಡಿದವರಿಗೇ ಆಶ್ಚರ್ಯ. ವಿದ್ಯಾರ್ಥಿ, ಉಪಾಧ್ಯಾಯ ಎನ್ನುವ ಅಂತರವಿಡದೆ, ಬಿಚ್ಚುಮನಸ್ಸಿನಿಂದ, ತಾವು ಬರೆಯುತ್ತಿರುವ ಪುಸ್ತಕಗಳ ವಿಚಾರ, ಮುಂದೆ ಕೈಗೊಳ್ಳಬೇಕೆಂದಿರುವ ಯೋಜನೆಗಳನ್ನು ಕುರಿತು ಹೇಳುತ್ತಿದ್ದರು. ಮತ್ತೆ ಕೆಲವರು, ನನ್ನ ಸಹಪಾಠಿಗಳೊಂದಿಗೆ ಅವರು ವ್ಯವಹರಿಸುತ್ತಿದ್ದರೆ ನಿಜವಾಗಿಯೂ ಕೆಲವು ಸಲ ನನಗೆ ಅಸೂಯೆಯಾಗುತ್ತಿತ್ತು.

ಇಷ್ಟೆಲ್ಲಾ ಸಲುಗೆಗೆ ಅವಕಾಶವಿದ್ದರೂ, ನನಗಂತೂ ಸ್ವಲ್ಪ ಗೌರವಮಿಶ್ರಿತ ಭಯ; (ಭಯಮಿಶ್ರಿತ ಗೌರವವಲ್ಲ). ಅವರೊಂದಿಗೆ ಗಂಟೆಗಟ್ಟಲೆ ಮಾತಾಡಬೇಕೆನಿಸಿದರೂ, ಮಾತಾಡುವ ಧೈರ್ಯ ಮಾತ್ರ ಇರುತ್ತಿರಲಿಲ್ಲ. ಒಂದೊಂದು ಸಲ ಅವರು ವಿದ್ಯಾರ್ಥಿಗಳೊಂದಿಗೆ ತಮಾಷೆಯಾಗಿ ಕಾವ್ಯಭಾಷೆಯಲ್ಲಿ ಮಾತನಾಡುತ್ತಿದ್ದರು; ಆಡಿಸುತ್ತಿದ್ದರು. ಅಂತೆಯೇ ಒಂದು ಸಲ ನಾನು ಬೇಸರವಾಗಿದ್ದಾಗ ಜಿ.ಎಸ್.ಎಸ್‌ರವರು, ನನ್ನನ್ನು ಸಂಬೋಧಿಸಿ,

"ಏನು ಮೋಡ ಕರಗಲಿಲ್ಲವೇ" ಎಂದರು.

ತಕ್ಷಣ ಉತ್ತರಕ್ಕೆ ತತ್ತರಿಸಿದರೂ, ಕೆಲವು ಕ್ಷಣಗಳ ನಂತರ, "ಮೋಡ ಕರಗಲಿಲ್ಲ, ಮಳೆ ಬರಲಿಲ್ಲ" ಎಂದು ನಾನೂ ಕಾವ್ಯಭಾಷೆಯಲ್ಲಿಯೇ ಉತ್ತರಿಸಬೇಕು—ಎಂದು

ಕೊಂಡೆ. ಕಾವ್ಯಮೀಮಾಂಸೆ ಪಾಠ ಮಾಡುವಲ್ಲಿ ಅವರು ಕೊಡುತ್ತಿದ್ದ ಉದಾಹರಣೆಗಳು—ಜಾನಪದ ಕವನಗಳು. ಅವುಗಳಲ್ಲಿನ ಸುತ್ತ ಸೌಂದರ್ಯವನ್ನು ಹುಡುಕಿ ತೆಗೆದು ತೋರಿಸುತ್ತಿದ್ದರು. ಸಾಮಾನ್ಯವಾಗಿ ಅವರು ಕೊಡುತ್ತಿದ್ದ ಉದಾಹರಣೆಗಳೆಂದರೆ "ತೊಟ್ಟಿಲ ಹೊತ್ಕೊಂಡು" ಮತ್ತು "ಪಿಲ್ಲಿ ಕಾಲಿನೋಳೆ"—ಎಂಬ ಜಾನಪದಗಳು.

ಇನ್ನಷ್ಟು ಹೇಳಬಯಸಿದರೆ, ದೊಡ್ಡ ಕತೆಯಾಗಿಸಿದರೂ ಸಾಕೆನಿಸುವುದಿಲ್ಲ. ಆದ್ದರಿಂದ, ಅವರ ಬಗ್ಗೆ ಒಂದೆರಡು ಚರಣಗಳನ್ನು ಬರೆದು ನನ್ನ ಪ್ರತಿಕ್ರಿಯೆಯನ್ನು ಮುಗಿಸುತ್ತೇನೆ.

ವ್ಯಕ್ತಿ, ಊಹೆಗೆಟುಕದ ವೃತ್ತ
ಒಳಗಸಂಖ್ಯ ಯೋಜನೆ ತ್ರಿಜ್ಯ
ಎನಿತು ತ್ರಿಜ್ಯಗಳನಿತು
        ಗುಣಗಳ ಹೆಣಿಗೆ ;
ವೈವಿಧ್ಯಭಾವ ಪುಷ್ಪವೈತರಣಿ
ಸೌಂದರ್ಯ ರೇಖೆಗಳ ಸರಣಿ
ಗಂಭೀರದೆತ್ತರದ ಶೃಂಗ
ಸಂಗಸ್ಪರ್ಶಕ್ಕೆ ಬರೆ ಮೇಘಭೃಂಗ
ಸುರಿಯುವುದು ಜೇನ್ಮಳೆಯು ;
        ಹಿತ ; ಹಿತ !!

ಸುಮತೀಂದ್ರ ನಾಡಿಗ

# ಆತ್ಮೀಯರು

ಮನುಷ್ಯನಿಗೆ ಭಯ ಸಹಜ—
ನನಗೆ ನಿಮ್ಮಲ್ಲಿ
ನಿಮಗೆ ನನ್ನಲ್ಲಿ.
ಇದು ಪ್ರತ್ಯೇಕತೆಯ ಭಯ.
ಈ ಭಯ ದಾಟಿದ್ದೇವೆ
ಹಲವಾರು ಸಲ.
ಪ್ರತ್ಯೇಕತೆ ಬೇಕೂ ಹೌದು.
ವಿಶಿಷ್ಟತೆಗೆ ತುಡಿಯುವರು ನಾವು.
ಆದರೂ
ವಯಸ್ಸಿನ, ಅಭಿರುಚಿಯ,
ಸಂಸ್ಕಾರದ, ಜಾತಿಯ,
ಕೂಟಗಳ, ಹಿನ್ನೆಲೆಗಳ
ಭಿನ್ನತೆಗಳ ಅನಿವಾರ್ಯ ಬೇಲಿಗಳ
ಆಗೀಗ ಮುರಿದವರು ನಾವು,
ಮತ್ತೆ ಮುರಿದದ್ದ ಕಟ್ಟಿದವರು.
ಮಾನವೀಯತೆಯೊಂದೆ
ಮುಖ್ಯ ಮೌಲ್ಯವೆಂದರಿತವರು ನೀವು,
ಒಮ್ಮೆ ಕತೆಯೊಂದನ್ನು ಹೇಳಿದಿರಿ—
ನಿಮಗಾಗ ಸಿಟ್ಟು ಬಂದಿತ್ತು.
ಇಬ್ಬರು ಬೌದ್ಧ ಭಿಕ್ಷುಗಳು
ಸಂಜೆ ಹೊಳೆದಾಟಿ
ವಿಹಾರ ಸೇರುವ ಹೊತ್ತು
ಸಂಕದಾಟುವುದಕ್ಕೆ ನಡುಗುತ್ತಿದ್ದ
ತರುಣಿಯೊಬ್ಬಳ ಕಂಡು

ಕಿರಿಯವನು ಸಹಾಯಮಾಡೋಣವೆಂದಾಗ
ಹಿರಿಯವನು "ಹೆಂಗಸನು ಮುಟ್ಟುವುದೆ?
ಕಂಡವರು ಏನೆಂದಾರು?" ಎಂದಾಗ
ಕಿರಿಯವನು ಮುನ್ನುಗ್ಗಿ
ತರುಣಿಯನ್ನೆತ್ತಿ ಆಚೆಗೆ ಬಿಟ್ಟು ಬಂದಾಗ ಹಿರಿಯವನು ಹೊಲಸು
ಹೊಲಸಾಗಿ ಬೈಯುತ್ತಲೇ ಇದ್ದ.
ಆಗ ಕಿರಿಯವನು
"ನಾನು ಅವಳನ್ನು ಅಲ್ಲೇ ಬಿಟ್ಟೆ
ನೀನು ಅವಳನ್ನು ಜೊತೆಗೆ ತಂದಿದ್ದೀಯ"
ಎಂದು ಸುಮ್ಮನಾದ.
ಕತೆ ಹೇಳುವಷ್ಟರಲ್ಲೇ
ನಿಮಗೆ ಸಿಟ್ಟು ಇಳಿದಿತ್ತು.
ಸಿಟ್ಟನ್ನು ಹೊಳೆದಾಟಿಸಿದ್ದಿರಿ ನೀವು.
ನಮ್ಮ ಪ್ರತ್ಯೇಕತೆಯ ಬೇಲಿಗಳ ಒಳಗೆ
ನಮಗೆ ಬೇಕಾದ್ದು ಬೆಳೆಯುತ್ತೇವೆ
ಆಗೀಗ ಹಲವನ್ನು ಹಂಚಿಕೊಳ್ಳುತ್ತೇವೆ,
ಆತ್ಮೀಯರಾಗಿ.

ಎಂ. ಎನ್. ವ್ಯಾಸರಾವ್

# ಜಿ.ಎಸ್.ಎಸ್.

ತೆರೆದ ದಾರಿಯಲಿ ಸಾಲು ದೀಪದ ಹೆಜ್ಜೆ
ಸದ್ದುಗದ್ದಲವಿರದ ಮೌನ ಮೆರವಣಿಗೆ
ತೀರ್ಥವಾಣಿಯಲಿ ಮಿಂದು ಮಡಿಯಾಗಿ ಬಂತು
ಒಡಲು ತಿಳಿ ಬಾನ ಬಂಗಾರ ಮೆಡಲು
ಇವರ ಬಳಿ ನಿಂತೆ, ನನಗೂ ಎತ್ತರ ನಿಂತ
ಇವರ ತುತ್ತತುದಿ ಮುಟ್ಟುವುದು ಹೇಗೆ?
ಕೆಳಗಿದ್ದ ಮಣ್ಣುಕೆದರಿ ಕುಸಿಯುಬಹುದೇನೊ ಕಾದೆ
ಹಳ್ಳದಲಿ ನಾ ಬಿದ್ದೆ ಇನ್ನೂ ಕುಬ್ಜನಾದೆ
ಈ ಗಿರಿ ಮಿರಿಮಿರಿ ಮಿಂಚಿ ನಿಂತಿತ್ತು ಹಾಗೆ!
ಈ ಅಚ್ಛೋದ ಸರೋವರದಲ್ಲಿ ಮಿಂದವರೆಷ್ಟೊ ?
ದಾಹ ಹಿಂಗಿಸಿಕೊಂಡವರೆಷ್ಟೋ, ತುಂಬಿ ಸಾಗಿದವರೆಷ್ಟೋ?
ಕೋಪಕ್ಕೆ, ಪ್ರತಾಪಕ್ಕೆ ಇಲ್ಲ ಚಪಲ ಚಿತ್ತಕ್ಕೆ
ಕದಡಿ ರಾಡಿಗೊಳಿಸಿದವರೆಷ್ಟೋ.
ಕ್ಷಣಮಾತ್ರ ಕಸಿವಿಸಿ ಹಿಂಸೆ ಚಂಚಲ
ಒಡನೆ ನಿಶ್ಚಲ ಗಂಭೀರ—ಕಂಡ ಕನ್ನಡಿ ನೀರ!
ಬೀಜದಿಂದ ಬೀಜಕ್ಕೆ ಬದುಕ ಬಿಚ್ಚಿ
ನಿಗೂಢ ಬದುಕು ತೊಡಕು ಎಲ್ಲ ಕಳಚಿ
ಆಚೀಚೆ ಸುತ್ತಮುತ್ತ ಎದ್ದ ಗೋಡೆ
ಅದರಾಚೆ ಪಿಳಿಪಿಳಿ ಕಣ್ಣು ಪಿಂಪಿರಿ ಮಾತು
ಎಲ್ಲಕ್ಕೂ ಬರೀ ಒಂದೆಸಳು ನಗೆ
ಅರಿಯಲೇ ಆ ನೋವಿನ ಬಗೆ?
ಮನಸ್ಸು ಹಚ್ಚ ಹಸಿರು ರೆಕ್ಕೆ ಬಿಚ್ಚಿದ ಮುಗಿಲು
ತೂಗಾಡುವ ತೆನೆ ಜೋಗುಳದ ಹಾಡು ಗಂಭೀರ ಗಾಳಿ
ಅಂತೆ ಕಾವ್ಯ ಬದುಕು ಬರಹ

ಅಂಕು ಡೊಂಕಿಲ್ಲ ಎಲ್ಲಕ್ಕೂ ಹಾದಿ ನೇರ
ಈ ಗಂಭೀರಕ್ಕೆ ಆ ಮೌನಕ್ಕೆ ಬಿಚ್ಚುಮಾತಿಗೆ
ಕಾವ್ಯಕ್ಕೆ ಸರಳ ಸ್ವಭಾವಕ್ಕೆ ನಾ ಸಾಟಿಯಾಗಲೆ ?
ಇಲ್ಲ ಕಾಡಹರಟೆಯಲ್ಲಿ ಕಾಫೀ ಹೀರುತ್ತ ಕೂರಲೆ ?

ರಂ. ಶ್ರೀ. ಮುಗಳಿ

# ನಾನು ಕಂಡ ಕವಿ ಶಿವರುದ್ರಪ್ಪನವರು

ಕಳೆದ ಇಪ್ಪತ್ತೈದು ವರ್ಷಗಳಿಂದ ಶಿವರುದ್ರಪ್ಪನವರ ಕಾವ್ಯಪ್ರಜ್ಞೆಯ ಬೆಳವಣಿಗೆಯನ್ನು ಮೆಚ್ಚಿಗೆಯಿಂದ ನೋಡುತ್ತ ಬಂದವರಲ್ಲಿ ನಾನೊಬ್ಬ. ಅವರ ಮೊದಲನೆಯ ಕವನಸಂಗ್ರಹವಾದ 'ಸಾಮಗಾನ' ೧೯೫೧ರಲ್ಲಿ ಪ್ರಕಟವಾಯಿತು. ಇತ್ತೀಚೆಯ ಕವನ ಸಂಗ್ರಹವಾದ 'ಗೋಡೆ' ೧೯೭೨ರಲ್ಲಿ ಬೆಳಕು ಕಂಡಿದೆ. ಆಮೇಲೆ ಅವರ ಪ್ರಕಟವಾದ ಎಲ್ಲ ಕವನಸಂಗ್ರಹಗಳಿಂದ ಆಯ್ದ ಕವನಗಳ ಸಂಕಲನ 'ನನ್ನ ನಿನ್ನ ನಡುವೆ' ಎಂಬುದು ೧೯೭೪ರಲ್ಲಿ ಪ್ರಕಾಶಿತವಾಗಿದೆ. ಅವರ ಕಾವ್ಯ ಈಗೊಂದು ಆಶಯ-ಅಭಿವ್ಯಕ್ತಿಗಳ ಘಟ್ಟವನ್ನು ಮುಟ್ಟಿದೆ ಎಂದು ಹೇಳಬಹುದಾದರೂ ಇದೇ ಕೊನೆಯ ನಿಲುಮೆಯೆಂದು ಹೇಳುವುದು ಸರಿಯಾಗದು. ಜೀವಿಸಿರುವ ಮತ್ತು ಜೀವಂತವಾಗಿ ತನ್ನ ಪರಿಸರಕ್ಕೆ ತನ್ನನ್ನು ಒಡ್ಡಿರುವ ಯಾವುದೇ ಕವಿಯ ನಿರ್ಮಿತಿ ವಿಚಾರದಲ್ಲಿ ಕೊನೆಯ ಮಾತನ್ನು ಹೇಳುವುದು ಸಾಧ್ಯವಿಲ್ಲ. ಅವರ ಕಾವ್ಯಸೃಷ್ಟಿ ಮುಂದರಿದಿದೆ. ಅದು ಮುಂದೆ ಯಾವ ತಿರುವನ್ನು ಪಡೆಯುವುದೋ ಹೇಳಲುಬಾರದು. ಆದ್ದರಿಂದ ಈವರೆಗಿನ ಕೃತಿಗಳಲ್ಲಿ ನಾನು ಕಂಡುದೇನು ಎಂಬುದು ಮಾತ್ರ ಇಲ್ಲಿ ಪ್ರಸ್ತುತ. ಕಂಡುದೆಲ್ಲವೂ ಇಲ್ಲಿ ಬರಬೇಕಾಗಿಲ್ಲ. ನನಗೆ ಎದ್ದು ಕಾಣುವ ಕೆಲವು ಅಂಶಗಳನ್ನು ಎತ್ತಿ ತೋರಿಸುವ ಪ್ರಯತ್ನಮಾಡುತ್ತೇನೆ.

ಶಿವರುದ್ರಪ್ಪನವರ ಪ್ರಥಮ ಕಾವ್ಯಸ್ಫೂರ್ತಿ ಈಶ್ವರ ಸೃಷ್ಟಿಯ ಸೌಂದರ್ಯದಿಂದ ಮುಗ್ಧವಾದ ತರುಣ ಚೇತನವೊಂದರ ಆನಂದ-ಆಶ್ಚರ್ಯಗಳಲ್ಲಿದೆ. 'ಸಾಮಗಾನ' ಸಂಕಲನದಲ್ಲಿಯ ಪ್ರಕೃತಿಪೂಜೆ, ಮುಂಜಿನಲೀಲೆ, ಹೂಮಳೆ ಇಂಥ ಕವನಗಳಲ್ಲಿ 'ಚೆಲುವು-ಒಲವು' ಸಂಕಲನದಲ್ಲಿಯ ಮಲ್ಲಿಗೆ, ಹೂಬಳ್ಳಿ, ಪ್ರಕೃತಿ-ಕವಿ ಇಂಥ ಕವನಗಳಲ್ಲಿ ಈ ಭಾವಸ್ಥಾಯಿಯಿದೆ. ಇದರಲ್ಲಿ ಇದು ಈಶ್ವರ ಸೃಷ್ಟಿ ಎಂಬ ನಂಬಿಕೆ ವಿಶದವಾಗಿದೆ. 'ವೀಣಾಧ್ವನಿ' ಎಂಬ ಮೊದಲನೆಯ ಸಂಕಲನದ ಮೊದಲ ಕವನದಲ್ಲಿ 'ಸಚ್ಚಿದಾನಂದನ ಅನಂತರೂಪವನು ನನ್ನ ಸಾಂತತೆಯಲ್ಲಿ ಸೆರೆಗೈದು ತೋರುತಿದೆ' ಎಂಬ ಕೊನೆಯ ನುಡಿಯನ್ನು ಗಮನಿಸಬೇಕು. ಅಲ್ಲದೆ ಈಶ್ವರನ ಕೃಪೆಯಿಂದ ಈ ಎಲ್ಲ ಚೆಲುವು ಮೈದಾಳಿದೆ ಎಂಬ ನಂಬಿಕೆಯು 'ಹೂಮಳೆ' ಎಂಬ ಕವನದ 'ಭಾದ್ರಪದದ ಚೌತಿಯಂದು ಇಲ್ಲಿ ಬಯಲಿನಲ್ಲಿ ನಿಂದು ಶಿವನ ಕೃಪೆಯ ಕಂಡೆನು ಶಿವನ ಸೊಬಗನುಂಡೆನು' ಎಂಬಲ್ಲಿ ವ್ಯಕ್ತವಾಗಿದೆ.

ಈ ನಂಬಿಕೆಗಳು ಪರಂಪರೆಯಿಂದ ನಡೆದು ಬಂದವು, ಆಲೋಚನೆಯಿಂದ, ಅನುಭವದಿಂದ ಪಡೆದುಕೊಂಡವುಗಳಲ್ಲ ಎಂದು ಹೇಳುವುದು ಸಾಧ್ಯ. ಯಾವುದೇ ನಂಬಿಕೆಯ ಪ್ರಾರಂಭ ಸ್ಪರ್ಶವಾಗುವುದು ಪರಂಪರೆಯ ಮತ್ತು ಪರಿಸರದ ಪ್ರಭಾವದಿಂದ. ಬರಬರುತ್ತ ವ್ಯಕ್ತಿ ತನ್ನ ಆಲೋಚನೆ-ಅನುಭವಗಳಿಂದ ಅದನ್ನು ದೃಢಪಡಿಸಿಕೊಳ್ಳುವನು. ಕೆಲವು ಸಲ ಅದು ತೀವ್ರವಾಗಬಹುದು, ಹಲವು ಸಲ ಅದು ಮಂದವಾಗಬಹುದು. ಈ ಕವಿಯ ಮೊದಲ ಹಂತದ ಕವನಗಳನ್ನು ನೋಡಿದರೆ ಅವುಗಳಲ್ಲಿ ದೈವಭಕ್ತಿ ಸೂಚ್ಯವಾಗಿ ಇಲ್ಲವೆ ಪ್ರಕಟವಾಗಿ ಮೂಡಿರುವುದರ ಅರಿವಾಗುತ್ತದೆ. ಅದು ಕವಿಯ ಶ್ರದ್ಧೆಯಲ್ಲಿ ಉದಿಸಿ ಭಾವದಲ್ಲಿ ಸ್ಥಿರವಾಗಿ ಅನುಭವದಿಂದ ಪುಟಗೊಂಡಿದೆ ಎಂಬುದಕ್ಕೆ ನಿದರ್ಶನಗಳಿವೆ.

ಉದಾಹರಣೆಗೆ, 'ಸಾಮಗಾನ'ದ ಕೊನೆಯ ಕವನ 'ಬೇಡಿಕೆ' 'ನಿನ್ನಡಿಯ ಹುಡಿ ನನ್ನ ಮುಡಿಯ ಸಿಂಗರಿಸಲಿ, ಕಡೆಗಾನು ಹುಡಿಯಾಗಿ ನಿನ್ನಡಿಗೆ ಸಲಲಿ' ಎಂದು ಮೊದಲಾಗಿ ದೇವನಲ್ಲಿ ಕವಿ ಆರ್ತನಾಗಿ ಮಾಡಿಕೊಂಡ ಮನವಿಯನ್ನು ಸೊಗಸಾಗಿ ಸಾಜವಾಗಿ ಅಭಿವ್ಯಕ್ತಗೊಳಿಸಿದೆ. ಇದನ್ನು ಅಂದು ಪ್ರಚಾರದಲ್ಲಿದ್ದ ಹೊಸ ಭಕ್ತಿಕಾವ್ಯದ ಅಂಧ ಅನುಕರಣವೆಂದಾಗಲಿ ಬರೀ ಮಾತಿನ ಮಾಲೆಯೆಂದಾಗಲಿ ಹೇಳುವುದು ಕವಿಗೆ ಅನ್ಯಾಯ ಮಾಡುತ್ತದೆ. ಇದರಂತೆ 'ಚೆಲುವು-ಒಲವು' ಸಂಗ್ರಹದ 'ಬಾಗಿಲಲ್ಲಿ' ಎಂಬ ಕವನವನ್ನು ಪರಿಕಿಸಬೇಕು. ರಚನೆಯ ದೃಷ್ಟಿಯಿಂದ ಸ್ವಯಂಪೂರ್ಣವೂ ಸುಂದರವೂ ಆದ ಈ ಕವನದಲ್ಲಿ ಕವಿಯ ನಂಬಿಕೆ ಒಬ್ಬ ಹರಿದಾಸನ ಗಾನದಿಂದ ಹೇಗೆ ದೃಢಪಟ್ಟಿತು ಎಂಬುದನ್ನು ಕಾಣಬಹುದು. ಚಿಂತೆಯಲ್ಲಿ ಮುಳುಗೇಳುತ್ತ ತಲ್ಲಣಗೊಂಡ ಕವಿ ಜೀವನಕ್ಕೆ 'ತಲ್ಲಣಿಸದಿರು ಕಂಡ್ಯ ತಾಳು ಮನವೇ, ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ' ಎಂಬ ದಾಸವಾಣಿ 'ಶುಭದಭಯವಾಣಿ'ಯಾಗಿ ಲಭಿಸಿತು. ಆಗ 'ಭಿಕ್ಷಕ್ಕೆ ಬಂದವರ ಮುಂದೆ ಭಿಕ್ಷುಕನಾದೆ, ನನ್ನೆದೆಯ ಜೋಳಿಗೆಯ ನಾನೆ ತೆರೆದು, ಮುಂದೆ ನಡೆದರು ಅವರು ಹಾಡು ಸುರಿದು!' ಎಂದು ಕವಿ ಉದ್ಗಾರ ತೆಗೆದನು. ಕವನದ ಈ ಕೊನೆ ಕೇವಲ ಚಮತ್ಕೃತಿಯಲ್ಲ, ಮಾತಿನ ಮೋಡಿಯಲ್ಲ, ನಿಜವಾದ ಒಂದು ಆಂತರಿಕ ಸ್ಪಂದನದ ಆವಿಷ್ಕಾರವೆಂದು ಅರಿಯಬೇಕು.

ಶಿವರುದ್ರಪ್ಪನವರ ಪ್ರಾರಂಭದ ಕವಿತೆಗಳಲ್ಲಿ ಶಿವದರ್ಶನದ ಭಾವಗಳಿರುವಂತೆ ರುದ್ರಭಾವಗಳೂ ಅಲ್ಲಲ್ಲಿ ತಲೆಯೆತ್ತಿರುತ್ತವೆ. 'ಅಲ್ಲಿ-ಇಲ್ಲಿ' ಕವನದಲ್ಲಿ ಚಂದ್ರನು 'ಕಣ್ಣನೀರಿನಲಿ ಮಣ್ಣಧೂಳಿನಲಿ ಹೊರಳುತ್ತಿರುವರ ಸಹಚಾರಿ'ಯೂ 'ದೀನ ಅನಾಥರ ದುಃಖ ದರಿದ್ರರ ಮುರುಕು ಗುಡಿಸಲಲಿ ಉಪವಾಸಿ'ಯೂ ಆಗಿ ತೋರಿದ್ದಾನೆ. ಸಾಮಾಜಿಕ ಜೀವನದಲ್ಲಿಯ ವೈಷಮ್ಯವು ಕವಿಯ ಅಂತಃಕರಣವನ್ನು ಕಲಕಿ ಇಂಥ ಭಾವಗಳಿಗೆ ಎಡೆಕೊಟ್ಟಿದೆ. 'ತಂತುಕೃತಿ'ಯೆಂಬ ಪದ್ಯದಲ್ಲಿ 'ಮೈನಡುಗಿತು, ಸಿಡಿದೊಡೆಯಿತು ಸೌಂದರ್ಯ! ಸಾವು ಬದುಕಿನ ಹೋರಾಟದ ಕ್ರೌರ್ಯ ಎದೆ ತುಂಬಿತು' ಎಂಬ 'ಅನುಭವಭಾರ'ವು ಅಭಿವ್ಯಕ್ತವಾಗಿದೆ. 'ಕಣ್ಣೀರು' ಎಂಬ ಚಿಕ್ಕ ಕವನದಲ್ಲಿ 'ಕಣ್ಣೀರಿಗಿಂ ಮಿಗಿಲು ತತ್ವಬೋಧಕರಿಲ್ಲ, ಮುನ್ನೀರು ಎಂಬುದೂ ಕಣ್ಣೀರೆ ಎಲ್ಲ!' ಎಂಬ ಭಾವ

ಉಕ್ಕಿದೆ. ಜೀವನದ ರಮ್ಯತೆಯೊಡನೆ ಅದರ ಭಯಂಕರತೆಯೂ ಈ ಕವಿಗೆ ಮೊದಲಿನಿಂದಲೂ ಅರಿವಾಗಿತ್ತು ಮಾತ್ರವಲ್ಲ ಶಿವರುದ್ರಭಾವಗಳ ಈ ಶಬಲತೆ ಮುಂದೆಯೂ ಬೇರೆಬೇರೆಯಾಗಿ ಆಶಯ–ಅಭಿವ್ಯಕ್ತಿಗಳಲ್ಲಿ ಸೇರಿಕೊಂಡು ಬಂದಿದೆ ಎಂಬುದನ್ನು ಗಮನಿಸಬೇಕು. ಹಾಗೆ ನೋಡಿದರೆ ರೋಮ್ಯಾಂಟಿಕ್ ಅಥವಾ ರಮ್ಯವೆಂದು ಕೆಲವರು ಕರೆಯುವ ಮತ್ತು ಜರೆಯುವ ಕವಿಗಳೆಲ್ಲರಲ್ಲಿ ಜೀವನದ ಸಮಗ್ರದರ್ಶನವು ಅವರವರ ರೀತಿಯಲ್ಲಿ ಆಕಾರ ತಾಳಿರುತ್ತದೆ ಎಂಬುದನ್ನೂ ಅರಿತಿರಬೇಕು.

ಶಿವರುದ್ರಪ್ಪನವರ ಮೊದಲ ಕವನಸಂಗ್ರಹಗಳಲ್ಲಿ ಪ್ರಾರಂಭಿಕ ನಿರ್ಮಿತಿಯ ಗುಣದೋಷಗಳಿರುತ್ತವೆ. ಅವರಿಗೆ ಮಾದರಿಯಾಗಿದ್ದ ಕವಿಗಳ ಅನುಕರಣೆ ಭಾವಾವೇಶದಲ್ಲಿ ಮತ್ತು ಪದರಚನೆಯಲ್ಲಿ ಕಂಡುಬರುತ್ತದೆ. ಇದೆಲ್ಲ ತೀರ ಸಹಜ. ಇಂಥ ಪ್ರಯತ್ನಗಳಲ್ಲಿಯೂ ಅವರ ಕಾವ್ಯಾನುಭವ ನೈಜವಾಗಿ ಹೊರಹೊಮ್ಮಲು ಹವಣಿಸಿದೆ ಎಂಬುದು ಮುಖ್ಯ. ಈ ಹಂತದಲ್ಲಿ ಅವರು ರಚಿಸಿದ ಕವನಗಳಲ್ಲಿ ಭಾವಭಾಷೆಗಳ ಒಟ್ಟಿನ ಬೆಸುಗೆಯಿಂದ ನನ್ನ ಮನಸ್ಸನ್ನು ಸೆರೆಹಿಡಿದ ಕೆಲವು ಕವನಗಳೆಂದರೆ 'ಪ್ರಕೃತಿಪೂಜೆ, ಕಾಲನಟ, ಮುದುಕಿ, ರಥಯಾತ್ರೆ, ಮಲ್ಲಿಗೆ, ಬಾಗಿಲಲ್ಲಿ, ಕ್ರಾಂತಿಕಾರ ಮತ್ತು ಜಡೆ.' ಇವುಗಳಲ್ಲಿ ಕವಿಯ ವರ್ಣನಾತ್ಮಕ ಶಕ್ತಿ ಕ್ರಮೇಣ ಬೆಳೆಯುತ್ತ ಹೋಗಿರುವುದಲ್ಲದೆ ವಾಚ್ಯಸೌಂದರ್ಯದಿಂದ ವ್ಯಂಗ್ಯಪ್ರಪಂಚದ ಅರ್ಥವಲಯಗಳತ್ತ ಕೈಚಾಚಿದೆ. ಈ ವಿಕಾಸವನ್ನು 'ಜಡೆ' ಎಂಬ ಕವನದಲ್ಲಿ ಗುರುತಿಸಬಹುದು. ಅದನ್ನು ಓದುತ್ತ ಹೋದಂತೆ ಬೇರೆ ಬೇರೆ ಜಡೆಯ ಪ್ರಕಾರಗಳನ್ನು ಕವಿ ಸ್ವಾರಸ್ಯವಾಗಿ ವರ್ಣಿಸಲು ತೊಡಗಿದ್ದಾನೆ, ಅದೇ ಈ ಕವಿತೆಯ ಉದ್ದೇಶ ಎಂದು ಮೊದಲು ನೋಟಕ್ಕೆ ತೋರುತ್ತದೆ. ಆದರೆ ಕವನದ ಪೂರ್ವಾರ್ಧದಲ್ಲಿ ಲಲನೆಯರ ಜಡೆಯ ತರತರವನ್ನು ಬಣ್ಣಿಸುವಾಗ ಕಂಡುಬರುವ ಲಘುವೃತ್ತಿ ಇದ್ದಕ್ಕಿದ್ದಹಾಗೆ ಮಾಯವಾಗಿ 'ಮಾತೃಮಮತಾ ವೃಕ್ಷ ಬಿಟ್ಟ ಬೀಳಲಿನಂತೆ ಹರಡಿರುವ ತಾಯ ಜಡೆ!' ಎಂಬಲ್ಲಿ ಗಂಭೀರ ರೂಪಕದ ಮಟ್ಟಕ್ಕೆ ಏರುತ್ತದೆ, 'ಕುರುಕುಲಜೀವಾಕರ್ಷಣಪರಿಣತ' ಆ ಪಾಂಚಾಲಿಯ ಜಡೆ, 'ಸೀತೆಯ ಕಣ್ಣೀರೊಳು ಮಿಂದ ಜಡೆ' ಎಂಬಲ್ಲಿ ಮಹಾಭಾರತ–ರಾಮಾಯಣ ಕಥೆಗಳ ಕರುಣ ಸೂಚನೆಯಿಂದ ವ್ಯಂಗ್ಯದ ಅಂಚನ್ನು ತಾಕುತ್ತದೆ. 'ಓ ಓ ಈ ಜಡೆಗೆಲ್ಲಿ ಕಡೆ!' ಎಂಬ ಪೂರ್ವಾರ್ಧದ ಕೊನೆಯ ಸಾಲು ಉತ್ತರಾರ್ಧಕ್ಕೆ ಕೊಂಡಿಯಾಗಿ ನಿಸರ್ಗ ದೃಶ್ಯಗಳಲ್ಲಿ ಕಾಣುವ ತರತರದ ಜಡೆಗಳ ವರ್ಣನೆಗೆ ಸಹೃದಯನ ಮನಸನ್ನು ಅಣಿಗೊಳಿಸುತ್ತದೆ. 'ಚಂದ್ರಚೂಡನ ವ್ಯೋಮಕೇಶನ ವಿಶ್ವವನೆ ವ್ಯಾಪಿಸುತ ತುಂಬಿರುವ ಜಡೆ!' ಎಂಬ ವರ್ಣನೆಯಿಂದ ಭೂವ್ಯೋಮವನ್ನು ವ್ಯಾಪಿಸಿ ನಿಂತಿರುವ ಈ ಜಡೆಯ ದರ್ಶನವು ಕೊನೆಯ ನಾಲ್ಕು ಸಾಲುಗಳಲ್ಲಿ ಪಡೆದಿರುವ ಆಶ್ಚರ್ಯಕಾರಕವಾದ ತಿರುವು ಧ್ವನಿರಮ್ಯತೆಗೆ ಎತ್ತಿತೋರಿಸಬಹುದಾದ ನಿದರ್ಶನವಾಗಿದೆ:

> ಗಾನಗಳ ಕಾವ್ಯಗಳ ಶಿಲ್ಪಗಳ ಕಲೆಯ ಜಡೆ
> ಎಲ್ಲವೂ ರಮ್ಯವೆಲ್ಲ!

ಜಡೆಯಾಚೆ ತಿರುಗಿಸಿದ ತಾಯಮುಖ ಮಾತ್ರ ಇಂದಿಗೂ
ಕಾಣದಲ್ಲ !

ದೃಶ್ಯ ಸೃಷ್ಟಿಯ ಹಿಂದೆ ಇರುವ ಅದೃಶ್ಯಶಕ್ತಿಯ ಬಗ್ಗೆ ಇರುವ ಮಾನವನ ಕುತೂಹಲ, ಅದನ್ನು ಕಾಣಲಾಗದ್ದಕ್ಕೆ ಉಂಟಾಗುವ ಕಳವಳ ಈ ಬಗೆಯ ಅರ್ಥವಲಯಗಳಲ್ಲಿ ಇವು ನಮ್ಮನ್ನೊಯ್ದು ಬಿಡುತ್ತವೆ. ಸ್ವಚ್ಛಂದಲಯದಲ್ಲಿ ಸಲೀಲವಾಗಿ ರಚಿತವಾದ ಈ ಕವನವು ಶಿವರುದ್ರಪ್ಪನವರ ಸಾರ್ಥಕ ಕೃತಿಗಳಲ್ಲಿ ಒಂದಾಗಿದೆ, ಹೊಸ ಕಾವ್ಯದ ಎತ್ತರದ ಶಿಖರಗಳ ಜೊತೆಗೆ ನಿಲ್ಲಲು ಅರ್ಹವಾಗಿದೆ.

'ಸಂಜೆದಾರಿ'ಯ ಸಂಕಲನದಿಂದ ಶಿವರುದ್ರಪ್ಪನವರ ಕಾವ್ಯದಲ್ಲಿ ವ್ಯಂಗ್ಯವು ಸಾಮಾಜಿಕ ಪರಿಸರದತ್ತ ಹೊರಳಿ ವಿಡಂಬನೆಯಾಗತೊಡಗಿತು. ದೇಶಕ್ಕೆ ಸ್ವಾತಂತ್ರ್ಯ ಬಂದ ಮೇಲೆ ಕುಡುಬರುತ್ತಿರುವ ವಿಸಂಗತಿಗಳು ಅದಕ್ಕೆ ಸಾಕಷ್ಟು ಸಾಮಗ್ರಿಯನ್ನೊದಗಿಸಿದುವು. ಸಾಹಿತ್ಯಿಕ ಪರಿಸರದಲ್ಲಿಯೂ ವೈಫಲ್ಯಭಾವ ಗಂಭೀರ ಪ್ರತಿಕ್ರಿಯೆಯಾಗಿ ವಿಡಂಬನೆಯಾಗಿ ನವ್ಯವೆಂಬ ಹೆಸರಿನಲ್ಲಿ ತಲೆಯೆತ್ತಲಾರಂಭಿಸಿತ್ತು. ಹಳೆಯ ನಂಬಿಕೆಗಳು ಅಲುಗಾಡ ಹತ್ತಿದುವು. ಇಂಥ ಸಂನಿವೇಶದಲ್ಲಿ ಸಂಜೆದಾರಿ, ಮೋಡಿ, ಬಾಡಿಗೆಮನೆ, ಮೇಸ್ಟ್ರು, ಆಸ್ಪತ್ರೆ ಇಂಥ ಕವಿತೆಗಳು ಹುಟ್ಟಿಕೊಂಡವು. ಇವುಗಳಲ್ಲಿ 'ಸಂಜೆದಾರಿ' ಎಂಬ ಕವನವು ನುಡಿನುಡಿಯಲ್ಲಿ ಅರ್ಥಪೂರ್ಣವಾದ ಬರೆವಣಿಗೆ. 'ಕೈಹಿಡಿದ ಸರಪಳಿಯ ಜಗ್ಗುತಿದೆ ಕರಿನಾಯಿ, ಹೊಳೆಹೊಳೆವ ಕೆಂಗಣ್ಣು ಜೋಲ್ವ ನಾಲಗೆ ಬಾಯಿ' ಎಂಬ ಪ್ರತಿಮೆಯಿಂದ ಮೊದಲಾಗುವ ಈ ಕವನ

ಮುಗಿವಿರದ ಪ್ರಶ್ನೆಯೊಲು ಮಲಗಿರುವ ಟಾರ್ ಬೀದಿಯಲ್ಲಿ
ಕೈಹಿಡಿದ ಸರಪಳಿಯ ಜಗ್ಗುತಿದೆ ಕರಿನಾಯಿ ಮುಂದೆ ಮುಂದೆ
ಹಿಡಿದ ಕೈ ಸಾಗುತಿದೆ ಹಿಂದೆ ಹಿಂದೆ !

ಎಂಬ ಆದರದೇ ವಿಸ್ತರಣೆಯಿಂದ ಕೂಡಿಕೊಂಡು ನಿವೃತ್ತ ಅಧಿಕಾರಿಯ ಜೀವನ ದುರಂತವನ್ನು ನಿಚ್ಚಳವಾಗಿ ಸೂಚಿಸುತ್ತದೆ. ಮುಂದಿನ ಎಲ್ಲ ವರ್ಣನೆಗಳಲ್ಲಿ ಅಭಿಪ್ರೇತವಾದ ಚಿತ್ರ ಕಣ್ಣ ಮುಂದೆ ತುಂಬಿಕೊಂಡು ನಿಲ್ಲುತ್ತದೆ. ಇದರಲ್ಲಿ ವ್ಯಂಗ್ಯಕ್ಕೆ ಅಸ್ಪಷ್ಟತೆಯ ಅರಕೆಯಿಲ್ಲ, ಇಲ್ಲದ ತಂತ್ರಗಾರಿಕೆಯಿಲ್ಲ. ಇನ್ನಿಷ್ಟು ಸಂಯಮದಿಂದ ವಾಚ್ಯವನ್ನು ಕಡಿಮೆಮಾಡಬಹುದಿತ್ತೇನೊ. ಮುಳುಗುತಿಹ ಮುದಿಯ ಸೂರ್ಯನ ಪ್ರತಿಮೆಯಲ್ಲಿಯೆ ನಿವೃತ್ತ ನೌಕರನ ಚಿತ್ರವನ್ನು ಸೂಚಿಸುತ್ತಿರುವಾಗ 'ಹಗಲೆಲ್ಲ ಗಾಡಿಯನೆಳೆದು ಸೋತು ಸುಸ್ತಾದ ಜಟಕಾ ಕುದುರೆಯಂತೆ' ಎಂಬ ಹೋಲಿಕೆಯೊಡನೆ 'ನಿವೃತ್ತ ನೌಕರನಂತೆ' ಎಂಬುದನ್ನೂ ಸೇರಿಸದೆ ಇದ್ದರೆ ಚೆನ್ನಾಗಿತ್ತು. 'ಮೋಡಿ'ಯಲ್ಲಿಯ ವ್ಯಂಗ್ಯವು ಈ ಕೊನೆಯ ಮೂರು ಸಾಲುಗಳಿಂದ ಅರ್ಥ ಪಡೆಯುತ್ತದೆ :

'ಮೂರುಕಾಸು ನೀಡಿರಯ್ಯ ನಿಮ್ಮ ಧರ್ಮ'ವೆನ್ನುತ
ಬರಲು ನಾನು ಬೆರಗಾದೆನು ನೋಡಿದೆಲ್ಲ ಮೋಡಿಗಿಂತ
ಇದು ಹೆಚ್ಚಿನ ಮೋಡಿಯೆಂದು ಮನದಲಿ ಬೆರಗಾಗುತ !'

ಮೇಸ್ತ್ರಿ, ಆಸ್ಪತ್ರೆ ಈ ಕವನಗಳಲ್ಲಿ ವ್ಯಂಗ್ಯವು ನೇರವಾಗಿ ಮೊನಚಾಗಿದೆ. ಕವಿಯ ವಾಸ್ತವ ಪ್ರಜ್ಞೆ ಸಮರ್ಥವಾದ ಚಿತ್ರಗಳಲ್ಲಿ ಅಭಿವ್ಯಕ್ತಿಯನ್ನು ಪಡೆದಿದೆ. ಈ ಸಂಗ್ರಹದ 'ಶೋಧನೆ' ಮತ್ತು 'ಇವನು' ಈ ಕವಿತೆಗಳಲ್ಲಿ ಮನುಷ್ಯನ ಕದಡಿನ ಮನಸ್ಸಿನ ಶೋಧ ನಡೆದಿದೆ. ಹೊಸ ಹೋಲಿಕೆಗಳು ಮತ್ತು ಸಂಕೇತಗಳು ಇಲ್ಲಿ ಪ್ರಭಾವಿಯಾಗಿ ಕೆಲಸ ಮಾಡಿವೆ, ಧ್ವನಿಯಿಂದ ಚಿತ್ರವನ್ನು ಪೂರ್ಣಗೊಳಿಸಿವೆ:

ಯಾರು ಯಾರೋ ಸೇರಿ ಇರಿದ ಚೂರಿಯ ತುಣುಕು
ಅಣುಕು ಮಿಣುಕು!
ನೂರಾನೆ ಕಾಲುಗಳು ನುಗ್ಗುನುರಿಮಾಡಿರುವ
ಬಿಂದಿಗೆಯ ಸರಕು!
ಎದೆಯ ಮಿದುಮಾಸಿನಲಿ ಕಾವು ಪಡೆಯುತಲಿದ್ದ
ಮೊಟ್ಟೆಗಳ ಹೋಳು!
ಮುಗಿಲೊಳಾಡಿದ ನೂರು ಪಾರಿವಾಳದ ರೆಕ್ಕೆ
ನೂರು ಸೀಳು! (ಶೋಧನೆ)

ಮುರುಕು ಜೋಪಡಿಯೊಳಗೆ ಮಳೆಯ ನೀರಿಳಿವಂತೆ
ಇಳಿಯುತಿವೆ ತಲೆಯೊಳಗೆ ನೂರು ಚಿಂತೆ
ಒಳಗೆಲ್ಲ ಕೆಸರು, ಬರಿ ಕೆಸರು; ಅದರೊಳಗು
ಮೊಳೆಯುತಿವೆ ಆಸೆಗಳು ಹಸುರಿನಂತೆ! (ಇವನು)

'ಸಂಜೆದಾರಿ'ಯ ಹೆಚ್ಚಿನ ಕವನಗಳಲ್ಲಿ ವಾಸ್ತವಪ್ರಜ್ಞೆ ಜೀವನದ ಘೋರಮುಖವನ್ನು ಚಿತ್ರಿಸುವಲ್ಲಿ ಕವಿಯನ್ನು ಪ್ರೇರಿಸಿದ್ದರೂ ಬರೀ ಅದನ್ನೇ ಎತ್ತಿ ತೋರಿಸುವುದು ಕವಿಗೆ ಇಷ್ಟವಿಲ್ಲ ಎಂಬುದನ್ನು 'ಜನರು' ಈ ಕವನ ಸ್ಪಷ್ಟಗೊಳಿಸಿದೆ. 'ಎಂಥ ಹುಚ್ಚು ಜನರು ಇವರು ಕೊಚ್ಚೆಯನೇ ಕಾಂಬರು! ಕೊಚ್ಚೆಯುಂಡು ದಡದಿ ಬೆಳೆದ ಹಚ್ಚಹಸುರ ಕಾಣರು!' ಎಂದು ಮೊದಲಾಗುವ ಇದು ಸರಳವಾದ ಮಾತುಗಳಿಂದ ಜೀವನದ ಎರಡೂ ಮುಖಗಳನ್ನು ಅರಿತುಕೊಳ್ಳುವುದರ ಅಗತ್ಯವನ್ನು ಪ್ರತಿಪಾದಿಸಿರುತ್ತದೆ. 'ಎಂಥ ಪೆದ್ದ ಜನರು ಇವರು ದಿವದ ಬೆಳಕ ಕಾಣರು! ಮನೆಯ ಮುಂದೆ ಹರಿದರೂ ಕಣ್ಣ ಮುಂದೆ ಹೊಳೆದರೂ ಎದೆಗೆ ಬರಡೆಯಿಡುವರು! ಅದೂ ಸತ್ಯ ಇದೂ ಸತ್ಯ ಎಂಬ ದೃಷ್ಟಿಯಿಲ್ಲದೆ ಬಾಳು ಬೆಳೆಯಬಲ್ಲುದೆ? ಎಂಥ ನಿಸ್ಸತ್ವ ಜನರು ವಿಫಲತೆಯನೆ ಕಾಂಬರು! ವಿಫಲತೆಯೊಳು ಸಫಲತೆ ಚಿಗುರಿಡುವುದನೇ ಕಾಣರು!' ಈ ಸಾಲುಗಳಲ್ಲಿ ಸೂಚಿಸಿರುವ ಮನೋವೃತ್ತಿಯ ಜನರು ಯಾರೆಂಬುದನ್ನು ವಿವರಿಸಬೇಕಾಗಿಲ್ಲ. ಕವನದ ನಿರೂಪಣೆ ಸರಳವಾಗಿದ್ದರೂ ಕವಿಯ ದೃಷ್ಟಿ ಈ ಜನರಿಗಿಂತ ಬೇರೆಯಾದದ್ದೆಂಬುದು ವಿಶದವಾಗುತ್ತದೆ. ಈ ದೃಷ್ಟಿಯಲ್ಲಿ ಬರಬರುತ್ತ ವ್ಯತ್ಯಾಸವಾಗಿದ್ದರೂ ಇದರ ಮೂಲ ಪ್ರಜ್ಞೆ ಕವಿಯ ವ್ಯಕ್ತಿತ್ವದ ಆಳದಲ್ಲಿ ತಳವೂರಿದೆ, ಅಭಿವ್ಯಕ್ತಿಯಲ್ಲಿ ಅರಳಿದೆ ಎಂಬುದನ್ನು ಮುಂದಿನ ಸಂಕಲನಗಳಲ್ಲಿ ನೋಡಬಹುದು. 'ದೀಪದ ಹೆಜ್ಜೆ' ಈ ಸಂಕಲನದಲ್ಲಿ 'ಅದೂ ಸತ್ಯ ಇದೂ ಸತ್ಯ' ಎಂದು ಸೂಚಿಸುವ ಕವನಗಳಿವೆ. ನೆರಳಿಲ್ಲದ ದಾರಿ, ಪ್ರಶ್ನೆ-ಉತ್ತರ,

ಅರೆಮುಗಿದ ಕವನ, ಹೂವುಗಳ ನಿಟ್ಟುಸಿರು ಈ ಬಗೆಯ ಕವನಗಳಲ್ಲಿ ನೈರಾಶ್ಯದ ನಿಟ್ಟುಸಿರು ಇದ್ದರೆ, ಹುಟ್ಟಿದ ಹಬ್ಬ, ನಿರ್ಝರ, ಅಮೃತಮುಹೂರ್ತ, ಸ್ಪೂಟ್ನಿಕ್-ವಿನೋಬಾ ಈ ಕವನಗಳಲ್ಲಿ ಸಾಧನೆಯ ಮತ್ತು ಸಿದ್ಧಿಯ ಸಂತೃಪ್ತಿಯಿದೆ. ರಚನೆಯಲ್ಲಿ ಒಂದು ಸಹಜವಾದ ಶಿಲ್ಪವಿದೆ, ನವೀನ ಕಲ್ಪನೆಗಳ ಮತ್ತು ನುಡಿಗಳ ನಿರ್ಮಿತಿಯಿದೆ. ಉದಾಹರಣೆಗೆ, 'ಮಾತು-ಎಲ್ಲೋ ದೂರದಲಿ ಒಡೆದ ಬೂದಿಯ ಮುಗಿಲ ಬಿರುಕು-ತುಟಿಯೊಳಗೆರಡು ಗೊಣಗು ಚಿಕ್ಕೆ !....ಮನಮನವೋ ಕುದಿಕುದಿಪ ಕನಸುಗಳ ಕೊಪ್ಪರಿಗೆ....ಬೆಳಕುಮ್ಮೆ ನಡೆದಿತ್ತು ಕತ್ತಲೆಯ ಮುಡಿಗೆದರಿ ಚಿಕ್ಕೆ ಹೆಜ್ಜೆಯ ನಿಟ್ಟು ಬಾನತುಂಬ' ಇಂಥ ಅರ್ಥವಾಹಿಯಾದ ಸಂಕ್ಷಿಪ್ತ ಚಿತ್ರಗಳು ಅಲ್ಲಲ್ಲಿ ಸೂರೆಯಾಗಿವೆ. ಕೆಲವೆಡೆಗೆ ಇಂಗ್ಲಿಷ್ ಮಾತುಗಳ ಸೇರ್ಪಡೆ, ಅಕ್ಕರಗಳ ನಡುವೆ ಟಿಮ್ಮುಗಳ ಬಳಕೆ ಬಂದು ನವ್ಯವೆಂಬುದರ ತಂತ್ರಪ್ರಯೋಗವಿದೆ. ಇದು ಕವನದ ಶಿಲ್ಪಕ್ಕೆ ಅನಿವಾರ್ಯವೆಂದೇನು ತೋರುವುದಿಲ್ಲ. 'ಕವಳ ತಾಯೀ ಕವಳ', 'ರಾತ್ರೋರಾತ್ರಿ', ಇಂಥ ಒಂದೊಂದು ಪುಟದ ಕವನಗಳಲ್ಲಿ ಸಾಮಾಜಿಕ ವೈಷಮ್ಯದ, ವೈಚಿತ್ರ್ಯದ ನಿರೂಪಣೆ ಸ್ವಯಂಪೂರ್ಣ ಕೃತಿಯಾಗಿ ಹೊರಪಟ್ಟಿದೆ.

'ಅನಾವರಣ' ಸಂಕಲನದಲ್ಲಿ ಶಿವರುದ್ರಪ್ಪನವರ ವ್ಯಂಗ್ಯವು ಬರೀ ಆಕ್ರೋಶವಾಗದೆ ಹಗುರಾದ ಕಲಾಕೃತಿಯಾಗಿ, ಚುಚ್ಚಿದರೂ ಮೆಚ್ಚುವಂಥ ಸ್ವರೂಪವನ್ನು ಪಡೆದಿರುತ್ತದೆ. ಇದಕ್ಕೆ 'ಅನಾವರಣವಾಯಿತಂತೆ' ಈ ಪದ್ಯವು ಒಳ್ಳೆಯ ಉದಾಹರಣೆ. ಇದರಂತೆ ಕೋಗಿಲೆಗೆ ಉಪದೇಶ, ಹಳೇಪೇಪರ್ ಖಾಲಿ ಶೀಶೆ, ನಾಯಿಗಳಿವೆ ಎಚ್ಚರಿಕೆ, ಶನಿದೇವರ ವಿಗ್ರಹ, ಕಂಪ್ಲೇಂಟು, ಬದ್ಧಜಯಂತಿ, ಕೋಳಿ ಕೂಗಿತು, ಷೇವಿಂಗ್ ಸೆಲೂನಿನಲ್ಲಿ ಮೊದಲಾದ ಕವಿತೆಗಳನ್ನು ಓದಬಹುದು. ಈ ಸಂಕಲನದಲ್ಲಿಯೇ ಇಂಥ ವಿಡಂಬನಾತ್ಮಕ ರಚನೆಗಳು ಹೆಚ್ಚಾಗಿದ್ದು ಕವಿಯ ವ್ಯಂಗ್ಯ ಮುಖದ ಅನಾವರಣವು ಇಲ್ಲಿ ನಿಚ್ಚಳವಾಗಿದೆ.

ವಿಡಂಬನಾತ್ಮಕ ಹಾಸ್ಯಪ್ರಧಾನವಾದ ಈ ಸಂಗ್ರಹದ ಕೊನೆಯಲ್ಲಿ ಸ್ವತಂತ್ರ ಭಾರತದ ಯುದ್ಧವೀರರ ಪ್ರಶಂಸೆ, ಗಡಿಕಾಯುವ ಸೋದರರ ಮೆಚ್ಚುಗೆ ಇವನ್ನು ಸತ್ಕಾರ ಮತ್ತು ಕೃತಜ್ಞತೆಯ ವಂದನೆ ಈ ಕವನಗಳಲ್ಲಿ ನೋಡಬಹುದು. 'ಹಾರೈಕೆ' ಎಂಬ ಕೊನೆಯ ಹಾಡು ಹೊಸ ಪೀಳಿಗೆಯ ಮುಂದೆ ಉನ್ನತ ಆದರ್ಶಗಳನ್ನು ಎತ್ತಿ ಹಿಡಿದು ಕವಿಯ ಮನೋಧರ್ಮದಲ್ಲಿ ಒಂದು ಭಾಗವಾಗಿದ್ದ ಶಿವದೃಷ್ಟಿಯನ್ನೂ ಇತ್ಯಾತ್ಮಕ ಪ್ರವೃತ್ತಿಯನ್ನೂ ಚೆನ್ನಾಗಿ ಮೂಡಿಸಿರುತ್ತದೆ. ಅದರಲ್ಲಿಯ ಕೆಲವು ಸಂಕ್ತಿಗಳಿವು :

ಕಣಿವೆ ತಳದೊಳು ಕೊಳೆವ ಜೊಂಡಾಗದಿರು ಮಗುವೆ
ಬೆಟ್ಟಗುಡ್ಡದ ಹೀರಿ ತೇಗವಾಗು
ತಲೆಯ ಬಾಗದೆ ನಿಂತು ಕೊಂಬೆರೆಂಬೆಯ ಚಾಚಿ
ಮಳೆ ಬಿಸಿಲುಗಾಳಿಗಳ ತೊಟ್ಟಿಲಾಗು
ಹಸುರುಹಾವಸೆ ಹಬ್ಬಿ ಕೊಳೆವ ಕೊಳವಾಗದಿರು

ಲಲಿತ ನಿರ್ಮಲ ಜಲದ ಕಾಸಾರವಾಗು
ರವಿಕಿರಣ ಮಿಡಿದಿರಲು ಮಿಾನು ಹೂಹಕ್ಕಿಗಳ
ದುಂಬಿಗುಂಜಾರವದ ಸ್ವರಮೇಳವಾಗು
ಕಣ್ಣೆತ್ತಿಯೂ ನೋಡದಿರು ಈ ದೊಡ್ಡವರ ಸಣ್ಣ
ತನದತ್ತ ; ಬಿಟ್ಟುಬಿಡು ಅವರನ್ನು ಅತ್ತಕಡೆಗೆ
ಕೆಟ್ಟ ಇಟ್ಟಿಗೆಯಿಂದ ಕಟ್ಟದಿರು ಹೊಸ ಮನೆಯ
ನಾಳಿನಾಸೆಯ ಶಿಖರ ನೀನೆ ನಮಗೆ !

ಇನ್ನುಳಿದ ಸಂಕಲನಗಳಾದ ದೇವಶಿಲ್ಪ, ಕಾರ್ತೀಕ, ತೆರೆದ ದಾರಿ, ಗೋಡೆ ಇವುಗಳಲ್ಲಿ ಪ್ರಕೃತಿ, ಪ್ರೇಮ ಮುಂತಾದ ವಿವಿಧ ವಿಷಯಗಳ ವಿವಿಧ ಮುಖಗಳು ಭಾವಗೀತೆ, ಸುನೀತ, ಚುಟಕ ಮುಂತಾದ ವಿವಿಧ ಭಂಗಿಗಳಲ್ಲಿ ತಲೆದೋರಿವೆ. ಇವುಗಳಲ್ಲಿ ಹಿಂದಿನ ಮನೋಧರ್ಮವೇ ಮುಂದರಿದಿರುವುದಲ್ಲದೆ ಅಭಿವ್ಯಕ್ತಿಯ ಸಲೀಲತೆ ಮತ್ತು ಸಾಮರ್ಥ್ಯ ಬಹುಮಟ್ಟಿಗೆ ಕಂಡುಬರುತ್ತದೆ. ವಿಡಂಬನೆಯೂ ನಡುನಡುವೆ ಹಣಿಕಿದೆ. ಇವುಗಳಲ್ಲಿ ತನ್ನ ಒಟ್ಟಂದದಿಂದ, ನುಡಿಯ ಚೆಂದದಿಂದ ಕಾವ್ಯರಸಿಕರನ್ನು ಮುಗ್ಧಗೊಳಿಸಬಲ್ಲ ಕವನಗಳಲ್ಲಿ ಕೆಲವು ಇವು : ಒಂದು ಬೆಳಗು, ಗೆಲುವು, ಮುರಿದ ಒಲುಮೆಗೆ, ಶರಣಪಥ, ಹೊತ್ತು ಮುಳುಗಿತೆ, ಕಾರಣಿಕ, ದೇವಶಿಲ್ಪ, ದಾರಿ (ದೇವಶಿಲ್ಪ ಸಂಕಲನ), ಶಾರದೆ, ಪುರುಷಸೂಕ್ತ, ಚೆಲುವಿಗೆ, ಪಾರ್ಕಿನಲ್ಲಿ ಒಂದು ಸಂಜೆ, ಬೇಸಗೆಯ ದಿನಚರಿಯಿಂದ, ಬೇಡ ಇವಳು ಹತ್ತಿರ, ಕನಸಿನಿಂದ ನನಸಿಗೆ (ಕಾರ್ತೀಕ ಸಂಕಲನ), ನಿನ್ನ ಕಣ್ಣಿನಲ್ಲಿ, ಬೆಳಗಾಗದಿರಲಿ, ವಿವೇಕಾನಂದ, ಮುಂಬೈಜಾತಕ, ವಿಫಲ, ಸಂಕ್ರಮಣ, ರಿಪೇರಿ, ಸರಸ್ವತಿಗೆ ಗುಲಾಮರು, ಬೀಜದಿಂದ ಬೀಜಕ್ಕೆ (ತೆರೆದದಾರಿ ಸಂಕಲನ), ನನ್ನ ಹಣತೆ, ಗೋಡೆ, ಪ್ರಜ್ಞೆ, ಬೆತ್ತಲೆ, ನನ್ನ ಸುತ್ತ, ನನ್ನ ನಿನ್ನ ನಡುವೆ, ಚಂದ್ರನಿಗೆ, ಭೀಮಾಲಾಪ, (ಗೋಡೆ ಸಂಕಲನದಿಂದ). ಇವುಗಳ ವಿವರವಾದ ವಿಶ್ಲೇಷಣೆಗೆ ಇಲ್ಲಿ ಅವಕಾಶವಿಲ್ಲ. ಸ್ವಲ್ಪದರಲ್ಲಿ ಹೇಳುವುದಾದರೆ ಒಳ್ಳೆಯ ಭಾವಗೀತಕಾರನ ಸಕಲ ಸ್ಪಂದನಗಳು ಈ ಕವಿ ಹೃದಯದಲ್ಲಿ ಹುಟ್ಟಿ ತಮಗೆ ತಕ್ಕ ನುಡಿತೊಡಿಗೆ ತೊಟ್ಟಿವೆ. ಸಾಮಾನ್ಯವಾಗಿ ಅಂತರ್ಮುಖಕ್ಕಿಂತ ಬಹಿರ್ಮುಖ ವೃತ್ತಿಯಲ್ಲಿ, ವ್ಯಕ್ತಿನಿಷ್ಠತೆಗಿಂತ ವಸ್ತುನಿಷ್ಠೆಯಲ್ಲಿ ಈ ಕವಿಯ ಕಾವ್ಯಪ್ರಜ್ಞೆ ತನ್ನ ಜೀವಾಳವನ್ನು ಕಂಡಿದೆ. ಆದರೆ ಆಲ್ಲಲ್ಲಿ ಈ ಜೀವಾಳ ವನ್ನು ಮಿಾರಿ ಒಳಗಿನಿಂದ ಉಕ್ಕಿಬಂದ ಉತ್ಕಟವಾದ ನೋವು ನಲಿವುಗಳು, ಭಕ್ತಿಯ ಮೊರೆಗಳು ಸ್ವಾನುಭವದ ಅಂತರ್ಯವನ್ನು ಅಭಿವ್ಯಕ್ತಗೊಳಿಸಿವೆ. ಇವನ್ನು ತಡೆದು ನಿಲ್ಲಿಸುವುದು ಕವಿಗೆ ಸಾಧ್ಯವಾಗಿಲ್ಲ. ಎಲ್ಲ ಕವನ ಸಂಕಲನಗಳಲ್ಲಿ ಇವುಗಳ ಗುರುತು ಹೆಜ್ಜೆಗಳಿವೆ. ವಿಶೇಷವಾಗಿ ಕೊನೆಯ ಸಂಕಲನದ 'ನನ್ನ ಹಣತೆ, ವ್ಯರ್ಥ, ಗೋಡೆ, ನನ್ನ ಸುತ್ತ, ನನ್ನ ನಿನ್ನ ನಡುವೆ' ಈ ಕವನದಲ್ಲಿ ಯಾವುವೋ ಕುಟುಕುತ್ತಿರುವ ನೋವು ಗಳು, ಮಾಯದ ಗಾಯಗಳು ಅರ್ಥಪೂರ್ಣವಾದ ಆಕೃತಿಯನ್ನು ತಾಳಿರುತ್ತವೆ. ಈ 'ಗೋಡೆ' ಸಂಕಲನದಲ್ಲಿ '೬೭ನೆಯ ಪುಟದಿಂದ ಮುಂದಕ್ಕೆ ಇರುವ ಕವಿತೆಗಳೆಲ್ಲ

ಸಾಮಯಿಕ. ಬಾನುಲಿಗೋ ಮತ್ತಾವುದೋ ಪ್ರೇರಣೆಗೋ ಬರೆದವು' ಎಂದು ಮುನ್ನುಡಿಯಲ್ಲಿ ಹೇಳಲಾಗಿದೆ. ಇಲ್ಲಿ ಒಂದು ಪ್ರಶ್ನೆ ಸಹಜವಾಗಿ ಏಳುತ್ತದೆ. ಇವುಗಳಂತೆ ಬೇರೆ ಕೆಲವು ಕೂಡ–ಸಾಮಯಿಕವಾಗಿಲ್ಲವೇ? ಉದಾಹರಣೆಗೆ, 'ಮೈಸೂರು ವಿಶ್ವವಿದ್ಯಾಲಯದ ಚಿನ್ನದ ಹಬ್ಬ'ಕ್ಕೆ, 'ಕನ್ನಡ ರಾಜ್ಯೋದಯ' ಈ ಕವಿತೆಗಳನ್ನು ನೋಡಬೇಕು. ಇವು ಸಾಮಯಿಕವಾದರೂ ಅಂತಃಪ್ರೇರಣೆಯಿಂದ ಬರೆದವುಗಳು, ಆ ಮೇಲೆ ಗುರುತಿಸಿದಂಥವು ಬಾಹ್ಯಪ್ರೇರಣೆಯ ಒತ್ತಡದಿಂದ ಬರೆದವುಗಳು ಎಂದು ಊಹಿಸಬೇಕಾಗುತ್ತದೆ. ಕವಿಯಾದವನು ಇಂಥ ಪರಿಸ್ಥಿತಿಯನ್ನು ಇದುರಿಸಬೇಕಾಗುವುದೆಂಬುದು ವಸ್ತುಸ್ಥಿತಿಯಾದರೂ ಬಾನುಲಿಗೋ ಯಾವುದೋ ಪ್ರೇರಣೆಗೋ ಬರೆದ ಕವನಗಳಲ್ಲಿ ಬಲವಂತ ಮಾಘಸ್ನಾನವಿದ್ದರೆ ಅವನ್ನು ಬೆಳಕಿಗೆ ತರದಿರುವುದು ಯುಕ್ತವಾದೀತು ಎಂದು ತೋರುತ್ತದೆ.

ನವೋದಯ, ನವ್ಯ ಇವೆರಡೂ ಭಿನ್ನ ಕಾವ್ಯಮಾರ್ಗಗಳು ಎಂಬುದೀಗ ತೀರ ಬಳಕೆಯಾಗಿರುವ ಮಾತು. ಹೊಸ ಕವಿಗಳಲ್ಲಿ ಕೆಲವರು ತಮ್ಮನ್ನು ಯಾವುದಾದರೊಂದು ಮಾರ್ಗಕ್ಕೆ ಸೇರಿದವರೆಂದು ಹೇಳಿಕೊಳ್ಳುತ್ತಾರೆ. ಇನ್ನು ಕೆಲವರನ್ನು ಅವರ ವಾಚಕರು ವಿಮರ್ಶಕರು ಯಾವುದಾದರೊಂದು ಮಾರ್ಗಕ್ಕೆ ಸೇರಿಸಿಬಿಡುತ್ತಾರೆ. ನವೋದಯದಿಂದ ನವ್ಯಕ್ಕೆ 'ಪಕ್ಷಾಂತರ' ಮಾಡಿದವರು ಕೆಲವರೆಂದೂ ಗುರುತಿಸಿರುತ್ತಾರೆ. ಬಹುಶಃ ನವ್ಯದಿಂದ ನವೋದಯಕ್ಕೆ ತಿರುಗಿದವರು ಸದ್ಯ ಕಡಿಮೆ ಕಾಣುತ್ತದೆ. ಶಿವರುದ್ರಪ್ಪನವರು ಯಾವ ಮಾರ್ಗದವರು ಎಂಬ ಕುತೂಹಲದ ಪ್ರಶ್ನೆ ಕೆಲವರಲ್ಲಿ ಹುಟ್ಟಿರುತ್ತದೆ. ತಮ್ಮ 'ಸಂಜೆದಾರಿ' ಸಂಗ್ರಹದ ಪ್ರಸ್ತಾವನೆಯಲ್ಲಿ ಯಾರೋ 'ಇವುಗಳನ್ನು ನವ್ಯ ಕಾವ್ಯ ಎಂದು ಕರೆಯೋಣವೇ?' ಎಂಬ ಪ್ರಶ್ನೆಗೆ ತಾವು ಕೊಟ್ಟ ಉತ್ತರವನ್ನು ಅವರು ಹೀಗೆ ತಿಳಿಸಿದ್ದಾರೆ: 'ನನಗೆ ಕಾವ್ಯವನ್ನು ಯಾವ ಹೆಸರಿನಿಂದಲೂ ಕರೆಯಲಿಷ್ಟವಿಲ್ಲ. ಅದು ಎಂಥ ಕಾವ್ಯ ಎಂಬುದನ್ನು ಸಹೃದಯರು ನಿರ್ಣಯಿಸಲಿ. ನನ್ನ ದೃಷ್ಟಿಗಂತೂ ಕಾವ್ಯ ಒಂದೇ. ಅದು ನಿತ್ಯನೂತನವಾದುದು.' ಇದರಂತೆ ತಮ್ಮ 'ತೆರೆದ ದಾರಿ' ಸಂಕಲನಕ್ಕೆ 'ನೂರು ಕವಿಗೆ ನೂರು ದಾರಿ; ಯಾರೊಬ್ಬನೂ, ಇನ್ನೊಬ್ಬನ ದಾರಿಯ ಬಗ್ಗೆ ಕೊಂಕಿಸುವ ಅಗತ್ಯವಿಲ್ಲ. ಅವನವನು ತುಳಿದ ದಾರಿ ಕವಿತೆಯ ನಿಜವಾದ ದಾರಿಯಾಗಿದ್ದರಷ್ಟೇ ಸಾಕು, ಎಂದಿದ್ದಾರೆ. ಇದು ತುಂಬ ಸಮಂಜಸವಾದ ನಿಲವು ಎಂದು ತೋರುತ್ತದೆ. ಆದರೂ ವರ್ಗವ್ಯವಸ್ಥೆಯನ್ನು ಅಲ್ಲಗಳೆಯುವ ಇಂದಿನ ಕಾಲದಲ್ಲಿಯೂ ವರ್ಗೀಕರಣ ನಡೆದೇ ಇದೆ. ಯಾವೊಬ್ಬ ಕವಿ ಅಥವಾ ಕವಿಗಳು ವರ್ಗೀಕರಣದ ಹಿಡಿತಕ್ಕೆ ಸಿಕ್ಕದೆ ಹೋದಾಗ 'ನವೋದಯ', 'ನವ್ಯ' ಎಂಬ ಚೌಕಟ್ಟಿಗೆ ಸಿಕ್ಕದ ಇಬ್ಬರು ಕವಿಗಳು 'ಜಿ. ಎಸ್. ಶಿವರುದ್ರಪ್ಪ ಮತ್ತು ಚೆನ್ನವೀರ ಕಣವಿ' ಎಂಬ ಉಕ್ತಿ ಅನಿವಾರ್ಯವಾಗುತ್ತದೆ. ಇನ್ನೂ ಹಲವರು ಈ ಚೌಕಟ್ಟಿಗೆ ಸಿಕ್ಕದವರಿದ್ದಾರೆ ಎಂದು ಗಮನಕ್ಕೆ ಬರುವುದಿಲ್ಲ. ಹಾಗೆ ನೋಡಿದರೆ ಯಾವ ನಿಜವಾದ ಕವಿಯೂ ಯಾವಾಗಲೂ ಈ ಚೌಕಟ್ಟಿನ ಪಂಜರದ ಗಿಳಿಯಾಗಲಾರನು. ಅವನ ಬರೆವಣಿಗೆಯ ಒಂದೊಂದು ಘಟ್ಟದಲ್ಲಿ ಆಶಯ, ಆಕೃತಿ, ಶೈಲಿ, ದೃಷ್ಟಿ ಇವುಗಳ ಒಂದೊಂದು ಸಮಷ್ಟಿ ಪ್ರವೃತ್ತಿ

ಪ್ರಮುಖವಾಗಿರಬಹುದು. ಆದರೆ ಅದಕ್ಕೆ ಅವನು ಕಟ್ಟುಬಿದ್ದು ತನ್ನ ಕಾವ್ಯಸತ್ತ್ವವನ್ನು ಕಳೆದುಕೊಳ್ಳುವುದಿಲ್ಲ. ಅಂತರಂಗ–ಬಹಿರಂಗ ಜೀವನದ ಪ್ರವಾಹಕ್ಕೆ ಅವನು ತನ್ನ ಇಡೀ ಚೇತನವನ್ನು ತೆರೆದಿಡುತ್ತಾನೆ. ಅವುಗಳ ಅಭಿವ್ಯಕ್ತಿಯು ಕಾವು ಬಂದಾಗ ಅಂದಂದಿಗೆ ಸೂಕ್ತವಾದ ಆಕೃತಿಯನ್ನು ಆರಿಸಿಕೊಳ್ಳುತ್ತಾನೆ. ಶಿವರುದ್ರಪ್ಪನವರ ಕಾವ್ಯಪ್ರಜ್ಞೆ ಈ ದಾರಿಯಲ್ಲಿ ಬೆಳೆಯುತ್ತ ಹೊರಟಿದೆ ಎಂದು ನಾನು ತಿಳಿದಿದ್ದೇನೆ.

ನಿಜವಾಗಿ ಈ ಸಂದರ್ಭದಲ್ಲಿ ನವೋದಯ, ನವ್ಯ ಈ ಕಾವ್ಯಮಾರ್ಗಗಳ ಸತ್ಯತೆ ಎಷ್ಟು, ಈ ಪದಗಳ ಔಚಿತ್ಯವೇನು ಎಂಬುದನ್ನು ಹೊಸದಾಗಿ ಚಿಂತಿಸುವ ಕಾಲ ಬಂದಿದೆ. ಪದಗಳ ಮಟ್ಟಿಗೆ ಹೇಳುವುದಾದರೆ Romantic ಮತ್ತು Modernist ಇವಕ್ಕೆ ಅವು ಚಲಾವಣೆಯಲ್ಲಿದ್ದ ಸಂಕೇತಗಳೇ ಹೊರತು ಅರ್ಥಸಂವಾಹಿ ಪದಗಳಲ್ಲ. ಎರಡೂ 'ಹೊಸದು' ಎಂಬ ಅರ್ಥವನ್ನೇ ಕೊಡುತ್ತದೆ. ನವೋದಯದಲ್ಲಿ ಹೊಸ ಕನ್ನಡ ಕಾವ್ಯದ ಉದಯಕಾಲದ ಲಕ್ಷಣ ಸೂಚಿತವಾಗುತ್ತದೆ. ಅಂದರೂ ಉದಯಕಾಲ ಈಗ ಮುಗಿದು ಹೋಗಿದೆ. ಮೂಲತತ್ತ್ವವನ್ನು ಮನದಂದರೆ, 'ನೂರುಕವಿಗೆ ನೂರು ದಾರಿ' ಎಂಬುದೇ ಅಂತಿಮ ಸತ್ಯವಾಗುತ್ತದೆ. ಪ್ರಗತಿಶೀಲ, ದಲಿತ–ಮುಂತಾಗಿ ಮಾರ್ಗಶೋಧ ನಡೆದಿರುವಾಗ ಇವೆರಡೇ ಕಾವ್ಯಮಾರ್ಗಗಳೆಂದು ಹೇಗೆ ಹೇಳುವುದು ? ವಿಶ್ಲೇಷಣೆಯ ನೆಲೆಯಲ್ಲಿ ಪರಿಮಿತ ಅರ್ಥದಲ್ಲಿ Romantic ಮತ್ತು Modernist ಎಂಬುದಕ್ಕೆ ಆಶಯ—ಆಕೃತಿಗಳ ಒಂದು ಮಾರ್ಗ ಮುದ್ರೆಯಿರುವುದು ನಿಜ. ಸ್ಥೂಲವಾಗಿ ಕೆಲವು ಕವಿಗಳು ತಮ್ಮ ಮನೋಧರ್ಮಕ್ಕೆ ಅನುಗುಣವಾಗಿ ಒಂದೊಂದಕ್ಕೆ ಒಲಿದಿರುತ್ತಾರೆ. ಆದರೆ ಹಾಗೇ ಅವರಿರುವರೆಂದಾಗಲಿ ಇರಬೇಕೆಂದಾಗಲಿ ಸಾಧಿಸುವುದು ಸರಿಯೇ ? ಇಂದಿನ ಕಾಲ, ಸಮಷ್ಟಿಯನ್ನು ತನ್ನೊಳಗೆ ತಂದುಕೊಂಡು ಬೆಳೆಯುತ್ತ ಹೋಗುವ ಜಟಿಲತನ, ವೈವಿಧ್ಯಪೂರ್ಣ ವ್ಯಕ್ತಿತ್ವಸಾಧನೆಯ, ಸ್ವಪ್ರಾಮಾಣ್ಯದ ಕಾಲ. ಬೆಳೆಯುವ ಕಾಲದಲ್ಲಿ ವಿಸಂಗತಿಗಳನ್ನು ಕಟ್ಟಿಕೊಂಡು ಬಾಳಬೇಕಾದ ಕಾಲವಿದು. ಇಂದಿನ ಸಾಹಿತ್ಯ ನಮ್ಮ ದೇಶದಲ್ಲಿ ಮಾತ್ರವಲ್ಲ ಜಗತ್ತಿನಲ್ಲಿ ಎಲ್ಲ ಕಡೆ ಈ ಶ್ರುತಿಗೆ ನಡೆದ ಮೇಳ—ಸಂಗೀತ. ಹಳಗಾಲದ classical ಎಂಬ ಜೀವನ ಪ್ರವೃತ್ತಿಗಿಂತ ಹೊಸ ಕಾಲದಲ್ಲಿ Romantic ಎಂಬುದು ವಿಶಾಲ ಅರ್ಥದಲ್ಲಿ ಈ ಬಗೆಯ ವ್ಯಕ್ತಿಸ್ವಾತಂತ್ರ್ಯವಾದಿ. ಇಂದಿನ ಎಲ್ಲ ಒಳ್ಳೆಯ ಸಾಹಿತ್ಯವೂ ಈ ದೃಷ್ಟಿಯಿಂದ Romantic ಎಂಬುದರ ವಿಶಾಲ ಛತ್ರದ ಕೆಳಗೆ ಬರುತ್ತದೆ. Modernist, Progressive ಮುಂತಾದ ಎಲ್ಲ ಬಂದಿರುವ, ಬರಲಿರುವ ಪ್ರಕಾರಗಳೂ ಅದರ ಭಿನ್ನ ಭಿನ್ನ ಆವಿಷ್ಕಾರಗಳೇ ಆಗುತ್ತವೆ.

## ಚೆನ್ನವೀರ ಕಣವಿ

# ಬೆರಗಿನಿಂದ ನಿಬ್ಬೆರಗಿಗೆ

### ಶಿವರುದ್ರಪ್ಪನವರ ಕಾವ್ಯದ ಒಂದು ನೋಟ

೧

ವಿಶಾಲ ಪಥದಲಿ ಜೀವನ ರಥದಲಿ-
ನಿನ್ನಯ ಕರುಣೆಯ ಸಾರಥ್ಯದಲಿ
ನೀಲ ವಿತಾನದ ಹಂದರದಡಿಯಲಿ
ಮರ್ತ್ಯದ ಮಣ್ಣಿನ ಧೂಳಿಯಲಿ
ಹಗಲು ಇರುಳುಗಳ ಬೆಳಕಿನಲಿ
ನಡೆಯುತ್ತಿದೆ ಈ ಜೀವರಥ
ವಿಶಾಲವಾಗಿದೆ ನನ್ನ ಪಥ—[1]

ಶ್ರೀ ಜಿ. ಎಸ್. ಶಿವರುದ್ರಪ್ಪನವರ ಕಾವ್ಯ ಪ್ರಾರಂಭದಲ್ಲಿಯೇ ತನ್ನನ್ನು ಹಿಡಿದು ಹಿಂದೆಳೆಯಬಹುದಾದ ಕೆಲವು ಸಂಕುಚಿತ ಮೇರೆಗಳನ್ನು ಮೀರಿ, ವಿಶಾಲ ಪಥದಲ್ಲಿ ಧೈರ್ಯದ ಹೆಜ್ಜೆಗಳನ್ನಿಡುತ್ತ ಬಂದಿದೆ. ಹಾಗೆ ನಡೆದು ಬರುತ್ತಿರುವಂತೆಯೇ ತನ್ನ ಗೊತ್ತು-ಗುರಿಗಳನ್ನೂ ಕೆಲಮಟ್ಟಿಗೆ ಗುರುತಿಸಿಕೊಂಡಿದೆ. ದೈವೀಕರುಣೆಯಲ್ಲಿ ನಂಬಿಕೆ, ಮರ್ತ್ಯದ ಮಣ್ಣು ತನ್ನ ಜೀವನಕ್ಕೆ ಹಾಗೆಯೇ ಕಾವ್ಯಕ್ಕೆ ತೀರ ಹತ್ತಿರವಾದುದು ಎಂಬ ಅರಿವು, ಹಗಲಿನಂತೆ ಇರುಳಿನಲ್ಲಿಯೂ ಬೆಳಕಿನ ಕಿರಣಗಳನ್ನು ಕಾಣುವ ದೃಷ್ಟಿ—ಎಲ್ಲಕ್ಕೂ ಹೆಚ್ಚಾಗಿ ತನ್ನ ದಾರಿ ವಿಶಾಲವಾಗಿದೆ, ಯಾರ ಭಿಡೆ ಭಾರಗಳಿಗೂ ಒಳಗಾಗದೆ ತಾನು ಪ್ರಾಮಾಣಿಕನಾಗಿ ಅಲ್ಲಿ ಸಾಗಬಹುದು ಎಂಬ ಧೈರ್ಯ ಅವರ ಕಾವ್ಯವನ್ನು ಮುನ್ನಡೆಸಿಕೊಂಡು ಬಂದಿದೆ. ಜೀವನದ ನೋವು-ನಲಿವುಗಳನ್ನು ಸವಿದು, ಸುಮಧುರ ಒಲವನ್ನು ಹೀರಿ, ಸೃಷ್ಟಿಯ ಚೆಲುವಿಗೆ ಅದು ತನ್ನ ಎದೆಯನ್ನು ನೀಡಿದೆ. "ಗರ್ಗರ ನಾದದ ಗಾಲಿಯ ವೇಗ, ಅನಂತಯಾತ್ರೆಗೆ ಬಂಧುರ ರಾಗ" ಎಂಬುದು ಜೀವನದ ಸುಖ-ದುಃಖಗಳನ್ನು ಸುಲಭವಾಗಿ ಒಪ್ಪಿಕೊಂಡುದಾಗಿರದೆ ತಾನು ಬದುಕಿ ಬಾಳುತ್ತಿರುವ ಸಂಸ್ಕೃತಿಯನ್ನು ಸೂಚಿಸಿದೆ. ಶಿವರುದ್ರಪ್ಪನವರ ಕಾವ್ಯ ಈ ಎಳೆಯನ್ನು ಕೊನೆಯ ವರೆಗೂ ಹುರಿಗೊಳಿಸಿಕೊಂಡು ಬಂದಿದೆ. 'ದಾರಿ ನೂರಾರಿವೆ ಬೆಳಕಿನರಮನೆಗೆ' ಎಂಬ ಮಾತು ಅವರ ಕಾವ್ಯಕ್ಕೆ ತಕ್ಕ 'ಹಿನ್ನುಡಿ'ಯಾಗಿದೆ:

1 ರಥಯಾತ್ರೆ : ಸಾಮಗಾನ, ೧೯೫೧

ಬೇಡ ನನಗೆ ಸಿದ್ಧಾಂತಗಳ ರಾದ್ಧಾಂತ ;
ನನಗಿಲ್ಲ, ಇದೇ ಸರಿ ಇಷ್ಟೇ ಸರಿ ಎನುವ ಪಂತ.
ನಾ ಬಲ್ಲೆ, ಇವು ಎಲ್ಲ ಏರುವೆಯು
ಒಂದೊಂದು ಹಂತ.[1]

ಇಂಥ ತಿಳುವಳಿಕೆಯುಳ್ಳ ಕವಿ ಯಾವ ಪ್ರಲೋಭನೆಗೂ ಒಳಗಾಗದೆ, ತಾತ್ಕಾಲಿಕವಾದ ರಂಗು ರಭಸಗಳಿಗೆ ವಶನಾಗದೆ, ಪರಿಸರ ಸಂವೇದಿಯಾಗಿ, ಸುತ್ತಲಿನ ಆಗು-ಹೋಗುಗಳ ಚಿಂತನೆಯೊಡನೆ ತನ್ನನ್ನು ಅರ್ಥಮಾಡಿಕೊಳ್ಳುತ್ತ, ತನ್ನ ಅಭಿವ್ಯಕ್ತಿಗೆ ಶಕ್ತಿಯನ್ನೂ, ಹೊಳಪನ್ನೂ ತಂದುಕೊಳ್ಳುತ್ತ, ತನ್ನ ನಿಲವನ್ನು ನಿಧಾನವಾಗಿಯಾದರೂ ಸಮರ್ಥವಾಗಿ ದೃಢಗೊಳಿಸುತ್ತಾನೆ. ಶಿವರುದ್ರಪ್ಪನವರ ಕಾವ್ಯದ ಬೆಳವಣಿಗೆ ಈ ಬಗೆಯದು. ಹಾವಸೆ ಹಬ್ಬಿ ಕೊಳೆವ ಕೊಳವಾಗದೆ 'ಲಲಿತ ನಿರ್ಮಲ ಜಲದ ಕಾಸಾರ'ವಾಗುವ ಬಯಕೆ ಅದರ ಅಂತರ್ಯದಲ್ಲಿ ಮೊದಲಿನಿಂದಲೂ ಮಿಡಿಯುತ್ತಿದೆ. ಅದೇ ಹೊತ್ತಿಗೆ, ತೀರ ದೂರದ ಆದರ್ಶಕ್ಕೆ ಕೈಚಾಚದೆ ತನ್ನ ಕರ್ತವ್ಯದ ವಾಸ್ತವಪ್ರಜ್ಞೆಯನ್ನು ಅದು ಉಳಿಸಿಕೊಂಡಿದೆ :

ಸದ್ಯಕ್ಕೆ ಬೇಡ ಬಿಡು ದೂರ ಗಿರಿ ನೆತ್ತಿಗಳ
ಮಂಜಿನಾಚೆಗೆ ನಿಂತು ಕರೆವ ತಾರೆ.
ಇರುವ ಹಣತೆಗೆ ಮೊದಲು ಎಣ್ಣೆ ಬತ್ತಿಯನೂಡು,
ಹಳೆಯ ಪಣತದ ಕಾಳ ಮಾಡದಿರು ಸೂರೆ[2]

ತನ್ನ ಶಕ್ತಿಯನ್ನು ಹತ್ತು ದಿಕ್ಕಿಗೆ ಹರಿಸಿ ಅದನ್ನು ಅಲ್ಲಲ್ಲಿ ಇಂಗಿಸಿ ವ್ಯರ್ಥಗೊಳಿಸದೆ ಏಮ್ಮುಖವಾಗಿ ಸಾಗುವ ಏಕಾಗ್ರತೆಯನ್ನೂ ಇಲ್ಲಿ ಕಾಣುತ್ತೇವೆ :

ಕಣಿವೆ ತಳದೊಳು ಕೊಳೆವ ಜೊಂಡಾಗದಿರು ಮಗುವೆ,
ಬೆಟ್ಟಗುಡ್ಡವ ಹೀರಿ ತೇಗವಾಗು.
ತಲೆಯ ಬಾಗದೆ ನಿಂತು, ಕೊಂಬೆರೆಂಬೆಯ ಚಾಚಿ
ಮಳೆ-ಬಿಸಿಲು_ಗಾಳಿಗಳ ತೊಟ್ಟಿಲಾಗು.[3]

ನವೋದಯ–ನವ್ಯಮಾರ್ಗಗಳ ಕೃತ್ರಿಮವಾದ ತಿಕ್ಕಾಟದಲ್ಲಿ ಇವರ ಕಾವ್ಯ ಯಾವ ಅಬ್ಬರವೂ ಇಲ್ಲದೆ ತನ್ನ ನಿಯತಗತಿಯನ್ನು ಕಾಯ್ದುಕೊಂಡು ಬಂದಿರುವುದು ಇವರ ಜೀವನದ, ಹಾಗೆಯೇ ಕಾವ್ಯದ ಧೋರಣೆಯೂ ಆಗಿದೆ :

ಸೂರುಳ್ಕೆಯ ರಭಸಮತಿಯ
ಅಬ್ಬರಗಳ ನಡುವೆಯೂ

1 ಹಿನ್ನುಡಿ : ದೀಪದ ಹೆಜ್ಜೆ, ೧೯೫೯
2 ಹಾರೈಕೆ : ಅನಾವರಣ, ೧೯೬೩
3 ಅದೇ

ನಿಯತಗತಿಯ ತಾರಗೆಯೊಲು
ನೇರವಿರಿಸು ನನ್ನನು.[1]

೨

ಶಿವರುದ್ರಪ್ಪನವರ ಕಾವ್ಯದ ಸಮಗ್ರ ಸಮೀಕ್ಷೆಗೆ ಇಲ್ಲಿ ಕೈಹಾಕದೆ, ಅವರ ಕಾವ್ಯದ ಒಂದು ಪ್ರಮುಖ ಲಕ್ಷಣವಾದ ಆಶ್ಚರ್ಯಭಾವವನ್ನು ಕುರಿತು, ಅದು ಅವರ ಕಾವ್ಯದುದ್ದಕ್ಕೂ ಬೆಳೆದು ವೈಭವಗೊಂಡಿರುವ ರೀತಿಯನ್ನು, ಹಾಗೂ ಪ್ರಕೃತಿಸೌಂದರ್ಯ ಚಿತ್ರಸೌಂದರ್ಯದಲ್ಲಿ ನೆಲೆಗೊಂಡು ಅದರ ಆಚೆಗೆ ಆಗಾಗ ದೃಷ್ಟಿಹಾಯಿಸುವ ಪರಿಯನ್ನು ಅವರ ಪದ್ಯಗಳಿಂದಲೇ ನಿರೂಪಿಸುವದು ನನ್ನ ಉದ್ದೇಶವಾಗಿದೆ.

ನಿಸರ್ಗದ ನೂರು ದೃಶ್ಯಗಳು, ಜೀವನದಲ್ಲಿ ಆಕಸ್ಮಿಕವಾಗಿ ಒದಗುವ ಘಟನೆಗಳು, ಸುತ್ತುಮುತ್ತಲಿನ ವ್ಯಕ್ತಿಗಳ ನಡನಳಿಕೆಗಳು, ಯಾವುದಾದರೊಂದು ವಸ್ತುವಿನ ಬಗೆಗೆ ನಾವಿಟ್ಟುಕೊಂಡಿರುವ ಭಾವನೆ, ವಾಸ್ತವವಾಗಿ ಅದು ಇರುವ ರೀತಿ—ಹೀಗೆ ಹಲವು ಬಗೆಯ ಅಚ್ಚರಿಗಳು ನಮ್ಮ ನಿತ್ಯ ಜೀವನದಲ್ಲಿ ನಮಗೆ ಕಾದಿರುತ್ತವೆ. ಬಾಲ್ಯದಲ್ಲಿ ಈ ಆಶ್ಚರ್ಯಭಾವ ಪ್ರಬಲವಾಗಿರುವಷ್ಟು, ವಯಸ್ಸಾದಂತೆ, ವಾಸ್ತವತೆಯ ಅರಿವು ಹೆಚ್ಚಾದಂತೆ ಕಡಮೆಯಾಗುತ್ತ ಹೋಗುತ್ತದೆ. ಆದರೆ ಕವಿಯಲ್ಲಿ ಅದು ಒಂದಿಲ್ಲ ಒಂದು ರೀತಿಯಲ್ಲಿ ಉಳಿದುಕೊಂಡು, ಕಾಲಕಾಲಕ್ಕೆ ಆಯಾ ಅನುಭವದೊಡನೆ ಅಲ್ಪಸ್ವಲ್ಪ ಮಾರ್ಪಾಟುಗೊಂಡು ಅವನ ಕಾವ್ಯಕ್ಕೆ ಮೆರುಗನ್ನು ತಂದುಕೊಡುತ್ತದೆ. ನಿಷ್ಕಲ್ಮಷ ಹೃದಯದ ಮಗುವಿನ ಬೆರಗುಗಣ್ಣು ಅವನ ಬೆಳೆದ ಮನಸ್ಸಿನ ಹಿಂದೆ ಎವೆತೆರೆದಿಕ್ಕುತ್ತಲೇ ಇರುತ್ತದೆ.[2] ಈ ಲೋಕದ ಹಲಬಗೆಯ ಚೆಲುವು ಕವಿಯಲ್ಲಿ ಪ್ರೇರಿಸುವ ಬೆರಗೇ ಅವನ ಪರಿಭಾವನೆಯ ವಸ್ತುವಾಗುತ್ತದೆ. ಮೊದಲು ಯಾವುದೊ ರೂಢಿಗೊಳಪಟ್ಟ, ಸಾಮಾನ್ಯವೆನಿಸುವ ಒಂದು ಸಂಗತಿ—ಕವಿ ಅದನ್ನು ಕುರಿತು ಬರೆದ ಮೇಲೆ ನಮಗೆ ಹೊಸ ಲೋಕವೊಂದು ಗೋಚರಿಸುತ್ತದೆ. ಕವಿಯ ಈ ಅನುಭವದಿಂದ ನಮ್ಮ ಪ್ರಪಂಚದ ಅರಿವು ವಿಸ್ತಾರಗೊಂಡು, ಭಾವಗಳಾಗಿ ಹೊಸ ಚೆಲುವನ್ನೂ, ಒಲವನ್ನೂ ನಮಗೆ ಗಳಿಸಿಕೊಡುತ್ತದೆ.

ಪ್ರಕೃತಿಸೌಂದರ್ಯ, ಬಾಲ್ಯದ ನೆನಹುಗಳು, ಮಗುವಿನ ಮುಗ್ಧತೆ—ಇವು ಸಮರಸಗೊಂಡು ಶಿವರುದ್ರಪ್ಪನವರ ಕಾವ್ಯ ಸೃಷ್ಟಿಯ ಸೋಜಿಗವನ್ನು ಸೆರೆಹಿಡಿದು ನಮ್ಮ ವಿಸ್ಮಯಾನಂದವನ್ನು ಹೆಚ್ಚಿಸುತ್ತದೆ:

---

[1] ಶಕ್ತಿಯ ಕೊಡು : ಕಾರ್ತೀಕ, ೧೯೬೧

[2] "The poet is one who carries the simplicity of childhood into the powers of manhood ; who, with a soul unsubdued by habit, unshackled by custom, contemplates all things with the freshness and the wonder of a child"—S. T. Coleridge.

Coleridge's *Shakespearaen Criticism* II

ನೋಡು ಇದೊ ಇಲ್ಲರಳಿ ನಗುತಿದೆ
ಏಳು ಸುತ್ತಿನ ಮಲ್ಲಿಗೆ.
ಇಷ್ಟು ಹಚ್ಚನೆ ಹಸುರು ಗಿಡದಿಂ-
ದೆಂತು ಮೂಡಿತೊ ಬೆಳ್ಳಗೆ ![1]

ಇದು ಹಚ್ಚಹಸುರಿನ ಗಿಡದಲ್ಲಿ ಬೆಳ್ಳಗೆ ಹೊಳೆಯುತ್ತಿರುವ ಹೂವಿನ ಚೆಲುವಿಕೆಯನ್ನು ಮಾತ್ರ ಕುರಿತದ್ದಾಗಿರದೆ, ಹಚ್ಚಹಸುರಿನಲ್ಲಿ ಇಷ್ಟು ಬೆಳ್ಳಗೆ ಅದು ಹೇಗೆ ಮೂಡಿತೊ ಎನ್ನುವ ರಹಸ್ಯ ಚಿಂತನೆಯಿಂದ ಅವ್ಯಕ್ತದ ಬಗೆಗೆ ನಮ್ಮ ಆಲೋಚನೆಯನ್ನು ಅದು ಕುದುರಿಸುತ್ತದೆ. ಹೀಗೆ ಸಾಮಾನ್ಯವಾಗಿ ಕಾಣುವ ಒಂದು ವಸ್ತುವಿನಲ್ಲಿಯ ಅಸಾಮಾನ್ಯವಾದ ಗುಣವೊಂದನ್ನು ಕಂಡ ಸಂತೋಷಾಶ್ಚರ್ಯದಿಂದ ತನ್ನ ಹೃದಯದಲ್ಲಿ ಹೊಮ್ಮಿದ ಬೆಳಕನ್ನು ಕವಿ ಕಾವ್ಯದಲ್ಲಿ ಕಾಣಿಸಿದ್ದಾನೆ.

ಬಾನು ತನ್ನೆದೆಯನ್ನು ತೆರೆದು ಬೆಳಕೆಲ್ಲವನ್ನು ಹೊರಗೆ ತುಳುಕಿಸಿದಂತೆ ಬೆಳುದಿಂಗಳ ಹಾಲಿನಲ್ಲಿ ಜಗತ್ತು ಮಿಂದಿರುವಾಗ ಶಿಶು ಮೊಲೆ ಕುಡಿಯುವಾಗ ಬಿಸುಟಿದ ಆಟದ ವಸ್ತುಗಳಂತೆ ಊರೆಲ್ಲ ತೋರುತ್ತದೆ. ಕವಿಯ ಕಣ್ಣಿಗೆ ಬಾನು-ಬುವಿಗಳನ್ನು ತಾಯಿ-ಮಗುವಿನ ಪ್ರತಿಮೆಯಲ್ಲಿ ಹೀಗೆ ಕಂಡರಿಸಿ "ಬೆಳಕು ತುಳುಕುವ ಬಾನಿನಡಿಯಲ್ಲಿ ಜಗವೆನಿತು ಕಿರಿದಾಗಿದೆ"[2] ಎಂದಾಗ ಕವಿಯ ನಿರೂಪಣೆಯಲ್ಲಿಯ ರಸಾಂಶ ನಮ್ಮ ಮನಸ್ಸನ್ನು ಆರ್ದ್ರಗೊಳಿಸುತ್ತದೆ. ಒಂದು ಸುಂದರ ಹೂವನ್ನು ಅರಳಿಸಿದ ಲತೆಯಂತೆ ನಸುನಗುವ ಕಂದನೊಡನೆ ತಾಯಿ ಮಗ್ನಳಾಗಿರುವಾಗ ಒಲವಿನ ಹಿರಿಮೆಗೆ ಕವಿಯ ಮನಸ್ಸು ಮತ್ತದೇ ಬೆರಗನ್ನು ಪಡೆಯುತ್ತದೆ:

ಜಗವನಾಳುವ ಒಲವು ಮೈದೋರಿದೀ ಪರಿಗೆ
ಬೆರಗು ಮಾನದೊಳಿರುವೆ ಬಾನಿನಂತೆ ![3]

ಕತ್ತಲೆಯ ರಾತ್ರಿಯಲ್ಲಿ ಮಿನುಗುವ ನಕ್ಷತ್ರಮಾಲೆಯನ್ನು ಕಂಡಾಗ ಕವಿಯ ಮನಸ್ಸು ಅಚ್ಚರಿಗೊಳ್ಳುವದು ಅವುಗಳ ಹೊಳಪಿಗಲ್ಲ—

ಇಂಥ ರತ್ನಾಭರಣಲೋಕವನು ಆ ಹಗಲು ತನ್ನ ಒಳಗೆ
ಮುಚ್ಚಿದಚ್ಚರಿಗೀಗ ಮನವು ಬೆರಗು ![4]

ಕವಿಯ ಮನಸ್ಸಿನಲ್ಲಿ ಆಗಾಗ ಮೂಡುವ ಭಾವಗಳು ಮತ್ತು ಆ ಭಾವತನ್ಮಯತೆಯಲ್ಲಿ ಪ್ರಕೃತಿಯ ಚೆಲುವನ್ನು ಸವಿದು ಮಗುವಿನ ಅನಂತ ಚಟುವಟಿಕೆಗಳೊಂದಿಗೆ ಆ ಚಿತ್ರಗಳನ್ನು ಅನ್ವಯಿಸುವಾಗ ಸಹಜವಾದ ಸ್ವಭಾವೋಕ್ತಿಯಿಂದ ಇವರ ಕಾವ್ಯ ಸೊಗಯಿಸಿ, ತಕ್ಕ ವಾತಾವರಣವನ್ನು ಸೃಷ್ಟಿಸಿ ತನ್ನ ವೈಶಿಷ್ಟ್ಯವನ್ನು ಮೆರೆಯುತ್ತದೆ.

---

1 ಮಲ್ಲಿಗೆ : ಚೆಲುವು–ಒಲವು, ೧೯೫೩
2 ಒಂದಿರುಳು : ಚೆಲುವು–ಒಲವು, ೧೯೫೩
3 ತಾಯಿಗೆ : ಚೆಲುವು–ಒಲವು, ೧೯೫೩
4 ಒಂದು ಸಂಜೆ : ಚೆಲುವು–ಒಲವು, ೧೯೫೩

ಈ ದೃಷ್ಟಿಯಿಂದ ಮುಂದಿನ ಪದ್ಯಭಾಗಗಳನ್ನು ಇಲ್ಲಿ ಅವಲೋಕಿಸಬಹುದು: ಮನೆಯ ಹೆಂಚಿನ ಮೇಲೆ ಪಟ ಪಟ ಹನಿಯುದುರಿ ಎಲ್ಲೆಡೆಗೂ ಮಳೆ ಧುಮುಕಿದಾಗ—

ಅಲ್ಲೂ ಹೋದರು ಇಲ್ಲೂ ಹೋದರು
ಎಲ್ಲರನೂ ಮಾತಾಡಿಸುವಾಸೆ !
ಮರದಡಿ ಗಿಡದಡಿ ಹಸುರಿನಲಿ
ಕಡೆಗಾ ಚರಂಡಿ ಕೊಳಚೆಯಲಿ
ಹರಿದಾಡುವ ಮುಗಿಲಿನ ಮಕ್ಕಳಿಗೆ
ಈ ನೆಲವೆಂದರೆ ಎನಿತಾಸೆ ![1]

ಕುಲುಕುಲು ನಗೆಯಲ್ಲಿ ಸುಳಿಗಾಳಿಯ ಕಿವಿಯಲ್ಲಿ ಏನೊ ಮಾತಾಡುತ್ತಿರುವಂತೆ ತೋರುವ ತೆರೆಯ ತೆರೆಗಳನ್ನು ಸಂಬೋಧಿಸುವಾಗ—

ಸರಸಿ ಪಡೆದ ಮುಗುಳುನಗೆಯ
ಸುಳಿದಾಡುವ ಮಕ್ಕಳೇ
ಕೆರೆಯ ಮನಸು ದಡಕೆ ನುಡಿವ
ತುಂಬೊಲವಿನ ನುಡಿಗಳೇ[2]

ಮರದಲ್ಲಿ ಬಂದು ಕುಳಿತು ಹಕ್ಕಿಗಳ ಧ್ವನಿ ಕೇಳಿದಾಗ—

ಮನೆ ಸುತ್ತ ಕೊಡೆನಿಂತ ಮರದ ಕೊಂಬೆಯ ತುಂಬ
ಚಿಲಿಪಿಲಿ ಸೊಲ್ಲು
ಮರಮರದಲ್ಲು ನಡೆದಿದೆ ಪ್ರೈಮರೀ ಸ್ಕ್ಯಾಲು ![3]

ಸಂಜೆ ಪಾರ್ಕಿನಲ್ಲಿ ಕುಳಿತು ಬದಿಯ ಮರದಲ್ಲಿಯ ಹಕ್ಕಿಯಿಂಚರ ಕೇಳಿದಾಗ ಆ ಮರವನ್ನು ಕುರಿತು ಹೊಸ ಪ್ರತಿಮೆಯೇ ಮೈದಾಳುತ್ತದೆ—

ಈ ಪಾರ್ಕಿನ ಮರಮರವೂ
ನೂರು ಹಕ್ಕಿಯಿಂಚರದಲಿ
ಗಿಲಿಗಿಚ್ಚಿಗಳಾಗಿವೆ ![4]

ಹುಣ್ಣಿಮೆಯ ಚಂದ್ರ ಉದಯಿಸಿದ್ದಾನೆ. ಕ್ಷಿತಿಜದಲ್ಲಿ ಗುಡ್ಡಗಳ ಸಾಲು ಮಸು ಮಸುಕಾಗಿ ಗೋಚರಿಸುತ್ತಿದೆ. ತೆಂಗು ಅಡಕೆಗಳು ಆ ನೆಳಲು-ಬೆಳಕಿನಲ್ಲಿ ಎತ್ತರವಾಗಿ ಕಾಣುತ್ತಿವೆ. ಮಗುವೊಂದು 'ಚಂದುಮಾಮ ಬಾ' ಎಂದು ತನ್ನ ಪುಟ್ಟ ಕೈಗಳನ್ನು

---

[1] ಮಳೆ : ಚೆಲುವು-ಒಲವು
[2] ಅಲೆಗಳು : ಚೆಲುವು-ಒಲವು
[3] ಅರೆಮುಗಿದ ಕವನ : ದೀಪದ ಹೆಜ್ಜೆ, ೧೯೫೫
[4] ಪಾರ್ಕಿನಲ್ಲಿ ಒಂದು ಸಂಜೆ : ಕಾರ್ತೀಕ, ೧೯೬೦

ಆಕಾಶದ ಕಡೆಗೆ ಬೀಸುತ್ತಿದೆ. ಇಂಥ ಒಂದು ವಾತಾವರಣದಲ್ಲಿ ಕವಿ ಮೂಡಿಸಿದ ಚಿತ್ರ ಎಷ್ಟೊಂದು ಹೊಚ್ಚ ಹೊಸತಾದದ್ದು !—

ಯಾರು ಕೊಟ್ಟರೋ ಬಾನಿಗೊಂದು ಬಂಗಾರದ ಮಡಲು !
ಸಂಜೆ ಬೆಳಕಿನಲಿ ಸಾಲು ಗುಡ್ಡಗಳು
ಅನಂತತೆಯ ಮೊದಲು !
ತೆಂಗು ಅಡಕೆಗಳು ಜಿರಾಫೆ ಕೊರಳನು
ಮೇಲಕೆತ್ತಿ ನಿಲಲು.[1]

ಬಾನ ತುಂಬ ಹರಡಿದ ಮೋಡದಲ್ಲಿ ಚಂದಿರ ಸ್ವಲ್ಪ ಮರೆಯಾದಾಗ :

ಬಾನ ಬಟ್ಟೆಗುಜ್ಜಿ ಉಜ್ಜಿ ಮುರುಕು ಸೋಪಿನಂತೆ
ತೆಳ್ಳಗಾದ ಚಂದಿರ.
ಮೈಲಿಗೆಯೊಳು ತೇಲುತಿಹನು ಕವಿದ ಹಾಗೆ ಮಂಪರ.[2]

ಹೀಗೆ ನವ್ಯೋನವವಾಗಿ ಮೂಡಿದ ಪ್ರಕೃತಿ ಚಿತ್ರಗಳು ಎಳೆ ಮಗುವಿನ ಬೆರಗುಗಣ್ಣಿನ ಮೂಲಕ ನಿರಹಂಕಾರದ ಆನಂದವನ್ನು ಓದುಗನಿಗೆ ಒದಗಿಸುತ್ತವೆ.

೩

ಮೊದಲಿನ ಮುಗ್ಧಸ್ನಿಗ್ಧ ಬೆರಗು. ಕವಿಯು ಬೆಳೆದಂತೆ ಅನುಭವ ದಟ್ಟವಾಗುತ್ತ ಪ್ರಬುದ್ಧ ಪರಿಭಾವನೆಗೆ ಎಡೆಗೊಟ್ಟು ಮಾನವ–ಪ್ರಕೃತಿ–ಜೀವನಗಳ ಸಂಗಮದಲ್ಲಿ ಮುಳುಗಿ ಬೇರೊಂದು ಮೆರುಗನ್ನು ಪಡೆಯುತ್ತದೆ. ಸಂತೋಷಾಶ್ಚರ್ಯ, ಚಿಂತನೆಯಿಂದ ಸಖೇದಾಶ್ಚರ್ಯವಾಗಿ ಪರಿಣಮಿಸುತ್ತದೆ. 'ಜಡೆ' ಕವಿತೆಯಲ್ಲಿ ಅದು ಈ ಹಿಂದೆಯೇ ಹೊಳಹುಗೊಂಡಿತ್ತು :

ಎಲ್ಲವೂ ರಮ್ಯವೆಲ್ಲ !
ಜಡೆಯಾಚೆ ತಿರುಗಿಸಿದ ತಾಯ ಮುಖ ಮಾತ್ರ ಇಂದಿಗೂ
ಕಾಣದಲ್ಲ ![3]

ಚಿರನೂತನವಾದ ಚಿರಂತನ ಸೌಂದರ್ಯದ ದರ್ಶನವಿನ್ನೂ ನಮಗೆ ಆಗಿಲ್ಲ. ನಮಗೀಗ ಕಂಡಿರುವದು ಅದರ ಬೇರೆ ಬೇರೆ ವಿಲಾಸಗಳು. ಅದನ್ನು ಕಾಣುವವರೆಗೂ ಮನಸ್ಸಿನ ಕಾತರ, ಎದೆಯ ತುಡಿತ ಇದ್ದದ್ದೇ. ಕವಿತೆಯನ್ನು ಓದುತ್ತ ಹೋದಂತೆ ಸಾಮಾನ್ಯ ಭಾವಸ್ಥಿತಿ ಭವ್ಯತೆಯಲ್ಲಿ ನಿಂತು ಹೊಸ ದರ್ಶನವನ್ನು ಪಡೆಯುತ್ತದೆ.

ಪ್ರಕೃತಿಯಲ್ಲಿ ಪ್ರತ್ಯಕ್ಷವಾದ ಪ್ರತೀಕಗಳು ಭಾವಪ್ರತೀಕಗಳಾಗಿ ಮಾರ್ಪಟ್ಟು, ಭಾವಸಾಂದ್ರತೆಯಿಂದ ಸಂಕೀರ್ಣಾನುಭವಗಳ ಅಭಿವ್ಯಕ್ತಿಗೆ ದಾರಿಮಾಡಿಕೊಟ್ಟಿವೆ.

1 ಒಂದು ಚಿತ್ರ : ದೀಪದ ಹೆಜ್ಜೆ
2 ಮಬ್ಬಿನಿರುಳು : ದೀಪದ ಹೆಜ್ಜೆ
3 ಜಡೆ : ಚೆಲುವು–ಒಲವು

ಇರುಳಿನಲ್ಲಿ ಸುರಿವ ಮಳೆಯ ಪ್ರತಿಮೆಯ ಮೂಲಕ ಶ್ರೀಕೃಷ್ಣನ ಜೀವನದ ಆಗಮ್ಯತೆ ಹಾಗೂ ಉದ್ದೇಶದ ಪ್ರತೀತಿಯುಂಟಾಗುತ್ತದೆ :

ಮತ್ತೆ ಮತ್ತೆ ಅಂಧಕಾರ
ಮಳೆ ಹನಿಗಳ ಪಂಜರ
ದೈತ್ಯಸೆರೆಯ ಕಂಬಿಯೊಳಗೆ
ಬಂತು ದೇವಕುಂಜರ[1]

ಮನೆ ಮನೆಯ ಮುಂದೆ ಕುಡಿಯಾಡಿಸುವ ದೀಪಾವಳಿಯ ಕಿರುಹಣತೆಗಳು 'ಕತ್ತಲ ಗೋವರ್ಧನವನ್ನೆತ್ತುವ ಸಾಸಿರ ಶ್ರೀಕೃಷ್ಣನ ಬೆರಳು'ಗಳಂತೆ ಯುಗಯುಗದವತಾರದ ಭವ್ಯಸ್ಮೃತಿಯನ್ನು ಉದ್ದೀಪನಗೊಳಿಸುತ್ತವೆ. ಬೆಳಕಿನ ಆ ಉತ್ಸಾಹ ಉಲ್ಲಾಸದಿಂದ

ಹಣತೆಯ ಹಡಗಾಗಿವೆ ಮನೆ ಮನೆಯೂ
ಕತ್ತಲ ಕಡಲೊಳಗೆ.[2]

ಪ್ರಕೃತಿಸೌಂದರ್ಯ ಹಾಗೂ ಜೀವನ ಸೌಂದರ್ಯಗಳು ಒಂದರೊಳಗೊಂದು ಬೆಸೆದುಕೊಂಡು ಮೂರ್ತಿಗೊಳ್ಳುವ ದೇವಶಿಲ್ಪವನ್ನು ಕವಿಯ ಪ್ರಬುದ್ಧ ಪರಿಭಾವನೆ ಗುರುತಿಸಿ, ಇರುಳಿನಲ್ಲಿ

ಮೊಗ್ಗಿನೆದೆಯ ಗರ್ಭಗುಡಿಯ
ಅತಿನಿಗೂಢ ಗಹನದಲ್ಲಿ
ಚೆಲುವು ಶಿಲ್ಪ ಕೆತ್ತುತಿರಲು
ಬಾನ ಕಮಂಡಲುವಿನಿಂದ
'ಓಂ ಸ್ವಸ್ತಿ' ತುಳುಕಲು.[3]

ಅರಳಿ ನಿಂತ ಹೂವು ಚೆಲುವೊಂದೇ ಗೆಲುವುದರ ಪ್ರತೀಕವಾಗಿ ನಿಲ್ಲುತ್ತದೆ. ಬೆಳಕು-ಕತ್ತಲೆಯ ಸಮರ ಇಂದಿಗೂ ಕೊನೆಗಾಣದೆ ಸಾಗಿರುವಾಗಲೂ

ಇರುಳ ನಭದಲಿ ಬೆಳಕು ತಾರೆಯ ನೂರು ಧ್ವಜವನು ನಟ್ಟಿದೆ[4]

ಎಂಬ ತಿಳುವಳಿಕೆಯನ್ನು ಈ ಚಿತ್ರಗಳು ನಮಗೆ ನೀಡುತ್ತವೆ. 'ಗರಿ ಮೂಡಿದ ಕನಸಿನಂತೆ ಬೆಳ್ಳಕ್ಕಿಯ ಮಾಲೆ' 'ದಿವ್ಯಸುಂದರ ಕವನದೊಂದು ಸಾಲಿ'ನಂತೆ ಸೃಷ್ಟಿಯ ಚೆಲುವಿನ ಒಂದೊಂದೇ ಪುಟವನ್ನು ನಮ್ಮ ಕಣ್ಣೆದುರು ತೆರೆಯುತ್ತ ನಮ್ಮ ಮನಸ್ಸನ್ನು ಹದಗೊಳಿಸುತ್ತವೆ.

---

[1] ಕೃಷ್ಣಶಕ್ತಿ : ದೇವಶಿಲ್ಪ, ೧೯೫೯
[2] ದೀಪಾವಳಿ : ದೇವಶಿಲ್ಪ, ೧೯೫೯
[3] ಗೆಲುವು : ದೇವಶಿಲ್ಪ, ೧೯೫೯
[4] ಮುರಿದ ಒಲುಮೆಗೆ : ದೇವಶಿಲ್ಪ, ೧೯೫೯

ಜೀವನದ ಚೆಲುವು-ಒಲವಿಗೆ, ನಯ ವಿನಯಕ್ಕೆ ಪ್ರಕೃತಿ ಪುಟವಿಟ್ಟಂತೆ ಆಳವಾದ ನೋವಿನ ಅನುಭವಕ್ಕೂ ಅದು ಪ್ರತಿಮೆಯಾಗಿ ನಿಲ್ಲದಿಲ್ಲ. ನೆರಳಿಲ್ಲದ ದಾರಿಯಲ್ಲಿ ಪಯಣ ಸಾಗಿದಾಗ

ನೀಲಿಯ ನಿರ್ಭಾವದ ಬಾನೋ
ಬಿರು ಬಿಸಿಲಿನ ಗೋಂ[1]

ಎನಿಸಿದರೆ ಆಶ್ಚರ್ಯವಿಲ್ಲ. ಹಿಂದಿನ ಜೀವನದಲ್ಲಿ ಸುತ್ತಲೂ ಅನ್ಯಾಯಗಳ ಸಂತೆ ಸಾಗಿರುವಾಗ, ಹಗಲೊ ರಾತ್ರಿಯೊ ಇವನ ಬಾಳನ್ನು ತಿವಿಯುತ್ತ, ಗಾಸಿಗೊಳಿಸುತ್ತಿರುವಾಗ ನೊಂದವರ ಪ್ರತಿನಿಧಿಯಂತಿರುವ ಈ ವ್ಯಕ್ತಿಯನ್ನು

ಬೆಂಕಿಬಾಯನು ತೆರೆದು ನಗುವ ಮೂಡಲ ಬಾನು
ನೂರು ತೂತಿನ ಛತ್ರಿ ಬಿಚ್ಚುವಿರುಳಿನ ಬಾನು
ನಿಡುಸುಯ್ಲಿನೊಲು ನಡೆದ ಗಾಳಿಗಳ ಹೊನಲು–
ಎಲ್ಲವೂ ಇವನನ್ನು ಅರೆಯುತಿಹವು.[2]

ವ್ಯಕ್ತಿ ವ್ಯಕ್ತಿಯ ನಡುವೆ ಅಸೂಯೆ, ಅಹಂಕಾರ, ತಪ್ಪು ತಿಳುವಳಿಕೆಗಳ ಗೋಡೆಗಳನ್ನೆಬ್ಬಿಸಿಕೊಂಡು ಬದುಕುತ್ತಿರುವ ಮನುಷ್ಯಜಾತಿಯ ಸ್ವಭಾವವನ್ನು ಕಂಡು ಕವಿಗೆ ಆಶ್ಚರ್ಯವೆನಿಸುತ್ತದೆ. ಪರಸ್ಪರ ಅರಿವು, ಆತ್ಮೀಯತೆಗಳಿಗೆ ಹೊರತಾದ ಆವರಣದಲ್ಲಿ ಸಿಕ್ಕುಬಿದ್ದ ಜೀವದ ವೇದನೆಯನ್ನು ಯಾರು ಅರ್ಥಮಾಡಿಕೊಳ್ಳುತ್ತಾರೆ?

ಸದಾ ಹೊಯ್ಯುವ ಮಳೆ, ಸುಯ್ಯುವ ಗಾಳಿ ನನ್ನ ನಿನ್ನ ನಡುವೆ
ಉರಿಯುವ ಬೇಸಗೆ, ಕೆಂಡದ ಹಾಸುಗೆ ನನ್ನ ನಿನ್ನ ನಡುವೆ
ಉದುರುವ ಎಲೆ, ಉರಿಯುವ ಚಿತೆ ನನ್ನ ನಿನ್ನ ನಡುವೆ
ಹದ್ದಿನ ರೆಕ್ಕೆಯ ನೆರಳೂ, ಬೇಟೆ ನಾಯಿಗಳ ಬೊಗಳೂ ನನ್ನ ನಿನ್ನ ನಡುವೆ[3]

ಲೋಕದ ದುರ್ನಡತೆಗೆ ಕವಿ ತೋರಿಸುವ ಇಂಥ ವಿಷಾದಪೂರ್ಣ ಪ್ರತಿಕ್ರಿಯೆಯಲ್ಲಿ ಹೊಯ್ಯುವ ಮಳೆ, ಸುಯ್ಯುವ ಗಾಳಿ, ಉರಿಯುವ ಬೇಸಗೆ, ಉದುರುವ ಎಲೆ—ಇವೇ ಮೊದಲಾದ ಪ್ರಕೃತಿಯ ಋತುಮಾನದ ಕ್ರಿಯೆಗಳನ್ನು ಎಷ್ಟೊಂದು ಸಮರ್ಥವಾಗಿ ಜ್ವಲಂತರೂಪಕವಾಗಿ ಭಾವತೀವ್ರತೆಗೆ ಕವಿ ಬಳಸಿಕೊಂಡಿದ್ದಾನೆಂಬುದು ಗಮನಾರ್ಹವಾಗಿದೆ. ಜೀವನಾನುಭವದೊಂದಿಗೆ ಪ್ರಕೃತಿಯ ರೌದ್ರ ಮುಖವೂ ಇಲ್ಲಿ ಕಾಣಿಸಿಕೊಂಡು ಕಾವ್ಯಾಭಿವ್ಯಕ್ತಿಗೆ ಕಸುವನ್ನೂ ಕಾವನ್ನೂ ನೀಡಿದೆ.

ಪ್ರಕೃತಿ, ಜೀವನದ ಪ್ರತೀಕವಾಗಿ ಮೊದಲಿನ ಮುಗ್ಧವಾದ ಬೆರಗು ಈಗ ಪ್ರಬುದ್ಧ ಚೇತನದ ನಿಬ್ಬೆರಗಾಗಿದೆ:

---

1 ನೆರಳಿಲ್ಲದ ದಾರಿ: ದೀಪದ ಹೆಜ್ಜೆ
2 ಇವನು: ದೀಪದ ಹೆಜ್ಜೆ
3 ನನ್ನ ನಿನ್ನ ನಡುವೆ: ಗೋಡೆ, ೧೯೭೩

ಎಷ್ಟೊಂದು ಸಿಹಿನೀರ ಹೊಳೆ ಹರಿದರೂ ತೀರದಿದೆ
ಉಪ್ಪು ಕಡಲಿನ ಕಪ್ಪು ಬಾಯಾರಿಕೆ[1]

ಅಕ್ಕಮಹಾದೇವಿಯ ಮಹಾವ್ಯಕ್ತಿತ್ವ ಸಾಧನೆಯನ್ನು ಚಿತ್ರಿಸುತ್ತ, ಆಕೆಯ ಅಮೃತ ಮುಹೂರ್ತದ ಸಿದ್ಧಿಯನ್ನು ನಿಸರ್ಗದ ನಿಲವಿನಲ್ಲಿಯೇ ಕವಿ ಭವ್ಯವಾಗಿ ನಿತಾಂತ ರಮಣೀಯವಾಗಿ ನಿಲ್ಲಿಸಿದ್ದಾನೆ :

ಬೆಳಕುಮೈ ನಡೆದಿತ್ತು ಕತ್ತಲೆಯ ಮುಡಿಗೆದರಿ
ಚಿಕ್ಕೆ ಹೆಜ್ಜೆಯನಿಟ್ಟು ಬಾನ ತುಂಬ !
ಬೆಳಗು ಬೆಳಗೊಳು ಬೆರೆದು ಒಲವಿನಲಿ ಮೂಡಿತ್ತು
ಶ್ರೀಶೈಲ ಜೂಟದಲಿ ಚಂದ್ರಬಿಂಬ ![2]

ಅದೇ ರೀತಿ ರವೀಂದ್ರರ ಕಾವ್ಯದ ವ್ಯಾಪ್ತಿಯನ್ನೂ ಘನತೆಯನ್ನೂ ಸೂಚಿಸುವ ಮಾತು ಸಾರವತ್ತಾಗಿ ಅರ್ಥವತ್ತಾಗಿ ಹೊಳೆಯುತ್ತವೆ :

ಮಿರುಗುವಿಬ್ಬನಿಯಿಂದ ಉರಿವ ಚಿಕ್ಕೆಯ ತನಕ
ಇರುವ ಚೆರಗಿನ ತಂತಿಯೆಲ್ಲವನು ಮಿಡಿದವನು[3]

ಇಂದಿನ ಕವಿಯ ಜೀವನವೂ, ಸೃಷ್ಟಿಯೂ ವಿಶಾಲವಾಗುತ್ತ ನಡೆದಂತೆ ಸುತ್ತುಮುತ್ತು ನಡೆದ ವಿದ್ಯಮಾನಗಳೆಲ್ಲ ಕಾವ್ಯಾನುಭವಕ್ಕೆ ಒಳಪಟ್ಟು ಹೊಸ ಭಾವ ಮೌಲ್ಯಗಳನ್ನು ನಿರ್ಮಿಸಬಲ್ಲವು. ರಾಕೆಟ್ಟಿನ ಸಾಧನ ಉಪಗ್ರಹಗಳನ್ನು ಆಕಾಶಕ್ಕೆ ಏರಿಸುತ್ತಿರುವಾಗ ನೆಲವನ್ನೆ ವಾಹನವನ್ನಾಗಿಸಿ ಜನಮನಗಳ ಹಾದಿಯಲ್ಲಿ ನಡೆದು ಮೆಲ್ಲನೆ ನುಡಿವ ವಿನೋಬಾ ಒಂದು ವ್ಯಕ್ತಿಯಲ್ಲ, ಶಕ್ತಿ. ಬಹಿರಂಗವನ್ನು ಗೆಲ್ಲುವ ರಭಸದಟ್ಟಹಾಸ ಸ್ಪೂಟ್ನಿಕ್ಕಿನ ಮುಖದಲ್ಲಿ ಜ್ವಲಿಸುತ್ತಿದ್ದರೆ, ಒಳಬಗೆಗಳ ನೋಲಿದು ಗೆಲುವ ಚಂದ್ರಹಾಸ ಇವನ ಕಣ್ಣುಗಳಲ್ಲಿ ಮಿನುಗುವುದನ್ನು ಕವಿ ಕಂಡಿದ್ದಾನೆ. ವಿಜ್ಞಾನದ ಅದ್ಭುತ ಸಾಧನೆಯೊಂದೇ ಸೋಜಿಗದ ವಸ್ತುವಲ್ಲ—

ಅಗೊ ಸ್ಪೂಟ್ನಿಕ್, ಇಗೊ ವಿನೋಬ,
ಈ ಎರಡೂ ಸೋಜಿಗ,
ಬಾನೊಳೊಂದು ಬುವಿಯೊಳೊಂದು ;
ಬೆರಗಾಗಿದೆ ಈ ಜಗ[4]

ಜಗತ್ತು ಬೆರಗುಗೊಂಡಿತೊ ಇಲ್ಲವೊ, ಆದರೆ ಸೂಕ್ಷ್ಮಸಂವೇದಿಯಾದ ಹಾಗೂ ಜೀವನದ ಮೌಲ್ಯಗಳನ್ನು ಶೋಧಿಸಿ ತೆಗೆಯುವ ಕವಿಯ ಮನಸ್ಸು ಮಾತ್ರ ಮೊದಲಿ

---

1 ಗಡಿಯಾರದಡಿಯಲ್ಲಿ : ದೀಪದ ಹೆಜ್ಜೆ
2 ಅಮೃತ ಮುಹೂರ್ತ : ದೀಪದ ಹೆಜ್ಜೆ
3 ಕವಿ ರವೀಂದ್ರರನ್ನು ಕುರಿತು : ತೆರೆದ ದಾರಿ, ೧೯೬೬
4 ಸ್ಪೂಟ್ನಿಕ್_ವಿನೋಬಾ : ದೀಪದ ಹೆಜ್ಜೆ

ನಿಂದಲೂ ಅದರ ಅನುಸಂಧಾನದಲ್ಲಿದೆ. ಇಷ್ಟೇ ಅಲ್ಲ, ಅದು ಒಮ್ಮೊಮ್ಮೆ ಅನುಭಾವದ ಹೊಂಬೆಳಕನ್ನೂ ನಮ್ಮ ಅಂತರಂಗಕ್ಕೆ ಹಾಯಿಸುತ್ತದೆ :

ಟಗರು ಮೈಯ ಬೆಟ್ಟಗಳಲಿ
ಹೆಪ್ಪು ನಿಂತ ಹಸುರುಗಳಲಿ
ಬಿಸಿಲ ನೆನಪು ತೂರಿ ಬಂದು
ಬೆರಗಾಗಿಸೆ ಮೌನವ,
ನೂರು ಹಕ್ಕಿಯಿಂಚರಗಳ
ಲಾಲಿಯಾಡಿ ನೇಯುತಲಿದೆ
ಕಾಣದ ದೇವಾಂಗವ ![1]

ಹೆಪ್ಪು ನಿಂತ ಹಸುರಿನಲಿ ಬಿಸಿಲ ನೆನಪು ತೂರಿ ಬರುವದೂ, ಮೌನವನ್ನೇ ಬೆರಗಾಗಿ ಸುವದೂ ಜೀವನದಲ್ಲಿ ಆಗೀಗ ಒದಗಬಹುದಾದ ಆಧ್ಯಾತ್ಮಿಕ ಅನುಭವದ ಬೆಳಕನ್ನು ಸೂಚಿಸುವುದಲ್ಲವೆ ಕೊನೆಯ ಮೂರು ಸಾಲುಗಳು ಪ್ರಕೃತಿಯ ಮೂಲಕ ಕವಿಯು ಅನುಭವಿಸುವ ಅವ್ಯಕ್ತ ಸೌಂದರ್ಯವನ್ನು ಅದ್ಭುತವಾಗಿ ಪ್ರತಿಮಿಸುತ್ತವೆ. 'ದೇವಾಂಗ, ಪದದ ಶ್ಲೇಷೆ ಇಲ್ಲಿ ಎಷ್ಟೊಂದು ಧ್ವನಿಪೂರ್ಣವಾಗಿದೆಯೆನ್ನುವದನ್ನು ಗಮನಿಸಬಹುದು.

ಬಿದಿಗೆ ಚಂದಿರ ಮುಳುಗುತ್ತಿರುವ ಒಂದು ಸಂಜೆಯ ಚಿತ್ರದೊಂದಿಗೆ ಶಕುಂತಲೆಯ ಜೀವನದ ಒಂದು ಚಿಕ್ಕ ಘಟನೆಯ ಪರಿಣಾಮದಾರುಣತೆಯನ್ನು ಸುಂದರವಾಗಿ ಸೃಷ್ಟಿಸುತ್ತದೆ 'ಶಾಕುಂತಲ ಸಂಧ್ಯೆ' ಎಂಬ ಚಿಕ್ಕ ಪದ್ಯ :

ಸಂಜೆ ಬಾನಿನಂಚಿನಲಿ
ಬಿದ್ದ ಬಿದಿಗೆ ಚಂದಿರ
ಶಚೀತೀರ್ಥದಾಳದಲ್ಲಿ
ಶಕುಂತಲೆಯ ಉಂಗುರ.
ದುರ್ವಾಸರ ಶಾಪವಿಗೋ
ಕವಿಯುತಿಹುದು ಸುತ್ತಲೂ
ಕಂಡುದೆಲ್ಲ ಜಾರುತಿಹುದು
ಮೆಲ್ಲನಿರುಳ ತಮದೊಳು.
ಅಸಹಾಯಕ ತಾರೆಬಳಗ
ಹನಿಗಣ್ಣೊಳು ನೀರವ
ಸುಯ್ಯುಗಾಳಿ ತಡೆಯುತಿಹುದು
ಉಕ್ಕಿ ಬರುವ ದುಃಖವ.[2]

ಈ ಪೌರಾಣಿಕ ಪ್ರಸಂಗವನ್ನು ಪ್ರಕೃತಿಯ ತಕ್ಕ ಸನ್ನಿವೇಶದೊಂದಿಗೆ ತಾದಾತ್ಮ್ಯ ಗೊಳಿಸಿದಾಗ ಉಂಟಾಗುವ ರಸಾನುಭವ ಸದ್ದಿಲ್ಲದೆ ನಡೆಯುವಂಥದು.

---

[1] ಮಲೆನಾಡಿನಲ್ಲಿ : ಕಾರ್ತೀಕ

[2] ಶಾಕುಂತಲ ಸಂಧ್ಯೆ : ತೆರೆದ ದಾರಿ

ತನ್ನ ಜೀವನದಲ್ಲಿ ಅನಿರೀಕ್ಷಿತವಾಗಿ ನುಗ್ಗುವ ಅಪಾಯವೊಂದನ್ನು ಕವಿ ಊಹಿಸಿ ಅದಕ್ಕೆ ನೀಡುವ ಎಚ್ಚರಿಕೆ ಅಥವಾ ಅದನ್ನು ಕುರಿತ ಸಂವೇದನೆ ಉಲ್ಕೆಯ ವಸ್ತು ಪ್ರತಿರೂಪದಲ್ಲಿ ಸಮರ್ಥವಾಗಿ ಬೆಳೆದು ಬಂದಿದೆ:

ಬಾರದಿರು ಉಲ್ಕೆಯಾಗಿ
ನೀನು ನನ್ನ ಬಾನಿಗೆ—
ಬೆಂಕಿ ಪೊರಕೆಯಿಂದ ಗುಡಿಸಬೇಡ ನೀನು ನನ್ನ
ನೀಲ ಪಥದ ಮೌನವ
ಇಲ್ಲಿ ಎಲ್ಲ ನಡೆಯುತಲಿವೆ
ಹಿಡಿದು ಮಿಡಿದು ಯಾವುದೋ ಒಂದು ರಾಗ ತಾಳವ.[1]

ನಗರ ಜೀವನದ ಗಡಿಬಿಡಿ ಗದ್ದಲಗಳಲ್ಲಿ ಬರುವ ಭಾನುವಾರದ ವಿರಾಮದ ಸೊಗ ಸೆಂಥದು !

ಈ ದಿನ ಭಾನುವಾರ—
ಹರಿವ ಹೊಳೆ ತಟ್ಟನೆ ನಿಂತು ಮಡುವಾಗಿ,
ನನ್ನ ದಡದಲ್ಲಿರುವ ಗಿಡಮರಬಳ್ಳಿ
ಪ್ರತಿಫಲಿಸಿ
ಏನೋ ಸಮಾಧಾನ[2]

ತಾನೇ ತಾನಾಗಿರುವ ಇಂಥ ಒಂದು ಕ್ಷಣವನ್ನೇ ಸಂತಸಿದ್ಧರ ಮನಸ್ಸು ನಿತ್ಯ ವಾಗಿರಿಸಿಕೊಂಡಿರಬಹುದೆ? ಎಂದುಕೊಳ್ಳುತ್ತಾನೆ ಕವಿ. ಈ ಒಂದು ಕ್ಷಣದಲ್ಲಿ 'ನಾನೂ ಒಬ್ಬ ಸಿದ್ಧ, ಅಥವಾ ಸ್ವಲ್ಪ ಕೆಳಗಿನ ಬುದ್ಧ !' ಎಂದು ಅವನಿಗೆನಿಸಿದರೆ ಆಶ್ಚರ್ಯವಿಲ್ಲ.

ಕೊಂಬೆ ಕೊಂಬೆಗಳಲ್ಲಿ ಹಕ್ಕಿಗೂಡುಗಳು. ನಗರದಲ್ಲಿ ಕೇರಿಯುದ್ದಕ್ಕೂ ಮನೆಗಳು ; ಮಹಡಿಗಳು. ಸಂಜೆಯಾದೊಡನೆಯೇ ಜನ ಬಂದು ಮನೆ ಸೇರಿಕೊಂಡು ಸಾಗುತ್ತದೆ ಸಂಸಾರ. ಬೆಳಗಾಗುತ್ತಲೇ—

ಹೊತ್ತಾರೆ ಕತ್ತಲೆಯ ಮೊಟ್ಟೆ ಒಡೆದು
ಬೆಳಕು ಗರಿ ಬಿಚ್ಚಿ ಕೂತಾಗ
ರೆಕ್ಕೆಗಳು, ಕಾಲುಗಳು, ಗಾಲಿಗಳು
ಮತ್ತೆ ಯಥಾಪ್ರಕಾರ ಚಲಿಸತೊಡಗುತ್ತವೆ.[3]

ಹೀಗೆ ಬಿಡಿಯಾಗಿ ಚಿತ್ರವಾಗಿ, ರೂಪಕವಾಗಿ, ಪ್ರತಿಮೆಯಾಗಿ, ಪ್ರತೀಕವಾಗಿ ಕಾವ್ಯದಲ್ಲಿ ಹಾಸುಹೊಕ್ಕಾಗಿರುವ ಪ್ರಕೃತಿ ಹಲವಾರು ಕವಿತೆಗಳಲ್ಲಿ ಇಡಿಯಾಗಿ, ಸಾವಯವ ಸಂಪೂರ್ಣವಾಗಿ, ಕಾವ್ಯಶಿಲ್ಪವಾಗಿ ಪರಿಣಮಿಸಿರುವುದು ಶಿವರುದ್ರಪ್ಪ

[1] ಬಾರದಿರು ಉಲ್ಕೆಯಂತೆ : ತೆರೆದ ದಾರಿ
[2] ಭಾನುವಾರ : ಗೋಡೆ
[3] ದೈನಂದಿನ : ಗೋಡೆ

ನವರ ಕಾವ್ಯದ ಬೆಳವಣಿಗೆಯನ್ನು ಸೂಚಿಸುತ್ತದೆ. ಉತ್ತಮ ಸಿತಾರ್‌ವಾದನ ಅಂತರಂಗದಲ್ಲಿ ಮೂಡಿಸುವ ವಿವಿಧ ಭಾವನೆಗಳನ್ನು 'ಇದುವರೆಗೆ ನೀವು ಕೇಳಿದ್ದು' ಕವಿತೆ ಪ್ರಕೃತಿಯ ಚಿತ್ರಗಳ ಮೂಲಕವೇ ಪ್ರಭಾವಶಾಲಿಯಾಗಿ ಮನಸ್ಸನ್ನು ಮುಟ್ಟುತ್ತದೆ. ಇಡಿಯ ವರುಷದ ಋತುಗಳ ಲಕ್ಷಣಗಳನ್ನು ಕ್ರಿಯಾಶಾಲಿಯಾಗಿ ಬಾಲ್ಯದಿಂದ ವೃದ್ಧಾಪ್ಯದವರೆಗಿನ ಹೆಣ್ಣಿನ ರೂಪದಲ್ಲಿ ಮೈದೋರುವಂತೆ ಚಿತ್ರಿಸಿರುವ ಕೌಶಲವನ್ನು 'ಶಾರದೆ'ಯಲ್ಲಿ ದೃಶ್ಯಮಯವಾದ ಶೈಲಿಯಲ್ಲಿ ಕಾಣಬಹುದು. 'ವ್ಯಕ್ತಿಯ ಇಡೀ ಜೀವಮಾನವನ್ನು ಒಂದು ದಿನಮಾನದಲ್ಲಿ ಹಾಗೂ ಋತುಮಾನದಲ್ಲಿ ಅಡಕಗೊಳಿಸಿ ನೋಡಿದ ನಿರೂಪಣೆ' 'ಮಬ್ಬಿನಿಂದ ಮಬ್ಬಿಗೆ'ಯಲ್ಲಿ ಪ್ರತಿಮಾರೂಪವಾಗಿದೆ. ಸುತ್ತಣ ನೆಲದ ಹಸುರಿನನುಭವದ ಪ್ರಜ್ಞೆಯೆ ಇಲ್ಲದಿರುವ ಕುಂಡದ ಗಿಡದ ಮೂಲಕ ಆಧುನಿಕ ವ್ಯಕ್ತಿಯ ಅನಾಥಪ್ರಜ್ಞೆ ಅನುಕಂಪದಿಂದ ಚಿತ್ರಿತವಾಗಿದೆ 'ಪ್ರಜ್ಞೆ'ಯಲ್ಲಿ.

ಶಿವರುದ್ರಪ್ಪನವರ ಕಾವ್ಯೋದಯಕ್ಕೆ ಕಾರಣವಾದ ವಿಸ್ಮಯ ಭಾವ (ಸಂತೋಷ–ಖೇದ ಎರಡರಲ್ಲೂ) ಪ್ರಕೃತಿಯಲ್ಲಿ, ಜೀವನದಲ್ಲಿ, ಎರಡರ ಸಮರಸದಲ್ಲಿ, ಅನುಭವ ಹಾಗೂ ಆಲೋಚನೆಯ ಮಟ್ಟದಲ್ಲಿ ದಟ್ಟೈಸಿ ನಿಂತು ಅವರ ಕಾವ್ಯಕ್ಕೆ ಹೊಸ ರುಚಿಯನ್ನು, ದೃಷ್ಟಿಯನ್ನು ತಂದುಕೊಟ್ಟಿದೆ. ನಿಸರ್ಗ ಹಾಗೂ ಮಾನವ ಜೀವನದ ಸಂಪರ್ಕವನ್ನು ನಿಕಟಗೊಳಿಸಿ ಬಾಳಿಗೆ ಪೂರ್ಣತೆಯನ್ನೂ, ಅರ್ಥಪೂರ್ಣತೆಯನ್ನೂ ತಂದುಕೊಡುವ ಪ್ರಯತ್ನದಲ್ಲಿ ಗೆಲುವಾಗಿದೆ. ಜಡೆಯಾಚೆಗಿರುವ ವಿಶ್ವಮಾತೆಯ ಮುಖವನ್ನು ಕಾಣುವ ಹಂಬಲವನ್ನು ಹುಟ್ಟಿಸಿದೆ. ಇಂದ್ರಿಯ ಸೌಂದರ್ಯವನ್ನು ಗ್ರಹಿಸುತ್ತ ಆತ್ಮಸೌಂದರ್ಯದ ಹೊಳಹನ್ನು ಅಲ್ಲಲ್ಲಿ ಕಾಣಿಸಿದೆ. ಬಿಡಿಯಾದ ಚಿತ್ರದ ಕೆತ್ತನೆಯಿಂದ ಇಡಿಯಾದ ಸಂಕೀರ್ಣಾನುಭವದವರೆಗೆ ಅಭಿವ್ಯಕ್ತಿಮಾರ್ಗವನ್ನು ಕಂಡುಕೊಂಡಿದೆ. ಹಾಗೆ ನೋಡಿದರೆ ಕಾವ್ಯ ಸಜೀವವಾಗಿರುವುದೇ ಆನಂದದ ಒಂದು ಬೆರಗಿನಲ್ಲಿ.[1] ಅದರ ಅಂತರಂಗದ ಬೆಳಕು ಹೊರಸೂಸುವುದನ್ನೇ ಕವಿ ಕಾಯ್ದುಕೊಂಡಿರುತ್ತಾನೆ. ನಮಗೆ ಸಂಜೆಯಾದಾಗ ಇನ್ನೊಂದಕ್ಕೆ ಬೆಳಗಾಗಿರುತ್ತದೆ. ಈ ಸೋಜಿಗವನ್ನು ಅರಿತು, ಆನಂದಿಸಿ, ಅಭಿವ್ಯಕ್ತಿಗೊಳಿಸುವ ಕವಿ ನಿಜಕ್ಕೂ ಕೃತಾರ್ಥನಾಗುತ್ತಾನೆ:

ಹಗಲೆಲ್ಲಾ ಬೇಯಿಸಿ ಸತಾಯಿಸಿದ ಈ ಸೂರ್ಯ ಮುಳುಗಿದ
ನಮಗೆ ಸಂಜೆಯಾಯಿತು.
ಬಾನಿನ ತುಂಬ ಒಂದೊಂದೇ ಕಣ್ ಬಿಡುವ ಈ
ನಕ್ಷತ್ರಗಳಿಗೆ ಬೆಳಗಾಯಿತು
ಬೆಳಕು ಬೆಳಕನ್ನೇ ನುಂಗಿ ನಿಂತಿದ್ದ ಸೋಜಿಗದ
ಬೆಳಗಾಯಿತು.[2]

---

1 To be sure, all poetry lives by wonder, by the delight of discovery and the exaltation which it brings"—C. M. Bowra : *The Romantic Imagination*, 1957, page 285

2 ಬೈಗಿನಲ್ಲಿ ಬೆಳಗು : ತೆರೆದ ದಾರಿ

ಎಲ್. ಎಸ್. ಶೇಷಗಿರಿರಾವ್

# ಶಿವರುದ್ರಪ್ಪನವರ ಕಾವ್ಯ—ಒಂದು ದೃಷ್ಟಿಯಿಂದ

೧೯೫೧ರಲ್ಲಿ ಡಾ. ಶಿವರುದ್ರಪ್ಪನವರ ಮೊದಲನೆಯ ಕವನಸಂಗ್ರಹ, 'ಸಾಮಗಾನ' ಪ್ರಕಟವಾಯಿತು. ಆ ಸಂಗ್ರಹದಿಂದ ಮತ್ತು ೧೯೫೭ರಲ್ಲಿ ಬಿ.ಎಂ.ಶ್ರೀ. ಅವರ ಪದಕವನ್ನು ಗಳಿಸಿ ಕಾವ್ಯಪ್ರೇಮಿಗಳ ಗಮನ ಸೆಳೆದ ಅವರು ಈ ಇಪ್ಪತ್ತೈದು ವರ್ಷಗಳಲ್ಲಿ ಕನ್ನಡ ಸಾಹಿತ್ಯಲೋಕದಲ್ಲಿ ಹೊಸ ಒಲವುಗಳು, ವಾದ-ವಿವಾದಗಳು ಏನೇ ಕಂಡಿದ್ದರೂ ಪ್ರಮುಖ ಕವಿಗಳ ಪಂಕ್ತಿಯಲ್ಲಿ ನಿಂತಿದ್ದಾರೆ.

ಶಿವರುದ್ರಪ್ಪನವರ ಮೊದಲ ಎರಡು ಸಂಕಲನಗಳು—'ಸಾಮಗಾನ' (೧೯೫೧) ಮತ್ತು 'ಚೆಲುವು-ಒಲವು' (೧೯೫೩) ಪ್ರಯೋಗಗಳ ಮೂಲಕ ಬೆಳೆಯುತ್ತಿರುವ ಕವಿಯ ಕೃತಿಗಳು. ಅವರ ಮೊದಲನೆಯ ಸಂಕಲನದಲ್ಲಿ ಕವನದ ಚೌಕಟ್ಟಿನಲ್ಲಿ ಅನುಭವದಿಂದ ಬಾಳಿನ ಸಮಗ್ರ ನೋಟ ಮೂಡುವುದು ವಿರಳ. ಅನುಭವದಿಂದ ಆಧ್ಯಾತ್ಮದತ್ತ ಕವನ ಸುಲಭವಾಗಿ ಬಾಗುತ್ತದೆ. ಆದರೆ ತಾರುಣ್ಯದ ಹೊಸ್ತಿಲಲ್ಲಿ ನಿಂತು, ಗಾಂಧೀಜಿಯ ಪ್ರಭಾವ ಗಾಳಿಯಲ್ಲೆ ಬೆರೆತುಹೋಗಿದ್ದ ಭಾರತದಲ್ಲಿ ಬರೆಯುತ್ತಿದ್ದ ಕವಿಯ ಸೃಷ್ಟಿಯಲ್ಲಿ ಈ ಲಕ್ಷಣ ಕಾಣುವುದೇನೂ ಆಶ್ಚರ್ಯವಲ್ಲ. ಗಮನಾರ್ಹ ಸಂಗತಿ ಎಂದರೆ ಮೊದಲನೆಯ ಸಂಕಲನದಲ್ಲೆ 'ಅಲ್ಲಿ-ಇಲ್ಲಿ' ಕವನದಂತಹ ಕೃತಿಗಳಲ್ಲಿ ಕಾಣುವ ಭಾಷೆಯ ಬಳಕೆಯ ರೀತಿ, ಹ್ರಸ್ವಪಂಕ್ತಿಗಳ ನಿರ್ವಹಣೆ ಯಾವಾಗಲೂ ಕಷ್ಟವೇ. ಯಾಂತ್ರಿಕತೆ ಸುಲಭವಾಗಿ ಇದರಲ್ಲಿ ಹಣಕುತ್ತದೆ. ಆದರೆ 'ಅಲ್ಲಿ-ಇಲ್ಲಿ' ಕವನದಲ್ಲಿ ಕವಿ ಈ ಯಾಂತ್ರಿಕತೆಯನ್ನು ನಿವಾರಿಸಿಕೊಂಡಿದ್ದಾರೆ. ಪ್ರತಿ ಪದ್ಯದ ಪೂರ್ವಾರ್ಧದಲ್ಲಿ ಭಗವಂತನ ವೈಭವ, ಉತ್ತರಾರ್ಧದಲ್ಲಿ ಅವನ ಕಾರುಣ್ಯ ಚಿತ್ರಿತವಾಗುತ್ತವೆ. ಪ್ರತಿ ಪದ್ಯದ ಪೂರ್ವಾರ್ಧದ ಭಾಷಾ ಸಂಪತ್ತು, ಉತ್ತರಾರ್ಧದ ಸರಳತೆ ಇವನ್ನು ಪ್ರತಿಬಿಂಬಿಸುತ್ತವೆ. ಉದಾಹರಣೆಗೆ :

ಬಾಂದಳ ಚುಂಬಿತ
ಶುಭ್ರ ಹಿಮಾವೃತ
ತುಂಗಶೃಂಗದಲಿ ಗೃಹವಾಸಿ
ದೀನ ಅನಾಥರ
ದುಃಖ ದರಿದ್ರರ
ಮುರುಕು ಗುಡಿಸಿಲಲಿ ಉಪವಾಸಿ

ಪ್ರಾರಂಭದ ಸಂಕಲನಗಳಲ್ಲಿ ಸುಲಭವಾಗಿ ಬಾಳಿನ ವಿಷಯದಲ್ಲಿ ನಿರ್ಣಯಕ್ಕೆ ಬರುವ, ಸುಲಭವಾಗಿ ಸಮಾಧಾನ ತಂದುಕೊಳ್ಳುವ ಪ್ರವೃತ್ತಿಯೂ ಕಾಣುತ್ತದೆ. 'ಸಾಮಗಾನ'ದ 'ಗೊಂಬೆಯ ಆಟ'ದ ಕಡೆಯ ಪದ್ಯವನ್ನು ನೋಡಿ :

ಗೊಂಬೆಯಾಟದೊಳೆಂತು
ಶಿಶು ತನ್ನ ಮರೆಯುವುದು
ಸುಖ ದುಃಖಗಳ ಪರಿವೆಯಿಲ್ಲದಂತೆ
ಅಂತೆ ನೀ ಬಾಳಿನಲಿ
ಗೊಂಬೆಯಾಟವನಾಡು
ಹಸುಳೆಯಾಟವು ಬಾಳ ಟೀಕೆಯಂತೆ

'ಆಟ' ಎನ್ನುವ ಕವನ ಜೀವನವನ್ನು ಹಿಂಡುವ ಅನುಭವದಿಂದ ಪ್ರಾರಂಭವಾಗುತ್ತದೆ :

ನಮ್ಮವರು ನಮಗಿಲ್ಲ ;
ನಮಗೆ ನಾವೇ ಎಲ್ಲ
ಕಟ್ಟ ಕಡೆಗೆ
ನಂಬಿದವರೇ ನಮಗೆ
ಕಾರುವರು ವಿಷದ ಹೊಗೆ
ಅಂತರ್ಯದೊಳಗೆ

ಆದರೆ ಇಪ್ಪತ್ತನಾಲ್ಕೇ ಪಂಕ್ತಿಗಳ ಈ ಕವನದ ಮುಕ್ತಾಯ ಇದು :

ಇದು ಲೋಕ, ಇದು ಬಾಳು ;
ಇಂತಿರುವುದೂ ಒಂದು
ದೈವದಾಟ
ಇದು ಪೂರ್ಣವೇನಲ್ಲ ;
ತಿಳಿದವಗೆ ಜಗವೆಲ್ಲ
ರಸದ ಊಟ

ಇಂಗ್ಲಿಷ್ ಸಾಹಿತ್ಯದಲ್ಲಿ ರೊಮ್ಯಾಂಟಿಕ್ ಕಾವ್ಯದಲ್ಲಿ ಕಂಡುಬಂದು ಕನ್ನಡ ನವೋದಯ ಸಾಹಿತ್ಯದಲ್ಲಿಯೂ ಕಾಣುವ ಶೈಶವದ ಪ್ರಶಂಸೆ ಶಿವರುದ್ರಪ್ಪನವರ ಪ್ರಾರಂಭದ ಸಂಕಲನಗಳಲ್ಲಿದೆ. ಮಗುವಿನ ಮನಸ್ಸಿನ ವ್ಯಾಪಾರಗಳನ್ನು ಊಹಿಸಿ ಸಂಭ್ರಮಗೊಳ್ಳುತ್ತಾರೆ, ವಿಸ್ಮಿತರಾಗುತ್ತಾರೆ ಕವಿ :

ಯಾವ ಚಿತ್ರಗಳು ಮೂಡುತಿರುವುವೋ ಕಿರಿಯ ಎದೆಯ ಒಳಗೆ
ಕಳೆದ ಜನ್ಮಗಳೊ, ಬರುವ ಜನ್ಮಗಳೊ, ನೂರು ಜೀವಯಾತ್ರೆ
ತೋರುತಿರುವುದೋ ; ಅರಿಯೆನೊಂದನೂ ನಿನ್ನ ಉಸಿರಿನೊಳಗೆ
ಕೇಳುತಿರುವೆ ನಾ—ಜೀವರೆಲ್ಲರೂ ಪ್ರೇಮದೊಂದು ಪಾತ್ರೆ !

—'ತಾಯಿ ತನ್ನ ಮಗುವಿಗೆ'

ಪ್ರಾರಂಭದ ಕವನಗಳಲ್ಲಿ ಯೋಗಿ, ಧ್ಯಾನ, ಸಮಾಧಿಸ್ಥಿತಿಗಳು ಕಾಲಿಡುವಂತೆ ಅನಂತರದ ಕವನಗಳಲ್ಲಿ ಸುಳಿಯುವುದಿಲ್ಲ. ಸಂಸ್ಕೃತದ ಶಬ್ದಗಳು ಕಡಮೆಯಾಗಿ ಕನ್ನಡದ ಅಥವಾ ಕನ್ನಡಕ್ಕೆ ದತ್ತಾಗಿ ಬಂದ ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಗಳ ಶಬ್ದಗಳೇ ಬಳಕೆಯಾಗುತ್ತವೆ. ಭಾಷೆ ಆಡುಮಾತಿನ ಲಯಕ್ಕೆ ಸಮೀಪವಾಗುತ್ತದೆ. ಕವನ ಕಟ್ಟು ನಿಟ್ಟಾಗಿ ಗಂಭೀರವಾಗಿರುತ್ತಿದ್ದುದು ಹೋಗಿ, ಹಾಸ್ಯ, ವ್ಯಂಗ್ಯ ಸೇರಿ ಕವನಕ್ಕೆ ಲವಲವಿಕೆ ಬರುತ್ತದೆ. 'ದೇವಶಿಲ್ಪಿ' ಸಂಕಲನದಲ್ಲಾಗಲೆ ರೂಢಿಯ ಛಂದಸ್ಸು, ಸಾಂಪ್ರದಾಯಿಕವಾಗಿ ಕಾವ್ಯಸಹಜವೆನ್ನುವ ಭಾಷೆ ಎರಡೂ ದೂರವಾಗಿವೆ.

'ಬಾಡಿಗೆಗಿದೆ'—ಎಂಬ ಬೋರ್ಡು
ಎದೆಯೊಳು ನೇತಾಡಿದೆ
ತನ್ನ ಹಣೆಯ ಬರೆಹವನು
ತಾನೆ ತೆರೆದು ಹೊತ್ತವನೊಲು
ಈ ಮನೆಯೋ ತೋರಿದೆ

ಎಂಬಂತಹ ಪದ್ಯ ನಮ್ಮನ್ನು ಎದುರುಗೊಳ್ಳುತ್ತದೆ.

ಈ ಸುಂದರಿ ವಸುಂಧರೆ ಮಾತಾಯಿ
ಹೇಗೋ ಕರುಣಿಸಿದರೆ ಉಂಟು,
ಇಲ್ಲ—ಇದ್ದೇ ಇದೆ ಹೊಟ್ಟೆಗು ಬೆನ್ನಿಗು
ನಂಟು

('ನೆರಳಿಲ್ಲದ ದಾರಿ')

ಎಂಬಂತಹ ಪಂಕ್ತಿಗಳು ತಮ್ಮ ಪ್ರಾರಂಭದ ಕವನಗಳಿಂದ ಕವಿ ಎಷ್ಟು ದೂರ ಬಂದಿದ್ದಾರೆ ಎಂಬುದನ್ನು ತೋರಿಸುತ್ತವೆ. ಇಲ್ಲಿ ಧ್ವನಿ ವ್ಯತ್ಯಾಸವಾಗುತ್ತ ಹೋಗುವ ರೀತಿ, 'ಸುಂದರಿ ವಸುಂಧರೆ ಮಾತಾಯಿ'ಯಲ್ಲಿ ಸೂಚಿತವಾಗುವ ಎರಡು ದೃಷ್ಟಿಗಳು ಇವು ಅವರ ಮೊದಲ ಕವನಗಳಲ್ಲಿ ಕಾಣಲಾಗದಂತಹ ಸಂಕೀರ್ಣತೆಯನ್ನು ತಂದುಕೊಡುತ್ತವೆ.

ಶಿವರುದ್ರಪ್ಪನವರ ಕಾವ್ಯ ಮುಖ್ಯವಾಗಿ ಆವರಣ-ವ್ಯಕ್ತಿತ್ವಗಳ ಬಾಂಧವ್ಯವನ್ನು ಕುರಿತ ಕಾವ್ಯ; ಈ ಬಾಂಧವ್ಯವನ್ನು ಅರ್ಥವತ್ತಾಗಿ ಸಾಧಿಸುವ ಪ್ರಯತ್ನದ ಕಾವ್ಯ. ಅವರ ಈಚೆಗಿನ ಕವನಗಳಲ್ಲಿನ ಕಾವ್ಯವ್ಯಕ್ತಿತ್ವ ಕಾಲ-ದೇಶಗಳ ಪ್ರಜ್ಞೆಯನ್ನು ಜೀವಂತವಾಗಿ ಉಳಿಸಿಕೊಂಡದ್ದು. ೧೯೭೨ರಲ್ಲಿ ಪ್ರಕಟವಾದ ಅವರ 'ಗೋಡೆ' ಸಂಕಲನದ ಎರಡು ಕವನಗಳನ್ನು ಗಮನಿಸಬಹುದು. 'ನಿಲುವು' ಎನ್ನುವ ಕವನದಲ್ಲಿ ಮೊದಲ ಹನ್ನೊಂದು ಪಂಕ್ತಿಗಳಲ್ಲಿ ಪ್ರತ್ಯೇಕ ಅಸ್ತಿತ್ವದಲ್ಲಿ ಸಮಾಧಾನ ಕಾಣುವಂತೆ ತೋರುವ ಜೀವ ಮುಂದೆ ಎನ್ನುತ್ತದೆ:

ಇದ್ದಷ್ಟು ನೆಲವ ಉತ್ತು ಬಿತ್ತಿ ನೀರೆರೆದು
ಮಲಗಿರುವ ಬೀಜಗಳ ಕಣ್ಣು ತೆರೆಸುತ್ತೇನೆ
ನಾಳೆ ಈ ಸಸಿಗಳೆಲ್ಲ ವಟವೃಕ್ಷವಾಗಿ

ಸಾವಿರ ಜನಕ್ಕೆ ನೆರಳಾದೇವೆಂಬ ಮಹದಾಸೆ ಇರದಿದ್ದರೂ
ಒಂದೆರಡಾದರೂ ಬೀಜವಾಗುವಂಥ ಹಣ್ಣು
ಬಿಟ್ಟಾವೆಂದು ನಂಬಿ ಕಾಯುತ್ತೇನೆ

ಹೀಗೆ ವರ್ತಮಾನದಿಂದ ಭವಿಷ್ಯಕ್ಕೆ ಸೇತುವೆ ಕಟ್ಟುವ, ತನ್ನ ಜೀವನದಲ್ಲಿ ಮುಂದಿನವರ ಬಾಳಿನಲ್ಲೂ ಸಲ್ಲುವಂಥ ಏನನ್ನಾದರೂ ಮಾಡುವ ಹಂಬಲ ಕವಿಗೆ. ಮೊದಲ ಪಂಕ್ತಿಗಳಲ್ಲಿ ಕಾಣದ ಕಾಲದ ಪ್ರಜ್ಞೆ, ಸಮಷ್ಟಿ ಜೀವನದ ಪ್ರಜ್ಞೆ ಈ ಪಂಕ್ತಿಗಳಲ್ಲಿ ಮೂಡುತ್ತವೆ. ಲೌಕಿಕ ಜೀವನದಲ್ಲಿ ತನ್ಮಯವಾದ ಜೀವ ಹೊರಗಿನ ಆವರಣವೊಡನೆ ಅರ್ಥವತ್ತಾದ ಸಂಬಂಧವನ್ನು ಹೇಗೆ ಕಳೆದುಕೊಳ್ಳುತ್ತದೆ ಎಂಬ ಅರಿವಿನೊಡನೆ ಕಾಲದ ಪ್ರಜ್ಞೆ ಹೆಣೆದುಕೊಂಡು ನಿರ್ವಹಿಸುವ ಕವನ 'ಖಾಲಿ ಸೈಟಿನ ಕಡೆಗೆ.'

ಏನೂ ಇಲ್ಲದ ಖಾಲಿ ಸೈಟಿನ ಬದಿಗೆ
ಒಂದು ದಿನ ಬಂದುಬೀಳುತ್ತವೆ
ಜಲ್ಲಿ, ಮರಳು, ಸಿಮೆಂಟು, ಇಟ್ಟಿಗೆ,
ಕಬ್ಬಿಣದ ಸಾಮಾನು

ಈ ಜೀವರಹಿತ ಸಾಮಾನುಗಳ ಪೇರಿಕೆ ಕಣ್ಣಿಗೆ ಕಾಣದ (ಕವನದ ಕಡೆಯ ಪಂಕ್ತಿಗಳಲ್ಲಿ ಮಾತ್ರ ಕಾಣುವ—ಅದೂ ಜೀವರಹಿತವಾಗಿ ಕಾಣುವ) ಯಜಮಾನರು ಸಾಧಿಸಿರುವ ಸಂಬಂಧದ ಸಂಕೇತ. ಈ ಜೀವರಹಿತ ಸಾಮಗ್ರಿಗಳನ್ನು ಜೀವವಿದ್ದು ನಿರ್ಜೀವರಾಗಿರುವ ('ಹರಕು ಚಿಂದಿಯ ಒಣಕಲು ಮೋರೆಯ ಕಡ್ಡಿಕಾಲಿನ') ಕೂಲಿಗಳು ಬಳಸಿ ಮನೆ ಕಟ್ಟುತ್ತಾರೆ. ಗೃಹಪ್ರವೇಶವಾಗುತ್ತದೆ. ಮನೆಯೊಳಗೆ ಜೀವನ ಸುತ್ತುತ್ತದೆ, ಸುಖ ದುಃಖ ಉಲ್ಲಾಸಗಳ ಚಕ್ರ ಸುತ್ತುತ್ತದೆ. ಚಡ್ಡಿ–ಲಂಗಗಳು ಪಂಚೆ–ಪ್ಯಾಂಟು–ಸೀರೆಗಳಾಗುತ್ತವೆ.

ನೆಟ್ಟಗಿದ್ದವರ ಬೆನ್ನು ಬಾಗಿ, ಕೋಲೂರಿ
ನಡೆದ ಯಜಮಾನರನ್ನು
ಒಂದು ದಿನ ಹೊತ್ತು ಸಾಗಿಸುತ್ತಾರೆ—ಹೊರಗೆ
ಏನೂ ಇಲ್ಲದ, ದೂರದ ಖಾಲಿ ಸೈಟಿನ ಕಡೆಗೆ

ಇಲ್ಲಿ 'ಯಜಮಾನರನ್ನು' ಪದ ಎಷ್ಟು ಅರ್ಥ ತುಂಬಿಕೊಂಡಿದೆ ಎಂಬುದು ಗಮನಿಸಬೇಕಾದ ಅಂಶ. ಆ ಪದದ ಹಿಂದಿನ ಐದು ಪದಗಳ ವರ್ಣನೆಯೇ ಆತನನ್ನು 'ಯಜಮಾನ' ಎಂದು ಕರೆಯುವುದರ ಅರ್ಥಹೀನತೆಯನ್ನು ಕಾಣಿಸುತ್ತದೆ. ಅಲ್ಲದೆ ಆಡುಭಾಷೆಯಲ್ಲೆ 'ಯಜಮಾನರು' ಎಂಬುದಕ್ಕೆ ವ್ಯಂಗ್ಯದ ಲೇಪವಿದೆ. ಈ ಕವನದ ಸಂದರ್ಭದಲ್ಲಿ ಈ ವ್ಯಂಗ್ಯ ಗಾಢವಾಗುತ್ತದೆ. ಆತ ವ್ಯಾವಹಾರಿಕವಾಗಿ ಸೈಟು–ಮನೆಗಳ ಯಜಮಾನನೇ. ಯಜಮಾನನಂತೆಯೇ ನಡೆದುಕೊಂಡಿದ್ದಾನೆ. ಕೂಲಿಗಳು ಅವನ ಸಂಸಾರದ ಜರತಾರಿ ಸೀರೆಯಾಚೆಗೇ ನಿಂತು ಕೈಯೊಡ್ಡಿ ಗೃಹಪ್ರವೇಶದ ಔತಣದ ಚೂರುಗಳನ್ನು ಪಡೆದಿದ್ದಾರೆ. ಈಗ ಕಾಲ ಅವನ ಬೆನ್ನನ್ನು ಬಗ್ಗಿಸಿದೆ. ಕಡೆಗೆ

ಯಜಮಾನ ಎಂದುಕೊಂಡಿದ್ದವನನ್ನು ಅವನು ಬಯಸದ, ಏನನ್ನೂ ಕಟ್ಟಲಾಗದ ಸ್ಥಿಟಿಗೆ ಸಾಗಿಸುತ್ತಾರೆ. ಇಡೀ ಕವನದಲ್ಲಿ ಇಲ್ಲಿ ಮಾತ್ರ ಕವಿಯ ಧ್ವನಿ ಕೇಳುತ್ತದೆ, ಉಳಿದೆಲ್ಲ ಕಡೆ ತಟಸ್ಥ ಧ್ವನಿ. ಆದುದರಿಂದ ಈ ಮಾತಿಗೆ ಒತ್ತು ಬರುತ್ತದೆ.

ಶಿವರುದ್ರಪ್ಪನವರ ಪ್ರಾರಂಭದ ಕವನಗಳಲ್ಲಿ ಸಹಮಾನವರ ಪ್ರವೇಶ ವಿರಳ. ವಿಶಾಲವಾದ ವಿಶ್ವದಲ್ಲಿ ಜೀವ ತನ್ನ ಪಥವನ್ನು ಕಂಡುಕೊಳ್ಳಲು ಎಳಸುವ ಪ್ರಯತ್ನದ ಅಭಿವ್ಯಕ್ತಿ ಈ ಕಾವ್ಯ. ಕವಿಜೀವ–ವಿಶ್ವಾತ್ಮ–ನಿಸರ್ಗ ಇದು ಈ ಕವನಗಳ ತ್ರಿಕೋಣ. ಈ ಕವನಗಳ ಭಾಷೆಯಾದರೂ ಬೃಹತ್ತಾದ ವಿಶ್ವದ ಚೆಲುವು, ವೈಭವ, ವೈವಿಧ್ಯಗಳನ್ನು ಕಂಡು ಆ ವಿಶ್ವದ ಭಾಗ ತಾನು ಎಂದು ನೆನೆಯುವ ಚೇತನದ ಹಿಗ್ಗು–ನಮ್ರತೆಗಳಿಗೆ ಸಹಜವಾದದ್ದು. ಅವರ ಮೊದಲನೆಯ ಸಂಕಲನ 'ಸಾಮಗಾನ'ದ ೬೪ ಕವನಗಳಲ್ಲಿ ಪ್ರೇಯಸಿಯನ್ನು ಕುರಿತ ಕವನಗಳು ಎರಡು, ಗೆಳೆಯರನ್ನು ಕುರಿತ ಕವನಗಳು ಎರಡು, ತಾಯಿಯನ್ನು ಸ್ಮರಿಸುವುದು ಒಂದು; ಇವನ್ನು ಬಿಟ್ಟರೆ ಪ್ರತ್ಯಕ್ಷವಾಗಿಯಾಗಲಿ ಪರೋಕ್ಷವಾಗಿಯಾಗಲಿ ಸಹಮಾನವರು ಕಾಲಿಡುವುದು ಎಂಟೇ ಕವನಗಳಲ್ಲಿ. ಕಾವ್ಯಾಭ್ಯಾಸದಲ್ಲಿ ಅಂಕಿಸಂಖ್ಯೆಗಳಿಗೆ ಹೆಚ್ಚು ಮಹತ್ವವಿಲ್ಲ. ಆದರೂ ೬೪ ಕವನಗಳಲ್ಲಿ ೫೧ ಕವನಗಳಲ್ಲಿ ವಿಶ್ವವು ಕವಿಯ ಏಕಾಕಿತನದಲ್ಲಿ ಅನುಭವಕ್ಕೆ ಬರುತ್ತದೆ ಎನ್ನುವುದು ಮಹತ್ವದ ಅಂಶವೇ.

ಹೀಗೆಂದರೆ ಕವಿ ಸಹಮಾನವರನ್ನು ಕಡೆಗಣಿಸಿದರೆಂದು ಹೇಳುವಂತಿಲ್ಲ. ಈ ಸಂಕಲನದ ಎರಡನೆಯ ಕವನ, ಶಿವರುದ್ರಪ್ಪನವರ ಜನಪ್ರಿಯ ಕವನ 'ಅಲ್ಲಿ–ಇಲ್ಲಿ.' ಈ ಪುಟ್ಟ ಕವನದಲ್ಲಿ ಕಣ್ಣೀರು, ಮಣ್ಣು ಧೂಳು, ರೈತನ ನೇಗಿಲ ಸಾಲು, ಉಪವಾಸಿಗಳ ಮುರುಕು ಗುಡಿಸಲು ಇವಕ್ಕೆ ತಾರಾನಿವಹ, ಸೂರ್ಯ, ಹಿಮಾವೃತ ತುಂಗಶೃಂಗಗಳಿಗೆ ದೊರೆತಷ್ಟೆ ಪ್ರಾಧಾನ್ಯ ದೊರೆತಿದೆ. ಸಹಮಾನವರ ದಾರಿದ್ರ್ಯ, ದುಃಖ ಕವಿಗೆ ಸಹ್ಯವಾಗುವುದು, ದಿವ್ಯಾಂಬರ ಸಂಚಾರಿ ವಿದ್ಯುದ್ರಾಜಿತ ರಥಗಾಮಿಯಾದ ಶಕ್ತಿ ಇವರೊಡನೆ ಬಾಳುತ್ತದೆ, ದುಡಿಯುತ್ತದೆ ಎಂಬ ದರ್ಶನ. ಇಂತಹ ಒಂದು ಅದೃಶ್ಯ ಶಕ್ತಿಯ ಇರವು ಕವಿಯ ಅರಿವಿನ ಭಾಗವಾಗಿ ಹೋಗಿದೆ. ಆ ಚೇತನವನ್ನು ಪ್ರತ್ಯಕ್ಷ ಮಾಡಿಕೊಳ್ಳುವುದು, ಅದರಲ್ಲಿ ಒಂದಾಗುವುದು ಬಾಳಿನ ಪರಮಗುರಿಯಾಗಿದೆ. ಈ ಕವನಗಳ ಭಾಷೆ, ಚಿತ್ರಗಳು ಎಲ್ಲ ಈ ಬಯಕೆಯಿಂದ ನಿರ್ಧರವಾದವು. ಮತ್ತೆ ಮತ್ತೆ ನಾವು ಕಾಣುವುದು ವಿಶ್ವದ ಸಮ್ಮುಖದಲ್ಲಿ ನಿಂತ ಕವಿಯನ್ನು; ಮೂರ್ತದಲ್ಲಿ ಅಡಗಿರುವ ಅಮೂರ್ತವನ್ನು ಕಾಣುವ, ಅದರಲ್ಲಿ ಒಂದಾಗುವ ಹಂಬಲವನ್ನು. ಮೂರ್ತವನ್ನು ಅಮೂರ್ತದೊಂದಿಗೆ ಹೋಲಿಸುವುದನ್ನು (ಇದು ಉಪಮಾನದ ರೂಢಿ ಬಳಕೆಗೆ ವ್ಯತಿರಿಕ್ತವಾದದ್ದು) ಮತ್ತೆ ಮತ್ತೆ ಕಾಣುತ್ತೇವೆ. (ಕುವೆಂಪು ಅವರ ಕವನಗಳಲ್ಲಿ ಇದು ಸಾಮಾನ್ಯ)—ತಾಯಿಯನ್ನಪ್ಪಿದ ಮಗು—

ಬಾನನ್ನಪ್ಪಿದ ಮೃದುಮೋಡದವೋಲ್,
ಭಗವಂತನನಪ್ಪಿದ ಭಕ್ತನವೋಲ್,

ಕಾವ್ಯ ಸಮಾಧಿಯ ರಸಾನುಭೂತಿಯ
ಕಾವಿನೊಳದ್ದಿಹ ಭಕ್ತನವೋಲ್ ('ತಾಯಿ-ಮಗು')

ಕಾಣುತ್ತದೆ. ಮಗು 'ಸುಮಧುರ ಸ್ತನ್ಯ ಸಮಾಧಿ'ಯಲ್ಲಿದೆ. ಶಾಂತಿಯನ್ನು ಅರಸುವ ಚೇತನಕ್ಕೆ ತಾಯಿ, ಗುರು ಸ್ಫೂರ್ತಿಯ ನೆಲೆಗಳು. ಮಾರ್ಗವನ್ನರಸುವ ಜೀವಕ್ಕೆ ಬೆಳಕಿನ ದಾಹ. ಆದುದರಿಂದ ಶಿವರುದ್ರಪ್ಪನವರ ಮೊದಲನೆಯ ಸಂಕಲನದಲ್ಲಿ ಸಹ ಬೆಳಕಿನ ಪ್ರತಿಮೆಗಳು ಸಾಲು ಸಾಲಾಗಿ ಬರುತ್ತವೆ. ಚಿಕ್ಕ ಹಣತೆಯಿಂದ ಕೋಟಿ ಸೂರ್ಯಕರ ತೇಜಃಪುಂಜತರ ವಿದ್ಯುದ್ರಾಜಿತ ರಥದವರೆಗೆ ಬೆಳಕಿನ ಪ್ರತಿಮೆಗಳು ಅವರ ಕಾವ್ಯವನ್ನು ತುಂಬುತ್ತವೆ.

ಕಾಲ ಕಳೆದಂತೆ, ಶಿವರುದ್ರಪ್ಪನವರು ಜೀವನವನ್ನು ಕಾಣುವ ರೀತಿಯಲ್ಲಿ ಮೂಲತಃ ಬದಲಾವಣೆಯಾಗಲಿಲ್ಲ. ಪ್ರತ್ಯೇಕ ಇರವಿನ ಸಂಕೋಚವನ್ನೊಡೆದಾಗ ಮಾತ್ರ, ಬೃಹತ್ತ್ತೊಂದರೊಡನೆ ಸಾಮರಸ್ಯ ಸಾಧಿಸಿದಾಗ ಮಾತ್ರ ಮಾನವನ ಚೇತನ ಸಾರ್ಥಕ್ಯ ವನ್ನು ಕಂಡುಕೊಳ್ಳುತ್ತದೆ ಎಂಬ ನಂಬಿಕೆ ಉಳಿದಿದೆ. ಆದರೆ ಈ ಇಪ್ಪತ್ತು ವರ್ಷಗಳಲ್ಲಿ ಅವರ ಕಾವ್ಯ ತುಂಬಿಕೊಂಡಿದೆ; ಇದರ ಕಾರಣ ಆವರಣ–ವ್ಯಕ್ತಿತ್ವಗಳ ಸಂಬಂಧದ ಕಲ್ಪನೆ ಇನ್ನೂ ಸಂಕೀರ್ಣವಾಗಿರುವುದು. ಆವರಣದ ಅರಿವೇ ಅವರ ಕಾವ್ಯದಲ್ಲಿ ಹೊಸ ರೂಪ ತಾಳಿದೆ. 'ದೇವಶಿಲ್ಪ' ಸಂಕಲನದಲ್ಲಿಯೂ ಸಹಮಾನವರು ಕಾವ್ಯವಲಯದಲ್ಲಿ ಬರುವುದು ವಿರಳ. ಆದರೆ ಇಲ್ಲಿ ಆಗಲೇ ಪರಮ ಶಕ್ತಿಯ ಕಲ್ಪನೆ ಬೆಳೆದಿದೆ.

ಕೊಳಲ ಹಿಡಿದ ಮೃದು ಬೆರಳೊಳು
ಪಾರ್ಥ ರಥದ ವಾಘೆಯು !
ಕೊಳಲೂದಿದ ಮಧುರಾಧರ
ದಲ್ಲಿ ಪಾಂಚಜನ್ಯವು ! ('ಕೃಷ್ಣಶಕ್ತಿ')

'ಅಂದು-ಇಂದು'ವಿನಲ್ಲಿ ಒಂದೇ ಶಕ್ತಿಯ ಎರಡು ಮುಖಗಳ ದರ್ಶನವಿದೆ :

ನಾನು ಕೂಡ ಬೆರಗಾದೆನು
ನಿನ್ನ ದಿವ್ಯ ಮಂತ್ರಕೆ !
ಮಣಿದೆ ನಾನು ಮಣ್ಣಿನಿಂದ
ಗಂಧ ತಂದ ತಂತ್ರಕೆ
ಆದರೇಕೆ ಇಂದು ನಡೆದೆ
ಬಿರುಗಾಳಿಯ ಭರದಲಿ !
ಹೂವ ಮುರಿದು ಹುಡಿಗೆ ಸುರಿದು
ನಿಷ್ಕರುಣೆಯ ತೆರದಲಿ !

* * *

ನಾನು ತಿಳಿವೆನೇನು ನಿನ್ನ
ಅರ್ಥಪೂರ್ಣ ಚೋದ್ಯವ ?
ಯಾವ ಶಿವದ ಸೃಷ್ಟಿಗಾಗಿ
ಇಂಥ ವಿಲಯ ವೈಭವ !

ದೇವಶಿಲ್ಪಿಯಿಂದ ಮನುಷ್ಯ ಚೇತನ ರೂಪ ಪಡೆಯುವ ಅನುಭವವೂ ಅರ್ಥಕ್ಕೆ ವಿಶಾರಿ ಮದು. ಚೇತನ ನೋವಿನಿಂದ ದೂರಿದಾಗ ದೇವಶಕ್ತಿ ಅದಕ್ಕೆ ವಿವೇಕವನ್ನು ತಂದು ಕೊಡಬೇಕಾಗುತ್ತದೆ:

'ನನ್ನನೇನು ಮಾಡುತಿರುವೆ
ಸಾಕು ಸಾಕು ನಿಲ್ಲಿಸು'
'ನಿನಗೇತಕೊ ಅದರ ಚಿಂತೆ ?'
'ಸರಿಯೆ ನನ್ನ ಸಾಯಿಸು'
'ಸಾವಲ್ಲವೆ ಮರುಳೆ ಇದು
ಸ್ವಸ್ವರೂಪ ಕಾರಣ
ಕೃತಿಯು ಮುಗಿದ ಮೇಲೆ ಕಾಣೊ
ಆಕೃತಿಗಳ ದರ್ಶನ'

'ಸಾಮಗಾನ'ದ ಕಡೆಯ ಕವನ 'ಬೇಡಿಕೆ'ಯನ್ನೂ 'ಕಾರ್ತೀಕ'ದ ಕಡೆಯ ಕವನ 'ಶಕ್ತಿಯ ಕೊಡು' ಕವನವನ್ನೂ ಹೋಲಿಸುವುದು ಸ್ವಾರಸ್ಯವಾಗಿದೆ. 'ಬೇಡಿಕೆ'ಯಲ್ಲಿ ಕವಿ ಹುಡಿಯಾಗಿ ದೇವರ ಅಡಿಗೆ ಸೇರಲು ಅಪೇಕ್ಷಿಸುತ್ತಾರೆ. 'ನಾನೆಂಬ ಹಿರಿಮಂಜು' ಕರಗಬೇಕೆಂದು ಬಯಸುತ್ತಾರೆ. (ಕವನದಲ್ಲಿ 'ಹುಡಿ' ಎಂಬ ಪದ ಮತ್ತೆ ಮತ್ತೆ ಹೇಗೆ ಬಳಕೆಯಾಗಿದೆ, ಗಮನಿಸಿ. ಮೊದಲ ಪಂಕ್ತಿಯಲ್ಲಿ ಅದರ ಅರ್ಥ ಬೇರೆ ಬೇರೆಯಾಗಿ ನಾಲ್ಕನೆಯ ಪಂಕ್ತಿಯಲ್ಲಿ ಅದರ ಅರ್ಥ ಗೊಂದಲವನ್ನುಂಟುಮಾಡುತ್ತವೆ. ಕ್ಷಮೆಯನ್ನು ಆಯುಧಕ್ಕೆ ಹೋಲಿಸುವುದು ಅಷ್ಟು ಸಮಂಜಸವಲ್ಲ.) 'ಕಾರ್ತೀಕ'ದಲ್ಲಿನ ಕವನದಲ್ಲಿ ಒತ್ತು ಬೀಳುವುದು ಶಕ್ತಿಯ ಮೇಲೆ. ಇದರ ಚಿತ್ರಗಳೆಲ್ಲ (ಭೋರ್ಗರೆಯುವ ಕಡಲು, ನೂರುಲ್ಕೆಯ ರಭಸಮತಿಯ ಅಬ್ಬರ, ಗುಡುಗು ಸಿಡಿಲು ಮಿಂಚು) ಶಕ್ತಿಯ ಪ್ರತಿಮೆಗಳು. ಮೊದಲನೆಯ ಕವನದ ನಾಲ್ಕನೆಯ ಪದ್ಯದ ಕಡೆಯ ಪಂಕ್ತಿಯಂತಹ ದುರ್ಬಲ ಪಂಕ್ತಿಗಳೂ ಇಲ್ಲಿಲ್ಲ. 'ಅನಾವರಣ' (೧೯೬೩)ಕ್ಕೆ ಬರುವ ಹೊತ್ತಿಗೆ ಕಣ್ಣಿಗೆ ಹೊಡೆಯುವಂತಹ ವ್ಯತ್ಯಾಸವಿದೆ. ಇಲ್ಲಿ ಪ್ರಾರ್ಥನಾ ಪದ್ಯವಿಲ್ಲ. ಇದರ ಕಡೆಯ ಕವನ ಪ್ರಾರ್ಥನೆಯಲ್ಲ, ಹಾರೈಕೆ. ಮಗುವಿಗೆ ಇದು ಆಶೀರ್ವಾದ:

ಕಣಿವೆ ತಳದೊಳು ಕೊಳೆತ ಜೊಂಡಾಗದಿರು ಮಗುವೆ,
ಬೆಟ್ಟಗುಡ್ಡವ ಹೀರಿ ತೇಗವಾಗು
ತಲೆಯ ಬಾಗದೆ ನಿಂತು, ಕೊಂಬೆ ರೆಂಬೆಯ ಚಾಚಿ
ಮಳೆ-ಬಿಸಿಲು-ಗಾಳಿಗಳ ತೊಟ್ಟಿಲಾಗು

* * *

ಹಸುರು ಹಾವಸೆ ಹಬ್ಬಿ ಕೊಳೆತ ಕೊಳವಾಗದಿರು
ಲಲಿತ ನಿರ್ಮಲ ಜಲದ ಕಾಸಾರವಾಗು
ರವಿಕಿರಣ ಮಿಡಿದಿರಲು, ಮೀನು-ಹೂ-ಹಕ್ಕಿಗಳ
ದುಂಬಿಗುಂಜಾರವದ ಸ್ವರಮೇಳವಾಗು

ಈ ಸಂಕಲನದಲ್ಲಿ ದೇವರ ಪ್ರಸ್ತಾಪ ಬರುವುದು ಎರಡೇ ಕಡೆ–ಮಾರ್ಕೆಟ್ಟಿನ ಗದ್ದಲದಲ್ಲಿ ನಿಂತ ಶನಿದೇವರ ವಿಗ್ರಹವನ್ನು ಕಂಡು 'ಶನಿಗು ಕೂಡ ಶನಿ ಕಾಟವೆ?' ಎಂದು ಕವಿ ಸಹಾನುಭೂತಿ ತೋರಿದಾಗ ಮತ್ತು ಮಾರಿಮಸಣಿಗಳ ಪೂಜೆಯ ವೈಖರಿಯನ್ನು ಕಂಡು 'ಈ ಎಲ್ಲದಕ್ಕೂ ಹಿನ್ನೆಲೆಯಾದ ಪೂಜಾರಿ'ಯನ್ನು ಟೀಕಿಸುವಾಗ. ಆದರೆ 'ಬುದ್ಧ ಜಯಂತಿ'ಯ ವ್ಯಂಗ್ಯದ ಹಿಂದೆ ಬುದ್ಧನಲ್ಲಿ ಪೂಜ್ಯಭಾವವಿದೆ, ರಾಮಕೃಷ್ಣ, ಬುದ್ಧ ಬಸವರನ್ನು ಕುರಿತು ಗೌರವದ ಪ್ರಸ್ತಾಪವಿದೆ. ಇದರ ಮುಂದಿನ ಸಂಕಲನ 'ತೆರೆದ ದಾರಿ'ಯ ಮೊದಲನೆಯ ಕವನ 'ವೈಶಾಖ ಶುಕ್ಲ ಪೂರ್ಣಿಮಾ.' ಇಲ್ಲಿಂದ ಮುಂದೆ ಕವಿ ಭಕ್ತಿಯಿಂದ ಗೌರವಿಸುವುದು ಗೌರೀಶಂಕರದೆತ್ತರಕ್ಕೆ ಬೆಳೆದ ದಿವ್ಯಚೇತನಗಳನ್ನು. ಇವರಲ್ಲಿ ಕೆಲವರು–ಬಸವಣ್ಣ, ಗಾಂಧೀಜಿಯವರಂತೆ—ದೇವರನ್ನು ನಂಬಿದವರು; ಕೆಲವರು ಬುದ್ಧನಂತೆ, ದೇವರ ವಿಷಯ ಮೌನವಾದವರು. ಆದರೆ ಎಲ್ಲ ಕಾರುಣ್ಯ ಮೂರ್ತಿಗಳು. ಕವಿ ಈಗ ತಳೆದಿರುವ ದೇವರ ಕಲ್ಪನೆ ಇದು;

ಪ್ರೀತಿ-ಕರುಣೆ-ಸ್ನೇಹ-ಮರುಕ
ಇವೇ ನಮ್ಮ ದೇವರು—
. . . . . .
ಇಲ್ಲಿ ಎಲ್ಲ ನಿರ್ಮಲ
ಇದು ಬೆಳಕಿನ ವರ್ತುಲ

('ಇವೇ ನಮ್ಮ ದೇವರು')

ಎಲ್ಲಿಯವರೆಗೆ ಪರಮಶಕ್ತಿಯೊಂದರಲ್ಲಿ ಲೀನವಾಗುವುದು ಒಂದು ಚೇತನದ ಗುರಿಯಾಗಿರುತ್ತದೆಯೊ, ಆ ಶಕ್ತಿಯ ಅನುಗ್ರಹದಿಂದ ಈ ಗುರಿಯ ಸಾಧನೆಯಾಗುತ್ತದೆ ಎಂಬ ವಿಶ್ವಾಸವಿರುತ್ತದೋ ಅಲ್ಲಿಯವರೆಗೆ ಸಹಜವಾಗಿ ಆ ಚೇತನಕ್ಕೆ ಮುಖ್ಯವಾಗಿರುವುದು ಆ ಪರಮಶಕ್ತಿಯೊಡನೆ ತನ್ನ ಸಂಬಂಧ. ಆದರೆ ಯಾವಾಗ ಈ ಕಲ್ಪನೆ ಹಿಂದಕ್ಕೆ ಸರಿದು, 'ಪ್ರೀತಿ-ಕರುಣೆ-ಸ್ನೇಹ-ಮರುಕ'ಗಳು ದೇವರಾಗುತ್ತವೋ ಆಗ ಬಿಡುಗಡೆಯ, ಸಾರ್ಥಕ್ಯದ ಕಲ್ಪನೆಯಲ್ಲಿಯೇ ಕ್ರಾಂತಿಯಾಗಬೇಕಾಗುತ್ತದೆ.

ಕಾಲ ಕಳೆದಂತೆ ಶಿವರುದ್ರಪ್ಪನವರ ಕವನಗಳಲ್ಲಿ ಸುತ್ತಲಿನ ಜಗತ್ತಿನ ಅರಿವಿನ ಸ್ವರೂಪ ಬದಲಾಗುತ್ತದೆ. 'ದೀಪದ ಹೆಜ್ಜೆ'ಯ ಹೊತ್ತಿಗೆ ಇದು ಸ್ಪಷ್ಟವಾಗಿದೆ. ಕವಿಗೆ ಮಾನವ ಜಗತ್ತಿನ ಸಂಕೀರ್ಣತೆ ಪ್ರತ್ಯಕ್ಷವಾಗತೊಡಗಿದೆ. ಏನೇನೋ ಜಾನಿಸುತ ನಿಂತ ದೀಪದ ಕಂಬದ ಕೆಳಗೆ ಚಲಿಸುತ್ತಿರುವ ನೆರಳುಗಳ ಕೂಗು ಕೇಳಿಸುತ್ತದೆ! 'ಕವಳ ತಾಯೀ ಕವಳ.'

ಒಳಗೆ ಮಗು ತೊಟ್ಟಿಲಲ್ಲಿ ಕನವರಿಸುತ್ತಿದೆ
ಪಾರಿಜಾತದ ತೋಟ ಚಿಕ್ಕೆ ಬಳಗ
ಚಂದುಮಾಮನ ಚಿಗುರೆ ಬೆನ್ನೇರಿ ಹಾರೋಣ
ತಾರೆ ಮಲ್ಲಿಗೆ ದಾರಿ ದೂರ ದೂರ

ಜೊತೆಗೇ :

ಹಗಲೆಲ್ಲ ಗಾಡಿಯ ನೆಳೆದು, ಲಾಯಕೆ ಬಂದಿದೆ ಕುದುರೆ
ಹಾರೈಸುತಿದೆ—'ಮತ್ತೆ ಬೆಳಗಾಗದಿರಲಿ'
ಬೀದಿ ಬೆಳಕಿನ ಚಾಪೆ ದೂರದೂರದವರೆಗೆ ;
ದೀಪದೀಪದ ಕೆಳಗೆ ಸಾಗುತಿವೆ ನೆರಳೆರಡು
ಕೈಕೈ ಹಿಡಿದು—ಎಂದಿನಿಂದಲೊ ಏನೊ—
ಕರುಳಿರಿಯುತಿದೆ ಕೂಗು ಕಿವುಡು ಬಾಗಿಲ ಹೊರಗೆ:
'ಕವಳ ತಾಯೀ ಕವಳ'

('ಕವಳ ತಾಯೀ ಕವಳ')

ಈಗ ವಿಚಾರಗಳ ಕುದಿತದಲ್ಲಿ, ಹಾಸುಗಂಬಿಯ ಮೇಲೆ ನೂರು ರೈಲಿನ ಉರುಳಿನ ಸ್ಪಂದನ ಉಳಿದು ಮಿಕ್ಕೆಲ್ಲ ಮೌನವಾದ ತನ್ನ ಜಗತ್ತಿನಲ್ಲಿ ನೋಯುತ್ತಿರುವ 'ಇವನ'ನ್ನು ಹಗಲು ರಾತ್ರಿ ಎಲ್ಲ ತಿವಿಯುತ್ತಿವೆ. ಪ್ರಕೃತಿ ಈಗ ಕಾಣುವ ಪರಿಯೇ ಬೇರೆ :

ಬೆಂಕಿ ಬಾಯನು ತೆರೆದು ನಗುವ ಮೂಡಲ ಬಾನು
ನೂರು ತೂತಿನ ಛತ್ರಿ ಬಿಚ್ಚುವಿರುಳಿನ ಬಾನು
ನಿಡು ಸುಯ್ಲಿನೊಲು ನಡೆವ ಗಾಳಿಗಳ ಹೊನಲು—
ಎಲ್ಲವೂ ಇವನನ್ನು ಅರೆಯುತಿಹವು

ಈ ಮನುಷ್ಯ

ಬೆಳಕ ಮುಡಿಯಲಿ ಹೊತ್ತು ನಿಂತ ಲಾಂದ್ರದ ಹಾಗೆ
ನಿಂತಿರುವನು
ಸುತ್ತ ಅನ್ಯಾಯಗಳ ಸಂತೆ ಸಾಗಿರಲಾಗಿ
ವಿಲಯ ಮೌನದೊಳಿವನು ದಿಟ್ಟಿಸುವನು ! ('ಇವನು')

ಈ ನೋವು-ಅನ್ಯಾಯಗಳ ಕುಣಿತದ ಅರಿವಿನ ಜೊತೆಗೇ ಮತ್ತೊಂದು ಬಗೆಯ ಅರಿವು ಮೂಡುತ್ತದೆ-ಆಧುನಿಕ ನಗರ ಜೀವನ ಹೇಗೆ ವ್ಯಕ್ತಿತ್ವವನ್ನು ರುಬ್ಬಿಬಿಡುತ್ತದೆ ಎಂಬುದು. ವ್ಯಕ್ತಿತ್ವ ಸೊನ್ನೆಯಾಗುವ ಪ್ರಕ್ರಿಯೆ ಹರಳಾಗುವುದು 'ಮುಂಬಯಿ ಜಾತಕ'ದಲ್ಲಿ. ಈ ಪ್ರಕ್ರಿಯೆಯ ಸಾಧನೆ ಕವನದ ಕಡೆಯ ನಾಲ್ಕು ಪಂಕ್ತಿಗಳಲ್ಲಿ ಭಯಾನಕವಾಗಿ ಚಿತ್ರಿತ ವಾಗಿದೆ :

ತಣ್ಣಗೆ ಕೊರೆವ ಕೂಳುಂಡು
ಬಾಡಿಗೆ ಮನೆಯ ನೆರಳಿನ ಕೆಳಗೆ ಮತ್ತೆ
ಸಾವಿರ ಗಾಲಿಯುಜ್ಜುವ ಕನಸ ಬಂಡಿಯ ಕೆಳಗೆ
ಹಾಸುಗಂಬಿಯ ಹಾಗೆ ತತ್ತರಿಸುತ್ತ ಮಲಗುವುದು

ಇದು ರೂಪಕವಾಗಿ 'ಪ್ರಜ್ಞೆ'ಯಲ್ಲಿ ಚಿತ್ರಿತವಾಗಿದೆ. ಈ ವ್ಯಕ್ತಿತ್ವಹತರಾದವರ ಜೊತೆಗೆ ಮನುಷ್ಯರ ನಡುವೆ ಇರುವ ಹುಲಿ, ಕೋತಿ, ನರಿಗಳ ಪರಿಚಯವೂ ಆಗುತ್ತದೆ.

ನಮ್ಮವರೆ, ಇವರೆಲ್ಲ ನಮ್ಮವರೆ ಇವರೆಲ್ಲರೂ...
ನೂರಾರು ರೀತಿಯಲಿ ಅಡ್ಡ ಹಾದಿಯ ಕಡಿದು
ಗುಡ್ಡವ ದಾಟಿ ಚಿನ್ನಕ್ಕೆ ಕನ್ನ ಕೊರೆಯುವ ಜನರು
ಬೆವರಿಲ್ಲದೆಯೆ ಬಳಿಗೆ ಬಂದುದ ತುಡುಕಿ, ಅಡಕಿ,
ಬ್ಯಾಂಕಿನಲಿ ಬೆಳೆವ ಬಡ್ಡಿಗೆ ತುಡಿವ ತಾಪಸಿಗಳು

('ನಮ್ಮವರೆ ಇವರೆಲ್ಲರೂ')

ಶಿವರುದ್ರಪ್ಪನವರ ಪ್ರಾರಂಭದ ಕವನಗಳಲ್ಲಿ ಕಾಣದ ವ್ಯಂಗ್ಯ ಅನಂತರದ ಕವನಗಳಲ್ಲಿ ಸಮರ್ಥವಾಗಿ ಬಳಕೆಯಾಗುತ್ತದೆ. ಇಂತಹ ಒಂದು ಕವನ 'ದಾಸಪಂಥ.' ದಾಸರ ಕೀರ್ತನೆಗಳ ಪ್ರತಿಧ್ವನಿಗಳು ತುಂಬಿದ ಈ ಕವನದಲ್ಲಿ ಕವಿ ಹೊಸದೊಂದು ದಾಸಪಂಥ ವನ್ನು ಕಾಣುತ್ತಾರೆ. ಈ ಪಂಥದ ದಾಸರು ಇತರ ಮಾನವರ ದಾಸರು, ಅಧಿಕಾರ–ಹಣಗಳ ದಾಸರು.

ದಾರಿ ಯಾವುದಯ್ಯಾ—ಪ್ರಮೋಷನ್ನಿಗೆ ?
ಮತವೋ ಮಠವೋ ಮಂತ್ರಿಯೋ
ಯಾರು ಹಿತವರು ನಿನಗೆ ಈ ಮೂವರೊಳಗೆ_ಎಂದು
ಸಾರಾಸಾರ ವಿಚಾರ ಮಾಡಿ, ನಾಮದ ಬಲವೊಂದನೇ ನಂಬಿ
ಬಿನ್ನಹಕೆ ಬಾಯನ್ನು

ತೆರೆವ ದಾಸವರೇಣ್ಯರನ್ನು ಕಂಡ ಕವಿ 'ಈ ಪರಿಯ ಸೊಬಗನ್ನು ಮತ್ತಾವನಲೂ ಕಾಣೆ' ಎನ್ನುತ್ತಾರೆ.

'ದೀಪದ ಹೆಜ್ಜೆ'ಯ ಮುನ್ನುಡಿಯಲ್ಲಿ ಶಿವರುದ್ರಪ್ಪನವರು ಹೇಳಿದಂತೆ 'ಜಾಗೃತ ಚೇತನ ಮೊದಲು ಎದುರಿಸಬೇಕಾದದ್ದು ತನ್ನನ್ನು; ತನ್ನ ಅಂತರಂಗದಲ್ಲಿ ಬಂದು ತಾಕಲಾಡುವ ವಿವಿಧ ಭಾವಗಳನ್ನು.' ಪ್ರಬುದ್ಧತೆಯ ಲಕ್ಷಣವಾದ ಈ ಆತ್ಮಶೋಧ 'ಜಡಿಮಳೆಯ ಇರುಳಿನಡಿ'ಯಂತಹ ಕವನಗಳಲ್ಲಿ ಕಾವ್ಯಮಯವಾಗಿ ಬಂದಿದೆ. ಅಜ್ಜಿ ಹೇಳುವ ಕಾಗಕ್ಕ ಗುಬ್ಬಕ್ಕರ ಕಥೆಯನ್ನು ಇಲ್ಲಿ ಕವಿ ಮನುಷ್ಯಜೀವನದ ಸಂದರ್ಭದಲ್ಲಿ ಅರ್ಥವತ್ತನ್ನಾಗಿ ಮಾಡಿದ್ದಾರೆ. ಕಾಗಕ್ಕನದು ಸಗಣಿ ಮನೆ, ಗುಬ್ಬಕ್ಕನದು ಕಲ್ಲಿನದು. ಮಳೆ ಸುರಿಯುತ್ತಿದೆ. ಕತ್ತಲು ಜಗತ್ತನ್ನು ತಬ್ಬಿದೆ. ಕವನದಲ್ಲಿ ಮಾತನಾಡುವ ಜೀವ ಕಾಗಕ್ಕನೊಡನೆ ಒಂದಾಗಿ ಕೂಗುತ್ತಿದೆ :

ಗುಬ್ಬಕ್ಕಾ ಗುಬ್ಬಕ್ಕಾ ಬಾಗಿಲು ತಗೀ

ಬೈಬಲಿನ ದನಿಗಳು ಇಲ್ಲಿ ಕೇಳುತ್ತವೆ :

Knock, and it shall be opened unto you
where last thou built thy church ?
upon the rock or upon the sand ?

ಮನುವಿಗೆ ಕಿರಿಮಿಾನು ಹೇಳಿತ್ತು :

ನಾಳೆ ಜಲಪ್ರಳಯ; ಕಟ್ಟು ತೆಪ್ಪವ; ಬಿಡು ಭಯವ
ನಾ ಬಂದು ದಾಟಿಸುತ್ತೇನೆ ಆ ಜಲವ

ಆ ಮಾತು ಈ ಜೀವಕ್ಕೆ ಕೇಳಿಸಲಿಲ್ಲ. ಜಡಿ ಮಳೆಯ ಇರುಳು ಬಂದಿದೆ, ಶ್ರದ್ಧೆ ಎಷ್ಟು ಗಟ್ಟಿ ಎಂದು ಪರೀಕ್ಷಿಸುತ್ತಿದೆ. ಬೈಬಲಿನ ಮಾತುಗಳು, ಮನುವಿನ ಕಥೆ ಈ ಒಂದು ಜೀವದ ಸತ್ವಪರೀಕ್ಷೆ ಯುಗಯುಗಗಳಲ್ಲಿ ಎಲ್ಲ ದೇಶಗಳಲ್ಲಿ ನಡೆದು ಬಂದ ಪರೀಕ್ಷೆಯ ಭಾಗವನ್ನಾಗಿ ಮಾಡುತ್ತದೆ. ಈ ಸಂಕಲನದಿಂದ ಮೊದಲುಗೊಂಡು ಇಂತಹ ಆತ್ಮ ಶೋಧದ ಕವನಗಳು ಹಲವನ್ನು ಶಿವರುದ್ರಪ್ಪನವರು ಬರೆದಿದ್ದಾರೆ.

ತನ್ನನ್ನು, ತನ್ನ ಸುತ್ತಲಿನ ಜಗತ್ತನ್ನು ದೃಷ್ಟಿಸುವ ಜೀವಕ್ಕೆ ಕಾಲದ ತೀಕ್ಷ್ಣ ಅರಿವುಂಟಾಗುವುದು ಅನಿವಾರ್ಯ. ಜಗತ್ತಿನಲ್ಲಿ ಕ್ಷಣಕ್ಷಣಕ್ಕೆ ಬದಲುಗಳನ್ನು ಉಂಟು ಮಾಡುತ್ತ ಎಲ್ಲ ಜೀವಗಳನ್ನು, ಎಲ್ಲ ವಸ್ತುಗಳನ್ನು ಅಂತ್ಯದೆಡೆಗೆ ದಬ್ಬುತ್ತ ಪ್ರಭುತ್ವ ನಡೆಸುವ ಈ ಶಕ್ತಿ ಆವರಣದ ಭಾಗವಾಗಿ ಅರಿವನ್ನು ಸೇರುತ್ತದೆ. 'ದೀಪದ ಹೆಜ್ಜೆ' ಸಂಕಲನದಿಂದ ಶಿವರುದ್ರಪ್ಪನವರ ಕಾವ್ಯ ಕಾಲದೊಂದಿಗೆ ಮುಖಾಮುಖಿಯಾಗುತ್ತದೆ. ಈ ಸಂಕಲನದ ಮೊದಲ ಕವನ 'ಹುಟ್ಟಿದ ಹಬ್ಬ.' ಇದು ಬಿಡಿವ್ಯಕ್ತಿಯನ್ನು ವಿಶ್ವದ ಇತಿಹಾಸದ ಸಂದರ್ಭದಲ್ಲಿ ಇರಿಸಿ ನೋಡುತ್ತದೆ. ವ್ಯಕ್ತಿಯ ಅಮುಖ್ಯತೆ, ವ್ಯಕ್ತಿಯ ಮುಖ್ಯತೆ ಎರಡೂ ಕವನದಲ್ಲಿ ಪ್ರಕಟವಾಗುತ್ತವೆ. ಬೆಳಕು ಕತ್ತಲ ಕದನ ಮೊದಲಾದ ನಿಮಿಷದಿಂದ ವಿಶ್ವದ ಇತಿಹಾಸವನ್ನು ಕಂಡ ಚೇತನ ಕಡೆಗೆ ಎನ್ನುತ್ತದೆ:

ನಾ ಬಂದೆ,
ಮೊದಲ ಸ್ಪಂದನದಿಂದೆ—
ಮುಂದೇನು ಎಂದೆ!
ಬಾಳ ಬೀದಿಯ ಬದಿಗೆ ಬೆಳ್ಗೊಳದ ಬೆಟ್ಟದಲಿ
ಗೊಮ್ಮಟನ ಕಂಡೆ,
ಮುಗಿಲಗಲದೆದೆಯಲ್ಲಿ ಚಿಕ್ಕೆಗಳ ದಂಡೆ!
ಚಂದ್ರಹಾಸನ ಮುಂದೆ
ಹಣತೆಯೊಲು ನಿಂದೆ

ಕಾಲದ ಗತಿಯ ಅನುಭವ ಮತ್ತೆ ಮತ್ತೆ ಈ ಕವನಗಳಲ್ಲಿ ಆಗುತ್ತದೆ. ಅದು ಬಾಳನ್ನು ತುಂಬದೆ ನಡೆದಾಗ ವೈಫಲ್ಯವೇ ತುಂಬಿಬರುವ ಅನುಭವ 'ಸಂಜೆದಾರಿ', 'ಮಬ್ಬಿನಿಂದ ಮಬ್ಬಿಗೆ', 'ಮುಂಬಯಿಯ ಜಾತಕ'ಗಳಲ್ಲಿ ರೂಪ ತಾಳುತ್ತದೆ. ಎಂದೆಂದೂ ಬೆರಗುಪಡಿಸುವ ಚೆಲುವು ವೈಭವಗಳ ಗಣಿಯಾದ ಸೂರ್ಯ ಆಗ ಕಾಣುವುದು ಹೀಗೆ:

ಅದೋ ಮುಳುಗುತ್ತಿದೆ ಹೊತ್ತು; ಈಗ ಅದು ಸೂಡು!
ಪಡುವಣದ ಚಿತೆಯಲ್ಲಿ ಹಗಲ ಹೆಣ ಉರಿಯುತಿದೆ
ನೋಡು ನೋಡು

ಇಂತಹ ಬಾಳಿನ ಸಂಕೇತ—

ತಲೆಗೆದರಿ ನಿಂತಿರುವ ಈಚಲಿನ ರೂಕ್ಷತೆಗೆ
ಹಿನ್ನೆಲೆಯ ರಚಿಸಿರಲು ಬೋಳು ಬಯಲು,
ದೂರದೂರದವರೆಗೆ
ಸಂಜೆ ಬಾನಿನ ಕೆಳಗೆ
ಮುಗಿವಿರದ ಪ್ರಶ್ನೆಯೊಲು ಮಲಗಿರುವ ಟಾರ್ ಬೀದಿಯಲಿ
ಕೈಹಿಡಿದ ಸರಪಳಿಯ ಜಗ್ಗುತಿದೆ ಕರಿನಾಯಿ ಮುಂದೆ ಮುಂದೆ,
ಹಿಡಿದ ಕೈ ಸಾಗುತಿದೆ ಹಿಂದೆ ಹಿಂದೆ ('ಸಂಜೆ ದಾರಿ')

ಈ ಸಂಕಲನದ ಗಮನಾರ್ಹ ಕವನಗಳಲ್ಲಿ ಒಂದಾದ 'ಗಡಿಯಾರದಂಗಡಿಯಲ್ಲಿ.' ಕಾಲದ ನಿರ್ದಯ ಪ್ರಭುತ್ವವನ್ನೂ ಮನುಷ್ಯ ಸಮಾಧಾನ ಕಂಡುಕೊಳ್ಳುವ ರೀತಿಯನ್ನೂ ಅಡಕವಾಗಿ ಚಿತ್ರಿಸುತ್ತದೆ:

ಕುಸಿದು ಕುಳಿತನು ಕುರ್ಚಿಯಲಿ ಚಿಂತಾಕ್ರಾಂತ
ಗಡಿಯಾರಗಳ ದನಿಗೆ ಕಿವಿಯ ಮುಚ್ಚಿ.
ಮನೆಯೊಳಗಿಂದ ಪುಟ್ಟ ಮೊಮ್ಮಗು ಬಂತು,
ಸಕ್ಕರೆಯ ತೊದಲಿಂದ 'ಅಜ್ಜ' ಎಂದಿತು ಒಮ್ಮೆ
ಮುಂಬೆಳಗಿನೆಳೆಬಿಸಿಲು ಸಂಜೆ ಬಾನಿಗೆ ಬಿತ್ತು

'ಮಬ್ಬಿನಿಂದ ಮಬ್ಬಿಗೆ' ಇದೇ ಕಾಲದ ನಿಷ್ಕಾರುಣ್ಯವನ್ನು ಗಡಿಯಾರದ ಮುಳ್ಳುಗಳ ಗಮನ—ಗಂಟೆ ಹೊಡೆಯುವ ಕ್ರಿಯೆಗಳ ಮೂಲಕ ತಂದುಕೊಡುತ್ತದೆ:

ಸಂಜೆ ಬಾನಿನ ತುಂಬ ಹಗಲ ನೆನಪಿನ ಚಿತ್ರ
ಮನೆಯಂಗಳದ ಮಬ್ಬು ಬೆಳಕಿನ ನಡುವೆ ತಡವರಿಸುತಿವೆ ಕಣ್ಣು.
ಮಹಡಿ ಮೆಟ್ಟಿಲ ಮೇಲೆ ಯಾರ್‍ಯಾರದೊ ಹೆಜ್ಜೆ.

ಕಾಲ ಸಾಗುತ್ತದೆ, ಹೇಗೊ ಯಾವಾಗಲೊ ಲೆಕ್ಕ ಮುಗಿಯುತ್ತದೆ. ನಿನ್ನೆ ಇದ್ದವರು ಇಂದಿಲ್ಲ. ಸೈಕಲ್ ಹತ್ತಿ ಹೊರಟವರು ಮತ್ತೆ ಬರುವುದಿಲ್ಲ.

ಹೊಳೆಯ ದಡದಲಿ ನಿಂತು ಬೆರಗಾದ ಮೂಕ ಮಗು
ನೀರು ನೀರೋ ನೀರು,
ಮೊರೆವ ನೀರು
ಕಸ ಕಡ್ಡಿ ತೇಲಿ ಬರುತ್ತಲಿದೆ ಉಕ್ಕೇರಿ ಬಂದಿರುವ
ಕೆಂಪು ನೀರಿನ ಜೊತೆಗೆ
ಬಂದುದೆಷ್ಟೋ ಏನೊ, ಹೋದುದೆಷ್ಟೋ ಏನೊ
ಯಾರು ಇಟ್ಟಿದ್ದಾರೆ ಈ ಎಲ್ಲ ದಾಖಲೆ? ('ವ್ಯತ್ಯಾಸ')

ಶಿವರುದ್ರಪ್ಪನವರ ಕಾವ್ಯಸೃಷ್ಟಿಯ ಕಾಲ ಭಾರತದ ಇತಿಹಾಸದಲ್ಲಿ ಮುಖ್ಯವಾದ ಕಾಲ. ಸ್ವಾತಂತ್ರ್ಯದ ಉದಯ ತಂದ ಹೊಂಗನಸುಗಳು ಮಾಯವಾಗಿ, ವಿಚಾರ

ನಂತರಿಗೆ ಮನಸ್ಸೆಲ್ಲ ಕಹಿಯಾಗಿ, ನಿರಾಶೆ ಮುಸುಕಿದ ಕಾಲ. ಕನ್ನಡ ಕಾವ್ಯದಲ್ಲಿ ನವೋದಯ ಮಾರ್ಗದೊಡನೆ ಸ್ಪರ್ಧಿಸಿದ ಪ್ರಗತಿಶೀಲ ಮಾರ್ಗ ಬೇಗನೆ ಕೊನೆಗಂಡು, ನವ್ಯಕಾವ್ಯ ಪ್ರಭಾವಶಾಲಿಯಾದ ಕಾಲ. ಶಿವರುದ್ರಪ್ಪನವರ ಪ್ರಾರಂಭದ ಕಾವ್ಯಗಳಲ್ಲಿ ಕವಿಯ ಕಣ್ಣುಗಳಲ್ಲಿ ತಾರೆಗಳು ಪ್ರತಿಬಿಂಬಿಸುವುದನ್ನು ಕಾಣಬಹುದು. ಅವರ ಕಾವ್ಯ ಸೃಷ್ಟಿಯ ಒಂದು ವೈಶಿಷ್ಟ್ಯ ಎಂದರೆ ಜೀವನದ ಅವರ ಗ್ರಹಿಕೆ ವ್ಯಾಪಕವೂ ಸಂಕೀರ್ಣವೂ ಹೆಚ್ಚು ವಾಸ್ತವಿಕವೂ ಆದಷ್ಟೂ, ಸುಲಭವಾಗಿ ಪರಿಪೂರ್ಣತೆಯನ್ನೂ ಜೀವನದ ಅರ್ಥ ವನ್ನೂ ಕಂಡೆನೆಂದುಕೊಳ್ಳುವ ಪ್ರವೃತ್ತಿ ಮಾಯವಾಯಿತಲ್ಲದೆ ಆದರ್ಶದ ದರ್ಶನವೇ ಮಾಯವಾಗಲಿಲ್ಲ ಎನ್ನುವುದು. ಅವರ ಈಚಿಗಿನ ಕವನಗಳಲ್ಲಿ ದೇವರ ಪ್ರಸ್ತಾಪ ಬಹು ವಿರಳ; ಆದರೆ ದೇವಮಾನವರನ್ನು, ಹಿರಿಮೆಯನ್ನು ಕವಿಚೇತನ ಗೌರವಿಸುತ್ತದೆ. ಇವರು ಬಾಳಿನಲ್ಲಿ ಸಾಮರಸ್ಯವನ್ನು ಸಾಧಿಸಿದವರು, ಒಳ-ಹೊರಗುಗಳಲ್ಲಿ ಭಿನ್ನತೆ ಇಲ್ಲ ದಂತೆ ಬಾಳಿ ಕಾಲನನ್ನು ಗೆದ್ದವರು :

ನೀನೊಬ್ಬ ವಿಚಿತ್ರ ಮನುಷ್ಯ,
ಎಲ್ಲವನ್ನೂ ಅಂಗಡಿ ತೆರೆದು
ಬೆಲೆ ಕಟ್ಟಬರದ ಈ ಮಂದಿಯ ಮುಂದೆ
ಹರಾಜಿಗಿಟ್ಟೆ.
ಉತ್ತ ಹೊಲ : ತೆರೆದ ಪುಸ್ತಕ
ಗಾಜುಮನೆ ಗಡಿಯಾರ
ನಿನ್ನ ಬದುಕು
ಕಾವಿಯುಡಲಿಲ್ಲ. ಹೆಣ್ಣ ಬಿಡಲಿಲ್ಲ ;
ಎಲ್ಲೋ ಮಠದೊಳಗೆ ರಹಸ್ಯವಾಗಿ
ಜಪಮಣಿ ಎಣಿಸಿ ಸಮಾಧಿಸ್ಥನಾಗಲಿಲ್ಲ ;
ತೆರೆದ ಬಯಲಿನ ಕೆಳಗೆ ಎಲ್ಲರ ಜೊತೆಗೂ ಕೂತು
ಪ್ರಾರ್ಥಿಸಿದೆ :
ಸಬಕೋ ಸನ್ಮತಿ ದೇ ಭಗವಾನ್ (ಗಾಂಧಿ)

ಗಾಂಧಿ, ಬಸವೇಶ್ವರ, ಅಕ್ಕಮಹಾದೇವಿ, ವಿವೇಕಾನಂದ, ಅರವಿಂದ ಇಂತಹವರು ಕಣ್ಣ ಮುಂದಿರುವುದರಿಂದಲೇ ಕವಿ ಬಾಳಿನ ಸಂಕೀರ್ಣತೆಯನ್ನು ಗುರುತಿಸಿಯೂ ಮನುಷ್ಯನ ಬಾಳು ಅರ್ಥಪೂರ್ಣವಾಗಬಹುದೆಂಬ ವಿಶ್ವಾಸವನ್ನು ಉಳಿಸಿಕೊಂಡಿರುವುದು. ಈ ಆತ್ಮ ವಿಶ್ವಾಸ ಬರಿಯ ಹಂಬಲವಲ್ಲ. ಮುಗ್ಧ ನಂಬಿಕೆಯಲ್ಲ. ಯಾವುದೊ ಶಕ್ತಿ ನುಗ್ಗಿ ಬರುತ್ತದೆ. ಜಡತೆಯನ್ನು ದಬ್ಬುತ್ತದೆ, ಕತ್ತಲೆಯನ್ನು ದೂಡುತ್ತದೆ, ನಿಂತ ನೆಲವನ್ನು ನೆಚ್ಚಿದ ದೇವರ ಚಿತ್ರವನ್ನು ಕೊಚ್ಚುತ್ತದೆ, ಜೊತೆಗೇ ಬೆಳದಿಂಗಳನ್ನು ಹೊಂದಿಸುತ್ತದೆ.

ನಾನು ಹೇಗೋ ಇದ್ದೆ
ಈ ಇದರೊಳಕ್ಕೆ ನೀನೇಕೆ ನುಗ್ಗಿದೆ?
ನನ್ನೊಳಗಿನರಕೆಗಳಿಗೆಲ್ಲ ಸರ್ಚ್ ಲೈಟ್ ಬಿಟ್ಟು ತೋರಿಸಿದೆ

ಮುಗಿದಾಸೆಯ ಕಿವಿಗೆ ಪುಂಗಿಯನ್ನೂದಿ ಹೆಡೆ ಬಿಡಿಸಿದೆ,
ಮುಚ್ಚಿದಂಗಡಿಯ ಬಾಗಿಲು ತೆರೆದು ಜವಳಿಯ
ಥಾನು ಥಾನನ್ನೆಲ್ಲ ಬಿಚ್ಚಿ ಹರಡಿದೆ.
ಬಿರುಗಾಳಿ–ಮಿಂಚು–ಮೋಡಗಳನ್ನೆ ತಂದು ಜಡಿಮಳೆ ಸುರಿಸಿ
ನಾ ನಿಂತ ನೆಲೆಯೆಲ್ಲವನು ಕರಗಿಸಿದೆ.
ದೇವರ ಕೋಣೆಗೂ ನೀರು ನುಗ್ಗಿಸಿ ನಾನಿದುವರೆಗೂ ಪೂಜಿಸಿದ
ಪಟವನ್ನೆ ಕೊಚ್ಚಿದೆ.
ಈ ಮುಂಗಾರು ಸಂಜೆಯ ಕೆಳಗೆ ಗಾಯಗೊಂಡುರುಳಿ–
ದಿರುಳಿನ ಮೇಲೆ ಸದ್ದಿರದೆ ಬೆಳುದಿಂಗಳನ್ನೆ ಹೊಚ್ಚಿದೆ.

ಕವಿಯ ಜೀವನದ ಅನುಭವ ಹೇಗೆ ಸಂಕೀರ್ಣಗೊಂಡಿದೆ ಎಂಬುದನ್ನು 'ಬೀಜದಿಂದ ಬೀಜಕ್ಕೆ' ಕವನದಲ್ಲಿ ಕಾಣಬಹುದು. ಕ್ರೂರಿಯಾಗಿ, ವಿನಾಶಕ ಶಕ್ತಿಯಾಗಿ ಕಾಲ ಅನುಭವಕ್ಕೆ ಬಂದಿದೆ. ಆದರೆ ಅದೇ ಕಾಲ ಈಗ ಪೋಷಕ ಶಕ್ತಿಯಾಗಿ, ಉಳಿಯ ಬೇಕಾದದ್ದನ್ನು ತನ್ನ ಗರ್ಭದಲ್ಲಿಟ್ಟುಕೊಂಡು ಪರಿಪಕ್ವ ಗಾಳಿಗೆ ಬಂದಾಗ ಬೆಳೆಯಲು ಹೊರಚೆಲ್ಲುವ ಶಕ್ತಿಯಾಗಿ ಕಾಣುತ್ತದೆ:

ಬೀಜದಿಂದ ಬೀಜಕ್ಕೆ :
ಈ ನಡುವೆ ಎಷ್ಟೊಂದು ಮರ, ಎಷ್ಟು ಎಲೆ
ಎಷ್ಟು ಹೂ, ಎಷ್ಟು ಹಣ್ಣು !
ಎಲ್ಲಾ ಮಣ್ಣು.
ಈ ಒಂದು ಬೀಜ ಕಡೆಗೂ ಮತ್ತೆ
ಬೀಜವಾಗುವುದಕ್ಕೆ.

* * *

ಕೊನೆಗೊಂದು ನೆನಪಾಗಿ, ಕಂಬನಿಯಾಗಿ,
ಕತೆಯಾಗಿ, ಕವಿತೆಯಾಗಿ,
ಲೈಬ್ರೆರಿಯ ತುಂಬ ಪುಸ್ತಕವಾಗಿ,
ಮತ್ತೆ ಒಂದು ಹತ್ತಾಗಿ ಹತ್ತು ನೂರಾಗಿ
ಲಕ್ಷೋಪಲಕ್ಷವಾಗಿ, ನೆಲದೊಳಗೆ ಬಿದ್ದು ಮೇಲೆದ್ದು
ಮರಮರದ ತುದಿಗೇರಿ ಮತ್ತೆ ಬೀಜವೆ ಆಗಿ
ಹಿಂದು ಮುಂದನ್ನೆಲ್ಲ ತನ್ನೊಳಗೆ ಸಂಧಿಸಿಕೊಂಡ ಬಿಂದುವಾಗಿ
ಬೀಜದಿಂದ ಬೀಜಕ್ಕೆ
ಇದರ ಪಯಣ
'ಅಚಲೋಽಯಂ ಸನಾತನಃ.'

ಕತ್ತಲೆಗೆ ಕೊನೆಯಿರದ ಬಾಯಾರಿಕೆ, ಎಷ್ಟೊಂದು ಬೆಳಕನ್ನು ಇದು ಉಟ್ಟರೂ, ತೊಟ್ಟರೂ, ತಿಂದರೂ, ಕುಡಿದರೂ ಇದರ ಹಸಿವು, ದಾಹ ಇಂಗುವುದಿಲ್ಲ ಎಂದು ತಿಳಿದೂ ಕವಿ ಹಣತೆಯನ್ನು ಹಚ್ಚುತ್ತಾರೆ.

ಇದು ಪ್ರಾಯಶಃ ಆಧುನಿಕ ಕನ್ನಡ ಕಾವ್ಯದಲ್ಲಿ ಶಿವರುದ್ರಪ್ಪನವರ ಸ್ಥಾನವನ್ನು ನಿರ್ಧರಿಸುವ ಮುಖ್ಯ ಅಂಶಗಳಲ್ಲಿ ಒಂದು. ತಾರುಣ್ಯ ಸಹಜವಾದ ತಾರೆಗಣ್ಣು, ಆರಾಧನಾ ಮನೋಭಾವ ಇವುಗಳಿಂದ ಕಾವ್ಯಜಗತ್ತಿಗೆ ಕಾಲಿಟ್ಟ ಅವರು ನಿರಾಸೆ, ನೋವು, ಕಹಿಗಳನ್ನು ಅನುಭವಿಸಿದರೂ ಅವನ್ನು ಅರಗಿಸಿಕೊಂಡರು. ಎಂದೂ ಎಲ್ಲೂ ಬಾಳಿನ ಭಾಗವಾದ ನೋವು, ಭ್ರಮನಿರಸನ, ಕಾಲದ ಕಾರ್ಯಗಳನ್ನು ಅನುಭವಿಸಿದರು, ಬಾಳಿನ ಸಂಕೀರ್ಣತೆಯನ್ನು ಕಾಲ್ಪನಿಕವಾಗಿ ಗ್ರಹಿಸಿದರು. ಸುಲಭ ಸಮಾಧಾನ, ಭರವಸೆಗಳನ್ನು ದೂರ ಇಟ್ಟರು. ಆದರೆ ನೈರಾಶ್ಯಕ್ಕೆ ಬಾಳನ್ನು ಔತಣಗೈಯಲಿಲ್ಲ. ಈ ಬೆಳವಣಿಗೆ ಎಷ್ಟು ಸಹಜವಾದುದು ಎಂಬುದು ಅವರ ಕಾವ್ಯದ ಚಿತ್ರ–ಪ್ರತಿಮೆ–ಭಾಷೆಗಳಲ್ಲಿನ ಬದಲಾವಣೆಗಳು ತೋರಿಸುತ್ತವೆ. (ಆದರೆ ಬೆಳಕಿನ ಪ್ರತಿಮೆಗಳು, ಹಾಲನ್ನೂಡಿಸುವ ತಾಯಿಯ ಚಿತ್ರ ಅವರ ಮೊದಲನೆಯ ಸಂಕಲನದಿಂದ ಈಚೆಗಿನ ಕವನಗಳವರೆಗೆ ಉಳಿದು ಬಂದಿರುವುದನ್ನು ಗಮನಿಸಬೇಕು.) ಅವರ ಹಲವಾರು ಯಶಸ್ವಿ ಕವನಗಳಲ್ಲಿ ಅವರ ಭರವಸೆ ಕಾವ್ಯವಾಗಿ ರೂಪತಾಳುತ್ತದೆ ಎಂಬುದು ಮುಖ್ಯವಾದ ಸಂಗತಿ. ಮೇಲೆ ಉದ್ಧರಿಸಿದ 'ಕೊನೆಗೊಂದು ನೆನಪಾಗಿ, ಕಂಬನಿಯಾಗಿ', ಎಂದು ಪ್ರಾರಂಭವಾಗುವ ಪಂಕ್ತಿಗಳನ್ನೆ ಗಮನಿಸಬಹುದು. ಶಿವರುದ್ರಪ್ಪನವರು ಪ್ರಾರಂಭದ ಕವನಗಳಲ್ಲಿ ನಾಲ್ಕು ಅಥವಾ ಐದು ಮಾತ್ರೆಗಳ ಎರಡು ಗಣಗಳ ಹ್ರಸ್ವ ಪಂಕ್ತಿಯಲ್ಲಿ ಪಕ್ಷಪಾತ ತೋರಿದ್ದಾರೆ. ಆದರೆ ಅದು ಬೇಗ ಯಾಂತ್ರಿಕವಾಗುತ್ತದೆ. ಅಂತಹ ಹಲವು ಪಂಕ್ತಿಗಳನ್ನು ಪೋಣಿಸಿದಾಗ ಓಟ ವೇಗವಾಗುತ್ತದೆ. ಚಿಂತನೆಗೆ ಹೊಂದಿಕೊಳ್ಳದ ಛಂದಸ್ಸು ಅದು. ಮೇಲೆ ಉದ್ಧರಿಸಿದ ಭಾಗದಲ್ಲಿಯೂ ಹ್ರಸ್ವ ಪಂಕ್ತಿಗಳಿವೆ :

ಕತೆಯಾಗಿ, ಕವಿತೆಯಾಗಿ
ಬೀಜದಿಂದ ಬೀಜಕ್ಕೆ
ಇದರ ಪಯಣ.

ಇವು ದೀರ್ಘ ಪಂಕ್ತಿಗಳ ನಡುವೆ ಬರುವುದನ್ನು ಗಮನಿಸಬೇಕು. ಅಲ್ಲದೆ ಅತ್ಯಂತ ದೀರ್ಘ ಪಂಕ್ತಿಯನಂತರ ಬರುವ ಮೇಲಿನೆರಡು ಪಂಕ್ತಿಗಳು ಗಮನವನ್ನು ಸೆಳೆಯುತ್ತವೆ. ಹೀಗಾಗಿ ಕವನದ ಮುಖ್ಯ ಭಾವನೆಗೆ ಸಹಜವಾಗಿ ಪ್ರಾಧಾನ್ಯ ದೊರೆಯುತ್ತದೆ. ಈ ಭಾಗದಲ್ಲಿ ಕ್ರಿಯೆಯ ಮಾನಸಿಕ ಸ್ವರೂಪ

ನೆನಪಾಗಿ, ಕಂಬನಿಯಾಗಿ,
ಕತೆಯಾಗಿ, ಕವಿತೆಯಾಗಿ,
ಲೈಬ್ರೆರಿಯ ತುಂಬ ಪುಸ್ತಕವಾಗಿ

ಎಂಬ ಪಂಕ್ತಿಗಳಲ್ಲಿ ಪ್ರಕಟವಾಗಿ, ಅದರ ಗಮನ

ನೆಲದೊಳಗೆ ಬಿದ್ದು ಮೇಲೆದ್ದು
ಮರಮರದ ತುದಿಗೇರಿ ಮತ್ತೆ ಬೀಜವೆ ಆಗಿ

ಎಂಬ ಮಾತುಗಳಲ್ಲಿ ಕ್ರಿಯೆಯ ಭೌತಿಕ ರೂಪದ ನಾಟ್ಯಕರಣವಾಗಿ ಅದರ ತಾತ್ವಿಕ (metaphysical) ಸ್ವರೂಪ

ಹಿಂದುಮುಂದನೆಲ್ಲ ತನ್ನೊಳಗೆ ಸಂಧಿಸಿಕೊಂಡ ಬಿಂದುವಾಗಿ

ಎಂಬ ಪಂಕ್ತಿಯಲ್ಲಿ ಪ್ರಕಟವಾಗುತ್ತದೆ. ಈ ಭಾಗ ನಿರೂಪಿಸಿರುವ ಕವಿಯ ದರ್ಶನಕ್ಕೆ, ನೂರಾರು ವರ್ಷಗಳ ಹಿಂದಿನ ವಾಕ್ಯ ಕಡೆಯ ಪಂಕ್ತಿಯಲ್ಲಿ ಪ್ರತ್ಯಕ್ಷವಾಗಿ ಯುಗಯುಗಗಳ ಅನುಭವದ ಮುದ್ರೆಯನ್ನು ಒತ್ತುತ್ತದೆ.

ಸುಮಾರು ಇಪ್ಪತ್ತು ವರ್ಷಗಳಲ್ಲಿ ಹತ್ತು ಕವನ ಸಂಕಲನಗಳನ್ನು ಪ್ರಕಟಿಸಿ ಇನ್ನೂ ಬೆಳೆಯುತ್ತಿರುವ ಕವಿಯ ಸೃಷ್ಟಿಯನ್ನು ಹಲವು ದೃಷ್ಟಿಗಳಿಂದ ಕಾಣಬಹುದು. ಶಿವರುದ್ರಪ್ಪನವರನ್ನು ಅನೇಕ ಬಾರಿ 'ಸಮನ್ವಯ ಕವಿ' ಎಂದು ಕರೆದಿದ್ದಾರೆ. ಹಲವು ಗಿಡಗಳ ಹೂವುಗಳನ್ನು ಬಿಡಿಸಿ ಒಂದು ಬುಟ್ಟಿಯಲ್ಲಿ ಒಟ್ಟಿಗೆ ಇಟ್ಟಂತೆ, ನವೋದಯ–ಪ್ರಗತಿ–ನವ್ಯ ಮಾರ್ಗಗಳಲ್ಲಿ ಉತ್ತಮ ಎಂದು ಕಂಡ ಅಂಶಗಳನ್ನು ಒಟ್ಟಿಗೆ ಜೋಡಿಸಿದರು ಎಂದು ಈ ಮಾತಿನ ಅರ್ಥವಾಗಬಾರದು. ನವೋದಯದ ಮಾರ್ಗದಿಂದ ಕಾವ್ಯ ಜಗತ್ತಿಗೆ ಕಾಲಿಟ್ಟು, ಯಾವ ಒಂದು ಮಾರ್ಗಕ್ಕೂ ಮುಡಿಪಾಗದೆ, ತನ್ನ ಅನುಭವದ ಸ್ತರಗಳನ್ನು ಬೆಳೆಸಿ, ಬಾಳಿನಲ್ಲಿ ತಮ್ಮ ಶ್ರದ್ಧೆ ತಮ್ಮ ನಂಬುಗೆಗಳನ್ನು ಉಳಿಸಿಕೊಂಡು, ತಮ್ಮ ಕವಿಚೇತನದ ಸ್ಪಂದನಕ್ಕೆ ಕಾವ್ಯದಲ್ಲಿ ಅಭಿವ್ಯಕ್ತಿ ಕೊಟ್ಟ ಕವಿ ಶಿವರುದ್ರಪ್ಪನವರು ಎಂಬ ದೃಷ್ಟಿಯಿಂದ ಈ ಲೇಖನವನ್ನು ಬರೆದಿದೆ. ಅವರ ಕಾವ್ಯಸೃಷ್ಟಿಗೆ ಹಲವು ಮುಖಗಳುಂಟು. 'ಸಂಕ್ರಮಣ'ದಂತಹ ಬಿಡಿ ಕವನಗಳ ವಿವರವಾದ ಅಭ್ಯಾಸವನ್ನೂ ಮಾಡಬಹುದು. ಆದರೆ ಇಲ್ಲಿ ಅವರ ಕಾವ್ಯದ ಸಮಗ್ರ ಅಭ್ಯಾಸವನ್ನು ಪ್ರಯತ್ನಿಸಿಲ್ಲ. ಇತ್ತೀಚೆಗೆ ಅವರ ಕಾವ್ಯ ಹೊಸ ಆಯಾಮಗಳನ್ನು ಪಡೆಯುತ್ತಿರುವಂತೆ ಕಾಣುತ್ತದೆ. ಬೆಳೆಯುತ್ತಿರುವ ಕವಿ ಯಾವ ಭಾಷೆಗಾದರೂ ಆಸ್ತಿಯೇ.

## ಕ. ವೆಂ. ರಾಜಗೋಪಾಲ್

# ಜಿ.ಎಸ್.ಎಸ್-ಸಂಪ್ರದಾಯ-ಹೊಣೆಗಾರಿಕೆ

೧

ಹೊಸಗನ್ನಡ ಕಾವ್ಯಪರಂಪರೆಯಲ್ಲಿ ಖಚಿತವಾದ ಮೂರು ತಲೆಮಾರುಗಳ ನಂತರ ಆ ಸಂಪ್ರದಾಯದ ಹಾದಿಯಲ್ಲಿ ಅಂದರೆ 'ಭಾವಗೀತೆ'ಯ ಪರಂಪರೆಯನ್ನು ರಕ್ಷಿಸಿಕೊಂಡು ಬಂದಿರುವ ನಾಲ್ಕನೆಯ ಹಂತಕ್ಕೆ ಜಿ.ಎಸ್.ಎಸ್. ಮತ್ತು ಕಣವಿಯವರು ಸೇರುತ್ತಾರೆ. ಇಂಥ ಹೊಣೆಗಾರಿಕೆಯು ಇವರಿಬ್ಬರಿಗೂ ಗುರುಮುಖೇನ ಬಂದಂತೆ ತೋರುತ್ತಿದೆ. ಜಿ.ಎಸ್.ಎಸ್ ಅವರಿಗೆ ಸುಪ್ರಸಿದ್ಧ ರಾಷ್ಟ್ರಕವಿ ಕುವೆಂಪು ಗುರುಗಳಾಗಿಯೂ ಕಣವಿಯವರಿಗೆ ಕವಿ 'ಮಧುರಚೆನ್ನ'ರು ಪ್ರಭಾವವಾಗಿಯೂ ಬಂದಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ. ಇವರಿಬ್ಬರನ್ನು ಗೆಳೆತನದಿಂದಲೂ ಕಾಲದ ಹೊಂದಿಕೆಯಿಂದಲೂ ಗುರುತಿಸ ಬಹುದಾಗಿದೆ. ನಮ್ಮ ಹೊಸಗನ್ನಡ ಕಾವ್ಯಪರಂಪರೆಯನ್ನು ಇವರು ಪ್ರಾಮಾಣಿಕವಾಗಿ ರಕ್ಷಿಸಿಕೊಂಡು ಬಂದಿರುತ್ತಾರೆ.

ಕುವೆಂಪು ಮೊದಲಾದವರು ಕವಿಗಳಾಗಿ ಹುಟ್ಟಿ ಸಾರ್ಥಕಗೊಳಿಸಿದ ಸಂಪ್ರದಾಯವು ನಮ್ಮ ಸಂಸ್ಕೃತಿಯ ಆದರ್ಶಗಳೆಲ್ಲವನ್ನೂ ತುಂಬಿಕೊಂಡಿದ್ದು ಅದೇ ವೇಳೆಗೆ ಸ್ವಾತಂತ್ರ್ಯದ ಹೋರಾಟವು ಒಂದು ನಿಶ್ಚಿತ ಆವೇಶವಾಗಿ 'ಗಾಂಧಿ' ಆ ಎಲ್ಲದರ ಜೀವಂತ ಪ್ರತಿಮೆಯಾಗಿದ್ದ ಕಾರಣ ನಮ್ಮ ಸಾಹಿತ್ಯದ ಎಲ್ಲ ಪ್ರಕಾರಗಳ ಮೇಲೂ ಅವರ ಪ್ರಭಾವವು ಮುಪ್ಪೆಯೊತ್ತಿದಂತೆ ಮಾಡಿ ಅವರನ್ನೇ ಕುರಿತ ರಚನೆಗಳು ಹೇರಳವಾದುವು. ಇಲ್ಲಿ ಕಾಂಗ್ರೆಸೇತರರೂ 'ಗಾಂಧಿ'ಯನ್ನು ಹೊಗಳಿರುವುದನ್ನು ಮರೆಯುಬಾರದು.

ಗಾಂಧಿ ಪ್ರಭಾವವನ್ನು ಮೀರಲಾರದೆ ನಮ್ಮ ಕವಿಗಳು (ಭಾರತದ ಉಳಿದೆಲ್ಲ ಭಾಷೆಗಳಲ್ಲೂ ಇದೇ ಪರಿಸ್ಥಿತಿಯನ್ನು ಗುರುತಿಸಬಹುದು) ಕಾವ್ಯರಚನೆಯಲ್ಲಿ ಸಂಸ್ಕೃತಿಯ 'ಮಡಿವಂತಿಕೆ'ಯನ್ನು ಮೌಲ್ಯವೆನ್ನುವಂತೆ ಒಪ್ಪಿಕೊಂಡುಬಿಟ್ಟರು. ಅಲ್ಲದೆ 'ಗಾಂಧೀಜಿ'ಯ ವಿಡಂಬನೆಯನ್ನೇ ಅರಿಯದವರಾದರು. ಆದುದರಿಂದ ಕಾವ್ಯಸಂಪ್ರದಾಯಕ್ಕೆ ಈ ಬಗೆಯ ಆದರ್ಶಗಳು ಮೌಲ್ಯಗಳೆಂಬ ಭ್ರಮೆಯುಂಟಾಗಿ ಸಾಹಿತ್ಯರೂಪದಲ್ಲಿ ಕಾಣಿಸಿಕೊಳ್ಳಲು ಅವಕಾಶವಾಯಿತು. ಅವುಗಳಲ್ಲೆಲ್ಲಾ ನಿಜವಾದ ಮೌಲ್ಯವಾಗಿದ್ದುದು 'ಸ್ವಾತಂತ್ರ್ಯ'ವೊಂದೇ. ನಮಗೆ ಸ್ವಾತಂತ್ರ್ಯ ಬಂದನಂತರ ಈ ಆದರ್ಶಗಳ ವಿಪರ್ಯಾಸವು ಬಯಲಾಗಿ ಇವುಗಳು ಬದುಕಿನ ಪ್ರವಾಹದಲ್ಲಿ ತೇಲುವ ನೊರೆಗಳೆಂದು ಈಗಂತೂ ಅನಕ್ಷರಸ್ಥ

ರಿಗೂ ತೋರದೆ ಇರಲಾರದು. ಇಂತಹ ಸಾಮಾಜಿಕ ಪರಿಸ್ಥಿತಿಯೇ ನಮ್ಮ ಕಾವ್ಯದ ರೊಮಾಂಟಿಕ್ ಸಾಹಿತ್ಯ ಕೃತಿಗಳಿಗೆ ಹೆಸರಿಟ್ಟುದಲ್ಲದೆ ಆದರ್ಶಗಳಿಂದ ತುಂಬಿದ ಬುಟ್ಟಿಯನ್ನು ಕಸದಂತೆ ಕಾಣಲು ಅವಕಾಶವಾಯಿತು. ನಮ್ಮ ಭಾವಗೀತೆಗಳನ್ನು ತಾತ್ಕಾಲಿಕ ಸುಖಕ್ಕಾಗಿ ಅಥವಾ ಸಂಗೀತಗಾರನ ಚಾತುರ್ಯಕ್ಕಾಗಿ ಮೆಚ್ಚಿಕೊಳ್ಳುವ ಪರಿಪಾಠವಾಗಿರುವುದನ್ನು ಇಲ್ಲಿ ನೆನೆಯಬೇಕಾಗುತ್ತದೆ. ಈ ಬಗೆಯ ಸಂಪ್ರದಾಯದ ಹೊಣೆಗಾರಿಕೆಯನ್ನು ಮನಃಪೂರ್ವಕ ಹೊತ್ತಾಗ ಅದು ಭಾರವಾಗುವುದಲ್ಲದೆ ಸ್ವಂತತನದ ಬೆಳವಣಿಗೆಗೂ ಅಡ್ಡಿಯಾಗುತ್ತದೆ. ಸ್ವತಃ ಸಮರ್ಥರಾದ ಈ ಇಬ್ಬರು ಕವಿಗಳನ್ನು—ಜಿ.ಎಸ್.ಎಸ್. ಮತ್ತು ಕಣವಿ ಇಂಥ ಹೊಣೆಗಾರಿಕೆಯು ಆಹುತಿ ತೆಗೆದುಕೊಂಡಂತೆ ಆತಂಕವೂ ಉಂಟಾಗುತ್ತದೆ. ಪ್ರಸ್ತುತ ಜಿ.ಎಸ್.ಎಸ್. ಅವರ ಕವನಗಳನ್ನು ಇಲ್ಲಿ ಪರಿಶೀಲಿಸಬಹುದಾಗಿದೆ.

೨

'ಭಾವಗೀತ' ಸರಳ, ಸುಂದರ, ತನ್ನ ಮುಗ್ಧತೆಯಿಂದ ಮುಗ್ಧ ಮನಸ್ಸಿಗೆ ತಟ್ಟುವಂಥದು. ಬೇಂದ್ರೆ, ಕುವೆಂಪು, ಪುತಿನ, ಅಡಿಗ, ನರಸಿಂಹಸ್ವಾಮಿ, ಗೋಕಾಕ್ ಮೊದಲಾದವರು ಇದಕ್ಕೆ ಸೋತುದು ಸಹಜ. ಆದರೂ ಅದರ ಪರಂಪರಾಗತ ರಕ್ಷಣೆಯ ಹೊಣೆಗಾರಿಕೆ ಅಪಾಯಕರ. ಏಕೆಂದರೆ ಹೀಗೆ ಮನಸೋಲುವುದರಿಂದ ಕವಿಯ ಸ್ವಂತಿಕೆ ಬೆಳೆಯಲಾರದು; ಬದುಕಿನ ಸಮಕಾಲೀನತೆಯನ್ನು ಕಡೆಗಣಿಸಬೇಕಾಗುವಂಥದು. ಎರಡನೆಯ ಆಕ್ಷೇಪಣೆಗೂ ಕಾರಣವಿದೆ: ಒಂದು ಕಾಲದ ಭಾವಗೀತೆ ಯಶಸ್ವಿಯಾದಾಗ ತನ್ನ ಸಮಕಾಲೀನತೆಯಿಂದ ಅದು ಹುಟ್ಟಿದುದಲ್ಲದೆ ಜೀವನ ಸತ್ವವನ್ನೆಲ್ಲಾ ಒಳಗೊಂಡ ಸಮಯದಲ್ಲಿ ಅದು ಕಾಲಾತೀತವಾಗಿಯೂ ಬಿಡುತ್ತದೆ; ಎಲ್ಲ ಕಾಲದ ಮನಸ್ಸಿಗೂ ಮುಟ್ಟುತ್ತದೆ, ಮತ್ತು ಅಂಥ ಕಾಲವು ದಾಟಿದ ವೇಳೆಗೆ ಕೇವಲ ನಿಟ್ಟುಸಿರನ್ನುಂಟು ಮಾಡುತ್ತದೆ. ಈ ನಿಟ್ಟುಸಿರಿನ ಸಂವೇದನೆಯಲ್ಲಿ ಸಮಕಾಲೀನತೆಯ ದೌರ್ಬಲ್ಯಗಳು ಮಾತ್ರ ಅತಿಯಾದಂತೆ ಕಂಡು ಜೀವನಕ್ಕೆ ಆರೋಗ್ಯಕರವಾದ ಧೈರ್ಯವನ್ನು ಕುಂದಿಸುತ್ತದೆ. ಕಾವ್ಯವು ತನ್ನ ಸಮಕಾಲೀನ ಜೀವನದ ಆಧಾರವಾಗಿ ಧೈರ್ಯವನ್ನು ತುಂಬಬಲ್ಲುದಾಗಿರಬೇಕಷ್ಟೆ. ಈ ನಿಟ್ಟಿನಲ್ಲಿ ಯೋಚಿಸಿದಾಗ ಕಾವ್ಯಕ್ಕೆ ಹೊಸ ಹೊಸ ರೂಪಗಳ ಅವಶ್ಯಕತೆ ಕಂಡುಬರುತ್ತದೆ. ಆದುದರಿಂದ ಕವಿಯು ಸಂಪ್ರದಾಯದ ಹೊಣೆಗಾರಿಕೆಯನ್ನು ಹಿಂದುಮುಂದು ವಿಚಾರಮಾಡದೆ ಮುಗ್ಧತೆಯಿಂದ ವಹಿಸಿಕೊಂಡರೆ ಪ್ರಾಮಾಣಿಕವಾಗಿರುವುದಕ್ಕೇ ಹೆಣಗಬೇಕಾಗುತ್ತದೆ. ಅಲ್ಲದೆ ಸ್ವಸಾಮರ್ಥ್ಯವನ್ನೂ ಬಲಿಕೊಡಬೇಕಾಗುತ್ತದೆ. ಜಿ.ಎಸ್.ಎಸ್. ಅವರು ಗುರುಪರಂಪರೆಗೆ ಓತು ತಲೆಬಾಗಿದುದರ ಫಲವಾಗಿ ಅನುಭವಿಸುವ, ಅನುಭವಿಸುತ್ತಿರುವ ಒಳತೋಟಿ ಅವರ ಕಾವ್ಯದಲ್ಲಿ ಕಂಡುಬಂದಿರುವುದರಿಂದ ಇಂಥ ಅನುಮಾನವನ್ನು ಹೇಳುತ್ತಿದ್ದೇನೆ.

ಸಂಪ್ರದಾಯದ ಹೊಣೆಗಾರಿಕೆಗೆ ಧೈರ್ಯ ಬೇಕು, ಸಾಮರ್ಥ್ಯವೂ ಬೇಕು; ಧೀರ

ರಾಗಿ ಮನಸೋಲಬೇಕು, ಸಾಮರ್ಥ್ಯದಿಂದ ರೂಢಿಸಿಕೊಂಡು ಹೋಗಬೇಕು, ಇದಕ್ಕೆ ಒಳ್ಳೆಯ ಅರ್ಥದಲ್ಲಿ ಸ್ವಾರ್ಥವನ್ನು ಬಲಿಕೊಡಬೇಕು. ಇದು ವಿಧಿ. ಆದುದರಿಂದಲೇ 'ಭಾವಗೀತೆ'ಗೆ ಮಾರುಹೋಗುವುದು ಅಪಾಯಕರ. ಇದರಲ್ಲಿ ಹಿಂದಿನವರಿಗಿಂತ ಹೆಚ್ಚಿನದನ್ನು ಸಾಧಿಸದೇ ಹೋದರೆ 'ಎರಡನೆಯ ದರ್ಜೆ' ಕಟ್ಟಿಟ್ಟ ಬುತ್ತಿ. ಜಿ.ಎಸ್.ಎಸ್. ರವರ 'ಕಾವ್ಯಕ್ಕೆ ನಮನ', 'ಈ ಕವಿತೆ', 'ನಿಲುವು', 'ಯಾವುದೀಪ್ರವಾಹ', 'ವಿಫಲ', 'ನನ್ನ ಹಣತೆ', 'ಕುವೆಂಪು ಅವರಿಗೆ', 'ಜನರು', 'ನನ್ನ ಸುತ್ತ', 'ಒರೆಗಲ್ಲು', 'ನಪ್ಪು ಸರು', 'ಕವಿ–ವೇದಾಂತಿ', 'ಚೆಲುವಿಗೆ', 'ಪ್ರಜ್ಞೆ', 'ಒಡೆದ ಕನ್ನಡಿ', 'ಕಂಬನಿ ಕವಿತೆ', 'ನನ್ನ ನಿನ್ನ ನಡುವೆ', 'ಎಚ್ಚರಿಕೆ', 'ಕಂಪ್ಲೇಂಟು'—ಈ ಕವನಗಳನ್ನು ಗಮನಿಸಿದಾಗ ಇವರು ಹೊತ್ತ ಹೊಣೆಗಾರಿಕೆಯ ಭಾರವನ್ನೂ ಅದರಿಂದ ಮೂಡಿದ ಒಳತೋಟಿಯನ್ನೂ ಅರಿಯಬಹುದಾಗಿದೆ.

ಸಮರ್ಥನಾದ ಕವಿಯು ಸಂಪ್ರದಾಯದ ಹೊಣೆಗಾರಿಕೆಗೆ ಹೆಗಲು ಕೊಡಬಾರದು; ಆದಷ್ಟು ಬೇಗ ಜಾಗೃತನಾಗಿ ಅದನ್ನು ಕಿತ್ತೊಗೆಯಬೇಕು. ಏಕೆಂದರೆ ಸಂಪ್ರದಾಯವು ತಾನೇ ಹೆಗಲೇರುತ್ತದೆ. ಈ ವಿಷಯದಲ್ಲಿ ಮುಗ್ಧನಾಗಿ ಮಾರುಹೋದರೆ ಸಂಪ್ರದಾಯದ ಹೊರೆಯಿಂದ ಹೊರಳಿದವರ ಮೇಲೆ ಟೀಕಿಸಬೇಕಾಗುತ್ತದೆ. ಟೀಕೆಗೆ ವ್ಯಂಗ್ಯ, (ಅನಾರೋಗ್ಯಕರವಾದುದು) ಬಳಸಬೇಕಾಗುತ್ತದೆ. ಆ ವ್ಯಂಗ್ಯಕ್ಕೆ ಅವಶ್ಯವಾದ ಭರ್ತ್ಸನೆ ಮತ್ತು ಒಳತೋಟಿಗೆ ಗುರಿಯಾಗಬೇಕಾಗುತ್ತದೆ. ತನ್ನತನವನ್ನೂ ಬಿಟ್ಟುಕೊಡಬೇಕಾಗುತ್ತದೆ. ಮೇಲೆ ಹೇಳಿದ ಕವನಗಳು ಈ ಗುಣಗಳನ್ನೆಲ್ಲಾ ಬೆಳಕಿಗೊಡ್ಡುತ್ತಿವೆ. ಇಂಥದಕ್ಕೂ ಸಿದ್ಧವಾದ ಮನವಾದರೆ ಸ್ವಂತ ಕವಿತೆಗೆ ನಷ್ಟವಾಗುತ್ತದೆ: ತನ್ನ ಕವಿತನ ವ್ಯಕ್ತಿತ್ವವು ಕರಗಿ ಕಾವ್ಯವಾಗಬೇಕಾಗಿರುವಲ್ಲಿ ಕವಿತನಕ್ಕಿಂತ 'ತಾನೇ' ಮುಖ್ಯವಾಗಿ ಗಟ್ಟಿಯಾಗಿ ಕಾವ್ಯವಾಗದೇ ಉಳಿದುಬಿಡುತ್ತದೆ ಅಥವಾ ಪಾಂಡಿತ್ಯದ ಕೈ ಮೇಲಾಗುತ್ತದೆ. ಇಲ್ಲಿ ಸ್ವಸಾಮರ್ಥ್ಯವು ವ್ಯಯವಾಗುತ್ತದೆಯೆಂಬುದೇ ಮುಖ್ಯ. ಜಿ.ಎಸ್.ಎಸ್. ಹೀಗೆ ಬಲೆಗೆ ಬಿದ್ದಿದ್ದಾರೆಂಬ ಅನುಮಾನಕ್ಕೆ ಈ ಕವನಗಳೇ ಆಧಾರವಾಗಿವೆ.

ಈ ಹೊಣೆಗಾರಿಕೆಯನ್ನು ಹೊತ್ತುಕೊಂಡೇ ಕವಿಯಾಗಿ ಉಳಿಯಬೇಕಾದಾಗ ಕಾಲವು ಅನುಕೂಲವಾಗಿರಬೇಕು. ಹಿಂದಿನವರು ಒಂದು ಸಂಪ್ರದಾಯದ ಬಿತ್ತನೆಗೆ ನೆಲವನ್ನು ಹದಮಾಡಿ ಬಿಟ್ಟಂತೆ ಒಳ್ಳೆಯ ಮಳೆಗಾಗಿ ಕಾದು ಕುಳಿತವರಾಗಿರಬೇಕು. ಇಂಥ ಕಾಲ ಸಮರ್ಥ ಕವಿಗೆ ರಸಗವಳ ದೊರಕಿದಂತೆ ಆಗುತ್ತದೆ. ಆದರೆ ಹುಲುಸಾದ ಬೆಳೆಯಾದ ಮೇಲೆ ಆ ಸಂಪ್ರದಾಯವನ್ನು ಸಾಯಿಸಲೇಬೇಕು—ಆಗಲೆ ಒಳ್ಳೆಯ ಅವಕಾಶ ದೊರಕುವುದು. ಇಂಥ ಹುಲುಸು ಬೆಳೆಯ ('ಭಾವಗೀತೆಯು') ಕಾಲದ ನಂತರ ಬಂದುಬಿಟ್ಟ ಕವಿ ಜಿ.ಎಸ್.ಎಸ್. ಪ್ರಾಮಾಣಿಕವಾಗಿರಬೇಕಾದುದು ಅವರ ಪಾಲಿಗೆ ಸಹಜ ಧರ್ಮ ಎನ್ನುವುದು ಸ್ನೇಹದ ಮಾತು ಮತ್ತು ಸಂಪ್ರದಾಯದ ಪ್ರೇಮದ ವಾದ. ಆದುದರಿಂದ ಒಂದು ಸಂಪ್ರದಾಯದ ಇಳಿಮುಖದಲ್ಲಿ ಸಿಕ್ಕಿಕೊಂಡವರು ಜಿ.ಎಸ್.ಎಸ್. ಎಂದು ಅನುಮಾನವಾಗಿದೆ.

ಹೊಣೆಗಾರಿಕೆಯ ದೆಸೆಯಿಂದಾಗಿ, ಅದರಲ್ಲೂ ಉತ್ಕ್ರಾಂತಿಯ ಸ್ಥಿತಿಯ ನಂತರದ ಗತಿಯಲ್ಲಿ ಬಂದ ಕವಿಯು, ಸ್ವಂತ ವಿಚಾರವಂತಿಕೆಯನ್ನೇ ಬಿಟ್ಟುಕೊಡಬೇಕಾಗುತ್ತದೆ. ಆತನು ತನ್ನ ಮತ್ತು ತನ್ನ ಸಮಕಾಲೀನ ಜೀವನದ ಮೇಲೆ ಬೆಳಕು ಚೆಲ್ಲಲು ಅವಕಾಶ ವಿಲ್ಲದವನಂತೆ ವರ್ತಿಸಬೇಕಾಗುತ್ತದೆ. ಆಗ ಸಾಂಪ್ರದಾಯಿಕ ಮೌಲ್ಯಗಳನ್ನೇ ಒಪ್ಪಿ ಕೊಂಡು ತಾತ್ವಿಕವಾಗಿ ತಾನು ಹೇಳಬೇಕಾದುದೇನೂ ಉಳಿಯದೆ ರಚನಾಸೌಂದರ್ಯ ದಲ್ಲಿ ಮಾತ್ರ ನಿರತನಾಗುತ್ತಾನೆ. ಇಂಥ ಪರಿಸ್ಥಿತಿ ಜಿ.ಎಸ್.ಎಸ್. ಅವರಿಗೆ ಒದಗಿರು ವುದನ್ನು ಕಾಣಬಹುದು.

೩

ಜಿ.ಎಸ್.ಎಸ್ ಅವರು ಈ ವೇಳೆಗೆ ಏಳೆಂಟು ಸಂಗ್ರಹಗಳನ್ನು ಬೆಳಕಿಗೆ ತಂದಿದ್ದಾರೆ. ಅವರ ಭಾವಗೀತೆಗಳು ಜನಪ್ರಿಯವಾಗಿವೆ 'ಹೌದೇನೇ ಉಮಾ ಹೌದೇನೆ'ಯಂತಹ ಕವಿತೆಯನ್ನು ಇಲ್ಲಿ ನೆನೆಯಬಹುದು.

ಅವರ ಒಳ್ಳೆಯ ರಚನೆಗಳಲ್ಲಿ 'ಶಾರದೆ', 'ಕ್ರಾಂತಿಕಾರ', 'ಜಡೆ', 'ನನ್ನ ಛತ್ರಿ', 'ಮುಂಬೈ ಜಾತಕ', 'ಅನಾವರಣವಾಯಿತಂತೆ', 'ನನ್ನ ಸುತ್ತ', 'ಗೋಡೆ', 'ಭೀಮಾ ಲಾಪ', 'ಔತಣ'—ಈ ಹತ್ತು ಕವನಗಳನ್ನು ಹೆಸರಿಸಬಹುದು. ಇವು ಮೊದಲ ಬಾರಿಗೆ ಬೆರಗನ್ನುಂಟುಮಾಡುವ ಕವನಗಳು. ಗಂಭೀರ ರಚನೆಗಳು. ವ್ಯಂಗ್ಯವೂ ಬೆರೆತು ವಿಚಾರವಂತರಾಗಿ ಇವುಗಳನ್ನೇ ಹೊರಳಿಸಿ ನೋಡಬೇಕೆನ್ನಿಸುವ ಸುಂದರ ರಚನೆಗಳು.

ಇವುಗಳಲ್ಲಿಯೂ 'ಶಾರದೆ', 'ಮುಂಬೈ ಜಾತಕ', 'ಭೀಮಾಲಾಪ' ಇವರ ರೂಪಕ ರಚನಾ ಸಾಮರ್ಥ್ಯಕ್ಕೆ ಸಾಕ್ಷಿಗಳಾದ ಕೃತಿಗಳು. 'ಸೌಂದರ್ಯೋಪಾಸಕ'ರೆಂಬ ಅನು ಮಾನಕ್ಕೆ ಅವಕಾಶ ಕೊಡುತ್ತದೆ.

೧. 'ಶಾರದೆ' ಕವನದಲ್ಲಿ ಕವಿ–ಮನೆಯಾಕೆ, ಶಾರದೆ, ಕಾಲ ಮತ್ತು ಪ್ರಕೃತಿ ಈ ನಾಲ್ಕು ಅಂಶಗಳನ್ನೂ ಅವಿಭಾಜ್ಯವೆನ್ನುವಂತೆ ರೂಪಕ ಸಾಮರ್ಥ್ಯವನ್ನು ಮೆರೆದಿದ್ದಾರೆ. ಮೊದಲಿನದು ಸ್ವಂತ ಅನುಭವದ ಆತ್ಮೀಯತೆಯಿಂದ ಬೆಳಗಿದರೆ, ಪ್ರಕೃತಿಯು ತನ್ನ ಲಕ್ಷಣಗಳಿಂದ ಅನುಭವವಾಗುವುದು. ಕಾಲದ ಅನುಭವ ಯೌವನದಲ್ಲಿ ಸ್ಥಗಿತ ಮತ್ತು ಅಗೋಚರ. ಶಾರದೆಯು ಕಲ್ಪನೆ ಶರದೃತುವಿನ ಮೂಲಕ ಅಭಿವ್ಯಕ್ತಿಗೊಂಡಂತೆ ಬಂದಿರುವ ರೂಪರಹಿತವಾದ ಆದರೆ ಸಾಂಪ್ರದಾಯಿಕ ಕಲ್ಪನೆ. ಇವುಗಳೆಲ್ಲ ಒಡ ಮೂಡುವಂತೆ ಬಳಕೆಯಾಗಿರುವ ಭಾಷೆ ನಿರಾಡಂಬರವಾಗಿ ವಸ್ತುವಿಗೂ ಅಲಂಕಾರಕ್ಕೂ ನಡುವೆ ಅಂತರ ತೋರದಂತೆ ರೂಪಕಕ್ಕೆ ಹಾಗೂ ಕಲ್ಪಕತೆಗೆ ಅನುಕೂಲವಾಗಿದೆ. ಒಂದು ಕಲ್ಲಿಗೆ ಹಲವು ಮುಖಗಳನ್ನು ಸಾಣೆಯಿಟ್ಟು ಅದರ ಪ್ರತಿಫಲನಗಳನ್ನು ಗುರುತಿಸುವಂತೆ ಆಗುತ್ತದೆ. ಇಂಥ ರಚನಾವೈಖರಿ ಬೆರಗನ್ನುಂಟುಮಾಡುತ್ತದೆ. ಇದರಲ್ಲಿ ಯಾವ ಸಿದ್ಧಾಂತವೂ ಇಲ್ಲವೆನ್ನಬಹುದಾದರೂ ನಾಲ್ಕು ಪ್ರತ್ಯೇಕವಾದ ಅಂಶಗಳನ್ನು ಅಥವಾ ಕಾನ್ಸೆಪ್ಟ್‌ಗಳನ್ನೂ ಮೂಡಿಸುವ ಮನವೊಂದೇ—ಎಂಬ ಸತ್ಯಕ್ಕೆ ಒಳಪಡುತ್ತದೆ.

ಅಂತೆಯೇ ಈ ಕವಿತೆ ಸಾರ್ಥಕತೆಯನ್ನು ಪಡೆದುಕೊಂಡ ಒಂದು ಅದ್ಭುತ ರೊಮಾಂಟಿಕ್ ಕೃತಿಯಾಗುತ್ತದೆ. ವರ್ಣಕ ಮತ್ತು ವಸ್ತುಕವೆಂಬ ವಿಚಾರದಲ್ಲಿ ಎರಡೂ ಒಂದರೊಳಗೊಂದೆನ್ನುವಂತೆ—ಅನ್ನಿಸುವ ಪರಿಣಾಮ ಇದರಲ್ಲಿ ಅಡಕವಾಗಿದೆ.

೨. 'ಮುಂಬೈಜಾತಕ'ದ ರಚನೆಯೂ ಹೀಗೆಯೇ ಮತ್ತೊಂದು ಬಗೆಯದು. ಜಾತಕದ ಸಾಂಪ್ರದಾಯಿಕತೆಯ ಚೌಕಟ್ಟಿನಲ್ಲಿ ಮುಂಬಯಿಯಂಥ ನಗರದ ಬದುಕಿನ ಪರಿಸ್ಥಿತಿಯನ್ನು ಚಿತ್ರಿಸುವ ಮೂಲಕ ಸಾರ್ಥಕತೆಯನ್ನು ಪಡೆಯುತ್ತದೆ. ಇಡೀ ನಗರದ ಬದುಕಿನ ಬಗ್ಗೆ ಕವಿಗೆ ನಿರಾಶೆಯಿರುವುದು ಏಕವಾಗಿ ಭಾವಗೀತೆಯ ಸತ್ವವಾಗಿ ಮನ ಮುಟ್ಟುತ್ತದೆ. 'ಸಿನಿಕತನ'ವೆಂಬ ಅನಿಸಿಕೆಯೂ ಆಗಬಹುದು. ಇದು ಕೆಲವರಿಗೆ ಒಪ್ಪಿಗೆಯಾಗದಿದ್ದರೂ ಒಟ್ಟಿನಲ್ಲಿ ನಾಗರಿಕ ಬದುಕು ಹೀಗೆ ಕೃತಕವಾದುದೆಂಬ ಅಭಿಪ್ರಾಯಕ್ಕೆ ಇಲ್ಲಿ ಅಭಿವ್ಯಕ್ತಿ ದೊರಕಿದಂತಾಗಿದೆ. ಗದ್ಯಕ್ಕೆ ಹತ್ತಿರವಾದ ಈ ರಚನೆಯಲ್ಲಿ ಕಾವ್ಯಸತ್ವ ತುಂಬಿರುವುದು ಗಮನಾರ್ಹವಾದ ವಿಚಾರವೂ ಆಗುತ್ತದೆ. ಅಂತೆಯೇ ಭಾವಗೀತೆಯ ಅಂಶವು ಒಳ-ಹೊರಗೆ ಸರಿದು ಹೊರಳಿದಂತಾಗುತ್ತದೆ. 'ಶಾರದೆ' ಪದ್ಯದಲ್ಲಿ ಆಗದಿರುವ ಈ ಗುಣ ಈ ರಚನೆಗೆ ವಸ್ತುವಿನ ವಿಡಂಬನತನಕ್ಕೆ ಸೇರಿಕೊಳ್ಳುವುದರಿಂದ ವ್ಯಂಗ್ಯವಾಗಿ ಪರಿಣಮಿಸುತ್ತದೆ.

೩. 'ಭೀಮಾಲಾಪ'ವು ಇತ್ತೀಚಿನ ರಚನೆಗಳಲ್ಲೊಂದು. ಮೊದಲೆರಡು ಕವನಗಳಲ್ಲಿಯೂ ಕವಿಯು ಅನುಭವದ ಹೊರಗೆ ನಿಂತು ನೋಡಿದಂತಿದ್ದರೆ ಇದರಲ್ಲಿ ತನ್ನನ್ನೇ ಕೇಂದ್ರವಾಗಿಸಿ ಅನುಭವದ ಹೆಣಿಗೆಯಲ್ಲಿ ಭಾಷೆಯನ್ನು ದುಡಿಸಿಕೊಳ್ಳುತ್ತಾನೆ. ಆದುದರಿಂದ ಕವಿಗೆ ಹೊಸತೊಂದು ಕಳೆಯಲ್ಲದೆ ಓದುಗನ ವ್ಯಕ್ತಿತ್ವವನ್ನು ಆಕ್ರಮಿಸುವ ಗುಣವನ್ನು ಪಡೆದುಕೊಳ್ಳುತ್ತದೆ. ಇದರ ಪರಿಣಾಮವಾಗಿ ಓದುಗ ತನ್ನನ್ನು ಈ ಅನುಭವದ ಬಣ್ಣದಲ್ಲಿ ನೋಡಿಕೊಳ್ಳುವಂತಾಗುತ್ತದೆ. ಪೂರ್ಣ ಸಾಮ್ಯತೆ ದೊರಕಿತೆಂದರೆ ಓದುಗ ತಲ್ಲಣಕ್ಕೆ ಒಳಗಾಗಿ ಅರಿಸ್ಟಾಟಲನ 'ಕೆಥಾರ್ಸಿಸ್'ನಂತೆ ಹೃದಯ ಶುದ್ಧೀಕರಣಕ್ಕೆ ಅವಕಾಶವನ್ನು ಪಡೆಯುತ್ತಾನೆ.

ಇಂಥ ವಿಶೇಷ ಗುಣವನ್ನು ಇವರ 'ಗೋಡೆ' ಕವನದಲ್ಲಿಯೂ ಕಾಣಬಹುದು. ಹೀಗೆಯೇ 'ಔತಣ' ಕವನದಲ್ಲಿ ಸಾಮಾಜಿಕ ಪ್ರಜ್ಞೆಯು ಒಡಮೂಡಿರುವುದನ್ನು ಕಾಣಬಹುದು.

ಹೀಗೆ ವೈಯಕ್ತಿಕ ಪರಿಸರದ ಭಾವನೆಗಳಾಗಲಿ ಸಾಮಾಜಿಕ ವಿಚಾರದ ಭಾವನೆಗಳಾಗಲಿ ಜಿ.ಎಸ್.ಎಸ್. ಅವರ ರಚನೆಯಲ್ಲಿ ಸೊಗಸಾಗಿ ಕಾವ್ಯರೂಪ ತಾಳುತ್ತವೆ. ಅಲ್ಲದೆ ಅವರ ಪ್ರಯತ್ನವು ಕಳೆದುಹೋದ ಭಾವಗೀತೆಯ ಉತ್ಕರ್ಷಕಾಲದ ರಚನೆಗಳಿಗಿಂತ ಮುಂದುವರಿಯುವ ರೀತಿಗಳಾಗಿಯೂ ಕಂಡುಬರುತ್ತವೆ. ಅಲ್ಲದೆ ಇದು ಬರಿಯ ರಚನಾಚಾತುರ್ಯವಾಗಿಲ್ಲ. ಖಚಿತವಾದ ಸೌಂದರ್ಯಪ್ರಜ್ಞೆಯಿಂದ ಒಡಮೂಡಿದ ರೂಪಕಗಳಾಗಿ ರಸಾನುಭವಕ್ಕೆ ಸೇರುತ್ತದೆ.

ಸಾಂಪ್ರದಾಯಿಕನಿಷ್ಠೆ ಮತ್ತು 'ಭಾವಗೀತೆ'ಯ ಮೋಹಗಳು ಜಿ.ಎಸ್.ಎಸ್.

ಮನೋಧರ್ಮಕ್ಕೆ ಒಗ್ಗಿ ಹೋಗಿರುವ ಎರಡು ಆಧಾರಗಳು. ಆದುದರಿಂದ ಅಡಿಗ ಮತ್ತು ರಾಮಚಂದ್ರಶರ್ಮರ ಪ್ರಯತ್ನದಿಂದ ರೂಪತಾಳಿದ ನವ್ಯಮಾರ್ಗದ ರೀತಿನೀತಿಯಲ್ಲಿ ಇವರು ಮಾಡಿದ ಪ್ರಯತ್ನಗಳು ಕೂಡ ಭಾವಗೀತೆಯ ಚೌಕಟ್ಟಿನಲ್ಲಿಯೇ ರಚಿತವಾಗಿ ಅಲ್ಲಲ್ಲಿ ಸೌಮ್ಯಮಾರ್ಗದ ವಿಡಂಬನೆಯನ್ನು ಮಾತ್ರ ಒಳಗೊಂಡು ರೂಪತಾಳಿದ ಕವನ ಗಳಾಗಿವೆ. ಈ ನಿಟ್ಟಿನಲ್ಲಿ 'ಮಾರ್ಕೆಟ್ಟಿನಲ್ಲಿ ಬೇಸಗೆ', 'ನೀರು', 'ಬೀಜದಿಂದ ಬೀಜಕ್ಕೆ', 'ಪ್ರಜ್ಞೆ', 'ನಿಂತುಹೊರಡಿ', 'ಹಳೇ ಪೇಪರ್ ಖಾಲಿ ಶೀಶೆ', 'ಒರೆಗಲ್ಲು', 'ಸ್ಪೂಟ್ನಿಕ್–ವಿನೋಬಾ', 'ಅಮೃತಮುಹೂರ್ತ', 'ಹುಟ್ಟಿದಹಬ್ಬ', 'ಸಂಜೆದಾರಿ', 'ಗಡಿಯಾರ ದಡಿಯಲ್ಲಿ', 'ಪ್ರಶ್ನೆ', 'ಜಡಿಮಳೆಯ ಇರುಳಿನಡಿ', ಮತ್ತು 'ಮಬ್ಬಿನಿಂದ ಮಬ್ಬಿಗೆ'— ಇವುಗಳಲ್ಲಿ ಬರುವ ಚಿತ್ರಗಳೆಲ್ಲಾ ಭಾವಾವೇಶದಿಂದ ತುಂಬಿತುಳುಕುತ್ತವೆ. ಸಂಪ್ರದಾಯದ ಹಾದಿಯಲ್ಲಿ ಇವುಗಳಿಗಿಂತ ಉತ್ತಮವಾದ ಕವಿತೆಗಳನ್ನು ಇವರು ರಚಿಸಿದ್ದಾರೆ. ಅಂಥವುಗಳಲ್ಲಿ ಕಂಡುಬರುವ ಭಾವಸ್ನಿಗ್ಧತೆ, ಭಾಷಾ ಸಾಮರ್ಥ್ಯ ಮತ್ತು ಮೌಲ್ಯ ಪ್ರಜ್ಞೆಗಳು ಶ್ರೇಷ್ಠ 'ವಚನ'ಗಳನ್ನು ನೆನಪಿಗೆ ತರುತ್ತವೆ.

೪

ಇಲ್ಲಿ ಜಿ.ಎಸ್.ಎಸ್.ರವರ ಕಾವ್ಯಸಮರ್ಥನೆಯನ್ನು ಪರಿಶೀಲಿಸಬೇಕಾದ ಅಗತ್ಯ ವಿದೆ. 'ಕಾವ್ಯಕೆ ನಮನ'ದಲ್ಲಿ ಅವರು 'ಆ ಕನಸಿನಮೂರ್ತಿ ನನಸಿನೊಳು ತಾನಾಯಿತು ಸ್ಫೂರ್ತಿ !' ಎಂದಿದ್ದಾರೆ. 'ಈ ಕವಿತೆ'ಯಲ್ಲಿ ಯಾವುದು ತಮ್ಮ ಕವಿತೆಯಲ್ಲಿಲ್ಲವೆಂಬು ದನ್ನು ಹೇಳಿ ಕೊನೆಗೆ 'ಯಾವತ್ತಿನಿಂದಲೋ ಸುರಿದ ಜಡಿಮಳೆ ಇಳಿದು। ಒಳಗಿನ ಕುದಿಗೆ ಹದವಾಗಿ ಮಿದುವಾಗಿ। ಮಲಗಿರುವಾಗ। ಬಾವಿಯ ತೋಡಿ, ಯಾತವ ಹೊಡೆದು। ತಂದದ್ದು ಈ ರಾಗ!' ಎನ್ನುತ್ತಾರೆ. ಇದು ವರ್ಡ್ಸ್‌ವರ್ತ್ ಕವಿಯ ಅನಿಸಿಕೆಯನ್ನು ನೆನಪಿಗೆ ತರುತ್ತದೆ. ಅಲ್ಲದೆ 'ಭಾವಗೀತೆ'ಯ ನಿಲುವನ್ನು ಸಮರ್ಥಿಸುತ್ತದೆ. 'ನಿಲುವು' ಕವನದ ಕೊನೆಗೆ ಕವಿಯು ತನ್ನ ಆಸೆಗೆ ರೂಪ ಕೊಡುತ್ತಾ 'ಒಂದೆರಡಾದರೂ ಬೀಜ ವಾಗುವಂಥ ಹಣ್ಣು। ಬಿಟ್ಟಾವೆಂದು ನಂಬಿ ಕಾಯುತ್ತೇನೆ' ಎಂದಿದ್ದಾರೆ. ಹಾಗೆಯೇ 'ಯಾವುದೀ ಪ್ರವಾಹ' ಎಂಬುದರಲ್ಲಿ ಕೊನೆಗೆ 'ಮುಖ ಮುಖವೂ ಮುಖವಾಡವ। ತೊಟ್ಟು ನಿಂತ ಹಾಗಿದೆ। ಆಡುತಿರುವ ಮಾತಿನೊಳಗೆ। ಹೃದಯ ಕಾಣದಾಗಿದೆ' ಎಂದು ಮರುಗುತ್ತಾರೆ. ಇದರಲ್ಲಿ ಅವರ ಕಳಕಳಿ ವ್ಯಕ್ತವಾಗಿದೆ. ವಾಸ್ತವವಾಗಿ ಅವರಿಗೆ ನವ್ಯ ಮಾರ್ಗ ಹಿಡಿಸದು. ಅದರ ಆತಂಕದಿಂದ ಮರುಗುತ್ತಾರೆ. 'ನನ್ನ ಹಣತೆ'ಯಲ್ಲಿ 'ನನಗೂ ಗೊತ್ತು, ಈ ಕತ್ತಲೆಗೆ। ಕೊನೆಯಿರದ ಬಾಯಾರಿಕೆ' ಎನ್ನುತ್ತಾ 'ಆದರೂ ಹಣತೆ ಹಚ್ಚುತ್ತೇನೆ ನಾನೂ', ಕತ್ತಲೆಯನ್ನು ದಾಟುತ್ತೇನೆಂಬ ಭ್ರಮೆಯಿಂದಲ್ಲ— ಎಂದು ಸ್ಪಷ್ಟವಾಗಿ ಹೇಳಿ 'ಹಣತೆ ಆರಿದ ಮೇಲೆ, ನೀನು ಯಾರೋ ಮತ್ತೆ। ನಾನು ಯಾರೋ' ಎಂದು ತಮ್ಮನ್ನು ಸಾಂತ್ವನಗೊಳಿಸಿಕೊಳ್ಳುವುದರಲ್ಲಿಯೇ ವಾಸ್ತವ ಸತ್ಯ ವನ್ನೂ ಧ್ವನಿಸಿದಂತಾಗಿದೆ.

ಇವರ ಸ್ಫೂರ್ತಿಯ ನೆಲೆಯನ್ನು ಕೂಡ ಬಾಯಿಬಿಟ್ಟು ಹೇಳಿಕೊಂಡಂತಾಗಿದೆ—'ಕುವೆಂಪು ಅವರಿಗೆ' ಎಂಬ ಕವನದಲ್ಲಿ 'ನಕ್ಷತ್ರ ಖಚಿತ ನಭವಾಗಿ ಹಬ್ಬಿಕೊಂಡಿದ್ದೀರಿ। ನನ್ನ ಸುತ್ತ। ಪಟಬಿಚ್ಚಿ ದೋಣಿಯನ್ನೇರಿ ಕುಳಿತಿದ್ದೇನೆ। ನೀವಿತ್ತ ಹೊಸ ಹುಟ್ಟುಗಳ ಹಾಕುತ್ತ।' ಎಂದು ಹೇಳಿದ್ದಾರೆ. ಹೀಗೆಯೇ ತಮ್ಮ ಜನರನ್ನು ಕುರಿತ ವಿಚಾರದಲ್ಲಿ 'ನನ್ನ ಸುತ್ತ' ಎನ್ನುವಲ್ಲಿ 'ಪ್ರಜ್ಞೆ'ಯನ್ನು ಕುರಿತಲ್ಲಿ ಕೃತಕತೆಯನ್ನು ಹಂಗಿಸಿದಂತೆ 'ಕುಂಡದ ಗಿಡಕ್ಕೇನು ಗೊತ್ತುಂಟೊ। ತಾಯ್ನೆಲದ ಜಲದ ಜೀವಂತ ಪ್ರಜ್ಞೆ' ಎಂದು ಕೊನೆಗೆ 'ಹೇಗಾದರೂ ಮಾಡಿ ಕುಂಡವನ್ನೊಡೆದು ನೆಲದಲ್ಲಿವರ ಬೇರನ್ನಿಡು। ತಾಯ ಮೊಲೆ ಹಾಲಿಗಿದರ ತುಟಿಯನ್ನಿಡು, ಎಂದು ಹೇಳುತ್ತಾರೆ. ಇಲ್ಲೆಲ್ಲಾ 'ತಾಯ್ನೆಲದ ನಿಷ್ಠೆ' ಈ ಕವಿಯ ಪರಮಾಶಯವೆಂಬುದು ಸ್ಪಷ್ಟ. 'ಎಚ್ಚರಿಕೆ!' ಎಂಬ ಕವನದಲ್ಲಿ ನನ್ನಡಿಗೆಯ ರುಚಿ ಇರುವುದೆ, ನೀವು ಬರೆದ ಕವಿತೆಗೆ? ಎಂದು ಕೇಳುವುದಲ್ಲದೆ 'ನಗುವ ಅಳುವ ಕವಿತೆಗಿಂತ। ಬರೆದ ಕವಿತೆ ದೊಡ್ಡದೆ?। ಆ ಕವಿತೆಗೆ ಭ್ರಾಂತರಾಗಿ। ಈ ಕವಿತೆಯ ಮರೆವರೆ?'—ಎಂದು ಎಚ್ಚರಿಸುತ್ತಾರೆ.

ಈ ಮೇಲಿನ ವಿಚಾರಗಳಿಗೆಲ್ಲಾ 'ಸಂಪ್ರದಾಯ ನಿಷ್ಠೆ' ಆಧಾರವಾಗಿದೆ. ಇವನ್ನು ವ್ಯಕ್ತಪಡಿಸುವಾಗಲೂ ಈ ಕವನಗಳು 'ಕಾವ್ಯ ಮತ್ತು ಬದುಕಿ'ಗೆ ಸಾಮಾನ್ಯವಾಗಿ ಅನ್ವಯಿಸುವ ಧ್ವನಿಯುನ್ನು ಒಳಗೊಂಡಿವೆ. ಆದುದರಿಂದಲೇ ಭಾವಗೀತೆಗಳಾಗಿವೆ.

ಇವುಗಳಲ್ಲಿ ಮತ್ತೊಂದು ಅಂಶವನ್ನೂ ಗುರುತಿಸಬಹುದು. ಆದೆಂದರೆ, ಸಂಪ್ರದಾಯ ನಿಷ್ಠ ಸಮರ್ಥ ಕವಿಯ ಮೇಲೆ ನವ್ಯಮಾರ್ಗವು ಮಾಡಿದ ಪರಿಣಾಮವಾಗಿದೆ ಆದುದರಿಂದಲೆ ಈ ಕವಿಯು ತನ್ನ ಸ್ವಂತಿಕೆಯ ಪರಿಧಿಯನ್ನು ದಾಟಲಾರದೆ (ಪ್ರಾಮಾಣಿಕತೆಯಿಂದ) ಅನವಶ್ಯ ಒಳತೋಟಿಗೆ ಗುರಿಯಾಗುವಂತೆ ಆದುದು, ಮತ್ತು ಅದರ ರೀತಿಯಲ್ಲಿ ಬರೆಯಲು ಪ್ರಯತ್ನಿಸುವಂತಾದುದು. ಈ ವಿಷಯದಲ್ಲಿ 'ಜನಪ್ರಿಯತೆ' ಎಲ್ಲ ಕವಿಗೂ ಎಲ್ಲಾ ಕಾಲಕ್ಕೂ ಅನ್ವಯಿಸುವ ಮಾತಾಗಿದೆ. ನ್ಯಾಯವಾಗಿ ಅದು ದೊರೆಯಲು ಅಡ್ಡಿಯಾದಾಗ ಸೂಕ್ಷ್ಮ ಸ್ವಭಾವದ ಕವಿಗೆ ಆತಂಕವಲ್ಲದೆ ಭರ್ತ್ಸನೆಯೂ ಮೂಡಬಹುದು. ಆದರೆ ಜಿ.ಎಸ್.ಎಸ್. ತಮ್ಮ ನಿಲುವನ್ನು ಮಾತ್ರ ಸ್ಥಾಪಿಸಿಕೊಂಡು ಅದರ ಸಮರ್ಥನೆಗಾಗಿ ಪ್ರಯತ್ನಿಸಿದವರು.

೫

ಜಿ ಎಸ್.ಎಸ್ ಪ್ರತಿಭೆಗೆ 'ಭಾವಗೀತೆ'ಯು ನ್ಯಾಯವಾಗಿ ಒಗ್ಗಿಹೋಗಿದೆಯೆನ್ನಬಹುದು. ಸಂಸಾರ ಪ್ರಪಂಚದ ಲೌಕಿಕತೆಯಲ್ಲಿ ಅವರ ವಿಚಾರಗಳು ಹೂವರಳಿದಂತೆ ವಿಕಾಸವಾಗುತ್ತವೆ. ಅವುಗಳ ಚೊಕ್ಕತನವಂತೂ ಆಶ್ಚರ್ಯವಾಗುವಂತೆ ನಿಯಮಿತ ಏಣುಗಳಿಂದ ಕೂಡಿ ಸ್ಫಟಿಕದ ಶಲಾಕೆಯಂತೆ ಹಿತಕರವಾಗಿ ಶೋಭಿಸುತ್ತದೆ. ತಮ್ಮ ಆವೇಶಗಳನ್ನು ಹದಗೊಳಿಸಿದ ನಂತರವೇ ಅವುಗಳಿಗೆ ಭಾಷೆಯ ರೂಪವನ್ನು ಸಾಧಿಸುವ ಅವರ ಪ್ರಯತ್ನಗಳು 'ಭಾವಗೀತೆ'ಗಳಲ್ಲಿ ಅದ್ವಿತೀಯವಾಗಿ ಕಂಡುಬರುತ್ತವೆ.

ಸಂಪ್ರದಾಯದ ಹೊಣೆಗಾರಿಕೆಯನ್ನು ಹೊರಲು ಅವಶ್ಯವಾದಷ್ಟು ಗೌರವವು ಹಿರಿಯ ಕವಿಗಳಲ್ಲಿರುವುದರಿಂದ ಇವರ ಕವಿತೆಗಳಲ್ಲಿ ಆಗಾಗ ಹಿರಿಯ ಕವಿಗಳ ನೆನಪುಂಟಾಗುತ್ತದೆ, ಅದೂ ವಿಷಯದ ಸಾಮ್ಯತೆಯಿಂದ ಮಾತ್ರ-ಅಭಿವ್ಯಕ್ತಿಯಿಂದಲ್ಲ.

ಅವರ ಸ್ವಂತತನ ಬೆಳೆಯತೊಡಗಿದೆಯೆನ್ನುವುದಕ್ಕೆ ಅವರ ಇತ್ತೀಚಿನ 'ಗೋಡೆ' ಎಂಬ ಸಂಗ್ರಹವು ಆಧಾರವಾಗಿದೆ. ಇದರಲ್ಲಿ ಅವರ 'ಶಿಲ್ಪ ಚಾತುರ್ಯ'ವು ಮತ್ತೊಮ್ಮೆ ಚಿಗುರುತ್ತಿದೆಯೆನ್ನಿಸುತ್ತದೆ. ವಸ್ತುನಿರ್ದೇಶದಲ್ಲಿ ಸ್ವಂತವಾದ 'ಒಳನೋಟ'ವೊಂದು ಮೂಡಿರುವಂತೆ ರಚನೆಗಳು ಹೇಳುತ್ತಿವೆ. ಪರವಿಡಂಬನೆಯು ಸ್ವಮುಖವಾದಂತೆ ಅಥವಾ ವಿಮುಖವಾದಂತೆ ಅಭಿವ್ಯಕ್ತಿಯಾಗುತ್ತಿದೆ. ಈ ನಿಟ್ಟಿನಲ್ಲಿ 'ಗೋಡೆ' ಮತ್ತು 'ಭೀಮಾಲಾಪ' ಶ್ರೇಷ್ಠ ಕೃತಿಗಳು ಆಗಿವೆ. ಆದುದರಿಂದ ಮೂಲತಃ ರೊಮಾಂಟಿಕ್ ಸಂಪ್ರದಾಯದವರಾದರೂ ಅದರ ಶ್ರೇಷ್ಠಗುಣಗಳು ರೂಪತಾಳಿ ಬೆಳಗಲು ಅನುಕೂಲವಾದ 'ಪ್ರಜ್ಞೆ'ಯಿಂದ ಅವರು ಪ್ರಯತ್ನಶೀಲರಾಗಿದ್ದಾರೆಂದು ಹೇಳಬಹುದಾಗಿದೆ.

೬

ಜಿ.ಎಸ್.ಎಸ್. ಮನೋಧರ್ಮಕ್ಕೆ ಸಾಂಸಾರಿಕ ಲೌಕಿಕವು ಹೊಂದಿಕೊಳ್ಳುವುದರಿಂದಲೇ ಅವರ ಕಾವ್ಯದ ನೆಲೆ ಚಿಗುರುತ್ತದೆ. ಇವರು ಬಳಸುವ ರೂಪಕಗಳು ಸುಂದರವಾಗಿ ಭಾವಗೀತಾತ್ಮಕವಾಗಿರುತ್ತವೆ. ಪ್ರಕೃತಿಯ ಲಕ್ಷಣಗಳನ್ನು ಮಾನವ ವ್ಯಕ್ತಿತ್ವದ ಪದರಗಳೆನ್ನುವಂತೆ ಅವರು ಯಾವಾಗಲೂ ಜಾಗೃತಿಯನ್ನು ವಹಿಸುತ್ತಾರೆಂದು ಅನ್ನಿಸುತ್ತದೆ. 'ನನ್ನ ನಿನ್ನ ನಡುವೆ' ಕವನದಲ್ಲಿನ ಈ ಪದ್ಯವನ್ನು ಉದಾಹರಿಸಬಹುದು :

ಸದಾ ಹೊಯ್ಯುವ ಮಳೆ, ಸುಯ್ಯುವ ಗಾಳಿ ನನ್ನ ನಿನ್ನ ನಡುವೆ
ಉರಿಯುವ ಬೇಸಗೆ, ಕೆಂಡದ ಹಾಸುಗೆ ನನ್ನ ನಿನ್ನ ನಡುವೆ
ಉದುರುವ ಎಲೆ, ಉರಿಯುವ ಚಿತೆ ನನ್ನ ನಿನ್ನ ನಡುವೆ
ಹದ್ದಿನ ರೆಕ್ಕೆಯ ನೆರಳೂ, ಬೇಟೆ ನಾಯಿಗಳ ಬೊಗಳೂ ನನ್ನ ನಿನ್ನ ನಡುವೆ.

ಇದರ ಕೊನೆಯ ಸಾಲುಗಳು ಹೀಗಿವೆ :—

ಬೇಸರವಾಗಿದೆ ; ಹೋಗುವ ನಡೆ ತಳೆಬಾಗದೆ ನಿಲ್ಲುವ ದೂರಕ್ಕೆ
ತಣ್ಣಗೆ ಉರಿವೂ ಕಿಡಿಗಣ್ಣಿಲ್ಲದ ದೀಪಾವಳಿಗಳ ತೀರಕ್ಕೆ.

ಈ ಮಾತುಗಳ ನಿರ್ಧಾರವನ್ನೂ ಧ್ವನಿಯನ್ನೂ ಗಮನಿಸಿದರೆ ಪ್ರಕೃತಿಯ ಸಾಮಾನ್ಯ ಲಕ್ಷಣಗಳೂ ಹೇಗೆ ಮಾನವ ಸ್ವಭಾವದ ಅಂಶಗಳಾಗಿಬಿಡುತ್ತವೆ—ಎಂಬುದು ಖಚಿತವಾಗುತ್ತದೆ. ಆದುದರಿಂದಲೇ ಅವರು ಬರೆಯುವುದೆಲ್ಲಾ ಕಾವ್ಯವಾಗುತ್ತದೆ. ಮಾನವ ಸ್ವಭಾವದ ಪರಿವೆಯನ್ನು ನಮಗೂ ತರುತ್ತದೆ. ಇದನ್ನೇ ಅವರು ನಮ್ಮ 'ವಿಶಿಷ್ಟ ರುಚಿ' ಎಂದು ಹೇಳಿರುವುದಾಗಿದೆ. ಆದುದರಿಂದ ಇವರು ತಮ್ಮ ಕಾವ್ಯದ ನೆಲೆಯನ್ನು ಚೆನ್ನಾಗಿ ಅರಿತುಕೊಂಡವರು, ಎಂದೂ ಭಾಷೆಯನ್ನು ಆದಕ್ಕಾಗಿ ದುಡಿಸಿಕೊಳ್ಳುವುದರಲ್ಲಿ 'ವಚನ

ಗಳ' ಸಾರ್ಥಕತೆಯನ್ನು ಚೆನ್ನಾಗಿ ಅರಿತವರೆಂದೂ ತಿಳಿಯಬೇಕಾಗುತ್ತದೆ.

ಆದರೆ ಶರಣರ ವಚನಗಳ ಅನುಕರಣೆಯೆಂದು ಹೇಳಬಾರದು. ಅದರ ಬದಲು ಹೊಸಗನ್ನಡವನ್ನು ಅಷ್ಟೇ ಸಮರ್ಥವಾಗಿ ಇನ್ನೂ ಹೆಚ್ಚಿನ ಭಾವಗೀತಾತ್ಮಕತೆಯಿಂದ (ಏಕೆಂದರೆ ವಚನಗಳು ಅಲೌಕಿಕದ ಹಾದಿಯಲ್ಲಿ ಮೂಡಿದವು, ಅವುಗಳಲ್ಲಿ ಲೌಕಿಕವು ಟೀಕೆಗೆ ಗುರಿಯಾಗುತ್ತಾ ಹೋಗುತ್ತದೆ, ಮತ್ತು ಪಾರಲೌಕಿಕ ಪ್ರಜ್ಞೆಯಿಂದ ಅವು ಮೂಡಿರುತ್ತವೆ.) ತಮ್ಮ ಮಾತಿನ ಸತ್ವವೆನ್ನುವಂತೆ ಬಳಸುತ್ತಾರೆ. ಈ ಸಾಮರ್ಥ್ಯವೇ ಅವರಿಂದ ಉತ್ತಮ ಕಾವ್ಯವು ಹುಟ್ಟೀತೆಂಬ ಅನುಮಾನವನ್ನು ತಿಳಿಸುತ್ತದೆ.

ಈಗಿನವರೆಗಿನ ರಚನೆಗಳನ್ನು ಉತ್ತಮವಲ್ಲವೆಂದು ನಾನು ಹೇಳುತ್ತಿಲ್ಲ. ಅದರಲ್ಲಾಗಲೇ ಶ್ರೇಷ್ಠ ಪ್ರಯತ್ನಗಳನ್ನು ಕುರಿತು ಹೇಳಿದ್ದಾಗಿದೆ. ಅದರ ಪ್ರಗತಿಯಿಂದ ಅತ್ಯಂತ ಶ್ರೇಷ್ಠವಾದ 'ಮಾನವಗೀತೆ'ಯೊಂದು ಹುಟ್ಟಲು ಸಾಧ್ಯವಿದೆ—ಎನ್ನಿಸುತ್ತದೆ.

ಇವರ 'ಆತಂಕ'ವನ್ನು ಎಚ್ಚರಿಕೆಯಿಂದ ಗಮನಿಸಬೇಕಾಗುತ್ತದೆ. ಇವರ 'ನವ್ಯ ರೀತಿ'ಯ ರಚನೆಗಳಲ್ಲೆಲ್ಲಾ ಇದು ಸ್ಪಷ್ಟವಾಗಿದೆ. ಉಳಿದ ಲೌಕಿಕ ಭಾವಗೀತೆಗಳಲ್ಲಿದೆ. 'ಅನಾವರಣವಾಯಿತಂತೆ' ಕವನದಲ್ಲಿ ಇದು ಬಹಿರಂಗವಾಗಿದೆ. 'ನನ್ನ ಮರಿಮಗನ ಮಗನಿಗೆ' ಎಂಬ ಕೃತಿಯಲ್ಲಿಯೂ ಇದೆ. ಅದರ ಕೊನೆಯ ಪದ್ಯ ಹೀಗಿದೆ—

ಇರುಳ ಕಣಿವೆಯ ತುದಿಗೆ ನೀನೊಬ್ಬನೇ ನಿಂತು ಮೂಕವಾಗಿ
ಆಳ ಪಾತಾಳದಲಿ ಹರಿವ ಜಲಮರ್ಮರಕ್ಕೆ ಕಿವಿಗೊಟ್ಟು ಬಾಗಿ,
ಬರಿದೆ ನಿಡುಸುಯ್ಯುವೆಯೊ, ನಾನರಿಯೆ ನಿನ್ನ ಪರಿಯ
ಯಾವ ನೆನಪನು ನಿನಗೆ ಬಿಟ್ಟು ಹೋಗಲಿ ಎಂದು ತುಡಿಯುತಿದೆ ನನ್ನ ಹೃದಯ.

ಇವರ ಭಾವಗಳನ್ನೆಲ್ಲಾ ಆಳುವ ಸಾಮರ್ಥ್ಯವು ಇದರ 'ಆತಂಕ'ಕ್ಕೆ ಸೇರಿಕೊಂಡು 'ಗೋಡೆ' ಮತ್ತು 'ಭೀಮಾಲಾಪ'ಗಳಲ್ಲಿಯೂ ಕಂಡುಬರುತ್ತದೆ. ಆದುದರಿಂದ ಈ ಭಾವವನ್ನು ಇವರ ಕಾವ್ಯನೆಲೆಗೆ ಸೇರಿದುದೆಂದೂ ಗುರುತಿಸಬೇಕಾಗುತ್ತದೆ. ಅಲ್ಲದೆ ಇದು ಪ್ರೌಢವಾಗುತ್ತಲೂ ಬಲವಾಗುತ್ತಲೂ ನಡೆದಿದೆ. ಅಂದಮೇಲೆ ಇವರ ಬೆಳವಣಿಗೆಯೂ ಇದನ್ನು ಅನುಸರಿಸುತ್ತಾ ನಡೆದಿರುವಂತೆ ತೋರುತ್ತಿದೆ. 'ಭಾವಗೀತೆ'ಯು ಹೀಗೆ ತನ್ನ ಊರುಗೋಲಿನಂತೆ 'ಆತಂಕ'ವನ್ನು ಹಿಡಿದು ಸಾಗಿರುವುದು ಜಿ.ಎಸ್.ಎಸ್. ಅವರ ವಿಶೇಷ ಗುಣವೆಂದೂ ಅವರ ಕಾವ್ಯಾನುಭೂತಿಗೆ ಇದು ಜೀವಂತತನವನ್ನು ತುಂಬುತ್ತಾ ಬಂದಿರುವುದೆಂದೂ ಹೇಳಬಹುದಾಗಿದೆ.

ಈ 'ಆತಂಕ'ಕ್ಕೆ ಸಂಪ್ರದಾಯದ ಹೊಣೆಗಾರಿಕೆಯು ಸೇರಿಕೊಂಡಿದೆ. ಇಲ್ಲದಿದ್ದರೆ ಒಂದು ಭಾವವಾಗಿ ಒಂದೆರಡೆಡೆ ಮಾತ್ರ ಕಾಣಿಸಿಕೊಳ್ಳಬಹುದಾದ ಈ ಭಾವಕ್ಕೆ ಇಡೀ ವ್ಯಕ್ತಿತ್ವವನ್ನೇ ನಿಯಂತ್ರಿಸುವ ಸಾಮರ್ಥ್ಯವಿರಲಾರದು ಹೀಗಾಗಿರುವುದರಿಂದ ಜಿ.ಎಸ್.ಎಸ್. ಬುದ್ಧಿಪೂರ್ವಕವಾಗಿಯೇ ತಮ್ಮ ಮಾರ್ಗವನ್ನು ಅರಿತು, ಅಂತರಂಗದ ಒಳತೋಟಿಗೂ ಗುರಿಯಾದಂತೆ ಕಾವ್ಯಕರ್ಮದಲ್ಲಿ ನಿರತರಾಗಿರುತ್ತಾರೆ—ಮತ್ತು ಕವಿಯಾಗಿ ಬೆಳೆಯುತ್ತಿದ್ದಾರೆ.

ಇಂಥ 'ಆತಂಕಪ್ರಜ್ಞೆ'ಯ ಬೆಳಕಿನಲ್ಲಿ ಒಳಕೋಟಿಯನ್ನು ಪ್ರತಿಮಾವಿಧಾನದಲ್ಲಿ ಅಭಿವ್ಯಕ್ತಿಗೊಳಿಸುವ ರೀತಿ—ನೀತಿಯನ್ನು ಜಿ.ಎಸ್.ಎಸ್. ಅವರ 'ಗೋಡೆ' ಸಂಗ್ರಹದಲ್ಲಿ ಕಾಣುತ್ತೇವೆ. ಆದುದರಿಂದಲೇ 'ಗೋಡೆ' ಮತ್ತು 'ಭೀಮಾಲಾಪ'ಗಳು ಒಳ್ಳೆಯ ಭಾವಗೀತೆಗಳಾಗಿವೆ. ಅಲ್ಲದೆ ಭಾವಗೀತೆಯ ಪರಂಪರೆಯಲ್ಲಿ ಒಂದು ಹೆಜ್ಜೆ ಮುಂದಿರಿಸಿದ ಪ್ರಯತ್ನಗಳಾಗಿವೆ.

೭

ಇಂದು ಸಂಪ್ರದಾಯವನ್ನು ಮುರಿಯಬೇಕಾದ ಪರಿಸ್ಥಿತಿಯು ನಮ್ಮ ಸಾಮಾಜಿಕ ರೀತಿನೀತಿಯ ಒಲವುಗಳಿಂದ ಖಚಿತವಾಗಿದೆ. ಆದುದರಿಂದ 'ಭಾವಗೀತೆ'ಯ ಮಡಿವಂತಿಕೆಯನ್ನೂ ಅವುಗಳ 'ಮೌಲ್ಯಪ್ರಜ್ಞೆ'ಯನ್ನೂ ದಾಟುವುದರಲ್ಲಿ ಆಡು ಮಾತಿನ ವೈವಿಧ್ಯಕ್ಕೆ ಗಮನ ಹರಿಸಿದ್ದಾರೆ, ಅಡಿಗರ ಪ್ರಭಾವವನ್ನೂ ಕಂಡವರಿದ್ದಾರೆ. ಅವರ ಪ್ರಭಾವದಿಂದಲೂ ಮುಕ್ತರಾಗಿ ಸ್ವತಂತ್ರರಾಗುವುದಕ್ಕೆ 'ಜಿ.ಎಸ್.ಎಸ್' ಎದುರಿಸಿದ ರೀತಿ ಕೂಡ ಕಣ್ಣು ತೆರೆಯಿಸುವಂಥದು.

ಹೀಗೆ ಜಿ.ಎಸ್.ಎಸ್. ಮುಂದಿನ ತಲೆಮಾರಿಗೆ ಮಾರ್ಗದರ್ಶಕರೂ ಆಗಿದ್ದಾರೆ. ಅವರ ಸ್ವಂತ ರಚನೆಗಳು ತೋರಿಸುವ ಕಾವ್ಯನಿಷ್ಠೆ ಮಹತ್ವಪೂರ್ಣವಾದುದೂ ಆಗಿದೆ.

[ಈ ವಿವೇಚನೆಗೆ ಜಿ.ಎಸ್.ಎಸ್. ಅವರ 'ನನ್ನ ನಿನ್ನ ನಡುವೆ' ಎಂಬ ವಿಸ್ತೃತ ಸಂಗ್ರಹವನ್ನು ಬಳಸಿಕೊಳ್ಳಲಾಗಿದೆ.]

ರಾಘವೇಂದ್ರ ಖಾಸನೀಸ

# ಜಿ.ಎಸ್.ಎಸ್—ಕವಿಯಾಗಿ

೧೯೫೧ರಲ್ಲಿ ಕೆ. ವಿ. ಪುಟ್ಟಪ್ಪನವರು, ಡಾ|| ಜಿ. ಎಸ್. ಶಿವರುದ್ರಪ್ಪನವರ 'ಸಾಮಗಾನ'ಕ್ಕೆ ಮುನ್ನುಡಿ ಬರೆಯುತ್ತ "ಶಿವರುದ್ರಪ್ಪನವರ ಈ ಕವನಗಳಲ್ಲಿ (ಅ) ಊರ್ಧ್ವಗಮನಾಭಿಲಾಷೆ, (ಆ) ಆದರ್ಶೋನ್ಮುಖವಾದ ಅಭೀಪ್ಸೆ, ಸುಂದರವಾದುದನ್ನು, ಸತ್ಯವಾದುದನ್ನು, ಶಿವವಾದುದನ್ನು ರಸಚೇತನದಿಂದ ಆರಾಧಿಸಿ ಆಕ್ರಮಿಸಿ ಆಗಬೇಕೆಂಬ ಒಂದು ಹಾರೈಕೆ—ಇವುಗಳನ್ನು ನಿಸ್ಸಂದೇಹವಾಗಿ ಕಾಣುತ್ತೇವೆ" ಎಂದು ಬರೆದರು. ಅದಾದನಂತರದ ಈ ಎರಡು ದಶಕಗಳಲ್ಲಿ ಡಾ|| ಶಿವರುದ್ರಪ್ಪನವರು ಬರೆದು ಪ್ರಕಟಿಸಿದ ಒಂಬತ್ತಕ್ಕೂ ಮೀರಿದ ಕವನ ಸಂಗ್ರಹಗಳು, ಪುಟ್ಟಪ್ಪನವರ ಕವಿವಾಣಿಯನ್ನು ದಿಟವಾಗಿಸಿದವು. ಹಾಗೂ ಆ "ಶಿವ"ವಾದುದನ್ನು "ಸತ್ಯ"ವಾದುದನ್ನು, "ಸುಂದರ"ವಾದುದನ್ನು ತಮ್ಮ ಕಾವ್ಯಜೀವನದುದ್ದಕ್ಕೂ ಆರಾಧಿಸುತ್ತ ನಡೆದ ಶಿವರುದ್ರಪ್ಪನವರು ಈ ತಲೆಮಾರಿನ ಪ್ರಮುಖ ಕವಿಗಳಲ್ಲೊಬ್ಬರಾಗಿ ಬೆಳೆದರು. ವಿಷಯವೈವಿಧ್ಯದಲ್ಲಿ ಹಾಗೂ ಅಭಿವ್ಯಕ್ತಿಯಲ್ಲಿ, ಕವಿಯ ಗಾನಲಹರಿ ಹಲವಾರು ರೂಪತಾಳಿ ಸಹೃದಯರನ್ನು ತಣಿಸಿತು. ಸಾಂಪ್ರದಾಯಕತೆಯಲ್ಲಿಯೇ ಕಾವ್ಯಾರಾಧನೆಯನ್ನು ಪ್ರಾರಂಭಿಸಿದ ಶಿವರುದ್ರಪ್ಪನವರು ಕವಿತೆಯಿಂದ ಕವಿತೆಗೆ ಬೆಳೆದು, ಅಭಿವ್ಯಕ್ತಿಯ ವೈಯಕ್ತಿಕತೆಯನ್ನು ಕ್ರಮೇಣ ಹೆಚ್ಚು ಹೆಚ್ಚು ಸೂಕ್ಷ್ಮತೆಗೊಯ್ಯುತ್ತ, ನವ್ಯತೆಯ ಸದ್ಗುಣಗಳನ್ನು ಮಾತ್ರ ಅಳವಡಿಸಿಕೊಂಡು, ಪೂರ್ಣ ವೈಯಕ್ತಿಕ ಕವಿಯಾಗಿ ಬೆಳೆದರು. ವಿಪುಲವಾದ ಅವರ ಕೃತಿರಚನೆ ಸಮರ್ಥ ವಿಮರ್ಶಕನೊಬ್ಬನ ಸುದೀರ್ಘಗ್ರಂಥದ ವಿಷಯವಾಗಿದ್ದು, ಪ್ರಸ್ತುತ ಲೇಖನವು, ಅವರ ಕವಿತೆಗಳಲ್ಲಿ ಸ್ಫುಟವಾಗಿ ಕಾಣುವ ಕೆಲವು ಗುಣವಿಶೇಷಗಳತ್ತ ಮಾತ್ರ ಗಮನವನ್ನು ಹರಿಸಿದೆ.

ಶಿವರುದ್ರಪ್ಪನವರ ಕಾವ್ಯದ ವ್ಯಾಪ್ತಿ ವಿಶಾಲವಾಗಿದೆ. ಪ್ರಕೃತಿ ಗೀತೆಗಳು, ಚಿಂತನೆ, ಸಾಮಾಜಿಕ ಸಮಸ್ಯೆಗಳು, ವೈಯಕ್ತಿಕ ಜೀವನದ ರಸನಿಮಿಷಗಳು—ಹೀಗೆ ಬಾಳಿನ ವಿವಿಧ ಮುಖಗಳ ಅನುಭವಗ್ರಾಹ್ಯ ಹಾಗೂ ಅನುಭವಾತೀತ ಜೀವನದ ದರ್ಶನವನ್ನು ಅವರು ತಮ್ಮ ಕವಿತೆಗಳಲ್ಲಿ ಸೆರೆಹಿಡಿಯುತ್ತಾರೆ. ಅನುಭವಾತೀತವಾದದ್ದು ಕೂಡ ಅವರಲ್ಲಿ ದಿವ್ಯ ಕಾವ್ಯಾನುಭವವಾಗಿ ಮೂರ್ತಗೊಂಡ ಉದಾಹರಣೆಯನ್ನು ಅವರ "ಕನಸಿನಿಂದ ನನಸಿಗೆ" ಎಂಬ ಕವಿತೆಯಲ್ಲಿ ನೋಡಬಹುದು. ಕನಸಿನಲ್ಲಿ ಛೇಡಿಸಿದ

ಚರಣವೊಂದು ಮುಂದೆ ಕವಿತೆಯಾಗಿ ರೂಪುಗೊಂಡಿರುವುದು "ಕೊಲೆರಿಡ್ಜ್" ಕವಿಯ *Kublakhan* ಖಂಡಕವಿತೆಯನ್ನು ನೆನಪಿಗೆ ತರುತ್ತದೆ. ಕೊಲೆರಿಡ್ಜನು ಕಾವ್ಯಸಮಾಧಿಯಲ್ಲಿದ್ದಾಗ ಕನವರಿಸುತ್ತ ಆ ಕವಿತೆ ಗೋಡೆಯ ಮೇಲೆ ಬರೆದದ್ದನ್ನು ನೋಡಿದನಂತೆ. ಅದನ್ನವನು ಪೂರ್ತಿಯಾಗಿ ಬರೆದುಕೊಳ್ಳುವ ಮುನ್ನವೇ ಕಾವ್ಯಸಮಾಧಿಯ ಭಂಗವಾಗಿ ಕವಿತೆ ಅಪೂರ್ಣವಾಗಿಯೇ ಉಳಿಯಿತು !

ನಾಡಿನ ಹಲವಾರು ಪ್ರಮುಖ ಕವಿಗಳಂತೆ ಶಿವರುದ್ರಪ್ಪನವರು ಕೂಡ ಪ್ರಾರಂಭದಲ್ಲಿ Romantic Poetryಯ ಮೂಲಕವೇ ತಮ್ಮ ಅಭಿವ್ಯಕ್ತಿಯನ್ನು ಕಂಡುಕೊಂಡರು. ಮುಂದೆ ಕ್ರಮೇಣವಾಗಿ ಶೈಲಿ, ಭಾಷೆ, ಛಂದಸ್ಸು, ವಸ್ತು—ಹೀಗೆ ನಾನಾ ದಿಕ್ಕಿನಲ್ಲಿ ಸ್ತುತ್ಯವಾದ ಹೊಸ ಹೊಸ ಪ್ರಯೋಗಗಳನ್ನು ಮಾಡಿ ಕಾವ್ಯಮಾಧ್ಯಮದಲ್ಲಿ ತಮ್ಮ ಸ್ವಂತಿಕೆಯನ್ನು ಪ್ರಸ್ಥಾಪಿಸಿದರು. ಜೀವನದ ಅತೀ ಸಾಮಾನ್ಯ ಅನುಭವಗಳನ್ನು ಕೂಡ ತಮ್ಮ ಕಾವ್ಯಪರುಷಕ್ಕೆ ತಿಕ್ಕಿ, ದಿವ್ಯಾನುಭವಗಳ ಚಿನ್ನವನ್ನಾಗಿ ಮಾರ್ಪಡಿಸಿದರು. ನವ್ಯತೆಯ ಪ್ರಯೋಗವನ್ನು ಮಾಡಿದರೂ ಕೂಡ, ಅದರ ಸತ್ವವನ್ನು ಸಂಪ್ರದಾಯಕತೆಗೆ ಪೂರಕವಾಗಿ ಉಪಯೋಗಿಸಿಕೊಂಡರು. ಸಾಮಾನ್ಯವಾಗಿ ಕನ್ನಡದಲ್ಲಿ ನವ್ಯತೆಯು ಜೀವನದ ವಿಕೃತಿಯನ್ನರಸುತ್ತ ಹೋಗಿ, ಅದನ್ನು glorify ಮಾಡಲು ಹೊರಟಾಗ, ಶಿವರುದ್ರಪ್ಪನವರು ಆ ವಿಕೃತ ಜೀವನದಲ್ಲಿಯ ಅಸಹಾಯಕ, ನಾಜೂಕು ಕ್ಷಣಗಳನ್ನು ಮಾತ್ರ ಸೆರೆಹಿಡಿದು ಸಾಂಪ್ರದಾಯಕತೆಯ ರಸಸಂಜೀವಿನಿಯಲ್ಲಿ ಅದ್ದಿ, ಅವುಗಳಿಗೆ ಅನುರತ್ವವನ್ನು ಕಲ್ಪಿಸಿದರು. ಬಹುಪಾಲು ನವ್ಯಕವಿಗಳಂತೆ ಶಿವರುದ್ರಪ್ಪರು ಬಾಳಿನಲ್ಲಿ ಶ್ರದ್ಧೆಯನ್ನು ಕಳೆದು ಕೊಂಡ ಕವಿಯಲ್ಲ. ದುಃಖವೇ ಫಲವೆಂದು ದೈವತ್ವವು ನಮಗೆ ಕೊಟ್ಟಿದ್ದರೂ, ಸಿಪ್ಪೆಯಾಗಿಯಾದರೂ ಆ ಫಲಕ್ಕೆ ದೇವರು ಸುಖವನ್ನು ಕೊಟ್ಟಿದ್ದಾನೆ :

ಕಣ್ಣೀರಿನುಪ್ಪು, ಶೋಕದ ಸುಖಕೆ
ಹಂಬಲಿಸದಿರೊ ಬೆಪ್ಪೆ ;
ದುಃಖ—ಫಲವಿದೆ ಇದೆಕೊ ನಿನ್ನೆದುರು ತಟ್ಟೆಯಲಿ
ಸುಲಿ, ಸುಖ ಅದರ ಸಿಪ್ಪೆ ! (ಸುಖ_ದುಃಖ)

ಜೀವನದಲ್ಲಿಯ ದುಃಖಕ್ಕೆ ಕಾರಣ, ನಮ್ಮೆಲ್ಲರ ಅಪ್ರಾಮಾಣಿಕತೆ, ಜಾತಿ, ಸಂಪ್ರದಾಯ! ಧರ್ಮ ಮುಂತಾದವುಗಳ ಹೆಸರಿನಲ್ಲಿ ಹುಟ್ಟಿಸುತ್ತ ಬಂದ ಮೋಸದ ಚಕ್ರವ್ಯೂಹ (ಜಾತ್ರೆ). ಅದೇ ರೀತಿ, ಜನಪ್ರಿಯತೆಗೆ ಸುಲಭಮಾರ್ಗವಾದ ವಾಮಾಚಾರದ ಹುಸಿ ನವಾಭಿವ್ಯಕ್ತಿಯ ಬೆನ್ನಟ್ಟಿ ಹೋಗದಿದ್ದುದು ಶಿವರುದ್ರಪ್ಪನವರ ನವ್ಯತೆಯ ಹಿರಿಮೆಯಾಗಿದೆ. ತಮ್ಮ ಕಾವ್ಯಾಭಿವ್ಯಕ್ತಿಯ ವಿಷಯವಾಗಿಯೇ ಅವರು "ಈ ಕವಿತೆ" ಎನ್ನುವ ಕವಿತೆಯಲ್ಲಿ ಈ ರೀತಿ ಹೇಳಿದಂತಿದೆ :

ಈ ಕವಿತೆ ಯಾವಳೋ ಹೆಣ್ಣ ಕಣ್ಣಬೆಳಕಿನ ಕಿರಣ
ತಾಗಿ ಪುಟಿದದ್ದಲ್ಲ,

ಪ್ರಣಯೊಲಾಪಗಳ ಜಳ್ಳುಬಳ್ಳಿಯನು ತಬ್ಬಿ
ಹಬ್ಬಿದ್ದಲ್ಲ
ಯೌವನೋನ್ಮತ್ತ ವಿಕೃತ ಭ್ರಮೆಗಳಿಗೆಲ್ಲ
ಕೋಡಂಗಿ ವೇಷವನು ಕಟ್ಟಿಕುಣಿಸಿದ್ದಲ್ಲ.

(ಈ ಕವಿತೆ)

ಜೀವನದ ಅಗಮ್ಯ ಸಂಕೀರ್ಣತೆ ಅವರ ಕವಿತೆಗಳಲ್ಲಿ ಮೂಡಿಬಂದಿದ್ದರೂ ಕ್ಲಿಷ್ಟತೆಯ ದೊಂಬರಾಟದಲ್ಲಿ ಅವರು ಆ ಅನುಭವವನ್ನು ಕಣ್ಣುಮುಸಕಾಗಿಸುವುದಿಲ್ಲ. ಇದಕ್ಕೆ ಅವರ "ಮುಂಬೈ ಜಾತಕ" ಎನ್ನುವ ಕವಿತೆಯೇ ಉದಾಹರಣೆ. ಅಲ್ಲದೆ ಈ ಕವಿತೆ ಕನ್ನಡದ ಅತ್ಯುತ್ತಮ ಕವಿತೆಗಳಲ್ಲೊಂದಾಗಿದೆ. "ಮಬ್ಬಿನಿಂದ ಮಬ್ಬಿಗೆ" ಎನ್ನುವ ಕವಿತೆಯನ್ನೂ ಇದರ ಜತೆಗೇ ಉದಾಹರಿಸಬಹುದಾಗಿದೆ.

ಶಿವರುದ್ರಪ್ಪನವರು ಪ್ರಕೃತಿಯ ಆರಾಧಕರೂ ಹೌದು. ಸುತ್ತಲೂ, ವಿವಿಧ ಲಹರಿಗಳಲ್ಲಿ ವ್ಯಕ್ತವಾಗಿರುವ ವಿಶ್ವಚೈತನ್ಯ, ಅವರ ಕವಿತೆಗಳಲ್ಲಿ ಸ್ಪಂದಿಸುತ್ತಿದೆ. ಬೆಳಗು–ಬೈಗುಗಳು, ಋತುಸಂಹಾರ, ನೆರಳು—ಬೆಳಕು, ಸುಖ–ದುಃಖ, ಜಡ–ಚೇತನ, ಮುಂತಾದ ಸರ್ವಕಾಲೀನ ಸತ್ಯಗಳನ್ನು ಅವರು ಕವಿಯಾಗಿ ಅನುಭವಿಸಿ, ಚಿಂತಕರಾಗಿ ಯೋಚಿಸಿ, ಕೊನೆಗೆ ಮಾನವ ಮತ್ತು ನಿಯತಿಗಿರುವ ಸಂಬಂಧಗಳನ್ನು ಕುರಿತು ಆಳವಾಗಿ ಯೋಚಿಸುತ್ತಾರೆ: "ವೈಶಾಖ ಶುಕ್ಲ ಪೂರ್ಣಿಮೆ"ಯ ಶ್ರೀಮಂತ ವೈಭವ, ಜೀವನದ ಒಂದು ಮುಖವಾದರೆ "ಒಂದಾದರೂ ಹೂವು ಮಂದಹಾಸವ ತೆರೆದು ದುಂಬಿ ಮುತ್ತಿನ ಬಳಿಗೆ ಸೆಳೆಯದ "ಬೆಂಗಾಡು", ಜೀವನದ ಇನ್ನೊಂದು ರುದ್ರಮುಖ. ಜೀವನದ ಕ್ಷಣ ಭಂಗುರತೆ, ಹಾಗೂ ಸೃಷ್ಟಿಯ ಚಿರಂತನತೆ ಹಾಗೂ ಭವ್ಯತೆಯಿದಿರು ಕಾಣುವ ಮಾನವನ ವಾಮನಾವತಾರ, ಮತ್ತೆ ಮತ್ತೆ ವಿವಿಧಕಾವ್ಯ ಪ್ರತಿಮೆಗಳಾಗಿ ಶಿವರುದ್ರಪ್ಪನವರ ಕವಿತೆಗಳಲ್ಲಿ ರೂಪುಗೊಂಡಿವೆ. "ಖಾಲಿ ಸೈಟಿನ ಕಡೆಗೆ" ಎನ್ನುವ ಕವಿತೆಯಲ್ಲಿ ಈ ಅನಾಮಿಕ ಕ್ಷಣಭಂಗುರ ಬದುಕಿನ ದುರಂತ ಹೃದಯಸ್ಪರ್ಶಿಯಾಗಿ ಮೂಡಿಬಂದಿದೆ. ಖಾಲಿ ಸೈಟಿನಲ್ಲಿ ಬಂದು ಬಿದ್ದ ಜಲ್ಲಿ, ಮರಳು, ಸಿಮೆಂಟು ರೂಪಾಂತರವಾಗಿ ಕಿಟಕಿ, ಥಾವಣಿ, ಬಾಗಿಲುಗಳಾಗುತ್ತದೆ. "ಜರತಾರಿ ಸೀರೆಯಾಚೆಗೇ ಕೈಯೊಡ್ಡಿ" ಗೃಹಪ್ರವೇಶದೌತಣವಾಗಿ ಮನೆಯೆದ್ದು,

"ಎದ್ದಮನೆ ಮೇಲೆ ಬಿಸಿಲು–ಮಳೆ–ಬೆಳುದಿಂಗಳಾಡಿ
ಅಡುಗೆ ಮನೆ ಹೇಗೆ ಕೊಳವಿಯಿಂದ ಹಬೆಮಾಡಿ
ತೊಟ್ಟಿಲು ತೂಗಿ,
ಜನ ಬಂದು ಹೋಗಿ,
ಚಡ್ಡಿ ಲಂಗಗಳು ಪಂಚೆ–ಪ್ಯಾಂಟು ಸೀರೆಗಳಾಗಿ
ನೆಟ್ಟಗಿದ್ದವರ ಬೆನ್ನು ಬಾಗಿ, ಕೋಲೂರಿ
ನಡೆದ ಯಜಮಾನರನ್ನು

ಒಂದು ದಿನ ಹೊತ್ತು ಸಾಗಿಸುತ್ತಾರೆ ಹೊರಗೆ
ಏನೂ ಇಲ್ಲದೆ, ದೂರದ ಖಾಲಿ ಸೈಟಿನ ಕಡೆಗೆ.

೬

ಈ ಎಲ್ಲ ಜಡ-ವಿವರಗಳ, ಹಾಗೂ ಕ್ರಿಯೆಗಳ ಚಕ್ರವ್ಯೂಹ ದಾಟುವ ಜೀವ ಒಂದು ಖಾಲಿ ಸೈಟಿನಿಂದ ಇನ್ನೊಂದಕ್ಕೆ ಬಂದು ಮುಗಿಯುತ್ತದೆ. ಅಸ್ತಿತ್ವವೆಂದರೆ, ಮನುಷ್ಯನು ಘಟನೆ–ಘಟನೆಗಳ ಮಧ್ಯೆ ಕಂಡುಕೊಂಡ ಬದುಕಿನ ಅರಿವು. "ನಾವು ಬದುಕಿದ್ದೇವೆ ಎನ್ನುವ ಅನಿಸಿಕೆಯೊಂದೇ" ನಮಗೆ ಕೊನೆಯವರೆಗೂ ಉಳಿದಿರುವದು. "ವ್ಯಕ್ತಿತ್ವ" ಎನ್ನುವ ಕವಿತೆಯಲ್ಲಿಯೂ ಇಂಥದೇ ಭಾವ ಮೂಡಿಬಂದಿದೆ.

ಸಾಮಾಜಿಕ ವ್ಯವಸ್ಥೆಯ ಬಗೆಗೆ, ಅದರ ಆಗುಹೋಗುಗಳ ಬಗೆಗಿದ್ದ ಕವಿಯ ಆಸ್ಥೆ, ಅದರ ದುಃಸ್ಥಿತಿಯನ್ನು ಕಂಡು ಕನಿಕರ, ಜುಗುಪ್ಸೆ, ತಾತ್ಸಾರ, ವ್ಯಂಗ್ಯ ಹೀಗೆ ಹಲವಾರು ಭಾವನೆಗಳಿಂದ ಉದ್ರಿಕ್ತವಾಗುತ್ತದೆ.

"ಪಂಡಿತರಿಗೆ," "ನಮ್ಮವರೇ ಇವರೆಲ್ಲರೂ," "ಜಾತ್ರೆ," "ಇದು ನಗರ" ಮುಂತಾದ ಕವಿತೆಗಳಲ್ಲಿ ಈ ಉತ್ಕಟತೆಯನ್ನು ನಾವು ಕಾಣಬಹುದಾಗಿದೆ.

ಇದೇ ರೀತಿ, ಜೀವನದಲ್ಲಿಯ ವೈಯಕ್ತಿಕ ಘಟನೆಗಳಿಗೆ ಸಂಬಂಧಿಸಿದ ಅವರ ಕವಿತೆಗಳು ಕೂಡ ಬಾಳಿನ ಅರ್ಥವನ್ನು ಹುಡುಕುವುದನ್ನು ಕಾಣಬಹುದು.

ಮ್ಯಾಥ್ಯು ಅರ್ನಾಲ್ಡ್, ಶ್ರೇಷ್ಠ ಕಾವ್ಯದ ಗುಣವಿಶೇಷವನ್ನು ಬೆಲೆಗಟ್ಟಲು, ಆಯಾ ಕವಿಗಳ ಕೃತಿಗಳಲ್ಲಿರುವ "ಶ್ರೇಷ್ಠ ಸಾಲು"ಗಳನ್ನು ಗಣನೆಗೆ ತೆಗೆದುಕೊಳ್ಳಬೇಕೆಂದು ತನ್ನ ವಿಮರ್ಶೆಯ ಸಿದ್ಧಾಂತದಲ್ಲಿ ಹೇಳುತ್ತಾನೆ; ಅಂಥ "ಶ್ರೇಷ್ಠ ಸಾಲುಗಳು" ಶಿವರುದ್ರಪ್ಪನವರ ಕವಿತೆಗಳಲ್ಲಿ ಹೇರಳವಾಗಿವೆ: ಅವುಗಳಲ್ಲಿ ನೋಡಿದೊಡನೆಯೇ ಕಣ್ಣಿಗೆ ಬಿದ್ದ ಕೆಲವು ಸಾಲುಗಳನ್ನು ಮಾತ್ರ ಕೆಳಗೆ ಉದಾಹರಿಸಿದೆ:

"ಮರ್ತ್ಯದ ಮಕ್ಕಳಮರ್ತ್ಯಕೆ ಏರಲು
ಭೂಮಿಗೆ ಬಿದ್ದಿದೆ ಬಿಸಿಲೇಣಿ."

(ಕೆರೆಯ ದಡದಲ್ಲಿ)

"ಕುಂಡದ ಗಿಡಕ್ಕೇನು ಗೊತ್ತುಂಟೊ
ತಾಯ್ನೆಲದ ಜಲದ ಜೀವಂತ ಪ್ರಜ್ಞೆ !"

(ಪ್ರಜ್ಞೆ)

"ಇರುಳ ನಿದ್ದೆಯ ಮರಳುಗಾಡೊಳು
ನಡೆವ ಕನಸಿನ ಕಾರವಾನ್"

(ಗೊರಕೆ)

"ಹಗಲು ಸೊಗಸನ್ನೆಲ್ಲ ಹೇರಿಕೊಂಡು ಸೂರ್ಯನ ಬಂಡಿ
ಕತ್ತಲೆಯ ದಾರಿಯನು ಹಿಡಿಯಿತು."

(ಎರಡು ದೃಷ್ಟಿ)

ಹಾಗೂ "ಮಬ್ಬಿನಿಂದ ಮಬ್ಬಿಗೆ" ಎನ್ನುವ ಕವಿತೆಯನ್ನು—ಥಾಮಸ್ ಗ್ರೇ ಬರೆದ "ಎಲಿಜೀ ರಿಟನ್ ಇನ್ ಅ ಚರ್ಚ್ ಯಾರ್ಡ್" ಕವಿತೆಯಂತೆ—ಪೂರ್ತಿಯಾಗಿ ಉದಾಹರಿಸಬಹುದು.

ಹೀಗೆ ಶಿವರುದ್ರಪ್ಪನವರ ಕಾವ್ಯಸಿದ್ಧಿಗೆ ಹರಹು ಹಾಗೂ ಆಳ ಎರಡೂ ಇವೆ. ಹೊಸ ಜನಾಂಗದ ಮೇಲೆ, ತಮ್ಮ ಕವಿತೆಗಳ ಮೂಲಕ ಪ್ರಭಾವ ಬೀರಿದ ಡಾ|| ಶಿವರುದ್ರಪ್ಪನವರು ಈ ತಲೆಮಾರಿನ ಪ್ರಮುಖ ಕವಿಗಳಲ್ಲೊಬ್ಬರಾಗಿದ್ದಾರೆ.

ವಿಜಯಭಾರತಿ ರಾಂ

# ಶಿವರುದ್ರಪ್ಪನವರ ಕವನಗಳು

ಸೃಷ್ಟಿರೂಪಿಣಿಯಾದ ಜಗದ್ಧಾತ್ರಿ ಸೌಂದರ್ಯಮಯಿಯಾಗಿರುವಂತೆ, ಚಿರಂತನ ರಸೋನ್ಮತ್ತೆಯಾದ ಮಹಾಕವಯಿತ್ರಿಯೂ ಆಗಿದ್ದಾಳೆ. ಹಸಿರಾಗಿ, ಹೂವಾಗಿ, ಹಕ್ಕಿಯ ಇಂಚರವಾಗಿ, ಬಿಸಿಲಾಗಿ, ತಣ್ಣನೆಯ ಬೆಳ್ದಿಂಗಳಾಗಿ, ಗರ್ಜಿಸುವ ಸಿಡಿಲಾಗಿ, ಇಳಿಯುವ ಮಳೆಯಾಗಿ ಕೋಟ್ಯನುಕೋಟಿ ರೂಪದಲ್ಲಿ ಮನುಷ್ಯಚೇತನವನ್ನು ಮೂಕ ವಿಸ್ಮಿತಗೊಳಿಸಿ ಮೆರೆದಿರುವ ಆ ವಿರಾಡ್ವ್ಯಕ್ತಿತ್ವದ ಹಿಂದೆ, ಒಂದು ಮಹಾಮನಸ್ಸಿದೆ; ಮಹೋನ್ನತ ಭಾವ ಭಾವನೆಗಳಿಂದ ತುಂಬಿ ತುಳುಕುವ ಒಂದು ಜ್ವಲಂತ ಹೃದಯ ಇದೆ. ತರುಮರಗಳು ಹೇಗೆ ತಮ್ಮಲ್ಲಿನ ಹಸುರನ್ನ, ಸುಗಂಧವನ್ನ, ಸವಿಯನ್ನ ತಮ್ಮಲ್ಲಿಯೇ ಹುದುಗಿಸಿಡಲಾರದೆ ಆ ಸತ್ವವನ್ನು ಚಿಗುರೆಲೆಯಾಗಿ, ಬಿರಿದ ಹೂವಾಗಿ, ರಸತುಂಬಿದ ಹಣ್ಣಾಗಿ, ತನ್ನಿಂದತಾನೆ ಒಡಮೂಡಿಸಿ ನಲಿಯುತ್ತದೆಯೋ ಹಾಗೆಯೇ ಈ ವಿಶ್ವಕವಯಿತ್ರಿಯ ಮೇರುಹೃದಯದ ಉಜ್ವಲಭಾವಗಳು ಒಳಗೊಳಗೆ ಕುದಿಕುದಿದು ಅಭಿವ್ಯಕ್ತಿಗಾಗಿ, ರೂಪಧಾರಣೆಗಾಗಿ, ತವಕಿಸಿರುತ್ತದೆ; ತಲ್ಲಣಿಸಿರುತ್ತದೆ; ಭೂವ್ಯೋಮವನ್ನೆಲ್ಲ ವ್ಯಾಪಿಸಿ ಅದಕ್ಕಾಗಿಯೇ ಸುತ್ತಿಸುಳಿಯುತ್ತಿದೆ:

ಹಕ್ಕಿಗೊರಲಿನಲ್ಲಿ ಪ್ರಕೃತಿ
ವಿವಿಧ ಮಧುರ ರಾಗವಾಗಿ
ಹೊಮ್ಮಲೆಳಸಿ ಸೋತಿತು
ಗಾಳಿಯೊಡನೆ ವಿಶ್ವವನ್ನೆ
ಸುತ್ತಿ ಸುಳಿದುದಾಯಿತು
ದೊರೆಯದಾಯ್ತು ಪ್ರಕೃತಿಗೆ
ಮೂಕಮೌನ ಶೋಕವೊಂದೆ
ತುಂಬಿಬಂತು ಮನಸಿಗೆ
ನನ್ನ ಎದೆಯನರಿತು ಮಿಡಿದು
ನುಡಿಸಬಲ್ಲನಿರುವನೆ ?
ನನ್ನ ನಾನು ವ್ಯಕ್ತಗೊಳಿಸ
ದಿರಲು ಬದುಕಬಲ್ಲನೆ ?
ಎಂಬ ಚಿಂತೆಯಲ್ಲಿ ಪ್ರಕೃತಿ

ಹಾರೈಸಿತು ದಿನದಿನ
ತಪಗೈಯಿತು ದಿನದಿನ !

ಹಾಡುವ ವ್ಯಕ್ತಿ ತನ್ನ ಮನಸ್ಸಿನಲ್ಲಿರುವ ರಾಗರಾಗಿಣಿಗಳ ಮಧುರ ವಿನ್ಯಾಸದ ಅಭಿವ್ಯಕ್ತಿಗಾಗಿ ಹೇಗೆ ಕಂಠವನ್ನಾಶ್ರಯಿಸುತ್ತಾನೆಯೋ ಹಾಗೆಯೇ ಆ ಅಸೀಮ ಅಂತರಂಗದ ರಾಗಭಾವವೂ ತನ್ನತನಕ್ಕೆ ಯುಕ್ತವಾದ ಸೂಕ್ತವಾದ ಮನುಷ್ಯಹೃದಯವೊಂದನ್ನು ಆಶ್ರಯಿಸಿ ಅಭಿವ್ಯಕ್ತಗೊಂಡು, ಅವ್ಯಕ್ತದಿಂದ ವ್ಯಕ್ತದಂಚಿಗೆ ಮುನ್ನಡೆಯಲಿಚ್ಛಿಸುತ್ತದೆ. ತನ್ನ ಉಜ್ವಲಭಾವವನ್ನು, ಮೂಕಭಾಷೆಯನ್ನು ಅರ್ಥಮಾಡಿಕೊಂಡು ಸಾರ್ಥಕ ರೀತಿಯಲ್ಲಿ ಅದಕ್ಕೆ ರೂಪದಾನಮಾಡುವಂತಹ ವಿಶಿಷ್ಟ ವ್ಯಕ್ತಿಯ ಅನ್ವೇಷಣೆಯಲ್ಲಿ ನಡೆದ ಆ ಮಹಾಮನಸ್ಸು ಕೊನೆಗೊಮ್ಮೆ ತಾನು ಆವಿರ್ಭವಿಸಬಹುದಾದಂತಹ ತಂಗುದಾಣವೊಂದನ್ನು ಕಂಡು ಅಲ್ಲಿಯೇ ನಲಿದು ನಿಲ್ಲುತ್ತದೆ:

ಜಗದ ಜಟಿಲ ಜಾಲದಲ್ಲಿ
ಸಾಮಾನ್ಯರ ಕೂಟದಲ್ಲಿ
ಕಂಡಿತೊಬ್ಬ ವ್ಯಕ್ತಿಯ
ದಾರಿದ್ರ್ಯದಿ ನೊಂದರೂ
ಕಣ್ಣೀರೊಳು ಮಿಂದರೂ
ಸೌಂದರ್ಯದ ಆರಾಧನೆ-
ಯಲ್ಲಿ ತೊಡಗಿ ತಪಗೈಯುವ
ಮನುಜನೆದೆಯ ಶಕ್ತಿಯ
ಇಳಿದುಬಂತು ಪ್ರಕೃತಿಯ ಕೃಪೆ
ಮನುಜನೆದೆಯ ಗುಡಿಯೆಡೆ
"ನನ್ನ ನೀನು ವ್ಯಕ್ತಗೊಳಿಸಿ
ನೀಡು ನನಗೆ ಬಿಡುಗಡೆ
ನನಗೆ ಮಾತ್ರವಲ್ಲ ಕಾಣೊ
ನಿನಗೂ ಅದು ಬಿಡುಗಡೆ"
ಎಂದು ಬೇಡಿತವನನು
ಆಶ್ರಯಿಸಿತು ಕವಿಯನು

ಪ್ರಕೃತಿಯ ಅಭಿವ್ಯಕ್ತಿಯ ಈ ಹಸಿವು ಈ ತವಕ ಈ ತಲ್ಲಣ ಭಾವಜೀವಿಯ ಹೃದಯವನ್ನು ಸಮೀಪಿಸಿ, ಆವರಿಸಿ ಅಲ್ಲಿ ಆವಾಹನೆಗೊಂಡು ಕವಿಯ ಅಂತಶ್ಶಕ್ತಿಯಾಗಿ, ಅಂತಃಸ್ಫೂರ್ತಿಯಾಗಿ, ಅಂತಃಪ್ರೇರಣೆಯಾಗಿ ನವಿರಾದ ತಂತಿಯಲ್ಲಿ ನಾದ ನೆಲೆಗೊಳ್ಳುವಂತೆ ಅಲ್ಲಿ ನೆಲೆಗೊಳ್ಳುತ್ತದೆ.

ತನ್ನೆದೆಯ ಬಾಗಿಲಿನ ಬಳಿಗೆ ತಾನೇ ತಾನಾಗಿ ನಡೆತಂದ ರಾಗಭಾವಗಳ ಅಧಿದೇವತೆಯ ಈ ಅನಿರ್ವಚನೀಯವಾದ ದೈವೀಕೃಪೆಯ ಎದುರಿನಲ್ಲಿ ಕವಿ ಆನಂದೋನ್ಮಾದದಿಂದ ಮೈಮರೆಯುತ್ತಾನೆ, ಮೂಕನಾಗುತ್ತಾನೆ. ಅದುವರೆಗಿನ ಆತನ ದೃಷ್ಟಿ, ಆತನ

ಅರಿವು, ಆತನ ಚಿಂತೆ, ಆತನ ಆಲೋಚನೆ, ಧ್ಯಾನ, ಮನನಗಳಿಗೆಲ್ಲ ಈಗ ಏನೋ ಒಂದು ರೀತಿಯ ಶಾಂತಿ, ತೇಜಸ್ಸು, ಪುಷ್ಟಿ, ರಸಲೇಪನ ಇವು ಮೈಗೂಡಿ ನಿಲ್ಲುತ್ತವೆ. ಮೊದಲಿನ ತನ್ನ ವ್ಯಕ್ತಿತ್ವಕ್ಕೆ ಒಂದು ಹಸಿರನ್ನ, ಸವಿಯನ್ನ, ಬೆಳಕನ್ನ ತಂದಿತ್ತ ಆ ಮಹಾಶಕ್ತಿಗೆ ಕವಿ ಮನದುಂಬಿ ಮಣಿದು ತಾನೆ ಅದರಲ್ಲಿ ಕರಗಿ 'ಬಾಳೆಲ್ಲ ನಾಲಗೆಯಾಗಿ' (ಕುವೆಂಪು) ನಲಿದು ಹಾಡುತ್ತಾನೆ:

ತನ್ನ ಬಳಿಗೆ ಹರಿದುಬಂದ
ಕೃಪೆಗೆ ಮುಡಿಯ ಬಾಗಿಸಿ
ತನ್ನತನವನದರ ಎದೆಯ
ವಾಣಿಯಲ್ಲಿ ಕರಗಿಸಿ
ಜಗಕೆ ಹಾಡುತಿರುವನಿಲ್ಲಿ
ನೂರು ಮಧುರಸ್ವರದಲಿ
ಕವಿಯ ಹಾಡ ಕೇಳಿ ಲೋಕ
ಬೆರಗಾಗಿ ಮನದಲಿ

* * *

ವ್ಯೋಮಕೇಶನಿಂದ ಗಂಗೆ
ಭಗೀರಥನ ಹತ್ತಿರ
ಇಳಿದುಬಂದ ಹಾಗೆ ಪ್ರಕೃತಿ
ಬಂತು ಕವಿಯ ಹತ್ತಿರ

"ಪ್ರಕೃತಿ–ಕವಿ"
(ಚೆಲುವು-ಒಲವು)

ಈ ಕಾವ್ಯಭಾಗೀರಥಿಯ 'ಮಿಂಚಸ್ಪರ್ಶಗೆ' (ಕುವೆಂಪು) ಒಳಗಾದ ಕವಿದೃಷ್ಟಿಗೆ ಜಗತ್ತಿನ ಈ ಕಣಕಣವೂ 'ರಸದ ಕಿಡಿ' (ಕುವೆಂಪು)ಯಾಗಿ 'ಚೈತನ್ಯದಗ್ನಿ ನದಿ' (ಕುವೆಂಪು)ಯಾಗಿ ಗೋಚರಿಸುತ್ತದೆ.

ನದಿಯೊಂದಿಗೆ ನದಿಯಾಗಿ, ಹಕ್ಕಿಯೊಡನೆ ಹಕ್ಕಿಯಾಗಿ, ಮೋಡದೊಡನೆ ಮೋಡವಾಗಿ, ಹರಿದು, ಹಾರಿ, ತೇಲಿ ನಲಿಯುವ ಕವಿಯೊಡನೆ ಸೃಷ್ಟಿಯ ರೋಮರೋಮವೂ ಮಾತನಾಡುತ್ತದೆ. ತನ್ನ ಹೃದಯವನ್ನು ಬಿಚ್ಚಿ ತೋರಿಸುತ್ತದೆ. ವೀಣೆ ತನ್ನ ನಾದದ ಭಾಷೆಯಿಂದ ತನ್ನ ನೋವು ನಲಿವುಗಳನ್ನು ವೈಣಿಕನೊಂದಿಗೆ ನಿವೇದಿಸಿಕೊಳ್ಳುವಂತೆ ಪ್ರಕೃತಿ ತನ್ನ ನಲಿವುಗಳನ್ನು ಆತನೊಂದಿಗೆ ನಿವೇದಿಸಿಕೊಳ್ಳುತ್ತದೆ; ರೂಪುಕೊಡು ಎಂದು ಕವಿಯನ್ನು ಕಾಡುತ್ತದೆ:

ಜಗದ ರಂಗಕೆ ಇರುಳ ಕರಿಯ ತೆರೆ ಬಿದ್ದಾಗ
ಕಿರುನಗೆಯ ತಾರೆಗಳ ತಂಬೆಳಕು ಹರಿದಾಗ
ಗಾಳಿ ಜೋಗುಳ ಹಾಡಿ
ಜಗಕೆ ಶಾಂತಿಯನೂಡಿ
ಮಾನವನು ತೊಟ್ಟಿಲಲಿ ತೂಗಿದಾಗ

ದೂರದರಿಲುಗಳಿಂದ
ಕಡಲಿನಾಳಗಳಿಂದ
ಯಾವ ಭಾವವೊ ಬಂದು ತಲೆಯ ಬಳಿ ನಿಂದು
'ರೂಪು ಕೊಡು' ಎಂದೆನ್ನ ಎಚ್ಚರಿಪುದು
ಜಗವೆಲ್ಲ ಮುಸುಕೆಳೆದು ಮಲಗಿ ನಿದ್ರಿಸುವಾಗ
ಕನಸುಗಳ ಉಪವನದಿ ಸಂಚರಿಸುವಾಗ
ಹಸುಳೆಕಂದನ ಕಿವಿಗೆ
ಅಮರಗಾಯನ ಮೊಳಗೆ
..........................
ಕಾಣದಿಹ ಕಡೆಯಿಂದ
ಬೇರೆ ಲೋಕಗಳಿಂದ
ಯಾವ ಭಾವವೊ ಬಂದು ಕಿವಿಯ ಬಳಿಯಲಿ ನಿಂದು
'ರೂಪು ಕೊಡು' ಎಂದಲ್ಲಿ ಪಿಸುಗುಡುವುದು.
ಬಾನಬಯಲಿನ ಒಳಗೆ ತುಂಬುಚಂದಿರನಿಂದು
ಹಾಲ್ ಬೆಳಕಿನಲಿ ಜಗವ ನೆನಸಿದಂದು
ಆ ತಣಿಲ ಶಾಂತಿಯಲಿ
..................................
..................................
ತುಂಬು ಚಂದಿರನಿಂದ
ಹರಿದು ಬಹ ಹೊನಲಿಂದ
ಯಾವ ಭಾವವೊ ಬಂದು ತಲೆಯ ಒಳಗಡೆ ನಿಂದು
'ರೂಪು ಕೊಡು' ಎಂದೆನ್ನ ಪೀಡಿಸುವುದು
..................................
..................................
ನೀರವದ ಲೋಕದಲಿ
ದಿವ್ಯತಮ ಶಾಂತಿಯಲಿ
ಸೃಷ್ಟಿಯೇ ತಪಗೈಯುಲನುವಾಗುವಲ್ಲಿ
ನೂರಾರು ಕಡೆಯಿಂದ
ಕಾಣದಾಳಗಳಿಂದ
ಯಾವ ಭಾವವೊ ಬಂದು ಸುತ್ತಲೂ ನಿಂದು
'ರೂಪುಕೊಡು' ಎಂದೆನ್ನ ಪೀಡಿಸುವುದು

"ಇರುಳ ಮೌನಗಳಲ್ಲಿ"
(ಸಾಮಗಾನ)

ಆದುವರೆಗೆ ಸಾಮಾನ್ಯವಾಗಿದ್ದ ಹೂವು ಹಣ್ಣುಗಳು ದೈವಸ್ಪರ್ಶಕ್ಕೆ ಒಳಗಾದಾಗ 'ಪ್ರಸಾದ'ವಾಗಿ ಪರಿವರ್ತಿತವಾಗುವಂತೆ ಕವಿಯ ಸ್ಪರ್ಶಕ್ಕೆ ಒಳಗಾದುದೆಲ್ಲ ಶಾಶ್ವತ ವಾಗುತ್ತದೆ. ಈ ರೀತಿ ಪ್ರಾಣಪ್ರತಿಷ್ಠೆ ವಾದ ದೇವವಿಗ್ರಹದಂತೆ ರೂಪುಗೊಂಡ ಕವಿಯ

ಸೂಕ್ಷ್ಮದೃಷ್ಟಿಗೆ ಕಡಲಿನಲ್ಲಿ, ಭೂಮಿಯಲ್ಲಿ, ಆಕಾಶದಲ್ಲಿ, ದಿನದಿನದ ಬಾಳಿನಲ್ಲಿ ಪ್ರಕೃತಿ ಗುಪ್ತರೀತಿಯಲ್ಲಿ ಬರೆದಿಟ್ಟ ರಸಕಾವ್ಯ ಮೈದೋರಿ ಮಿಂಚುತ್ತದೆ. ಹಾಗೆ ಮಿಂಚಿದ್ದನ್ನೇ ನುಡಿಯಲ್ಲಿ ಹಿಡಿದಿಟ್ಟು ಹಾಡಾಗಿ ಹಾಡುತ್ತಾನೆ. ಆ ಹಾಡೆ ಹೃದಯದಲ್ಲಿನ ಭಾವ ವನ್ನು ಉದ್ದೀಪನಗೊಳಿಸುವ ಭಾವಗೀತೆಯಾಗಿ, ಮಧುರ ಕವಿತೆಯಾಗಿ, 'ಆತ್ಮಗೀತಾಂ ಜಲಿ'ಯಾಗಿ (ವರ್ಡ್ಸ್‌ವರ್ತ್) ಹೊರಹೊಮ್ಮುತ್ತದೆ. ಕವಿಯ ಈ ಕಾರ್ಯ "ಸಾಂತತೆಯ ಚೌಕಟ್ಟಿನಲ್ಲಿ ಅನಂತತೆಯನ್ನು ಸೆರೆಗೈಯ್ಯಲೆಳಸುವ ಒಂದು ಮಧುರ ಪ್ರಯತ್ನವಲ್ಲದೆ, ಅವನು ತನ್ನ ಆನಂದಾನುಭವಕ್ಕೆ ತಾನೇ ತೆರೆದುಕೊಂಡ ಕವನರೂಪದ ರಸಗವಾಕ್ಷ ವಾಗುತ್ತದೆ."[1] ಕಿಡಿಯಾಗಿ ಕವಿಯ ಹೃದಯವನ್ನು ಹೊಕ್ಕ ಬಾಹ್ಯಲೋಕದ ಒಂದು ದೃಶ್ಯ, ಒಂದು ಅನುಭವ, ಕ್ಷಣಕ್ಷಣಕ್ಕೆ, ಜ್ವಾಲೆಯಾಗಿ ವ್ಯಾಪಿಸಿ ನಿಂತು ಮುಂದೊಮ್ಮೆ ಛಂದಶ್ಶರೀರಿಯಾಗಿ ಹೊರಕ್ಕೆ ಧುಮ್ಮಿಕ್ಕುತ್ತದೆ. ಈ ಗೀತೆ "ಕವಿಯ ಅನುಭವದ ತಾರ ಮಂದರಗಳನ್ನು ಹಿಡಿದಿಟ್ಟು ತನ್ನ ಮಾಯೆಯ ನಾದದ ಗತಿಯಿಂದ ಅವು ಮತ್ತೆ ಮಿಡಿಯುವಂತೆ ಮಾಡುತ್ತದೆ."[2] ಸೃಷ್ಟಿಯಲ್ಲಿನ ಚೆಲುವನ್ನು ಕಂಡಾಗ, ತನ್ನ ಜೀವನದ ನೋವು ನಲಿವುಗಳನ್ನು ಉಂಡಾಗ, ಸುತ್ತಮುತ್ತಲಿನ ಜನಜೀವನದ ರೀತಿನೀತಿಗಳನ್ನು ಅರಿತಾಗ, ತನ್ನನ್ನು ತಾನು ಶೋಧಿಸಿಕೊಂಡಾಗ, ದೇವರೆದುರಿನಲ್ಲಿ ಮೊರೆಯಿಡುವಾಗ ಈ ಕವಿಚೇತನ ಹೇಗೆ ಮಿಡಿಯುತ್ತದೆ, ಸ್ಪಂದನಗೊಳ್ಳುತ್ತದೆ, ಅನುರಣನವಾಗುತ್ತದೆ ಎಂಬುದನ್ನೀಗ ಕಾಣಬೇಕಾಗಿದೆ.

* * *

'ಚೆಲುವು' ಎನ್ನುವುದು ಮನಸ್ಸನ್ನು ಸೆಳೆದು ಆಳುವ ಅವ್ಯಾಹತವಾದ ಒಂದು ಶಾಶ್ವತ ಶಕ್ತಿ; ದೈವೀಸಂಪತ್ತಿನ ಒಂದು ಮುಖ: ಮನುಷ್ಯನನ್ನು ಶಿವದೆಡೆಗೆ ಕರೆ ದೊಯ್ಯುವ ಹೂಹಾದಿ. ಭಗವತ್‌ಸೃಷ್ಟಿಯ ಒಂದೊಂದು ಕಣವೂ ಒಂದೊಂದು ಚೆಲುವಿನ ಬುತ್ತಿಯಾಗಿದೆ. ಆದರೆ ಅದನ್ನು ಕಾಣುವ ಕಣ್ಣು ಎಲ್ಲರಿಗೂ ಇರುವುದಿಲ್ಲ ಅಷ್ಟೆ. ಒಳ್ಳೆಯ ನಿಲುವುಳ್ಳ ಎಲ್ಲೋ ಕೆಲವು ಹೃದಯಗಳು ಮಾತ್ರ ಅದನ್ನು ಕಾಣು ತ್ತವೆ, ನಿರ್ಲಿಪ್ತಭಾವದಿಂದ ಅನುಭವಿಸುತ್ತವೆ.

ಇಲ್ಲಿನ ಕವಿಹೃದಯವೂ ಅಂಥ ನಿಲುವನ್ನು ಪಡೆದ ಒಂದು ವಿಶಿಷ್ಟ ಚೇತನ. ಗಿಡ ಮರಗಳಲ್ಲಿ, ಬೆಟ್ಟಗುಡ್ಡಗಳಲ್ಲಿ, ಮಿಂಚು ಗುಡುಗುಗಳಲ್ಲಿ ಸೃಷ್ಟಿಯ ಪದರ ಪದರಗಳಲ್ಲಿ ತನ್ನ ಸೌಂದರ್ಯದ ಹನಿಯನ್ನು ಚಿಮುಕಿಸಿ ನಲಿಯುತ್ತಿರುವ 'ಚೆಲುವನ್ನು' ಕುರಿತು ಕವಿವಾಣಿ ಮನದುಂಬಿ ಹಾಡಿದೆ, ಭಕ್ತಿಯಿಂದ ನಮಿಸಿದೆ:

> ಹುಲ್ಲು ಹೂವಿನ ಕೊರಳಿಗೂ ಮಣಿಹಾರ ತೂಗುವ ಜ್ಯೋತಿಯೆ
> ಬೋಳು ಬಯಲನು ಹಸುರು ನಗೆಯಲಿ ತುಂಬಿ ತಬ್ಬುವ ಪ್ರೀತಿಯೆ
> ನೆಲದ ಬಯಕೆಯು ನೂರು ಶಿಖರವನೆತ್ತಿ ನಿಲ್ಲುವ ಮೌನವೇ
> ಕಡಲ ಕರೆಗೋಗೊಟ್ಟು ಹರಿಯುವ ರಮ್ಯ ಜಲಕಲನಾದವೇ

---

1 ಶಿವರುದ್ರಪ್ಪನವರು. 2 ಪರಮೇಶ್ವರ ಭಟ್ಟರು.

ಕಪ್ಪುಮೋಡಕು ಬೆಳ್ಳಿಯಂಚನು ಬರೆದ ಮಿಂಚಿನ ಕುಂಚವೇ
ಬಾನದೇಗುಲಕಿಂದ್ರಚಾಪದ ತೋರಣದ ಸಮ್ಮೋಹವೇ
ಸಪ್ಪಳಿಲ್ಲದೆ ತೆರೆಯನಪ್ಪುವ ಬಾನಿನೊಲವಿನ ಸೋನೆಯೋ
ನೆಲದ ಹಸುರಿನ ಬಯಕೆಬೀಜವನೆಚ್ಚರಿಪ ಕ್ರತುಶಕ್ತಿಯೋ

..........................................................

ಹಳೆಯ ಹೆಜ್ಜೆಗೆ ಹೊಸತು ಗೆಜ್ಜೆಯ ಕಟ್ಟಿ ಸುಖಿಸುವ ತುಷ್ಟಿಯೋ
ಸುಪ್ತಮನದೊಳು ತಪ್ತಜ್ವಾಲಾಮುಖಿಯ ಹರಿಸುವ ಮೋಡವೇ
ಈ ಚಿರಂತನ ಉತ್ಸವಪ್ರಿಯ ಸೃಷ್ಟಿಯೇ ಸಿಂಗಾರವೆ!

ಸೌಂದರ್ಯಶಕ್ತಿ ಶಿಶಿರದ ಮೌನವಾಗಿ, ಹಸಿರನಗೆಯಾಗಿ, ರೂಪುಗೊಂಡು ಕಂಗೊಳಿಸುವಂತೆ, ಮನುಷ್ಯನ ಅಂತರಂಗದ ಸವಿಗನಸಾಗಿ, ಮಧುರಸ್ಮೃತಿಯಾಗಿ ರೂಪುಗೊಂಡು ನಲಿಯಬಹುದು.

ಹಸುಳೆಗನಸನು ಚಂದ್ರಲೋಕಕ್ಕೊಯ್ವ ಹೂವಿನ ಯಾನವೆ
ಪರೆಯದೆದೆಯೊಳು ಮತ್ಸ್ಯಯಂತ್ರವ ಭೇದಿಸುವ ಉನ್ಮಾದವೆ
ಕುದಿವ ಕಡಲೊಳು ತೇಲ್ವ ನೌಕೆಗೆ ಕರ್ಣಧಾರ ತ್ರಾಣವೆ
ಸಂಜೆ ಬಾನಿನ ತುಂಬ ಹಗಲಿನ ಸ್ಮೃತಿಯ ಬರೆಯುವ ಭಾವವೆ !

ಹಾಲುಗೆಂದನಿಂದ ಹಿಡಿದು ಮುಪ್ಪು ಮುತ್ತಿರುವವರೆಗೆ ಎಲ್ಲರ ಕಣ್ಮನಗಳಲ್ಲಿಯೂ ಒಂದೊಂದು ರೀತಿಯ ಚೆಲುವು ತುಂಬಿರುತ್ತದೆ. ಅದರ ಹರಹಿಗೆ ಯಾವುದೂ ಹೊರತಾಗಿ ಉಳಿಯುವುದಿಲ್ಲ. ಜೀವಕೋಟಿಗಳ ಹೃದಯಗಹ್ವರದಲ್ಲಿ ಉದ್ಭವಿಸಿ ಹರಿಯುವ ಪ್ರೀತಿಯಲ್ಲಿ, ಮೋಹದಲ್ಲಿ, ವಾತ್ಸಲ್ಯದಲ್ಲಿ ಚೆಲುವಿನಂತೆ ನೆಲೆಗೊಂಡಿರುವಂತೆ ಇಡೀ ವಿಶ್ವದಲ್ಲಿ ಆ ಕ್ರತುಶಕ್ತಿ ನೆಲೆಗೊಂಡಿದೆ. ಅಣುವಿನಲ್ಲಿ, ಗ್ರಹಗಳಲ್ಲಿ, ಜೀವರಾಶಿಗಳಲ್ಲಿ ಅದರದೇ ನೃತ್ಯ, ಅದರದೇ ಸೂತ್ರ. ಅದರದೇ ಮಂತ್ರ. ನಿರಂತರವೂ ಹೊಚ್ಚಹೊಸದಾಗಿ, ಸವಿದಷ್ಟೂ ಹಿರಿದಾಗಿ ನೂರಾರು ರೂಪಗಳಲ್ಲಿ ರಾಗಭಾವಗಳಲ್ಲಿ ಮನಸೆಳೆಯುವ ಈ ಚೆಲುವು ಕೇವಲ ನಾಲ್ಕು ಚಣದ ಕ್ಷಣಭಂಗುರ ಚೆಲುವಲ್ಲ; ಅವಿನಾಶಿಯಾದುದು, ಸತ್ಯದೆಡೆಗೆ ಸೆಳೆದೊಯ್ಯುವಂತಹುದು, ಆತ್ಮಸೌಂದರ್ಯದ ಅರಿವಿಗೆ ಪ್ರೇರಣೆಯಾಗಿ, ಸಾಧನವಾಗಿ ನಿಲ್ಲುವಂಥದು. ತನ್ನ ಆ ದರ್ಶನವನ್ನೇ ಕವಿವಾಣಿ ಇಲ್ಲಿ ನಿರೂಪಿಸಿದೆ :

ಅಂತರಂಗದ ಬೆಳಕು ಬಾಹ್ಯದ ಬೆಳಕನೊಲಿಯುವ ತಾಣವೆ
ಪಾತ್ರಾಪಾತ್ರದೊಳರಳಿ ಸ್ಪಂದಿಸುವಾತ್ಮ ಕಿರಣಪ್ರಾಣವೆ ।
ಜೀವದೇವನ ಸಾಮರಸ್ಯದ ನವ್ಯ ಆವಿರ್ಭಾವವೆ
ಕುದಿವ ಬೆಂಕಿಯೊಳರಳಿ ನಿಲ್ಲುವ ಚಂದ್ರಸುಮಸೌಗಂಧವೇ
'ಅಹ' ಎನಿಸುತ ಬಂದು 'ಅಯ್ಯೊ' ಎನಿಸಿ ನಡೆಯುವ ಚಂಚಲೆ
ನಿನ್ನ ಮಿದುಪದ ಸೋಂಕಲೀ ಮನ ನೂರು ಮಿಂಚಿನ ಗೊಂಚಲೆ !

ನಿನ್ನ ಕೃಪೆಗೊಳಗಾದ ಸಂತಗೆ ಸರ್ವಸೃಷ್ಟಿಯೆ ಚಿತ್‌ಕಲೆ,
ಕಂಡುದೆಲ್ಲವು ಚೆಲುವು ಮತ್ತಲ್ಲುಂಡುದೇ ರಸವಲ್ಲವೆ ?

"ಚೆಲುವಿಗೆ"
(ಕಾರ್ತೀಕ)

ದೃಷ್ಟಿ ಕಂಡ 'ಚೆಲುವ'ನ್ನ ನುಡಿಯೂ 'ಚೆಲುವಾಗಿ' ಮಿಡಿದಿದೆ; ಸಲಿಲವಾಗಿ ಹರಿಸಿದೆ. ಸೌಂದರ್ಯದ ಇಂಥ ಉಪಾಸಕನಿಗೆ ಎಲ್ಲೆಲ್ಲಿಯೂ ಒಂದೊಂದು ಚೆಲುವಿನ ಪುಟ ತೆರೆದೇ ಇರುತ್ತದೆ. 'ಬೆಳ್ಳಕ್ಕಿಗಳ ಕಣ್ಣೊಳಗೆ' ಬರೆದಿರುವ ಗೀತೆಯನ್ನೆಲ್ಲ ಅವನು ಓದಬಲ್ಲ, ಹಾಡಬಲ್ಲ.

ಋತು ಋತುವಿನಲ್ಲಿಯೂ ತನ್ನದೇ ಆದ ಲಾಲಿತ್ಯದೊಂದಿಗೆ, ಭೀಕರತೆಯೊಂದಿಗೆ, ಪ್ರಸನ್ನತೆಯೊಂದಿಗೆ, ನೂರಾರು ವೇಷಗಳಲ್ಲಿ ರಂಜಿಸಿ ಮೆರೆಯುವ ಸೌಂದರ್ಯಶ್ರೀಗೆ ನಮ್ಮಂತೆಯೇ ಬಾಲ್ಯಯೌವನಗಳುಂಟು. ದುಃಖ ಸಂತೋಷಗಳುಂಟು ಎಂಬುದನ್ನು ಕವಿಯ ಕಲ್ಪನೆ ಕಂಡಿದೆ. ಅವಳ ಒಂದೊಂದು ಸ್ಥಿತಿಯನ್ನೂ ಇನಿದಾಗಿ ಬಿಡಿಸಿ ತೋರಿಸಿದೆ, 'ಶಾರದೆ' ಎಂಬ ಕವನದಲ್ಲಿ :

ಮಾಗಿ ಮಂಜಿನ ಹಾಲತೊಟ್ಟಿಲಲಿ ಕಣ್ ತೆರೆದು
ಬೆಳೆದ ಚೆಲುವೆ ;
ಚೈತ್ರಮಾಸದ ಹೂವುಗಳ ತೇರಿನಲಿ
ಇವಳ ಮೆರವಣಿಗೆ !
ರಂಗು ರಂಗಿನ ಪಟ್ಟೆಸೀರೆಯನುಟ್ಟು
ದಿಕ್ಕೆಲ್ಲವನು ದಂಗುಬಡಿಸಿದ ಪ್ರಮದೆ
ಲಕ್ಷಪಕ್ಷಿಗಳ ಕೊರಳಿನುಯ್ಯಾಲೆಯಲಿ
ಜೋಕಾಲಿಯಾಡಿದ ಮುಗುದೆ

ಪಕ್ಷಿಗಳ ಕೂಜನದಲ್ಲಿ, ಮಾಗಿಯ ಮಂಜಿನಲ್ಲಿ ಬೆಳೆದ ಈ ಮುಗುದೆ ಯೌವನದಲ್ಲಿ ಕಾಲಿರಿಸಿದಾಗ ಅವಳಿಗೆ ಅದೇನು ಸಡಗರ ! ಅದೇನು ಉತ್ಸಾಹ ! ಅದೇನು ಓಡಾಟ ! ಅದೇನು ಜೋರು !

ಆಗಾಗ, ಮುಗಿಲ ದಂಡೆಯ ಮೊಗೆದು ಸಾಗಿತ್ತು
ಇವಳ ಅಭ್ಯಂಜನ
ಗುಡುಗು ಮಿಂಚಿನ ತೊಡವು ; ಕಡಲಕನ್ನಡಿಯಲ್ಲಿ
ತಿಲಕತಿದ್ದುವ ಬಯಕೆ ;
ಮಾತೆತ್ತಿದರೆ ಬಿರುಗಾಳಿಯುಸಿರು ;
ಕಣ್ಣೆತ್ತಿ ನಿಂತು ಮಾತನಾಡಿಸಲಹುದೆ
ಇವಳನ್ನು ಯಾರಾದರೂ !

ಹೊಚ್ಚಹೊಸ ಯೌವನದಲ್ಲಿ ಕಾಲಿಟ್ಟ ಆ ಋತುರೂಪಿಣಿಯ ನಡೆನುಡಿಯಲ್ಲಿ ಅದೇನು ದರ್ಪ ! ಅದೇನು ಆರ್ಭಟ ! ಆದರೆ 'ಮಾವುಬೇವುಗಳ ತೇರೇರಿ ಗಂಡನ ಮನೆಗೆ ಬಂದಾ

ನೋಲೆ' ಅದೆಲ್ಲ ಎಲ್ಲೋ ಓಡಿಹೋಗುತ್ತದೆ. 'ಮುಖಕ್ಕೆ ಸದಾ ಮಳೆಯ ನೂಲಿನ ಮುಸುಕು' ಬಹು ಸಾವಧಾನ, ಗೌರಿಯ ಗಾಂಭೀರ್ಯ ಇಂತಿಷ್ಟೆ ಅವಳಲ್ಲಿ! ಮುಂದೆ ಗೃಹಕೃತ್ಯದ ಭಾರದಿಂದಾಗಿಯೊ ಏನೊ 'ಈ ನಡುವೆ ಕೆಲವುದಿನ ಮೊಗದಲ್ಲಿ ನಗೆಯಿಲ್ಲ; ನೀರವ ನಿರುತ್ಸಾಹ; ತಲೆತುಂಬಾ ಮೋಡದ ತುಮುಲ, ಅರ್ಥವಿಲ್ಲದ ಕವಿತೆ; ಕಾಲಿಟ್ಟಲ್ಲಿ ಕೆಸರು, ಏನೆಂದು ಕೇಳಿದರೆ ತಣ್ಣನೆಯ ನಿಟ್ಟುಸಿರು.' ಈ ಮ್ಲಾನಮುಖ, ಈ ಬೇಸರ, ಈ ನಿರಾಶೆ ಎಲ್ಲ 'ಶ್ರಾವಣ' ಬಂದೊಡನೆ ಮಂಗಮಾಯವಾಗಿ ಹೋಗುತ್ತದೆ! ಆಗ 'ಇವಳು ಉಸಿರಾಡಿದರೆ ಹಸುರು, ಮಾತಾಡಿದರೆ ಜುಳುಜುಳು; ಹೆಜ್ಜೆ ಇಟ್ಟರೆ ಹೂವು; ತುರುಬಿನ ತುಂಬ ಮಲ್ಲಿಗೆ ಮೋಡ!'

ಆಗ ಗುಡುಗು ಮಿಂಚಿನ ರೂಪದಿಂದ ಆರ್ಭಟಿಸಿದ್ದೇನು? ಮುಸುಕು ಹೊದ್ದು ಮಂಕಾಗಿದ್ದುದೇನು? ಈಗ ನಗುನಗುತ್ತ ಕಳಕಳಿಸಿ ಬೆಳಗುವುದೇನು? ಕ್ಷಣಕ್ಕೊಂದು ರೂಪ, ಕ್ಷಣಕ್ಕೊಂದು ಹೆಸರು. 'ಅಂದೊಮ್ಮೆ ಕಾಳಿ; ಆ ಅನಂತರ ಗೌರಿ: ಈಗಿವಳು ಶಾರದೆ.' ಎಲ್ಲಕ್ಕಿಂತ ತಾಯಾಗಿ ನಲಿಯುವ ಶಾರದೆಯ ರೂಪವೆ ಬಹುಚೆನ್ನ

“........ಮನವೆಲ್ಲ
ಥಳಥಳ ನೀಲಿ; ಆದರ ತುಂಬಾ ಕೈಲಾಸಗಳ ಕನಸು.
ಹೊಲಗದ್ದೆಯಲಿ ನಿಂತ ತೆನೆಯ ತುಟಿಗಳಿಗಿವಳು
ಮುತ್ತಿಟ್ಟು ಹಾಲೂಡಿಸುವಳು; ಎತ್ತಿ ಆಡಿಸುವಳು
ಈಗಿವಳು ಶಾರದೆ–ಸದಾ ಶಾಂತೆ, ಶುಚಿಸ್ಮಿತೆ;
ಗಂಭೀರೆ, ತೇಜೋನ್ವಿತೆ, ಕ್ರೌಂಚಕ್ವಣಿತೆ;
ನವೋಸ್ತುತೆ—”

ಶಾಂತವಾದ, ಶುಭ್ರವಾದ ಶರದ್ಋತುವಿನ ಈ ವರ್ಣನೆ ಆ ಋತುವಿನಂತೆಯೇ ರಮ್ಯವಾಗಿದೆ, ಶುಭ್ರವಾಗಿದೆ. ಪ್ರಕೃತಿಯ ರೀತಿನೀತಿಗಳನ್ನು ಒಂದು ಹೆಣ್ಣಿನ ರೀತಿ ನೀತಿಗಳಿಗೆ ಹೋಲಿಸಿ ಸ್ತ್ರೀಜೀವನದ ಚೆಲುವನ್ನ ಅಲ್ಲಿಯೂ ಕಂಡಿರುವ ಕವಿ ಕಲ್ಪನೆ ಆದರಣೀಯವಾದುದು.

'ಶಾರದೆ'ಯಂತೆ 'ಅರುಣೆ'ಯೂ ಕವಿಹೃದಯವನ್ನು ಸೆರೆಹಿಡಿದಿದ್ದಾಳೆ. ಎಂಥವರನ್ನೂ ತನ್ನ ಬಣ್ಣ ಬಣ್ಣದ ಬೆಳಕಿನೋಕುಳಿಯಿಂದ ಸೆರೆಹಿಡಿಯುವ ಅವಳು ಇಂಥವರನ್ನು ಬಿಡುತ್ತಾಳೆಯೇ? ಆ ಹೊತ್ತಿನಲ್ಲಿ ಪೂರ್ವದಿಶೆಯಲ್ಲಿ, ಮೋಡದೊಡಲಿನಲ್ಲಿ ಅದೆಷ್ಟು ರೀತಿಯ ಚೆಲುವು ಸಾಲುಗಟ್ಟಿರುತ್ತದೆ; ಹಕ್ಕಿಪಕ್ಷಿಗಳು ಮನೆಮಾಡಿಕೊಂಡಿರುವ ಮರ, ಗಿಡಗಳಲ್ಲಿ ಅದೇನು ಕಲಕಲ ನಿನಾದದ ಸುಗ್ಗಿ ಹಬ್ಬಿರುತ್ತದೆ!

“ಹಕ್ಕಿ ಚಿಲಿಪಿಲಿ ದನಿಗೆ ಮರಮರದ ಎದೆಯಾಯ್ತು
ಭಾವಪೂರಿತ ಕವಿಮನಸಿನಂದ।
ನೂರು ಬೆಳಕಿನ ಹೆಜ್ಜೆ ಹಕ್ಕಿಗೊರಲಿನ ಗೆಜ್ಜೆ
ಯನು ಕಾಲ್ಗೆ ಕಟ್ಟಿ
ಹೂ ಹೂವಿನಂಗಡಿಯ ಕೆಂಪುಮಳಿಗೆಯ ತಟ್ಟಿ

ಸಂಚಾರ ಹೊರಟವೋ ಕೈಕೈಯೊಳೂ ಹಿಡಿದು
ಚೆಲುವುಗಳ ಬುಟ್ಟಿ"

"ಒಂದು ಬೆಳಗು"
(ದೇವಶಿಲ್ಪ)

ಗಾಳಿಕೊಳದಲ್ಲಿ ತನ್ನ ರೆಕ್ಕೆವುಟ್ಟಿನ ಸುಯ್ಲಿನಿಂದ ತೆರೆಯನೇಳಿಸುತ್ತ ಸಾಗಿರುವ ಹಕ್ಕಿ ದೋಣಿಯಲ್ಲಿ ಕುಳಿತ ಕವಿಗೆ ತರುಮರಗಳ ತಳಿರಕ್ಕೈಯಲ್ಲಿ ಎಲ್ಲೆಲ್ಲಿ ನೋಡಿದರೂ ನೂರು ಹೂವಿನ ದೀಪವೆ! ಆ ಹೂ ಬೆಳಕಿನಲ್ಲಿ ಕಂಡ ಚೈತ್ರದ ಚಿತ್ತಾರ ಕವಿಯ ಮನವನ್ನು ಬೆರಗಿನಿಂದ ತುಂಬಿದೆ. 'ಯಾವ ಚೆಲುವಿನ ಹುಚ್ಚು ಈ ತೆರೆಮರದ ಮೈಯಲಿ ಕೆರಳಿದೆ, ಯಾವ ಅಶ್ರುತ ವರ್ಣಗಾನವನಿಂತು ತರುಗಳು ಮಿಡಿದಿವೆ!

"ಹೂವ ಬಿಟ್ಟಿವೆ, ಸೂಸ ತೊಟ್ಟಿವೆ, ಹೂಸನುಟ್ಟಿವೆ ಮರಗಳು!
ಚೈತ್ರಜಾತ್ರೆಗೆ ಬಂದು ನಿಂತವೊ ನೂರು ಚೆಲುವಿನ ರಥಗಳು!
..................................................................
ಸೃಷ್ಟಿಬರೆಯುವ ಚೈತ್ರಕಾವ್ಯದ ಮಧುಪವಾದದ ಕಥೆಗಳು!

"ಚೈತ್ರ"
(ದೇವಶಿಲ್ಪ)

ಈ ಕಥೆಗಳನ್ನೋದುತ್ತೋದುತ್ತ ನಡೆದಿದ್ದ ಕವಿಯನ್ನು ಅಲ್ಲೆ ಗಿಡವೊಂದರಲ್ಲಿ ಹಸಿರು ಎಲೆಗಳ ನಡುವೆ ತನ್ನ ಏಳುದಳಗಳನ್ನೂ ಅರಳಿಸಿ ನಗುನಗುತ್ತ ನಿಂತ ಮಲ್ಲಿಗೆ ಹೂ ತಟಕ್ಕನೆ ಹಿಡಿದು ನಿಲ್ಲಿಸಿದೆ

"ನೋಡು ಇದೊ ಇಲ್ಲರಳಿ ನಗುತಿದೆ
ಏಳುಸುತ್ತಿನ ಮಲ್ಲಿಗೆ
ಇಷ್ಟು ಹಚ್ಚನೆ ಹಸುರಗಿಡದಿಂದೆತ್ತ ಮೂಡಿತೊ ಬೆಳ್ಳಗೆ!"

"ಮಲ್ಲಿಗೆ"
(ಚೆಲುವು-ಒಲವು)

ಮಲ್ಲಿಗೆಯಂತೆಯೇ ಏಳು ದಳಗಳನ್ನರಳಿಸಿ ನಿಂತ ಈ ಕವಿತೆಯಲ್ಲಿ ಮೊದಲ ದಳದಲ್ಲಿ ಹೂವಿನ ಎಲ್ಲ ಕಂಪೂ ಸೆರೆಗೊಂಡುಬಿಟ್ಟಿದೆ. ಕವಿಯ ಹಚ್ಚಹಸಿರಾದ ಭಾವದಿಂದ ಹುಟ್ಟಿದ ಈ ಮಲ್ಲಿಗೆ ಸಾಲು ಬೇಗ ಬಾಡುವಂಥದಲ್ಲ; ಸದಾ ನಿಲ್ಲುವಂಥದು.

'ಮಲ್ಲಿಗೆ'ಗಿಂತ 'ಹೂಬಳ್ಳಿ' ಮೊದಲಿನಿಂದ ಕೊನೆಯವರೆಗೆ ಚಿಗುರು ಚಿಗುರಾಗಿ ಮನದ ಹಂದರದ ಮೇಲೆ ಬಳುಕಿ ಹರಹಿಕೊಳ್ಳುವ ರಮ್ಯಕವನವಾಗಿದೆ.

'ಪ್ರಕೃತಿಯ ಸುಂದರ ಹಂದರದಲ್ಲಿ' ವಧುವಾಗಿರುವ ಈ ಚೆಲುವೆ ಸದ್ದುಗದ್ದಲವಿಲ್ಲದ ಸೌಮ್ಯೆ.

"ಹಕ್ಕಿಯ ಇನಿದನಿಯುಂಡವಳಿವಳು
ಸಗ್ಗದ ಕಂಬನಿ ಕುಡಿದವಳು

ಹೂಗಿರಣದ ಮೃದುಚುಂಬನದಲ್ಲಿ
ತುಟಿಯನು ಅರಳಿಸಲರಿತವಳು.

ಮೃದುಗಾಳಿಯ ಮರ್ಮರ ನಾದದಲಿ
ಬಳುಕುತ ಲಾಸ್ಯವನಾಡುವಳು.
ದೂರದ ದುಂಬಿಯ ಗುಂಜಾರವವನು
ಮೆಲ್ಲನೆ ತನ್ನೆಡೆ ಸೆಳೆದವಳು."

ಹೊಸಮಳೆಯಲ್ಲಿ ಮಿಂದು ತನ್ನ ಸ್ವರ್ಗೀಯ ಸೌಂದರ್ಯದಿಂದ ಕಾಮನಬಿಲ್ಲಿನ ಮನಸೆಳೆದ ಈಕೆ ಯಾರು ?

"ಈಕೆಯ ಹೆಸರನು ಕೇಳುವೆ ಏನು ?
ಇಂತಹ ಚೆಲುವೆಗೆ ಹೆಸರೂ ಊನ !
ಚೆಲುವಿಗೆ ಚೆಲುವೆನ್ನದೆ ಮತ್ತೇನು ?
ಮೌನದೊಳೊಲಿವುದೆ ಸನ್ಮಾನ !"

"ಹೂಬಳ್ಳಿ"
(ಚೆಲುವು-ಒಲವು)

ಕವಿಯ ರೀತಿಯೇ ಹೀಗೆ. ಚೆಲುವನ್ನು ಕಂಡಾಗ ಮೌನದಿಂದ ಒಲಿದು ನಿಷ್ಕಲ್ಮಷ ಭಾವದಿಂದ ಅದನ್ನು ಸನ್ಮಾನಿಸುತ್ತಾನೆ. ಅದರಲ್ಲಿಯೇ ಅವನಿಗೆ ಏನೋ ಒಂದು ತೃಪ್ತಿ, ಸಂತೋಷ, ಸುಖ. ಅದರ ಕುಲಗೋತ್ರಗಳ ಗೊಡವೆ ಆತನಿಗೆ ಬೇಕಾಗುವುದಿಲ್ಲ.

ಅರಳಿದ ಹೂ, ಚಿಗುರಿದ ಬಳ್ಳಿ ಇವುಗಳೆಲ್ಲದರ ಚೆಲುವಿನೊಡನೆ, ನಲವಿನೊಡನೆ ಒಂದಾಗಿ ಕವಿ ಹೇಗೆ ಮೈಮರೆಯಬಲ್ಲನೋ ಹಾಗೆಯೇ ಅದರ ದೀನತೆಯನ್ನು ಕಂಡು ಕನಿಕರಿಸಬಲ್ಲ. ಸಾವಿನ ಮಡಿಲಲ್ಲಿಯೂ ನಗುನಗುತ್ತ ನಿಲ್ಲುವ ಅದರ ಇರವನ್ನು ಆದರಿಸ ಬಲ್ಲ. ಅವನ ಈ ಪ್ರಕೃತಿಗೆ 'ಹೂವು' ಎನ್ನುವ ಕವನವೇ ಸಾಕ್ಷಿ ಹೇಳುತ್ತದೆ.

ಮರದಲ್ಲಿ ಕೆಲವೇ ಕ್ಷಣಗಳ ಹಿಂದೆ ತೂಗುತ್ತ ನಲಿದಿದ್ದ ಹೂವೊಂದು ತೊಟ್ಟು ಕಳಚಿ ಕೆಳಕ್ಕುದುರಿದೆ. ಮುದ್ದಾದ ಆ ಪುಟ್ಟ ಬಿಳಿಯ ಹೂವು ಜನ ತುಳಿಯುವ ಸ್ಥಳ ದಲ್ಲಿ ಬಿದ್ದಿದ್ದರೂ ಕಿಂಚಿತ್ತೂ ಹೆದರದೆ ಮರದಲ್ಲಿ ಇದ್ದಾಗ ಹೇಗಿತ್ತೋ ಹಾಗೆಯೇ ಇಲ್ಲಿಯೂ ಇದ್ದುಬಿಟ್ಟಿದೆ :

"ಇರುಳತಾರೆಯ ಕಿಡಿಯು
ಇಳೆಗುರುಳಿ ಬಿದ್ದಂತೆ
ಶ್ರಾವಣದ ಬೆಳ್ಮುಗಿಲ
ಕಿರಿದಾದ ತುಣುಕಂತೆ
ಶೈಶವದ ಮುಗ್ಧತೆಯೆ
ಹೂವಾಗಿ ಇಳಿದಂತೆ
ನಗುತಲಿದೆ ಹೂವು
ಇನಿತಿಲ್ಲ ನೋವು !

ಇನ್ನೊಂದು ಚಣದಲ್ಲಿ
ಜನ ನಡೆವ ಬಳಿಯಲ್ಲಿ
ಪಾದಘಾತಕೆ ಸಿಕ್ಕಿ
ಮಣ್ಣ ಹುಡಿಯನು ಮುಕ್ಕಿ
ಹುಡಿಯಾಗಲಿಹುದು
ಆದರೂ ಲೆಕ್ಕಿಸದೆ
ಸಾವಿಂಗೆ ಶೋಕಿಸದೆ
ಎಳೆನಗೆಯ ಬೀರುತ್ತ
ಮೋನವಿಹುದು
ಅಳುತ ಸತ್ತರೆ ನರಕ
ನಗುತ ಸತ್ತರೆ ನಾಕ
ಅಳುವು ನಗು ಕೂಡಿದರೆ
ಅದೆ ಮರ್ತ್ಯಲೋಕ
ಎಂಬ ತತ್ವವನೊರೆವ ಸಿದ್ಧನಂತೆ
ಕಳಕಳಿಸುತಿದೆ ಹೂವು ಮುನ್ನಿನಂತೆ"

"ಹೂವು"
(ಸಾಮಗಾನ)

ಸಾವಿನ ಸೆರೆಯಲ್ಲಿದ್ದರೂ ಕಳಕಳಿಸಿ ನಗುತ್ತಿರುವ ಹೂವಿನ ಮೃದುಹೃದಯವನ್ನ, ನಿಶ್ಚಿಂತ ನಿಶ್ಚಲತೆಯನ್ನ ಕವಿಯ ಸೂಕ್ಷ್ಮವಾದ ಮನಸ್ಸು ಚೆನ್ನಾಗಿ ಅರ್ಥಮಾಡಿಕೊಂಡಿದೆ. ಅಷ್ಟಲ್ಲದೆ ಆ ಮುದ್ದುಹೂವಿನ ರೀತಿಯ ಒಳಗಿರುವ ನೀತಿಯನ್ನು ಅವಲೋಕಿಸಿ ಆದರಿಸಿದೆ, ಅಚ್ಚರಿಗೊಂಡಿದೆ. ಅದರ ವ್ಯಕ್ತಿತ್ವವನ್ನು ಉಚಿತವಾದ ರೀತಿಯಲ್ಲಿ ಹಿಡಿದಿಟ್ಟಿದೆ.

ಹಕ್ಕಿಯೊಡನೆ ಹಾರಲಾಶಿಸುನಂತೆ, ಹೂವು ಬಳ್ಳಿಗಳೊಡನೆ ನಲಿಯಬಯಸುವಂತೆ, ಹರಿವ ನದಿಯೊಡನೆ ನೀರಹನಿಯಾಗಿ ಕಡಲಸೇರುವ ಇಚ್ಛೆ ಕವಿಯಲ್ಲಿ ಮೂಡಿದೆ. ಆದರೆ ಅದು ಅಷ್ಟು ಸುಲಭವಾಗಿ ನೆರವೇರುವಂಥದಲ್ಲ. ತನ್ನ ಈ ಆಸೆ ಕನಸಾಗಿಯೇ ಉಳಿದಾಗ ಕವಿ ನಿರ್ವಾಹವಿಲ್ಲದೆ ನದಿಯೊಂದಿಗೆ ತಮ್ಮ ಆಕಾಂಕ್ಷೆಯನ್ನು ಬಿನ್ನವಿಸಿಕೊಂಡಿದ್ದಾರೆ. ಕಲಕಲ ನಿನಾದದಿಂದ ಕಸಕಡ್ಡಿಗಳನ್ನೆಲ್ಲ ಹಿರಿದು ಕಿರಿದೆನ್ನದೆ ಹೊತ್ತು ಹರಿದಿರುವ ಹೊನಲಿನೊಡನೆ ಪ್ರಾರ್ಥಿಸಿಕೊಂಡಿದ್ದಾರೆ.

"ಓ ಹೊನಲರಾಜ
ಒಯ್ದು ಮುಟ್ಟಿಸು ನನ್ನ ಎದೆಯ ಹಂಬಲವನು, ಆ
ಮೊರೆಮೊರೆವ ಮುನ್ನೀರಿಗೆ
ನಾಲ್ಕು ಹನಿ ನೀರಾಗಿರುತಿದ್ದನೇ ನಾನು
ಸಂಗಮಿಸಿ ಬರುತಿದ್ದೆ ನಿನ್ನ ಜೊತೆಗೆ,
ನಾವು ಮನುಜರು ನೋಡು
ನೂರು ಕನಸನು ತುಂಬಿ ಸುಯ್ಯುವುದೆಮ್ಮಯ ಪಾಡು"

"ಸಂಗಮ"
(ಚೆಲುವು-ಒಲವು)

ನದಿ ನೂರು ಕನಸನ್ನು ಕವಿಯ ಎದೆಯಲ್ಲಿ ಹೊಮ್ಮಿಸಿದ್ದರೆ ಸುರಿವ ಮಳೆ ಹರ್ಷವನ್ನ ತುಂಬಿದೆ. ಗುಡುಗಿನ ಮೃದಂಗದೊಂದಿಗೆ ಮಿಂಚಿನಾರತಿಯೊಂದಿಗೆ ಸಡಗರದಿಂದ ಇಳೆಗಿಳಿದು ಬರುವ ಆ ಆಕಾಶದ ಅತಿಥಿ ಹೂ ಮಳೆಯಾಗಿ ಹಸುರಿನ ಮೇಲೆ ಉದುರಿದಾಗ ಕಾಮನಬಿಲ್ಲಿನ ಮರಿಗಳಾಗಿ ಕವಿಯ ಕಣ್ಣಿಗೆ ಹಬ್ಬವನ್ನುಂಟುಮಾಡಿದೆ :

"ಸಿರಿ ಹಸಿರು ಬಯಲಲ್ಲಿ
ಸೊದೆ ಸುರಿಯುವಂತೆ
ಮೆಲ್ಲನವತರಿಸುತಿದೆ
ಜಲಕಣದ ಸಂತೆ !
ಗಗನಮನದ ಶುಭ್ರ ಚಿಂತೆ
ಸುರಿವ ಜಲದ ಅಲರಿನಂತೆ
ಹನಿ ಹನಿ ಹನಿಯಾಗಿದೆ !
ಹಚ್ಚ ಹಸಿರ ತಲೆಯಮೇಲೆ
ಮಳೆಯಬಿಲ್ಲ ಮರಿಯಪೋಲೆ
ಮಿರು ಮಿರು ಮಿರು ಮಿರುಗಿದೆ !

"ಹೂಮಳೆ"
(ಸಾಮಗಾನ)

ಮಳೆಯ ತುಂತುರು ಹನಿಯಂತೆ, ಇರೆಯನ್ನಾವರಿಸಿ ನಿಲ್ಲುವ ಹಿರಿಮಂಜೂ ಸೌಂದರ್ಯದ ಪರಿಶುಭ್ರವಾದ ನೆಲೆ. ಮರ ಗಿಡಗಳಲ್ಲಿ, ಹಸಿರು ಬಯಲಿನಲ್ಲಿ ಬೆಟ್ಟಗುಡ್ಡಗಳಲ್ಲಿ ಆದರಿಸಿ ನಿಂತು ಭೂವ್ಯೋಮದ ಅಂತರವನ್ನೇ ಅಳಿಸುವ ಬಿಳಿಮಂಜು ಎಷ್ಟು ಸ್ವಚ್ಛ ! ಎಷ್ಟು ಶೀತಲ !

ಸುರಲೋಕದ ಅಮೃತರಸ
ಬುವಿ ಜಡತೆಯನೆಲ್ಲ
ತೊಳೆತೊಳೆಯುತ ಕಣ್ ಬಿಡಿಸಲು
ಅವತರಿಸಿತ್ತೋ
ಮೇಣ್ ಗಗನವೆ ಮಂಜಾಗುತ
ಕುಣಿಯುತ ಬಿತ್ತೋ

* * *

ಹೊಸಬಾಳಿನ ಹೊಸನುಗುಳಿನ
ಹಳೆಕೊಳೆಯನು ತೊಳೆದು
ಚೆಲುವಾಗಿಸಿ ಕಣ್‌ಬಿಡಿಸಲು
ಗಗನಾವೃತ ಬಿಂದು
ಇಳೆಗಿಳಿಯುತ ಮರಗಿಡಗಳ
ಕರತಲದಲಿ ನಿಂದು
ತರುನಾರಿಯ ಕರತಲದಾ
ಮಣಿ ಸೇಸೆಗಳಂತೆ

ತೊಟ್ಟುಕ್ಕಿದೆ ತಿರೆವೆಣ್ಣಿಗೆ
ಸಂಸೇಚನೆಯಂತೆ
ನವ ಉದಯಕೆ ವ್ರತಿಯಾಗಿಹ
ಈ ಸೃಷ್ಟಿಯ ತಪಕೆ
ವೈಗಾವತೆರೆಯಾಗಿದೆ
ಈ ಮಂಜಿನ ಹೊದಿಕೆ"

"ಮಂಜಿನಲೀಲೆ"
(ಚೆಲುವು-ಒಲವು)

ಈ ಕವನವನ್ನು ಓದುವಾಗ ಬಿಳಿಮಂಜಿನಂಥ ಇದರ ಶುಭ್ರವಾದ, ಚೆಲುವಾದ ಭಾವಕ್ಕೆ ಸೋತು ನಾವು ಮಂಜಿನಂತೆಯೇ ಕರಗಿಹೋಗುತ್ತೇವೆ.

ಮುಂಜಾವಿನ ತುಹಿನದಿಂದ ಆವೃತವಾದ ಈ ಪೃಥ್ವಿ ಮುಂದಿನ ನವಸೃಷ್ಟಿಗೆ ಧ್ಯಾನದೀಕ್ಷೆಯನ್ನು ಹೊತ್ತ ತಪಸ್ವಿನಿಯಾಗಿ ಕಂಡಿರುವಂತೆ, ಸೂರ್ಯಾಸ್ತವೂ ವಿಶೇಷ ವಾಗಿ ಕಂಡಿದೆ :

"ಹಗಲ ಬೆಳಕಿನ ಗಡಿಗೆ-
ಯೊಡೆದು ಚೂರಾಯಿತದೊ
ಪಶ್ಚಿಮಾದ್ರಿಯ ಶಿಖರದರೆಯೊಂದರಲ್ಲಿ !
ಗಡಿಗೆಯಲ್ಲಿದ್ದ ರಸ ದಿಕ್ಕುದಿಕ್ಕಿಗೆ ಹರಿದು
ಮೋಡಗಳಿಗೂ ಸಿಡಿದು
ಅಲ್ಲಲ್ಲೆ ಇಂಗುತಿದೆ ಮೌನದಲ್ಲಿ
ಬಾನ್ನೀರೆ ಬೆಪ್ಪಾಗಿ ನಿಂತಿರುವಳಲ್ಲಿ !
ಅಯ್ಯೊ ಏನಪಘಾತ !
ಎಂದು ಕಂದಿಕುಂದಿದ ಮೋರೆಯಲ್ಲಿ ಜಗ-
ವತ್ತ ನೋಡಿತು ಆಗ ದುಗುಡದಲ್ಲಿ
. . . . . . . . . . .
. . . . . . . . . . .
ಸುದ್ದಿ ತಿಳಿದೊಡನೆಯೇ ವಾಯುದೇವನು ನಡೆದ
ವಾರ್ತೆ ಹಬ್ಬಿತು ಜಗಕೆ ನಿಮಿಷದಲ್ಲಿ"

"ಭಗ್ನ ಮಂದಿರ ಮೌನ ಇಳೆಯನಾವರಿಸಿತ್ತು, ಹಗಲ ಬೆಳಕಿನ ಚೂರು ನರಳಿ ಕರಗುತ ಲಿತ್ತು, ಮೌನಭೂತದ ತೆಕ್ಕೆಯಲಿ ಸಿಕ್ಕು ಜಗದ ಉಸಿರಡಗಿತ್ತು, ನೂರು ಜೀರುಂಡೆ ಗಳು ಹುಯ್ಯಲಿಟ್ಟವು ಕಿವಿಯ ಕೊರೆಯುವಂತೆ !"

"ಮುಗಿಲ ಕಾಳ್ಗೊಗದಲ್ಲಿ ಚಿಕ್ಕೆಗಳು ಮಿನುಗಿದವು
ಚಿಂತೆಗಳೆ ಕಣ್ತೆರೆದು ನೋಡುವಂತೆ ;
ಅಲ್ಲಲ್ಲ, ಹಗಲ ಗೋರಿಯ ಮೇಲೆ ಹಚ್ಚಿಟ್ಟ ದೀಪದಂತೆ !"

"ಸಂಜೆ"
(ಚೆಲುವು-ಒಲವು)

ಎಂಥ ಎದೆತಾಗುವಂತಹ ಉಪಮಾನ ಇದು! ಇಡೀ ಕವನವೇ ತನ್ನ ನವ್ಯತೆಯಿಂದ ಮನಸೆಳೆಯುವುದಾದರೂ ಕೊನೆಯ ಸಾಲು ಮಾತ್ರ ತನ್ನ ಅತಿ ಅಪರೂಪ ಉಪಮಾನ ದಿಂದ ಥಟ್ಟನೆ ಮನಸ್ಸನ್ನು ತಡೆಹಿಡಿಯುತ್ತದೆ. ಅರ್ಥವಿಲ್ಲದ, ಸಾರವಿಲ್ಲದ ನೀರಸವಾದ ಕೆಲವು ಸಿಕ್ಕುತೊಡಕಿನ ಸಾಂಪ್ರದಾಯಿಕವಾದ ವರ್ಣನೆಯ ಗೋರಿಯ ಮೇಲೆ ಹಚ್ಚಿಟ್ಟ ಈ ಕ್ರಾಂತಿದೀಪ ಆರದೆ ಬಹುಕಾಲ ಉರಿಯುವಂತಹುದು.

ಹಗಲ ಬೆಳಕಿನ ಗಡಿಗೆಯನ್ನು ಬಾನ್ನೀರೆ ಕೈಜಾರಿ ಒಡೆದು ಹಾಕಿದ ಮೇಲೆ ಪೃಥ್ವಿ ಯನ್ನು ಬೆಳಗುವುದಕ್ಕೆ ಪೂರ್ಣಚಂದಿರನ ಉದಯವಾಗುತ್ತದೆ. ಕತ್ತಲಿನ ಚಿಂತೆಯಲ್ಲಿ ಅದುವರೆಗೂ ಉಸಿರು ಕಟ್ಟಿದಂತಾಗಿದ್ದ ಜಗತ್ತು ಕಣ್ದೆರೆಯುತ್ತದೆ, ಹಾಯಾಗಿ ಉಸಿರಾಡುತ್ತದೆ. ಕಗ್ಗತ್ತಲಿನ ಮುಸುಕು ಜಾರಿದುದನ್ನು ಕಂಡು ಕವಿಗೂ ಹರ್ಷ ಉಕ್ಕಿಬಂದಿದೆ. ತನ್ನ ಕೃಪಾಕಾಂತಿಯಿಂದ ಸೃಷ್ಟಿಯನ್ನೆಲ್ಲ ತುಂಬಿರುವ ಬೆಳ್ದಿಂಗಳು "ಇರುಳತಾಯಿಯ ಕೊರಳ ಮಾಂಗಲ್ಯದಿಂದಿಳಿದ" ಹೊಳಹಾಗಿ ಕವಿದೃಷ್ಟಿಗೆ ಕಂಡಿದೆ:

"ತಾರೆಯೂರ ನಾಕದಿಂದ
ಮರ್ತ್ಯದೂರ ಮನೆಯ ಮೇಲೆ
ಅಮೃತಭವ್ಯ ಹರಕೆಯಂತೆ
ಹರಿದುಬಂದಿದೆ
ವ್ಯೋಮ ತಪೋರೂಪದಂತೆ
ಹರಹಿ ನಿಂದಿದೆ
ಸಗ್ಗದಿಂದ ಇಳಿದ ಹಾಲು
ಮರದ ಪರ್ಣಪರ್ಣದಲ್ಲಿ
ಹೊಕ್ಕು ಇಳಿದು ಕೆಳಗೆ ಜಿನುಗಿ
ಹರಿದುಹೋಗಿದೆ.
ಸುತ್ತಮುತ್ತ ಮೇಲೆ ಕೆಳಗೆ
ಬುವಿಯ ಮಣ್ಣನುಸಿರನೊಳಗೆ
ಮಾನದೆದೆಯ ಮಾನದೊಳಗೆ
ಜೊನ್ನವಿಳಿದಿರೆ
ಜೊನ್ನದಲ್ಲಿ ಮಿಂದ ಊರ
ಮನೆಗಳೆಲ್ಲ ಏನೊ ಒಂದು
ಮಂತ್ರಜಾತ ಲೋಕದೊಂದು
ಸೃಷ್ಟಿಯಂತಿವೆ"

"ಹಾಲುಹೊಳೆ"
(ಸಾಮಗಾನ)

ಇವು ಚೆಲುವನ್ನು ಕುರಿತು ಕವಿ ಹಾಡಿರುವ ಹಲವಾರು ಕವನಗಳಲ್ಲಿ ಕೆಲವು ಕವನ ಗಳು. ಕಂಪಿನಲ್ಲಿ, ಇಂಪಿನಲ್ಲಿ, ಸೊಂಪಿನಲ್ಲಿ ಶ್ರೀಮಂತವಾದ ಎಷ್ಟೋ ಕವನಗಳು ಕವಿಯ ಆ ಹೂದೋಟದಲ್ಲಿ ಅರಳಿನಿಂತಿವೆ. ಅದನ್ನೆಲ್ಲ ಇಲ್ಲಿ ತರಲಾಗುವುದಿಲ್ಲ. ಆದರೆ ಇಲ್ಲಿ

ತಂದ ನಾಲ್ಕಾರು ಭಾವಗೀತೆಗಳು ಚೆಲುವಿನ ಬಗ್ಗೆ ಕವಿಗಿರುವ ಸೊಂಪಾದ ಒಲವನ್ನು ಸಾರಿಹೇಳುತ್ತವೆ; ಸತ್ವಶಾಲಿ ಕವಿ ಎಂಬುದನ್ನರಿಯುವುದಕ್ಕೆ ನೆರವೀಯುತ್ತವೆ.

ಇನ್ನು 'ಒಲವಿ'ನ ಬಗ್ಗೆ ಕವಿಯ ಸೃಷ್ಟಿ-ದೃಷ್ಟಿಗಳೇನೆಂಬುದನ್ನು ಅರಿಯುವುದರ ಕಡೆಗೆ ಗಮನವನ್ನು ಹರಿಸಬೇಕಾಗಿದೆ.

ಚೆಲುವಿಗಿಂತ, ಬೆಳಕಿಗಿಂತ ಹಿರಿದಾಗಿ, ಉನ್ನತವಾಗಿ ದಿಗ್‌ದಿಗಂತ ವ್ಯಾಪಿಯಾದ ಈ 'ಒಲವು' ಎಲ್ಲ ಜೀವರಾಶಿಗಳನ್ನೂ ನಿರಂತರವಾಗಿ ಆಳುತ್ತಿರುವ ಒಂದು ಮಧುರಶಕ್ತಿ. ಮನುಷ್ಯಜೀವನ, ಅದರಲ್ಲಿಯೂ ಕವಿಜೀವನ ಒಲವಿಲ್ಲದೆ ಬಾಳಲಾರದು, ಹಾಡಲಾರದು. ಒಲವಿನ ಏಕನಾದದ ಶ್ರುತಿಯಲ್ಲಿಯೇ ಅವನ ಎಲ್ಲ ಕಾವ್ಯಗೀತಗಳೂ ಝೇಂಕರಿಸಿ ನಿಲ್ಲುತ್ತವೆ.

ಈ ಚಿರಂತನ ಶಕ್ತಿ ಜೀವನದಲ್ಲಿ, ಜನ್ಮವಿತ್ತು ಸಾಕಿಸಲಹುವ ತಾಯಿಯಾಗಿ, ಒಡ ಹುಟ್ಟಿದ ಅಣ್ಣತಮ್ಮಂದಿರಾಗಿ, ಅಕ್ಕತಂಗಿಯರಾಗಿ, ಹೆಗಲಿಗೆ ಹೆಗಲು ಕೊಡುವ ಆಪ್ತ ಗೆಳೆಯನಾಗಿ, ಕೈಹಿಡಿದ ಸತಿಯಾಗಿ, ಮಮತೆಯ ಮಗುವಾಗಿ ಹತ್ತಾರು ರೂಪಗಳಲ್ಲಿ ಜೀವನನದಿಯನ್ನು ಸಂಗಮಿಸುತ್ತವೆ. ನಮ್ಮ ಹೃದಯದಲ್ಲಿ ತುಂಬಿರುವ ಒಲವನ್ನು ತನ್ನ ಕಡೆಗೆ ಸೆಳೆದುಕೊಳ್ಳುತ್ತದೆ.

ಈ ಎಲ್ಲ ರೂಪಗಳಲ್ಲಿ ಶ್ರೇಷ್ಠವಾದುದು, ನಿಸ್ವಾರ್ಥವಾದುದು, ನಿರ್ಮಲವಾದುದು ತಾಯಿಯ 'ಒಲವು.' ಭೂಮಿಗೆ ದೇಹ ಧರಿಸಿ ಬಂದಾಗ ಮೊಟ್ಟಮೊದಲು ನಮ್ಮ ಬಾಳಿನಲ್ಲಿ ಒಂದುಗೂಡುವುದು ಇದೇ ಈ ತಾಯೊಲುಮೆ. ಅವಳ ಮೇರೆಯಲ್ಲಿದ್ದ ವಾತ್ಸಲ್ಯದ ತಣ್ಣೆಳಲಿನಲ್ಲಿ ನಾವು ಕಣ್ದೆರೆದಿರುತ್ತೇವೆ. ನೂರು ಕನಸಿನ ಲೋಕದಲ್ಲಿ ವಿಹರಿಸಿ ನಲಿದಿರುತ್ತೇವೆ. ಈ ತಾಯೊಲುಮೆಗೆ, ಮಾತೃವಾತ್ಸಲ್ಯದ ಮಹಾಗ್ರಂಥಕ್ಕೆ ಇನ್ನೂ ಇದುವರೆಗೂ ಯಾರೂ ವ್ಯಾಖ್ಯಾನವನ್ನು ಬರೆಯುವುದು ಸಾಧ್ಯವಾಗಿಲ್ಲ.

ನಿಶ್ಚಲವಾದ ಈ ನಿಸ್ವಾರ್ಥ ಒಲುಮೆ ಎಲ್ಲರ ಬಾಳಿನಲ್ಲಿಯೂ ಬಹಳಕಾಲದವರೆಗೆ ಹರಹಿಕೊಂಡಿರುತ್ತದೆಯೆ? ಹೇಗೊ ಏನೋ ಎಳವೆಯಲ್ಲಿಯೇ ಇಂಗಿಹೋಗಿರುತ್ತದೆ. ಇಲ್ಲಿನ ಕವಿಜೀವನದಲ್ಲಿ ಆಗಿರುವುದು ಹೀಗೆ.

ತಾನು ಮಗುವಾಗಿದ್ದಾಗ ಸುತ್ತಲಿನ ಸಂಬಂಧಿಗಳು ತಾಯಿಹೋದಳೆಂದು ತಿಳಿಸಿದರೂ ನಂಬಲಾಗುತ್ತಿರಲಿಲ್ಲ. ಪುನಃ ಬಂದೇಬರವಳೆಂಬ ನಂಬಿಕೆ, ಆಸೆ ಇದ್ದೇ ಇರುತ್ತಿತ್ತು. ಇನ್ನು ಹಿಂತಿರುಗಿ ಬರಲಾಗದಂಥ ಊರಿಗೆ ಅವಳು ಹೋಗಿರುವಳೆಂಬುದು ಆ ಮುಗ್ಧ ವಯಸ್ಸಿನಲ್ಲಿ ಹೇಗೆ ಅರ್ಥವಾದೀತು!

"ನೀ ಸತ್ತುಹೋಗಿರುವೆ ಎಂಬುದನು ಕೇಳಿ
ನಾನು ನಂಬಲೆ ಇಲ್ಲ ಎಳವೆಯಲ್ಲಿ
ನೀನೆಲ್ಲೊ ಹೋಗಿರುವೆ
ಮತ್ತೆ ಬಳಿಗೈತರುವೆ
ಎಂಬ ನಂಬುಗೆಯಲ್ಲಿ ಹಲವು ದಿನ ಕಾದೆ

ಕಡೆಗೆ ನಂಬಿದೆ ನಾನು–'ನೀ ತೊರೆದುಹೋದೆ !'
ದಿನದಿನವೂ ಆಗಸದ ಬಯಲನ್ನೆ ನೋಡಿ
ತೇಲುತಿಹ ನಿಶ್ಚಿಂತ ಮೋಡಗಳ ನೋಡಿ
ನೀನಲ್ಲಿ ಮುಗಿಲಾಗಿ
ತೇಲುತ್ತ ಸುಖವಾಗಿ
ಇರಲಹುದು ಎನ್ನುತ್ತ ಊಹಿಸಿದ್ದೆ
ಹಸುಳೆಗನಸಸು ಎದೆಗೆ ತುಂಬುತಿದ್ದೆ.
ರಾತ್ರಿಯಾಕಾಶದಲಿ ತಾರೆಗಳ ಮೇಳ
ಮೌನದಲಿ ಆಲಿಸಿತು ನನ್ನೆದೆಯ ಗೋಳ
ನಿನ್ನ ಕಣ್ಣುಗಳಂತೆ
ಆ ಚಿಕ್ಕೆಗಳ ಸಂತೆ
ಮಿಣು ಮಿಣುಕಿ ನನ್ನೆದೆಗೆ ಶಾಂತಿಯನ್ನಿತ್ತು
ಅವ್ಯಕ್ತ ಗೀತೆಯಲಿ ಸಂತೈಸುತಿತ್ತು."

ಆ ಪುಟ್ಟ ಹೃದಯದಲ್ಲಿನ ಮೂಕವೇದನೆಯನ್ನು ಅರ್ಥಮಾಡಿಕೊಂಡು ಸಂತೈಸುವವರು ಯಾರಿದ್ದಾರೆ? ಸೃಷ್ಟಿಯೇ ತಾಯಾಗಿ ಸಂತೈಸಬೇಕಷ್ಟೆ!

ಕೆಲವು ದಿನಗಳುರುಳಿದ ಮೇಲೆ ಆ ತಾಯಿಯ ಸ್ಥಾನಕ್ಕೆ ಬೇರೊಬ್ಬ ತಾಯಿ ಬಂದು ಪ್ರತಿಷ್ಠಿತಳಾದಾಗ ಎಷ್ಟೋ ಅಕ್ಕರೆಯಿಂದ ಅವಳೆಡೆಗೆ ನಡೆತಂದರೂ ತಾನು ಮೊದಲು ತನ್ನ ತಾಯಿಯಲ್ಲಿ ಕಂಡಿದ್ದ ಉಂಡಿದ್ದ ಸವಿಯೊಲವನ್ನು ಅವಳ ಹೃದಯದಲ್ಲಿ ಕಾಣಲಾಗಲಿಲ್ಲ :

"ಮನೆಯ ತುಂಬಿದಳಂದು ಮತ್ತೊಬ್ಬ ಮಾತೆ
ಮನವ ತುಂಬಲೆ ಇಲ್ಲ–ಅವಳನ್ನದಾತೆ !
ನೀನಿತ್ತ ಒಲವನ್ನು
ಆ ದಿವ್ಯಸುಧೆಯನ್ನು
ಪರರಿಂದ ಕಡವಾಗಿ ಪಡೆಯಬಹುದೆ ?
ದೊರೆಯದಿರೆ ಅದಕಾಗಿ ಕೊರಗಬಹುದೆ ?

ಮನಸ್ಸು ಬೆಳೆದಂತೆ ಇಂಥ ಒಂದು ವಿರಹದಲ್ಲೆ, ಇಂಥ ನೋವಿನಲ್ಲೆ ಏನೋ ಒಂದು ಚೆಲುವು, ಅನುಭವದ ಬೆಳಕು, ಕವಿಚೇತನಕ್ಕೆ ಕಾಣಿಸಿತು. "ನೋವೇ ಸೃಷ್ಟಿಯ ಮೂಲ" ಎಂಬುದರ ಅರಿವಾಯಿತು. ಅಂಥ ಅರಿವು ಮೂಡಿದರೂ ಒಮ್ಮೊಮ್ಮೆ ಒಲವಿನಲ್ಲಿ ಸೆರೆಗೊಂಡ ತಾಯಿಮಕ್ಕಳನ್ನು ಕಂಡಾಗ ಬಹುಹಿಂದೆ ಮಿಂಚಿ ಮಾಯವಾಗಿ ಹೋದ ತಾಯ ಚಿತ್ರ, ಅವಳ ಮಧುರಪ್ರೇಮ, ಇವು ತನಗರಿವಿಲ್ಲದಂತೆಯೇ ತನ್ನ ಹೃದಯವನ್ನು ಮಿಡಿಯುತ್ತಿತ್ತು, ಹಿಂಡುತ್ತಿತ್ತು. ಆಗ :

. . . . . . . . . . .

"ಕಳೆದ ಬಾಲ್ಯದ ಚೆಲುವ ಮನದಿ ಮೂಡಿಸಿಕೊಂಡು

ಸವಿಯುವೆನು ನಾನು;
ಮತ್ತೊಮ್ಮೆ ನೀನು
ನಿನ್ನ ತೊಡೆಯೊಳಗಿಟ್ಟು ಹಾಲೂಡುವಂತೆ
ಕನಸು ಬೀಳುವುದೆನಗೆ—ಅತಿಮಧುರ ಚಿಂತೆ!
ತಾಯೊಲವೆ ತಾಯೊಲವು ಈ ಲೋಕದೊಳಗೆ
ಕಡಲಿಂಗೆ ಕಡಲಲ್ಲದುಂಟೆ ಹೋಲಿಕೆಗೆ!
ಓ ಅಮೃತ ಪ್ರೇಮವೇ
ಓ ಮಾತೃರೂಪವೇ
ತೀರಲಾರದ ತೃಷೆಗೆ ಮರುಜನ್ಮ ಬೇಕು
ಮತ್ತೊಮ್ಮೆ ಶಿಶುವಾಗಿ ನಾ ನಲಿಯಬೇಕು"

"ತಾಯಿಗೆ"
(ಸಾಮಗಾನ)

ಈ ಕವನದಲ್ಲಿ ಸಾಲುಗಳನ್ನು ಓದಿದಾಗ ತಾಯಿಯನ್ನ ಕಳೆದುಕೊಂಡ ಮಗುವಿನೊಂದಿಗೇ ಮಾತನಾಡಿದಂತಾಗುತ್ತದೆ.

ಇಲ್ಲಿನ ಪಂಕ್ತಿಗಳು ಅದೆಷ್ಟು ಸರಳ! ಅದೆಷ್ಟು ತೀವ್ರ! ಹೃದಯವನ್ನು ಹಿಂಡುವಂಥವು! ಕಣ್ಣೀರನ್ನು ಮಿಡಿಸುವಂಥವು! "ತಾಯಿ" ಎನ್ನುವುದು ಜೀವನದಲ್ಲಿ ಎಂಥ ಮಹತ್ವದ ವ್ಯಕ್ತಿ. ಯಾವುದು ಕಳೆದು ಹೋದರೂ ಮತ್ತೊಮ್ಮೆ ಸಿಕ್ಕೀತು! ಆದರೆ ತಾಯೊಲುಮೆ ಮಾತ್ರ ಎಷ್ಟೇ ಹಲುಬಿ ಹಂಬಲಿಸಿದರೂ ಒಮ್ಮೆ ಮಿಂಚಿ ಮಾಯವಾದ ಮೇಲೆ ಆಯಿತು, ಅದು ಮತ್ತೊಮ್ಮೆ ಮಿನುಗುವುದಿಲ್ಲ. ಈ ಕಠೋರ ಅನುಭವವನ್ನು ಕವಿವಾಣಿ ಕಂಬನಿಯಲ್ಲಿ ತೊಯ್ದು ತನ್ನ ತಿಳಿಯಾದ ಮಾತುಗಳಲ್ಲಿ ಮಿನುಗಿಸಿದೆ.

ಮಾತೃವಾತ್ಸಲ್ಯದಿಂದ ವಂಚಿತನಾದ ಕವಿಜೀವನ ತನ್ನ ವಿರಹಯಾತನೆಯನ್ನು ತನ್ನ ಒಡಹುಟ್ಟಿದ ತಮ್ಮ ತಂಗಿಯರ ಒಲುಮೆ ವಾತ್ಸಲ್ಯದಲ್ಲಿ ಮರೆಯಲೆತ್ನಿಸಿದೆ. ತಂಗಿಯ ಪರಿಶುಭ್ರ ಲಲ್ಲೆಮಾತು, ಮುದ್ದಾದ ಆಟಪಾಠಗಳು ದುಃಖದ ಬೇಗೆ ತುಂಬಿದ ಜೀವನಕ್ಕೆ ಆಗಾಗ ತಂಪನ್ನೆರೆದಿವೆ, ಬೆಳಕು ಬೀರಿವೆ. ಆ ಪುಟ್ಟ ತಂಗಿಯು ಸಜೀವವಾದ ಅರ್ಥ ಗರ್ಭಿತವಾದ ಗೊಂಬೆಯಾಟವನ್ನು ಕವಿ ಇಲ್ಲಿ ಮನದುಂಬಿ ನೆನೆದಿದ್ದಾರೆ:

ಮರದೊಂದು ಗೊಂಬೆಯನು
ಪುಟ್ಟ ತೊಟ್ಟಿಲೊಳಿಟ್ಟು
ಪುಟ್ಟ ಹಸ್ತಗಳಿಂದ ತೊಟ್ಟಿಲನು ತೂಗಿ
ಜೋ ಜೋ ಜೋ ಎಂದು
ಜೋಗುಳವ ಹಾಡುವಳು
ಮೂರುವರ್ಷದ ತಂಗಿ ಮನೆಯ ಬೆಳಕು.
ತಾನು ತಿನ್ನುವ ಮುನ್ನ
ತನ್ನ ಗೊಂಬೆಗೆ ತಿನಿಸಿ
ಹೊಸ ತುಂಡುಬಟ್ಟೆಗಳ ಉಡುಪು ಮಾಡಿ;
ಹೆಣ್ಣು ಗೊಂಬೆಗೆ ಬಂದು

ಗಂಡು ಬೊಂಬೆಯ ತಂದು
ಹಸೆಯಿಟ್ಟು ಹಾಡುವಳು ಮದುವೆ ಮಾಡಿ!
ಆ ಮರದ ಗೊಂಬೆಯನು
ಎತ್ತಿ ಸಂತೈಸುವುದು
ಮತ್ತೆ ನೀರೆರೆಯುವುದು ತಾಯಿಯಂತೆ
ಸತ್ತ ತಿಥಿ ಮಾಡುವುದು
ಅಳುವನಭಿನಯಿಸುವುದು
ಜೀವನವ ಟೀಕಿಸುವ ವ್ಯಕ್ತಿಯಂತೆ

"ಗೊಂಬೆಯ ಆಟ"
(ಸಾಮಗಾನ)

ಎಳೆತನದಲ್ಲಿ ಜೀವನವನ್ನು ಅರಿಯದೆ ಟೀಕಿಸಿ ಆಡಿದ ಆಟವೇ ಮುಂದೆ ನಮ್ಮ ಬಾಳಿನಾಟವಾದಾಗ ಆ ಮುಗ್ಧತೆ, ಆ ಉತ್ಸಾಹ, ಆ ಚಟುವಟಿಕೆ ಇವೆಲ್ಲ ಎಲ್ಲೋ ಕಣ್ಮರೆಯಾಗಿ ಹೋಗುತ್ತವೆ. ದುಃಖ ನಿರಾಶೆಗಳೇ ಹೆಚ್ಚಾಗಿ ಬೆರೆತ ಯಾಂತ್ರಿಕ ಜೀವನದ ಎಳೆದಾಟಕ್ಕೆ ಸಿಕ್ಕಿ ಸಪ್ಪಗಾಗಿ ಸೋತುಹೋದವರೇ ಹೆಚ್ಚು! ಕಥೆ ಹೇಳೆಂದು ಸುತ್ತಮುತ್ತ ಸುತ್ತಿ ತನ್ನನ್ನು ಪೀಡಿಸಿ ಕಾಡುತ್ತಿದ್ದ ಅಂದಿನ ತಮ್ಮ, ತಂಗಿಯರೇ ಇಂದೂ ತನ್ನೊಡನೆ ಇರುವವರಾದರೂ ಅಂದಿನ ಅವರ ರೀತಿನೀತಿಗೂ ಆ ಸನ್ನಿವೇಶಕ್ಕೂ ಅದೆಷ್ಟು ವ್ಯತ್ಯಾಸವಿದೆ! ಅಂದಿನ ಆ ಸವಿದಿನಗಳನ್ನು ಸ್ಮರಿಸಿ ಕವಿಯ ಅಂತರ್ಯ ನಿಟ್ಟುಸಿರಿಟ್ಟಿದೆ :

"ಧೂಳಾಟವನು ಮುಗಿಸಿ ಮನೆಗೆ ಮರಳಿರೆ ಸಂಜೆ
ಮಂದ ಸುಂದರ ಶಾಂತ ಪ್ರಭೆಯೊಳುರಿದಿರೆ ಹಣತೆ
ಕೇಳುತಿದ್ದಿತು ಕೇಕೆ ಹಾಕುತ ಬರುವ ತಮ್ಮ
ತಂಗಿಯರ ಗೆಲುವಿನ ಕೂಗು ಎಳೆಯ ಮುಖ, ಎಳೆಯ
ಮನ, 'ಒಂದು ಕತೆ ಹೇಳಣ್ಣ'—ಎಂದು ಹಾಸಿಗೆಯ
ಸುತ್ತಲೂ ಕುಳಿತು, ಬೆರಗುಗಣ್ಣನು ತೆರೆದು ನಾ-
ನೊರೆವ ಅಪ್ಸರೆಯ ಕತೆಯಲ್ಲಿ ಗಂಧರ್ವಲೋ
ಕಕೆ ತೇಲಿ ನಲಿಯುತಿದ್ದರು ಅಂದು. ಇಂದು ಅದು
ಒಂದು ಮುಗಿದ ಕತೆ; ಈಗ ಬರಿ ನೆನಪು. ಇಂದೋ
ನಿಡುಸುಯ್ದು ಮುಳುಗುತಿರೆ ಸೋತು ಸೊರಗಿದ ಸಂಜೆ,
ಕಣ್ಣು ಕುಕ್ಕುವ ತೆರದಿ ಜ್ವಲಿಸೆ ವಿದ್ಯುದ್ದೀಪ
ಆ ಅವರೆ ಬರುವರು ಮನೆಗೆ ಸೋತು ಹಣ್ಣಾಗಿ
ಅಂಗಡಿಯಿಂದ, ಫ್ಯಾಕ್ಟರಿಯಿಂದ ಮತ್ತೆ ಆ—
ಫೀಸಿನಿಂದ: ಇಂದವರು ಹತ್ತಿರಿದ್ದರು ದೂರ!
ಒಬ್ಬೊಬ್ಬನದು ಒಂದೊಂದು ಕೋಣೆ. ಅಂದಿನೊಲು
ಇಂದವರ ಯಾವ ಕಥೆಯೂ ಹಿಡಿದು ಕೂಡಿಸದು!
ಅಂದಿಗೂ ಇಂದಿಗೂ ಸಾಕ್ಷಿಯೊಲು ನಾನಿರುವೆ
ಅಚ್ಚರಿಯ ನಿರುಕಿಸುತ ಬರಿದೆ ನಿಟ್ಟುಸಿರಿಡುವೆ"

"ಮುಗಿದಕತೆ"
(ಕಾರ್ತೀಕ)

ಜೀವನದ ಸುಪ್ರಭಾತದ ಆ ದಿನಗಳ ಬೆಲೆ ಆಗ ಅರಿವಾಗಿರುವುದಿಲ್ಲ; ಈಗ ಅರಿವಾಗುವುದಾದರೂ ಮರಳಿ ಬರುವಂತಿಲ್ಲ! ನಿಜವಾಗಿಯೂ ಅದೊಂದು, ಚಿಂತೆಯು ಸೋಂಕೇ ಇಲ್ಲದ ಹೂವಿನಂಥ ಜೀವನ. ಆಗ ಒಡಹುಟ್ಟಿದವರೊಡನೆ ಎಷ್ಟೊಂದು ಆಡಿ ನಲಿದಿರುತ್ತೇವೆ, ಗೆಳೆಯರೊಡನೆ ಕುಣಿದು ಕುಪ್ಪಳಿಸಿರುತ್ತೇವೆ. ಕವಿಯ ಮನಸ್ಸಿನ ಮುಂದೆ ಆ ದಿನಗಳೆಲ್ಲ ಒಂದೊಂದಾಗಿ ಬಂದು ಬಂದು ಆತನ ನೆನಪಿನ ಕೋಶವನ್ನು ಜಗ್ಗಿದೆ. ಆ ಮಧುರ ಸ್ಮೃತಿಯನ್ನೇ ಅಂದು ತನ್ನೊಂದಿಗೆ ಆಡಿ ಕುಣಿದು, ಈಗ ತನ್ನಂತೆಯೇ ದೊಡ್ಡವನಾಗಿ ಬೆಳೆದಿರುವ ತಮ್ಮ ಬಾಲ್ಯದ ಗೆಳೆಯನಿಗೂ ನೆನಪಿಸಲಿಚ್ಛಿಸಿದ್ದಾರೆ:

"ನಾವಿಬ್ಬರೂ ಅಂದು
ಹೊಳೆಯ ದಡದಲಿ ನಿಂದು
ಮರಳುಮನೆಗಳ ಕಟ್ಟಿ
ಆಟವಾಡಿದ ದಿವಸ
ನೆನಪಿದೆಯೆ ನಿನಗೆ?
ಮುಂಗಾರು ಮಳೆಹೊಯ್ದು
ನಾವಿಬ್ಬರೂ ತೊಯ್ದು–
ನಿಂತಾಗ ಮರಳಮನೆ
ಕೊಚ್ಚಿ ಹೋದಾ ದಿವಸ
ನೆನಪಿದೆಯೆ ನಿನಗೆ?
ಈ ಮರಳು ನನಗೆಂದು
ಆ ಮರಳು ತನಗೆಂದು
ಹೊಡೆದಾಡಿ 'ಜತೆ' ಬಿಟ್ಟು
ಆಟವಾಡಿದ ದಿವಸ
ನೆನಪಿದೆಯೆ ನಿನಗೆ?
ಮರುದಿವಸ ಒಂದಾಗಿ
ಮರಳು ಮನೆಗಳ ಕಟ್ಟಿ
ಕೈಯ್ಯ ಚಪ್ಪಳೆ ತಟ್ಟಿ
ಹಾಡಿ ಕುಣಿದಾ ದಿವಸ
ನೆನಪಿದೆಯೆ ನಿನಗೆ?
ಅಂದು ಹರಿದಾ ಹೊಳೆಯೆ
ಇಂದಿಗೂ ಹರಿಯುತಿದೆ;
ಬಾ ಗೆಳೆಯ ಮತ್ತೊಮ್ಮೆ ಆಟವಾಡೋಣ,
ಬಾಲ್ಯದುದ್ಯಾನವನು ಮರಳಿ ಕಟ್ಟೋಣ!"

"ನೆನಪಿದೆಯೆ ನಿನಗೆ"
(ಸಾಮಗಾನ)

ಮತ್ತೆ ಪುಟ್ಟವನಾಗಿ ಬಾಲ್ಯದುದ್ಯಾನವನ್ನು ಕಟ್ಟಿ ತಣಿಯುವ ಆಸೆ ಉದಿಸಿ ಮತ್ತೆ ಆಡಬಹುದಾದರೂ ಅಂದಿನಂತೆ ಎಂದಿಗೂ ಆಡಲಾಗುವುದಿಲ್ಲ! ಅದೇ ಹೊಳೆ ಅದೇ ಮರಳು, ಅದೇ ಕೈ; ಆದರೆ ಎಳ್ಳಷ್ಟೂ ಕೊಳೆಯಿಲ್ಲದ ಆ ತಿಳಿಹೃದಯ ಇಂದೆಲ್ಲಿದೆ? ಬಾಳಿನ ಬಿಸಿಲು ಗಾಳಿಗೆ ಸಿಕ್ಕಿ ಎಲ್ಲ ಮಾಸಿಹೋಗಿದೆ. ಈಗ ಕಟ್ಟಬೇಕಾದ ಮನೆಯೇ ಬೇರೆ, ಆಡಬೇಕಾದ ಆಟವೇ ಬೇರೆ.

ಇಂದು ಬಾಳಿನ ಸಹಯಾತ್ರಿಗೆ ತನ್ನನ್ನು ಕೈಹಿಡಿದ ಪ್ರೇಮದ ಸತಿ ಇದ್ದಾಳೆ. ಮುದ್ದು ಮಾತುಗಳಿಂದ ನಕ್ಕುನಗಿಸುವಂಥ ಮುತ್ತು ಮಾಣಿಕದಂಥ ಪುಟ್ಟ ಮಕ್ಕಳಿದ್ದಾರೆ. ಈಗ ಅವರ ಆಟವೇ ತನ್ನ ಆಟ, ಅವರ ನೋವೇ ತನ್ನ ನೋವು. ಅವರ ನಲಿವೇ ತನ್ನ ನಲಿವು.

ಮಿಂಚಿನ ಮರಿಗಳಾಗಿ ಪುಟಿದು ಚಿಮ್ಮಿ, ತಮ್ಮ ಆಟಪಾಟಗಳಿಂದ, ಮೇರೆಯಿಲ್ಲದ ತುಂಟತನದಿಂದ, ಅರ್ಥವಾಗದ, ತಮಗೇ ಆದ ಮುಗ್ಧ ರೀತಿನೀತಿಗಳಿಂದ ಮನತಣಿಸಿ ಜೀವನಕ್ಕೆ ಶಾಂತಿಸಂತೋಷಗಳನ್ನು ತುಂಬುವ ಮಕ್ಕಳು ಬರಿಯ ಮಕ್ಕಳಲ್ಲ. ಅವೊ ಒಂದೊಂದೂ ಒಂದೊಂದು ಮುಗ್ಧತೀರ್ಥ. ಅಲ್ಲಿಯೇ ನಮ್ಮ ದಿನದ ಧೂಳಿನ ಬಾಳನ್ನು ತೊಳೆದುಕೊಳ್ಳಬೇಕಾಗಿದೆ. ಅವು ನೀಡುವ ಈ ತೀರಿಸಲಾಗದ ಸಂತೋಷದ ಬುತ್ತಿಗೆ ಪ್ರತಿಯಾಗಿ ನಾವೇನು ನೀಡಬಲ್ಲೆವು?

ಬೇಸರದ ನೀರಸದ ಮರಳು ಕಾಡೊಳು ನೀನು
ನಗುವ ನಂದನದಂತೆ ಮೂಡಿಬಂದೆ
ನೀನೀವ ಸಂತಸಕೆ ನಾವೇನು ಕೊಟ್ಟೇವೊ
ಸಾಲಗಾರರೊ ನಾವು ನಿನ್ನ ಮುಂದೆ!"

"ಮುಗ್ಧತೀರ್ಥ"
(ಚೆಲುವು-ಒಲವು)

ನೀರಸವಾದ ಬಾಳಿಗೊಂದು ಮುಂಬೆಳಕಾಗಿ ಬೆಳಗುತ್ತಿರುವ ಈ ಮುದ್ದುಗುವರ ನಕ್ಕರೊಂದು ಚೆಲುವು, ಅತ್ತರೊಂದು ಚೆಲುವು.

ಇವನ ನಗುವೇನು ಊದುಬತ್ತಿಯ ನವುರು
ಗೆರೆಯ ಧೂಪ!
ಉರಿಗಿಟ್ಟ ಹಸಿಸೌದೆ ಹೊಗೆಯುಗುಳಿದಂತೆ
ಇವನ ಕೋಪ!
ಹಿಡಿವರಾರೂ ಇಲ್ಲ, ಆಡಿದುದೆ ಆಟ
ಇವನೆ ಭೂಪ!
ಕಾಗೆ ಗುಬ್ಬಿಗಳೊಡನೆ ಸರಸ ಸಲ್ಲಾಪ
ನಡೆಸುವವನು
ಬೀದಿಯಲ್ಲಿ ನಡೆವವರನ್ನೆಲ್ಲ ಕೈಬೀಸಿ
ಕರೆಯುತಿಹನು
ವಿಶ್ವಚೇತನವೆಲ್ಲೆಲ್ಲು ಕಂಡು
ಬಾಳುತಿಹನು!"

"ಮಗುವನ್ನು ನೋಡಿ"
(ಚೆಲುವು-ಒಲವು)

ಅವನ ದೃಷ್ಟಿಗೆ ಇದು ಜಡ ಇದು ಚೇತನ ಎಂಬ ಭೇದಭಾವನೆ ಇಲ್ಲ. ಎಲ್ಲವೂ ಅವನಿಗೆ ಒಡನಾಡಿಗಳೇ! ಕಂಡಕಂಡದ್ದನ್ನೆಲ್ಲ ಮಾತನಾಡಿಸುತ್ತಾನೆ, ಕುಟ್ಟುತ್ತಾನೆ, ಬಡಿಯುತ್ತಾನೆ, ಚೆಲ್ಲುತ್ತಾನೆ, ಮೆಲ್ಲುತ್ತಾನೆ! ಅವನ ಓಡಾಟಕ್ಕೆ ತುಂಟಾಟಕ್ಕೆ ಏನಾದರೊಂದು ಇತಿಮಿತಿ ಇದೆಯೆ?

ಅದೊ ಬಂದ ಇವನೊಂದು ಕಿರಿಯ ಬಿರುಗಾಳಿ!
ಮನೆಯ ಒಳಗೂ ಹೊರಗೂ ಇವನದೇ ಧಾಳಿ
ಇದ್ದುದೊಂದೆಡೆ ಇರದು ಇವನ ರಾಜ್ಯದಲಿ
ತುಂಟತನಕ್ಕನ್ನೆರಡು ಕಾಲ್‌ಬಂದ ತೆರದಿ
ಬಂದುದಿವನಿಗೆ ಎರಡು ಪುಟ್ಟಕಾಲು
ಮನೆಯ ವಸ್ತುಗಳೆಲ್ಲ ದಿಕ್ಕುಪಾಲು!

ತುಂಬು ಕಿತ್ತಲೆ ಕೆನ್ನೆ,-ನಗೆ ಮಿಂಚುಗಳ ಕುವರ
ಕ್ರಾಂತಿಕಾರ!
ಹೊಳೆವೆಳೆಯ ಕಂಗಳಲಿ ಬೆಳುದಿಂಗಳನು ತುಂಬಿ
ತಂದು ಮನೆಯಂಗಳಕೆ ಸುರಿವ ಧೀರ
ಇವನು ಎದ್ದರೆ ಮನೆಯ ಮೈಯೆಲ್ಲ ಎಚ್ಚರ
ಇವನು ಮಲಗಲು ಮನೆಗೆ ಕವಿಯುವುದು ಮಂಪರ!

ಇವನ ಮಾತಿನ ಅರ್ಥ ದೇವರೇ ಬಲ್ಲ
ಭಾವಗೀತೆಗಳಂತೆ ಅಸ್ಪಷ್ಟವೆಲ್ಲ

ಚಂದ್ರಮಾಮನ ಅಳಿಯ ಬೆಕ್ಕು ನಾಯಿಯ ಗೆಳೆಯ
ನಮ್ಮ ಲೋಕದ ತಿಳಿವಿನಾಚೆಯವನು
ಅವನ ನೀತಿಯೆ ಬೇರೆ, ಅವನ ನಿಯತಿಯೆ ಬೇರೆ
ದೇವ ಲೋಕದ ಬೆಳಕ ಹಿಡಿಯುವವನು.

ಮಹಾಮಹಾ ಪಂಡಿತರ ಉದ್ಗ್ರಂಥಗಳನ್ನೆಲ್ಲ
ನೆಕ್ಕಿ ರುಚಿನೋಡುವನು ರಸನೆಯಿಂದ!
ಎಷ್ಟಾದರೂ ಎಲ್ಲ ಬರಿಯ ನೀರಸವೆಂದು
ಹರಿದೆಸೆದು ಬಿಡುವನು ತಾತ್ಸಾರದಿಂದ!

ಸಿಟ್ಟು ಬಂದರೆ ಇವನ ತಡೆಯುವವರಾರುಂಟು?
ರುದ್ರಾವತಾರ!
ನಕ್ಕು ನಗಿಸುವ ಚಿಣ್ಣ, ಎದೆಯ ಒಲವಿನ ಹಿರಿಯ
ಸೂರೆಕಾರ.
ನನಗು ಅವಳಿಗು ನಡುವೆ ವ್ಯಕ್ತಪ್ರೇಮದ ಸೇತು;
ಇವ ಮಾಯಕಾರ
ಎರಡು ಬಾಳನು ಬೆಸೆದ ಸೂತ್ರಧಾರ!

"ಕ್ರಾಂತಿಕಾರ"
(ಚೆಲುವು-ಒಲವು)

ಸತಿಪತಿಗಳ ಪ್ರೇಮದ ಅತಿಥಿಯಾಗಿ ಬಂದ ಕುಮಾರ ಕಂಠೀರವನ ರೀತಿನೀತಿಗಳು ಇಷ್ಟಾದರೆ ಇನ್ನು ಪುಟ್ಟತಾಯಾಗಿ ಮನೆಯನ್ನೆಲ್ಲ ಮಂಗಳನಿನಾದದಿಂದ ತನ್ನ ನಗೆ ಮಲ್ಲಿಗೆಯಿಂದ ತುಂಬಿ ಬೆಳಗುವ ಕುವರಿ ಎಂಥವಳು ?

ಇವಳು ಹಿಗ್ಗಿನ ಬುಗ್ಗೆ, ಋತು ವಸಂತನ ಲಗ್ಗೆ
ನಮ್ಮ ಮನೆಗೆ !
ದೇವಲೋಕದ ಹಣ್ಣು, ಕಲ್ಪವೃಕ್ಷದ ಕಣ್ಣು
ಮೂಡಿತಿಳೆಗೆ!
ಚಿಕ್ಕೆ ಬಳಗವೆ ಬಂದುವಿವಳ ಜೊತೆಗೆ !

ಹೊರಗೆ ಮಂಜಿರಲೇನು ? ಒಳಗೆ ನಿತ್ಯವು ಇವಳ
ನಗೆಮಲ್ಲಿಗೆ !
ಎಂದು ಬಡತನವಿಲ್ಲ ಅಕ್ಕರೆಯೊಳರಳಿರುವ
ಈ ಬಳ್ಳಿಗೆ !
ತುಂಬುದಿಂಗಳ ಹಣ್ಣು ಗೊನೆಗೆ ಗೊನೆಗೆ !

ಚಂದನದ ಗೊಂಬೆಗೂ ಜೀವತುಂಬುವ ಚದುರೆ
ಸೃಷ್ಟಿಮಾತೆ !
ಎಲ್ಲರಿಗೂ ತಾಯಾಗಿ ಲಾಲಿಹಾಡುವಳಿವಳು
ಲೋಕಮಾತೆ !
ತಾಯೊಲವು ತುಳುಕುತಿಹ ಜೀವಂತಗೀತೆ !

"ನಗೆಮಲ್ಲಿಗೆ"
(ದೇವಶಿಲ್ಪ)

ಅವನು ಕ್ರಾಂತಿಕಾರ; ಇವಳು ಚಿಕ್ಕತಾಯಿ. ಇಬ್ಬರೂ ಒಂದೊಂದು ರೂಪದಲ್ಲಿ ಮನೆಗೆ ಶಾಂತಿ ಸಂತೋಷಗಳನ್ನು ತುಂಬಿದ್ದಾರೆ. ಈ ಎರಡು ಮಕ್ಕಳೂ ಮನೆಯ ಎರಡು ಕಣ್ಣುಗಳು. ಇವು ಸದಾ ಹೀಗೇ ನಗುನಗುತ್ತ ಹೊಳೆಯುತಿರಲಿ ಎಂದು ತಂದೆಯಾಗಿ ಕವಿ ಹೃದಯ ಹಾರೈಸಿದೆ. ಹತ್ತು ಜನಕ್ಕೆ ಸಂತೋಷನೀಡಿ ತುಂಬು ಬಾಳನ್ನು ಬಾಳಿರೆಂದು ಆಶೀರ್ವದಿಸಿದೆ. ಎಲ್ಲೋ ಮೂಲೆಯಲ್ಲಿ ಸ್ವಾರ್ಥದ ಕೊಳಚೆಯಲ್ಲಿ ಕೊಳೆತು ನಾರುವುದು ಬೇಡವೆಂದು ಎಚ್ಚರಿಸಿದೆ.

ಕಣಿವೆತಳದೊಳು ಕೊಳೆವ ಜೊಂಡಾಗದಿರು ಮಗುವೆ
ಬೆಟ್ಟಗುಡ್ಡವ ಹೀರಿ ತೇಗವಾಗು
ತಲೆಯಬಾಗದೆ ನಿಂತು, ಕೊಂಬೆರೆಂಬೆಗಳ ಚಾಚಿ
ಮಳೆ-ಬಿಸಿಲು-ಗಾಳಿಗಳ ತೊಟ್ಟಿಲಾಗು

ಹಸುರುಹಾವಸೆ ಹಬ್ಬಿ ಕೊಳೆವ ಕೊಳವಾಗದಿರು
ಲಲಿತ ನಿರ್ಮಲಜಲದ ಕಾಸಾರವಾಗು
ರವಿಕಿರಣ ಮಿಡಿದಿರಲು, ಮೀನು-ಹೂ-ಹಕ್ಕಿಗಳ
ದುಂಬಿ ಗುಂಜಾರವದ ಸ್ವರಮೇಳವಾಗು

ಕಣ್ಣೆತ್ತಿಯೂ ನೋಡದಿರು ಈ ದೊಡ್ಡವರ ಸಣ್ಣ
ತನದತ್ತ ; ಬಿಟ್ಟುಬಿಡು ಅವರನ್ನು ಅತ್ತಕಡೆಗೆ ;
ಕೆಟ್ಟ ಇಟ್ಟಿಗೆಯಿಂದ ಕಟ್ಟದಿರು ಹೊಸಮನೆಯು
ನಾಳಿನಾಸೆಯ ಶಿಖರ ನೀನೆ ನಮಗೆ !

"ಹಾರೈಕೆ"
(ಅನಾವರಣ)

ಇಂಥ ಆಸೆಯ ಶಿಖರವನ್ನ, ಸೊಗದ ಬುಗ್ಗೆಗಳನ್ನ ತಮ್ಮಲ್ಲಿಗೆ ಕರೆತಂದು ಮನೆಯನ್ನು ಹಿಗ್ಗಬೀರಿ ನಗುವಂತೆ ಮಾಡಿದ ತಮ್ಮ ಗೃಹಲಕ್ಷ್ಮಿಯನ್ನು ಕವಿ ತುಂಬುಹೃದಯದಿಂದ ಅಭಿನಂದಿಸಿದ್ದಾರೆ. ತನ್ನೆದೆಯ ಶತಶತಮಾನದ ಕತ್ತಲೆಯನ್ನು ಕಳೆದು ನಿರಂತರವೂ ಹೀಗೆಯೇ ತನ್ನ ಹೃದಯವನ್ನು ಬೆಳಗಬೇಕೆಂದು ಹಾರೈಸಿ ಆಹ್ವಾನಿಸಿದ್ದಾರೆ :

ಬೆಳಗು ಬಾ ಓ ಗೆಳತಿ
ನಿನ್ನ ಒಲವಿನ ಪ್ರಣತಿ
ಶತಮಾನಗಳ ತಿಮಿರ ಮುಸುಕಿದೀ ಮಂದಿರದ
ಎದೆಯಾಳದಲ್ಲಿ.

* * *

ಎದೆಯ ಕಸವನು ಗುಡಿಸಿ
ರಂಗವಲ್ಲಿಯನಿರಿಸಿ
ಸಿಂಗರಿಸು ನನ್ನೆದೆಯ ನಿನ್ನ ಪ್ರೇಮದ ಅಮೃತ
ಸಂಪತ್ತಿನಲ್ಲಿ.

ಬೆಳಗು ಬಾ ಹಣತೆಯನು
ನನ್ನೆದೆಯ ಗುಡಿಯಲ್ಲಿ
ಚಿರಕಾಲ ಪ್ರಜ್ವಲಿಸಿ ಬೆಳಗುವಂತೆ ;
ನೀನು ಬಂದುದರಿಂದ
ನನ್ನೆದೆಯ ಆನಂದ
ನರ್ತಿಸುತ ಶೋಭಿಸಿದೆ ಮಳೆಬಂದ ಮರುದಿನದ
ಮುಂಬೆಳಗಿನಂತೆ.

"ಬೆಳಗು ಬಾ"
(ಸಾಮಗಾನ)

ಕವಿಯ ಪ್ರೇಮಪೂರ್ಣ ಹೃದಯದಲ್ಲಿ ಹುಟ್ಟಿ ಹೊರಹೊಮ್ಮಿದ ಈ ಒಲುಮೆ ಕವನಗಳ ತುಂಬು ಹೊಳೆ. ಒಂದೊಂದು ಘಟ್ಟದಲ್ಲಿ ಒಂದೊಂದು ರೀತಿಯ ಹರಿವಿನಿಂದ

ಕಲಕಲ ನಿನಾದಗೈದು ನಮ್ಮನ್ನು ಸೆರೆಹಿಡಿಯುತ್ತದೆ. ಮುಗ್ಧ ಭಾವದಿಂದ ತಾಯಿಗಾಗಿ ಹಂಬಲಿಸುವಾಗ, ತಂಗಿ ತಮ್ಮಂದಿರ ಬಾಲಲೀಲೆಗಳನ್ನು ನೆನೆದು ನಿಟ್ಟುಸಿರಿಡುವಾಗ, ಗೆಳೆಯನೊಂದಿಗೆ ಹಳೆಯ ಕಥೆಯನ್ನು ಸ್ಮರಿಸುವಾಗ, ಮುದ್ದು ಮಕ್ಕಳ ಆಟಪಾಟಗಳನ್ನು ಕಂಡು ಸಂತೃಪ್ತವಾದಾಗ, ಗೃಹಲಕ್ಷ್ಮಿಯನ್ನು ಅಭಿನಂದಿಸುವಾಗ ಒಂದೊಂದು ಕಡೆ ಒಂದೊಂದು ಬಗೆಯ ಭಾವವನ್ನು ಹನಿಹನಿಯಾಗಿ ಹೂಮಳೆಗರೆಯುವ ಕವಿಯ ರೀತಿ ಮನತಣಿಸುವಂತಹುದು; ಎಂದೆಂದಿಗೂ ಬತ್ತದೆ ಎದೆಯಲ್ಲಿ ನೆಲೆಗೊಳ್ಳುವಂಥದು.

* * *

ಇನ್ನು ಒಲುಮೆ ಕವನಗಳಿಂದ ಹಾಸ್ಯಗೀತೆಗಳ ಕಡೆಗೆ ದೃಷ್ಟಿಯನ್ನೀಗ ಹಾಯಿಸ ಬೇಕಾಗಿದೆ. ಪ್ರಕೃತಿಯ ಚೆಲುವಿನಿಂದ, ಬಾಳಿನಲ್ಲಿನ ಒಲವಿನಿಂದ ಕವಿಗೆ ಹೇಗೆ ಸ್ಫೂರ್ತಿ ದೊರೆಯುತ್ತದೆಯೋ ಹಾಗೆಯೇ ಸುತ್ತಮುತ್ತಲಿನ ಸನ್ನಿವೇಶಗಳ ವಿಲಕ್ಷಣತೆ, ಜನ ಜೀವನದ ಡಾಂಭಿಕತೆ ಇವೂ ಆತನಿಗೆ ಸ್ಫೂರ್ತಿ ನೀಡಿ ನವಿರಾದ ಹಾಸ್ಯಗೀತೆಗಳಿಗೆ ಜನ್ಮದಾನ ಮಾಡುತ್ತವೆ. ಅಂಥ ಹಾಸ್ಯಗೀತೆಗಳಲ್ಲಿ ಕೆಲವನ್ನ ಇಲ್ಲಿ ನೋಡಬಹುದು.

ಮನೆ ಎಂದಮೇಲೆ ಬಂದುಹೋಗುವವರೆಷ್ಟೋ ಜನ. ಅವರಲ್ಲಿ ಒಬ್ಬೊಬ್ಬರ ನಡವಳಿಕೆಗಳಲ್ಲಿ ಒಂದೊಂದು ರೀತಿಯ ವಿಶೇಷ. ಇಲ್ಲಿ ಕವಿಯ ನೆನಪಿನ ಪುಟದ ಮೇಲೆ ಮನೆಗೆ ಬಂದಿದ್ದ ಅತಿಥಿ ಮಹಾಶಯರೊಬ್ಬರು ತಮ್ಮ ವಿಶೇಷತೆಯ ಚಿರಮುದ್ರೆಯನ್ನೊತ್ತಿ ಹೋಗಿದ್ದಾರೆ. ಅಂದಿನ ರಾತ್ರಿಯ ಅವರ ನಿದ್ರೆಯ ರೀತಿ ಎಲ್ಲರ ನಿದ್ದೆಯ ರೀತಿಯಂತಿರ ಲಿಲ್ಲ. ಬಹಳ ವಿಶೇಷವಾದುದಾಗಿತ್ತು. ಅವರಂಥವರು ಏನಾದರೂ ದಿನಾ ಬರುವಂ ತಾದರೆ ಏನಿಲ್ಲ ಸುತ್ತಮುತ್ತ ಮಲಗಿರುವವರಿಗೆ ನಿತ್ಯ ಶಿವರಾತ್ರಿಯೇ. ಅದೇನು ಉಸಿ ರಾಟ! ಅದೇನು ಗೊರಕೆ!

"ಇರುಳ ಮೌನದ ಕೊರಡ ಕೊರೆಯುವ
ಇವರ ಗೊರಕೆಯ ಗರಗಸ
ತಾರಮಂದರದಲ್ಲಿ ಏರಿಳಿ-
ದೆಂತುಗೈದಿದೆ ಪರವಶ!

ಏನು ಲಯ, ಓ ಏನು ತಾಳ-
ವಿದೇನು ರಾಗಾಲಾಪನೆ!
ಘೂಕ-ಗಾರ್ದಭ-ಚಕಿತವಾಗಿವೆ
ಅಹ! ಎಂಥ ಕಸಿವಿಸಿ ಯಾತನೆ!

ಗಾನದೇವಿಯ ಶಿಲುಬೆಗೇರಿಸ-
ಲವಳು ನರಳುವ ದನಿಗಳೋ,
ಜಗದಪಸ್ವರಗಳನು ಭಟ್ಟಿಯ
ನಿಳಿಪ ಗಾಣದ ಮೊರೆತವೋ

ನಿದ್ದೆ ಬೀದಿ ರಿಪೇರಿ ರೋಡೆಂ-
ಜಿನ್ನು ಉರುಳುವ ರಭಸವೋ,
ಏನು ಬಣ್ಣಿಸಲಯ್ಯ ಉಪಮಾ-
ತೀತವಾದೀಗಾನವ,
ಇಂಥ ಗೊರಕೆಯ ನಕ್ರಪೀಡನೆ-
ಯಿಂದ ಬಿಡಿಸೋ ಕೇಶವ.

"ಗೊರಕೆ"
(ಅನಾವರಣ)

ಪಾಪ! ಇಂಥ ಸಮಯದಲ್ಲಿ ಇನ್ನೇನು ತಾನೇ ಮಾಡಲಾದೀತು ದೇವರಲ್ಲಿ ಶರಣಾಗುವುದೊಂದನ್ನುಳಿದು! ಅವನು ಮಾತ್ರ ಇಂಥವರು ರಾತ್ರಿಯ ವೇಳೆಯಲ್ಲಿ ಮನೆಗೆ ಬರದ ಹಾಗೆ ನೋಡಿಕೊಳ್ಳಬೇಕಷ್ಟೆ! ಯಜಮಾನನಿಂದ ಏನೂ ಸಾಧ್ಯವಿಲ್ಲ.

ಕವಿಯ ಹಾಸ್ಯಕ್ಕೆ ಒಳಗಾಗಬೇಕಾದ ಪರಿಸ್ಥಿತಿ ಮನೆಗೆ ಬಂದ ಸಂಬಂಧಿಕನಿಗೆ ಹೇಗೆ ತಪ್ಪಲಿಲ್ಲವೋ ಹಾಗೆಯೇ ಹೊರಗೆ ಎಲ್ಲೋ ತಮ್ಮ ಪಾಡಿಗೆ ತಾವು ಕಾಂಪೌಂಡು ಹಾಕಿದ ಸೊಗಸಾದ ಬಂಗಲೆಯಲ್ಲಿ ಸುಖಾಸೀನರಾದ ಶ್ರೀಮಂತರಿಗೂ ತಪ್ಪಲಿಲ್ಲ. ಅವರು ಗೇಟಿನಲ್ಲಿ ತೂಗುಹಾಕಿದ ಎಚ್ಚರಿಕೆಯ ಹಲಗೆಯಿಂದಲೇ ಅವರ ಥಳಕು-ಹುಳುಕುಗಳನ್ನೆಲ್ಲಾ ಹೊರಕ್ಕೆ ತಂದುಹಾಕಿದೆ ಕವಿಯ ನಿರ್ದಾಕ್ಷಿಣ್ಯವಾದ ನುಡಿ!

'ನಾಯಿಗಳಿವೆ ಎಚ್ಚರಿಕೆ'
ಯಾರ ಎಚ್ಚರಿಕೆ ಈ ಹಲಗೆ?
ಕಳ್ಳರಿಗೊ ಇದು ಸುಳ್ಳರಿಗೋ?
ಬಂದು ಪೀಡಿಸುವ ಜನಗಳಿಗೋ
ಲೋಕದ ಗಮನವೆ ಈ ಮನೆ ಕಡೆಗಿದೆ
ಎಂಬ ಪ್ರಚಾರದ ತಂತ್ರಕ್ಕೊ!
ಭಿಕ್ಷೆಗೆಂದು ಬಂದರಚುವ ಮುಂದಿಗೆ
ಇರುವುದೆ ಅಕ್ಷರಜ್ಞಾನ?
ಓದಿಕೊಂಡು ಅದನರಿತು ನಡೆವಷ್ಟು
ಮುಂದುವರಿದಿಲ್ಲ ನಮ್ಮ ಜನ
ದಿಟಕು ನಾಯಿಗಳಿರಬಹುದೊಳಗಡೆ
ಹೇಳಿಕೊಳ್ಳುವರೆ ಇಂಥ ವಿಚಾರ!
ಬರುವರ ಬಗೆಗನುಕಂಪವೊ, ಬೆದರೊ,
ಯಾವುದಿರಬಹುದು ಇದರರ್ಥ?
.........................
ನಿಜಕೂ ದೊಡ್ಡವರಿಂಥ ಜನ.
ನಾಯಿಗಳಿರಬಹುದೆಲ್ಲರ ಮನೆಯೊಳು,
ಹೇಳಿಕೊಳ್ಳುವವರು ಎಷ್ಟು ಜನ?

"ನಾಯಿಗಳಿವೆ ಎಚ್ಚರಿಕೆ"
(ಅನಾವರಣ)

ಎಚ್ಚರಿಕೆಯ ಹಲಗೆಯನ್ನು ಕಟ್ಟುವವರಿಗೇ ಇದೊಂದು ಎಚ್ಚರಿಕೆಯ ನೋಟೀಸು! ಪಾಪ ಆ ಸುಖಜೀವಿಗಳಿಗೆ ಹೇಗೆ ಗೊತ್ತಾಗಬೇಕು! ತಾವು ಹಾಕಿದ ಹಲಗೆಯಿಂದಲೇ ತಮ್ಮ ಪೊಳ್ಳು ಮಾನ-ಮರ್ಯಾದೆಗಳನ್ನು ಹೊರಕ್ಕೆ ಹಾಕಿ ನಗೆಗೀಡು ಮಾಡುವ ವ್ಯಕ್ತಿಯೊಬ್ಬನಿದ್ದಾನೆ ಎಂಬುದು? ಇದನ್ನು ಕೇಳಿದಮೇಲೆ ಅಂಥ ಹಲಗೆಯನ್ನು ತೂಗು ಹಾಕಿರುವ ಮಹಾನುಭಾವರೇನು ತಲೆಯೆತ್ತುವಂತಿಲ್ಲ!

ಕವಿಯ ಪರಿಹಾಸ್ಯ ಇವರಲ್ಲಿಗೇ ನಿಂತಿಲ್ಲ, ಇನ್ನೂ ಮುಂದುವರೆದಿದೆ, ಮಂತ್ರಿಗಳ ವರೆಗೆ! ದಿನಕ್ಕೊಂದು ಸಮಾರಂಭದಲ್ಲಿ ಭಾಗವಹಿಸಿ, ಢಾಂಬಿಕ ಜನರ ಅರ್ಥವಿಲ್ಲದ ಆಚಾರಗಳನ್ನು ಕವಿಯ ಮುಸುಕಿನೊಳಗಿನ ಗುದ್ದಿನಂಥ ಮಾತು ಎತ್ತಿತೋರಿಸಿದೆ. 'ಅನಾವರಣ'ದಲ್ಲಿಯೇ ಅನಾವರಣಗೊಳಿಸಿದೆ:

> ಗಾಂಧೀಜಿಯ ಭಾವಚಿತ್ರದನಾವರಣದುತ್ಸವ
> ನಡೆಯಿತಂತೆ ಈ ಊರೊಳು, ಈ ಸುದ್ದಿಯ ಚೋದ್ಯವ
> ಪತ್ರಿಕೆಯಲಿ ಕಂಡು ನಾನು ಬೆರಗು ಹೊಡೆದು ನಿಂತೆಸು
> ಮಂತ್ರಿವರ್ಯರಮೃತಹಸ್ತ ನಡೆಸಿತಂತೆ ಇಷ್ಟನೂ!
>
> ..........................................
>
> ಆವರಣವೆ ಇಲ್ಲದವರಿಗನಾವರಣವೆಂಥದೊ!
> ಆವರಣವೆ ಇಲ್ಲದವರಿಗನಾವರಣವೆಂಥದೊ!
> ಇಲ್ಲದಿರುವ ತೆರೆಯನೆಳೆದು ಗಾಂಧೀಜಿಯ ಮೋರೆಗೆ
> ಆಮೇಲದ ತೆರೆಯುವಾಟ ನಮ್ಮ ನಾದಮಂದಿಗೆ!
>
> ಅನಾವರಣವಾಯಿತಂತೆ ಗಾಂಧೀಜಿಯ ಚಿತ್ರಕೆ!
> ಭಾಷಣಗಳು ನಡೆದುವಂತೆ ಕುಸಿಯಿತೇನೊ ವೇದಿಕೆ
> ಹೂಹಾರಗಳುರುಳಿತಂತೆ ಮಾತಾಡಿದ ಕೊರಳಿಗೆ
> ಗಾಂಧೀಜಿಯ ಪಟಸೇರಿತು ಜೇಡನ ಬಲೆ ನೆರಳಿಗೆ!
>
> ..........................................
>
> ಸತ್ತಗಾಂಧಿ ಅತ್ತನೇನೊ ನಡೆದ ಈ ವಿಚಿತ್ರಕೆ!
> ಅನಾವರಣವಾಗಬೇಕು ಮೊದಲು ನಮ್ಮ ಹೃದಯಕೆ
> ಅನಾವರಣವಾದಮೇಲೆ ಸಿದ್ಧವಾಗು ಶಿಕ್ಷೆಗೆ

"ಅನಾವರಣ"
(ಅನಾವರಣ)

ನುಡಿಯಲ್ಲಿ ಹಾಸ್ಯ ತುಂಬಿರುವುದಾದರೂ ಅದರ ಹಿಂದೆ ಎಂಥ ಕಟು ಸತ್ಯವಿದೆ! ನೋವಿದೆ! ಸತ್ಪುರುಷರ ಬಾಳಿನಲ್ಲಿನ ಒಂದು ರವೆಕಾಳಿನಷ್ಟು ಅಂಶವನ್ನಾದರೂ ಅನುಷ್ಠಾನಕ್ಕೆ ತರುವ ಶಕ್ತಿ ಇಲ್ಲದಿದ್ದರೂ ಹೋಗಲಿ, ಅವರ ಭಾವಚಿತ್ರವನ್ನು ಅನಾವರಣ ಮಾಡುವುದಕ್ಕೇನಂತೆ ಕ್ಷಣಕ್ಕೊಂದು ವೇಷ ತೊಟ್ಟುಕೊಂಡು ಎಷ್ಟು ಬೇಕಾದರೂ ಮಾಡಬಹುದು. ಬಹುಶಃ ಯಾವ ಅಷ್ಟಗ್ರಹ ಸಂಯೋಗವೂ ಇಂಥವರನ್ನು ಏನೂ

ಮಾಡುವುದಿಲ್ಲವೆಂದು ಕಾಣುತ್ತದೆ. ಪಂಚಾಂಗಗಳು ಸುಮ್ಮನೆ ಸಾರುತ್ತವೆ 'ಎಮ್ಮೆಗೆ ಒಂಟಿಗೆ ಕತ್ತೆಗೆ ಪೀಡೆ' ಎಂಬುದಾಗಿ. ಎಷ್ಟೇ ಪ್ರಳಯಗಳಾಗುವ ಸೂಚನೆ ತುಂಬಿದ್ದರೂ ಈ ರಾವಣರೇನು ಅಳ್ಳಾಡುವಂತಿಲ್ಲ:

"ರಾವಣಸಂಹಾರದ ಕಾಲದ ಹಾಗೆಯೆ
ಸಮಸ್ತ ಗ್ರಹಗಳು ಒಂದೇಕಡೆ
ಸೇರಿಕೊಂಡಿವೆ ಈ ಸಂವತ್ಸರದಲಿ
ಬಂತೊ ಭೂಮಿಗೆ ಇಂದೇ ಕಡೆ."

ವರ್ಷಭವಿಷ್ಯದ ಈ ಸಂದೇಶವನ್ನು ಕೇಳಿ ಕವಿವಾಣಿ ನಕ್ಕು ನುಡಿದಿದೆ:

"ರಾವಣಸಂಹಾರವೆ ? ಅಯ್ಯೊ ಮಂಕೆ
ನಂಬಬಹುದೆ ಈ ವಾಣಿಯನು ?
ರಾವಣ ಶಕ್ತಿಯೆ ಗುತ್ತಿಗೆ ಹಿಡಿದಿದೆ
ಎಂದಿನಿಂದ ಈ ಭೂಮಿಯನು !
ರಾಕ್ಷಸ ಶಕ್ತಿಯೆ ಸ್ಥಾಯಿಯಾಗಿರಲು
ಅವತಾರವೆ ಸಂಚಾರಿ !
ರಾವಣರದೆ ಈ ರಾಜ್ಯ ಎಂದಿಗೂ
ರಾಮುನಿಗೆಲ್ಲಿದೆ ರಹದಾರಿ ?"

"ಪ್ಲವಸಂವತ್ಸರದ ವರ್ಷಭವಿಷ್ಯ"
(ಅನಾವರಣ)

ಇದೀಗ ನಿಜವಾದ ಶಾಶ್ವತವಾದ ವರ್ಷಭವಿಷ್ಯ. ಜಗತ್ತಿನಲ್ಲಿ ಈಗಾಗಲೇ ನಡೆದು ಹೋಗಿರುವ ನಡೆಯುತ್ತಿರುವ ಅಲ್ಲೋಲಕಲ್ಲೋಲಗಳೇ ಇದಕ್ಕೆ ಸಾಕ್ಷಿ.

ಅತಿಥಿಯಾಗಿ ಬಂದ ನಂಟನಮೇಲೆ, ಹಲಗೆ ತೂಗುಹಾಕಿದ ಶ್ರೀಮಂತನಮೇಲೆ, ಅನಾವರಣದುತ್ಸವವನ್ನು ಆಚರಿಸಿದವರ ಮೇಲೆ, ಯಾರೆಂದರೆ ಅವರ ಮೇಲೆ ಸ್ಫೂರ್ತಿಯಿಂದ ಕವಿತೆ ರಚಿಸಿ ಅವರನ್ನೆಲ್ಲ ಬಯಲಿಗೆಳೆದ ಈ ಕವಿಯನ್ನ ಬಹುಶಃ ಯಾರೋ ಪ್ರಶ್ನಿಸಿರಬೇಕು. 'ಹೀಗೆಲ್ಲ ಕವಿತೆ ಬರೆಯುವುದು ಹೇಗೆ ?' ಎಂಬುದಾಗಿ. ಆ ಪ್ರಶ್ನೆಗೆ ನಗೆತುಂಬಿದ ಅವರ ಈ ಉತ್ತರವನ್ನು ನೋಡಿ:

"ಕವಿತೆ ಬರೆಯುವುದು ಬಹು ಸುಲಭ;
ಈ ಕಾಲದಲಿ ಇದರಿಂದ ಇಲ್ಲದೆ ಇಲ್ಲ
ಸಾಕಷ್ಟು ಲಾಭ
. . . . . . . . .
. . . . . . . . .
ಐದು ಕೇವಲ ಐದೇಐದು ರೂಪಾಯಿ
ಮನಿಯಾರ್ಡರನು ಮಾಡಿ
ಕಳಿಸಿಕೊಡುತ್ತೇವೆ ಸುಲಭೋಪಾಯ ಸಾಮಗ್ರಿಗಳ
ಮರುದಿನದ ಟಪ್ಪಾಲಿಗೆ.
. . . . . . .

ನಾ ಏಳಿಸುವುದಿಲ್ಲ ನಿಮ್ಮನ್ನು ಬೆಳಗಿನ ಝಾವ
ಸೂರ್ಯೋದಯದ ಸಂದರ್ಶನಕ್ಕೆ
ನೀವೇರಲೇಬೇಕಾಗಿಲ್ಲ ಇದುವರೆಗೂ ಕವಿಗಳೇರಿದ
ಹಳೆಯ ಗಿರಿನೆತ್ತಿಗೆ
ಆ ಪಾಡೆಲ್ಲ ಕಳೆದ ಕವಿಗಳಿಗೆ
ನಿಮಗೋ–
ಸಾಕು, ಬಚ್ಚಲಮನೆಯ ಕಿಟಕಿಯಾಚೆಗೆ ಕಾಂಬ ರೊಚ್ಚೆಯಲಿ
ಬಿದ್ದ ಸೂರ್ಯನ ಬಿಂಬ
ಆ ನಾಯಿ, ಈ ಬೆಕ್ಕು, ಪಕ್ಕದಮನೆಯ ಬಳೆಯ ದನಿ,
ಹಾಲಿನ ಬಾಕಿಗಾಗಿ ಜಗಳವಾಡುವ ಕವಾಡಿಗರ ಸಂಸ್ಕೃತ ಭಾಷೆ;

. . . . . . . . . .

. . . . . . . . . .

ಈ ಎಲ್ಲವನು ಹದವಾಗಿ ಬೆರೆಸು,
ತಲೆಯ ಗುಡಾಣದಲಿ ಇರುಳೆಲ್ಲ ಕುದಿಸು,
ಸಿದ್ಧವಾಯಿತು ಇನ್ನು ಹೊಸದೊಂದು ಶೈಲಿ
ಬಿಡು ರೈಲ ಮೈಲಿ ಮೈಲಿ!”

“ಕವಿತೆ ಬರೆಯುವುದು ಹೇಗೆ”
(ಅನಾವರಣ)

‘ನೀ ಬರೆದ ಕವಿತೆ ಬಡಪೆಟ್ಟಿಗರ್ಥವಾಗಲೇಬಾರದು ಯಾರಿಗೂ’ ‘ಸರಳ ಸುಂದರವಾಯ್ತೊ ಕೆಟ್ಟೆ.’

ಹೀಗೆ ಅವರಿವರನ್ನು ಹಾಸ್ಯಮಾಡುತ್ತ, ಆ ಹೊನಗೆಯ ಸನ್ನಿವೇಶವನ್ನು ಕವನ ರೂಪದಲ್ಲಿ ಬಿಡಿಸುತ್ತ ಮೈಮರೆತ ಕವಿಯನ್ನು ಕೈಹಿಡಿದ ಸತಿ ಒಮ್ಮೆ ಬಹು ಚೆನ್ನಾಗಿ ಆಕ್ಷೇಪಿಸಿದ್ದಾರೆ, ಎಚ್ಚರಿಸಿದ್ದಾರೆ:

“ಏನು ಕವಿತೆ ಬರೆಯುವಿರೋ
ಸಾಕಪ್ಪ ದೇವರೆ;
ಎಲ್ಲ ಮನೆಯ ಗಂಡಸರೂ
ನಿಮ್ಮಂತೆಯೆ ಇರುವರೆ!
ನನ್ನಡಿಗೆಯ ರುಚಿ ಇರುವುದೆ
ನೀವು ಬರೆದ ಕವಿತೆಗೆ?
ಉಣ್ಣಬಹುದೆ ತಿನ್ನಬಹುದೆ?
ತಣಿವುಂಟೇ ಹೊಟ್ಟೆಗೆ?
ಒಂದು ಗಂಡು ಒಂದು ಹೆಣ್ಣು
ನಾನು ಹಡೆದ ಕವಿತೆಯು
ಒಂದು ರನ್ನ ಒಂದು ಚಿನ್ನ
ಸಂತೋಷದ ಬುಗ್ಗೆಯು!

ನಗುವ ಅಳುವ ಕವಿತೆಗಿಂತ
ಬರೆವ ಕವಿತೆ ದೊಡ್ಡದೆ?
ಆ ಕವಿತೆಗೆ ಭ್ರಾಂತರಾಗಿ
ಈ ಕವಿತೆಯ ಮರೆವರೆ?

ಒಲೆಯು ಮುಂದೆ ಬಂದಾದರು
ನನ್ನಪಾಡ ನೋಡದೆ
ಕೋಣೆಯ ಕದವಿಕ್ಕಿ ಕುಳಿತು
ಒಳಗಿರುವಿರೆ ಸುಮ್ಮನೆ!

ಬಂದರೆ ಸರಿ ಹೊರಗೆ ಈಗ;
ಇಲ್ಲದಿರಲು ನೋಡಿರಿ:
ಇದೊ ನಿಮಗೆ ಒಂದು ಸುದ್ದಿ
ನನ್ನ ದೂರಬೇಡಿರಿ

ಒಲೆಯ ಬದಿಗೆ ನಿಮ್ಮ ಕುವರ
ನೀವು ಬರೆದ ಕಂತೆಯ
ತಂದಿರುವನು, ನಿಮಿಷದಲ್ಲಿ
ಮಾಡಬಹುದು ಬೂದಿಯ"

"ಆಕ್ಷೇಪಣೆ"
(ದೇವಶಿಲ್ಪ)

ಇವು ಕವಿ ತನ್ನ ಕವನಗಳ ಮೂಲಕ ಹರಿಸಿರುವ ಹಾಲುಬೆಳುದಿಂಗಳಿನಂಥ ನಗೆಯ ಹೊನಲು. ಇಲ್ಲಿಯ ರಚನೆಯಲ್ಲಿ ಸ್ವಲ್ಪವೂ ಕ್ಲಿಷ್ಟತೆ ಇಲ್ಲ, ಕಹಿ ಇಲ್ಲ. ಎಳೆನೀರಿನಂತೆ ತಿಳಿಗೆ ತಿಳಿ, ಸಿಹಿಗೆ ಸಿಹಿ.

* * *

ಮುಂದೆ, ಇದೇ ಕವಿಯಿಂದ ರಚಿತವಾದ ಆತ್ಮಗೀತೆಗಳ ಆಳ ಅಗಲಗಳನ್ನರಿತು ಮುನ್ನಡೆಯಬೇಕಾಗಿದೆ. ತಮ್ಮ ಹೊರಜೀವನದಲ್ಲಿ ಏನನ್ನು ಕಂಡು, ಉಂಡು, ಸೂಕ್ಷ್ಮವಾಗಿ ಅವಲೋಕಿಸಿ, ಆಳವಾಗಿ ಆಲೋಚಿಸಿ ಅದನ್ನು ಸವಿಯಾಗಿ, ನವಿರಾಗಿ, ನಿರೂಪಿಸಿದರೊ ಅದರಂತೆಯೇ ತಮ್ಮ ಅಂತರಂಗದ ಒಳಜೀವನವನ್ನು ಸೂಕ್ಷ್ಮವಾಗಿ ಪರೀಕ್ಷಿಸಿ ಅಲ್ಲಿನ ಓರೆಕೋರೆಗಳನ್ನು ಕಂಡು ನೊಂದಿದ್ದಾರೆ, ಬೆಂದಿದ್ದಾರೆ; ಅದನ್ನೆಲ್ಲ ಒಪ್ಪಗೊಳಿಸಿ ಸರಿಹಾದಿಯಲ್ಲಿ ಮೇಲೇರಲು ಹಂಬಲಿಸಿದ್ದಾರೆ.

ಜೀವನದಲ್ಲಿ ದುಃಖಸಂಕಟಗಳು ಮೊದಮೊದಲು ಎದುರಾದಾಗ ಮನಸ್ಸಿಗೆ ಏನೊ ಯಾತನೆ ಏನೊ ಕಸಿವಿಸಿ ಆಗುವುದುಂಟು. ಮುಂದೆ ಮತ್ತೆ ಮತ್ತೆ ಪೆಟ್ಟು ಬೀಳತೊಡಗಿದಾಗ ಆ ಸುಖದುಃಖದ ಕಣ್ಣುಮುಚ್ಚಾಲೆಯಾಟದ ಹಿಂದೆ, ನಮ್ಮ ಹಿಡಿತಕ್ಕೆ ನಿಲುಕದ ಯಾವುದೊ ಶಕ್ತಿ ಕಣ್ಮರೆಯಾಗಿ ನಿಂತು ಆಟವಾಡಿಸುತ್ತಿರುವುದರ ಅರಿವು ಮೂಡುತ್ತದೆ. ಯಾವುದೊ ಮೈಯಿಲ್ಲದ ಮನಸ್ಸಿನ ಕಾಣದ ಕೈ ತನ್ನ ಮಿಂಚಿನ

ಉಳಿಯಿಂದ ದೇವಶಿಲ್ಪವೊಂದನ್ನು ನಿರ್ಮಿಸುತ್ತಿರುತ್ತದೆ. ತನ್ನ ಈ ಅನುಭವವನ್ನು ಕವಿ 'ದೇವಶಿಲ್ಪ'ದಲ್ಲಿ ತುಂಬಿಕೊಟ್ಟಿದ್ದಾರೆ:

"ಸುತ್ತ ಮುತ್ತ ಕತ್ತಲು,
'ಏನು, ಯಾಕೆ'-ಕೇಳಬೇಡ,
ಅರಿವರಿಯದ ಬತ್ತಲು
ಟಕ್ಕ ಟಕ್ಕ ಟಕ್ಕ ಸದ್ದು
ಅತ್ತ ಇತ್ತ ಎತ್ತಲು?

'ಏನಿದೇನು?' 'ತಿಳಿಯೆ ನೀನು'
'ಏಕೆ ಬಿದ್ದೆ ಈ ಕಡೆ?'
ನಿನ್ನಂತೆಯೆ ನೂರು ಬಂಡೆ,
ಈಗ ಇದೇ ನಿಲುಗಡೆ

'ಟಕ್ಕ ಟಕ್ಕ ಟಕ್ಕ ಸದ್ದು
ಕೊರೆಯುತಿಹುದು ಜೀವನ'
'ಉಳಿಯ ಕಿರಣ ತೆರೆಯುತಿಹುದು
ನಿನ್ನನಂತ ಪದರವ!'

'ಅಯ್ಯೊ ನೋವು ಅಯ್ಯೊ ಪೆಟ್ಟು'
'ತಾಳಿಕೊಳ್ಳೊ ಕೀಟವೆ.
ಹಾರುತಲಿದೆ ಹುಡಿ ಹುಡಿ ಹುಡಿ
ಸಂಸ್ಕಾರದ ವಾಸನೆ
ತಿಳಿಯದಿದ್ದರೇನೊ ನಿನಗೆ
ದೇವಶಿಲ್ಪ ಕಲ್ಪನೆ'

'ನನ್ನನೇನು ಮಾಡುತಿರುವೆ
ಸಾಕು ಸಾಕು ನಿಲ್ಲಿಸು'
'ನಿನಗೇತಕೊ ಅದರ ಚಿಂತೆ?'
'ಸರಿಯೆ, ನನ್ನ ಸಾಯಿಸು'

'ಸಾವಲ್ಲವೊ ಮರುಳೆ ಇದು
ಸ್ವಸ್ವರೂಪ ಕಾರಣ.
ಕೃತಿಯು ಮುಗಿದ ಮೇಲೆ ಕಾಣೊ
ಆಕೃತಿಗಳ ದರ್ಶನ!'

"ದೇವಶಿಲ್ಪ"
(ದೇವಶಿಲ್ಪ)

ಆತ್ಮವಾಣಿಯ ಈ ಮೊಳಗು ಕಿವಿಗೆ ಮುಟ್ಟಿದಮೇಲೆ ನಗುವ ನಗುವಷ್ಟೆ ಅಲ್ಲ. ಸುರಿಸುವ ಕಣ್ಣೀರು ಜ್ಞಾನದಾನ ಮಾಡುವ ಜೀವನದ ಆಪ್ತಬಂಧುವಾಗುತ್ತದೆ:

ಕಣ್ಣೀರ ಹನಿಯಲ್ಲಿ ಮೊಗದ ನಗೆಯನು ಕಂಡು
ಕಣ್ಣೀರ ಹನಿಯಲ್ಲಿ ಜಗದ ಹೃದಯವ ಕಂಡೆ
ಕಣ್ಣೀರಿನಲಿ ವಿವಿಧ ಅನುಭವದ ಸವಿಯುಂಡೆ
ಕಣ್ಣೀರಿಗಿಂ ಮಿಗಿಲು ತತ್ವಬೋಧಕರಿಲ್ಲ
ಮುನ್ನೀರು ಎಂಬುದೂ ಕಣ್ಣೀರೆ ಎಲ್ಲ ?"

"ಕಣ್ಣೀರು"
(ಸಾಮಗಾನ)

ಇದೇ ಕಣ್ಣೀರಿನಿಂದಲೇ ಧೂಳು ಕಸ ತುಂಬಿನ ಅಂತರಂಗವೆಲ್ಲ ಶುದ್ಧವಾಗುವುದು. ಶತಶತಮಾನಗಳ ಕೊಳೆ ಅಲ್ಲಿ ಪದರಪದರವಾಗಿ ಬೀಡುಬಿಟ್ಟಿರುತ್ತದೆ. ಅದನ್ನೆಲ್ಲ ತೊಳೆಯುವುದಕ್ಕಾಗಿ ಎಷ್ಟು ಜನ್ಮಗಳವರೆಗೆ ಕಂಬನಿದುಂಬಿ ಹಂಬಲಿಸಬೇಕಾಗುತ್ತದೊ ಯಾರಿಗೆ ಗೊತ್ತು ? ಎಲ್ಲೆಲ್ಲಿ ನೋಡಿದರೂ 'ಪರೆಪರೆಯ ಜೇಡರಬಲೆ.'

"ಮನೆಯ ತುಂಬಾ ಧೂಳು
ಬೇಸರದ ಬೂದಿ !
ಗೆದ್ದಲೊ ಗೆದ್ದಲು
ಕಾಲಿಡಲು ಎಲ್ಲೆಲ್ಲು
ಇಲ್ಲವೊ ಹಾದಿ !
ಹೊರಗೆಲ್ಲ ಬಿರುಗಾಳಿ
ಮೊರೆದು ಹಾರಾಡುತಿದೆ
ತರತರನೆ ನಡುಗುತಿವೆ
ಮನೆಯ ಗೋಡೆ
ಯಾವ ಚಣವೊ ಏನೊ
ವಿಲಯವೈತರಬಹುದು,
ಕಡೆತನಕ ಈ ಮನೆಗೆ
ಇಂಥ ಪಾಡೆ ?"

"ಇಲ್ಲ ಬಿಡುಗಡೆಯಿಲ್ಲ ; ಅರೆನೆಳಲು ಬೆಳಕುಗಳ ವಿಕಾರದಪಶಕುನದಗ್ನಿಕುಂಡದಲಿ, ಬೇಯಬೇಕೆ ಇನ್ನು ದಿನದಿನದಲಿ ? ಬರಿ ಕತ್ತಲೇ ಇರಲಿ ಅಥವಾ ಬೆಳಕೇ ಬರಲಿ ಬೇಡ ಮಯ್ಯಾ ಬೇಡ ಅರೆಬೆಳಕು ನೆಳಲುಗಳ ಸಂದೆಯದ ಛಾಯೆ."

ಇಂಥ ಅರೆತಿಳಿವಿನ ನಡುವೆ ಸಿಲುಕಿಗ ಅಳುತುಂಬಿದ ಈ ಕೋಣೆಯಲ್ಲಿ ಮುದುಡಿ ಕುಳಿತ ಜೀವಕ್ಕೆ ಎಂದೋ ಒಮ್ಮೆ ಶುಭಕೋರಿ ಜ್ಞಾನರಶ್ಮಿಯೊಂದು ಇಳಿದುಬರುತ್ತದೆ. ಆದರೆ, ಎಂದು, ಯಾವ ರೂಪದಲ್ಲಿ ಹೇಗೆ ಬರುತ್ತದೆಯೊ ಹೇಳಲಾಗುವುದಿಲ್ಲ. ಏನೊ ಸದ್ದು, ಯಾರದೊ ಸುಳಿಪು, ಪರಿಚಯವಿಲ್ಲದ ಚಿತ್ರ ಇವಿಷ್ಟೆ !

"ಯಾರಿಗೂ ಬೇಡದೆಡೆ
ಯಾರೋ ಬಂದಂತಾಯ್ತು
ಬಾಗಿಲಿಲ್ಲ !
ಕದವ ತಳ್ಳಿದರಾರೊ !

ಗಿರುಕೆಂದಿತು,
ಯಾವ ಬೆಳಕೊ ಏನೊ
ಒಳಗೈದಿತು !
ಆ ಅದೋ ನೋಡಲ್ಲಿ
ನಿಂತಿರುವನವನು !
ಯಾವ ಸೀಮೆಯ ವೇಷ
ಯಾರು ಇವನು ?

"ಕಾರಣಿಕ"
(ದೇವಶಿಲ್ಪ)

ಮನೆಯ ಅಪಶಕುನಕ್ಕೆ ಸಾವು ಬಂದಂತೆ ಬಾಗಿಲಿನ ಹೊರಗೆ ಶುಭದ ಬುಡುಬುಡಿಕೆ ಹಿಡಿದುನಿಂತ ಅವನು 'ಎನಿತೊ ಜೀವದ ಕರ್ಮಫಲವ ಹೊತ್ತಂತೆ' ನೈತುಂಬ ಹಳೆಬಟ್ಟೆಯನ್ನು ತೊಟ್ಟುನಿಂತಿದ್ದಾನೆ. ಆದರೆ ಕಸತುಂಬಿರುವ ಈ ಮನೆಗೆ ಆ ಮಂಗಳರೂಪನನ್ನು ಸ್ವಾಗತಿಸುವುದು ಹೇಗೆ ? ಯಾವ ಮುಖದಲ್ಲಿ ಆದರಿಸಿ ಆಹ್ವಾನವೀಯುವುದು ? ಕೊನೆಗೊಮ್ಮೆ ಇದಕ್ಕಾಗಿ ಆತನ ಚರಣದಲ್ಲಿಯೇ ಕ್ಷಮೆ ಯಾಚಿಸಬೇಕಾಗುತ್ತದೆ.

"ಮನೆಯ ತಲವಾಗಿಲಲಿ ನಿಂತಿರುವ ದೊರೆಯೆ
ಒಳಗೆ ದಯಮಾಡೆನಲು ದನಿಯಿಲ್ಲವೆನಗೆ,
ನನ್ನ ಕೋಣೆಯ ತುಂಬ ಯುಗಯುಗದ ಕಸ ತುಂಬಿ
ನಾನೆ ನಾಚುವ ಹಾಗೆ ಬಿದ್ದಿರುವುದು.

ನನ್ನ ಪುಣ್ಯೋದಯದ ಫಲವಾಗಿ ನೀನಿಂದು
ನನ್ನ ಮನೆಬಾಗಿಲಿಗೆ ದಯಮಾಡಿಸಿರುವೆ,
ಮನೆಯ ಗುಡಿಸದೆ ನಾನು ಮುಸುಕೆಳೆದು ಮಲಗಿದ್ದೆ
ಕಸದಲ್ಲಿ ನಾನೊಂದು ಕಸವಾಗುತ.

ಇಂದು ನೀ ಬಂದಿರುವೆ, ಗುಡಿಸಲೂ ಹೊತ್ತಿಲ್ಲ
ಯಾವ ಮಂಕೋ ಏನೋ ಕವಿದಿತ್ತು ನನಗೆ,
ಕಣ್ಣೀರು ಹರಿಯುತಿದೆ, ತಪ್ಪೆನ್ನದೈ ದೊರೆಯೇ
ಅಲಕ್ಷ್ಯವನು ಕ್ಷಮಿಸು ಕರುಣಿಸೆನಗೆ."

"ಅಪರಾಧ"
(ಸಾಮಗಾನ)

ತುಂಬುಹೃದಯದಿಂದ ನಂಬಿನುಡಿದ ಈ ಪ್ರಾರ್ಥನೆಗೆ ಬೆಲೆಯಿತ್ತು ಕ್ಷಮೆನೀಡಿ ಮತ್ತೊಮ್ಮೆ ಬರುವುದಾಗಿ ಆಶ್ವಾಸನೆ ನೀಡಿ ಹೋಗುತ್ತಾನೆ. ಆದರೆ ಅವನು ಅತ್ತ ತೆರಳಿದಮೇಲೆ ಇತ್ತ ಇದೇ ಪ್ರವೃತ್ತಿ ಹಳೆಯ ಹೇಯ ಮನೋಭಾವದ ಪೆಡಂಭೂತ ಬಂದು ಅಲ್ಲಿ ಮನೆಮಾಡಿಕೊಳ್ಳುತ್ತದೆ. ಮೊದಲೇ ಧೂಳು ತುಂಬಿದ ಮನೆ ಕಾಲ ಸರಿದಂತೆ ಇನ್ನಷ್ಟು ಪಾಳುಬೀಳುತ್ತದೆ. ಜೀವನದಲ್ಲಿ ಬೀಸುವ ಬಿರುಗಾಳಿಗೆ ಭೋರಿಡುವ ಮಳೆಗೆ ಎದೆಯೊಡ್ಡಿ ಆ ಮನೆ ನಿಲ್ಲಲಾರದು. ಕೊಚ್ಚಿಹೋಗುವುದೇ ಹೆಚ್ಚು. ಆ ಭೀಕರ ಮಳೆಯಲ್ಲಿ ನಿಲ್ಲಲು ನೆಲೆಯಿಲ್ಲದೆ ಜೀವ ಆಶ್ರಯಕ್ಕಾಗಿ ಅಲೆಯುತ್ತದೆ. ಅವರಿವರನ್ನು ಬೇಡುತ್ತದೆ :

"ಗುಬ್ಬಕ್ಕಾ ಗುಬ್ಬಕ್ಕಾ ಬಾಗಿಲು ತಗೀ......"
ಭೋರೆಂಬ ಸುರಿಮಳೆ ; ಕಾರೆಂಬ ಕತ್ತಲು
ಹೆಪ್ಪುಗಟ್ಟಿದ ಕಪ್ಪು ಕರಗಿ ಮಳೆಹನಿಯಾಗಿ
ರಪರಪನೆ ಬಡಿದಿದೆ
ಮಿಂಚು ನಾಗರ ಸಂಚು ಮುಗಿಲುದ್ದ ನಾಲಗೆ ಚಾಚಿ
ಹರಿದಾಡಿದೆ
..................................
ಗುಬ್ಬಕ್ಕಾ ಗುಬ್ಬಕ್ಕಾ ಬಾಗಿಲು ತಗಿಯೇ"

"ಜಡಿಮಳೆಯ ಇರುಳಿನಡಿ"
(ದೀಪದ ಹೆಜ್ಜೆ)

ಯಾವುದು ನಮ್ಮನ್ನು ಇಂಥ ಅಸಹ್ಯಸ್ಥಿತಿಗೆ ಒಳಗುಮಾಡಿತೊ ಆ ಕ್ಷುದ್ರಶಕ್ತಿಯನ್ನು ಗೆಲ್ಲುನವರೆಗೆ ಹೀಗೆ ಕಾಯುತ್ತಲೇ ಇರಬೇಕು. ಅದನ್ನು ನಂಬಿ ಜಾರಿಬೀಳುವುದಕ್ಕೆ ಮುಂಚೆಯೇ ಆತ್ಮ ಎಚ್ಚರಿಸಿತ್ತು, ಬಾಳಬೇಕಾದ ರೀತಿಯನ್ನು ಒತ್ತಿಹೇಳಿತ್ತು. "ಬಾಡಿಗೆಯ ಮನೆಯಿಂದ ಬಾಡಿಗೆಯ ಮನೆಗೆ ನಡೆದಿರುವೆ, ಇರುವ ಮನೆಯನು ಮೊದಲು ಸರಿಮಾಡಿಕೋ ಕಸಗುಡಿಸು; ದೀಪವ ಹಚ್ಚು; ಈ ಐವರನು ನಂಬದಿರು ಆದಷ್ಟು ದೂರವಿರಿಸು—" ("ನಿರ್ಝರ") ಮೊದಮೊದಲು ಈ ಎಚ್ಚರಿಕೆಯ ನುಡಿಗೆ ಬೆಲೆಕೊಡಲಿಲ್ಲ. ಕೆಟ್ಟಮೇಲೆ ಬುದ್ಧಿ ಬಂದಿತ್ತು. ಕುಸಿದುಬಿದ್ದಿದ್ದರೂ ಉಸಿರಿರುವವರೆಗೆ ಹೋರಾಡುವೆನೆಂದು ನಿಶ್ಚೈಸಿ ಅದರೊಂದಿಗೆ ಕಾದಿದ ಜಾಗೃತ ಚೇತನಕ್ಕೆ 'ಬಾಳ ಬೀದಿಯ ಬದಿಗೆ' 'ಬೆಳ್ಗೊಳದ ಗೊಮ್ಮಟನ ನಗೆಯ ಬೆಳುದಿಂಗಳಂಗಡಿ'ಯಲ್ಲಿ ಕಣ್ತೆರೆಯುತ್ತದೆ. ಯಾರನ್ನು ತಾನು ಶತ್ರುಗಳೆಂದು ತಿಳಿದು ಹೋರಾಟ ನಡೆಸಿದ್ದೆನೊ ಅದೇ ಶಕ್ತಿಗಳೇ ಆತ್ಮೀಯರಾಗಿ ಹರಸಿ ನುಡಿಯುತ್ತವೆ. "ಪಗೆಗೆ ಪಗೆ ಕೆಳೆಗೆ ಕೆಳೆ" ನಾವು. ಹಾರೈಸುವೆವು ನೀನಾಗು ಬುದ್ಧ. 'ನಿನ್ನ ಸೇವೆಗೆ ನಾವು ಎಂದಿಗೂ ಸಿದ್ಧ.' ಈ ಪವಾಡ ದರ್ಶನವಾದಮೇಲೆ ಶರಣಪಥ ತಾನೇ ತಾನಾಗಿ ಕಣ್ಣಿಗೆ ಗೋಚರಿಸುತ್ತದೆ; ನಮ್ಮ ಶ್ರದ್ಧೆಯೇ ನಮ್ಮನ್ನು ಕೈಹಿಡಿದು ನಡೆಸುತ್ತದೆ. "ಕಲ್ಲುಮುಳ್ಳಿನ ಹಾವು ಚೇಳಿನ ಪರಂಪರೆಯು ಸುತ್ತ! ಬೆಂಕಿಯ ಬೇಲಿ, ಶೂಲದ ಬಾಗಿಲು! ಅಲ್ಲೊಂದು ಅಗ್ನಿಯ ಕುಂಡ, ಇಲ್ಲೊಂದು ವಿಷಪಾತ್ರೆ, ಅತ್ತ ಕಲ್ಲಿನ ಗಾಣ, ಇತ್ತ ಮುಳ್ಳಿನ ಮಕುಟ ಮತ್ತೆ ಸಿಡಿಗುಂಡುಗಳ ಧೂಮಜ್ವಲನದ ಮಾಲೆ—ಇವೇ ಈ ಹಾದಿಯಲಿ ಕೈಮರ!" ಇಂಥ ಹಾದಿಯಲ್ಲಿ ನಡೆದು ಗುರಿಸೇರಬೇಕಾಗಿದೆ :

"ಬೇಕೆ ನಿನಗೀ ಹಾದಿ? ಕೆಚ್ಚಿಹುದೆ ಎದೆಯಲ್ಲಿ?
ನಚ್ಚಿಹುದೆ ಸತ್ವದಲಿ ಮತ್ತೆ ಶಿವಲೀಲೆಯಲಿ?
ಬಲುನೇರ ಬಲುಧೀರ ಬಲುಹರಿತ ಶರಣಪಥ
ಪಾರ್ಥಸಾರಥಿಯಿರಲು ನಡೆಸಿಬಿಡು ನಿನ್ನ ರಥ!"

"ಶರಣಪಥ"
(ದೇವಶಿಲ್ಪ)

ಇಂಥ ಕೆಚ್ಚು, ಇಂಥ ಶ್ರದ್ಧೆ ಹೃದಯದಲ್ಲಿ ಆನಿರ್ಭವಿಸಿದ ಮೇಲೆ ಗುರಿಸೇರುವುದರಲ್ಲಿ ಸಂಶಯವೇನಿದೆ. ಆ ಪಥದಲ್ಲಿ ಕಾಣುವ ದೀಪದ ಹೆಜ್ಜೆಗಳ ನಡುವೆ ಈ ಚೇತನದ ದೀಪದ ಹೆಜ್ಜೆಯೂ ಮೂಡಿಯೇ ಮೂಡುತ್ತದೆ. ಮೂಡುತ್ತದೆ ಏಸು, ಆಗಲೆ ಒಂದೆರಡು ಮೂಡಿಯೆ ಇದೆ!

* * *

ಕೊನೆಯದಾಗಿ ಈ ಕವಿಯಿಂದ ರಚಿತವಾದ ಒಂದೆರಡು ವಿಶೇಷ ಕವನಗಳ ಪರಿಚಯವಿತ್ತು ಈ ಸಮಾಲೋಕನವನ್ನು ಮುಗಿಸುತ್ತೇನೆ. 'ಊದು ಬತ್ತಿಯು ನವ್ರುಗೆರೆಯ ಧೂಪದಂತೆ' ವಿಷಯದಲ್ಲಿ, ಆದರ ನಿರೂಪಣೆಯಲ್ಲಿ, ತನ್ನದೇ ಆದ ವಿಶೇಷತೆಯನ್ನು ಪಡೆದ ಕೆಲವೇ ಕವನಗಳಲ್ಲಿ 'ಜಡೆ'ಯೂ ಒಂದು. ನೂತನವಾದ, ರಮ್ಯವಾದ, ಒಪ್ಪವಾದ ಈ ಕವಿತೆಯಲ್ಲಿ ಅಂಥ ಇಂಥ ಜಡೆ ಎಂಬುದೇನಿಲ್ಲ; ಎಲ್ಲ ರೀತಿಯ ಜಡೆಗಳೂ ಭಾಗವಹಿಸಿವೆ, ಕವಿಯ ನೇತೃತ್ವದಲ್ಲಿ—

"ಲಲನೆಯರ ಬೆನ್ನಿನೆಡೆ
ಹಾವಿನೊಲು ಜೋಲ್ವಜಡೆ
ಕಾಳಿಂದಿಯಂತಿಳಿದು, ಕೊರಳೆಡೆಗೆ ಕವಲೊಡೆದು
ಅತ್ತಿತ್ತ ಹರಿದ ಜಡೆ!
ಮೋಟು ಜಡೆ, ಚೋಟು ಜಡೆ,
ಚಿಕ್ಕವರ ಚೆನ್ನ ಜಡೆ
ಎಣ್ಣೆ ಕಾಣದೆ ಹಿಣಿಲು ಹಿಣಿಲಾಗಿ ಹೆಣೆದ ಜಡೆ
ಬೆವರಿನಲಿ ಧೂಳಿನಲಿ ನೆನೆದಂಟಿಕೊಂಡಿರುವ
ಗಂಟು ಜಡೆ!
ಅಕ್ಕತಂಗಿಯ ಮುಡಿಯ
ಹಿಡಿದು ನಾನೆಳೆದಂಥ
ಮಲ್ಲಿಗೆಯ ಕಂಪು ಜಡೆ
ಕೇದಗೆಯ ಹೆಣೆದ ಜಡೆ
ಮಾತೃಮಮತಾ ವೃಕ್ಷ ಬಿಟ್ಟ ಬೀಳಲಿನಂತೆ
ಹರಡಿರುವ ತಾಯಜಡೆ!
"ಕುರುಕುಲ ಜೀವಾಕರ್ಷಣ ಪರಿಣತ" ಆ
ಪಾಂಚಾಲಿಯ ಜಡೆ
ಸೀತೆಯ ಕಣ್ಣೀರೊಳು ಮಿಂದ ಜಡೆ
ಓ ಓ ಈ ಜಡೆಗೆಲ್ಲಿ ಕಡೆ!"

ಜಗತ್ತಿನಲ್ಲಿ ಎಷ್ಟು ತೆರೆದ ಜಡೆಗಳಿವೆಯೋ ಅಷ್ಟು ಜಡೆಗಳೂ ಇಲ್ಲಿ ತಮ್ಮ ನಾನಾ ರೂಪಗಳಿಂದ ಮನಸೆಳೆದಿವೆ. ಸಾಮಾನ್ಯ ಲಲನೆಯರಿಂದ ಸೀತೆ ಪಾಂಚಾಲಿಯವರೆಗೆ ಎಲ್ಲರ ಬೆನ್ನ ಹಿಂದಿನ ಜಡೆಗಳೂ ಇಲ್ಲಿ ಸಮಾವೇಶಗೊಂಡಿವೆ. ಕವಿಗೆ ಇಷ್ಟು ಜಡೆಗಳ ಸೌಂದರ್ಯವೂ ತೃಪ್ತಿನೀಡದೆ ಇನ್ನೂ ಮೇಲೇರಿಹೋಗಿದೆ. ಕವನದ ಉತ್ತರಾರ್ಧದಲ್ಲಿ

ಇಡೀ ಸೃಷ್ಟಿಯೇ ಕವಿದೃಷ್ಟಿಗೆ ಜಡೆ ನಿಬಿಡವಾಗಿ ಕಂಡಿದೆ. ಅದಿಲ್ಲದ ನೆಲೆಯೆ ಇಲ್ಲ. ಎತ್ತೆತ್ತ ತಿರುಗಿದರೂ ಆದಿ ಅಂತ್ಯಗಳಿಲ್ಲದ ಆ ನೀಳಜಡೆಗಳೇ ಜಡೆಗಳು. 'ಸಂಜೆಯಲು ಹಗಲು ಕೆದರುವ ಕತ್ತಲೆಯ ಕಾಳಜಡೆ, ಬೆಳಗಿನಲಿ ಇರುಳು ಬಿಚ್ಚುವ ಬೆಳ್ಳನೆಯ ಬೆಳಕುಜಡೆ, ಒಮ್ಮೊಮ್ಮೆ ಮುಗಿಲಲ್ಲಿ ತೇಲುತ್ತ ಬರುವಂಥ ಬೆಳ್ಳಕ್ಕಿಗಳ ಜಡೆ, ಕೊಂಬೆಗಳ ಜಡೆ, ಮರಮರದಿ ಬಳುಕುತಿಹ ಹೂಬಿಟ್ಟ ಬಳ್ಳಿಜಡೆ! ಕಾಡುಬಯಲಿನ ಹಸುರು ಹಸರದಲಿ ಹರಿಹರಿದು ಮುನ್ನಡೆವ ಹೊಳೆಯ ಜಡೆ, ಶ್ರೇಣಿಶ್ರೇಣಿಗಳಾಗಿ ಹರಿದಿರುವ ಗಿರಿಯ ಜಡೆ! ಗಿರಿಶಿವನ ಶಿರದಿಂದ ಹಬ್ಬಿ ಹಸರಿಸಿ ನಿಂದ ಕಾನನದ ಹಸುರು ಜಡೆ, ನಕ್ಷತ್ರಗಳ ಮುಡಿದ ನಟ್ಟಿರುಳ ನಭದ ಜಡೆ! ಮುಂಗಾರು ಮೋಡಗಳು ದಿಕ್ಕುದಿಕ್ಕಿಗೆ ಬಿಚ್ಚಿ ಹರಡಿರುವ ಮಳೆಯ ಜಡೆ! ಚಂದ್ರಚೂಡನ ವ್ಯೋಮಕೇಶನ ವಿಶ್ವವನೆ ವ್ಯಾಪಿಸುತ ತುಂಬಿರುವ ಜಡೆ! ಗಾನಗಳ ಕಾವ್ಯಗಳ ಶಿಲ್ಪಗಳ ಕಲೆಯ ಜಡೆ.

> "ಎಲ್ಲವೂ ರಮ್ಯವೆಲ್ಲ !
> ಜಡೆಯಾಚೆ ತಿರುಗಿಸಿದ ತಾಯಮುಖ ಮಾತ್ರ ಇಂದಿಗೂ
> ಕಾಣದಲ್ಲ !

"ಜಡೆ"

(ಚೆಲುವು–ಒಲವು)

ಜಡೆಯ ತುದಿಗೆ ಕಟ್ಟಿದ 'ಕುಚ್ಚು' ಅದರ ಸೌಂದರ್ಯಕ್ಕೆ ಇನ್ನಷ್ಟು ಶೋಭೆಯನ್ನು ತಂದುಕೊಡುವಂತೆ ಈ ಭಾವದ ಜಡೆಗೆ ಕಟ್ಟಿದ ಈ 'ದರ್ಶನದ ಕುಚ್ಚು' ಅದರ ರಮ್ಯತೆಯನ್ನು ಮತ್ತಷ್ಟು ಹೆಚ್ಚಿಸಿದೆ. ಅರ್ಜುನನಿಗೆ ಶ್ರೀಕೃಷ್ಣನ ನಿಮಿತ್ತದಿಂದ ವಿಶ್ವರೂಪ ದರ್ಶನ ದೊರೆತಂತೆ, ಯಾವುದೊ ಒಂದು ಜಡೆಯನ್ನು ನಿಮಿತ್ತವಾಗಿ ಮಾಡಿಕೊಂಡು ಮೈದೋರಿದ ಉನ್ನತಭಾವದಿಂದಾಗಿ ಜಡೆಯ ವಿಶ್ವರೂಪ ದರ್ಶನವನ್ನೇ ಪಡೆಯುವಂತಾಗಿದೆ. ಆ ದರ್ಶನದ ಒಂದು ಎಳೆಯ ನೆರವಿನಿಂದ ಜಡೆಯ ಈ ತ್ರಿವಿಕ್ರಮರೂಪವನ್ನು ಪರಿಭಾವಿಸುವ ಓದುಗ ಮೂಕವಿಸ್ಮಿತನಾಗದೆ ಬೇರೆ ವಿಧಿಯೇ ಇಲ್ಲ.

ಬ್ರಹ್ಮಾಂಡದ ಒಂದೊಂದು ಪದರವೂ ಜಗನ್ಮಾತೆಯ ಒಂದೊಂದು ನೀಳವಾದ ಜಡೆ ಎಂಬುದನ್ನು ನಮ್ಮಲ್ಲಿಯೂ ಮಿಂಚಿಸಿದ ಈ ಉತ್ಕೃಷ್ಟ ಕವಿತೆ ಸದಾ ನಮ್ಮ 'ನೆನಪಿನ ಜಡೆ'ಯಲ್ಲಿ ಉಳಿದೇ ತೀರುತ್ತದೆ.

ಜಡೆಯಂತೆ ತನ್ನ ಸ್ವಸ್ವರೂಪವನ್ನ ಸ್ಪಷ್ಟವಾಗಿ ಕಾಣಿಸದೆ ಸಾಮಾನ್ಯತೆಯ ಹೊದಿಕೆಯಲ್ಲಿ ತನ್ನ ಶ್ರೇಷ್ಠತೆಯನ್ನು ಹುದುಗಿಸಿಕೊಂಡು ಮಾನವರು ಸದಾ ಎರಡು ನಿಗೂಢ ಶಕ್ತಿಗಳ ರೀತಿನೀತಿಗಳನ್ನು ಪ್ರತಿಮಾರೂಪವಾಗಿ ರೂಪಿಸಿ ತೋರಿಸಿರುವ, 'ಹಳೇ ಪೇಪರ್ ಖಾಲಿ ಶೀಶೆ' ಒಂದು ಶಕ್ತಿ ತನ್ನ ಸುತ್ತಮುತ್ತಲಿನ ಕಸವನ್ನೆಲ್ಲ ಹೊರ ಹಾಕಬಯಸಿದರೆ ಇನ್ನೊಂದು ಆದಷ್ಟೂ ಅದರ ನಡುವೆಯೇ ಬಾಳಬಯಸುತ್ತಿದೆ:

> ಹಳೇ ಪೇಪರ್ ಖಾಲಿ ಶೀಶೆ,
> ಹಳೇ ಪೇಪರ್ ಖಾಲಿ ಶೀಶೆ

ಕೂಗೋ ಮರಿ ಆತನ
ಎಷ್ಟೊಂದಿವೆ ಈ ಮನೆಯಲಿ
ಇಂಥ ವಸ್ತು ಪುರಾತನ
ಹಾಗೆಯೇ ಇತ್ತೀಚಿನ !
ಕಾಲಿಟ್ಟೆಡೆ ಖಾಲಿ ಶೀಶೆ
ಮೂಲೆ ತುಂಬ ಹಳೆ ಪೇಪರು
ಇದನು ಗುಡಿಸಿ ಇದನು ಬಳಿದು
ಕೊಟ್ಟಾದರು ತೊಳೆಯಬೇಕು
ಹಳೆಯ ಹೊಲಸು ಕಸವನು
ಆಗ ಮಾತ್ರ ಒಪ್ಪವಾಗಿ
ಇಡಬಹುದೋ ಏನೋ ಕಾಣೆ
ನಮ್ಮದಾದ ಮನೆಯನು.

ಜಗತ್ತಿನ ಮೂಲೆ ಮೂಲೆಯಲ್ಲಿ ಎಲ್ಲೆಂದರಲ್ಲಿ ತುಂಬಿಕೊಂಡ ಕೆಲಸಕ್ಕೆ ಬಾರದ ಹಳೇ ಪೇಪರುಗಳನ್ನು, ಮನುಷ್ಯತ್ವದ ಸುಳಿವೇ ಇಲ್ಲದ ಶುಷ್ಕವಾದ, ಶೂನ್ಯವಾದ ಖಾಲಿ ಶೀಶೆಗಳನ್ನು, ಸಹಾನುಭೂತಿ ಅನುಕಂಪಗಳ ನೂಲಿನಿಂದ ನೆಯ್ದು ಮಾಡಿದ ಪುಣ್ಯಪುರುಷನ ಗೋಣಿಚೀಲಕ್ಕೆ ಹಾಕಿ ಲೋಕದ ನೈರ್ಮಲ್ಯವನ್ನು ಕಾಪಾಡಬೇಕು. ಆದರೆ ಸಾತ್ವಿಕ ಶಕ್ತಿಯ ಈ ಇಚ್ಛೆ ಸುಲಭವಾಗಿ ನೆರವೇರಲು ಅವಕಾಶ ನೀಡುವುದಿಲ್ಲ, ಅದಕ್ಕೆ ವಿರುದ್ಧವಾದ ಶಕ್ತಿಗಳು. ಅವು ಲೋಕದ ಶುಚಿಯನ್ನು ಕಿಂಚಿತ್ತೂ ಬಯಸುವುದಿಲ್ಲ. ಸತ್ಪುರುಷರ ನೆರಳ ಸೋಂಕೇ ಅದಕ್ಕೆ ಸಹ್ಯವಾಗುವುದಿಲ್ಲ. ತಮ್ಮ ಪಾಡಿಗೆ ತಾವು ಸಮೃದ್ಧವಾಗಿ ನೆಲೆಗೊಳ್ಳುವುದಕ್ಕೆ ಅಡ್ಡಿಯಾಗಿ ಪುನಃ ಪುನಃ ಬಂದು ಕಾಡುವ ಖಾಲಿಶೀಶೆಗಳಿಗಾಗಿ ಕೈ ನೀಡುವ ವ್ಯಕ್ತಿಗೆ ಹಿಡಿಹಿಡಿ ಶಾಪ ಹಾಕುತ್ತದೆ, ಗೊಣಗುತ್ತದೆ :

[ಹಳೇ ಪೇಪರ್ ಖಾಲಿ ಶೀಶೆ
ಸದ್ಯ ಇವನು ತೊಲಗಲಿಲ್ಲ
ನಡಹಗಲಲ್ಲಿ ಹಾಳುಶನಿ
ನಮ್ಮ ಮಾನಮರ್ಯಾದೆಯ
ಇವನು ಹೀಗೆ ತೆಗೆಯಬಹುದೆ
ಸುರಿವ ಹಾಳು ಹಗಲಲಿ !]
.......................
ಇವನಪ್ಪನ ಮನೆಯ ಗಂಟು,
ಅವಗು ಇವಗು ಏನು ನಂಟು ?
ಇವನಾವನೋ ಸದಾ ಬಂದು
ಹೀಗೆ ಅರಚಿ, ನಿಲ್ಲುವವನು
ಯುಗಯುಗವೂ ಬರುವೆನೆಂದು
ಬಾಂಡು ಬರೆದು ಕೊಟ್ಟಹಾಗೆ
ನಮ್ಮ ಹಳೇ ಪೇಪರ್ ಶೀಶೆ

ಗುತ್ತಿಗೆಯನು ಹಿಡಿದ ಹಾಗೆ,
ಇವನಿಗೇಕೊ ಇಂಥ ಕರ್ಮ
ಇವನೊಬ್ಬನು ಕಳ್ಳಕೊರಮ
ಕೆತ್ತುಹಿಡಿದು ದಬ್ಬಬೇಕು
ಶಿಲುಬೆಗಿಟ್ಟು ಬಡಿಯಬೇಕು
ಸಿಡಿಗುಂಡಿಗೆ ಒಡ್ಡಬೇಕು.
ಇವನ ಒಡಕು ಬಾಯನು,
ನಮ್ಮೊಳಗಿನ ಕಸದ ಚಿಂತೆ
ಇವನಿಗೇಕೊ ಕಾಣೆನು !"

"ಹಳೇ ಪೇಪರ್ ಖಾಲಿ ಶೀಶೆ"
(ಅನಾವರಣ)

ಮಾನವ ಜಗತ್ತಿನ ತುಂಬ ತುಂಬಿರುವ ಹಳೇ ಪೇಪರ್ ಖಾಲಿ ಶೀಶೆಗಾಗಿಯೇ ಅವತರಿಸಿ ಬಂದ ಸಂತಕ್ರಿಸ್ತನನ್ನ ಶಿಲುಬೆಗಿಟ್ಟು ಬಡಿದುದಾಯಿತು. ಬಾಪೂಜಿಯನ್ನು ಸಿಡಿಗುಂಡಿಗೆ ಒಡ್ಡಿದುದಾಯಿತು. ಬಸವೇಶ್ವರರಂಥಹವರ ಮೇಲೆ ಕೋಪ ಕಾರಿದುದಾಯಿತು. ಇನ್ನು ಉಳಿದಿರುವುದಾದರೂ ಏನು ?

ಇವಿಷ್ಟೆ ! ಜಗತ್ತನ್ನು ಸುತ್ತಿಮುತ್ತಿ ಒಂದು ಕಡೆ ಉದ್ಧಾರದ ಕಡೆಗೆ, ಇನ್ನೊಂದು ಕಡೆ ಪತನದ ಕಡೆಗೆ ಎಳೆದಾಡುತ್ತಿರುವ ಈ ಎರಡು ಜೀವಂತ ಶಕ್ತಿಗಳ ಅತಿ ಸಹಜವಾದ ಆಸೆ, ಆಕಾಂಕ್ಷೆಗಳನ್ನು, ರೀತಿನೀತಿಗಳನ್ನು ಇಂಥ ಸರ್ವಸಾಮಾನ್ಯವಾದ ಪ್ರತಿಮೆಯ ಮೂಲಕ ಬಿಡಿಸಿ ತೋರಿಸಿರುವ ಕವಿಪ್ರತಿಭೆ ನಿಜವಾಗಿಯೂ ಹಿರಿದಾದುದು, ವಂದನೀಯವಾದುದು. ಕಾವ್ಯಶ್ರೀ ತನಗೆ ತೋರಿಸಿದ ಈ ನಿಗೂಢ ಅರ್ಥವನ್ನು ಕವಿತೆಯ ರೂಪದಲ್ಲಿ ನಮಗೂ ತಂದಿತ್ತ ಈ ಕವಿಗೆ ಆ ಭಾವವನ್ನು ತುಂಬಿಕೊಂಡ ಚೇತನಗಳೆಲ್ಲಾ ಸದಾ ಋಣಿಯಾಗಿರುತ್ತವೆ.

ತನ್ನಲ್ಲಿನ ಸೌಂದರ್ಯದಿಂದ ಸರಳತೆಯಿಂದ, ಮಾಸಿಹೋಗುವ ಸತ್ವದಿಂದ ಕವಿಯ ಹಿರಿಮೆಯನ್ನ ಎತ್ತಿಸಾರುವ ಏಕೈಕ ನೀಳ್ಗವನ 'ಬೀಳ್ಕೊಡಿಗೆ.' ನವವಧುವಿಗಾಗಿ ತವರೂರನ್ನು ಬಿಟ್ಟು ಹೊರಟಿರುವ ಹಳ್ಳಿಯ ಹೆಣ್ಣುಮಗಳೊಬ್ಬಳ ದುಃಖ ಸಂತೋಷ ಮಿಶ್ರವಾದ ಭಾವಭಂಗಿಗಳನ್ನು ತಾವೇ ವಧುವಾಗಿ ಅನುಭವಿಸಿರುವರೊ ಎನ್ನುವಷ್ಟು ಜೀವಂತವಾಗಿ ಚಿತ್ರಿಸಿ ಇಟ್ಟಿದ್ದಾರೆ.

ತನ್ನ ಬೆಳ್ಳಕ್ಕಿಮಾಲೆಗಳ ಅಕ್ಷತೆಯನ್ನೆರಚಿ ತನ್ನ ಮಗಳನ್ನು ಹರಸಿ ಬೀಳ್ಕೊಡುವ ಹಸಿರು ಸೀರೆಯನ್ನುಟ್ಟ ಆ ಪುಟ್ಟ ಹಳ್ಳಿ, ತಾಯಿಲ್ಲದಿದ್ದರೂ ತನ್ನನ್ನು ತಾಯಾಗೆ ಸಾಕಿ ಸಲಹಿದ ಹುಟ್ಟಿದೂರನ್ನು ಕಂಬನಿದುಂಬಿ ಬೀಳ್ಕೊಡುವ ಆ ಹೆಣ್ಣು ಮಗಳು, ಈ ಚಿತ್ರಗಳೆಲ್ಲಾ ಮನಸ್ಸಿನ ಮೇಲೆ ಚಿರಮುದ್ರೆಯನ್ನೊತ್ತಿ ನಿಲ್ಲುತ್ತವೆ. ಅದನ್ನೆಲ್ಲ ನವಿರಾಗಿ ಪದರಪದರವಾಗಿ ಎತ್ತಿ ತೋರುವ ಈ ಕವಿತೆ ಆ ಹಳ್ಳಿಯ ಹೆಣ್ಣುಮಗಳಂತೆಯೇ ಮುಗ್ಧವಾದುದು, ಸರಳವಾದುದು, ತಿಳಿಯಾದುದು. ಅಲ್ಲಿನ ಒಂದೊಂದು ನುಡಿಯೂ "ನೀರ್

ವೀಣೆಯ ಇಂಚರ"ದಂತೆ ಮಧುರವಾದುದು, ಇಳಿದು ಬಂದ ಈ ಭಾವಗೀತೆ ತನ್ನ ಹೊಳಪಾದ ಭಾವಗಳಿಂದ ತಿಳಿಯಾದ ಶೈಲಿಯಿಂದ, ಅರ್ಥವಿಲ್ಲದ ಬೆಡಗು ಬೆರಗುಗಳ ಸೋಂಕಿಲ್ಲದ ಮುಗ್ಧ ರೀತಿಯಿಂದ, ಚಿರಕಾಲ ಓದಿದವರ ಮನದಲ್ಲಿ ಒಲಿದು ನಿಲ್ಲುತ್ತದೆ.

ಇದು ಶ್ರೀಯುತ ಶಿವರುದ್ರಪ್ಪನವರ ಕವನಗಳನ್ನು ಕುರಿತು ಒಂದು ಸಂಕ್ಷಿಪ್ತ ಪರಿಚಯ. ಚೆಲುವಿನಾರಾಧಕರಾಗಿ, ಒಲವಿನುಪಾಸಕರಾಗಿ, ಊರ್ಧ್ವಗಮನಾಭಿಲಾಷಿಗಳಾಗಿ ಮೈವೆತ್ತು ತುಂಬುಬದುಕನ್ನು ಬಾಳುತ್ತಿರುವ ಈ ಸತ್ವಶೀಲ ಕವಿಯ ಭಾವಗೀತೆಗಳು ಹಲವಾರು ರೂಪದಲ್ಲಿ ತನ್ನಲ್ಲಿನ ಕಾಂತಿಯನ್ನು ಹೊರಹೊಮ್ಮಿಸಿವೆ.

"ತನ್ನ ಅಶರೀರ ಆನಂದದ ಗರಿ ಹಗುರತೆಯಲ್ಲಿ ಒಮ್ಮೆ, ಹೃದಯಸ್ಪರ್ಶಿಯಾದ ನೋವಿನ ಪರವಶತೆಯಲ್ಲಿ ಮತ್ತೊಮ್ಮೆ, ಅವುಗಳ ಸಮ್ಮಿಶ್ರ ಅನುಭವದಲ್ಲಿ ಮಗುದೊಮ್ಮೆ" "ಹರಿವ ಮನವನು ಹಿಡಿದು ಒಂದೆಡೆ ನಿಲಿಸಿ" ನಲಿಸುತ್ತಿದೆ. ಒಮ್ಮೆ "ಸರಳರಾಗದ ಮಧುರಗೀತೆಯಾಗಿ ನರ್ತಿಸಬಹುದು, ಇನ್ನೊಮ್ಮೆ ಚಿಂತೆಯಿಂದ ಭಾರವಾದ ಹೆಜ್ಜೆಗಳನ್ನಿಡುತ್ತ" ಮೆಲ್ಲಮೆಲ್ಲನೆ ನಡೆದಿರಬಹುದು.

ಹಿಂದಿನ ಮತ್ತು ಇಂದಿನ ಹಿರಿಯ ಕವಿಗಳ ಶೈಲಿಯ ಸೊಗಸು, ಕಲ್ಪನಾವಿಲಾಸ, ಛಂದೋರೂಪ, ಪದರಚನೆಯಲ್ಲಿನ ಶ್ರೀಮಂತಿಕೆ ಇವುಗಳ ಸಾರಸರ್ವಸ್ವವನ್ನೂ ಹೀರಿ ತನ್ನಲ್ಲಿ ಮೈಗೂಡಿಸಿಕೊಂಡು ಉಜ್ವಲ ಕವಿಗಳ ಶ್ರೇಷ್ಠಪಥದತ್ತ ತಮ್ಮದೇ ಆದ ವಿಶಿಷ್ಟ ಧಾಟಿಯಲ್ಲಿ ಮುನ್ನಡೆದ ಈ ಕವಿಯ ರಚನೆಗಳು ಎಲ್ಲರ ಆದರ ಗೌರವಗಳಿಗೆ ಪಾತ್ರವಾಗುವಂಥವು. ಈ ಗೀತಗುಚ್ಛಗಳಲ್ಲಿ ಕೆಲವು ತನ್ನ ಸುಗಂಧದಲ್ಲಿ ಸ್ವಲ್ಪ ಹಿಂದೆ ಸರಿದಿರಬಹುದು; ಇಲ್ಲವೇ ಅಂತ್ಯಗಳಲ್ಲಿ ಮಾತ್ರ ಮಿಂಚಿ ನಡುವೆ ಮ್ಲಾನವಾಗಿರಬಹುದು. ಆದರೆ ತಮ್ಮ ಭಾವದ ಸೊಂಪಿನಿಂದ, ದರ್ಶನದ ಕಂಪಿನಿಂದ, ತಂಪನ್ನೀಯುವ ಕವನಗಳೂ ಬೇಕಾದಷ್ಟು ಇದ್ದೇ ಇವೆ.

ಯಾವ ಕವನವೇ ಆಗಲಿ ಇಂತಿದೇ ಛಂದೋಬಂಧದಲ್ಲಿ ಬರಬೇಕೆಂಬ ನಿಯತಿ ಇಲ್ಲ. ತನ್ನಲ್ಲಿನ ಭಾವದ ನಿರೂಪಣೆಗೆ ಅನುಗುಣವಾಗಿ ತನ್ನದೇ ಆದ ರೀತಿಯಲ್ಲಿ ಅದು ತನ್ನ ಪಾತ್ರವನ್ನು ನಿರ್ಮಿಸಿಕೊಂಡಿದೆ. ತನಗೆ ತಾನೇ ಕಟ್ಟುಹಾಕಿಕೊಂಡಿದೆ, ಇನ್ನೊಂದರ ಕಟ್ಟಿಗೆ ಒಳಪಟ್ಟಿಲ್ಲ. ಹಾಗೆ ಒಳಪಟ್ಟಿದ್ದರೂ ಎಲ್ಲೊ ಅಲ್ಲೊಮ್ಮೆ ಇಲ್ಲೊಮ್ಮೆ, ಅಷ್ಟೆ.

ಈ ಕವಿತಾವಾಹಿನಿ 'ಸಂಜೆದಾರಿ'ಯಲ್ಲಿ ತನ್ನ ರಮ್ಯತೆಯನ್ನು ಬೀರಿ, ಸೌಮ್ಯತೆಯನ್ನು ತೋರಿ, 'ದೇವಶಿಲ್ಪ'ದಲ್ಲಿ ತನ್ನ ಭಾವಶಿಲ್ಪವನ್ನು ಮೆರೆದು, ಮೈಮರೆಸಿ 'ಕಾರ್ತೀಕ'ದಲ್ಲಿ ನವಿರು ಬೆಳಕಾಗಿ ಬೆಳಗಿ, 'ಚೆಲುವು-ಒಲವು'ನಲ್ಲಿ ತನ್ನ ಚೆಲುವು-ಒಲವುಗಳನ್ನು ಸಾರಿ, ಕಾವ್ಯಪಥದಲ್ಲಿ ತನ್ನ 'ದೀಪದ ಹೆಜ್ಜೆ'ಯನ್ನು ಇಟ್ಟು ತನ್ನ ಪ್ರತಿಭಾಶಕ್ತಿಯನ್ನು ಸೌಮ್ಯವಾಗಿ ಗಂಭೀರವಾಗಿ 'ಅನಾವರಣ' ಮಾಡಿಕೊಂಡಿದೆ; ಕನ್ನಡದ ದೇಗುಲದಲ್ಲಿ ಚಿರಸ್ಥಾಯಿಯಾಗಿ ನೆಲೆಗೊಂಡಿದೆ.

'ಆಕಾಶದ ಕಡೆಗೆ ಕಣ್ಣೆತ್ತಿ, ಆದರ್ಶದ ಕಡೆಗೆ ಅರಕೆಯ ದಿಟ್ಟಿಯನ್ನು ಬೀರಿ ಹೊರಟ

ಈ ಚೇತನ ಉತ್ತಮವಾದುದನ್ನು ಆಶಿಸಿದೆ. ಆರಾಧಿಸಿದೆ, ಅನುಕರಿಸಿದೆ, ಅನುಸರಿಸಿದೆ. ಸುಂದರವಾದುದನ್ನು ಅಂದವಾದುದನ್ನು ರಸಚೇತನದಿಂದ ಆರಾಧಿಸಿ, ಆಕ್ರಮಿಸಿ, ಆಗಬೇಕೆಂಬ ಒಂದು ಹಾರೈಕೆ ಈ ಹೃದಯದಲ್ಲಿ ತುಂಬಿ ನಿಂತಿದೆ."

(ಕುವೆಂಪು)

ಯಾರ ಕೃಪೆಯಿಂದ ಯಾರ ಆವಾಹನೆಯಿಂದ ತನ್ನ ಹೃದಯ ಇಷ್ಟು ಶ್ರೀಮಂತವಾಯಿತೋ ಆ ಮಹಾಶಕ್ತಿಯಾದ ವಿಶ್ವಕವಿಯಿತ್ರಿಯ ಚರಣದಲ್ಲಿ ಅವಳು ಹಚ್ಚಿಟ್ಟ ಈ ದೀಪ ಎಂದೆಂದಿಗೂ ಬೆಳಗುತ್ತಲಿರಲೆಂದು ಕವಿಹೃದಯ ಹಂಬಲಿಸಿ ಪ್ರಾರ್ಥಿಸಿದೆ :

"ಕಾಲಿಟ್ಟೆಡೆ ಖಾಲಿ ಶೀಶೆ
ಮೂಲೆತುಂಬ ಹಳೆಪೇಪರು."
ಇನಿತು ದಿನ ಜಡ ನಾನು ;
ಬಂದೆ ಚೇತನ ನೀನು
ನಿನ್ನ ಶಕ್ತಿಯುಬಲದಿ ವ್ಯಕ್ತಿಯಾದೆನು ನಾನು
ಈ ಲೋಕದಲ್ಲಿ
ಬೆಳಗು ಬಾ ಹಣತೆಯನು
ನನ್ನೆದೆಯ ಗುಡಿಯಲ್ಲಿ
ಚಿರಕಾಲ ಪ್ರಜ್ವಲಿಸಿ ಬೆಳಗುವಂತೆ"

"ಬೆಳಗು ಬಾ"
(ಸಾಮಗಾನ)

---

* ಪ್ರ.ಕ. ಸಂ. ೪೭. ಸಂ. . ೧

## ಎಚ್. ಎಸ್. ಮಾಧವರಾವ್

# ಸಾಮಗಾನ

ಜಿ. ಎಸ್. ಶಿವರುದ್ರಪ್ಪನವರ 'ಸಾಮಗಾನ' ಅವರ ಮೊದಲ ಕವನ ಸಂಗ್ರಹ. ೧೯೫೧ರಲ್ಲಿ ಪ್ರಕಟವಾದ ಈ ಸಂಕಲನದ ನಂತರ, ಒಂಬತ್ತು ಕವನಸಂಗ್ರಹಗಳು ಬಂದಿದ್ದು, ಅವರ ಕಾವ್ಯದ ಆಶಯ ಮತ್ತು ಅಭಿವ್ಯಕ್ತಿಯಲ್ಲಿ ಗಮನೀಯವಾದ ಬೆಳವಣಿಗೆಯಾಗಿದೆ. ಸಹೃದಯರ ಬೌದ್ಧಿಕತೆಗೆ ಸವಾಲಾಗುವಂತೆ ಅತ್ಯಂತ ಗಂಭೀರವಾಗಿ ಕಾವ್ಯವನ್ನು ರಚಿಸುವ ರೀತಿ ಜಿ.ಎಸ್.ಎಸ್. ಅವರಿಗೆ ಪ್ರಿಯವಾದದ್ದಲ್ಲ. ತಮ್ಮ ಅನುಭವಗಳು ಸರಳಗೊಳ್ಳದೆ, ಕಾವ್ಯ ಆದಷ್ಟು ಮಟ್ಟಿಗೆ ಓದುಗರಲ್ಲಿ ಸಂವಹನ ಹೊಂದಬೇಕೆಂಬುದು ಅವರ ಆಶಯ. ಈ ದಿಸೆಯಲ್ಲಿ ಅವರ 'ಜಡೆ', 'ಮಬ್ಬಿನಿಂದ ಮಬ್ಬಿಗೆ', 'ಸಂಜೆದಾರಿ', 'ನನ್ನ ನಿನ್ನ ನಡುವೆ'—ಇಂತಹ ಅನೇಕ ಕವನಗಳು ಅವರ ವಿಶಿಷ್ಟ ಸಾಧನೆಗಳಾಗಿವೆ. ಕನ್ನಡ ಕಾವ್ಯಕ್ಷೇತ್ರದಲ್ಲಿ ಹೀಗೆ ತಮ್ಮದೇ ಆದ ಪ್ರಮುಖಸ್ಥಾನವನ್ನು ಗಳಿಸಿಕೊಂಡಿರುವ ಜಿ.ಎಸ್.ಎಸ್. ಅವರ ಮೊದಲ ಕವನಸಂಗ್ರಹವನ್ನು ಈ ಹೊತ್ತು ವಿಮರ್ಶಕ ಯಾವ ಮಾನದಂಡಗಳಿಂದ ವಿಮರ್ಶಿಸಬೇಕು ಎಂಬುದು ಒಂದು ರೀತಿಯ ಸಮಸ್ಯೆಯೇ. ಏಕೆಂದರೆ ಸ್ವತಃ ಕವಿಗೆ ಈಗ 'ಸಾಮಗಾನ' ಸಂಕಲನದ ಅನೇಕ ಕವನಗಳು ಅತೃಪ್ತಿಯನ್ನುಂಟುಮಾಡಬಹುದು—ಮಾಡುತ್ತವೆ. ಆದ್ದರಿಂದ ನಾನು ಈ ಲೇಖನದಲ್ಲಿ ಅಲ್ಲಿನ ಕವನಗಳ ವಿಮರ್ಶೆಗಿಂತ ಹೆಚ್ಚಾಗಿ, ಅವರ ಕಾವ್ಯರಚನೆಯ ಮೊದಲ ಹಂತದಲ್ಲಿದ್ದ ಮನೋಧರ್ಮವೇನು, ಅವರ ಇಂದಿನ ಧೋರಣೆಗಳಿಗೆ—ಅಭಿವ್ಯಕ್ತಿಕ್ರಮಗಳಿಗೆ ಯಾವ ರೀತಿಯ ಸೂಚನೆಯನ್ನು ಅವರ ಮೊದಲ ಸಂಕಲನದಲ್ಲಿ ಕಾಣಬಹುದು ಎಂದು ಗುರುತಿಸಲು ಪ್ರಯತ್ನಿಸಿದ್ದೇನೆ.

'ಸಾಮಗಾನ' ಸಂಕಲನವನ್ನು ಓದುತ್ತಿದ್ದಂತೆಯೇ ಎದ್ದು ಕಾಣುವ ಅಂಶ, ಅಲ್ಲಿ ಕೇಳಿಬರುವ ಕುವೆಂಪು ಅವರ ಧ್ವನಿ. ಆಗ ಕುವೆಂಪು ಅದರ ವ್ಯಕ್ತಿತ್ವ ಮತ್ತು ಕಾವ್ಯ ಕವಿಯ ಮೇಲೆ ಗಾಢವಾದ ಪ್ರಭಾವವನ್ನು ಬೀರಿದೆ. ಹೀಗಾಗಿ ಇಲ್ಲಿನ ಬಹುಪಾಲು ಕವನಗಳು ಪ್ರಕೃತಿ ಕವನಗಳು. ಪ್ರಕೃತಿಯನ್ನು ಆರಾಧಕಭಾವದಿಂದ ಕಂಡ ಕವಿ, ಅಲ್ಲಿನ ಚೆಲುವಿಗೆ ಮಾರುಹೋಗಿದ್ದು, ಅದಕ್ಕೆ ತಮ್ಮ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿರುವುದನ್ನು ಇಲ್ಲಿನ ಅನೇಕ ಕವನಗಳಲ್ಲಿ ಕಾಣಬಹುದು. 'ನೀನು-ನಾನು' ಎಂಬ ಅವರ ಕವನದ 'ನೀನು' ಎಂಬುದು ದೇವರನ್ನು ಸಂಬೋಧಿಸಿ ಹೇಳಿದ್ದರೂ, ಅದು ಕುವೆಂಪು

ಕೂಡ ಆಗಿರಬಹುದು ಎಂಬ ಅನುಮಾನ ಓದುಗರಿಗೆ ಬಂದರೆ ಆಶ್ಚರ್ಯವಿಲ್ಲ. ಬೇಂದ್ರೆ, ಪು.ತಿ.ನ, ಕವಿಗಳ ಪ್ರಭಾವವನ್ನೂ ಕೆಲವು ಕಡೆ ಕಾಣಬಹುದು. ಇಲ್ಲಿನ 'ಜೀವನಗೀತೆ', 'ಗಂಗಾವತರಣ' ಕವನದ ನೆನಪು ತಂದರೆ, 'ರಂಗವಲ್ಲಿ' ಕವನದ ನೆನಪನ್ನು 'ಸಾಮಗಾನ'ದ 'ಮುದುಕಿ' ಕವನ ತರುತ್ತದೆ. ಜಿ.ಎಸ್.ಎಸ್. ಅವರು ಕವನ ಬರೆಯಲು ಪ್ರಾರಂಭಿಸಿದ ಸಮಯದಲ್ಲಿ ಕುವೆಂಪು, ಬೇಂದ್ರೆ, ಪು.ತಿ.ನ.ರ ಪ್ರಭಾವ ಎಷ್ಟಿತ್ತೆಂದರೆ, ಅವರ ಕವನಗಳಿಂದ ತಾನು ಪ್ರಭಾವವಾಗಿಲ್ಲವೆಂದು ಯಾರಾದರೂ ಹೊಸ ಕವಿ ಹೇಳಿದರೆ, ಅದು ಹೆಮ್ಮೆಪಡುವ ಸಂಗತಿ ಆಗಿರಲಿಲ್ಲ. ಜಿ.ಎಸ್.ಎಸ್. ಅವರಲ್ಲೂ ಆ ಕವಿಗಳ ಪ್ರಭಾವ ಸ್ಪಷ್ಟವಾಗಿ ಕಂಡರೂ, ಕವಿಗೆ ಇರುವ ಭಾಷೆಯ ಪ್ರಭುತ್ವ, ಕಲ್ಪನಾಶಕ್ತಿ, ಶಬ್ದಚಿತ್ರ ಸಾಮರ್ಥ್ಯಗಳು ಕವಿಯ ಸ್ವಂತಿಕೆಗೆ ನಿದರ್ಶನವಾಗಿವೆ. ಕನಸು ಮತ್ತು ವಾಸ್ತವತೆಗಳ ವ್ಯತ್ಯಾಸವನ್ನು ಚಿತ್ರಮಯವಾಗಿ ತಿಳಿಸುವ 'ಅಲ್ಲಿ–ಇಲ್ಲಿ' ಕವನ, ತೂಗಾಡುತ್ತಿರುವ ತೆಂಗಿನ ಗರಿ ಮತ್ತು ನರಿಯ ಕೂಗನ್ನು ಹೋಲಿಸುವ 'ಒಂದು ಚಿತ್ರ'ದ ವಿಡಂಬನೆ,—ಕವಿ, ಉಳಿದ ಕವಿಗಳಿಗಿಂತ ಭಿನ್ನರಾಗಿ ತಮ್ಮ ಕಾವ್ಯಶಕ್ತಿಯನ್ನು ತೋರಿಸಿರುವುದನ್ನು ಸ್ಪಷ್ಟಪಡಿಸುತ್ತವೆ.

ಕವಿ ರಾಮಕೃಷ್ಣ ಪರಮಹಂಸ, ವಿವೇಕಾನಂದರಂತಹವರ ಪ್ರಭಾವಕ್ಕೆ ಒಳಗಾಗಿದ್ದು, ಜೀವನದಲ್ಲಿ ನೈತಿಕಮೌಲ್ಯಗಳಿಗೆ ಹೆಚ್ಚು ಬೆಲೆಯನ್ನು ಕೊಟ್ಟಿರುವುದನ್ನು ಕಾಣಬಹುದು. ಈ ಆದರ್ಶವನ್ನೇ ಕುವೆಂಪು ಮುನ್ನುಡಿಯಲ್ಲಿ, ಕವಿಯ ಮನೋಧರ್ಮ 'ಊರ್ಧ್ವಗಮನಾಭಿಲಾಷೆ' ಎಂದು ಹೇಳಿರುವುದು. ಆದರೆ ಈ ಆದರ್ಶ ವಾಸ್ತವಜೀವನದಲ್ಲಿ ಎಷ್ಟೋ ಸಾರಿ ಕಾಣಬಾರದಿರುವುದು ಕವಿಗೆ ನಿರಾಶೆಯನ್ನು ತರಿಸಿದೆ. 'ಮನಸ್ಸು ಶೂನ್ಯವಾಗಿದೆ' ಎಂಬ ಕವನದಲ್ಲಾಗಲೀ, 'ಮೊರೆವ ಕಡಲ ತೆರೆಗಳಲ್ಲಿ ಕಿರಿಯ ನಾವೆ ನರಳಿದೆ; ಅಭಯವೀವ ತಾರೆಯೊಂದು ಕಣ್ಗೆ ಕಾಣದಾಗಿದೆ' ಎಂದು ಕೊರಗುವ 'ಅಂಧಕಾರ' ಕವನದಲ್ಲಾಗಲೀ ಆ ಅಳಲನ್ನು ಕಾಣಬಹುದು. ಆದರೆ ಈ ನಿರಾಶೆಯಲ್ಲೂ ಕವಿ ಆದರ್ಶವನ್ನು—ಆಸೆಯನ್ನು ನಂಬದೇ ಇರುವುದಿಲ್ಲ.

ಆದರೆ ಕವಿಗೆ ಸಮಾಜದ ವಾಸ್ತವ ಚಿತ್ರಣ ಕಂಡಷ್ಟೂ, ಸಾಂಪ್ರದಾಯಿಕ ಮೌಲ್ಯಗಳ ಬಗ್ಗೆ ಅನುಮಾನ ಬಂದು, ಕಾವ್ಯ ವಿಡಂಬನೆಯ ಹಾದಿಯನ್ನು ಹಿಡಿದಿರುವುದನ್ನು ಕಾಣಬಹುದು. 'ಸಾಮಗಾನ'ದಲ್ಲಿ ಕಂಡುಬರುವ 'ಒಂದು ಚಿತ್ರ'ದ ಐರನಿ ಅವರ ಇತ್ತೀಚಿನ 'ಭೀಮಾಲಾಪ', 'ಗಾಂಧೀ'—ಅಂತಹ ಕವನಗಳಲ್ಲಿ ಎಂತಹ ಸಮರ್ಥ ಬೆಳವಣಿಗೆಯಾಗಿದೆಯೆಂಬುದನ್ನು ಓದುಗ ಗಮನಿಸಬಹುದು.

'ದೀಪದ ಹೆಜ್ಜೆ' ಕವನ ಸಂಕಲನದಲ್ಲಿ ಕವಿಯೇ ಹೇಳುವಂತೆ ಬದುಕಿನ ಎರಡು ಮುಖ್ಯ ಸಮಸ್ಯೆಗಳು ಅವರ ಕವನಗಳಲ್ಲಿ ಕಾಣುತ್ತವೆ. ಒಂದು ಮಾನವ ಮತ್ತು ಅವನ ಅಂತರಂಗ; ಮತ್ತೊಂದು ಮಾನವ ಮತ್ತು ಕಾಲ. ಅವರ ಇತ್ತೀಚಿನ ಕವನಗಳಲ್ಲಿ ಈ ಸಮಸ್ಯೆಗಳು ಸ್ಪಷ್ಟವಾಗಿ ಕಂಡರೂ, ಆ ವಿಚಾರಗಳಿಗೆ ಸೂಚನೆಯನ್ನು 'ಸಾಮಗಾನ'ದಲ್ಲಿಯೂ ಕಾಣಬಹುದು. 'ಕಾಲ' ಮನುಷ್ಯನನ್ನು ಯಾವ ರೀತಿ

ನಿಯಂತ್ರಿಸಬಲ್ಲದೆಂಬುದನ್ನು 'ಕಾಲನಟ' ಕವನ 'ಕಲ್ಕಿ' ಕವನದಂತೆ ಆವೇಶಮಯವಾಗಿ ಹೇಳಿದ್ದು, ಅದೇ ವಸ್ತುವಿನ ಸಮರ್ಥ ಅಭಿವ್ಯಕ್ತಿಯನ್ನೂ 'ಗಡಿಯಾರದಡಿಯಲ್ಲಿ', 'ಮಬ್ಬಿನಿಂದ ಮಬ್ಬಿಗೆ' ಅಂತಹ ಕವನಗಳಲ್ಲಿ ಕಾಣಬಹುದು. ಮಾನವ ಮತ್ತು ಅವನ ಅಂತರಂಗದಲ್ಲಿ ಕಂಡುಬರುವ ಅನೇಕ ಸಂಕೀರ್ಣ ತೊಳಲಾಟಗಳ ವಸ್ತು ಇವರ ಅನೇಕ ಕವನಗಳಲ್ಲಿ ಕಂಡುಬಂದು, ಈ ಅಂಶದಲ್ಲಿ ವಚನಕಾರರ ಪರಂಪರೆಯನ್ನು ನೆನಪಿಗೆ ತರುತ್ತದೆ.

ಈ ಕವನಸಂಗ್ರಹದಲ್ಲಿ ಕಂಡುಬರುವ ಕೆಲವು ತಾತ್ವಿಕ ವಿಚಾರಗಳು ಹೇಳಿಕೆಯಾಗಿ ನಿಂತರೂ ಕೂಡ, ಅವುಗಳ ಗಟ್ಟಿತನ ಇಂದೂ ಕೂಡ ಗಮನಿಸಬೇಕಾದ್ದು—ಮೆಚ್ಚಿಗೆಯನ್ನು ತರಿಸುವಂತಹದು. 'ಗೆಳೆಯನೊಬ್ಬನಿಗೆ ಬರೆದ ಕಾಗದ' ಕವನದ

ಎನಿತು ಜನ್ಮದಲಿ ಎನಿತು ಜೀವರಿಗೆ
ಎನಿತು ನಾವು ಋಣಿಯೋ
ತಿಳಿದು ನೋಡಿದರೆ ಬಾಳು ಎಂಬುದಿದು
ಋಣದ ರತ್ನಗಣಿಯೋ

—ಎಂಬ ಮಾತುಗಳು ಸಾರ್ವಕಾಲಿಕ ಸತ್ಯವಾಗಿದ್ದು 'What do I have that I have not reared' ಎಂಬ ಮಾತನ್ನು ನೆನಪಿಗೆ ತರುತ್ತದೆ. ಕಾವ್ಯವನ್ನು ರಚಿಸುವ ಕವಿಯ ಉದ್ದೇಶವನ್ನು ಹೇಳುವ 'ಎಲ್ಲ ಕೇಳಲಿ ಎಂದು ನಾನು ಹಾಡುವುದಿಲ್ಲ; ಹಾಡುವುದು ಅನಿವಾರ್ಯಕರ್ಮ ನನಗೆ' ಎಂಬ ಮಾತಾಗಲೀ ಬೆಲೆಯುಳ್ಳದ್ದಾಗಿವೆ.

ಶಿವರುದ್ರಪ್ಪನವರ ಸಂಕಲನದ ಹೆಸರಾದ 'ಸಾಮಗಾನ' ಎಂಬುದೇ ಅರ್ಥಪೂರ್ಣವಾದದ್ದು. ವೇದಗಳಲ್ಲಿ ಅತ್ಯಂತ ಪ್ರಮುಖವಾದ ಸಾಮವೇದದ ಗಾನ ಪ್ರಸಿದ್ಧವಾದದ್ದು. ಜಿ.ಎಸ್.ಎಸ್. ಅವರ ಕವನಗಳಲ್ಲಿ ಒಂದು ರೀತಿಯ ಸಾಮಗಾನದ ಈ ಸಮಶ್ರುತಿಯನ್ನು ಕಾಣಬಹುದು. ಬೇಂದ್ರೆ, ಅಡಿಗರಂತೆ ಜಿ.ಎಸ್.ಎಸ್. ಅವರ ಕಾವ್ಯದ ನಾಯಕ ಆವೇಶಕ್ಕೆ ಹೆಚ್ಚು ಒಳಗಾಗದೆ, ಎಲ್ಲ ಸಮಸ್ಯೆಗಳನ್ನು ಶಾಂತರೀತಿಯಲ್ಲಿಯೇ ತೆಗೆದುಕೊಳ್ಳುತ್ತಾನೆ. ಈ ದೃಷ್ಟಿಯಿಂದ ಇವರ ಕಾವ್ಯಮನೋಧರ್ಮಕ್ಕೆ ಕೆ.ಎಸ್.ಎನ್. ಹತ್ತಿರವಾಗುತ್ತಾರೆ.

ಜಿ.ಎಸ್.ಎಸ್. ಅವರು ಭಾವಗೀತೆಯ ಹಾಡುವ ಗುಣದ ಅವಶ್ಯಕತೆಯನ್ನು ಕಂಡುಕೊಂಡರು. 'ಉಡುಗಣವೇಷ್ಟಿತ ಚಂದ್ರ ಸುಶೋಭಿತ ದಿವ್ಯಾಂಬರ ಸಂಚಾರಿ.... ಎಂದು ಆರಂಭವಾಗುವ 'ಅಲ್ಲಿ–ಇಲ್ಲಿ' ಕವನ, 'ಎಲ್ಲಿ ಹೋಗುವಿರಿ ನಿಲ್ಲಿ ಮೋಡಗಳೆ ನಾಲ್ಕು ಹನಿಯ ಚೆಲ್ಲಿ....' ಎಂದು ಪ್ರಾರಂಭವಾಗುವ 'ನೆಲದ ಕರೆ' ಕವನಗಳು ತಮ್ಮ ಗೇಯಗುಣದಿಂದ ಜನಪ್ರಿಯವಾದ ಕವನಗಳಾಗಿವೆ. ನವೋದಯ ಕಾವ್ಯದಲ್ಲಿ ವಿಶೇಷವಾಗಿ ಕಂಡುಬರುತ್ತಿದ್ದ ಭಾವಗೀತೆಯ ಈ ಗುಣ ನವ್ಯಕಾವ್ಯದಲ್ಲಿ ವಂಚಿತವಾಗಿ, ಸಂವಹನದ ಹಂತದಲ್ಲಿ ನವ್ಯಕಾವ್ಯ ಅನುಭವಿಸಿರುವ ತೊಡಕು ಗಮನಿಸಬೇಕಾದ್ದು.

ಜಿ.ಎಸ್.ಎಸ್. ಅವರ 'ಸಾಮಗಾನ' ಅವರ ಮೊದಲ ಕವನಸಂಕಲನವಾಗಿದ್ದು,

ಅವರ ಕಾವ್ಯದ ಪ್ರಬುದ್ಧ ಬೆಳವಣಿಗೆಯ ಹಿನ್ನೆಲೆಯಲ್ಲಿ ಐತಿಹಾಸಿಕ ದೃಷ್ಟಿಯಿಂದ ಗಮನಿಸಬೇಕಾದ ಸಂಕಲನವಾಗಿದೆ. ಅದಲ್ಲದೆ ಸಮರ್ಥನಾದ ಕವಿಯು ಕೂಡ—ತನ್ನ ಸಮಕಾಲೀನ ಕಾವ್ಯಪರಿಸರದ ಧೋರಣೆ ಮತ್ತು ಅಭಿವ್ಯಕ್ತಿಕ್ರಮಗಳ ಪ್ರಭಾವದಿಂದ ಪಾರಾಗುವುದು ಎಷ್ಟು ಕಷ್ಟ ಎಂಬುದನ್ನು ತೋರಿಸುವಲ್ಲಿಯೂ 'ಸಾಮಗಾನ' ಉದಾಹರಣೆಯಾಗಬಲ್ಲದು.

## ಎಸ್. ಎಂ. ವೃಷಭೇಂದ್ರಸ್ವಾಮಿ

# ಚೆಲುವು-ಒಲವು

ನಮ್ಮ ತಲೆಮಾರಿನ ಕಾವ್ಯ ಪ್ರಪಂಚವನ್ನು ಪಕ್ಷಿನೋಟದಿಂದ ವೀಕ್ಷಿಸಿದಾಗ ಹತ್ತಾರು ತರುಣ ಕವಿಗಳು ಕಣ್ಣಿಗೆ ಬೀಳುತ್ತಾರೆ. ಈಗಾಗಲೇ 'ಸಾಮಗಾನ'ದಿಂದ ಸಹೃದಯರಿಗೆ ಪರಿಚಿತರಾದ ಶ್ರೀ ಜಿ. ಎಸ್. ಶಿವರುದ್ರಪ್ಪನವರು ಅವರಲ್ಲೊಬ್ಬರು. ಆ 'ಸಾಮಗಾನ'ದ ಬೆಡಗು ಬಿನ್ನಾಣಗಳೇ ಈ ಚೆಲುವು-ಒಲವಿನಲ್ಲಿಯೂ ಇವೆ. ಕವಿಗೆ ಸಹಜವಾಗಿರಬೇಕಾದ ವಿಶಿಷ್ಟ ಕಲ್ಪನೆ ಇದೆ. ಓದುಗರ ಊಹೆಗೆ ಏನೊಂದನ್ನೂ ಬಿಡದೆ ಸಾದ್ಯಂತವಾಗಿ ವರ್ಣಿಸುವುದು ಅವರ ಮೋಡಿ. ಸಾಂಪ್ರದಾಯಿಕ ಉಪಮೆಗಳನ್ನು ಬೇರೆ ಬೇರೆ ರೀತಿಯಲ್ಲಿ ಬಳಸಿರುವುದೇ ಹೆಚ್ಚು. ಅವುಗಳ ಮಧ್ಯೆ, ಹೊಚ್ಚ ಹೊಸ ಉಪಮಾನಗಳು ಮಿಂಚಿನಂತೆ ಹೊಳೆದು ಮಾಯವಾಗುತ್ತವೆ. ಬಳಕೆಯಲ್ಲಿರುವ ಛಂಧೋರೂಪಗಳನ್ನು ಧಾರಾಳವಾಗಿ ಬಳಸಿದ್ದರೂ ಅಲ್ಲಲ್ಲಿ ಹೊಸ ಛಂಧೋರೂಪಗಳನ್ನು ತರಲು ಪ್ರಯತ್ನಿಸಿದ್ದಾರೆ. ಕೆಲಕೆಲವು ಕಡೆ ಛಂದಸ್ಸು ಮುಗ್ಗರಿಸುತ್ತದೆ. ಕೆಲವು ಗೀತೆಗಳಲ್ಲಿ ಚಿಂತನಾಂಶ ಹೆಚ್ಚಾಗಿರುವಂತೆ ಭಾಸವಾಗುತ್ತದೆ. ಕೆಲವು ಕವನಗಳ ಆರಂಭದ ಸಾಲುಗಳಲ್ಲಿರುವ 'ಕಾವ್ಯಪಾಕ' ಬರಬರುತ್ತಾ, ನೀರಾಗಿ, ಕೆಲವು ಕಡೆ ನೀರಸವೂ ಆಗಿದೆ. ಮುನ್ನುಡಿಕಾರರಾದ ಪು.ತಿ.ನ. ಹೇಳುವಂತೆ 'ಕವನಗಳ ಮೂಲದಲ್ಲಿ ರಸಸ್ಥಿತಿಯನ್ನು ರಚಿಸುವ ಸತತ ಪ್ರೇರಣೆ ಇದೆ. ಹರಿವ ಮನವನು ಹಿಡಿದು ಒಂದೆಡೆ ನಿಲ್ಲಿಸಿಕೊಳ್ಳುವ' ಗೀತೆಗಳು ಇಲ್ಲಿ ತುಂಬಿವೆ.

ಇಲ್ಲಿನ ಪದ್ಯಗಳನ್ನು ಸುಮಾರಾಗಿ ಚೆಲುವಿನ (ಪ್ರಕೃತಿ) ಗೀತೆಗಳು ಮತ್ತು ಒಲವಿನ (ಸಾಂಸಾರಿಕ) ಗೀತೆಗಳು ಎಂದು ವಿಭಾಗಿಸಬಹುದು. ಪ್ರಕೃತಿಯ ಬೆಡಗಿಗೆ ಮಾರು ಹೋಗುವ ಕವಿಗೆ, ಅರಳಿ ನಗುವ ಏಳು ಸುತ್ತಿನ 'ಮಲ್ಲಿಗೆ'

'ಇಷ್ಟು ಹಚ್ಚನೆ ಹಸುರು ಗಿಡದಿಂ-
ದೆಂತು ಮೂಡಿತು ಬೆಳ್ಳಗೆ !'

ಎಂಬ ಬೆರಗನ್ನು ತರುತ್ತದೆ. ಪ್ರಕೃತಿಯ ಸುಂದರ (ಮದುವೆ!) ಹಂದರದಲ್ಲಿ ವಧುವಾದ 'ಹೂಬಳ್ಳಿಗೆ!' ಕಾಮನಬಿಲ್ಲೂ ಬಾಗುತ ಮುತ್ತೊತ್ತುವುದಂತೆ! ಅವಳಿಗೆ ಲೋಕದ ಹೆಸರುಗಳು ಮೈಲಿಗೆ, ಕಾರಣ 'ಚೆಲುವೆ' ಎಂಬುದೇ ಅನ್ವರ್ಥನಾಮ. 'ಪ್ರಕೃತಿ'ಯ ನಿರಂತರ ತಪಸ್ಸಿನ ಅಮೃತ ಫಲವಾಗಿ 'ಕವಿ' ಮೂಡಿ ಪ್ರಕೃತಿಯ

ಹಾಗೂ ತನ್ನ ಬಿಡುಗಡೆ ಸಾಧಿಸಿಕೊಳ್ಳುತ್ತಾನಂತೆ! ಪಟ ಪಟ ಪಟ ಪನೆ ಹಂಚಿನ ಮೇಲೆ ಬೀಳುವ 'ಮಳೆ ಹನಿಗಳು' 'ಆಕಾಶದ ಅತಿಥಿಗಳು' ನೆಲದಾಸೆಯಿಂದ ಕೆಳಗಿಳಿಯುವರಂತೆ! 'ಒಂದು ಸಂಜೆ' ವಿಹಾರಕ್ಕೆ ಹೋದ ಕವಿಗೆ ಕೆರೆಯೊಂದು 'ಸಂಜೆಗಣ್ಣಿಂದಿಳಿದ ಪರಮ ಕರುಣಾರಸದ ಮಡುವಿ'ನಂತೆಯೂ, 'ಹಗಲೆಲ್ಲ ರವಿ ಬಿತ್ತಿದಂಥ ಬೆಳಕಿನ ಬೀಜ ಮೊಳೆತಹಾಗೆ' ಮುಗಿಲ ಚಿಹ್ನೆಗಳೂ ಕಾಣುತ್ತವೆ. ಕಡಲನ್ನು ಕಂಡಾಗ, ಕವಿಯ ಭಾವ ರೆಕ್ಕೆಗೆದರಿ ಕಲ್ಪನಾಕಾಶದಲ್ಲಿ ವಿಹಾರ ಮಾಡುತ್ತದೆ. ಒಮ್ಮೆ ಆ ಕಡಲು 'ನೀಲ ಬೊಮ್ಮ'ನಂತೆಯೂ, 'ನಾದ ಬ್ರಹ್ಮದ ವ್ಯಕ್ತರೂಪ'ದಂತೆಯೂ ವಿಶ್ವಕವಿಯ ಚೈತನ್ಯಕಪನದಂತೆಯೂ ಕಂಡು, ಅದರ ನಿತ್ಯ ಪ್ರಾರ್ಥನೆಯೊಡನೆ, ಕವಿ ತನ್ನ ಪ್ರಾರ್ಥನೆಯನ್ನು ಬೆರೆಯಿಸಿ 'ನೀಲ ನೀಲ ಜಲ'ದಲ್ಲಿ ಲೀನನಾಗಿ ತನ್ನ ತನವನ್ನು ನೀಗಿಕೊಳ್ಳುತ್ತಾರೆ! ಪ್ರಕೃತಿಯ ಬೆಡಗಿಗೆ ಬೆರಗುಗೊಂಡು, ಮನೋಹಂತೆಗೆ ಮಾರುಹೋಗಿ ಭವ್ಯತೆಗೆ ಬಾಗಿ 'ಸೌಂದರ್ಯರಸ'ದಲ್ಲಿ ಲೀನನಾಗಿ ಇಲ್ಲವಾಗುವ ಸೌಂದರ್ಯಾರಾಧಕನನ್ನು ಇಲ್ಲಿ ಕಾಣುತ್ತೇವೆ.

ಒಲವಿನ ಗೀತೆಗಳಲ್ಲಿಯೂ ಈ ವೈವಿಧ್ಯತೆ, ವೈಶಿಷ್ಟ್ಯ ಮೂಡಿ ಬಂದಿದೆ. ಅಲ್ಲಿ ಕುಸು ಆದರ್ಶವ್ಯಕ್ತಿಯಾಗಿ ಕಾಣುವ ಕವಿ ಇಲ್ಲಿ ಸುಂದರ ಸಂಸಾರಿಯಾಗಿ ವಾಸ್ತವಿಕ ವ್ಯಕ್ತಿಯಾಗಿ ಕಾಣುತ್ತಾರೆ. ನಮ್ಮ ಹೃದಯಮಂದಿರದ ಗರ್ಭಗುಡಿಯಲ್ಲಿಯೇ ಕುಳಿತು, ಒಲವಿನ ಗೀತೆಗಳನ್ನು ಹಾಡುತ್ತಿರುವಂತೆ ಭಾಸವಾಗುತ್ತದೆ.

'ನಾಲ್ಕು ಚಣ ನಸು ಮುನಿಸು, ಮರುಚಣವೆ ಮಂಜು ಮೈತಿಳಿದು
ಹೂ ಬಿಸಿಲು ಹೊಮ್ಮಿದೊಲು ನಗೆಯ ಬಗೆ'

ಎನ್ನುವಲ್ಲಿ 'ಮನದನ್ನೆ'ಯ ಸಹಜ ಸುಂದರ ಚಿತ್ರ ಕೊಟ್ಟಿದ್ದಾರೆ. ಮಧುರಬಾಳಿನ ನಂದನದಲ್ಲಿ ಅರಳಿದ ಮಂದಾರ ಅವರ ತಂದೆ-ಸತಿ-ಪತಿ-ಸುತರ ಪ್ರೇಮಬಂಧವನ್ನು ಕವಿ 'ದುಂಬಿಯಾದೆವು ನಾವು ಆ ಹೂವಿನೆಸೆಗೆ, ಏನೆಂಥ ಬೆಸುಗೆ!' ಎಂದು ಅಚ್ಚರಿಗೊಂಡಿದ್ದಾರೆ. ನಲವಿನ ದಿವ್ಯತೊರೆಯ ಮರಿಯಾದ ಮಗುವೊಂದು 'ಮುಗ್ಧ ತೀರ್ಥ' ಅದು ಉರುಳುವೀ ಸಂಸಾರ ರಥಕೆ ಸಾರಥಿ' 'ಪ್ರೇಮಯಜ್ಞದ ಹೊಂಬೆಳಕು' ಆದ್ದರಿಂದ ಈ ಸರಳ ಸಂಸಾರಿ 'ಸಾಲಗಾರರೂ ನಾವು ನಿನ್ನ ಮುಂದೆ' ಎಂದು ಒಪ್ಪಿಕೊಳ್ಳುತ್ತಾರೆ. ಮನೆತುಂಬ ಹರಿದಾಡುವ ಮಗನಿಂದ 'ನೆಲವೆ ಮಿದುವಾಯಿತು!!!' ಅವನು ಕಾಗೆ ಗುಬ್ಬಿಗಳ ಗೆಳೆಯ. ಆ ಭೂಪನಿಗೆ 'ಊದುಬತ್ತಿಯ ನವುರು ಗೆರೆಯಧೂಪ'ವಾದರೆ ಅವನ ಕೋಪ 'ಉರಿಸಿಟ್ಟ ಹಸಿ ಸೌದೆ' ಒಮ್ಮೊಮ್ಮೆ 'ಕ್ರಾಂತಿಕಾರ'ನಾಗಿ 'ಕೀಯ ಬಿರುಗಾಳಿಯಂತೆ ಇವನದೇ ಧಾಳಿ' ಒಮ್ಮೊಮ್ಮೆ 'ರುದ್ರಾವತಾರ'ವನ್ನು ತಾಳುತ್ತಾನೆ. ಮತ್ತೊಮ್ಮೆ ತುಂಟತನಕ್ಕಿನ್ನೆರಡು ಕಾಲು ಬಂದಂತೆ ಮನೆಯ ವಸ್ತುಗಳನ್ನು ಚಲ್ಲಾಪಿಲ್ಲಿ ಮಾಡುತ್ತಾನೆ. ಮಗದೊಮ್ಮೆ

'ಹೊಳೆವೆಳೆಯ ಕಂಗಳಲಿ ಬೆಳದಿಂಗಳನು ತುಂಬಿ
ತಂದು ಮನೆಯಂಗಳಕೆ ಸುರಿವ ಧೀರ'ನಾಗುತ್ತಾನೆ!

ಈ ಕಲ್ಪನೆ, ಈ ಆನಂದಗಳಲ್ಲಿ ಮೈಮರೆತ ಕವಿಗೆ, 'ಜಡೆಯಾಚೆ ತಿರುಗಿಸಿದ ತಾಯಮುಖ ಮಾತ್ರ ಇಂದಿಗೂ ಕಾಣದಲ್ಲ' ಎಂಬ ಕರುಳು ಕಿವುಚುವ ಕೊರಗೂ, ನೆರೆಮನೆಯ ಬಾನುಲಿಯ ಶೋಕಗೀತೆ 'ನೆಪ'ವಾಗಿ 'ಎದೆಯ ನೋವನು ಮರಳಿ ಕೆರಳಿಸುವುದೂ' ಉಂಟು. ಹಾಗೆಯೇ ಸತತ ಸಾಗುತ್ತಿರುವ ವಿಶ್ವದ 'ಅಶ್ರುಗಾನ'ವನ್ನೂ ಕೇಳಿ, 'ಬಾಳಿಗೊಂದು ಬಲವಿದೆ' ಎಂಬ ಸಮಾಧಾನವೂ ಮೂಡುತ್ತದೆ. ಹೀಗೆ ಸಂಸಾರದ ಸಿಹಿ-ಕಹಿ ಚಿತ್ರಣಗಳು ಇಲ್ಲಿವೆ. ಆದರೂ ಬಾಳಿನ ಜಟಿಲಕುಟಿಲತೆಗಳ ಕಡೆ ಅಂತರ್ಮುಖಿಯಾಗದೆ, ಆ ಸಾಗರದ ತೆರೆಯ ಮೇಲೆ ದೋಣಿಯಾನದಲ್ಲಿ ತೊಡಗಿದ ಕವಿಯನ್ನು ಕಾಣುತ್ತೇವೆ.

ಕಲೆಯಲ್ಲಿ ಅಸ್ಪಷ್ಟತೆ ದೋಷವಾದಂತೆ, ಅತಿ ಸ್ಪಷ್ಟತೆಯೂ ದೋಷವೇ. ಕಂಡುದನ್ನೆಲ್ಲ ವರ್ಣಿಸಿ, ಓದುಗರ ಊಹೆಗೇನನ್ನೂ ಬಿಡದ ಅತಿಸ್ಪಷ್ಟ ಕಾವ್ಯರೀತಿ, ಕಾವ್ಯದ ಆತ್ಮವಾದ ಧ್ವನಿಯನ್ನೂ, ಓದುಗನ ಮನೋರಸನೆಯಲ್ಲಿ ಚರ್ವಿತವಾದಾಗ ಮೂಡುವ 'ಝುಲಕ'ನ್ನೂ ಸ್ವಲ್ಪ ಕುಗ್ಗಿಸುತ್ತದೆ. ಪೂರ್ಣ ವೃತ್ತವನ್ನು ಚಿತ್ರಿಸುವುದಕ್ಕಿಂತ, ಅರ್ಧವರ್ತುಲ ಎಳೆದು, ಪೂರ್ಣಮಾಡಿಕೊಳ್ಳಲು ಓದುಗನ ಕಲ್ಪನೆಗೆ ಬಿಡುವುದು ಒಳ್ಳೆಯ ಕಲೆಗಾರಿಕೆ. 'ಬೆಳಕು-ಧೂಳು' 'ಕಸಪೊರಕೆ' ಮುಂತಾದ ಕೆಲವು ಪದ್ಯಗಳಲ್ಲಿ (ಸುಂದರ ಚಿಂತನಾಂಶ ಒತ್ತಟ್ಟಿಗಿರಲಿ) ಈ ಸ್ಪಷ್ಟತೆ ಎದ್ದು ಕಾಣುತ್ತದೆ. ಈ ಸ್ಪಷ್ಟತೆ ತರಲು ಉಪಮಾನಗಳನ್ನು ಅಡಕಿಲಾಗಿಡುತ್ತಾರೆ. ಮಗುವಿನ ಓಡಾಟದಿಂದ 'ನೆಲವೆ ಮಿದುವಾಯಿತು' ಎಂಬ ಧ್ವನಿಪೂರ್ಣ ಉಕ್ತಿಯ ನಂತರ

'ಇವನಿಂದ ನಮ್ಮ ಮನೆ ತುಂಬಿತು
ಹೂಗಂಪು ತುಂಬಿರುವ ಸರಸಿಯಂತೆ ಮನ
ಚೆಲುವಾಯಿತು'

ಎಂಬ ಮಾತುಗಳು ಸಪ್ಪೆಯಾಗಿ ಕಾಣುತ್ತವೆ. 'ಕಡಲನ್ನು ಕಂಡಾಗ' ಎಂಬ ಗೀತೆಯ ಎಂಟನೆಯ ಪದ್ಯ ಇದಕ್ಕೆ ಸ್ಪಷ್ಟ ಉದಾಹರಣೆ.

ಇವರ ವರ್ಣನೆಗಳು ಸಾಂಪ್ರದಾಯಿಕ—(ಎಂದರೆ ಹಳೆಯದಲ್ಲ, ಬಳಕೆಯ—) ಉಪಮಾನಗಳಿಂದ ತುಂಬಿದ್ದರೂ, ನವ್ಯ ರೀತಿಯ ಉಪಮಾನಗಳು ಮೋಹಕವಾಗಿ ಬಂದಿವೆ. 'ರೂಪಕ'ದ ಬೆಡಗು ಕವಿಗಳ ಮನಸ್ಸನ್ನಿನ್ನೂ ಹೆಚ್ಚು ಹಿಡಿದಂತೆ ಕಾಣುವುದಿಲ್ಲ. 'ಸಂಜೆ'ಯನ್ನು ವರ್ಣಿಸುವಾಗ 'ಹಗಲ ಬೆಳಕಿನ ಗಡಿಗೆ ಚೂರಾಯಿತು', ಬೆಣ್ಣೆಯಾಗಿ ಬರುವ ಬೆಳಕನ್ನು ಕಡೆಯಲು, "ಇರುಳು ಕಪ್ಪಿಗೆ ಹೆಪ್ಪನೆರೆವರೂ, ಜಿರ್ರನೆಯ ಜೀರ್ದನಿಯನು (ಜೀರುಂಡೆ); ಬೆಳುದಿಂಗಳ ರಾತ್ರಿ 'ಹಾಲ್' ಕುಡಿದ ಶಿಶು ಬಿಸುಟ ಬಣ್ಣದಾಟದ ವಸ್ತುಗಳ ತೆರದಿ ಊರೆಲ್ಲ ತೋರುತಿದೆ', ಸೋರುವ ಛಾವಣಿಯಿಂದ ಇಳಿದ ಮಳೆನೀರ ಅತಿಥಿಗಳು 'ಹರಿದಾಡುವರಿದೋ ಹಸುಮಕ್ಕಳವೋಲೆ!' ಕಾವೇರಿ 'ಗದ್ದೆ ಬಯಲಿನ ಕೆಸರ ಹಾಳೆ ಹಾಳೆಗಳಲ್ಲಿ ಹಸಿರು ಕನಸವ ಬರೆಯುವವಳು' ಮುಂತಾದ ಕೆಲವನ್ನು ಉದಾಹರಿಸಬಹುದು.

ಕವನದ ಪಾದಗಳ ಕೊನೆಯಲ್ಲಿ ಓದುಗ ಸ್ವಲ್ಪ ನಿಲ್ಲುತ್ತಾನೆ. ಅಲ್ಲಿ ಪದಗಳೂ, ಸ್ವಲ್ಪಮಟ್ಟಿಗೆ ಭಾವವೂ ನಿಲ್ಲುವಂತಿದ್ದರೆ ಚೆನ್ನು. ಅಲ್ಲದೆ ಶಬ್ದಗಳನ್ನು ನಡುನಡುವೆ ಒಡೆದರೆ, ಕೀಲುಗಳು ಇರುವ ಕಡೆ ಕೈಯನ್ನು ಮಡಚದೆ, ಇನ್ನೆಲ್ಲೋ ಬಳುಕಿಸಿದಂತಾಗುತ್ತದೆ. ಕ್ವಚಿತ್ತಾಗಿ ಬರುವ ಈ ನ್ಯೂನತೆ ರಸಭೋಜನದಲ್ಲಿ ಕಲ್ಲು ಕಡಿದಂತಾಗುತ್ತದೆ. (ಉದಾ: 'ಸಂಜೆ' (ಪು. ೧೪) ಮನದನ್ನೆ (ಪು. ೧೮) ಇತ್ಯಾದಿ) ಕವನಗಳನ್ನು ಓದಲು ಆರಂಭಿಸಿದಾಗ, ಒಂದೆರಡು ಪಾದಗಳಲ್ಲೇ ಓದುಗ ಒಂದು ರೀತಿಯ 'ಲಯ'ವನ್ನು ಹಿಡಿಯುತ್ತಾನೆ. ಆ ಲಯವೇ ಕೊನೆಯವರೆಗಿರಬೇಕೆಂದು ಬಯಸುತ್ತಾನೆ. ಲಯ ಅಕಾರಣವಾಗಿ ಬೇರಾದಾಗ ಓದುವಿಕೆಯ ಓಟ ಮುಗ್ಗರಿಸುತ್ತದೆ. (ಉದಾ: ಸುಂಟರಗಾಳಿ, ಸಂಜೆ). ಪ್ರಚುರವಾದ ಛಂದಸ್ಸನ್ನು ಸೊಗಸಾಗಿ ಬಳಸಿದ್ದರೂ, ಸುನೀತಗಳಲ್ಲಿ ಸಿದ್ಧಿಯಾಗಿಲ್ಲ. ಹೊಸ ಪ್ರಯೋಗಗಳು ಪರವಾಯಿಲ್ಲ. ಒಂದೊಂದು ಕಡೆ, ವ್ಯರ್ಥಪ್ರಾಸ, ಆದರಿಂದ 'ಗದ್ಯತನ' ತಲೆದೋರಿದೆ. (ಉದಾ: ಒಂದು ಸಂಜೆ ಪು. ೧೯).

ಅನುಭವಪ್ರಧಾನ ಸಾರ್ಥಕವಾಗಲು ಮೋಹಕ ಉಕ್ತಿರೀತಿ ಬಳಸಿದ್ದಾರೆ. ಇನ್ನೊಬ್ಬರು ಬಳಸಿದರೆ ಹಳೆಯುವಾಗುವ ಹೊಚ್ಚಹೊಸ ನುಡಿಗಡಣ, ಉಪಮಾನಗಳೂ ಇವೆ. 'ಗಾಳಿ ಬೆವರಿದೆ', 'ಮುಗ್ಧ ತೀರ್ಥ' 'ನೆಲವೆ ಮಿದುವಾಯಿತು', 'ಕ್ರಾಂತಿಗಳ ಸಂತೆ' ಇತ್ಯಾದಿ, ಆಡುನುಡಿ ಅಥವಾ ಹಿಡಿನುಡಿಗಳಾಗಿ ಬಿಡುವ, ಕೆಲವು ವಾಕ್ಯಗಳು ಇಲ್ಲಿವೆ. ಮನದನ್ನೆ 'ಜೀವಯಾತ್ರೆಯ ಪಥಕೆ ಸಹಯಾತ್ರಿ, ಮೋಣ್‌ಸ್ಫೂರ್ತಿ' ಕಂದ 'ಎರಡು ಬಾಳನ್ನು ಬೆಸೆವ ಸೂತ್ರಧಾರ', 'ಕಸಪೊರಕೆಯೆನಗೆ ಗುರು, ಮೋಹೆನ್ನ ಬಾಳಗುರಿ', ಯೇಸುಕ್ರಿಸ್ತನ 'ಕಣ್ಣುಗಳೆರಡು ಕರುಣಾ ರಸದ ಕಡಲಂತೆ' ಇತ್ಯಾದಿ. ಜೊತೆಗೆ 'ಸುಂಟರಗಾಳಿ'ಯಲ್ಲೆದ್ದ ತರಗೆಲೆಗಳನ್ನೂ ವರ್ಣಿಸುವಾಗ 'ಗಾಂಧೀಜಿಯ ವ್ಯಕ್ತಿತೆಯುಲಿ ಮೇಲೆದ್ದಾ ಜನತೆಯೊಲು' ಎನ್ನುವ ಉಪಮಾನದ ಸಾರ್ಥಕತೆ ಜಿಜ್ಞಾಸೆ ತೋರುತ್ತದೆ.

ಒಟ್ಟಿನಲ್ಲಿ ಶ್ರೀ ಶಿವರುದ್ರಪ್ಪನವರ ವ್ಯಕ್ತಿಯಂತೆ ಉಕ್ತಿ. ಬೆಳಗಿನ ಜಾವ ಮುತ್ತೈದೆಯ ಹಿಂದೆ, ಮಿಂದು, ಮಡಿಹೊದ್ದು, ದೇವಸ್ಥಾನಕ್ಕೆ ತೆರಳುವ ಬಾಲಕನ ಸರಳ, ಮುಗ್ಧ, ಮಂಗಳ ರೀತಿಯಂತೆ ಅವರ ಗೀತೆಗಳು. ಅದೇ ನಯ, ಅದೇ ನವುರು ಕಾವ್ಯದುದ್ದಕ್ಕೂ ಇದೆ. ಕವಿಗಳಿಗೆ ನಾವು ಋಣಿಗಳು. ಹೊಸ ಗೀತೆಗಳು ಬರಲೆಂದು ಹಾರೈಸುವೆ.

---

* ಪ್ರ.ಕ. 36.3

ದೊಡ್ಡರಂಗೇಗೌಡ

# ಜಿ.ಎಸ್.ಎಸ್ ಅವರ ಚೆಲುವು-ಒಲವು

ಶ್ರೀ ಜಿ. ಎಸ್. ಶಿವರುದ್ರಪ್ಪ ಅವರು ತಮ್ಮ "ಚೆಲುವು-ಒಲವು" ಕವನ ಸಂಕಲನ ವನ್ನು ೧೯೫೩ರಲ್ಲಿ ಪ್ರಕಟಿಸುವ ವೇಳೆಗೆ ಕನ್ನಡದಲ್ಲಿ 'ನವ್ಯ ಕಾವ್ಯ' ಪ್ರಾರಂಭವಾಗಿತ್ತು. ಕನ್ನಡದಲ್ಲಿ ಭಾವಗೀತೆಗಳನ್ನು ಬರೆಯುತ್ತಿದ್ದ ಅನೇಕ 'ನವೋದಯ ಕವಿಗಳು' ತಮ್ಮ ಸ್ಫೂರ್ತಿತತ್ವದ ನಂಬಿಕೆಯನ್ನು ಗೌಣವಾಗಿಸಿಕೊಂಡು ಪ್ರಜ್ಞಾಪೂರ್ವ ರಚನೆಗಳತ್ತ ಒಲವು ತೋರಿಸಿದ್ದರು. ಕವಿತೆಯ ಆಂತರಿಕ ಎಳೆಗಳು ಭಾವನೆಗಳ ನಿಚ್ಚಳ ಸಲುಕು ಗಳಾಗದೆ ಬೌದ್ಧಿಕ ಕಸರತ್ತು ತುಂಬಿದ ಹೊಸ ಶೈಲಿಯ ಆಕರ್ಷಕ ನುಡಿ ವಿಧಾನಗಳಾಗಿ ಮಾರ್ಪಡುತ್ತಿದ್ದವು. ನವೀನ ವಿಚಾರಧಾರೆಯಿಂದ ಪ್ರೇರಿತವಾದ 'ಹಿಂದಿನವರಿಗಿನ್ನ ನಾವು ಸಂಪೂರ್ಣ ವಿಭಿನ್ನ' ಎಂಬ ಪ್ರಖರ ಧೋರಣೆಗಳಿಂದ ಆವೃತ್ತವಾದ ನವ್ಯ ಬರ ವಣಿಗೆ ಕಾವ್ಯಾಸಕ್ತರ ಕಣ್ಣುಕುಕ್ಕುತ್ತಿದ್ದ ಕಾಲ ಅದು; ಸಾಹಿತ್ಯ ಚರಿತ್ರೆ ಇದಕ್ಕೆ ಸಾಕಷ್ಟು ದಾಖಲೆಗಳನ್ನು ಒದಗಿಸುತ್ತದೆ.

ಇಂಥ 'ರೂಪಾಂತರ' ಸನ್ನಿವೇಶದಲ್ಲಿ ಕನ್ನಡ ಕಾವ್ಯ ತನ್ನ ವಾಹಿನಿಯ ಹಂತದಲ್ಲಿ ದಿಕ್ಕು ಬದಲಿಸಲಿರುವ ಆವೇಶದಲ್ಲಿ ಅನೇಕ ನವೋದಯ ಕವಿಗಳೂ ತಮ್ಮ ತಮ್ಮ ಬರ ವಣಿಗೆಗೆ 'ಕಾಯಕಲ್ಪ' ಮಾಡಿಕೊಳ್ಳುವ ಸನ್ನಾಹಕ್ಕೆ ತೊಡಗಿದರು. ಕೆಲವರಂತೂ 'old wine in a new bottle' ಅನ್ನುವ ಹಾಗೆ ತಮ್ಮ ರಚನಾ ಮಾದರಿಗಳಲ್ಲಿ ಮಾತ್ರ ಕಸಿ ಮಾಡಿಕೊಂಡು ಅಂತರಾಳದಲ್ಲಿ ಅಪ್ಪಟ ರಮ್ಯವಾದಿಗಳಾಗೇ ಸೃಜನೆಯ ಉಸಿರಾಟ ನಿಲ್ಲಿಸದೆ ಚಲಾವಣೆಯಲ್ಲಿ ಉಳಿದರು. ಅತ್ತ ಸಂಪೂರ್ಣವಾಗಿ 'ನವ್ಯ'ವೂ ಆಗದ ಇತ್ತ ಸಂಪೂರ್ಣವಾಗಿ 'ನವೋದಯ'ದ ಮುಂದುವರಿಕೆಯಲ್ಲೂ ನಿಲ್ಲದ ಕೆಲವರು ಎರಡೂ ಮಾರ್ಗಗಳ ಜೀವಂತ ಮಿಡಿತಗಳನ್ನು ತಮ್ಮ ಕವಿತೆಗಳ ನುಡಿ ತುಡಿತಗಳಿಗೆ ಬಳಸಿಕೊಂಡರು. ಅಂಥವರಲ್ಲಿ ಜಿ. ಎಸ್. ಶಿವರುದ್ರಪ್ಪ ಅವರೂ ಒಬ್ಬರು ಎಂಬುದಕ್ಕೆ 'ಚೆಲುವು-ಒಲವು' ಕೆಲವು ಪುರಾವೆಗಳನ್ನೊದಗಿಸುತ್ತದೆ.

'ಗೋಡೆ' ಪ್ರಕಟವಾಗುವ ವೇಳೆಗೆ ಕವಿಯ ಶೈಲಿ ಸಾಕಷ್ಟು ಬದಲಾವಣೆಗಳಿಂದ ತುಂಬಿಕೊಂಡು ಸ್ಪಷ್ಟ ಧೋರಣೆಗಳಿಂದ ಜೀವನ ಪ್ರೀತಿಯ ಬಗೆಗೆ ಅಪಾರ ಕಾಳಜಿ ಯಿಂದ ಬರೆವಣಿಗೆಯಲ್ಲಿ ಪ್ರಜ್ಞಾಪೂರ್ವಕವಾಗಿ ಕಂಡರಿಸಿಕೊಂಡ ಕೆಲವು ಪ್ರಯೋಗ ಗಳಿಂದ ಕನ್ನಡ ಕಾವ್ಯಪ್ರಪಂಚದಲ್ಲಿ ತಮ್ಮ ಭದ್ರ ನೆಲೆ ಪಡೆದುಕೊಂಡಿದ್ದಾರೆ. ಆದರೆ

'ಚೆಲುವು-ಒಲವು' ಪ್ರಕಾಶಿತವಾದ ಕಾಲಕ್ಕೆ ತಮ್ಮ ರಚನೆಗಳಲ್ಲಿ ಸಂಕ್ರಮಣದ ಹಂತದಲ್ಲಿದ್ದಾರೆ.

'ಚೆಲುವು-ಒಲವು' ಕೊಟ್ಟ ಕವಿ ಬಾಳಿನ ಅಭ್ಯುದಯದ ಬಗೆಗೆ ಆಶಾವಾದಿ. ಇಲ್ಲಿ ಆವೇಶದಷ್ಟೆ ಆದರ್ಶವಿದೆ. ರಮ್ಯ ನುಡಿಕಾರಂಜಿಗಳಲ್ಲೂ ಧ್ವನಿಯ ಆಂಶಿಕ ಉಜ್ವಲತೆಯೂ ಮರೆಯಾಗದೆ ಮಿಂಚಿದೆ—ಎಂಬುದಕ್ಕೆ ಸಾಕಷ್ಟು ನಿದರ್ಶನಗಳನ್ನು ಕೊಡಬಹುದು.

ಈ ಲೇಖನದಲ್ಲಿ ಕವಿಯ ಮನೋಧರ್ಮವನ್ನು ವಿವರಿಸುವ ಸಲುವಾಗಿ ಕೆಲವು ಪದ್ಯಗಳನ್ನು ಮಾತ್ರ ವಿಶ್ಲೇಷಣೆಗೆ ಎತ್ತಿಕೊಳ್ಳಲಾಗಿದೆ. ಇಂಥ ಕವಿತೆ ಇಲ್ಲಿ ಪ್ರಾತಿನಿಧಿಕ ಎಂದು ಹೇಳಿ ಕಾವ್ಯ ಮೀಮಾಂಸೆಯನ್ನು ಸೀಮಿತ ಮಾಡಿಕೊಳ್ಳದೆ ನನ್ನ ಅಭಿಪ್ರಾಯವನ್ನು ಸ್ಪಷ್ಟಪಡಿಸುವ ಉದ್ದೇಶದಿಂದ ಉಲ್ಲೇಖಿಸಲಾಗಿದೆ. ಏಕೆಂದರೆ ಜಿ.ಎಸ್.ಎಸ್. ಅವರು 'ಚೆಲುವು-ಒಲವು' ಪ್ರಕಟಿಸಿದ ನಂತರದಲ್ಲಿ ಅನೇಕ ಒಳ್ಳೆಯ ಕವಿತೆಗಳನ್ನು ತಮ್ಮ ಮುಂದಿನ ಸಂಕಲನಗಳಲ್ಲಿ ಕೊಟ್ಟಿದ್ದಾರೆ ಎಂಬುದನ್ನು ಮರೆಯಲಾಗದೆ ಇರುವುದು.

"ಜಡೆ" ಎಂಬ ಕವಿತೆ ಈ ಸಂಕಲನದಲ್ಲಿ ಅತ್ಯಂತ ಕುತೂಹಲವನ್ನು ಕೆರಳಿಸುವ ಕವಿತೆಯಾಗಿದೆ. ಒಂದೇ ವಿಷಯದ ಸುತ್ತ ಬಳ್ಳಿಯಂತೆ ಹಬ್ಬಿಕೊಳ್ಳುತ್ತಾ ಒಂದೊಂದು ತುದಿಯಲ್ಲೂ ಹೊಂದಾಣಿಕೆಯ ಒಂದೊಂದು ಹೋಲಿಕೆಯ ಹೂ ಬಿಡುತ್ತಾ ಇಡೀ ಪದ್ಯ ಸಹಜವಾಗಿ ಮೈತಳೆದಿದೆ; ಪ್ರತಿಮೆಗಳ ಸಾವಯವ ಸಂಬಂಧ ಕಲಾತ್ಮಕವಾಗುವಲ್ಲಿ ನೆರವಾಗಿದೆ. ಪ್ರತಿಸಾಲೂ ನುಡಿ ಚಿತ್ರವನ್ನು ಕಟ್ಟಿಕೊಡುವುದರ ಮೂಲಕ ಓದುಗರಿಗೆ ಇಲ್ಲಿನ ಸಂಕೇತ ಮನಸ್ಸಿನಲ್ಲಿ ಅಚ್ಚೊತ್ತಿ ನಿಲ್ಲುವಷ್ಟು ಪ್ರಖರವಾಗಿದೆ.

ಹೆಣ್ಣಿನ ಕರುಳಿನ ಇತಿಹಾಸದ ಹಾಗೆ ಅನಾದಿಯಿಂದ ಜಡೆ ನಡೆದುಬಂದ ಹಾದಿಯ ಹಾಗೆ ಪುರಾಣ ಪ್ರಪಂಚದ ಸೂಕ್ತ ಕತೆಗಳನ್ನೂ ಲೇಪಿಸಿಕೊಂಡು ಕವಿತೆ ಸಂಕೀರ್ಣವಾಗಿದೆ. ಅಷ್ಟೆ ಧ್ವನಿಪೂರ್ಣವಾಗಿದೆ. ಪದ್ಯದ ಪ್ರಾರಂಭದಲ್ಲಿ ಸಾಮಾನ್ಯ ಹೆಣ್ಣಿನ ಜಡೆ 'ಬೆನ್ನಿನೆಡೆ ಹಾವಿನೊಲು' ಹರಿದಾಡುವ ಹಾಗೆ ಕವಿ ದೃಷ್ಟಿಗೆ ಗೋಚರವಾಗಿದೆ. ಮುಂದೆ ಅದು ಕವಿಯ ಆಲೋಚನೆಯಲ್ಲಿ ಬೆಳೆಯುತ್ತಾ 'ಜಡೆ'ಯ ಬಹುಮುಖ ಗುಣಗುಣಗಳನ್ನೂ ಹೆಕ್ಕಿಕೊಳ್ಳುತ್ತಾ ಅದರ ಸ್ವರೂಪದರ್ಶನದ ಕಡೆಗೆ ನುಡಿಯ ಮುನ್ನಡೆ ತೂಕಬದ್ಧವಾಗಿದೆ.

ಕೃಷ್ಣಸರ್ಪದ ಹಾಗೆ, ಚೇಳಿನ ಹಾಗೆ, ಮಿಡಿನಾಗರನ ಹಾಗೆ, ಜಟೆಯ ಹಾಗೆ—ಬಗೆಬಗೆ ಆಕಾರದಲ್ಲಿದೆ ಅದರ ಇರುವಿಕೆ. ಅದು ಮಲ್ಲಿಗೆಯ ಕಂಪಿನಿಂದಲೂ ಕೇದಗೆ ಕಟು ಸುವಾಸನೆಯಿಂದಲೂ ಪೂರಕವಾಗಿ ಅಲಂಕೃತವಾದ ಸಂಗತಿಗಳಿಂದ ಕವಿತೆಯ ಮೈ ಚಿತ್ತಾರವಾಗಿ 'ಅಪೂರ್ವ' ಪಟ್ಟ ದಕ್ಕಿದೆ.

'ಮಾತೃಮುಮತಾ ವೃಕ್ಷ ಜಟ್ಟ ಬೀಳಲಿಸಂತೆ
ಹರಡಿರುವ ತಾಯ ಜಡೆ'[1]

---

1 ಜಿ. ಎಸ್. ಶಿವರುದ್ರಪ್ಪ : 'ಚೆಲುವು-ಒಲವು' (೧೯೫೩), ಪುಟ. ೬೦

ಎಂಬ ವರ್ಣನೆ ವಸ್ತುವಿನ ನಿರೂಪಣೆಯಿಂದ ಆರ್ದ್ರವಾಗಿ ಓದುಗರು ಕೃತಿಕಾರನ ಬಗ್ಗೆ ಗೌರವ ಭಾವ ಮಿಡಿಯುವ ಹಾಗೆ ತೀವ್ರವಾಗಿದೆ. ಪಾಂಚಾಲಿಯ ಜಡೆಯ ಉಲ್ಲೇಖ ಕವಿತೆಯ ಮೂಲದನಿಗೆ ಭಾವ ಪರಾಕಾಷ್ಠೆಯನ್ನು ತಂದುಕೊಡುವಲ್ಲಿ ನೆರವಾಗುತ್ತೆ. ಸೀತೆಯ ಜಡೆ ಮುಂತಾಗಿ ಸುರುಳಿ ಬಿಚ್ಚಿಕೊಳ್ಳುವ ಐತಿಹಾಸಿಕ ಪೌರಾಣಿಕ ಸಂಗತಿಗಳ ಸೂಚನೆಯಲ್ಲಿ ಕವಿತೆಯ ಭಾವದೋಟ ಸಹೃದಯರ ಅನುಕಂಪಕ್ಕೆ ಗುರಿಯಾಗುತ್ತದೆ. ಅಂಥ ಮಾರ್ಮಿಕ ಮಜಲಿನಲ್ಲಿ ಕವಿ ವಸ್ತು ಪ್ರತಿಪಾದನೆಗಾಗಿ ದನಿ ತೆಗೆಯುವ 'ಓ ಓ ಈ ಜಡೆಗೆಲ್ಲಿ ಕಡೆ' ಎಂಬ ಭಾವಪೂರಕ ಉದ್ಗಾರ ಸಹಜವಾಗಿ ಸುಂದರವಾಗಿ ಮೂಡಿ ಜಡೆಯ ಅಗಣಿತ ಆಯಾಮಗಳ ಚಿತ್ರವನ್ನು ಊಹಿಸಿಕೊಳ್ಳಲು ಪುಷ್ಟಿ ದೊರೆಯುತ್ತದೆ.

ಕವಿತೆಯ ಎರಡನೆಯ ಘಟ್ಟದಲ್ಲಿ ವಸ್ತುವಿನ ರೌದ್ರತೆಯೂ ಸಹ ಕಾರಂಜಿಯಂತೆ ಚಿಮ್ಮಿದೆ. ಪದ್ಯದ ಒಟ್ಟಾರೆ ದನಿ ಬೇರೆಬೇರೆ ಘಟ್ಟಗಳಲ್ಲಿ ಏರುವ ಪರಿಗೆ ಈ ಘಟಕ ಸೂಚಕವಾಗಿದೆ. ಸಂಜೆಯ ಕಾಳಜಡೆ ಬೆಳಗಿನಲಿ ಬೆಳಕು ಜಡೆಯಾಗಿ ಕವಿ ಕಲ್ಪನೆಯಲ್ಲಿ ವಸ್ತುವಿನ ವೈಖರಿ ಚಿಗುರಿ ಮುಗಿಲಲ್ಲಿ ತೇಲುವ ಬೆಳ್ಳಕ್ಕಿಗಳ ಹಾಗೆ ಸರೋವರದಲ್ಲಿ ಈಜುವ ಹಂಸಗಳ ಹಾಗೆ ಮರ ಮರದಲ್ಲಿ ನಗುವ ಹೂಗಳ ಹಾಗೆ ಕಾಡಿನಲ್ಲಿ ಹರಿಯುವ ಹೊಳೆಯ ಹಾಗೆ—ಕವಿತೆ ವರ್ಣಮಯವಾಗುತ್ತದೆ. ಆ ಜಡೆ ಪರ್ವತಶ್ರೇಣಿಯ ಹಾಗೆ ವಿನ್ಯಾಸ ಪಡೆದು ದಿಗಂತದ ಚೆಲುವನ್ನು ಜ್ಞಾಪಿಸಿ ಮುನ್ನಡೆದು ಅದರ ವಿಶ್ವ ವ್ಯಾಪಕ ತತ್ವವನ್ನು ಸಾರುತ್ತದೆ. ಅಂಥ ಅಮೋಘ ಜಡೆಯ ಭಾವದ ಇರುವಿಕೆಯಿಂದ ಕವಿಗೇ ಬೆರಗಾಗಿದೆ. ಅದನ್ನು ಪಡೆದ ತಾಯ ಕಾಣಲು ಕವಿ ಕಾತರಿಸುತ್ತಾನೆ, ಆ ಚಡಪಡಿಕೆ ಲೌಕಿಕ ಅರ್ಥದಲ್ಲಿ ಸಾರ್ಥಕವಾಗುವುದಿಲ್ಲ. ಆದರೆ ಕವಿಯ ಬಗೆಗಣ್ಣಿನಲ್ಲಿ

> "ಜಡೆಯಾಚೆ ತಿರುಗಿಸಿದ ತಾಯಮುಖ ಮಾತ್ರ ಇಂದಿಗೂ
> ಕಾಣದಲ್ಲ"[2]

ಎಂಬ ಬೆಡಗಿನಾಚೆಯ ರಹಸ್ಯ ಮೀರಿದ ಸೃಷ್ಟಿಯ ಅರ್ಥವಂತಿಕೆಯ ಅಗಾಧತೆಯ ಬಗೆಗೆ ಗೌರವ ಮೂಡಿ ಕವಿತೆ ಮುಕ್ತಾಯವಾಗಿದೆ. ಕವಿಯ ಪ್ರತಿಭಾದರ್ಶನ ಇಲ್ಲಿನ ಅಭಿವ್ಯಕ್ತಿಯಲ್ಲಿ ಘನೀಭೂತವಾಗಿ ಪದ್ಯ ಅನೇಕ ಅರ್ಥ ಪರಂಪರೆಗಳ ತರಂಗಗಳನ್ನು ನೀಡಿ ಯಶಸ್ಸಿನ ಹಂತ ತಲುಪಿದೆ. ಈ ಪದ್ಯದಲ್ಲಿ ಸಾಧಿತವಾಗಿರುವಷ್ಟು ಪ್ರತಿಮೆಗಳ ಸಮಗ್ರೀಕರಣದ ಯಶಸ್ಸು ಜಿ.ಎಸ್.ಎಸ್. ಅವರ ಈ ಸಂಕಲನದ ಬೇರೆ ಕವಿತೆಗಳಲ್ಲಿ ಆಗಿಲ್ಲ. ಇಲ್ಲಿನ 'ಜಯ' ಬೇರೆ ಕಡೆ ದಕ್ಕದೆ ಹೋಗಿರುವುದಕ್ಕೂ ಕಾರಣಗಳಿವೆ. 'ಜಡೆ' ಕವಿತೆಯ ಹಾಗೆ ಬೇರೆ ಕವಿತೆಗಳು ಪೂರ್ಣ ಪ್ರಮಾಣದ ಅರ್ಥವಂತಿಕೆ ಪಡೆದುಕೊಳ್ಳ ದಿರುವುದಕ್ಕೆ ಮುಖ್ಯ ಕಾರಣ—ಕವಿ ಹೀಗೆ ಭಾವದಲ್ಲಿ ಸೃಜನೆಯಲ್ಲಿ ತನ್ಮಯವಾಗದೆ ಇರುವುದು ಎಂದು ಕಾಣುತ್ತದೆ.

ಈ ಸಂಕಲನದ ಕವಿ ನಯವಾದ ನುಡಿ ಹೆಣಿಗೆಯಲ್ಲಷ್ಟೆ ನಿಮಗ್ನವಾಗುವ ಅವಕಾಶಗಳೇ ಹೆಚ್ಚು. ಗೀತಗಾರಿಕೆಯ ಕಡೆಗೂ ವಿಶೇಷ ಒಲವಿದೆ, ಆವೇಶವಿದೆ; ನಿರರ್ಗಳತೆಯೂ

[2] ಜಿ. ಎಸ್. ಶಿವರುದ್ರಪ್ಪ: ಚೆಲುವು-ಒಲವು (೧೯೫೩), ಪುಟ. ೬೧

ಇದೆ. ಆದರೆ ಎಲ್ಲವೂ ಘಳಿಗೆಘಳಿಗೆಗಳ ಭಾವ ದೀಪ್ತತೆಯಂತೆ ಅಲ್ಲಲ್ಲಿ ಕೋರೈಸುವ ಮಿಂಚು ಮಾತ್ರ ಸೂಸಿ ತನ್ನ ಅಖಂಡ ವ್ಯಕ್ತಿತ್ವವನ್ನು ರಚನೆಗಳಲ್ಲಿ ಪ್ರಕಟಿಸಿದ ಹಾಗೆ ಎಲ್ಲೂ ನುಡಿಸಾಕ್ಷಿಗಳು ದೊರೆಯುವುದಿಲ್ಲ.

ಇದಕ್ಕೆ ಇನ್ನೂ ಒಂದು ಕಾರಣವಿರಬಹುದು. ಜಿ. ಎಸ್. ಎಸ್. ಅವರು 'ಚೆಲುವು-ಒಲವು' ಹೊರತರುವ ವೇಳೆಗೆ ಕನ್ನಡ ಕಾವ್ಯಪ್ರಪಂಚದಲ್ಲಿ ವಿವಿಧ ಪ್ರಯೋಗಗಳ ವರ್ಣರಂಜಿತ ಸೃಜನೆಗಳು ಸಿಡಿಯುತ್ತಿದ್ದವು. ಅಂಥೆಲ್ಲ ಬಾಹ್ಯ ವಲಯಗಳೂ ಕವಿಯ ಸೃಜನಶೀಲ ವ್ಯಕ್ತಿತ್ವಕ್ಕೆ ತಾಕಿ ಕವಿಯ ರಚನಾತ್ಮಕ ಕ್ರಿಯೆಯನ್ನು ಕಲಕಿರುವ ಸಾಧ್ಯತೆಗಳಿರಬಹುದು. ಅದೇನಿದ್ದರೂ ಈ ಕವಿ ನಿಸರ್ಗದ ಬಗ್ಗೆ ಮುಕ್ತ ಗಮನ ಹರಿಸುವ 'ಕುವೆಂಪು' ಹಾಗೆ ಪ್ರಕೃತಿಯ ಬಗೆಗೆ ಅನನ್ಯ ಅಭಿಮಾನ ಪ್ರಕಟಿಸುವ ಕಡೆ ಸಹೃದಯರು ಮೆಚ್ಚಬೇಕಾಗುತ್ತದೆ.

ಸುತ್ತಲ ನಿಸರ್ಗದಲ್ಲಿ ನಡೆಯುವ ಪ್ರಕೃತಿ ಸಹಜ ವ್ಯಾಪಾರ ಕಂಡು ಕವಿಗೆ ವಿಸ್ಮಯ ವಾಗುತ್ತದೆ. ಏಳು ಸುತ್ತಿನ ಮಲ್ಲಿಗೆ 'ಹಚ್ಚನೆ ಹಸುರ ಗಿಡದಿಂದೆಂತು ಮೂಡಿತೊ ಬೆಳ್ಳಗೆ' ಎಂದು ಮಗುವಿನ ಹಾಗೆ ಜಿ. ಎಸ್. ಶಿವರುದ್ರಪ್ಪ ಅವರು ಮುಗ್ಧವಾಗಿ ಪ್ರಕೃತಿಯಲ್ಲಿನ ಎಳೆ ಎಳೆ ಆವಿಷ್ಕಾರಗಳನ್ನು ನೋಡಬಲ್ಲರು. ಇಂಥ ಕಡೆ, ಮೌನದಲ್ಲಿ ಮೊಳೆಯುತ್ತಾ ಮೊಗ್ಗಿನಲ್ಲಿ ಮಲಗಿದ್ದ ಹೂವಿನ ಚೆಲುವು ಮೆಲ್ಲಗೆ ಕಣ್ಣು ತೆರೆದ ಬಗೆಯನ್ನು ಚಿತ್ರಿಸಿ ರುವ ರೀತಿ ವರ್ಣಕ ಕವಿಗಳ ಧಾಟಿಯಾಗಿದೆ. ನವಿರಾದ ಹೂವಿನ ದಳಗಳನ್ನು ಹಸುಳೆಯು ಕಾಣುವ ಕನಸಿಗೆ ಹೋಲಿಸುವ ಭಾವುಕ ಗುಂಗು ಕವಿಯ ಸೌಂದರ್ಯದ ಉನ್ಮಾದಕ್ಕೆ ಒಂದು ಉದಾಹರಣೆಯಾಗಿದೆ. ಹೂ ಪಲ್ಲವಿಸುವ ಹಂತವನ್ನು ಅರ್ಥ ಮಾಡಿಕೊಂಡು ಈ ಕವಿ ಹೃದಯ ಮಿಡಿಯುತ್ತದೆ. ಬದುಕಿನಲ್ಲಿ ಕಾಣಬಹುದಾದ ಒಂದು ಸಾಮಾನ್ಯ ನೋಟವೂ ಸಹಜ ಅನುಭವವಾಗಿ ಜಿ.ಎಸ್.ಎಸ್. ಲೇಖನಿಯಲ್ಲಿ ಮೈತಾಳಬಹುದು. ಆದರೆ ಸಾಂದ್ರವಾಗುವ ಎಡೆಗಳು ಮಾತ್ರ ಬೆರಳೆಣಿಕೆಯಲ್ಲಿವೆ. ಕಾರಣ-ಜಾನಪದ ಕವಿಗಳಂತೆ ವೈಭವೀಕರಿಸಿ ಹೇಳುವ ಪದ್ಧತಿಯ ಕಡೆಗೇ ಕವಿ ಹೆಚ್ಚು ವಾಲಿರುವುದು.

ಜಿ. ಎಸ್. ಎಸ್. ಅವರು ಪ್ರತಿಯೊಂದನ್ನು ಉಪಮೆಗಳಲ್ಲಿ ಉಕ್ಕಿಸುವ ಹಂಬಲದಲ್ಲಿ ತೊಡಗುವಾಗ ರಮ್ಯ ಕಲ್ಪನೆಗಳನ್ನೇ ಕೊಡುತ್ತಾರೆ. ಆದರ ರೂಕ್ಷ ರೂಪಗಳು ತಮ್ಮ ಅಖಂಡತೆಗಳಲ್ಲಿ ಘನಿಭೂತವಾಗುವುದಿಲ್ಲ.

"ಇರುಳ ತಾಯಿಯ ಕೊರಳ ಮಾಂಗಲ್ಯದಿಂದಿಳಿದ
ಹೊಳಹಿನೊಲು ಎಲ್ಲೆಲ್ಲು ಬೆಳಕಾಗಿದೆ"[3] ("ಒಂದಿರುಳು")

"ಮುಗಿಲ ಕಾಳೊಗ್ಗದಲ್ಲಿ ಚಿಕ್ಕೆಗಳು ಮಿನುಗಿದುವು
ಚಿಂತೆಗಳು ಕಣ್ತೆರೆದು ನೋಡುವಂತೆ"[4] ("ಸಂಜೆ")

---

3 ಜಿ. ಎಸ್. ಶಿವರುದ್ರಪ್ಪ : ಚೆಲುವು-ಒಲವು (೧೯೫೩), ಪುಟ. ೪

4 ಅದೇ. ಪುಟ ೧೪

"ನೂರು ಕೊರಗಿನ ಜಿನುಗಿಸೊಲು
ತಟಪಟನೆ ತಟಪಟನೆ
ಒಂದೇ ಸಮನೆ ಕೊರೆವ ಕೊನೆಯ ಮೇಳ-
ದಲಿ ಜಗ ಮೂಕ
ಬೇಸರದ ಗೋರಿಯಾಗಿದೆ ಲೋಕ"[5] ("ಆಷಾಢ")

ಇಂಥ ಅನೇಕ ನುಡಿಚಿತ್ರಗಳು ಹೇರಳವಾಗಿ "ಚೆಲುವು-ಒಲವು" ಸಂಕಲನದಲ್ಲಿ ಸಿಗುತ್ತವೆ. ಆದರೆ ಅವುಗಳು ಆ ಕವಿತೆಯ ಅವಿಭಾಜ್ಯ ಅಂಗವಾಗಿ ಬಂದಿದ್ದರೂ ಸಹ ಸಂಪೂರ್ಣ ರೀತಿಯಲ್ಲಿ ಅವು ಧ್ವನಿಗಳನ್ನು ಪಡೆದುಕೊಳ್ಳದೆ ಆಂಶಿಕವಾಗಿ ಚೆಲುವಾಗಿವೆ.

ಜಿ.ಎಸ್.ಎಸ್ ಅವರು ಬಹುಮಟ್ಟಿಗೆ ವಸ್ತುವಿನ ಇರುವಿಕೆಯನ್ನು ಕೆದಕಿ ವಿಶ್ಲೇಷಿಸುವ ಗೋಜಿಗೆ ಹೋಗುವುದಿಲ್ಲ. ಅದರ ಬದಲು ಕ್ರಿಯೆಯ ವಿನ್ಯಾಸಗಳನ್ನೂ ಪರಿಣಾಮಗಳನ್ನೂ ಸೋಜಿಗದಲ್ಲಿ ದಾಖಲಿಸುವುದು ಪ್ರಿಯವಾಗಿದೆ. ಸಂಕಲನದ ಶಿರೋನಾಮೆ ಕೂಡ ಈ ಧೋರಣೆಯನ್ನು ಸೂಚಿಸುತ್ತದೆ.

'ಚೆಲುವು-ಒಲವು' ಸಂಕಲನದ ಎಲ್ಲ ಪದ್ಯಗಳೂ ಕಾವ್ಯಪ್ರೇಮಿಯ ಆಸಕ್ತಿಯನ್ನು ತನ್ನ ಕಕ್ಷೆಯಲ್ಲಿ ಬಂಧಿಸದೆ ಹೋದರೂ "ಬಾಗಿಲಲ್ಲಿ", "ಕ್ರಾಂತಿಕಾರ," "ಸುಂಟರಗಾಳಿ", "ಕಡಲನ್ನು ಕಂಡಾಗ" ಪದ್ಯಗಳು ತಮ್ಮ ನಿರೂಪ ಸಾಮರ್ಥ್ಯದಿಂದ ಗಮನ ಸೆಳೆಯುತ್ತವೆ.

"ಭಿಕ್ಷಕ್ಕೆ ಬಂದವರ ಮುಂದೆ ಭಿಕ್ಷುಕನಾದೆ
ನನ್ನೆದೆಯ ಜೋಳಿಗೆಯ ನಾನೆ ತೆರೆದು"[6]

ಈ ಸುಂದರ ಸಾಲುಗಳು ಜಿ.ಎಸ್.ಎಸ್ ಕಾವ್ಯದ ಧ್ವನಿ ನಿರ್ಧರಿಸುವಲ್ಲಿ ದಿಕ್ಸೂಚಿಯಾಗಿವೆ.

ಮಾತಿನ ಮಾರ್ದವತೆ, ಒಂದೇ ಭಾವವನ್ನು ಹತ್ತಾರು ರೀತಿ ಹೇಳುವ ವರ್ಣನಾ ಗತ್ತು ಜಿ.ಎಸ್.ಎಸ್ ಅವರ ರಚನೆಯ ಹಿನ್ನೆಲೆಯಲ್ಲಿ ಹೆಚ್ಚಾಗಿ ಮಿಡಿಯುವ ಅಂಶಗಳು. ಈ ಸಂಕಲನದ "ಕನ್ನಂಬಾಡಿ" ಒಂದು ಒಳ್ಳೆಯ ಸಾನೆಟ್. "ಮೊದಲ ನಾಲ್ಕು ಸಾಲಿನಲ್ಲಿ ಆವೃತ. ಪ್ರಾಸದ ಚೌಪದಿ, ಅನಂತರ ಐದು ದ್ವಿಪದಿಗಳಿರುವ ಸಾನೆಟ್ಟು" ಇದು.[7] ಮೋಹಕವಾಗಿದೆ.

ಹೀಗೆ 'ಚೆಲುವು-ಒಲವು' ಕವಿಗೆ ಜೀವನದ ಬಗ್ಗೆ ಅದಮ್ಯ ಉತ್ಸಾಹವಿದೆ, ಪ್ರಕೃತಿಯ ಬಗ್ಗೆ ಅಪಾರ ಮೋಹವಿದೆ. ಒಳ್ಳೆಯ ಮೌಲ್ಯಗಳ ಬಗೆಗೆ ತುಡಿತವಿದೆ. ಹಿರಿಯ ಚೇತನಗಳ ಬಗೆಗೆ ಗೌರವ ನಮನ ಪ್ರಕಟಿಸುವ ನಮ್ರತೆಯಿದೆ. ಇಂಥೆಲ್ಲ ಗುಣ

---

[5] ಅದೇ. ಪುಟ ೩೦

[6] ಜಿ. ಎಸ್. ಶಿವರುದ್ರಪ್ಪ : ಚೆಲವು-ಒಲುವು, ಪುಟ ೩೫

[7] ಎಸ್. ಅನಂತನಾರಾಯಣ : ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ (೧೯೬೨), ಪುಟ. ೨೧೨

ಗಳಿಂದ ಕವಿ 'ನವೋದಯ' ಕವಿಗಳ ಮೂಲ ಮಿಡಿತಗಳನ್ನೇ ತಾವು ಮಿಡಿದರೂ ತಮ್ಮದೆ ಹಾದಿ ತುಳಿಯಬೇಕೆನ್ನುವ ನಿಷ್ಠೆಯಲ್ಲಿ ಸಾಗಿದ್ದಾರೆ; ಗಣನೀಯ ಸೃಜನೆಗಳನ್ನು ಇಲ್ಲಿ ದಾಖಲಿಸಿದ್ದಾರೆ. ಜಿ.ಎಸ್.ಎಸ್ ಅವರ ಮುಂದಿನ ಸಂಕಲನಗಳು ಈ ಅಂಶಗಳನ್ನು 'ಪೂರ್ಣಸ್ವರೂಪ'ದಲ್ಲಿ ಪ್ರಕಟಿಸುವ ಸನ್ನಾಹದಲ್ಲಿ ಕ್ರಿಯಾತ್ಮಕವಾಗಿವೆ.

## ಪ್ರಭುಶಂಕರ

# ದೇವಶಿಲ್ಪ

ಮುದ್ದಾಗಿ, ಅಚ್ಚಾಗಿ, ಸರಳ ಶುಭ್ರವಾಗಿ ಉಡುಪು ಧರಿಸಿ ಕವನ ಸಂಕಲನವೊಂದು ಕೈಗೆ ಬಂದಾಗ ಸಹೃದಯನಿಗೆ ಸಂತೋಷವಾಗುತ್ತದೆ. ಆದರೆ ಮರುಕ್ಷಣವೇ ತಾನಿರುವುದು ಇಪ್ಪತ್ತನೆಯ ಶತಮಾನದ ಉತ್ತರಾರ್ಧದ ಮೊದಲಿನಲ್ಲಿ ಎಂಬುದು ನೆನಪಾದಾಗ ಅಲಸಮನೋಭಾವದ ರಸಿಕನಿಗೆ ಅದನ್ನು ತೆರೆಯಲು ಭಯವೂ ಆಗುತ್ತದೆ. ತಾನು ಓದಬೇಕಾಗಿ ಬರುವ ಮುನ್ನುಡಿ ಹಿನ್ನುಡಿಗಳನ್ನೂ ಟೀಕೆ ಟಿಪ್ಪಣಿಗಳನ್ನೂ, ಮನಶ್ಶಾಸ್ತ್ರದಿಂದ ಹಿಡಿದು ಮರಣಶಾಸ್ತ್ರದವರೆಗಿನ ಗ್ರಂಥರಾಶಿಗಳನ್ನೂ ನೆನಪು ಮಾಡಿಕೊಂಡೇ ಆದರೂ ಸಹೃದಯ ಸಹಜವಾದ ಕಾವ್ಯ ಕುತೂಹಲದಿಂದ ಅದನ್ನು ಮೆಲ್ಲನೆ ತೆರೆಯುತ್ತಾನೆ. ಕವಿಯ ಉಪನ್ಯಾಸವನ್ನೂ, ಪ್ರಕಾಶಕರ ಸಾಹಸ ಕಥೆಯನ್ನೂ ತಿರುವಿಹಾಕಿದರೆ ಮೊದಲಲ್ಲೇ ಇಂಥದೊಂದು ಕವನ ಕಣ್ಣಿಗೆ ಬೀಳುತ್ತದೆ:

ಸುತ್ತಮುತ್ತ ಅಂಧಕಾರ
ಮಳೆಹನಿಗಳ ಪಂಜರ!
ದೈತ್ಯಸೆರೆಯ ಕಂಬಿಯೊಳಗೆ
ಬಂತು ದೇವ ಕುಂಜರ!
ಬೆಣ್ಣೆ ಮೆದ್ದು ಮಲರುತಿತ್ತು
ಕೊಳಲೂದುವ ಕೆಂದುಟಿ!
ಮಧುರಭಾವದಿಂದ ಪುಲಕ-
ವಾಯ್ತು ಗೋಪ ಹೃತ್ಪುಟಿ!
ಯಮುನಾ ನದಿ ಪುಲಕವಾಯ್ತು
ನನಸುಗೊಂಡ ಕನಸಿಗೆ
ಬೃಂದಾವನ ವೇಣುಕುಂಜ
ಕೊಳಲಾಯಿತು ಉಸಿರಿಗೆ!
ಕೊಳಲುಳಿಯಿತು ಗಾಳಿಯಲ್ಲಿ
ಬಂತು ರಾಜ್ಯ ವೈಭವ
ಮಥುರಾಪುರದರಮನೆಯೊಳು
ಬೆಳೆಸುತ್ತಿತ್ತು ತೇಜವ.
ಕೊಳಲ ಹಿಡಿದ ಮಿದು ಬೆರಳೊಳು

ಪಾರ್ಥರಥದ ವಾಘೆಯು !
ಕೊಳಲೂದಿದ ಮಧುರಾಪುರ-
ದಲ್ಲಿ ಪಾಂಚಜನ್ಯವು !
ರಣರಂಗದ ತುಮುಲದಲ್ಲು
ಕೇಳು ದಿವ್ಯಗೀತೆಯು :
'ಸಂಭವಾಮಿ ಯುಗೇ ಯುಗೇ'
ಎನುವ ಪರಮ ಸತ್ಯವ !
ಮತ್ತೆ ಮತ್ತೆ ಅಂಧಕಾರ
ಮಳೆಹನಿಗಳ ಪಂಜರ,
ಸೊಂಡಿಲಾಡಿಸುತ್ತ ಬರುವು-
ದದೋ ದೇವ ಕುಂಜರ !

ಕವನಕ್ಕೆ ಕವಿ, 'ಕೃಷ್ಣಶಕ್ತಿ' ಎಂದು ಹೆಸರು ಕೊಟ್ಟಿದ್ದಾರೆ. ಕವನ ಶರೀರದಲ್ಲಿ ಎಲ್ಲೂ ಸ್ಪಷ್ಟವಾಗಿ ಹೇಳದಿದ್ದರೂ ಪೌರ್ವಾತ್ಯ ಪುರಾಣ ಪ್ರಪಂಚದ ಪರಿಚಯು ಇರುವ ಸಹೃದಯನಿಗೆ ಇದು ಶ್ರೀಕೃಷ್ಣನ ಜೀವನದ ಕಾವ್ಯ ಪ್ರತಿಮೆ ಎಂಬುದು ವೇದ್ಯವಾಗುತ್ತದೆ. ಮೊದಲ ನಾಲ್ಕು ಸಾಲುಗಳು ಚಿತ್ರಿಸುವ ಭವ್ಯಚಿತ್ರದಲ್ಲಿ ಅನಂತವಾದ ಧ್ವನಿಯಿದೆ. 'ದೇವ ಕುಂಜರ' ಎನ್ನುವ ಮಾತು ಕೃಷ್ಣನಾಗಿ ಮರ್ತ್ಯದಲ್ಲಿ ಅವತರಿಸಿದ ಅಮರ್ತ್ಯ ಶಕ್ತಿಯ ಅಮೇಯತೆಯನ್ನು ಸೂಚಿಸುತ್ತದೆ. ಸುತ್ತ ಕವಿಯುವ ಅಂಧಕಾರ ಮತ್ತು ಮಳೆ ಹನಿಗಳು ಸೃಜಿಸಿರುವ ಪಂಜರ ಇವುಗಳು, ಆತೀನ ಶಕ್ತಿಯ ಅವತಾರಕ್ಕೆ ಕಾರಣವಾಗುವ, ಮಾನವತೆಯಲ್ಲಿ ಕವಿದಿರುವ ಅಂಧಕಾರ ಮತ್ತು ಮಾಯೆಯ ಬಂಧನ ಇವುಗಳನ್ನು ರಮ್ಯವಾಗಿ ಧ್ವನಿಸುತ್ತವೆ.

ದೈತ್ಯ ಸೆರೆಯ ಕಂಬಿಯೊಳಗೆ
ಬಂತು ದೇವಕುಂಜರ !

ಅವತಾರಶಕ್ತಿಯ ಪ್ರವೇಶಕ್ಕೆ ಕವಿಪ್ರತಿಭೆ ನಿರ್ಮಿಸಿರುವ ಸುಮನೋಹರವಾದ ಪ್ರತಿಮೆ ಇದು. ದೈತ್ಯಶಕ್ತಿ ಸಾತ್ವಿಕತೆ ಸೌಜನ್ಯಗಳನ್ನು ಸೆರೆಯಲ್ಲಿಟ್ಟಿದೆ, ಅದರ ಸುತ್ತ ಭದ್ರ ಎಂದು ತಾನು ನಂಬಿರುವ ಕಂಬಿಗಳನ್ನು ನಿರ್ಮಿಸಿದೆ. ಆದರೆ ದೇವಕುಂಜರವೋ ತನಗೆ ಅದು ಕ್ರೀಡೆಯೆಂಬಂತೆ, ಅದು ತಳಿರಿನಿಂದ ನಿರ್ಮಿತವಾದ ತೆರೆಯೋ ಎಂಬಂತೆ ಲೀಲಾಜಾಲವಾಗಿ ಅದರೊಳಕ್ಕೆ ಪ್ರವೇಶಿಸಿದೆ.

ಕವನದ ಮುಂದಿನ ನಾಲ್ಕು ಪದ್ಯಗಳಲ್ಲಿ ಶ್ರೀಕೃಷ್ಣನ ಜೀವನಕ್ಕೆ ಸಂಬಂಧಿಸಿದ ಘಟನೆಗಳು ಧ್ವನಿಪೂರ್ಣವಾದ ಚಿತ್ರಣವಿದೆ. ಭಾವಗೀತೆಯ ಆತ್ಮಗುಣವಾದ ಅದೀರ್ಘತೆಯ ಸೂತ್ರವನ್ನು ಗಮನಿಸಿಯೋ ಎಂಬಂತೆ ಕವಿ, ಬಾಲಕೃಷ್ಣ ಪಾರ್ಥಸಾರಥಿಯಾಗಿ ಬೆಳೆಯುವವರೆಗಿನ ಚಿತ್ರವನ್ನು ಕೆಲವೇ ಪಂಕ್ತಿಗಳಲ್ಲಿ ಚಿತ್ರಿಸಿದ್ದಾರೆ. ಒಂದೊಂದೂ ಅವತಾರ ರಹಸ್ಯದ ಅಂಚನ್ನು ಸೋಂಕಿ ಹಿಂತಿರುಗುವಂತಹುದು.

ಯಮುನಾನದಿ ಪುಳಕವಾಯ್ತು
ನನಸುಗೊಂಡ ಕನಸಿಗೆ !

ಪ್ರಕೃತಿ ಶಕ್ತಿಗಳು ಕಂಡ ಕನಸು ಇದು. ಆ ಕನಸು ನನಸಿದಾಗ ಅವು ಪುಳಕವಾದು ವಂತೆ! ತನ್ನ ಕರ್ಮದ ತುದಿಯಲ್ಲಿ ಆ ಶಕ್ತಿ ಅಭಯ ನೀಡುತ್ತದೆ. 'ಸಂಭವಾಮಿ ಯುಗೇ ಯುಗೇ !' ಆರಂಭದ ಚಿತ್ರವನ್ನು ಮತ್ತೆ ನೀಡಿ ಕವಿಯೂ ಆ ಅಭಯವನ್ನು ಮತ್ತೆ ನೆನಪಿಗೆ ತರುತ್ತಾರೆ.

ಪ್ರತಿಮಾ ಭಾವಗೀತೆ ಎನ್ನಬಹುದಾದ ಇಂತಹುದೇ ಇನ್ನೊಂದು ಕವನ 'ದೇವಶಿಲ್ಪ.' ಜೀವ-ಪರಮರ ನಡುವೆ ನಡೆದ ಒಂದು ಸಂವಾದ ಇದು ಎಂಬುದನ್ನು ನೆನಪಿನಲ್ಲಿಟ್ಟು ಕೊಂಡರೆ ಈ ಕವನ ಸ್ಪಷ್ಟವಾಗುತ್ತದೆ. ಸುತ್ತಮುತ್ತಲೂ ಕತ್ತಲು. ಯಾವುದರ ತಿಳವೂ ಇಲ್ಲದ ಬತ್ತಲು. 'ಟಕ್ಕ ಟಕ್ಕ ಟಕ್ಕ ಸದ್ದು, ಅತ್ತ ಇತ್ತ ಎತ್ತಲು' ಏನು ಎಂದು ಜೀವ ಕೇಳುವಂತಿಲ್ಲ. ಹೀಗೆ ಬಂಡೆಯಾಗಿ ಏಕೆ ಬಿದ್ದಿದ್ದೇನೆ ಎಂದು ಪ್ರಶ್ನಿಸು ವಂತಿಲ್ಲ. ಏಕೆಂದರೆ ಅದಕ್ಕೆ ಮಾತ್ರ ಒದಗಿದ ವಿಶಿಷ್ಟ ಸ್ಥಿತಿಯಲ್ಲಿ ಇದು ಎಲ್ಲರಿಗೂ ಅದೇ ಗತಿ :

ನಿನ್ನಂತೆಯೆ ನೂರು ಬಂಡೆ,
ಈಗ ಇದೇ ನಿಲುಗಡೆ.

ಆದರೆ ಆ ಸ್ಥಿತಿ ಚಿರಂತನವಾಗಿ ಇರುವಂತಿಲ್ಲ. ಉದ್ಧಾರದ ಕಿರಣ ಇಳಿತಂದಿತು. ಆದರೆ ಹೀಗೆ :

ಅದೋ ಬಂತು ಒಂದು ಕೈಯಿ
ಮೈಯಿಲ್ಲದ ಮನಸದು !
ಮಿಂಚಿನುಳಿಯ ಹಿಡಿದು ಬಂತು
ಕನಸಿನಾಚೆ ಕನಸದು !

'ಮೈಯಿಲ್ಲದ ಮನಸದು !' ಎನ್ನುವಲ್ಲಿ ಸೃಷ್ಟಿಮುಖವಾದ ಋತಶಕ್ತಿಯ ಸ್ವರೂಪ. ಸಮಸ್ತವನ್ನೂ ಕವಿ ಹ್ರಸ್ವವಾಗಿ, ಸರಳವಾಗಿ, ಆದರೆ ಶಕ್ತಿಪೂರ್ಣವಾಗಿ ಕಾವ್ಯದಲ್ಲಿ ನುಡಿದಿದ್ದಾರೆ. ಅದು ಮನಸ್ಸು-ಚಿತ್. ಆದರೆ ಯಾವ ರೂಪವನ್ನೂ ತಳೆದಿಲ್ಲದಿರುವುದು. ಮೈಯಿಲ್ಲದುದು. ಜೀವಕ್ಕೋ ಕೈಯಾಗಿ ಕಾಣಿಸಿಕೊಳ್ಳುತ್ತಿದೆ. ಮಿಂಚಿನುಳಿಯನ್ನು ಹಿಡಿದ ಕನಸಿನಾಚೆಯ ಆ ಕನಸು.

ಟಕ್ಕ ಟಕ್ಕ ಟಕ್ಕ ಸದ್ದು
ಕೊರೆಯುತಿಹುದು ಜೀವ

ಎಂಬುದು ಯಾತನೆಯನ್ನನುಭವಿಸುತ್ತಿರುವ ಜೀವದ ಫಿರ್ಯಾದು ! ಆದರೆ ಆ ಶಕ್ತಿಯ ಉತ್ತರ :

"ಉಳಿಯ ಕಿರಣ ತೆರೆಯುತಿಹುದು
ನಿನ್ನನಂತ ಪವರವ !"

ದೇವಶಿಲ್ಪದ ಕಲ್ಪನೆ ಇದಕ್ಕೆ ತಿಳಿಯದಿದ್ದರೂ ಸಂಸ್ಕಾರದ ವಾಸನೆ ಹುಡಿಹುಡಿಯಾಗಿ ಹಾಕಬೇಕು. ಆದರೆ ಅಲ್ಲಿಯವರೆಗೆ ಅದಕ್ಕೆ ತಾಳ್ಮೆಯಿಲ್ಲ. ಅದು ಕೇಳಿಕೊಳ್ಳುತ್ತದೆ :

'ನನ್ನನೇನು ಮಾಡುತಿರುವೆ ಸಾಕು ಸಾಕು ನಿಲ್ಲಿಸು' ಮತ್ತೆ ಪರಮನ ಉತ್ತರ: 'ನಿನಗೇತಕೊ ಅದರ ಚಿಂತೆ?' ಕೊನೆಗೆ ಜೀವಕ್ಕೆ ಅತಿ ಅರಿವು ಮೂಡುತ್ತದೆ, ಸಮರ್ಪಣಾ ಭಾವ ವಿವರ ವ್ಯೆದೋರುತ್ತದೆ. 'ಸರಿಯೆ, ನನ್ನ ಸಾಯಿಸು.' ಆಗ ಪರಮನಕಾವಾಣಿ, ಅಭಯ, ದರ್ಶನ:

'ಸಾವಲ್ಲವೊ ಮರುಳೇ ಇದು
ಸ್ವಸ್ವರೂಪ ಕಾರಣ
ಕೃತಿಯು ಮುಗಿದ ಮೇಲೆ ಕಾಣೊ
ಆ ಕೃತಿಗಳ ದರ್ಶನ!'

ಈ ಎರಡೂ ಅಪೂರ್ವವಾದ ಕವನಗಳು ಎಂದು ನನ್ನ ಭಾವನೆ. ಮಾತುಗಳನ್ನು ಬಳಸುವುದರಲ್ಲಿ ಅನುಪಮವಾದ ಸಂಯಮ, ಬಳಸಿದ ನಾಲ್ಕು ಮಾತುಗಳಲ್ಲಿ ಅಸ್ಪಷ್ಟವಲ್ಲದ, ಆದರೂ ವಿಶಾಲವ್ಯಾಪ್ತಿಯನ್ನು ಪಡೆದ ಚಿತ್ರಗಳನ್ನು ಸೃಷ್ಟಿಸುವ ಶಕ್ತಿ ಬಹಳ ಜನ ಕವಿಗಳು ಪಡೆದ ವರವಲ್ಲ. ನೋವಿನ ನಡುವೆ ಇರುವ ನಲಿವಿನ ರಹಸ್ಯವನ್ನು, ಇರವಿನಾಚೆಯ ಅರಿವಿನ ಸ್ವರೂಪವನ್ನು ಪ್ರತಿಭೆ ಸಂದರ್ಶಿಸಿದಂತೆ ಪ್ರಾಮಾಣಿಕವಾಗಿ ಚಿತ್ರಿಸಿವೆ ಈ ಕವನಗಳು.

ಸತ್ಯದ ವಿಷಯದಲ್ಲಿ ಕವಿಪ್ರತಿಭೆ ಎಷ್ಟು ಶೀಘ್ರವೇದಿಯಾಗಿದೆಯೋ ಕವಿ ಹೃದಯ ಸೌಂದರ್ಯದ ವಿಷಯದಲ್ಲಿ ಅಷ್ಟೇ ಶೀಘ್ರವೇದಿಯಾಗಿದೆ. ಈ ಸಂಗ್ರಹದ ತುಂಬ ಹರಹಿಕೊಂಡಿರುವ ಪ್ರಕೃತಿ ಕವನಗಳಲ್ಲಿ ಇದನ್ನು ಕಾಣುತ್ತೇವೆ: ಪ್ರಕೃತಿಯ ಅನಂತ ಮುಖಗಳ ವರ್ಣಸೌಂದರ್ಯವನ್ನು ಅದರ ವಿವರ ವಿವರಗಳಲ್ಲಿ ಕವಿಯ ಕಣ್ಣು ಕಂಡು ಆನಂದಿಸಿದೆ; ಅದರ ಅನಂತ ರಾಗಗಳ ನಾದ ಮಾಧುರ್ಯವನ್ನು ಸೂಕ್ಷ್ಮಾತಿಸೂಕ್ಷ್ಮಭೇದಗಳೊಡನೆ ಕವಿಯ ಕಿವಿ ಕೇಳಿ ಆನಂದಿಸಿವೆ. ಅನೇಕ ಬೆಳಗುಗಳನ್ನು ಅನುಸರಿಸಿ ಮೂಡಿ ಬಂದ 'ಒಂದು ಬೆಳಗು' ನಡೆಸಿದ ಪವಾಡದ ಈ ಕೆಲವು ಚಿತ್ರಗಳನ್ನು ನೋಡಿ:

ಗಿರಿಶಿರದ ಮರಮರದ ತಳಿರ ತುಟಿಯೊಳು ತನ್ನ
ಅನುರಾಗವಿಟ್ಟು
ಬರುತಿಹುದು ನೋಡದೋ ಕೊಳೆ ಚರಂಡಿಯ ಜಲಕು
ಬಂಗಾರಗಳ ಬದುಕ ದಾನಕೊಟ್ಟು!

* * *

ನೂರು ಬೆಳಕಿನ ಹೆಜ್ಜೆ ಹಕ್ಕಿಗೊರಳಿನ ಗೆಜ್ಜೆ-
ಯನು ಕಾಲ್ಗೆ ಕಟ್ಟಿ,
ಹೂ ಹೂವಿನಂಗಡಿಯ ಕಂಪು ಮಳಿಗೆಯ ಕಟ್ಟಿ
ಸಂಚಾರ ಹೊರಟವೋ ಕೈಕೈಯೊಳು ಹಿಡಿದು
ಚೆಲುವುಗಳ ಬುಟ್ಟಿ

* * *

ಹಕ್ಕಿದೋಣಿಯ ರೆಕ್ಕೆವುಟ್ಟಿನ ಸುಯ್ಲು
ಗಾಳಿ ಕೊಳದಲಿ ತೆರೆಯನೇಳಿಸಿರಲು

ಮೂರು, ಮೂರು ರೀತಿಯದು. ಮೂಡಿಬಂದ ನೇಸರಿನ ಹೊಂಬೆಳಕು ಗಿರಿಶಿರದ ಮರ ಮರದ ಚಿಗುರಿನ ತುಟಿಗೆ ತನ್ನ ಪ್ರೇಮದ ಮುತ್ತನ್ನು ಮೌನವಾಗಿ ಒತ್ತಿ, ಯಾರೂ ಗಮನಿಸದಂತೆ ನಡೆಯಿತು. ಹಕ್ಕಿಗೊರಳನ್ನು ಸೇರುವ ವೇಳೆಗಾಗಲೆ ಬೆಳಕಿನ ಹೆಜ್ಜೆಯಾಗಿ ನಾದದ ಗೆಜ್ಜೆಯ ಸಂಗವನ್ನು ಬಯಸಿತು. ಹಕ್ಕಿಗೊರಳು ಆ ಗೆಜ್ಜೆಯನ್ನು ಒದಗಿಸಿತು. ವರ್ಣ, ನಾದ ಸರಿಯಾಗಿ ಸುಗಂಧಾನ್ವೇಷಣಕ್ಕೆ ಹೊರಟಿತು, ಹೂಹೂವಿನಂಗಡಿಯ ಕಂಪು ಮಳಿಗೆಯ ತಟ್ಟೆ, ಸಂಚಾರ ಹೊರಟವೋ ಕೈ ಕೈಯೊಳು ಹಿಡಿದು ಚೆಲುವುಗಳ ಬುಟ್ಟಿ!'

ಮೊದಲನೆಯ ಚಿತ್ರ ಕಣ್ಣಿಗೆ ಗೋಚರ. ಅರೂಪದೊಡನೆ ಆರೂಪವನ್ನು ಮಿಲನ ಗೊಳಿಸುವ ಕವಿಪ್ರತಿಭೆಯ ಪರಿಚಯ ಇರುವವರಿಗೆ ಎರಡನೆಯದೂ ಇಂದ್ರಿಯಗ್ರಾಹ್ಯ. ಮೂರನೆಯ ಚಿತ್ರವಾದರೋ ತೀರ ನವಿರು, ತೀರ ಸೂಕ್ಷ್ಮ. ಹಕ್ಕಿದೋಣಿಯ ರೆಕ್ಕೆಯ ಹುಟ್ಟಿನ ಸುಯ್ಲು ಗಾಳಿಯ ಕೊಳದಲ್ಲಿ ತೆರೆಯನ್ನೇಳಿಸುತ್ತಿದೆಯಂತೆ!

ಪ್ರಕೃತಿ ಕವನಗಳಲ್ಲಿ ಮನಸ್ಸಿನ ಮೇಲೆ ಸೌಂದರ್ಯದ ಚಿರಮುದ್ರೆಯನ್ನೊತ್ತಿ ಅದನ್ನು ಸಂಪೂರ್ಣವಾಗಿ ತನ್ನದನ್ನಾಗಿ ಮಾಡಿಕೊಳ್ಳುವ ಕವನ 'ಚೈತ್ರ.' ಸದ್ದುಗದ್ದಲ ವಿಲ್ಲದೆ, ಆಡಂಬರವಿಲ್ಲದೆ ಹೂವು ಅರಳುವಂತೆ ವಿಕಾಸಗೊಂಡಿರುವ ಒಂದೊಂದು ಪಂಕ್ತಿ ಯನ್ನೂ ಎಚ್ಚರಿಕೆಯಿಂದ ಸಹೃದಯನು ಗಮನಿಸಬೇಕಾಗುತ್ತದೆ, ಸಂಪೂರ್ಣ ರಸಾ ಸ್ವಾದನೆಗೆ :

ಸುಗ್ಗಿ ಬಂದಿತು ಹಿಗ್ಗು ಹೊಮ್ಮಿತು ಮರದ ಹರೆ ಹರೆಯೊಳಗಡೆ
ಚಿಗುರು ಹೂವಿನ ಕಾಯಿ ಹಣ್ಣಿನ ಬಯಕೆಗಾಗಿದೆ ಬಿಡುಗಡೆ !
ಎಂಥ ಬಡಕಲು ಗಿಡವು ಕೂಡಾ ಚೆಲುವಿಗಾಗಿದೆ ನಿಲುಗಡೆ !
ನೂರು ವರ್ಣದ ನೂರು ರಾಗದ ಚಿಲುಮೆ ಚಿಮ್ಮಿದೆ ಎಲ್ಲೆಡೆ !

ಮೂರನೆಯ ಪಂಕ್ತಿ ಚೆಲುವಿನ ಪವಾಡದ ಸಂದೇಶವನ್ನು ಹೊತ್ತುತಂದಿದೆ. ವಸಂತ ವೈಭವದಿಂದ ಬಡಕಲು ಗಿಡ ಕೂಡ ಚೆಲುವಿನ ನಿಲ್ದಾಣವಾಗಿದೆ! ಕಣ್ಣಿಗೆ ಕಾಣದ ಆ ಶಕ್ತಿಯ ಕರುಣೆ ಅಂಥದು!

ಕಾಣದಿಹ ಕಾರುಣ್ಯ ಕೋರಿದೆ ಬರಲು ಕೊಂಬೆಯ ಮೈಯಲಿ! ಇದಕ್ಕೆ ಪೂರ್ವದ ಮಾಗಿಯಲ್ಲಿ, ಎಲ್ಲವೂ ಬಯಲು. ವಸಂತನ ಮಧುರ ಸ್ಪರ್ಶದಿಂದ ಬರಲು ಕೊಂಬೆ ಕೂಡ ಚಿಗುರಿದೆ, ಕಾಣದಿಹ ಕಾರುಣ್ಯವೇ ಚಿಗುರಿದಂತೆ. ಇದನ್ನು ಕಂಡು ಅಚ್ಚರಿಗೊಂಡ ಕವಿಯ ಮನಸ್ಸು, ವಿಲಯದಲ್ಲೂ ಚೆಲುವು ಚಿಮ್ಮಿದಂತಹ ಹಿರಿಯ ಚೋದ್ಯದ ಹೊನಲಿ ನಲ್ಲಿ ಮಿಂದುದರಿಂದ, ರಸದ ಗೀತೆಯ ಮೆಲ್ಲುಲಿಯನ್ನು ಕೇಳಿ ತನ್ಮಯವಾಗಿದೆ.

'ರಸದ ಗೀತೆಯ ಮೆಲ್ಲುಲಿ' ಎಂಬುದು ಓದುಗರ ಅವಧಾರಣೆಯನ್ನು ದೀರ್ಘ ಧರಿಸಲು ಸಮರ್ಥವಾದುದು. ಸ್ವಲ್ಪವೇ ಕಾಲದ ಮುಂಚೆ ನಿರ್ಜೀವವಾಗಿ ಶುಷ್ಕವಾಗಿ ತೋರಿ ನಿಂತದ್ದು, ಈಗ ಹಸುರುಟ್ಟು ಸಜೀವವಾಗಿ ಕಳಕಳಿಸುತ್ತಾ ನಿಂತಿರುವುದೇತು?

ಈ ವಿಷಯವನ್ನು ಸೌಂದರ್ಯ ಪರಿಭಾವನೆಗೆ ಗುರಿಪಡಿಸಿದ ಕವಿಯ ಮನಸ್ಸು ಕಿವಿಯಲ್ಲಿ ಇದರ ಮೂಲದಲ್ಲಿರುವ ರಸದ ಮೆಲ್ಲುಲಿಯನ್ನು ಆಲಿಸುತ್ತದೆ. ಅದೇ ತಾನೇ ಸೌಂದರ್ಯ ಸೃಷ್ಟಿಗೆ ಕಾರಣ?

ಈ ಕವನದಲ್ಲಿ ಶಿಖರವನ್ನು ಮುಟ್ಟಿಸುವ ನುಡಿ ಇದು:

ಹೂವ ಬಿಟ್ಟವೆ, ಹೂವ ತೊಟ್ಟವೆ, ಹೂವನುಟ್ಟವೆ ಮರಗಳು!
ಚೈತ್ರ ಜಾತ್ರೆಗೆ ಬಂದು ನಿಂತುವೊ ನೂರು ಚೆಲುವಿನ ರಥಗಳು!
ಕಾಮರತಿಯರು ಬಂದು ಆಡುವ ರಾಸಲೀಲಾಪಥಗಳು!
ಸೃಷ್ಟಿ ಬರೆಯುವ ಚೈತ್ರಕಾವ್ಯದ ಮಧುಪವಾಡದ ಕಥೆಗಳು!

ಹೂವಿನ ಹುಚ್ಚು ಹಿಡಿದಂತೆ ತುಂಬಿನಿಂತಿರುವ ಮರಗಳು ಚೆಲುವಿನ ರಥಗಳು ಎಂದಿದ್ದಾರೆ ಕವಿ. ಅವು ತಮಗೆ ತಾವೇ ಸೊಬಗಿನ ತೌರಾಗಿದೆ ಎನ್ನುವುದರ ಜತೆಗೆ ಸೌಂದರ್ಯದ ಅಂತರಂಗವಾದ ಶಿವನನ್ನು ಒಳಗೊಂಡಿವೆ ಎಂಬುದನ್ನು ಧ್ವನಿಸುತ್ತವೆ ಈ ಮಾತುಗಳು.

ಪ್ರಕೃತಿಯ ವಿವಿಧ ಕ್ರಿಯೆಗಳನ್ನು ಅದರ ಸೂಕ್ಷ್ಮಾತಿಸೂಕ್ಷ್ಮ ವಿವರಗಳಲ್ಲಿ ಕಂಡು ಸವಿಯುವ ಶಕ್ತಿ ಇದೆ ಕವಿಗೆ. ಅಂತೆಯೇ ನವುರಾದ ರೀತಿಯಲ್ಲಿ ಅದರ ಅಭಿವ್ಯಕ್ತಿಯೂ ಸಿದ್ಧಿಸಿದೆ. ಈ ಕೆಲವು ನಿದರ್ಶನಗಳನ್ನು ನೋಡಿ: ಕತ್ತಲಾದ ರೀತಿ ಇದು:

ಆಮೆ ತನ್ನ ಅಂಗಾಂಗವ
ಚಿಪ್ಪಿಗೆಳೆವ ತೆರದಿ ಲೋಕ
ಚಲನೆಯುಡುಗಿ ನಿಲ್ಲಲು,

(ಗೆಲುವು. ಪು. ೧೦)

ಅಥವಾ ಮೊಗ್ಗಿನ ಹೃದಯದಲ್ಲಿ ನಡೆಯುವ ಮಾಂತ್ರಿಕ ಕ್ರಿಯೆ:

ಮೊಗ್ಗಿನೆದೆಯ ಗರ್ಭಗುಡಿಯ
ಅತಿ ನಿಗೂಢ ಗಹನದಲ್ಲಿ
ಚೆಲುವು ಶಿಲ್ಪ ಕೆತ್ತುತಿರಲು

(ಅದೇ, ಪು. ೧೦)

ಸಂಜೆ ಮೌನದ ಚಿತ್ರಗಳಲ್ಲಿ ಒಂದು:

ಬಾನ ಮೌನದ ಗೆಜ್ಜೆ ಝಲ್ಲೆಂದು ಜಾರಿದೊಲು
ಅಲ್ಲೊಂದು ಇಲ್ಲೊಂದು ಹಕ್ಕಿ ನಿನದ!
ಬುವಿಯ ಎದೆ ಹಿಗ್ಗಿದ್ದು ಬುಗ್ಗೆಯಾದೊಲು, ಎಲ್ಲೊ
ನವಿಲು ಕೇಕೆಯ ಸದ್ದು ಗುಡ್ಡದೊಳಗೆ!

ಚಿಂತನಾಂಶ ಪ್ರಧಾನವಾದ 'ಬಂಡೆ–ಹೊಳೆ' 'ಶರಣಪಥ' ಮುಂತಾದುವೂ ಮೃದುವಾದ ಹಾಸ್ಯದಿಂದೊಡಗೂಡಿದ 'ಎಚ್ಚರಿಕೆ' ಕವನವೂ ನಮ್ಮ ಮನಸ್ಸಿನಲ್ಲಿ ಮರೆಯಾಗದೆ ನಿಲ್ಲುತ್ತವೆ.

"ಬೀಳ್ಕೊಡಿಗೆ" ಬಿ.ಎಂ.ಶ್ರೀ ಅವರ ಸುವರ್ಣ ಪದಕವನ್ನು ಪಡೆದ ದೀರ್ಘ ಕವನ.

ಕವಿ ಇದರ ಸಂದರ್ಭದಲ್ಲಿ ಹೀಗೆ ಸೂಚಿಸಿದ್ದಾರೆ. 'ತೌರೂರನ್ನು ಬಿಟ್ಟು ಕೈಹಿಡಿದ ಗಂಡನೊಡನೆ ಹೊರಟಿರುವ ಹಳ್ಳಿಯ ಮುಗ್ಧ ಹೆಣ್ಣುಮಗಳೊಬ್ಬಳ ಮನಸ್ಸಿನ ಸ್ಮೃತಿ ತರಂಗಮಾಲಿಕೆ ಈ ಕವನದ ವಸ್ತು.' ಹಳ್ಳಿಯನ್ನು ಬಿಟ್ಟ ಹೆಣ್ಣು ನಿಲ್ದಾಣದವರೆಗೆ ಗಾಡಿಯಲ್ಲಿ ಹೋಗಬೇಕು. ಪತಿಯೊಡನೆ ಕುಳಿತು ಹೋಗುತ್ತಾ ದಾರಿಯುದ್ದಕ್ಕೂ ತನ್ನ ಹಳ್ಳಿಯನ್ನೂ, ಬಾಲ್ಯದಿಂದ ಇದುವರೆಗೆ ತಾನಲ್ಲಿ ಪಡೆದ ನೋವು ನಲಿವುಗಳನ್ನು ನೆನೆಯುತ್ತಿದ್ದಾಳೆ. ಕವಿ ಆ ಹೆಣ್ಣಿನ ಸ್ಥಾನದಲ್ಲಿ ನಿಂತು ಅವಳ ಕಣ್ಣಿನಿಂದ ಅವಳ ತೌರೂರಿನ ಸುತ್ತಣ ಪ್ರಕೃತಿಯ ಚೆಲುವನ್ನು ಕಂಡಿದ್ದಾರೆ. ಪ್ರಕೃತಿಯ ಕೆಲವು ಸುಂದರ ಚಿತ್ರಗಳು ಮೂಡಿವೆ; ಅದರ ವಿವಿಧ ರಾಗಗಳು ಹೊಮ್ಮಿವೆ.

ಆ ಕೆರೆಯ ತುಂಬೆಲ್ಲ ತುಂಬಿರುವ ಜೊಂಡಿನಲಿ
ನೂರು ನೀರ್ವಕ್ಕಿಗಳ ಕಲ ಸಂಭ್ರಮ
ಹಲವು ಜಲಕನ್ಯೆಯರು ಮಿಡಿವ ನೀರ್ ವೀಣೆಗಳ
ಪಲುಕಿನೊಲು ಕಿವಿಗಿನಿದು ಆ ಕಲರವ

ಅಥವಾ

ಮಳೆಯ ಹನಿಗಳು ಬಂದು ಮುಗಿಲ ಗುಟ್ಟನು ತಂದು
ಮನೆಯ ಹೆಂಚಿನ ಮೇಲೆ ಸುರಿಯುತಿರಲು,
ಮೂರು ತಿಂಗಳ ಕಾಲ ಜಡಿಮಳೆಯ ಪಹರೆಯಲಿ
ಹಗಲಿರುಳು ಮಂಕಾಗಿ ತೆವಳುತಿರಲು.

ಆದರೆ ಒಮ್ಮೊಮ್ಮೆ, ಉದ್ದಕ್ಕೂ ಹಳ್ಳಿಯ ಮುಗ್ಧ ತರಳೆಯ ಮಾತನ್ನು ಕೇಳುತ್ತಿರುವ ನಮಗೆ ಅವಳನ್ನು ಹಿಂದಿಕ್ಕಿ ಪರಿಣತ ಮನಸ್ಸಿನ ಉನ್ನತ ಕಲ್ಪನೆಯ ಕವಿಯೇ ನುಡಿಯುತ್ತಿರುವುದು ಸ್ಪಷ್ಟವಾಗುತ್ತದೆ.

ಅತ್ತ ದಕ್ಷಿಣದಲ್ಲಿ ದೂರ ಬಾನಂಚಿನಲಿ
ನೆಲದ ಮುಗಿಲಾಸೆಯೊಳು ಮೇಲೆದ್ದಿದೆ.
"ಕಲ್ಲತ್ತಗಿರಿ" ಎಂದು ಕರೆವರಾ ಬೆಟ್ಟವನು
ಬಾನ ಪಟಲದ ಭವ್ಯ ಕಲೆಯಂತಿದೆ!

ಮತ್ತು ಈ ಪಂಕ್ತಿಗಳನ್ನು ನೋಡಿ :

ಅತ್ತ ಹೊಲದೆಡೆಯಲ್ಲಿ ನೇಗಿಲನು ನಡೆಯಿಸುತ
ಬುವಿಯ ಭಾಂಡಾರವನು ತೆರೆಯುತಿರಲು,
ಕರ್ಮಯೋಗಿಯು ಬರೆದ ಮಂತ್ರಪಂಕ್ತಿಗಳಂತೆ
ನೂರಾರು ಸಾಲುಗಳು ಮೂಡುತಿಹವು!

ತಮಗೆ ತಾವೇ ರಮ್ಯವಾಗಿರುವ ಈ ಉಕ್ತಿಗಳು ಈ ಪಾತ್ರದ ಬಾಯಿಂದ ಬಂದಿತೇ ಎನಿಸುತ್ತದೆ. ನಿರೂಪಣೆಯ ದೃಷ್ಟಿಯಿಂದ ಇದು ದೋಷವಾಗಿ ಕವಿಯ ಉದ್ದೇಶಕ್ಕೆ ಭಂಗ ಬರುತ್ತದೆ.

ಆದರೆ ಈ ನೀಳ್ಗವನ ಹಳ್ಳಿಯ ಸಾಮೂಹಿಕ ಜೀವನ, ಅಲ್ಲಿನ ಜನರ ಹೃದಯದ

ಪಡಿಮಿಡಿತ, ಅದನ್ನು ಕಾಣುವ ಒಂದು ಹೆಣ್ಣಿನ ಮನೋಭಾವ ಇವುಗಳನ್ನು ಯಶಸ್ವಿಯಾಗಿ ಚಿತ್ರಿಸಿದೆ.

ಈ ನೀಳ್ಗವನವನ್ನು ಐದು ಮಾತ್ರೆಯ ಗಣಗಳ ನಾಲ್ಕು ಪಂಕ್ತಿಗಳ ಎಪ್ಪತ್ತೈದು ನುಡಿಗಳಿಂದ ನಿರ್ವಹಿಸಿದ್ದಾರೆ ಕವಿ. ಅಲ್ಲಲ್ಲಿ ಗಣವಿನ್ಯಾಸದಲ್ಲಿ ವೈವಿಧ್ಯ ತಂದಿದ್ದಾರೆ. ಇಲ್ಲದಿದ್ದರೆ ಇದು ತೀರ ಏಕನಾದವಾಗುತ್ತಿತ್ತು. ಅಂತಹ ಕವನಗಳಲ್ಲಿ ನಡುನಡುವೆ ಗತಿಯನ್ನು ಬದಲಾಯಿಸುವುದು ಸಾಧ್ಯವೇ, ಯಶಸ್ವಿಯಾಗುತ್ತದೆಯೇ ಎಂಬುದನ್ನು ಕುರಿತು ಕವಿಗಳು ಆಲೋಚಿಸಬೇಕು. ಪ್ರಯೋಗಮಾಡಿ ನೋಡಬೇಕು.

ಶ್ರೀ ಶಿವರುದ್ರಪ್ಪನವರದು ಬೆಳೆಯುತ್ತಿರುವ ಮನಸ್ಸು, ಚೇತನ. ಅವರ ಈ ಸಂಗ್ರಹ ಆ ಬೆಳವಣಿಗೆಯ ತೀವ್ರತೆಯನ್ನು ಅದರ ಸಹಜಸ್ಥಿತಿಯಲ್ಲಿ ಪ್ರತಿಫಲಿಸುತ್ತಿದೆ. ಅವರದು ಸ್ವತಂತ್ರ ಪ್ರತಿಭೆ ; ಸರಳ ಸುಂದರ ಉಕ್ತಿವಿಧಾನ ಅವರ ಸಿದ್ಧಿ. ಎರಡೂ ವೃದ್ಧಿಪಡೆಯಲಿ.

ಎಚ್. ವಿ. ಶ್ರೀನಿವಾಸಶರ್ಮ

# ದೇವಶಿಲ್ಪ

'ಸಾಮಗಾನ'ದಿಂದ ಆರಂಭವಾದ ಜಿ. ಎಸ್. ಶಿವರುದ್ರಪ್ಪನವರ ಕಾವ್ಯಸೃಷ್ಟಿಯಲ್ಲಿ 'ಚೆಲುವು-ಒಲವು' 'ಸಂಜೆದಾರಿ'ಗಳ ನಂತರ 'ದೇವಶಿಲ್ಪ' ಹೊರಮೂಡುತ್ತದೆ. ಈ ಶಿಲ್ಪಕಾರ್ಯದಲ್ಲಿ, ನವೋದಯ ಕಾವ್ಯದ ಹಾದಿಯಲ್ಲಿ ನಡೆಯುತ್ತಾ ನವ್ಯಕ್ಕೆ ಇಣುಕು ಹಾಕುತ್ತಿರುವ ಕವಿಯನ್ನು ಕಾಣುತ್ತೇವೆ. 'ವಿಶ್ವವೇ ಒಂದು ದೇವಶಿಲ್ಪ; ಕವಿಯ ಕರ್ಮವೂ ಅಂತಹದೇ ಶಿಲ್ಪಕರ್ಮ' ಎನ್ನುವ ಶಿವರುದ್ರಪ್ಪನವರ ದೃಷ್ಟಿಗೆ ಎಲ್ಲಾ ಕವಿಗಳೂ ಕವಿಬ್ರಹ್ಮರೇ ಆಗುತ್ತಾರೆ. ಎಲ್ಲಾ ಕವಿಗಳ ಕರ್ಮ ಒಂದೇ ಆದರೂ ಈ ಕವಿಯು ಮಿಕ್ಕವರಿಂದ ಬೇರೆಯಾಗಿ ನಿಲ್ಲುವುದನ್ನು ನಾವು ಕಾಣಬಹುದು. 'ಚೆಲುವಿನ ಆರಾಧಕರು' ಈ ಕವಿ ಎನ್ನಬಹುದಾದರೂ, ನೋಡುವ, ಅನುಭವಿಸುವ, ವ್ಯಕ್ತಪಡಿಸುವ ಕರ್ಮ ಬೇರೆಯೇ ಆದದ್ದು. ಚೆಲುವನ್ನು ಚೆಲುವಿಗಾಗಿಯೇ ಕಡೆದಿಡುವ ಅಂದಿನ, ಹಿಂದಿನ ಕವಿಗಳ ಹಾದಿಯನ್ನೇ ಹಿಡಿಯದೆ, ಅವರಿಂದ ಸ್ಫೂರ್ತಿಪಡೆದರೂ, ಅವರ ಮಾರ್ಗವನ್ನು ಅನುಸರಿಸದೆ ಇರುವುದು ಒಂದು ವೈಶಿಷ್ಟ್ಯ. ಚೆಲುವನ್ನು ಆಸ್ವಾದಿಸುವಾಗಲೇ, ಅದರ ಹಿನ್ನೆಲೆಯಲ್ಲಿ ನಡೆಯುವ ಚಿಂತನ, ವಿಚಾರಮಂಥನ ಇವರ ಬಹಳಷ್ಟು ಕವನಗಳಲ್ಲಿ ಕಾಣುವುದು ಸಹಜ. ಚೆಲುವನ್ನೇ ಏಕೆ, ಯಾವುದೇ ವಸ್ತುವನ್ನು ಆರಿಸಿಕೊಳ್ಳಲಿ, ಅಲ್ಲಿ ಸಂಶಯ, ವಿಷಾದ ಬೆರೆತ ಏಕೆ ? ಹೇಗೆ ? ಎಂಬ ಒಳ ಕೆದಕುನುಡಿಗಳಿರುತ್ತವೆ ಅವರ ಭಾವಲಹರಿಯಲ್ಲಿ.

ಪ್ರಸ್ತುತ 'ದೇವಶಿಲ್ಪ'ದಲ್ಲಿ ಕವಿ ದೈವಶಕ್ತಿಗೆ ಮರುಳಾಗಿ ವಿಸ್ಮಯಗೊಂಡಿದ್ದಾರೆ. ಪ್ರಣಯದಲ್ಲಿ ಆಸಕ್ತರಾಗಿ, ನೊಂದು, ವಿರಹದ ನೋವನ್ನು ಅನುಭವಿಸಿದ್ದಾರೆ. ಪ್ರಕೃತಿಯ ಲೀಲಾ ಸೌಂದರ್ಯವನ್ನು ಕಂಡು ಬೆರಗಾಗಿದ್ದಾರೆ. ಜೀವನದ ಹಲವಾರು ಅನುಭವಗಳಲ್ಲಿ ಪಾಲುಗೊಂಡಿದ್ದಾರೆ. ನಾಡಿನ ಗತಕಾಲದ ವೈಭವಗಳನ್ನು ನೆನೆದು ದೇಶಭಕ್ತನಾಗಿ ಕಣ್ಣೀರಿಟ್ಟಿದ್ದಾರೆ. ಆ ವೈಭವಗಳನ್ನು ಮತ್ತೆ ನೆಲೆಗೊಳಿಸುವ ಕನಸಿನಲ್ಲಿ ಆವೇಶಗೊಳ್ಳುತ್ತಾರೆ. ಆದರೆ ಸಾಕಷ್ಟು ಎಡೆಗಳಲ್ಲಿ ಅವರ 'ಚಿಂತನಶೀಲ' ಸ್ವಭಾವ ವ್ಯಕ್ತವಾಗಿರುವುದು ವೇದ್ಯವಾಗದೇ ಇಲ್ಲ.

ಜಗತ್ತಿಗೇ ಅಂಧಕಾರ ಕವಿದಾಗ ದುಷ್ಟಶಿಕ್ಷಣ ಶಿಷ್ಟರಕ್ಷಣ ಕಾರ್ಯಕ್ಕಾಗಿ ಆಗುವ ವಿಷ್ಣುವಿನ ಅವತಾರದ ಕಲ್ಪನೆ ನೇರವಾಗಿ 'ಕೃಷ್ಣ ಶಕ್ತಿ' ಕವನದಲ್ಲಿ ಕಾಣಬರುವುದಾ

ದರೂ ಸೆರೆಮನೆಯಲ್ಲಿ ಶಿಶುವಾಗಿ, ಯಮುನಾ ಬೃಂದಾವನದೆಡೆಯಲ್ಲಿ ಬಾಲಕನಾಗಿ, ಈ ಮಧುರೆಯ ರಾಜ ವೈಭವದಲ್ಲಿ ಬೆಳೆಯುತ್ತಾ ಹೋಗುವ ಕೃಷ್ಣನ ದಿವ್ಯಶಕ್ತಿ ಹಂತ ಹಂತವಾಗಿ ವಿಕಾಸಗೊಳ್ಳುತ್ತಾ ಬೃಹತ್‌ಶಕ್ತಿಯಾಗಿ ನಿಲ್ಲುವ ಅವನ ವಿರಾಟ್ ರೂಪ ಕಣ್ಣಿಗೆ ಕಟ್ಟಿಬರುತ್ತದೆ.

ಕೊಳಲ ಹಿಡಿದ ಮಿದುಬೆರಳೊಳು
ಪಾರ್ಥರಥದ ವಾಘೆಯು
ಕೊಳಲೂದಿದ ಮಧುರಾಧರ
ದಲ್ಲಿ ಪಾಂಚಜನ್ಯವು ('ಕೃಷ್ಣಶಕ್ತಿ')

ಎಂದಾಗ, ಆ ಶಕ್ತಿ ಜಗ್ಗನೆ ವಿಕಾಸಗೊಳ್ಳುತ್ತಾ ಹೋಗಿ ಕುರುಕ್ಷೇತ್ರದ ಭೀಕರತೆಯ ಮಧ್ಯೆ ಗೀತೆಯ ಬೋಧನೆಯಲ್ಲಿ ನಿಂತ ವಿರಾಟ್‌ರೂಪದರ್ಶನವಾಯಿತು ಎಂಬುದರ ಅನುಭವ ಸಹೃದಯನಿಗೆ ಆಗದೇ ಇಲ್ಲ. ಜಗತ್ತಿನ ಅಂಧಕಾರದ ಸ್ಥಿರತೆ, ಉದ್ಧಾರಕನ ಅವತಾರ ಇವು ಚಿರಂತನವಾಗಿ ನಡೆಯುವುದೇ ಕಾಲಧರ್ಮ. ಇಲ್ಲಿ ಕವಿಯ ಕಲ್ಪನೆ ರಮ್ಯ.

ಮತ್ತೆ ಮತ್ತೆ ಅಂಧಕಾರ
ಮಳೆ ಹನಿಗಳ ಪಂಜರ
ಸೊಂಡಿಲಾಡಿಸುತ್ತ ಬರುವು
ದದೋ ದೇವ ಕುಂಜರ ('ಕೃಷ್ಣಶಕ್ತಿ')

ಇಂತಹ ದಿವ್ಯಶಕ್ತಿಯನ್ನು 'ಕೃಷ್ಣಶಕ್ತಿ' ಕವನದಲ್ಲಿ ಕಂಡರೆ 'ದೇವಶಿಲ್ಪ' ಕವನದಲ್ಲಿ ಮತ್ತೊಂದು ಶಕ್ತಿಸ್ವರೂಪವನ್ನು ಕಾಣುತ್ತಾರೆ. ಕಾಣದ ಅದೊಂದು ಶಕ್ತಿ ಮಿಂಚಿನ ಉಳಿ ಹಿಡಿದಂತೆ. ಜಗತ್ತಿನ ಆದಿಯಿಂದ ಈವರೆಗೂ ಸತತವಾಗಿ ನಡೆದುಬರುತ್ತಿರುವ ಸೃಷ್ಟಿಯಲ್ಲಿ ಶಿಲ್ಪಕರ್ಮದಲ್ಲಿ ತೊಡಗಿರುವ ದೈವಶಕ್ತಿಯ ಕಲ್ಪನೆ ಒಡೆದು ಮೂಡುತ್ತದೆ. ಸಂಭಾಷಣಾ ರೂಪ ಈ ಪದ್ಯದ ಒಂದು ವಿಶೇಷತೆ.

ಹಾಳು ಹಂಪೆಯನ್ನು ಕಂಡು ಮನಮರುಗದಿರುವ ಕವಿ ಅಪರೂಪ. ಹಳೆಯ ಕತೆ ಗೋಳಾಗಿ, ಕಾಲಿಗೆ ಉರುಳಾಗಿ ತಡೆದು ನಿಲ್ಲಿಸುವ ಹಂಪೆಯ ಭಗ್ನ ಮಂದಿರಗಳನ್ನು ನೋಡಿದಾಗ "ಇದ್ದಿತೆ ಇಲ್ಲೊಂದು ಸಾಮ್ರಾಜ್ಯ?" ಎಂಬ ಆಶ್ಚರ್ಯದ ಉದ್ಗಾರ ಬರುತ್ತದೆ. ಓಲಗ, ಸಭೆ, ಸೈನ್ಯ, ಅಂತಃಪುರ—ಕಣ್ಣಮುಂದೆ ತೂರಿ ಹೋಗುತ್ತವೆ; ನೆನಪಾಗಿ ಮಾತ್ರ ಉಳಿಯುತ್ತವೆ, 'ಹಂಪೆಯಲ್ಲಿ', ಎಂಬ ಕವನದಲ್ಲಿ. ಅಂದಿನ ನಾಟ್ಯ ಸಂಗೀತ ವೈಭವಕ್ಕೆ ಬದಲು ಈಗಲ್ಲಿ ಬಾವಲಿಗಳಾಟ. ಎಲ್ಲವೂ 'ಸವಿನೆನಪುಗಳ ಗೋರಿಗೆ ಸಾಕ್ಷಿ.' ವಿಗ್ರಹಗಳ ಸಾಲು, ಉಗ್ರನರಸಿಂಹ, ಶಿವಲಿಂಗ, ಸಾಸಿವೆಗಣಪಗಳನ್ನು ನೋಡಿದಾಗ ಒಂದು ನಿಟ್ಟುಸಿರು ಮಾತ್ರ.

'ಕಲೆಯನುಳಿಪದ ಮತ್ತೆ ಬೆಳೆಸದ ಬಾಳು ಬಾಳೆ?
ಮನುಜ ಪಶುವಾದಾಗ ಪಶುವಿಗಿಂತಲು ಕೀಳೆ

ಪ್ರಾಚ್ಯ ಭಗ್ನ ಅವಶೇಷಗಳನ್ನು ಕಂಡಾಗ ಕವಿಗೆ ಕಲೆಯನ್ನು ಚರಿತ್ರೆಯನ್ನು ಉಳಿಸಿ

ಕೊಳ್ಳಬೇಕೆಂಬ ಹಂಬಲ ಕೊರಗಾಗಿ ಬಂದ ನೋವು ಹಲವೆಡೆ ಉಪದೇಶಾತ್ಮಕವಾಗುತ್ತದೆ. ಹಿಂದಿನ ಶೌರ್ಯ, ಸಾಹಸಕ್ಕೆ ನಿತ್ಯ ಸತ್ಯಸಾಕ್ಷಿಯಾಗಿ ನಿಂತ ಭಗ್ನ ಕೋಟೆ ಕೊತ್ತಲು ಇಂದಿನ ಸಪ್ಪೆಹೀನ ಸಮಾಜವನ್ನು ಅಣಕಿಸುವಂತೆ ಕಾಣುತ್ತದೆ. ಚಿತ್ರದುರ್ಗದ ಬಂಡೆ, ಗರುಡಿಯಮನೆ ಹಾಗೂ ಸತ್ವಪೌರುಷವನ್ನು ಕಾಣಿಸಲು ಆ ಗಂಡುಗಲಿಗಳ ನಾಡಿಗೆ ಕರೆದೊಯ್ಯುತ್ತಾರೆ ಕವಿ. ಕನ್ನಡನಾಡು ನುಡಿ ಜನ ಒಂದಾಗಬೇಕು. ಭಾರತದ ಯಾವುದೇ ಮೂಲೆಯಲ್ಲಿರಲಿ ಕನ್ನಡ ಜನ ಭುವನೇಶ್ವರಿಯ ತೇರನ್ನು ಎಳೆಯಲು ಕೈ ನೀಡಿದರೆ ಸಾಕು.

> “ಕನ್ನಡದ ಉಸಿರಾಡುವೆದೆಗಳಿರುವಲ್ಲಿ
> ಕನ್ನಡದ ಸತ್ವಗಳ ಬೀಜಗಳ ಚೆಲ್ಲಿ
> ತೇರ ಮಿಣಿ ಹರಿದಿರಲು
> ಹಿಡಿದುಕೊಳ್ಳಿರೋ ಅದನು
> ಎಲ್ಲಿದ್ದರೇನು ?” (‘ತೇರನೆಳೆವರು ನಾವು’)

ಈ ಉತ್ಕಟಭಾವ ಅಂದಿನ ಕವಿಗಳ ಸಾರ್ವತ್ರಿಕಭಾವ. ಈ ಕವಿಯನ್ನೂ ಅದು ಆಕರ್ಷಿಸಿತ್ತು ಎನ್ನಬಹುದು.

ಪ್ರಕೃತಿಯ ಆರಾಧನೆ, ಚೆಲುವಿನಲ್ಲಿ ಒಲವು—ಈ ಕವಿಯ ವಿಶೇಷ ಗುಣ. ಪ್ರಕೃತಿ-ಪುರುಷರ ಮಿಲನವೇ ಜಗತ್ತಿನ ಸೃಷ್ಟಿಕಾರ್ಯ ಎನ್ನುವ ಕವಿ ನಿತ್ಯನಿರಂತರ ಪ್ರಣಯವನ್ನು ಕುರಿತು ಸೂಕ್ಷ್ಮವಾಗಿ ನಿರೂಪಿಸಿದ್ದಾರೆ. ಆದರೆ ಗಮನಾರ್ಹ ವಿಷಯವೆಂದರೆ, ಆ ಕಾಲಕ್ಕೆ ಪ್ರೇಮ, ಒಲವು, ಕಾಮ–ಇವುಗಳು ವೈಯಕ್ತಿಕ ಅನುಭವಗಳಾದರೂ ಅಭಿವ್ಯಕ್ತಗೊಳಿಸುವುದರಲ್ಲಿ ಹಿಂಜರಿಯುವ ಮನೋಭಾವ ಸಾಮಾನ್ಯವಾದದ್ದು. ಹೆಣ್ಣಿನ ಸೌಂದರ್ಯವನ್ನು ಕಂಡು ಆಸ್ವಾದಿಸಿ ಮೈಮರೆಯುವ ಕವಿ, ಅದರ ವಾಸ್ತವ ಚಿತ್ರಣ ಕೊಡುವಂದು ಸೋಲುತ್ತಿದ್ದದ್ದೂ ವಾಸ್ತವವೇ. ಆ ಸೌಂದರ್ಯದ ಹಿಂದೆ ಸಹೋದರಿಯ ಇಲ್ಲವೆ ತಾಯಿಯ ದರ್ಶನ ಪಡೆಯುವುದು; ನೋಡುತ್ತಿದ್ದಂತೆ ಬೆದರಿ ತಲೆಬಾಗುವುದು ! ಈ ಕವಿಯೂ ಅದರಿಂದ ಹೊರತಾಗಿಲ್ಲ.

ತುಂಬು ಸಂತೆಯಲ್ಲಿ ನೇರಿಲಹಣ್ಣನ್ನು ತಿನ್ನುತ್ತಾ ಮೈಮರೆತಿದ್ದ ಮುಗ್ಧ ಸುಂದರಿಯನ್ನು ಕಂಡ ಕವಿಗೆ ಅವಳು ಹಳ್ಳಿಯ ನಗೆಮಲ್ಲಿಗೆಯಂತೆ ಕಾಣುತ್ತಾಳೆ. ಸೌಂದರ್ಯಕ್ಕೆ ಮುಗ್ಧರಾಗುತ್ತಾರೆ. ಕೊನೇ ಸಾಲಿಗೆ ಬರುವಷ್ಟರಲ್ಲಿ

> ಸಾತ್ವಿಕ ರೂಪಾನ್ವಿತೆ ಇದೊ ವಂದನೆ
> (‘ಮುಗ್ಧೆ’)

ಎಂದು ಬಿಡುತ್ತಾರೆ.

ಪ್ರೇಮದ ಕಾವಿನಲ್ಲಿ ಪ್ರೀತಿಯ ಸೇತುವೆ ಭಗ್ನವಾದ ವಿರಹಿಯೊಬ್ಬನ ಪ್ರೇಮದ ನೀತಿಪಾಠವೇ ‘ಮುರಿದ ಒಲುಮೆಗೆ’ ಕವನ. ಪ್ರೇಮದ ಹೊಸ್ತಿಲಲ್ಲೇ ಮುಗ್ಗರಿಸಿದ ನಾಯಕನೊಬ್ಬ ತನ್ನ ಅನುಭವದ ಸಾರತತ್ವದ ಮಾತುಗಳನ್ನು ಒರೆಯುತ್ತಾನೆ.

ಪ್ರಕೃತಿಯಲ್ಲಿ ನಡೆಯುವ ಚಿರಂತನ ಕ್ರಿಯೆಗಳಿಗೆ ವಿರಹವಿಲ್ಲ. ತನಗೆ ಮಾತ್ರ ಏಕೆ ಎಂಬುದು ಕವಿಯ ನೊಂದ ಮನಸ್ಸಿಗೆ ಹಿಡಿದ ಚಿಂತೆ.

ಒಬ್ಬರಿಗೊಬ್ಬರು ಆಸರೆಯಾದೆವು
ಜೊತೆಗೆ ನಿಂದೆವು. . . . . .

('ವಿರಹಗೀತೆ')

ಹೀಗಿದ್ದೂ 'ಬೆಸುಗೆ ಬಿರಿದು ಕಡೆಯಾದ ಒಲುಮೆ'ಗೆ ನೋಯುತ್ತಾರೆ.
ಒಲವು 'ಬರಿಯ ಮಾಯದ ಮಂಪರ'

ಇನಿತು ಕೋಟಲೆಯಲ್ಲಿ ಮನುಜತೆ
ಬಾಳುತಿಹುದೇ ಚೋದ್ಯವು

ಎನ್ನಿಸಿ ಕೊನೆಗೆ ಆಡುವ ಮಾತಿಷ್ಟೆ:

'ದೋಷವನ್ನೆಲ್ಲ ಮನ್ನಿಸಿ ಒಲಿಯುವ ರೀತಿ' ಒಂದಾದರೆ 'ದೋಷವ ತಿದ್ದಿ ಸರಿಪಡಿಸುತ್ತಾ ಒಲಿಯುವುದು' ಇನ್ನೊಂದು. ತಾಯಿ ಹಾಗೂ ಒಲಿದ ಹೆಣ್ಣಿನ ನಿಸ್ವಾರ್ಥದ ಒಲುಮೆ ಇದು. ಎಲ್ಲಿಯವರೆಗೆ ಸ್ವಾರ್ಥಸಾಧನೆಗಾಗಿ ಒಲುಮೆ ಬಳಕೆಯಾಗುತ್ತದೆ ಅಲ್ಲಿಯವರೆಗೂ ಬೆಳಕು ಕತ್ತಲೆಯ ಸಮರ. ಇದು ಚಿರಂತನ ಸಮಸ್ಯೆ. ಆದರೂ ಕವಿಗೆ ನಂಬಿಕೆ ಇದೆ, 'ಬೆಳಕೇ ಗೆಲುವುದು' ಎಂದು.

ಹೆಂಡತಿಯ ಮುಖದಲ್ಲಿ ತಾಯಿಯ ರೂಪವನ್ನು ಕಾಣುವ ಚಿತ್ರ ರಾಮಕೃಷ್ಣ ಪರಮಹಂಸರ ಜೀವನವನ್ನು ನೆನಪಿಗೆ ತಾರದೆ ಇರುವುದಿಲ್ಲ. 'ಅನ್ವೇಷಣೆ' ಪದ್ಯದಲ್ಲಿ ಎಳೆಯ ವಯಸ್ಸಿನಲ್ಲಿ ಕಂಡಿದ್ದ ತಾಯಿಯ ಮಸಕು ಮಸಕು ರೂಪವನ್ನು ಕಾಣ ಹೊರಟ ವ್ಯಕ್ತಿಯೊಬ್ಬ, ತನ್ನ ಹೆಂಡತಿ ಮಗುವಿಗೆ ಹಾಲೂಡಿಸಿ, ಮುತ್ತಿಡುವ ಸಮಯದಲ್ಲಿ ಕಾಣಬರುವ ತಾಯಿತನ, ತಾಯಿಯ ಕರುಳು, ವಾತ್ಸಲ್ಯಗಳು ತನ್ನ ತಾಯಿಯ ರೂಪವನ್ನೇ ಪ್ರತಿಬಿಂಬಿಸಿದಂತಾಗುತ್ತದೆ. ಈ ಕಲ್ಪನೆ ಮನಮೋಹಕ.

ಸ್ವಭಾವತಃ ಮೃದು ಹೃದಯದ ಕವಿ, ತಮ್ಮ ಮಾತಿನಲ್ಲಾಗಲಿ, ಕೃತಿಯಲ್ಲಾಗಲಿ ಏನನ್ನೂ ಮೂಡಿಸಬಲ್ಲರು. ಕರ್ಕಶ, ಕಠೋರ, ನಿಷ್ಠುರ, ಭಯಂಕರಗಳಿಂದ ಅವರು ದೂರವಾಗಲೇಬೇಕಾಗುತ್ತದೆ. ಎಂತಲೇ ಒಲವಿಗೆ-ಚೆಲುವಿಗೆ ಆಕರ್ಷಿತರಾಗುತ್ತಾರೆ ಕವಿ.

ಜೀವನ ಒಂದು ಹರಿಯುವ ನದಿ. ಅದರಲ್ಲಿ ತೇಲುವ ನಾವು ಮೀನುಗಳು. ಯಾತ್ರೆ ಸಾಗಬೇಕಾದರೆ ಒಲವಿನ ಹಾದಿ ಅತ್ಯವಶ್ಯಕ.

ನೂರು ಒಲವಿನ ಸಾಲು
ಹಸಿಯೊಲವು, ಹುಸಿಯೊಲವು
ಸಿಹಿಯೊಲವು, ಕಹಿಯೊಲವು ('ಪಯಣ')

ಗಳನ್ನು ಜೀವನದ ಉದ್ದಕ್ಕೂ ಕಾಣಬಹುದು ಎನ್ನುವ ಕವಿ

'ಒಂದೊಂದರೊಳು ಉಂಟು ಏನೊ ಚೆಲುವು' ಎಂದು ಮೆಚ್ಚಿಕೊಳ್ಳುವ ಹೃದಯ

ಅವರದು. ಸೋತ ಒಲವಿನ ಭಿನ್ನತೆಗೆ ಅನುಭವಿಸುವ ನೋವು ಅಪಾರ.

ಏನು ಒಲವೋ ಎಂಥ ಒಲವೋ
ಬರಿಯ ಮಾಯದ ಮಂಪರ ('ಮುರಿದ ಒಲುಮೆಗೆ')

ಆದರೂ ಭಗ್ನತೆಯಲ್ಲಿ ನಂಬುಗೆ ಇಲ್ಲ. ಒಲವು ಶಾಶ್ವತ.

ಎಂದಿನ ತೆರದಲಿ ನೇಸರು ಬೆಳಗಿದೆ
ಮೋಡ ತಬ್ಬುತಿದೆ ಬೆಟ್ಟದ ಎದೆಯ . . .
. . . ಸೃಷ್ಟಿಯ ತುಂಬಾ ಒಲವಿನ ವಿಭವ ('ಅಂತರಂಗ')

ಮೆರೆಯುತ್ತಿರುವಾಗ

ಬೆಸುಗೆ ಬಿರಿಯಿತೇ ಒಲವಿಗೆ ಕಡೆಗೂ

ಎಂಬ ಉದ್ಗಾರ ಬರುತ್ತದೆ.
ಆದರೂ ಒಂದು ನಂಬಿಕೆ.

ಬೆಳಕೊಂದೆ ಗೆಲುವುದು
ಚೆಲುವೊಂದೆ ಗೆಲುವುದು
ಒಲವೊಂದೆ ಗೆಲುವುದು ('ಗೆಲುವು')

ಜೀವನ ವ್ಯಾಪಾರದಲ್ಲಿ ಇವಕ್ಕೆ ಮಾತ್ರ ಸ್ಥಾನ. ಕೊನೆಗೆ ಗೆಲ್ಲುವುದು, ನಿಲ್ಲುವುದು ಒಲವೆ ಎಂಬ ನಿರ್ಧಾರ ಅವರದು.

'ಚೆಲುವೇ' ಚೈತ್ರವಾಗಿ ಅರಳುವ ಚಿತ್ರ 'ಚೈತ್ರ' ಕವನದಲ್ಲಿ ಮೂಡಿದೆ. ಮೂರು, ನಾಲ್ಕು ಮಾತ್ರಾ ಛಂದಸ್ಸಿನಲ್ಲಿ ಹರಿಯುವ ವಸಂತನ ವರ್ಣಶಿಲ್ಪದ ಮೋಡಿಯನ್ನು ಇಲ್ಲಿ ಕಾಣಬಹುದು :

ಎಂಥ ಬಡಕಲು ಗಿಡವು ಕೂಡಾ ಚೆಲುವಿಗಾಗಿದೆ ನಿಲುಗಡೆ
ನೂರು ವರ್ಣದ ನೂರು ರಾಗದ ಚೆಲುವೆ ಚಿಮ್ಮಿದೆ ಎಲ್ಲೆಡೆ

ಈ ವಸಂತನ ವರ್ಣನೆಯಲ್ಲಿ

ನೂರು ತರುವಿನ ತಳಿರ ಕೈಯಲಿ ನೂರು ಹೂವಿನ ದೀಪವು

ಈ ಚಿತ್ರ ಹೃದಯಸಂಗಮದ ಶಬ್ದ ಚಿತ್ರ.

ಮರಮರಗಳಲ್ಲಿ ಚೆಲುವಿನ ಹುಚ್ಚು ; ಭಾವದ ಹೊನಲು, ಅಶ್ರುತವರ್ಣಗಾನ. ಇದೇ ಮುಕ್ತಿಗೆ ಸಾಧನೆ ಎಂದು ಬಿಡುತ್ತಾರೆ ಕವಿ.

ಸೃಷ್ಟಿ ಬರೆಯುವ ಚೈತ್ರಕಾವ್ಯ

ಕವಿಕಂಡ ದೃಷ್ಟಿಗೆ ರಮ್ಯಚಿತ್ರಕ್ಕೆ ನಿದರ್ಶನ ಇದು.

ನಲುಮೆಯ ಚೆಲುಮೆಯನ್ನು ಚಿಮ್ಮಿ ಭಾವಭಂಗಿಯಲ್ಲಿ ನಿಂತು, ಬೃಂದಾವನದ ಕೊಳಲಗಾನಕ್ಕೆ ಮುಗ್ಧರಾದ ಗೋಪಿಯರಂತೆ ಕಾಣುತ್ತವೆ ಶೃಂಗಾರಗೊಂಡ ಮರ ಮರಗಳು. ತಮ್ಮ ಒಲವನ್ನೇ ಜಗಕ್ಕೆ ನೀಡಿ ನಿಂತ ಮೌನದ ನಿಲುವು ಅದು.

ಸಂಜೆಬೆಳಕಿನಲ್ಲಿ ಹಸಿರು ಗುಡ್ಡದ ಸಾಲುಗಳನ್ನು ಕಂಡಾಗ

ಒಂದೆ ಬಾಳಿನ ಬಿಂಬ ನೂರು ಮೈ ತಳೆದಂತೆ ನೂರುಬಗೆ
ಆಕಾರ ನೂರು ಚೆಲುವು ('ಸಂಜೆಮೌನ')

ಪ್ರಕೃತಿಯ ಮೌನದಲ್ಲಿ ಹಕ್ಕಿಗಳ ಗಾನ ಕೇಳಿದಾಗ

ನೂರುಬಗೆ ನಾದದಲಿ ಈ ಮೌನ ಹೊಮ್ಮಿದರೆ
ಜಗದ ಚೆಲುವಿಗೆ ಬೇರೆ ವಾಣಿ ಎಲ್ಲಿ

ಎನ್ನಿಸುತ್ತದೆ, 'ಸಂಜೆಮೌನ'ದ ಸೌಂದರ್ಯದ ಎದುರು.

ಹೀಗೆ ನೋಡುತ್ತಾ ಹೋದರೆ ಕವಿಗೆ ಚೆಲುವಿನ ಪುಟಪುಟಗಳನ್ನೇ ಪ್ರಕೃತಿ ತೆರೆಯುತ್ತಾ ಹೋಗುತ್ತದೆ.

ಕಾವ್ಯಶಿಲ್ಪದ ಸೃಷ್ಟಿಗೆ ಸ್ಫೂರ್ತಿ ಅತ್ಯವಶ್ಯಕ ಆದರೂ ಮೂಲ ಪ್ರತಿಭೆ ಪ್ರಧಾನ. ಅದೇ ಮೂಲಶಕ್ತಿ, ಬಾಳಿಗೂ ಅದು ಅತ್ಯವಶ್ಯಕ. ಇಲ್ಲದಿದ್ದರೆ! ನಮ್ಮ ಬಾಳು ಬರಿ ಶೂನ್ಯ. ನಿರಂತರವಾಗಿ ಹರಿಯುವ ನದಿ ಈ ಬಾಳು. ಮಧುರವಾದ ಕಹಿಸಿಹಿ ಅನುಭವಗಳ ಬಂಡೆ ಅದರ ಹಾದಿಗೆ ತಡೆ. ಆಗಲೇ ಜೀವನದಲ್ಲಿ ಕಾವ್ಯಸೃಷ್ಟಿ, ಮಧುರ ಮಂಜುಳ ಗೀತೆಗಳ ಉಗಮ. ಕವಿ ವಿಸ್ಮಯರಾಗಿ ಕೇಳುತ್ತಾರೆ.

ತನ್ನ ಹಾಡಿಗೆ ತಾನು ಹರಿದೋಡುವೀ ಹೊನಲ
ಈ ಬಗೆಯ ಬಂಡೆಗಳು ತಡೆಯದಿರೆ
ಎದೆಯೊಡ್ಡಿ ನಿಲಿಸದಿರೆ, ಹೊಮ್ಮುತ್ತಿತ್ತೆ ಇಂಥ ಮಧುರ ಮಂಜುಳ
ಗೀತೆ ('ಬಂಡೆ-ಹೊಳೆ')

ಬಾಳಿಗೊಂದು ನಂಬಿಕೆ ಬೇಕೇಬೇಕು. ಹಿಂದಿನದನ್ನು ನೆನೆದು ಮುಂದಿನದನ್ನು ಹಾರೈಸಿ, ವರ್ತಮಾನದಲ್ಲಿ ಮಾನವನ ಬದುಕು ಸಾಗುತ್ತದೆ ಎಂಬ ವಿಚಾರ ಮಂಥನ 'ರೈಲು' ಕವನದಲ್ಲಿ ಒಡಮೂಡುತ್ತದೆ.

ಬಂತು ರೈಲು, ಹೋಯ್ತು ರೈಲು
ಒಂದೆ ಒಂದು ಚಣದೊಳು
ಭವಿಷ್ಯತ್ತಿನ ಕಂಬಿ ಮತ್ತೆ
ಎಂದಿನಂತೆ ಹಾಸಿದೆ
ಭೂತಕಾಲವನ್ನು ಎಳೆದು
ವರ್ತಮಾನ ಸಾಗಿದೆ. ('ರೈಲು')

ಜೀವನವು 'ಬಾಡಿಗೆಗಿದೆ' ಎಂಬ ಬೋರ್ಡ್ ಹೊತ್ತುನಿಂತ ಬಾಡಿಗೆ ಮನೆಯಂತಾಗಬಾರದು. ಇದರ ಬಾಳಿನ ಹಳೆಯ ಸುಂದರ ನೆನಪುಗಳನ್ನಷ್ಟೇ ಪ್ರದರ್ಶಿಸುತ್ತಾ, ಬರುವ ಚೈತನ್ಯಕ್ಕಾಗಿ ಕಾದುಕೂಡುವ ಸ್ತಬ್ಧವಾಗಿ ನಿಂತಮನೆ ಬರಿ ಶೂನ್ಯದ ಇರವಿನಂತೆ.

ನಿಸ್ತರಂಗವೆಂಥ ಬದುಕೊ
ಸತರಂಗವೇ ಜೀವನ ('ಬಾಡಿಗೆ ಮನೆ')

ಇದು ಕವಿಯ ಹಾರೈಕೆ, ಹಂಬಲ.

'ಬೀಳ್ಕೊಡಿಗೆ' ಕವನ ನೀಳ್ಗವನ. ಇದರ ಸಮಗ್ರ ವಿಶ್ಲೇಷಣೆಗೆ ಕೆಲವು ಪುಟಗಳೇ ಬೇಕಾಗುವುದರಿಂದ ಹಕ್ಕಿನೋಟವೇ ಇಲ್ಲಿ ಸಾಕೆನ್ನಿಸುತ್ತದೆ. ೧೯೫೨ರಲ್ಲಿ ರಾಜ ಸೇವಾಸಕ್ತ ಬಿ.ಎಂ.ಶ್ರೀ.ಯವರ ರಜತೋತ್ಸವ ಸುವರ್ಣಪದಕವನ್ನು ಪಡೆದ ಈ ಕವಿತೆಯಲ್ಲಿ ತಾಯಿಯಿಲ್ಲದ ಹಳ್ಳಿಯ ಮುಗ್ಧಮಗಳೊಬ್ಬಳು ಗಂಡನ ಮನೆಗೆ ತೆರಳುವ ಚಿತ್ರದ ಹಿನ್ನೆಲೆಯಲ್ಲಿ ಹಳ್ಳಿಯ ಸಂಸ್ಕೃತಿ, ಪ್ರಕೃತಿಯ ರಮ್ಯತೆ, ಹಾಗೂ ಹಳ್ಳಿಗರ ಬದುಕು—ಇವುಗಳ ನಿರೂಪಣೆ ಆತ್ಮೀಯವೆನ್ನಿಸುತ್ತದೆ. ಇವೆಲ್ಲಾ ದೂರ ದೂರ ಸರಿಯುತ್ತಿರುವ ಅವಳ ಸವಿನೆನಪಾಗಿ ಪ್ರತಿಬಿಂಬಿಸುತ್ತವೆ. ಬೀಳ್ಕೊಡುತ್ತಿರುವ ಊರು ಅವಳಿಗೆ ಕೇವಲ ಹುಟ್ಟೂರಲ್ಲ; ಅದು ದೂರ ಸರಿದ ತಾಯಿಯ ಪ್ರತಿರೂಪವೇ ಆಗಿ ನಿಲ್ಲುತ್ತದೆ ಇಡೀ ಕವನದಲ್ಲಿ. ಇಲ್ಲಿ ಒಂದು ವಿಶೇಷತೆ ಎಂದರೆ ಕವಿಯ ಮಲೆನಾಡ ಅನುಭವಗಳು ನಮ್ಮನ್ನು ಅಲ್ಲಿಗೆ ಕೊಂಡೊಯ್ದು ಮುಗ್ನಗೊಳಿಸುವುದು.

ಅಲ್ಲಲ್ಲಿ ಸಂಸ್ಕೃತದ ವ್ಯಾಮೋಹ ಮತ್ತು ಸಾಲುಪ್ರಾಸಗಳಿಂದ ಕವಿ ಮುಕ್ತನಾದಂತೆ ಕಾಣುವುದಿಲ್ಲ.

ಎದೆಯೊಲವಿನ ಮಂಗಳಸ್ಮೃತಿ
ಚಿರಬಂಧುರ ಭದ್ರಾಕೃತಿ
ಹಿರಿಯಾಸೆಯ ಪ್ರಿಯ ಸಂಸ್ಕೃತಿ
ಈ ಟಾಜದ ನಿಲುವು
ಅಮಲ ಮಧುರ ಅಮೃತ ರೂಪ
ಪ್ರಿಯ ವಿರಹದ ಧವಳ ದೀಪ
ಮಮತಾಜಳ ಯಶೋಧೂಪ
ಇದು ಒಲುವಿನ ಗೆಲವು. ('ಟಾಜಮಹಾಲು')

ಕಲ್ಲಿನಲಿ ಹುಟ್ಟಿ ಕಲ್ಲಲಿ ಬೆಳೆದು ಕಗ್ಗಲ್ಲಿನುಸಿರಾಡಿ
ಕಲ್ಲಿನ ಮುಯ್ಯಿ ಪಡೆದು ಕಟ್ಟಿದರಣ್ಣ ಕಲ್ಲಿನೀ ಕೋಟೆಯನು
('ಬಾ ಚಿತ್ರದುರ್ಗಕ್ಕೆ')

ಪ್ರಯತ್ನಪೂರ್ವಕ ಪ್ರಾಸದ ಒಲವು ಕವಿಯನ್ನೇ ಗೆದ್ದಿರುವಂತೆ ಕಾಣುತ್ತದೆ ಎನ್ನ ಬಹುದು.

ಮತ್ತೊಂದೆಡೆ ಮನೆಯ 'ನಗೆಮಲ್ಲಿಗೆ'ಯಷ್ಟೇ ನವುರು ಈ ಶೈಲಿ.

ಹೊರಗೆ ಮಂಜಿರಲೇನು ಒಳಗೆ ನಿತ್ಯವು ಇವಳ
ನಗೆ ಮಲ್ಲಿಗೆ
ಎಂದು ಬಡತನವಿಲ್ಲ ಅಕ್ಕರೆಯೊಳರಳಿರುವ
ಈ ಬಳ್ಳಿಗೆ
ತುಂಬುದಿಂಗಳ ಹಣ್ಣು ಗೊನೆಗೆ ಗೊನೆಗೆ
. . . . . . . . .

ಚಂದನದ ಗೊಂಬೆಗೂ ಜೀವ ತುಂಬುವ ಚದುರಿ
ಸೃಷ್ಟಿಮಾತೆ ('ನಗೆಮಲ್ಲಿಗೆ')

ಮೋಹಕ ಶಬ್ದಚಿತ್ರಗಳು ಅಲ್ಲಲ್ಲಿ ಉಂಟು. ಉದಾಹರಣೆಗೆ,

ತೆಂಗುಗರಿಗಳು ತಮ್ಮ ಮಧುರಮರ್ಮರದಲ್ಲಿ
ಹಗಲಿರುಳು ಜೋಗುಳವ ಹಾಡುತಿರಲು
ಮಿರು ಮಿರುಗುವಿಬ್ಬನಿಯ ಹಸಿರುತಳಿಗೆಯನೆತ್ತಿ
ನೆಲದೇವಿ ನೇಸರಿಗೆ ಬೆಳಗುತಿರಲು
ಗುಡ್ಡ ಗುಡ್ಡದ ಮೊಲೆಗೆ ಒಂಟಿಮೋಡದ ಹಸುಳೆ
ಬಾಯಿಟ್ಟು ಮಲಗಿರಲು ಕನಸಿಸಂತೆ. ('ಬೀಳ್ಕೊಡಿಗೆ')

ಹಣತೆಯ ಹಡಗಾಗಿವೆ ಮನೆಮನೆಯೂ
ಕತ್ತಲ ಕಡಲೊಳಗೆ ('ದೀಪಾವಳಿ')

ನವೋದಯ ಕವಿಯಾಗಿ, ನವ್ಯ ಕವಿಯಾಗಿ ಕವನ ಸಂಕಲನಗಳ ಹೆಜ್ಜೆ ಇಡುತ್ತಾ ಮುಂಬರಿಯುತ್ತಿರುವ ಸನ್ಮಾನ್ಯ ಜಿ. ಎಸ್. ಶಿವರುದ್ರಪ್ಪ ಅವರಿಗೆ ಬಾಳು ಚೆಲುವಾಗಲಿ ; ಒಲವು ನೆಲೆಯಾಗಲಿ.

ಬೆಳಕೊಂದೆ ಗೆಲುವುದು
ಚೆಲುವೊಂದೆ ಗೆಲುವುದು
ಒಲವೊಂದೆ ಗೆಲುವುದು

## ವಸಂತ ಕುಷ್ಟಗಿ

# ದೀಪದ ಹೆಜ್ಜೆಯಲ್ಲಿ ನವೀನತೆ*

ಡಾ|| ಜಿ. ಎಸ್. ಶಿವರುದ್ರಪ್ಪನವರು ರಾಷ್ಟ್ರಕವಿ ಕುವೆಂಪು ಅವರ ಗರಡಿ ಮನೆಯಲ್ಲಿ ಪಳಗಿದ ಗರಡಿಯಾಳು. ಜೊತೆಗೆ ಪದ್ಮಶ್ರೀ ಗೋಕಾಕರ ನವ್ಯದೃಷ್ಟಿಯಿಂದ ತಮ್ಮ ಕಾವ್ಯಕಮಲಕ್ಕೆ ಕೆಲ ಕಿರಣಗಳನ್ನು ಪಡೆದು ಸ್ಫೂರ್ತಿಗೊಂಡಿರುವ ಕಾವ್ಯದ ಕೋಗಿಲೆಯಾಗಿದ್ದಾರೆ. ಹೊಸಗನ್ನಡದ ತಿರುಳು ನವ್ಯಕಾವ್ಯದ ಹುರುಳು ಮತ್ತೆ ವಿಜ್ಞಾನದ ದೃಷ್ಟಿ ಇವೆಲ್ಲ ಮೇಳವಿಸಿಕೊಂಡು ರಸಪಾಕವಾಗಿ ಬರುವ ಭಾವಗೀತೆಗಳಿಗೆ ನೆಲೆಯಾಗಿದ್ದಾರೆ ಶ್ರೀ ಶಿವರುದ್ರಪ್ಪನವರು.

ಇವರ ಕಾವ್ಯದಲ್ಲಿರುವ ನವೀನತೆಯನ್ನು ಅವರ 'ದೀಪದ ಹೆಜ್ಜೆ'ಯ ಬೆಳಕಿನಲ್ಲಿ ಕಂಡು ರಸಾಸ್ವಾದನೆ ಮಾಡುವುದು ಈಗಿನ ನಮ್ಮ ಉದ್ದೇಶ. ನವೀನತೆಯೆಂದರೆ ಹೊಸತು ಎಂದು ಅರ್ಥ. ದೇಹಕ್ಕೆ ಹಳೆಯ ಅಂಗಿ ಬಿಡಿಸಿ ಹೊಸ ಅಂಗಿ ತೊಡಿಸಿ ಅದನ್ನು ಲಕ್ಷಣವಾಗಿಸುವುದೇ ಚೊಕ್ಕಟತನವೆಂದು ಕರೆಯುತ್ತಾರೆ. ಈ ರೀತಿಯ ಶಿಸ್ತಿನಿಂದ ಸಂಸ್ಕೃತಿಯಲ್ಲಿ ಯಾವ ಬದಲಾವಣೆಯೂ ಆಗುವುದಿಲ್ಲ. ಆದರಂತೆ ಕಾವ್ಯದಲ್ಲಿಯೂ ಕೂಡ ಹೇಳುವ ಬಗೆ ಆಗಾಗ ಹೊಸದಾಗುತ್ತಾ ಇರಬೇಕು. ಎಂದರೆ ಸಹೃದಯನಿಗೆ ಬೇಸರಿಕೆಯು ಬರುವುದಿಲ್ಲ. ಇದಲ್ಲದೆ ಎಲ್ಲರ ಅನುಭವವು ಒಂದೇ ಆಗಿದ್ದರೂ ಕವಿಗಳು ಅದನ್ನು ವೈವಿಧ್ಯಪೂರ್ಣವಾಗಿ ಹೇಳಿದರೆ ಸಾಮಾನ್ಯನಿಗೆ ಜೀವನವು ಸತ್ವಪೂರ್ಣವಾಗುತ್ತದೆ. ಮಾನವನು ಮಗುವಾಗಿದ್ದಾಗಿನಿಂದಲೇ ಹೊಸತನ್ನು ಕಂಡಾಕ್ಷಣ ಹಿಗ್ಗುತ್ತಾನೆ. ಅದನ್ನು ಪಡೆದ ಆಯುಷ್ಯವನ್ನು ವರ್ಧಿಸಿಕೊಳ್ಳುತ್ತಾನೆ. ಆದ್ದರಿಂದ ಎಲ್ಲ ಕಡೆಗೂ ಹೊಸತು ಹೊಸತು ಕೇಳಿ ಬರಬೇಕು. ಅದೇ ಜೀವಂತ ಕಾವ್ಯದ ಲಕ್ಷಣ. ಜಗತ್ತಿನಲ್ಲಿ ಎಲ್ಲರೂ ಒಂದೇ ವಸ್ತುವನ್ನು ನೋಡಿದ್ದರೂ ಅವರವರ ರುಚಿಯ ಪ್ರಕಾರ ಚಿತ್ರಗಳನ್ನು ಭಾವಪಟಲದ ಮೇಲೆ ಆಯಾ ವಸ್ತುಗಳು ಮೂಡಿಸುತ್ತವೆ. ಅದೇ, ಪ್ರತಿಭೆಯಿದ್ದವನಿಂದ ಹೊಸ ಉಪಮೆಯೊಡನೆ ಕಾಗದದ ಮೇಲೆ ಮೂಡುತ್ತದೆ. ಜಗತ್ತನ್ನು ನೋಡಿ ಚಿತ್ರಿಸುವ ರೀತಿ ಅವರವರ ಕಲ್ಪನೆಯಂತೆಯೇ ಮೂಡಿ ಬರಬೇಕು. ಎಲ್ಲಿಯೋ ಕಾಳಿದಾಸ, ಪಂಪ, ರನ್ನ ಮೊದಲಾದವರು ಬಳಸಿದ

* ಕನ್ನಡ ನುಡಿ, ೩೨–೧, ಪು. ೨೦–೨೭

ಉಪಮಾ ಪ್ರಪಂಚದ ವಸ್ತುಗಳನ್ನೇ ಬಳಸುವುದರಿಂದ ಹೊಸ ಹುರುಪು ಹೊಸ ಕಳೆ ಕಾವ್ಯದಲ್ಲಿ ಅರಳುವುದಿಲ್ಲ. ಅದರಿಂದ ಕಾವ್ಯಪ್ರಯೋಜನವೂ ಆಗಲಾರದು. ಅದನ್ನು ತಿಳಿದ ಇಂದಿನ ಕವಿಪ್ರಪಂಚವು ಹೊಸ ಮಾರ್ಗವನ್ನು ಹಿಡಿದು ಸಾಗುತ್ತಿದೆ. ಅದು ತನ್ನ ರಾಜಮಾರ್ಗವನ್ನು ಇನ್ನೂ ಕಂಡುಕೊಳ್ಳಬೇಕಾಗಿದೆ.

ಅಂತಹ ನಿಟ್ಟಿನಲ್ಲಿ ತಪಸ್ಸು ಸಾಧಿಸಲು ಹೊರಟ ಋಷಿಗಳಲ್ಲಿ ಶ್ರೀ ಶಿವರುದ್ರಪ್ಪ ನವರೊಬ್ಬರಾಗಿದ್ದಾರೆ. ಅವರು ಜೀವನದಲ್ಲಿ ದೀಪದ ಹೆಜ್ಜೆಗಳನ್ನು ಗುರುತಿಸಿ ತಾವು ಕಂಡಂತೆಯೇ ಅವುಗಳನ್ನು ಕಾವ್ಯದಲ್ಲಿ ಮೂಡಿಸಲು ಆ ಜಾಡಿನಲ್ಲಿ ಹೊರಟಿರುವುದೇ ಇವರ ವೈಶಿಷ್ಟ್ಯ.

'ದೀಪದ ಹೆಜ್ಜೆ' ಎಂಬ ಇವರ ಕವನ ಸಂಕಲನವು ಅವರೇ ಹೇಳುವಂತೆ ಬದುಕಿನ ಸಮಸ್ಯೆಯ ಎರಡು ಮುಖಗಳ ವಿವೇಚನೆ. ಒಂದು, ಮಾನವ–ಅಂತರಂಗ; ಮತ್ತೊಂದು ಮಾನವ–ಕಾಲ. ಹೀಗೆ ಮನ–ಮನೆ; ಮನ–ಜಗ ಎಂದು ಆ ಮುಖಗಳನ್ನು ಇನ್ನಷ್ಟು ಸ್ಪಷ್ಟಗೊಳಿಸಬಹುದು. ಅದನ್ನೇ ಬೇಕಾದರೆ ಜೀವನ ಹೋರಾಟವೆಂದು ಕರೆಯಬಹುದು. ಆ ಹೋರಾಟದಲ್ಲಿ ಮೂಡಿದ ಅನುಭವಗಳೇ ದೀಪದ ಹೆಜ್ಜೆಗಳು. ಅನುಭವದ ಮಥನ ದಿಂದ ತೇಲಿಬಂದ ಬೆಳಕಿನ ಬೆಣ್ಣೆಯ ಮುದ್ದೆಯ ಗುರುತುಗಳು. ಆ ಗುರುತುಗಳನ್ನು ಸಾಮಾನ್ಯರ ಜೀವನದಲ್ಲಿಯ ಬಳಕೆಯ ವಸ್ತುಗಳೊಡನೆ ಹೋಲಿಸಿ ಹೇಳುವುದರಿಂದ, ಇಂದಿನ ಸಮಾಜವನ್ನು ಅವು ಬಹುಬೇಗನೇ ಹಿಡಿದು ಅದಕ್ಕೆ ಕಾವ್ಯ ಸಂಸ್ಕಾರವನ್ನು ನೀಡುತ್ತವೆ.

ಭಾರತೀಯರಲ್ಲಿ ವಿಶೇಷವಾಗಿ "ಬದುಕಿನ ಗುರಿ–ಅಧ್ಯಾತ್ಮ" ಎಂದು ಸಾಧಿಸುವವರೇ ಹೆಚ್ಚು. ಎಂದರೆ ಅದರ ಸಾಧನೆಯು ಕೇವಲ ಅರಣ್ಯದಲ್ಲಿ ಸಂಸಾರ ಬಿಟ್ಟು ನಡೆಯ ಬೇಕಾದ್ದು ಎಂದು ಅವರ ಕಲ್ಪನೆ. ಆದರೆ ಈ ವಿಚಾರವು ಬಹಳ ದಿವಸಗಳವರೆಗೆ ಪ್ರಭಾವವನ್ನು ಬೀರಲಿಲ್ಲ. ಬಹು ಬೇಗನೇ, 'ಈಜಬೇಕು ಇದ್ದು ಜಯಿಸಬೇಕು' ಎಂಬ ಸೂತ್ರದಂತೆ ಬಾಳಿ ಪೂರ್ಣತ್ವವನ್ನು ಪಡೆಯತೊಡಗಿತು ಕಾವ್ಯವಾಣಿ. ನಿಜವಾದ ಜೀವನ ಸಂದೇಶವನ್ನು ನೀಡಿ ಅದು ಉಪಕಾರ ಮಾಡಿತು. ಆ ಮಾರ್ಗದಲ್ಲಿ ನಡೆದ ಶಿವರುದ್ರಪ್ಪನವರು ತಮ್ಮ ಕಾವ್ಯದಲ್ಲಿ ಬದುಕಿಗೊಂದು ನಂಬಿಕೆಯನ್ನು ಕಾಣಲೆಳಸಿದ್ದಾರೆ. ಬದುಕುವುದಾದರೆ ಚೆನ್ನಾಗಿ ಬದುಕಬೇಕು. ಅದಕ್ಕೆ ಚೇತನ ಮಾರ್ಗದರ್ಶನ ಯಾವ ಮೂಲೆಯಿಂದ ಬಂದರೇನು? ಒಳ್ಳೆಯದು ಎಲ್ಲ ಕಡೆಯಿಂದಲೂ ಧಾವಿಸಲಿ. ಈ ಬಗೆಯಾಗಿ ವಿಚಾರ ಮಾಡಿದ ಕವಿ "ಅದೂ ಬೇಕೂ ಇದೂ ಬೇಕು; ಎಲ್ಲವೂ ಬೇಕು ನನಗೆ! ನಮಗೆ ಬೇಕಾದದ್ದು ದಾಹ ಪರಿಹಾರ" ಎಂದು ಅಂತರಂಗದೊಡನೆ ನುಡಿಯು ತ್ತಾನೆ. ಮತ್ತೊಂದು ಕಡೆಗೆ ಆಕಾಶದಲ್ಲಿಯ ಮಿಂಚಿನ ಸಾಹಸಕ್ಕಿಂತ ಭೂಮಿಯಲ್ಲಿ ನೆಲೆಯಾಗಿ ನಿಂತು ಸಾವಧಾನದಿಂದ ಜೀವನ ಮಾರ್ಗದಲ್ಲಿ ನಡೆಯುತ್ತ ಹೋಗುವುದು ಶ್ರೇಷ್ಠವೆಂದು ನಂಬಿ ವಿನೋಬಾರ ಜೀವನದಿಂದ ಸ್ಫೂರ್ತಿಯನ್ನು ಹೊಂದಿ, "ನೆಲವೇ ನನ್ನ ವಾಹನ" ಎನ್ನುವಾಗ ಬದುಕಿನ ಬೆಲೆ ಭೂಮಿಯ ಮೇಲೆಯೇ ಎಂಬುವ ಬಾಳಿನ

ನಂಬಿಕೆಯು ಕವಿಯ ಮನಸ್ಸಿನ ಮೇಲೆ ಬಲವಾದ ಮುದ್ರೆಯನ್ನೊತ್ತಿರುವುದೆಂದು ಹೇಳಬೇಕಾಗುತ್ತದೆ.

ಡಾ|| ಶಿವರುದ್ರಪ್ಪನವರು ಕನ್ನಡ ಅಧ್ಯಾಪಕರು. ಇವರಲ್ಲಿ ಕೇವಲ ಸಂಪ್ರದಾಯದ ದೃಷ್ಟಿಯಿದೆಯೆಂದು ಮಾತ್ರ ತಿಳಿಯಬಾರದು. ಕೇವಲ ಈ ರೀತಿಯಿಂದ ನೋಡಿದರೆ ಅವರಲ್ಲಿರುವ ಪ್ರತಿಭೆ, ಲೋಕಾನುಭವ, ಸತತವಾದ ಅಭ್ಯಾಸ—ಇವುಗಳ ಸೀಮೆಯನ್ನು ನಾವು ನಮ್ಮ ದೃಷ್ಟಿಯಿಂದ ನೋಡಿ ಮೊಟಕುಗೊಳಿಸಿದಂತಾಗುತ್ತದೆ. ನಿಜವಾಗಿಯೂ ಅವರಲ್ಲಿ ಹೊಸತು ಹಳತುಗಳ ಸಂಗಮವಿದೆ. ಒಳ್ಳೆಯ ವಸ್ತು ಎಲ್ಲಿಯೇ ಸಿಗಲಿ ಅದನ್ನವರು ಬಿಡುವವರಲ್ಲ. ಹೀಗಾಗಿ ಅವರ ಕಾವ್ಯದಲ್ಲಿ ನವ್ಯಕಾವ್ಯದ ಪ್ರಗತಿಗಾಗಿ, ಪೂರ್ಣತ್ವ ಮುಟ್ಟುವುದಕ್ಕಾಗಿ ಆರೋಗ್ಯದ ಲಕ್ಷಣಗಳೇ ವಿಶೇಷವಾಗಿ ಕಂಡುಬರುತ್ತವೆ.

ಕನ್ನಡ ಸಾಹಿತ್ಯದಲ್ಲಿ ಸುಮಾರು ಎರಡು ದಶಕಗಳಿಂದ ನವ್ಯತೆಯ ಗಾಳಿಯು ಬಿರುಸಾಗಿ ಬೀಸುತ್ತಿದೆ. ಅದು ಒಮ್ಮೊಮ್ಮೆ ಹಿತವೆನಿಸುತ್ತದೆ. ಆದರೆ ನಮ್ಮ ಮೈ ಹೊಸತನ್ನು ಸಂಪೂರ್ಣವಾಗಿ ಅಳವಡಿಸಿಕೊಳ್ಳಬೇಕಾಗಿದೆ. ಅಲ್ಲಿಯವರೆಗೆ ಹೊಸ ಗಾಳಿಯು ಹೊಡೆತ ಆಗಾಗ ಅರ್ಥದ ಉಸಿರನ್ನೂ ಕಟ್ಟುತ್ತದೆ. ಆದರೆ ಶ್ರೀ ಶಿವರುದ್ರಪ್ಪ ನವರ ಕವಿತೆಗಳಲ್ಲಿ ನವ್ಯತೆಯ ಪ್ರಜ್ಞೆಯು ಬಂಗಾರದ ಹೊಳಪಾಗಿ ಸಾಮಾಜಿಕನಿಗೆ ಸಂತೋಷವಾಗುತ್ತದೆ. ಇಂದಿನ ಅದೆಷ್ಟೋ ಕವಿತೆಗಳ ಭಾವಾರ್ಥವನ್ನು ಕವಿಯೇ ಟಿಪ್ಪಣಿಸಬೇಕಾಗುತ್ತದೆ. ಇಲ್ಲದೆ ಹೋದಲ್ಲಿ ಕವನವು ಬುದ್ಧಿಗೆ ಹಣಿಯುವುದೇ ಇಲ್ಲ. ಇನ್ನು ಹೃದಯವನ್ನರಳಿಸುವ ಮಾತು ದೂರ ಉಳಿಯಿತು. ಆದರೆ ಈ ಕವಿತೆಗಳನ್ನೆಲ್ಲ ಆಮೂಲಾಗ್ರವಾಗಿ ಅಭ್ಯಾಸ ಮಾಡಿದಾಗ ಅವರ ವಿಚಾರ ಸ್ಪಷ್ಟತೆ, ಭಾವ ಸ್ಪಷ್ಟತೆ, ನಿರೂಪಣ ಸ್ಪಷ್ಟತೆಗಳು, ಅಲ್ಲಿ ಎಂತಹ ನವ್ಯಕಲ್ಪನೆಯಿದ್ದರೂ ನಿಚ್ಚಳವಾಗಿ ಸಾಮಾಜಿಕನ ಮನಸ್ಸನ್ನು ತಟ್ಟಿ ಕಾವ್ಯಸಂತೋಷವನ್ನುಂಟುಮಾಡುತ್ತವೆ.

"ರಾತ್ರೋರಾತ್ರಿ"—ಎನ್ನುವ ಕವನದಲ್ಲಿಯ ಚಂದ್ರನ ಕಲ್ಪನೆಯು ಅವರ ನವ್ಯ ದೃಷ್ಟಿಗೆ ಸ್ಪಷ್ಟ ಉದಾಹರಣೆಯಾಗಿದೆ.

> ಚಿಕ್ಕೆ ಚಲ್ಲಾಪಿಲ್ಲಿ: ಕೋಳಿ ಕೆದರಿದ ಕಾಳು.
> ಕತ್ತಲಿನ ತಿಪ್ಪೆಯ ರಾಶಿಯಂಚಿನಲ್ಲಿ
> ತಿಂದೆಸೆದ ಮಾವಿನ ವಾಟೆ ಆ ಚಂದ್ರ !

ಎಂಬುದು ಆ ನವ್ಯ ಕಲ್ಪನೆ. ಈ ಮೊದಲು ಚಂದ್ರನನ್ನು ಪೆಪ್ಪರ್ಮೆಂಟ್ ಎಂದೂ, ಅಮೃತ ಕುಂಭವೆಂದೂ ಇನ್ನೂ ಏನೇನೋ ವರ್ಣಿಸಿದ್ದಾರೆ. ಆದರೆ ಅದು ಮಾವಿನ ವಾಟೆಯೆಂದು ಹೇಳಿದುದು ಇದೇ ಮೊದಲೆಂದು ತೋರುತ್ತದೆ. ಅಜ್ಞಾನದ ಸಂಕೇತವು ಕತ್ತಲೆಯೇನೋ ನಿಜ. ಆದರ ಜೊತೆಗೆ ತಿಪ್ಪೆಯ ರಾಶಿ ಬಂದು ಸೇರಿದಾಗ ಅಜ್ಞಾನದ ಪರಮಾವಧಿಯ ಕಲ್ಪನೆಯು ತತ್‌ಕ್ಷಣವೇ ಬರುತ್ತದೆ. ಅಂತಹ ಕಗ್ಗತ್ತಲೆಯಲ್ಲಿಯೂ ಅನುಭವದ ರುಚಿ ನೋಡಿದ ಬೆಳಕು, "ಮಾವಿನ ವಾಟೆ"ಯನ್ನು ಕಾಣಬಹುದು. ಈ

ಭಾವದಲ್ಲಿ ನವ್ಯತೆಯ ದೃಷ್ಟಿಯಿದ್ದರೂ ಆ ನವ್ಯಾಲಂಕಾರದಲ್ಲಿ ಅರ್ಥಸ್ಪಷ್ಟತೆಯಿದೆ. ಆದ್ದರಿಂದ ಕಾವ್ಯ ರಸಾತ್ಮಕವಾಗಿದೆ.

'ಇವನು' ಎನ್ನುವ ಭಾವಗೀತೆಯಲ್ಲಿ 'ತಲೆಯ ತಪ್ಪಲೆಯಲ್ಲಿ ವಿಚಾರಗಳ ಕುದಿತ' ಎನ್ನುವ ಕಲ್ಪನೆ ನವ್ಯವಿಚಾರದ ಸಾಂಕೇತಿಕ ಮಾತು. ಮಾನವನ ತಲೆಯ ತುಂಬ ಅನೇಕ ಸಮಸ್ಯೆಗಳು, ಅವುಗಳನ್ನು ಹೇಗೆ ಬಿಡಿಸಬೇಕೆನ್ನುವ ಅನೇಕ ವಿಚಾರಗಳು ತಲೆಯ ತುಂಬ ಮುರಿದು ನೋವನ್ನುಂಟುಮಾಡುತ್ತಿರುತ್ತವೆ. ಜೀವನದುದ್ದಕ್ಕೂ ನೂರಾರು ರೈಲುಗಳು ಸುತ್ತುಮುತ್ತು ಉರುಳುತ್ತ ಹೋಗುತ್ತವೆ. ಜಗತ್ತು ಆದರ್ಶವನ್ನು ಹೊತ್ತು ಸಾಗುತ್ತಲೆ ಇರುತ್ತದೆ. 'ಇವನು' ತನ್ನ ವಿಚಾರದಲ್ಲಿ ತಾನು ನಿಮಗ್ನನಾಗಿ ಮೌನಿಯಾಗಿರುತ್ತಾನೆ. ಅಂತಹ ಸಂದರ್ಭದಲ್ಲಿ,

"ಮುರುಕು ಜೋಪಡಿಯೊಳಗೆ
ಮಳೆಯ ನೀರಿಳಿವಂತೆ
ಇಳಿಯುತಿವೆ ತಲೆಯೊಳಗೆ ನೂರಾರು ಚಿಂತೆ ;
ಒಳಗೆಲ್ಲ ಕೆಸರು ; ಬರಿಕೆಸರು ಅದರೊಳಗು
ಮೊಳೆಯುತಿವೆ ಆಸೆಗಳು ಹಸುರಿನಂತೆ !"

ವಿಜ್ಞಾನವು ಅರಳುತ್ತಿರುವಂತೆ ನವ್ಯಜೀವನದ ಪ್ರಜ್ಞೆಯು ಜನಜೀವನದ ನಾಡಿ ನಾಡಿಗಳಲ್ಲಿ ಮಿಡಿಯತೊಡಗಿದೆ ; ಹೊಸ ಸಾಧನ ಸಾಮಗ್ರಿಗಳ ಉಪಮಾ ಪ್ರಪಂಚವು ವಿಸ್ತಾರವಾಗುತ್ತ ಹೋಗಿ, ವಿಷಯಗಳನ್ನು ತಿಳಿದುಕೊಳ್ಳುವಲ್ಲಿ ಮಾನವನು ತನ್ನ ಬುದ್ಧಿಶಕ್ತಿಯನ್ನು ಬಹು ನಿಶಿತಗೊಳಿಸಿಕೊಳ್ಳಬೇಕಾಗಿದೆ. ಅದರ ಜೊತೆಗೆ ಇಂದಿನ ಪ್ರಪಂಚದ ನೀತಿ ರೀತಿಗಳ ವಿವೇಕವೂ ಅವನಿಗಿದ್ದು ಅವನ ಮನವು ಅದರಲ್ಲಿ ಮಾಗಿರಬೇಕು. ಆಗ ಹೊಸ ಕವನಗಳು ಹೆಚ್ಚು ಪರಿಣಾಮಕಾರಿಯಾಗುತ್ತವೆ. 'ಒಂದಿರುಳು' ಎಂಬ ಕವನದಲ್ಲಿ ನಾವು ಹೊಸ ಮಾತುಗಳು ಅಲಂಕಾರವಾಗಿರುವುದನ್ನು ನೋಡಬಹುದು.

"ಬೆಳಗಾಯಿತೊ, ಬಾಯ್ ತೆರೆಯುವುವೀ ಅಂಗಡಿ ;
ಹೋಟೆಲುಗಳ ರೇಡಿಯೊ ಕಿರುಚಾಡುವ ದನಿ
ಬಲೆಯಾಡುವುದೀ ಬೀದಿಯಲಿ
ಸಾವಿರ ಪ್ರಶ್ನೆಯ ನೊಗವೆಳೆಯುವ ಮುಖ ನಡೆವುವು"

ಹೀಗೆ ಜೀವನವು ಸಾಗುತ್ತಿರುವಾಗ, ದುಃಖಾಂತ ಜೀವನವೆಂದು ಬಗೆದವನ "ಕರ್ರನೆ ಟಾರಿದೆಯೊಳಗೂ" ಸುಖಾಂತವಿದು ಜೀವನವೆಂಬುವ ಆಶೆ "ಹ್ಯಾಲೀಂಟು"ವ ಭಾವ ತುಸು ಮಿಂಚುತ್ತದೆ. ಇಲ್ಲಿರುವ ಹೊಸ ಜೀವನದಲ್ಲಿರುವ ಬದುಕಿನ ಮಾತುಗಳೇ ಅಲಂಕಾರವಾಗಿ ಜೀವನ ತತ್ತ್ವವನ್ನು ಪರಿಣಾಮಕಾರಿಯಾಗಿ ಹೇಳುವಲ್ಲಿ ಸಿದ್ಧಿಯನ್ನು ಪಡೆದಿವೆ. ಇದೇ ಪದ್ಯದಲ್ಲಿ, "ಶಿಳ್ಳೆನುತಿದೆ ಗಸ್ತಿನ ಪೋಲಿಸರ 'ಶೀಟಿ', ಕತ್ತಲೆ ಮಾಟಿ" ಎನ್ನುವ ನವೀನ ಹೋಲಿಕೆಯಲ್ಲಿ ನೀತಿಯ ಎಚ್ಚರಿಕೆಯಿದೆ, ಅಂತರಾಳದ ಮಾಟುವಿಕೆಯ ಹಿನ್ನೆಲೆಯಲ್ಲಿ.

ಇದೇ ರೀತಿ, "ಬೆರಳ ಬಂಡೆಯ ಮೇಲೆ ಬಜ್ಜಿಯಾಗಿದೆ ಸೊಳ್ಳೆ", "ಮುದಿ ಎತ್ತು ಸತ್ತಿಹುದು ದುರ್ವಾಸನೆ", "ಬೆಳಕಮುಡಿಯಲಿ ಹೊತ್ತು ನಿಂತ ಲಾಂದ್ರದ ಹಾಗೆ", "ಈ ಕೃಪಣೆಯ ಕಲ್ಲೆದೆಯನು ಕರಗಿಸಿ, ಹಸುರನೆತ್ತಬೇಕು ಈ ಎಲುಬಿನ ಯಾತಗಳು", "ಎತ್ತರದ ಹುತ್ತಗಳ ಹಾವುಗಣ್ಣಿನ ಮಹಲು" ಮೊದಲಾದ ಮಾತುಗಳಲ್ಲಿ ನವೀನತೆಯ ದೃಷ್ಟಿಯಿಂದ ಬಾಳಿನ ನೆಲೆಬೆಲೆಯನ್ನು ಅಳೆಯುವ ಮಾಪನವಿದೆ.

'ಅರೆಮುಗಿದ ಕವನ' ಎಂಬುದು ಜೀವನದ ಅನಂತತೆಯನ್ನು ತೋರಿಸುತ್ತದೆ. ನಾವು ಸ್ವತಂತ್ರವಾಗಿದ್ದರೂ ಪೂರ್ಣತ್ವವು ದೊರೆಯಬೇಕಾದರೆ ಈಶನ ಕರುಣೆಯು ಬೇಕು ಎಂಬ ಹಳೆಯ ಮಾತುಗಳನ್ನೇ ಹೊಸ ರೀತಿಯಲ್ಲಿ ಇಡುವ ರೀತಿಯು ಕವಿಯ ಲೌಕಿಕ ಜ್ಞಾನದ ಹರವನ್ನು ತೋರಿಸಿಕೊಟ್ಟು ಅದರಲ್ಲಿಯೇ ತತ್ತ್ವ ಸಂಶೋಧನೆಯನ್ನೂ ಮಾಡಿಸುತ್ತದೆ:

"ಅರೆಮುಗಿದ ಕವನ ಇದು...
ಬ್ಯಾಂಕಿನೆಡೆ ಬಂದು ಕಂಡೆನು ನಾನು
ಕೈಯೊಳಿದೆ ರುಜುವಿರದ ಚೆಕ್ಕು
ಹಣವಿದೆಯಲ್ಲಿ ; ಆದರಿದಕಿನ್ನಾರು ಹಣಕೊಟ್ಟಾರು
ಯಾರಿಗಿದೆ ಕೊಡುವ ಹಕ್ಕು
ಕೊಟ್ಟವನು ಇದಕೆ ರುಜು ಹಾಕಿದರೆ ತಾನೆ
ಕೈಗೆ ರೂಪಾಯಿ ಝಣಕು ಝಣಕು ?
ಅವನು ಎಲ್ಲಿದ್ದಾನೊ ಹುಡುಕಬೇಕು"

ಹೀಗೆ ಜೀವನದ ಇತಿಹಾಸಕ್ಕೊಂದು ಸೂತ್ರವಾಗಿದೆ 'ಅರೆ ಮುಗಿದ ಕವನ' ಹೊಸ ದೃಷ್ಟಾಂತವನ್ನು ಹೊತ್ತು.

"ಸುತ್ತ ನಾಲ್ಕರ ಮಗ್ಗಿ ಒಟಗುಡುವ ಕಪ್ಪೆ ;
ಬೇಸರದ ಮುಖ ಮುಂಡಿಸಿದೆ ಕುರ್ಚಿಯಲಿ
ಕೆಸರ ಕುಪ್ಪೆ !
* * *
ವಿಶ್ವ ಭೂಪಟದಂಥ ಹಳೆಯ ಕೋಟು !
* * *
ಹೊಡೆದೀತೆ ಗಂಟೆ ?
ಯಾವಾಗ ಮುಗಿದೀತು ಈ ಗೋಳು ಸಂತೆ ?"

ಎನ್ನುವ 'ಮೇಷ್ಟ್ರು' ಎಂಬ ಕವಿತೆಯಲ್ಲಿ ಮೂಡಿದ ಕವಿವಾಣಿಯು ಇಂದಿನ ಸಮಾಜದಲ್ಲಿ ಪ್ರೀತಿ, ಶಿಸ್ತು ಮಾಯವಾಗುವುದಕ್ಕೆ ಕಾರಣವೇನು ? ಎಂದು ಹುಡುಕು ವಂತಿದೆ. ಶಿಕ್ಷಕರು ಆರ್ಥಿಕ ರೀತಿಯಿಂದ ಸುವ್ಯವಸ್ಥಿತವಾಗಿದ್ದರೆ ಅವರ ಮನಸ್ಸು ಪ್ರಸನ್ನವಾಗಿದ್ದು ಶ್ರೇಷ್ಠ ನಾಗರಿಕರ ನಿರ್ಮಾಣದಲ್ಲಿ ಸಫಲರಾಗುತ್ತಾರೆ. ಸಮಾಜ ದಲ್ಲಿಯೂ ಅವರಿಗೆ ಗೌರವ ಲಭಿಸುತ್ತದೆ. ಆದರೆ ಇಂದಿನ ಪ್ರಪಂಚ ಶಿಕ್ಷಕರ

ಸುವ್ಯವಸ್ಥಿತ ಜೀವನದ ಬಗ್ಗೆ ಕಣ್ಣು ಮುಚ್ಚಿದೆ. ಅಂತೆಯೇ ಅವನು ಲೋಕದ ಕಣ್ಣಿನಲ್ಲಿ ಬಹು ಕನಿಕರದ ವ್ಯಕ್ತಿಯಾಗಿದ್ದಾನೆ. ಇರುವ ಸ್ಥಿತಿಯನ್ನು ನೆನೆದು, ಭವಿಷ್ಯದ ಕಗ್ಗತ್ತಲೆಯನ್ನು ಊಹಿಸಿ ಮುಂದೆ ಹೇಗಿರಬೇಕೆನ್ನುವುದರ ಕಡೆಗೆ ಕವಿವಾಣಿ ಸೂಚನೆಯನ್ನು ನೀಡುತ್ತಿದೆ. ಇಲ್ಲಿ ಪ್ರಯೋಗಿಸಿರುವ ಹೊಸ ಹೋಲಿಕೆಯ ಸಾಮಗ್ರಿಗಳು ವಿಷಯವನ್ನು ಇನ್ನಷ್ಟು ಪ್ರಭಾವಕಾರಿಯನ್ನಾಗಿ ಮಾಡಿವೆ. ಈ ರೀತಿಯ ಪರಿಣಾಮವೇ ಉತ್ತಮ ಕಾವ್ಯದ ಲಕ್ಷಣವಲ್ಲವೆ?

ಈ ಒಂದು ಚಿಕ್ಕ ಸಮಾಲೋಚನೆಯಲ್ಲಿ ಡಾ॥ ಶಿವರುದ್ರಪ್ಪನವರು ಜಗತ್ತನ್ನು ಇಂದಿನ ದೃಷ್ಟಿಯಿಂದ ನೋಡಿ ವಿಮರ್ಶಿಸಿ ಅದನ್ನು ಹೊಸ ಹೋಲಿಕೆಗಳ ಅಲಂಕಾರದಿಂದ ಸಾಮಾಜಿಕರ ಮನಸ್ಸಿನ ಮೇಲೆ ಪ್ರತಿಬಿಂಬಿಸುವ ಶೈಲಿಯಲ್ಲಿ ಮೂಡಿಸಿ ಧನ್ಯರಾಗಿದ್ದಾರೆಂಬುದನ್ನು ಕಂಡುಕೊಂಡೆವು. ಮತ್ತು ಅವರ ಪ್ರತಿಭೆಯ ಮೂಸೆಯಲ್ಲಿ ಭಾವನೆಗಳು ನವ್ಯಾಲಂಕಾರಗಳನ್ನು ಹೊಂದಿ ಕಣ್ಣು ಕೋರೈಸಿ ಮನವ ಸಂತೈಸುವ ವಿಚಾರವನ್ನೂ ಮನಗಾಣಬಹುದು. ಈ ಸಾಂತ್ವನದಿಂದ ಬದುಕು ಹೊಸ ಜೀವನ ತಳೆದು,

"ವಿಫಲತೆಯೊಳು ಸಫಲತೆ ಚಿಗುರಿಡುವುದನ್ನು"

ಕಾಣಲು ಆರಂಭಿಸಿ,

"ಅಳಿವಿನಲ್ಲು ಉಳಿವ ಚೋದ್ಯವನ್ನು"

ಕಂಡು ಅದಕ್ಕೆ ಬೆರಗಾಗಿ,

"ನೋವ ನುಂಗಿ ನಗೆಯನೀವ ಆತ್ಮಶಕ್ತಿ"

ಒಮ್ಮೆಗೆ ಆವಿರ್ಭಾವ ಹೊಂದಿ ಗರುಡಶಕ್ತಿಯಾಗುವುದು.

# ಜಿ. ಎಸ್. ಕಾಪ್ಸೆ

# ಕಾರ್ತೀಕ

ಒಂದು ಕಾವ್ಯಕೃತಿಯನ್ನು ಅವಲೋಕಿಸುವಾಗ ಅದು ರಚನೆಯಾದ ಕಾಲ ಹಾಗೂ ಆ ಕಾಲದ ಕಾವ್ಯಧೋರಣೆ, ಮತ್ತು ಕವಿ ತನ್ನ ಅಭಿವ್ಯಕ್ತಿಯಲ್ಲಿ ತೋರಿದ ಸ್ವಂತಿಕೆ ಅಥವಾ ಸ್ವತಂತ್ರದೃಷ್ಟಿ ಇವುಗಳನ್ನು ಗಮನದಲ್ಲಿರಿಸಿಕೊಳ್ಳುವುದು ಅವಶ್ಯವೆಂದು ತೋರುತ್ತದೆ. ಇನ್ನುಳಿದ ಕಾವ್ಯಲಕ್ಷಣಗಳು ಈ ಮೂಲಭೂತವಾದ ಸಂಗತಿಗಳನ್ನು ಅವಲಂಬಿಸಿ, ಕವಿಯ ಪ್ರತಿಭಾ ಸಾಮರ್ಥ್ಯಕ್ಕನುಗುಣವಾಗಿ ಪ್ರಕಟಗೊಳ್ಳುತ್ತವೆಂದು ಹೇಳಬಹುದು.

ಡಾ॥ ಜಿ. ಎಸ್. ಶಿವರುದ್ರಪ್ಪನವರ 'ಕಾರ್ತೀಕ' ಪ್ರಕಟವಾದದ್ದು ೧೯೬೧ರಲ್ಲಿ. ಇದರಲ್ಲಿಯ ಕವನಗಳ ರಚನೆಯ ಕಾಲ ಅವರೇ ಹೇಳಿದಂತೆ ೧೯೫೬ರಿಂದ ೧೯೬೧ರ ವರೆಗಿನದು. 'ಗಾರುಡಿ', 'ಅತಿಥಿಗಳು', 'ಮುಗಿದ ಕತೆ' ಮತ್ತು 'ಪಾರ್ಕಿನಲ್ಲಿ ಒಂದು ಸಂಜೆ' ಈ ನಾಲ್ಕು ಕವಿತೆಗಳು ೧೯೫೪ರಕ್ಕಿಂತ ಸ್ವಲ್ಪ ಮೊದಲು ರಚಿತವಾದವು ಎಂಬುದನ್ನೂ ಅವರು ಸೂಚಿಸಿದ್ದಾರೆ. ಒಟ್ಟಿನಲ್ಲಿ ಈ ಎಲ್ಲ ಕವಿತೆಗಳ ರಚನೆಯ ಕಾಲ ಹೆಚ್ಚೆಂದರೆ ಆ ಒಂದು ದಶಕ ಮಾತ್ರ. ಈ ಅವಧಿ ಹೊಸಗನ್ನಡ ಕಾವ್ಯದಲ್ಲಿ ಒಂದು ಸಂಕ್ರಮಣಕಾಲವೆಂದೇ ಹೇಳಬೇಕು. ಆಗ ನವೋದಯ ಕಾವ್ಯ ಮುಕ್ತಾಯದ ಹಂತ ದಲ್ಲಿಯೂ ನವ್ಯ ಕಾವ್ಯ ಪ್ರಾರಂಭದ ಅವಸ್ಥೆಯಲ್ಲಿಯೂ ಇದ್ದವು. 'ಭೂಮಿಗೀತ' ದಂಥ ನವ್ಯ ಪ್ರಕಾರದ ಸಿದ್ಧಿಯ ಕಾವ್ಯ ಈ ದಶಕದಲ್ಲಿ ಬಂದಿದ್ದರೂ ಬಹುಜನ ಕವಿ ಗಳಿಗೆ ಇದು ನವ್ಯದ ಪ್ರಾಯೋಗಿಕ ಕಾಲವೇ ಆಗಿತ್ತು. ಶಿವರುದ್ರಪ್ಪನವರಂಥವರು ನವೋದಯ ಕಾವ್ಯದಲ್ಲಿ ಬೆಳವಣಿಗೆಯನ್ನು ಹೊಂದಿ—ಆ ಕಾವ್ಯಪ್ರಕಾರವಲ್ಲಿಯೂ ಮುಂದುವರೆಯುತ್ತ–ಈಗ ಸಾಮಯಿಕವಾದ ನವ್ಯಕಾವ್ಯದಲ್ಲಿಯೂ ಕೃಷಿಮಾಡತೊಡಗಿ ದ್ದರು. ಈ 'ಕಾರ್ತೀಕ'ಕ್ಕಿಂತ ಸ್ವಲ್ಪ ಮೊದಲು ಪ್ರಕಟವಾದ ಅವರ 'ದೀಪದ ಹೆಜ್ಜೆ' ಯಲ್ಲಿ ಬಹಳಷ್ಟು ನವ್ಯಕವಿತೆಗಳಿರುವುದನ್ನು ಗಮನಿಸಬಹುದು. ಪ್ರಸ್ತುತ 'ಕಾರ್ತೀಕ' ದಲ್ಲಿ ಎರಡೂ ಪ್ರಕಾರದ ಕವಿತೆಗಳು ಸಮಸಮವಾಗಿ ಕಂಡುಬರುತ್ತವೆ. ಅಷ್ಟಲ್ಲದೆ ಅವರ ಈವರೆಗಿನ ಒಟ್ಟು ಕಾವ್ಯಸೃಷ್ಟಿಯನ್ನು ಗಮನಿಸಿದರೆ, ಅವರು ಇಂಥ ಒಂದು ಪಂಥಕ್ಕೇ ಜೋತುಬಿದ್ದು, ಕಾವ್ಯಪ್ರಕಾರದಲ್ಲಿಯೇ ಒಂದು ಬೇಲಿಯನ್ನು ನಿರ್ಮಿಸಿ ಕೊಂಡಿದ್ದುದು ಕಂಡುಬರುವುದಿಲ್ಲ. ಕಾವ್ಯಸೃಷ್ಟಿಯ ಬಗ್ಗೆ ತಮ್ಮ ಅನುಭವವನ್ನು ಬರೆಯುತ್ತ ಅವರು "ಈ ಕಾವ್ಯಾನುಭವದಲ್ಲಿ ನನಗೆ ಅನಿಸಿದ್ದು ಇಷ್ಟು : ಕಾವ್ಯವನ್ನು

ಕುರಿತ ಸಿದ್ಧಾಂತಗಳೇ ಬೇರೆ, ಒಳಬಗೆಯಲ್ಲಿ ಮೂಡುವ ಕಾವ್ಯದ ಮೋಡಿಯೇ ಬೇರೆ. ಎಷ್ಟೋ ಸಲ ಬುದ್ಧಿನಿರ್ಮಿತವಾದ ಸಿದ್ಧಾಂತಗಳ ಸಭೆ ಅಂತರಂಗದ ರಾಜ್ಯಕ್ಕೆ ನೋಟೀಸುಗಳ ಮೇಲೆ ನೋಟೀಸು ಕಳುಹಿಸಿದರೂ ಅಲ್ಲಿನ ನಿಗೂಢನಿಯತಿ ತನಗೆ ಸರಿ ಎಂದು ತೋರಿದ್ದನ್ನು ಮೌನವಾಗಿ, ಧೀರವಾಗಿ ರೂಪಿಸಿ ಕಳುಹಿಸುತ್ತದೆ[1]" ಎಂದಿದ್ದಾರೆ. ಅಂದರೆ ಅಂತರಂಗದಿಂದ ಹೊಮ್ಮುವ ಕಾವ್ಯ ಯಾವ ಸಿದ್ಧಾಂತಕ್ಕೂ ಕಟ್ಟುಬೀಳದೆ, ನಿಗೂಢನಿಯತಿ ನಿರ್ಧರಿಸಿದಂತೆ ರೂಪುಗೊಳ್ಳುವದೆಂದು ಇಲ್ಲಿಯ ಅಭಿಪ್ರಾಯವಾಗಿದೆ. ನಿಯತಿಕೃತಿ ನಿಯಮರಾಹಿತ್ಯವನ್ನು ಕಂಡುಕೊಂಡ ನಮ್ಮ ಪ್ರಾಚೀನ ಕವಿಗಳ ಅಭಿಪ್ರಾಯವೂ ಸಾಮಾನ್ಯವಾಗಿ ಇದೇ ಬಗೆಯದಾಗಿತ್ತು. ಹಾಗಿದ್ದರೂ ಕಾಲಮಾನ ಪರಿಸ್ಥಿತಿಯ ಅರಿವು ಪ್ರತಿಯೊಬ್ಬ ಕವಿಗೆ ಇದ್ದೇ ಇರುತ್ತದೆಂಬುದನ್ನು ಅಥವಾ ಇರಲೇ ಬೇಕೆಂಬುದನ್ನು ಅಲ್ಲಗಳೆಯಲಿಕ್ಕಾಗದು.

ಶಿವರುದ್ರಪ್ಪನವರು ನಿಗೂಢನಿಯತಿ ಸೂಚಿಸಿದಂತೆ ಕಾವ್ಯ ರಚಿಸುತ್ತಿದ್ದರೂ ೧೯೫೦ ರಲ್ಲಿ ಕೇಳಿಬಂದ ನವ್ಯಧ್ವನಿಯೊಂದಿಗೆ ಸ್ವರಮೇಳ ಕೂಡಿಸಲು ಹೊರಟವರಲ್ಲಿ ಅವರೂ ಒಬ್ಬ ಮಹತ್ವದ ಕವಿಗಳಾಗಿ ಕಾಣುತ್ತಾರೆ. ನವ್ಯ ಕಾವ್ಯದ ಪ್ರಾರಂಭದ ದಶಕದಲ್ಲಿಯೆ ಸಂಕ್ರಮಣಾವಸ್ಥೆಯಲ್ಲಿ ಪರಿಗಣಿಸಲ್ಪಡುವ ಕಾವ್ಯವೂ ಅವರಿಂದ ರಚಿತವಾಗಿದೆ. ಪರಂಪರೆಯನ್ನು ಉಳಿಸಿಕೊಂಡು ಪ್ರಗತಿಯನ್ನು ಸ್ವೀಕರಿಸಿದ ಅವರ ಕಾವ್ಯದಲ್ಲಿ ಸಮನ್ವಯ ದೃಷ್ಟಿಯೂ ಇಲ್ಲದಿಲ್ಲ. ತೀರ ನವ್ಯವೆನಿಸುವಂಥ ಕವಿತೆಗಳನ್ನೂ ಅವರು ಬರೆದದ್ದುಂಟು.

ಈ ಎಲ್ಲದರ ಹಿನ್ನೆಲೆಯಲ್ಲಿ ಅವರ 'ಕಾರ್ತೀಕ' ಸಂಕಲನವನ್ನು ನೋಡಬೇಕು. ಅವರು ಇಲ್ಲಿ ಕಾವ್ಯಸೃಷ್ಟಿಯ ಬಗೆಗೆ ತಳೆದ ನಿಲುವೆಯೇ ಬೇರೆಯಾಗಿದೆ : "ಬದುಕಿನಲ್ಲಿ ದುಃಖ 'ಹಾಸಲುಂಟು ಹೊದೆಯಲುಂಟು.' ಆದ್ದರಿಂದಲೇ ನಲವಿನ ಅಗತ್ಯ ವಿಶೇಷವಾಗಿರುವುದು. ಬದುಕಿಗೆ ಬೇಕಾದ ನಲವನ್ನು, ನಲವಿನ ಮನಸ್ಥಿತಿಯನ್ನು ಯಾರು ಯಾವ ರೂಪದಲ್ಲಿ ನೀಡಿದರೂ ಸ್ವಾಗತಾರ್ಹವೇ"[2] ಎಂಬುದು ಅವರ ಇಲ್ಲಿಯ ಧೋರಣೆಯಾಗಿದೆ. ಇಂಥ ಒಂದು ಧೋರಣೆಗೆ ಕವಿ ಬದ್ಧನಾದಾಗ ಅವನ ಕಾವ್ಯಕ್ಕೆ ಒಂದು ವಿಶಿಷ್ಟ ಸ್ವರೂಪ ಬರುತ್ತದಾದರೂ, ಅದೇ ಕಾರಣದಿಂದ ಅವನ ಕಾವ್ಯದ ವಿಸ್ತಾರ ಕಡಿಮೆಯಾಗುವ ಸಂಭವವಿದೆ. ನಲವು ಬದುಕಿಗೆ ಅಗತ್ಯವಾದರೂ ಅದುವೇ ಜೀವನದ ಸಮಗ್ರ ಭಾವವಲ್ಲ. ಬದುಕಿನ ಎಲ್ಲ ಭಾವಗಳನ್ನೂ ಅನುಭವಗಳನ್ನೂ ತೆರೆದ ಮನಸ್ಸಿನಿಂದ ಸ್ವೀಕರಿಸಿ, ಅವೆಲ್ಲವನ್ನೂ ಕಾವ್ಯಕ್ಕೆ ಒಗ್ಗಿಸಿಕೊಳ್ಳುವ ದೃಷ್ಟಿ ಕವಿಗಿರಬೇಕಾದದ್ದು ಮುಖ್ಯ. ಶಿವರುದ್ರಪ್ಪನವರ 'ಸಾಮಗಾನ'ದಿಂದ 'ಗೋಡೆ' ವರೆಗಿನ ಕಾವ್ಯಸೃಷ್ಟಿಯನ್ನು ನೋಡಿದರೆ ಅಂಥ ದೃಷ್ಟಿ ಅವರಿಗಿದ್ದುದು ಕಂಡುಬರುತ್ತದಾದರೂ ಈ 'ಕಾರ್ತೀಕ' ಸಂಕಲನದ ಮಟ್ಟಿಗೆ ನಲವನ್ನಷ್ಟು ಬರಮಾಡಿಕೊಳ್ಳುವ ಧೋರಣೆಯನ್ನು ಅವರು ತಳೆದಿದ್ದಾರೆ.

---

1 ಜಿ. ಎಸ್. ಶಿವರುದ್ರಪ್ಪ : 'ಕಾರ್ತೀಕ', ಎರಡು ಮಾತು, ಪು. iii

2 ಜಿ. ಎಸ್. ಶಿವರುದ್ರಪ್ಪ : 'ಕಾರ್ತೀಕ', ಎರಡು ಮಾತು, ಪು. iii

ಶಿವರುದ್ರಪ್ಪನವರು ತಳೆದ ಈ ವಿಶೇಷ ಧೋರಣೆಯಿಂದಾಗಿ ಈ ಸಂಕಲನದ ಕವಿತೆಗಳೆಲ್ಲ ಸಂತೋಷವನ್ನು ಬೀರುವಂಥವಾಗಿವೆ; ಇಲ್ಲವೆ ಅದಕ್ಕೆ ಪೋಷಕವಾದ ಸಾಮಗ್ರಿಯಿಂದ ಕೂಡಿದವಾಗಿವೆ. ಜೀವನದ ವಿವಿಧ ಮುಖಗಳನ್ನು, ವ್ಯತ್ಯಾಸಗಳನ್ನು ಗುರುತಿಸುವ ಕಾರ್ಯ ಇಲ್ಲಿ ನಡೆದಿದ್ದರೂ ಅವುಗಳ ವಿಕೃತ ರೂಪಗಳಿಗೆ ಮಹತ್ವಕೊಡಲಾಗಿಲ್ಲ. ಅಂಥ ಏನೆಲ್ಲವನ್ನು ರಮ್ಯವಾಗಿ, ಹೃದ್ಯವಾಗಿ, ಆನಂದದಾಯಿಯಾಗಿ ಚಿತ್ರಿಸುವುದೇ ಇಲ್ಲಿಯ ಮುಖ್ಯ ಗುರಿಯಾಗಿದೆ. ಅದರಲ್ಲಿಯೂ ಪ್ರಕೃತಿಯ ಚೆಲುವನ್ನು ಕಂಡರಿಸುವುದರಲ್ಲಿ ಅವರು ಹೆಚ್ಚಿನ ಒಲವು ತೋರಿದ್ದಾರೆ.

ಇಲ್ಲಿಯ ಪ್ರಕೃತಿ ಚಿತ್ರಗಳಾದ 'ಶಾರದೆ', 'ಫಾಲ್ಗುಣ', 'ಬೇಸಿಗೆಯ ಇರುಳು'. 'ಮಲೆನಾಡಿನಲ್ಲಿ ಶರದ್ ರಾತ್ರಿ', 'ಮೋಡಿ', 'ಕಾರ್ತೀಕದ ಇರುಳು' ಈ ಮೊದಲಾದ ಕವಿತೆಗಳು ಓದಿದಾಕ್ಷಣಕ್ಕೆ ಮನಸ್ಸನ್ನು ಸೆರೆಹಿಡಿಯುವ ಸಾಮರ್ಥ್ಯವುಳ್ಳವಾಗಿವೆ. ಒಂದೊಂದು ಕವಿತೆಯಲ್ಲಿಯೂ ಕಂಡುಬರುವ ಪ್ರತಿಮಾ ವಿಧಾನ, ರೂಪಕಗುಣ, ಸಂಕೇತಗಳ ಸೃಷ್ಟಿ ಇವು ಗಮನಾರ್ಹವಾಗಿವೆ. ಪ್ರತಿಮಾವಿಧಾನದ ವೈಶಿಷ್ಟ್ಯಕ್ಕೆ ಸಂಕಲನದ ಪ್ರಥಮ ಕವಿತೆಯಾದ 'ಶಾರದೆ'ಯನ್ನೇ ನೋಡಬಹುದು. ಶರದೃತು ಈ ಕವಿತೆಯ ವಸ್ತು. ಅದು ಒಂದು ಸ್ತ್ರೀರೂಪದಲ್ಲಿ ಇಲ್ಲಿ ಮೂರ್ತಗೊಂಡಿದೆ. ಹಾಗೆ ಮೂರ್ತಗೊಂಡ ಶರದೃತು ಒಬ್ಬ ತರುಣಿಯಾಗಿ, ಗಂಡನ ಮನೆಗೆ ಹೋಗಿ, ಕೊನೆಗೆ ಒಬ್ಬ ಗಂಭೀರ ಗೃಹಿಣಿಯಾಗಿ ಶೋಭಿಸುತ್ತಾಳೆ. ಋತುಗಳಿಗೂ ತರುಣಿಯ ಈ ಜೀವನ ಕ್ರಮಕ್ಕೂ ಇರುವ ಸಂಬಂಧವನ್ನು ಸಾಂಗತ್ಯಗೊಳಿಸಿ ತೋರಿಸುವುದರಲ್ಲಿಯೇ ಕವಿತೆಯ ಕಲಾವಂತಿಕೆ ಇದೆ. ಉದಾಹರಣೆಗೆ ಅದರ ಕೆಲವು ಸಾಲುಗಳನ್ನಿಲ್ಲಿ ನೋಡಬೇಕು :

. . . . . . . .
ಚೈತ್ರಮಾಸದ ಹೂವುಗಳ ತೇರಿನಲಿ ಇವಳ ಮೆರವಣಿಗೆ !
ರಂಗು ರಂಗಿನ ಜರಿಯ ಪಟ್ಟೆಸೀರೆಯನುಟ್ಟ
ದಿಕ್ಕೆಲ್ಲವನು ದಂಗುಬಡಿಸುವ ಪ್ರಮದೆ !
. . . . . . . . .
...ಮುಗಿಲ ಹಂಡೆಯು ಮೊಗೆದು ಸಾಗಿತ್ತು ಇವಳ ಅಭ್ಯಂಜನ.
ಗುಡುಗು ಮಿಂಚಿನ ತೊಡವು ; ಕಡಲ ಕನ್ನಡಿಯಲ್ಲಿ
ತಿಲಕ ತಿದ್ದುವ ಬಯಕೆ.
. . . . . . . . .
ಮಾವು ಬೇವುಗಳ ತೇರೇರಿ ಗಂಡನ ಮನೆಗೆ ಬಂದಾಮೇಲೆ
ಮುಖಕ್ಕೆ ಸದಾ ಮಳೆಯ ನೂಲಿನ ಮುಸುಕು.
. . . . . . . . .
'ಶ್ರಾವಣಾ ಬಂತು ಶ್ರಾವಣಾ'
ಇವಳು ಉಸಿರಾಡಿದರೆ ಹಸಿರು ; ಮಾತಾಡಿದರೆ ಜುಳು ಜುಳು ;
ಹೆಜ್ಜೆ ಇಟ್ಟರೆ ಹೂವು ; ತುರುಬಿನ ತುಂಬ ಮಲ್ಲಿಗೆ ಮೋಜ !
ಅಂದೊಮ್ಮೆ ಕಾಳಿ ; ಆ ಅನಂತರ ಗೌರಿ ; ಈಗಿವಳು ಶಾರದೆ

ಹೀಗೆ ಇಡೀ ಕವಿತೆ ಒಂದು ಅಖಂಡ ಪ್ರತಿಮೆಯಾಗಿ ಕಣ್‌ಸೆಳೆಯುತ್ತದೆ. ಈ ಕವಿತೆಯ ರಚನಾಶಿಲ್ಪವನ್ನು ಕುರಿತು ಬರೆಯುತ್ತ ಕ. ವೆಂ. ರಾಜಗೋಪಾಲ ಅವರು "'ಶಾರದೆ' 'ಕಾಲ'ದ ವಿಚಾರದಿಂದ ಮೂಡಿಬಂದ ಒಂದು ಪೂರ್ಣರೂಪಕ. ಶರತ್‌ಕಾಲದ ಪ್ರತಿಮೆಯನ್ನು 'ಶಾರದೆ' ಕಲ್ಪನೆಯಲ್ಲಿ ಕಂಡು ಅದರ ವ್ಯಾಪಕತೆಯಲ್ಲಿ ಗೃಹಿಣಿಯ ವ್ಯಕ್ತಿತ್ವವೆನ್ನುವಂತೆ, ಸರಸ್ವತಿಯ ಕಲ್ಪನೆಯೆನ್ನುವಂತೆ ಅರ್ಥಸಾಧಿಸುವ ಪ್ರಯತ್ನದ ಜೊತೆಗೆ ವಸಂತದಿಂದ ಶರತ್‌ಕಾಲದವರೆಗೆ ಪ್ರಕೃತಿಯ ಲಕ್ಷಣಗಳನ್ನು ಗುರುತಿಸುವುದರ ಮೂಲಕ ಒಂದು ವರ್ಷವೆನ್ನುವುದು ಒಂದು ಜೀವಂತ ಸ್ತ್ರೀರೂಪದ ಪ್ರತಿಮೆಯಾಗುತ್ತದೆ"[1] ಎಂದಿದ್ದಾರೆ. ಅವರ ಈ ಹೇಳಿಕೆಯಲ್ಲಿ ಅತಿಶಯೋಕ್ತಿಯೆನಿಸುವಂತಹುದು ಏನೂ ಇಲ್ಲ. ವಿಶೇಷಣಗಳ ಮಾಲಿಕೆಯಾಗಿ ಬರುವ ಈ ಕವಿತೆಯ ಮುಕ್ತಾಯದ ಸಾಲುಗಳಲ್ಲಿ ಒಂದು ಎದ್ದು ಕಾಣುವ ವಿಶೇಷತೆಯಿರುವುದನ್ನು ಗಮನಿಸಬೇಕು :

**ಈಗಿವಳು ಶಾರದೆ, ಸದಾ ಶಾಂತೆ, ಶುಚಿಸ್ಮಿತೆ**
**ಗಂಭೀರೆ, ತೇಜೋನ್ವಿತೆ, ಕ್ರೌಂಚತಕ್ವಣಿತೆ**
**ನಮೋಸ್ತುತೇ**

ಇದು ಒಂದರ್ಥದಲ್ಲಿ ಶರತ್–ಶಾರದೆ, ಇನ್ನೊಂದರ್ಥದಲ್ಲಿ ಸರಸ್ವತಿ. ಕೊನೆಯ 'ನಮೋಸ್ತುತೇ' ಎಂಬುದು ಕವಿಯ ಪ್ರಕೃತಿಯಲ್ಲಿಯ ಶ್ರದ್ಧೆಯನ್ನೂ, ಸರಸ್ವತಿಯಲ್ಲಿಯ ಶ್ರದ್ಧೆಯನ್ನೂ ಒಟ್ಟಿಗೆ ಧ್ವನಿಸುತ್ತದೆ. ಇದನ್ನು ಗಮನಿಸಿದಾಗ ಡಾ|| ಪ್ರಭುಶಂಕರ ಅವರು "ಪ್ರಕೃತಿಯ ಬಗೆಗೆ ತೀವ್ರವಾದ ಶ್ರದ್ಧೆಯನ್ನೂ, ಆರಾಧನಾಭಾವವನ್ನೂ ತಳೆದಿರುವ ಕವಿ ಇವರು"[2] ಎಂದು ನುಡಿದಿದ್ದುದು ಯಥಾರ್ಥವಾದದ್ದು ಎನಿಸುತ್ತದೆ. ಪ್ರಸ್ತುತ ಕವಿತೆಯಿಂದ ವ್ಯಕ್ತವಾಗುವ ಕವಿಯ ಸುಸಂಸ್ಕೃತ ಮನಸ್ಸಿನ ರಸಿಕತೆ ಹಾಗೂ ಶ್ರದ್ಧಾಭಾವಗಳು ಕುವೆಂಪು ಅವರು 'ಕಲಾಸುಂದರಿ'ಯನ್ನು ಕುರಿತು ಆಡಿದ ಮಾತುಗಳನ್ನು ನೆನಪಿಸಿಕೊಳ್ಳುವಂತೆ ಮಾಡುತ್ತವೆ. ಕುವೆಂಪು ಅವರು "ಕಲಾಸುಂದರಿ ಸರಸಿಯಾದರೂ ತಪಸ್ವಿನಿ, ಆಕೆಯ ಬಹಿರಂಗದಲ್ಲಿ ತೇಜಸ್ಸಿರುವಂತೆ ಅಂತರಂಗದಲ್ಲಿ ತಪಸ್ಸಿದೆ.... ಆಕೆಯ ಅಗಾಧ ಪರಿಚಯವಿರುವ ರಸಋಷಿಗಳಿಗೆ ಸೌಂದರ್ಯದ ಜೊತೆಗೆ ಅದಕ್ಕಿಂತಲೂ ಶಾಶ್ವತವಾದ ಮತ್ತು ಅದನ್ನೇ ಶಾಶ್ವತಗೊಳಿಸುವ ಭವ್ಯ ಓಜಸ್ಸು ತೋರುತ್ತದೆ"[3] ಎಂದಿದ್ದಾರೆ. ಅತ್ಯಾಧುನಿಕರು ಈ ವಿಚಾರವನ್ನು ಒಪ್ಪಿಕೊಳ್ಳುತ್ತಾರೋ ಇಲ್ಲವೋ ಆ ಮಾತು ಬೇರೆ. ಆದರೆ ಶಿವರುದ್ರಪ್ಪನವರ 'ಶಾರದೆ'ಯಂಥ ಕವಿತೆಗಳನ್ನು ಆಸ್ವಾದಿಸುವಾಗ ಕುವೆಂಪು ಅವರ ಈ ನುಡಿ ಸತ್ಯವಾಗಿ ತೋರುತ್ತದೆ. ಆ ದೃಷ್ಟಿಯಿಂದ ಶಿವರುದ್ರಪ್ಪನವರ ಕವಿತ್ವಶಕ್ತಿ ರಸಋಷಿ ಸದೃಶವಾಗಿಯೇ ಕಾಣುತ್ತದೆ. ಈ ಮಾತಿಗೆ

---

1 ಕ. ವೆಂ. ರಾಜಗೋಪಾಲ : 'ಕಾವ್ಯರಚನಾಶಿಲ್ಪ'—'ಹೊಸಗನ್ನಡ ಕಾವ್ಯದ ಎರಡು ಮಾರ್ಗಗಳು.' ಪು. ೧೪೫-೪೬

2 ಡಾ|| ಪ್ರಭುಶಂಕರ : 'ಕನ್ನಡದಲ್ಲಿ ಭಾವಗೀತೆ', ಪು. ೩೧೦

3 ಕುವೆಂಪು : 'ಕಲಾಸುಂದರಿ', – ಮುನ್ನುಡಿ, ಪು iii

ಇನ್ನೂ ಹೆಚ್ಚಿನ ಸಮರ್ಥನೆ ನೀಡುವ 'ಮಾಘಜಿನ' ಎಂಬ ಕವಿತೆಯನ್ನು ನೋಡಬೇಕು.

ಈ 'ಮಾಘಜಿನ' ಒಂದು ಚಿಕ್ಕ ಕವಿತೆ. ಆದರೆ ಇಲ್ಲಿಯ ವರ್ಣನೆ ಭವ್ಯ (Sublime)ವಾದದ್ದು. ಕವಿತೆಯನ್ನು ಕನ್ನಡಿಯಲ್ಲಿ ಅಡಗಿಸಿಟ್ಟಂತಹ ಶಿಲ್ಪ ಕೌಶಲ ಇಲ್ಲಿಯದು. ಈ ಕವಿತೆಯ ವಸ್ತು ಮಾಘಮಾಸದ ಪ್ರಕೃತಿಯಾದರೂ ಜಿನಮೂರ್ತಿಯ ಪ್ರತಿಮಾ ಸಂವಿಧಾನದಿಂದ ಅತೀಂದ್ರಿಯ ಸ್ಪರ್ಶ ಪಡೆಯುತ್ತದೆ. ಮಾಘಮಾಸ ಮತ್ತು ಜಿನಮೂರ್ತಿ ಎರಡೂ ಅನ್ಯೋನ್ಯವಾಗಿ ಬೆಸೆದುಕೊಂಡು 'ಮಾಘಜಿನ' ಎಂಬ ಅಭೇದರೂಪಕವಾಗಿ ಕವಿತೆ ಕಂಗೊಳಿಸುತ್ತದೆ. ಕವಿತೆಯ ಪ್ರಾರಂಭದ ಚರಣಗಳಲ್ಲಿ ಮಾಘಮಾಸದ ಆರಂಭದ ಸ್ಥಿತಿ ಹಾಗೂ ಜೈನಯತಿಯ ಸಾಧನೆಯ ಆರಂಭದ ಹಂತ ಇವು ಹೇಗೆ ವ್ಯಕ್ತಗೊಂಡಿವೆ ಎಂಬುದನ್ನು ಮೊದಲು ನೋಡಬೇಕು:

ಮೊದಲು ಬುಡಸಹಿತ ಎಲ್ಲವನು ಕಿತ್ತೆಸೆದ
ಬಿತ್ತು ಕಾಲಡಿಯಲ್ಲಿ ತರಗೆಲೆಯ ಮೊತ್ತ
ಸುತ್ತು ಬೆಳೆಯಿತು ಮೌನಗಳ ಹುತ್ತ.

ಈ ಹಂತ ಮುಗಿದ ಮೇಲೆ ಸಾಧನೆಯ ಇನ್ನೊಂದು ಭಾಗವೂ ಕವಿತೆಯಲ್ಲಿ ವ್ಯಕ್ತವಾಗಿ, ನಂತರ ಸಿದ್ಧಿಯ ಚಿತ್ರಣ ಬರುತ್ತದೆ:

ತಲೆಯ ಮೇಲಿನ ಬಾನು ತಿಳಿಯಾಯ್ತು
ನಿರ್ಭಾವ ನಿಸ್ತರಂಗ ನೀಲಿಯ ಸಾಗರ
ಇರುಳ ನಭ ಹೆಡೆತೆರೆದ ರತ್ನಗಳ ನಾಗರ

ಈ ವರ್ಣನೆಯಲ್ಲಿ ಬೆಡಗಿನ ವಚನದ ಛಾಯೆಯಿದ್ದರೂ ಅತ್ಯಂತ ಸ್ವತಂತ್ರ ಹಾಗೂ ಅರ್ಥಪೂರ್ಣವಾಗಿವೆ. ಇದು ಕವಿಯ ಗಂಭೀರ ಆಲೋಚನೆಯ, ತಾತ್ವಿಕ ಚಿಂತನೆಯ ಫಲ. ಶಂಕರ ಮೊಕಾಶಿ ಪುಣೇಕರ ಅವರು ಕಣವಿಯವರ ನೈಸರ್ಗಿಕ ಕವಿತೆಗಳಲ್ಲಿಯ ಚಿಂತನಶೀಲ ವರ್ಣನೆಗಳನ್ನು ಕುರಿತು ಬರೆಯುವಾಗ ಅವರಲ್ಲಿ ನೈಸರ್ಗಿಕ ಅನುಭಾವ (natural mysticism) ಮಾರ್ಗ ಇರುವುದನ್ನು ಗುರುತಿಸುತ್ತಾರೆ. ಅವರ ವಿಚಾರದಂತೆ ನೈಸರ್ಗಿಕ ಅನುಭಾವವೊಂದು ಇರುವದಾದರೆ ಅದು ಶಿವರುದ್ರಪ್ಪನವರ ಇಂ ಕವಿತೆಗಳಲ್ಲಿಯೂ ಇರುವುದೆಂದು ಹೇಳಬೇಕು.

ಹೀಗೆ ನಿಸರ್ಗವರ್ಣನೆ ಒಂದು ಮಟ್ಟದಲ್ಲಿ ತಾತ್ತ್ವಿಕ ದೃಷ್ಟಿಯಿಂದ ಮೂಡಿದ್ದರೆ ಇನ್ನೊಂದು ಮಟ್ಟದಲ್ಲಿ ಲೌಕಿಕ ದೃಷ್ಟಿಯಿಂದ ಪ್ರಕಟಗೊಂಡಿದೆ. 'ಬೇಸಿಗೆಯ ಇರುಳು' 'ಬೇಸಿಗೆಯ ದಿನಚರಿಯಿಂದ' ಎಂಬಂತಹ ಕವಿತೆಗಳನ್ನು ಇಲ್ಲಿ ಉದಾಹರಣೆಗೆ ತೆಗೆದುಕೊಳ್ಳಬಹುದು.

ಜ್ವರ ಬಂದವರೊಲು ಪರಿತಪಿಸುತ್ತಿದೆ
ಸುತ್ತಲು ತರುಮರು ಸಂಸಾರ
ನಕ್ಷತ್ರಾಗ್ನಿಯ ಚಿತಿಯೊಳು ನಡೆದಿದೆ
ಗಾಳಿಯ ಶವ ಸಂಸ್ಕಾರ

ತಟಕ್ಕನೆ ಕಣ್ಣನ್ನು ಸೆಳೆಯುವ ಈ ಕಲ್ಪನೆ ಹೊಚ್ಚ ಹೊಸದು. ನಿಜವಾಗಿ ನೋಡಿದರೆ ನಕ್ಷತ್ರಗಳು ಯಾವ ಕಾಲದಲ್ಲಿಯೂ ಅಗ್ನಿ ಸದೃಶ ಪ್ರಖರತೆಯನ್ನಾಗಲಿ, ಶಾಖವನ್ನಾಗಲಿ ಲೋಕಕ್ಕೆ ಕೊಡಲಾರವು. ಆದರೆ ಈ ಸಂದರ್ಭದಲ್ಲಿ ಕವಿ ಕಲ್ಪನೆಯ ಇಂದ್ರಜಾಲಕ್ಕೆ ಸಿಕ್ಕು ಅವು ಅಂಥ ವಿಶಿಷ್ಟಗುಣವನ್ನು ಪಡೆದಿರುತ್ತವೆ: 'ಗಾಳಿಯ ಶವ ಸಂಸ್ಕಾರ' ವನ್ನು ಮಾಡುತ್ತವೆ. ಹೀಗೆ ಇಲ್ಲಿಯ ಪ್ರತಿಮೆ ಬೇಸಿಗೆ ಇರುಳಿನ ಉಷ್ಣತೆಯನ್ನು ಅದರ ತೀಕ್ಷ್ಣತೆಯನ್ನು ಸಾರ್ಥಕವಾಗಿ ಪ್ರತಿಬಿಂಬಿಸುತ್ತದೆ.

ಹಾಗೆಯೇ :

> ಬೆಂಕಿಯಂಗಾಲಿಟ್ಟು ಬಂದ ಬಿಸಿಲಿನ ಕಂದ
> ಹುಟ್ಟಿದೊಡನೆಯೆ ಸಿಡುಕು, ಕೋಪ ತಾಪ
> ಮನೆಯಂಗಳದ ಹೂವಿನ ಮೇಲೆ ಕೆಂಡವ ಸುರಿದ
> ಧಗೆಯ ಕುದುರೆಯನೇರಿ ಪಯಣ ಹೊರಟ

ಎಂಬಲ್ಲಿಯ ಹಗಲಿನ ಬಿಸಿಲಿನ ಚಿತ್ರವನ್ನು ನೋಡಬೇಕು. ಇಲ್ಲಿರುವ ಸಿಡುಕು, ಕೋಪ, ತಾಪ ಹಾಗೂ ಹೂವಿನ ಮೇಲೆ ಕೆಂಡವ ಸುರಿದ, ಧಗೆಯ ಕುದುರೆಯನೇರಿ ಪಯಣ ಹೊರಟ ಸನ್ನಿವೇಶವೆಲ್ಲ ಬೇಸಿಗೆಯ ತಾಪವನ್ನು ವ್ಯಕ್ತಿಯ ಗುಣ-ಕ್ರಿಯೆಗಳ ರೂಪದಲ್ಲಿ ಪ್ರತ್ಯಕ್ಷೀಕರಿಸುತ್ತದೆ. ಆದರೆ ಇಲ್ಲಿಯ 'ಕಂದ' ಎನ್ನುವ ಪದ ವಾತ್ಸಲ್ಯಭಾವವನ್ನು ಹೊತ್ತುಕೊಂಡು ಅದರ ಕಾವನ್ನು ಒಂದಿಷ್ಟು ಕಡಿಮೆಮಾಡುತ್ತದೆಂದು ಹೇಳಬಹುದು.

ಇದೇ ಕವಿತೆಯ ಮುಂದಕ್ಕೆ ಬಂದಾಗ ಅಳಿಲು, ಕಾಗೆ, ನೊಣ, ಹದ್ದುಗಳ ಕಿರುಚುವ, ಅರಚುವ, ಕಾಡಿ ಪೀಡಿಸುವ, ಗಿರ್ಕಿಹೊಡೆಯುವ ಕ್ರಿಯೆಗಳು ಸಾಂಕೇತಿಕ ರೂಪವನ್ನು ತಾಳಿ ಕವಿತೆಗೆ ಹೊಸ ಅರ್ಥವನ್ನು ತಂದುಕೊಡುತ್ತವೆ.

> ನೀರಿರದೆ ಗೊಕ್ಕೆಂದು ಬಿಕ್ಕುವನಲ್ಲಿ
> ರಣಬಿಸಿಲಲ್ಲಿ ಬೊಬ್ಬೆ ಹೊಡೆಯುವ ನಾಯಿ
> ಮನೆಯಂಗಳದ ಹಸುರಿನ ಕಡೆಗೆ ತುಡುಗು ದನಗಳ ಗೊರಸು
> ಸತ್ತ ಎಲೆಗಳನೆತ್ತಿ ಅಲೆವ ಗಾಳಿ

ಎಂಬ ವರ್ಣನೆಯಂತೂ ಸಮಕಾಲೀನ ಪ್ರಜ್ಞೆಯಿಂದ ಕೂಡಿದ್ದಾಗಿದ್ದು, ಜೀವನದ ಸಂಕೀರ್ಣಾನುಭವಗಳನ್ನು ಬೇರೆ ಬೇರೆ ಸಂಕೇತಗಳಲ್ಲಿ ಪ್ರಕಟಗೊಳಿಸುತ್ತದೆ. ಕವಿಯ ನವ್ಯ ಧೋರಣೆ ಇಂಥ ಸನ್ನಿವೇಶಗಳಲ್ಲಿ ಜಾಗ್ರತವಾಗಿ ಕಾರ್ಯಮಾಡಿದ್ದುದನ್ನು ಈ ಸಂಕಲನದ ಕೆಲವು ಕವಿತೆಗಳಲ್ಲಿ ಕಾಣಬಹುದು.

ಜೀವನದ ಎರಡು ಬೇರೆ ಬೇರೆ ಸ್ಥಿತಿಗತಿಗಳನ್ನು ಚಿತ್ರಿಸುವ ಕೆಲವು ಕವಿತೆಗಳೂ ಇಲ್ಲಿವೆ. 'ಮುಗಿದ ಕತೆ' 'ವ್ಯತ್ಯಾಸ' 'ನೀನಿದ್ದಾಗ-ನೀನಿರದಾಗ' 'ಕವಿ-ವೇದಾಂತಿ' ಈ ಕವಿತೆಗಳಲ್ಲಿ ಜೀವನದ ಎರಡು ಮುಖಗಳನ್ನು ಜೊತೆಜೊತೆಗಿರಿಸಿ ನೋಡುವ, ಅವುಗಳ ವೈದೃಶ್ಯ (contrast)ಗಳನ್ನು ಸೂಕ್ಷ್ಮವಾಗಿ ಅವಲೋಕಿಸುವ ಕಾರ್ಯ ನಡೆದಿದೆ. ಜೀವನದಲ್ಲಿ ಹಲವಾರು ವೈದೃಶ್ಯಗಳು ಇದ್ದೇ ಇರುತ್ತವೆ. ಅಂಥ ವೈದೃಶ್ಯಗಳನ್ನು

ಕಾವ್ಯಕ್ಕೆ ದುಡಿಸಿಕೊಳ್ಳುವ ಪ್ರಸಂಗ ಬಂದಾಗ, ಬದುಕಿನ ವಿವಿಧ ಮಗ್ಗುಲುಗಳಲ್ಲಿರುವ ವಿಭಿನ್ನ ಹಾಗೂ ಪರಸ್ಪರ ವಿರೋಧವಾದ ಅನುಭವಗಳನ್ನು ತೂಗಿನೋಡುವ, ಬೆಲೆಕಟ್ಟುವ ಕಾರ್ಯ ಸಹಜವಾಗಿಯೇ ನಡೆದುಹೋಗುತ್ತದೆ. ಇಂಥ ಕವಿತೆಗಳಲ್ಲಿ ವರ್ಣನೆಯ ಚಮತ್ಕಾರ, ಇಲ್ಲವೆ ರಮ್ಯತೆಗಿಂತ ಆಲೋಚನೆಯ ಗಾಂಭೀರ್ಯಕ್ಕೆ ಹೆಚ್ಚಿನ ಅವಕಾಶ ವಿರುತ್ತದೆ. ಶಿವರುದ್ರಪ್ಪನವರ ಈ ಬಗೆಯ ಕವಿತೆಗಳು ಹಾಗಿರುವುದನ್ನು ಕಾಣ ಬಹುದು.

ಈ ಸಂಕಲನದ ದೀರ್ಘ ಕವಿತೆಗಳಲ್ಲಿ 'ಜೋಕಾಲಿ ಆಡೋಣ ಬನ್ನಿರೋ' ಎಂಬುದು ಜಾನಪದ ಗೇಯಗುಣದಿಂದ, ಜೀವನದ ಅರ್ಥಪೂರ್ಣ ಅನುಭವದಿಂದ ಎದ್ದು ಕಾಣು ತ್ತದೆ. ಇಲ್ಲಿಯ ಭಾವ ಜೋಕಾಲಿಯಾಡಿದಂತೆ ಒಂದು ನುಡಿ (stanza)ಯಿಂದ ಇನ್ನೊಂದು ನುಡಿಗೆ ಜೀಕುತ್ತ ಹೋಗುತ್ತದೆ. ಅಲ್ಲಲ್ಲಿ ಕವಿಯ ಅನುಭವೋಕ್ತಿಗಳ ಮಿಂಚೂ ಹೊಳೆಯುತ್ತಿದೆ:

ಜನುಮದ ಸಾಲಕ್ಕೆ ಕೆಲಸದ ಕಂತು
ತಪ್ಪದೆ ಕಟ್ಟೋಣ ಅಂತೂ ಇಂತು
ಬೆಳಕೋ ಕತ್ತಲೊ ನಮಗೆ ಈ ಮಣ್ಣು
ತಾಯಿಯ ಸೆರಗೊಂದೆ ಶಾಶ್ವತವಣ್ಣ

ಇಂಥ ನುಡಿಮೌಕ್ತಿಕಗಳನ್ನು ನೋಡಬಹುದು. ಕವಿತೆ ಮುಕ್ತಾಯಕ್ಕೆ ಬಂದಂತೆ ಪ್ರಕೃತಿಯೊಂದಿಗೆ ತಾದಾತ್ಮ್ಯವನ್ನು ಪಡೆದು ಆಹ್ಲಾದವನ್ನು ಬೀರುತ್ತದೆ:

ಗಾಳಿಗೆ ಗದ್ದೆಯು ತಲೆದೂಗುವಂತೆ
ಕೆರೆಯಲ್ಲಿ ಹೊಸ ನೀರು ಭೋರಾಡಿದಂತೆ
ಮುಗಿಲಲ್ಲಿ ಪಾರಿವಾಳ ಹಾರಾಡಿದಂತೆ
ಆಡುವ ಜೋಲಿಗೆ ಏನೈತೊ ಚಿಂತೆ

ಇಲ್ಲಿಯ ಚರಣಗಳಿಗೆ ಭಾವಪರವಶತೆಯನ್ನುಂಟುಮಾಡುವ ಮೋಡಿಯಿರುವುದೂ ಒಂದು ಮಹತ್ವದ ಅಂಶವಾಗಿದೆ. ಭಾವಗೀತೆಯ ಉತ್ಕೃಷ್ಟ ಪರಿಣಾಮವೇ ಇದು. ಶಿವರುದ್ರಪ್ಪನವರು ಭಾವಗೀತದ ಸತ್ವವನ್ನು ಚೆನ್ನಾಗಿ ಉಳಿಸಿಕೊಂಡು ಬಂದಿದ್ದುದು ಈ ಸಂಕಲನದ ಇನ್ನೂ ಕೆಲವು ಕವಿತೆಗಳಲ್ಲಿ ನೋಡಲು ಸಿಗುತ್ತದೆ. 'ಚೆಲುವಿಗೆ' 'ದಕ್ಷಿಣೇಶ್ವರ ದಲ್ಲಿ' 'ಮೋಡಿ' 'ಕನಸಿನಿಂದ ಕನಸಿಗೆ' 'ಕವಿತೆಗೆ' ಈ ಮುಂತಾದವುಗಳು ಶುದ್ಧ ಭಾವ ಗೀತೆಗಳೇ ಆಗಿದ್ದು, ರಮ್ಯವಾದ ವರ್ಣನೆಗಳಿಂದ, ಆಕರ್ಷಕವಾದ ಪದಲಾಲಿತ್ಯದಿಂದ, ಶುಚಿಯಾದ ಭಾವನೋಲ್ಲಾಸದಿಂದ, ನವನವೀನವಾದ ಚಿತ್ರಕಶಕ್ತಿಯಿಂದ ಸಹೃದ ಯರ ಮನಸ್ಸನ್ನು ಸೂರೆಗೊಳ್ಳುತ್ತವೆ.

ಕೆಲವು ಕವಿತೆಗಳಲ್ಲಿ ಶಿವರುದ್ರಪ್ಪನವರು ಅಂತರ್ಮುಖಿಗಳಾಗಿ, ಸ್ವವಿಮರ್ಶಕರಾಗಿ ಕಂಡುಕೊಳ್ಳುತ್ತಾರೆ. ಇವು ತೀರ ವ್ಯಕ್ತಿನಿಷ್ಠವೆನಿಸಿದರೂ ಸರ್ವಸಾಮಾನ್ಯವಾದ ಜೀವನ ಮೌಲ್ಯಗಳನ್ನು ಒಳಗೊಂಡಿವೆ.

ಕ್ಷಣಕ್ಷಣಕೂ ನನ್ನ ಹಮ್ಮನರೆಯುವ
ಲೋಕತಂತ್ರಗಳೆ ನಮೋ ನಮೋ
ನನ್ನಲ್ಪತೆಯನು ತೋರುತ ಮೆರೆಯುವ
ಬೆಳೆವ ತೇಜಗಳೆ ನಮೋ ನಮೋ

ಎಂಬಲ್ಲಿ ಒಂದು ರೀತಿಯ ಅಂತರಂಗ ನಿರೀಕ್ಷಣೆ ನಡೆದಿದ್ದುದು ಕಂಡುಬರುತ್ತದೆ.

ಶಕ್ತಿಯ ಕೊಡು, ಶಕ್ತಿಯ ಕೊಡು
ಶಕ್ತಿಯ ಕೊಡು ಹೇ ಪ್ರಭೂ
ಸತ್ಯಕಾಗಿ ನಿಲುವ ಛಲವ
ದೀಪ್ತಗೊಳಿಸು ನನ್ನೊಳು
ಎಡರ ಕಡಲ ತೆರೆಹೆಡೆಗಳು
ಭೋರ್ಗರೆಯುತ ಬಂದರೂ
ತಡೆದು ನಿಲುವ ಮಳಲ ತಡಿಯ
ಬಲವ ನೀಡು ಹೇ ಗುರೂ

ಎಂಬಂತಹ ಪ್ರಾರ್ಥನಾಗೀತಗಳು ಸ್ವಶಕ್ತಿಯನ್ನು ಬೆಳೆಸಿಕೊಳ್ಳುವ ಬಯಕೆಯನ್ನು ಸೂಚಿಸುತ್ತವೆ. ಇಂಥ ಕವಿತೆಗಳು ಕವಿಯ ಆದರ್ಶವನ್ನು ಪ್ರತಿಬಿಂಬಿಸುತ್ತಿದ್ದರೂ ಕಾವ್ಯಾಂಶಕ್ಕೆ ಧಕ್ಕೆಯುಂಟುಮಾಡುವುದಿಲ್ಲ. ಇಲ್ಲಿಯೂ ವ್ಯಂಜಕ ಸಾಮಗ್ರಿ ಬೇಕಾದಷ್ಟಿರುವುದನ್ನು ಗುರುತಿಸಬಹುದು.

ವಸ್ತುವೈವಿಧ್ಯವನ್ನು ಹೆಚ್ಚಿಸುವ 'ಕೊಳಲು' 'ಗಾರುಡಿ' 'ಸುಖವಿಲ್ಲದ ಕಲ್ಪನೆ' 'ಬಸ್ಸಿನಲ್ಲಿ' ಎಂಬಂತಹ ಕವಿತೆಗಳೂ ಈ ಸಂಕಲನದಲ್ಲಿ ಇವೆ. ಇಲ್ಲಿಯ ಶಬ್ದಚಿತ್ರ ಮತ್ತು ಕಲ್ಪನಾವಿಲಾಸಗಳು ಮನಂಬುಗುವಂಥವಾಗಿವೆ. 'ಪುರುಷಸೂಕ್ತ' ಸ್ವತಂತ್ರ ಭಾರತದ ಯೋಜನೆಗಳನ್ನು, ಅದರ ಸ್ಫೂರ್ತಿ-ಕೀರ್ತಿಗಳ ಇಂಗಿತವನ್ನು ರಾಷ್ಟ್ರಗೌರವ ದಿಂದ ಬಣ್ಣಿಸುವ ಒಂದು ವಿಶಿಷ್ಟ ಮಾದರಿಯ ಕವಿತೆಯಾಗಿದೆ. ಹಾಗೆಯೇ 'ಶಾಕುಂತಲದ ಐದನೆಯ ಅಂಕ' ಇನ್ನೊಂದು ಬಗೆಯ ವೈಶಿಷ್ಟ್ಯದಿಂದ ಹೊಳೆಯುತ್ತದೆ. ಶಾಕುಂತಲೆಯ ಜೀವನದ ಒಂದು ಸನ್ನಿವೇಶ ಇಲ್ಲಿ ಕಣ್ಣಿಗೆ ಕಟ್ಟುವಂತೆ ಚಿತ್ರಿತ ವಾಗಿದೆ. ಈ ಹಿಂದೆ 'ದೀಪದ ಹೆಜ್ಜೆ'ಯಲ್ಲಿ 'ಅಮೃತ ಮುಹೂರ್ತ' ಎಂಬಲ್ಲಿ ಅಕ್ಕ ಮಹಾದೇವಿಯ ಪಾತ್ರವನ್ನೂ, 'ಕಂಡದ್ದು ಮೂರು ಸಲ' ಎಂಬಲ್ಲಿ ಗಾಂಧೀಜಿ ಜೀವ ನದ ಮೂರು ದೃಶ್ಯಗಳನ್ನೂ ಕಂಡವರಿಗೆ ಈ 'ಶಾಕುಂತಲದ ಐದನೆಯ ಅಂಕ' ಅದೇ ಮಾದರಿಯಲ್ಲಿಯೇ ರಚಿತವಾದ ಇನ್ನೊಂದು ಸಾರ್ಥಕ ಕವಿತೆಯಾಗಿ ಕಾಣುತ್ತದೆ. ಇಂಥ ದೃಶ್ಯಗಳು ನವ್ಯ ಕವಿತೆಯ ವಸ್ತುವಾಗಿ, ನೂತನ ಸಂಕೇತ-ಪ್ರತಿಮೆಗಳಿಂದ ಅಭಿವ್ಯಕ್ತಗೊಂಡಿದ್ದುದು ವಿರಳ. ಪೌರಾಣಿಕ ಕಥೆ (Myth)ಗಳನ್ನು ಆಧುನಿಕ ಜೀವನ ಚಿತ್ರಣಕ್ಕೆ ಪೋಷಕವಾಗುವಂತೆ ಪ್ರತಿಮೆಗಳ ರೂಪದಲ್ಲಿ ಬಳಸಿಕೊಳ್ಳುವುದಾಗಲಿ, ಇಲ್ಲವೆ ವಿಡಂಬಿಸಲಿಕ್ಕೆ ಉಪಯೋಗಿಸುವುದಾಗಲಿ ಸಾಮಾನ್ಯವಾಗಿ ನವ್ಯ ಕಾವ್ಯದಲ್ಲಿ ನಡೆಯು

ತ್ತದೆ. ಆದರೆ ಹಿಂದಿನ ಕಥೆ, ಸನ್ನಿವೇಶಗಳನ್ನು ಹಾಗೂ ವ್ಯಕ್ತಿ ಚಿತ್ರಗಳನ್ನು ಅವುಗಳ ಮೂಲಸ್ವರೂಪಕ್ಕೆ ಹೊಸ ಕಾಂತಿಬರುವಂತೆ ಚಿತ್ರಿಸುವ ಕಾರ್ಯ ಅಷ್ಟಾಗಿ ಇಲ್ಲಿ ನಡೆದಿಲ್ಲ. ಆ ದೃಷ್ಟಿಯಿಂದ ಶಿವರುದ್ರಪ್ಪನವರ ಈ ಬಗೆಯ ಕವಿತೆಗಳು ನವ್ಯ ಕಾವ್ಯದ ವಿಶೇಷತೆಯನ್ನು ಹೆಚ್ಚಿಸುವಂಥ ರಚನೆಗಳೆಂದು ಹೇಳಬಹುದು.

ಒಟ್ಟಂದದಲ್ಲಿ 'ಕಾರ್ತಿಕ' ಕವನ ಸಂಕಲನವು ಕವಿಯ ಒಂದು ನಿರ್ದಿಷ್ಟ ಧೋರಣೆಗೆ ಒಳಗಾಗಿದ್ದರೂ ವಸ್ತುವೈವಿಧ್ಯದಿಂದ ಕೂಡಿದೆ. ನವೋದಯ, ನವ್ಯ ಕವಿತೆಗಳ ಸಂಗಮವಾಗಿರುವ ಈ ಕೃತಿ ಹೊಸಗನ್ನಡ ಕಾವ್ಯದ ಬೆಳವಣಿಗೆಯಲ್ಲಿ ಒಂದು ಮಹತ್ವದ ಹೆಜ್ಜೆಯಾಗಿದೆ ಎಂದು ಹೇಳಬಹುದು. ಅಲ್ಲದೆ ಚೆಲುವಿನ ನಾನಾ ಮುಖಗಳನ್ನೂ, ಅದರ ಹಲವು ವಿನ್ಯಾಸಗಳನ್ನೂ ಚಿತ್ರಿಸುವ ಈ ಸಂಕಲನ ಆ ಒಂದು ದೃಷ್ಟಿಯಿಂದಲೂ ಅಭ್ಯಸನೀಯವೂ ಆಗಿ ತೋರುತ್ತದೆ.

ನೂರು ವರ್ಣದ ನೂರು ರಾಗದ ಮಧುರ ಛಂದೋಬಂಧವೆ
ಹಗಲು ಇರುಳೂ ನೆಳಲು ಬೆಳಕಿನ ಅಲೆಯನಾಡಿಪ ಸಿಂಧುವೇ
ನಿತ್ಯಯಾತ್ರೆಗೆ ಸಂದು ಲೋಕವ ನವ್ಯವಾಗಿಪ ಬಂಧುವೇ
ಎಷ್ಟು ಸವಿದರು ಇದುವೆ ಮೊದಲಂತೆನ್ನಿಸುವ ಆನಂದವೇ

ಎಂಬಂತೆ ಈ ಸಂಕಲನದ ಕವಿತೆಗಳಲ್ಲಿ ಛಂದ, ಬಂಧ, ಆನಂದಗಳಿರುವುದನ್ನು ಕಾವ್ಯಾಭ್ಯಾಸಿಗಳು ಗುರುತಿಸದೇ ಇರುವುದು ಸಾಧ್ಯವಿಲ್ಲ.

ಆರ್. ಜಿ. ಕುಲಕರ್ಣಿ

# ತೀರ್ಥವಾಣಿ

ಗೊತ್ತಿದ್ದ ಹೆಸರು, ರೂಪ, ಕ್ರಿಯೆಗಳನ್ನು ಸಾಂಕೇತಿಕ ವಾಹನವಮಾಡಿಕೊಂಡು. ತಿಳಿವಿನ ಕ್ಷೇತ್ರವನ್ನು ವಿಸ್ತಾರವಮಾಡಿಕೊಳ್ಳುವದು ನಮ್ಮ ಸಾಂಪ್ರದಾಯಿಕರ ಬದುಕಿನ ರೀತಿಯಾಗಿತ್ತು. ಈ ಸಾಧನೆಯಲ್ಲಿ ಸಿದ್ಧಿ ಹೆಚ್ಚಾದಷ್ಟೂ ಕ್ರಿಯೆ "ಯಜ್ಞ"ವಾಗಿ, ರೂಪ "ಧ್ಯಾನಮೂರ್ತಿ"ಯಾಗಿ, ಹೆಸರು "ನಾಮ-ಮಂತ್ರ"ವಾಗಿ ಮಾರ್ಪಾಟು ಹೊಂದಿದವು. ಈ ಮೂರು ಸಾಧನೆಗಳೂ ಅಖಂಡವಾಗಿರಲೇಬೇಕಾದರೂ ಒಂದೊಂದೇ ಸಾಧನೆ ಅತ್ಯಂತ ವಿಸ್ತಾರ ಪಡೆದಾಗ ಅವು ಬಿಡಿಬಿಡಿಯಾಗಿ ತಮ್ಮ ಸಾಮ್ರಾಜ್ಯಗಳನ್ನೇ ಸ್ಥಾಪಿಸಿಬಿಟ್ಟವೆ. ಹೀಗಾಗಿ ಈಗ ನಮ್ಮೆದುರು (೧) ನಾಮೋಪಾಸನೆ (೨) ಧ್ಯಾನೋಪಾಸನೆ (೩) ನಿಷ್ಕಾಮಕರ್ಮಯೋಗ ಅಥವಾ ಪ್ರಾಚೀನ ವೈದಿಕರ ಯಜ್ಞಯಾಗಗಳೆಂಬ ಸಾಧನೆಗಳು ಭಿನ್ನ "ಮತಧರ್ಮ" "ಪಂಥ ಪಂಗಡ"ಗಳೆಂಬಂತೆ ಕಾಣುತ್ತವೆ.

ಇದರಲ್ಲಿ ಇನ್ನೊಂದು ಚಮತ್ಕಾರವೆಂದರೆ ನಿಷ್ಕಾಮ ಕರ್ಮಯೋಗವನ್ನು "ಸಮರ್ಪಣ ಭಾವ"ವನ್ನಾಗಿ ಪರಿವರ್ತಿಸಿ ಧ್ಯಾನ, ಕರ್ಮಮಾರ್ಗಗಳನ್ನು ನಾಮೋಪಾಸನೆಯಲ್ಲಿಯೇ ಅಡಗಿಸಿ ಭಕ್ತಿಪಂಥವು ಬೃಹತ್ತಾಗಿ ತಲೆ ಎತ್ತಿತು. ಈ ದೃಷ್ಟಿಯಿಂದ ಶ್ರೀ ಜಿ. ಎಸ್. ಶಿವರುದ್ರಪ್ಪನವರು ಅನುವಾದಿಸಿದ ಶ್ರೀರಾಮಕೃಷ್ಣ ವಚನ ವೇದದಲ್ಲಿಯ ಗೀತೆಗಳನ್ನು—ಅವು ಕನ್ನಡದಲ್ಲಿ "ತೀರ್ಥವಾಣಿ"ಯಾಗಿ ಮೈದಾಳಿದ ಸಂದರ್ಭವನ್ನು ವಿವೇಚಿಸಬೇಕಾಗಿದೆ. ಶರಣರ ವಚನಗಳನ್ನು ದಾಸರ ಕೀರ್ತನೆಗಳನ್ನು ಕೇವಲ ಸಾಹಿತ್ಯ ಪ್ರತಿಮೆಗಳ ದೃಷ್ಟಿಯಿಂದ ವಿವೇಚಿಸಿ ನಮಗೆ ನಾವೇ ಅನ್ಯಾಯ ಮಾಡಿಕೊಂಡಿದ್ದೇವೆ. ಅವುಗಳಲ್ಲಡಗಿದ ಸ್ವಾರಸ್ಯವನ್ನು—ಮೌಲಿಕ ಸ್ವಾರಸ್ಯವನ್ನು ನಮಗೆ ನಾವೇ ನಿರಾಕರಿಸಿಕೊಂಡಿದ್ದೇವೆ. ಸಾಹಿತ್ಯರಾಶಿಯಲ್ಲೆಲ್ಲ "ಈಡಿಪಸ್ ಕಾಂಪ್ಲೆಕ್ಸ್" (ತಾಯ್ಗಂಡತನ) ಹುಡುಕುವ ನಾವು **ತೀರ್ಥವಾಣಿ**ಯಂಥ ನಾಮಸಂಕೀರ್ತನಗಳಲ್ಲಿ **ಯಶೋವತನ** (ಕಾಂಪ್ಲೆಕ್ಸ್) ಉಂಟು ಎಂದು ಹುಡುಕುವುದೂ ಅಗತ್ಯವಿದೆ. ಈ ದಿಸೆಯಲ್ಲಿ ಕನ್ನಡ ವಿಮರ್ಶರಂಗದೊಳಗೆ ಶ್ರೀ ರಾನಡೆ ಹಾಗೂ ಶ್ರೀ ಬೇಂದ್ರೆಯವರು ಖಚಿತವಾದ ಮಾರ್ಗದರ್ಶನ ನೀಡಿದ್ದಾರೆ. ಶ್ರೀ ಜಗನ್ನಾಥದಾಸರ ಹರಿಕಥಾಮೃತಸಾರದಲ್ಲಿ "ನಾಮೋಪಾಸನೆ"ಯ ವಿಜ್ಞಾನ ದೊರಕುತ್ತದೆ. ಛಾಂದೋಗ್ಯ ಉಪನಿಷತ್ತಿನಲ್ಲಿ ಬರುವ ಸನತ್ಕುಮಾರ ಹಾಗೂ ನಾರದರ ಸಂವಾದದಲ್ಲಿ ನಾಮದ

ಅಂತರಾರ್ಥ, ಮನೋವೈಜ್ಞಾನಿಕ ತಿಳಿವಳಿಕೆ ದೊರಕುತ್ತದೆ. ಇದರ ಪರಿಣಾಮವಾದ "ಭೂಮ" ತತ್ತ್ವದ ನೆಲೆಬೆಲೆ ತಿಳಿಯಬೇಕಾದರೆ ಶ್ರೀ ಮಧ್ವಾಚಾರ್ಯರ ಛಾಂದೋಗ್ಯ ಭಾಷ್ಯ ಗಮನಿಸಬೇಕಾಗುತ್ತದೆ.

ಇದಾವುದೂ ಬೇಡವಾದರೆ ಇಂದಿನ ನವ್ಯದ ಸಂದರ್ಭದಲ್ಲಿ ತೀರ್ಥವಾಣಿಯಂತಹ ಗೀತಸಂಕಲನಗಳು ಹುಸಿ ಸಂಸ್ಕೃತಿಯ ವಾಣಿ ಎಂದು ಪಕ್ಕಕ್ಕೆ ಎತ್ತಿಡಬೇಕಾಗುತ್ತದೆ. ಆದರೆ ತೀರ್ಥವಾಣಿಯ ಗೀತಗಳು ಇಂದಿನ—ಎಂದಿನ ಸಂದರ್ಭಗಳಲ್ಲಿಯೂ ಸುಖ ಸಂಸ್ಪರ್ಶ ನೀಡಬಲ್ಲ ಸಾಮರ್ಥ್ಯಪಡೆದಿವೆ. ಶ್ರೀ ಜಿ.ಎಸ್.ಎಸ್. ಅವರೇ ಈ ಸಂಕಲನದ ಮುನ್ನುಡಿಯಲ್ಲಿ ಹೇಳಿದ ಮಾತುಗಳು ಈ ಗೀತೆಗಳ ಗಟ್ಟಿತನಕ್ಕೆ ಸಾಕ್ಷಿಯಾಗಿವೆ.

"ಏಳು ವರ್ಷಗಳ ಹಿಂದೆ ಮೈಸೂರಿನ ಶ್ರೀರಾಮಕೃಷ್ಣಾಶ್ರಮದವರು ವಂಗಭಾಷೆ ಯಲ್ಲಿ ಮಾಸ್ಟರ್ ಮಹಾಶಯನಿಂದ ರಚಿತವಾಗಿರುವ "ಶ್ರೀ ರಾಮಕೃಷ್ಣ ಕಥಾಮೃತ" ವನ್ನು 'ಶ್ರೀರಾಮಕೃಷ್ಣವಚನವೇದ'ವೆಂಬ ಹೆಸರಿನಿಂದ ಕನ್ನಡಕ್ಕೆ ಅನುವಾದಿಸುವ ಏರ್ಪಾಡು ಮಾಡಿದಾಗ, ಆಶ್ರಮದವರು ಅದರಲ್ಲಿ ಬರುವ ಬಂಗಾಳೀ ಗೀತಗಳನ್ನು ಕನ್ನಡಕ್ಕೆ ಅನುವಾದಮಾಡಬೇಕೆಂದು ನನ್ನನ್ನು ಕೃಪೆಯಿಟ್ಟು ನಿಯೋಜಿಸಿದರು.... ಅನುವಾದಸಮಯದಲ್ಲಿ ಈ ಗೀತೆಗಳ ಅಪೂರ್ವ ಭಾವನೆಯ ಪರಿಭಾವನೆಯಲ್ಲಿ ನಿಂತು ಒಂದು ಬಗೆಯ ನಲವನ್ನೂ, ಪಾವಿತ್ರ್ಯದ ಕಿಂಚಿತ್ ಸ್ಪರ್ಶವನ್ನೂ ತಾತ್ಕಾಲಿಕವಾ ದರೂ ಪಡೆದು, ಅವ್ಯಾಜವಾಗಿ ಬಳಿಗೆ ಬಂದ ಶ್ರೀಗುರು ಕೃಪೆಯ ವಾತ್ಸಲ್ಯಭಾವಕ್ಕೆ ಬೆರಗಾಗಿದ್ದೇನೆ".

ಈ ಮಾತುಗಳನ್ನು ಜಿ.ಎಸ್.ಎಸ್. ಬರೆದದ್ದು ೧೯೬೦ರಲ್ಲಿ. ಇಂದಿಗೂ ಈ ಗೀತೆ ಗಳನ್ನು ಹಾಡಿದಾಗ, ಕೇಳಿದಾಗ ಒಂದು ಬಗೆಯ ನಲವು, ಪಾವಿತ್ರ್ಯದ ಸಂಸ್ಪರ್ಶ,ಬೆರಗಿನ ಭಾವ ನಮಗೂ—ನವ್ಯ ಸಂದರ್ಭದಲ್ಲಿರುವವರಿಗೂ—ಆಗಬಾರದೆಂದೇನೂ ಇಲ್ಲ. ಅನುವಾದಕರು ಇಲ್ಲಿಯ ಗೀತೆಗಳ ಆಯ್ಕೆಯಲ್ಲಿ ಸಾಹಿತ್ಯದ ದೃಷ್ಟಿಯಿಂದ ವಿನೂತನವೂ ಅಪೂರ್ವವೂ ಆದ ಗುಣಗಳಿರುವದನ್ನು ಲಕ್ಷ್ಯದಲ್ಲಿಟ್ಟಿರುವದಾಗಿ ಹೇಳಿ ಇವುಗಳ ಸಾಹಿತ್ಯಿಕ ಉಪಯುಕ್ತತೆಯನ್ನು ಸಮರ್ಥಿಸಿಕೊಂಡಿದ್ದಾರೆ. ಕಾವ್ಯದ ಜೊತೆಗೆ ಕಾದಂಬರಿ ಇದ್ದಂತೆ ಗೀತೆಗಳ ಜೊತೆಗೆ ಗದ್ಯಲಯವುಳ್ಳ ನವ್ಯ ಕವಿತೆಗಳೂ ಇರಬಹುದು. ಕಾಫಿ ರುಚಿ ಬೇಕಾದವರು ಬರಿ ಕಾಫಿಪುಡಿ ಮುಕ್ಕಿದರಾಗಬಹುದೆ ? ಸಕ್ಕರೆ ಬೇಕಾದವರು ಸಕ್ಕರೆ ತಿನ್ನಿ ಎಂದರೆ ಕಾಫಿಯ ರಾಸಾಯನಿಕ ಸ್ವಾರಸ್ಯ ಹೇಗೆ ಬಂದೀತು? ಕಾಫಿ ಎಂದರೆ ನೀರು, ಸಕ್ಕರೆ, ಕಾಫಿಪುಡಿ ಮೂರೂ ಪ್ರಮಾಣಬದ್ಧವಾಗಿ ಸೇರಿ ರಾಸಾಯನಿಕ ಕ್ರಿಯೆಯಾಗಬೇಕಾಗುತ್ತದೆ. ಹಾಗೆಯೇ ಗೀತೆಗಳೂ ಸಾಹಿತ್ಯದ ಪ್ರತಿಮ, ಅರ್ಥಭಾವಧ್ವನಿಗಳ ಜೊತೆಗೆ ಸಂಗೀತದ ರಾಸಾಯನಿಕ ಕ್ರಿಯೆಯಿಂದ ಅರ್ಥಧ್ವನಿಯ, ಭಾವಧ್ವನಿಯ ಹೆಚ್ಚಿನ ತರಂಗಗಳನ್ನೆಳಸುತ್ತದೆ. ಟಿ. ಎಸ್. ಈಲಿಯಟ್, ಕಾವ್ಯದಲ್ಲಿ ಕವಿಗೆ ಕ್ಯಾಟಲಿಟಿಕ್ ಏಜೆಂಟ್ (ರಾಸಾಯನಿಕ ಕ್ರಿಯಾವರ್ಧನ) ಸ್ಥಾನ ನೀಡಿದಂತೆ ಕಾವ್ಯದಲ್ಲಿ ಸಂಗೀತಕ್ಕೂ ಸ್ಥಾನ ನೀಡಬೇಕಾಗುತ್ತದೆ.

ಈ ದೃಷ್ಟಿಯಿಂದ ತೀರ್ಥವಾಣಿಯಲ್ಲಿ ಬರುವ ಭಕ್ತಿಗೀತಗಳೆಲ್ಲ ಧ್ವನಿಯ ಮನೋಹರತೆಯಿಂದ ಕನ್ನಡದ ಕಾವ್ಯ ಸಂಪತ್ತನ್ನು ಹೆಚ್ಚು ಆಕರ್ಷಕಗೊಳಿಸಿವೆ. "ಹೌದೇನೆ ಉಮಾ" ಎಂಬ ಪ್ರಥಮ ಗೀತವು ಬೆಂಗಳೂರಿನ ಬಾನುಲಿಯಿಂದ ಪುನಃ ಪುನಃ ಪ್ರಸಾರವಾಗುತ್ತಿದ್ದು ಕೇಳುವಾಗಲೆಲ್ಲ ಅಂತಃಕರಣ ಮಿಡಿಯುತ್ತದೆ. ಉಮೆಯ ತಾಯಿ ಶಿವನ ವಿಷಯದಲ್ಲಿ ಕೇಳಿದ ನಾನಾ ಕತೆಗಳು ನಿಜವೆ? ಎಂದು ಮಗಳಿಗೆ ಕೇಳುತ್ತಿದ್ದಾಳೆ. ಮಸಣದ ಬೂದಿ ಮೈಗೆಲ್ಲ ಬಳಿದುಕೊಂಡು ಎಲ್ಲೆಲ್ಲೊ ತಿರುಗುವ ಈ ತಿರುಕ ಅಳಿಯನ ಜೊತೆಗೆ ಸೇರಿಕೊಂಡು ತನ್ನ ಮಗಳೂ ಬಂಗಾರದಂಥ ಮೈಗೆ ಬೂದಿಯನ್ನೇ ಬಳಿದುಕೊಳ್ಳುತ್ತಾಳಂತೆ! ತಾಯಿಯಾದ ತಪ್ಪಿಗೆ ಈ ಅವಮಾನ ಸಹಿಸಬೇಕೆ? ಆದ್ದರಿಂದ ಇನ್ನೊಮ್ಮೆ ಶಿವನು ಉಮೆಯನ್ನು ಕರೆಯಲು ಬಂದರೆ

"ಮನೆಯೊಳಿಲ್ಲ ಉಮೆ ಎನ್ನುವೆನು" ಎಂದು ಆ ತಾಯಿ ಹೇಳುತ್ತಿದ್ದಾಳೆ.

ಇಂಥ ಗೀತೆಗಳಲ್ಲಿ ಮಾನವೀಯ ಭಾವಗಳನ್ನು ದೈವೀಪಾತ್ರಗಳಲ್ಲಿ ಆರೋಪಿಸಿ ಆ ರೂಪಗಳ ಆ ಪಾತ್ರಗಳ ಚಿಂತನ ಮಾಡುವದು ಒಂದು ಬಗೆ. ಅಮೂರ್ತ ತತ್ತ್ವಗಳು ಮಾನವೀಯವಾಗುವದು ಇಂಥ ಕಲ್ಪನಾವಿಲಾಸಗಳಿಂದ. ಇವು ದೇವರ ದಿವ್ಯತ್ವ ಕಡಿಮೆ ಮಾಡುವದಿಲ್ಲ. ರಸಮಯಗೊಳಿಸುತ್ತವೆ. ನಿಜವಾಗಿ ಶಿವನು ಮೂಲತಃ ಪರಬ್ರಹ್ಮಸ್ವರೂಪನಾಗಿರಬಹುದು. ಆದರೆ "ಮಹಾಯೋಗಿ" ಎಂದು ಆತನನ್ನು ಸಂಬೋಧಿಸುವಾಗ "**ಸ್ಥಿರಸ್ಮರಣೆ ಹಾಗೂ ರೂಪಚಿಂತನ**" ಅಭಿಮಾನಿಯಾಗಿ ಮಹಾದೇವರು ಅನುಗ್ರಹಿಸುತ್ತಾರೆ. ಅದರಂತೆ ಪಾರ್ವತಿ "ಪರಮಶಕ್ತಿ"ಯಾಗಿದ್ದರೂ "ಬುದ್ಧಿ ಹಾಗೂ ಸ್ಥಿರಪ್ರತಿಭೆ—ಆಕಾಶ"ಗಳ ಅಭಿಮಾನಿಯಾಗಿರುತ್ತಾಳೆ. ಕನಕದಾಸರು ಸರಸ್ವತಿಯ ಸ್ತುತಿಮಾಡುವಾಗ "ಉಮಾಮಹೇಶ್ವರಿ" ಎಂದು ಸಂಬೋಧಿಸುವುದರ ಮರ್ಮ ಇದು.

ಆದರೆ ಎಲ್ಲ ಭಕ್ತ ಕವಿಗಳೂ ಸಂತರೂ ಪ್ರತಿಸಲ ಈ ಎಲ್ಲ ಅರ್ಥ ಅಡಗಿಸಿ ಗೀತ ರಚನೆ ಮಾಡುವದಿಲ್ಲ. ಒಂದು ಸಿದ್ಧವಾದ ಪ್ರತಿಮೆ, ಕತೆ, ಭಾವಭಿತ್ತಿಗಳನ್ನು ಬಳಸಿಕೊಂಡು ತಮ್ಮ ವೈಯಕ್ತಿಕವಾದ ಕಲ್ಪನೆಗಳನ್ನು ಭಾವಗಳನ್ನು—ತಮ್ಮ ಪಾಲಿನ ಪರಮೈಕಸ್ವರೂಪವನ್ನು ನೆನೆದು ಗೀತಗಳನ್ನು ಆರಳಿಸುತ್ತಾರೆ.

ಉದಾಹರಣೆಗೆ "ನಮೋ ಗೌರಿ" ಎಂಬ ಹಾಡಿನಲ್ಲಿ ಗೌರಿಯನ್ನು "ಕೋದಂಡಪಾಣಿಯಾದ ಶ್ರೀರಾಮ ರೂಪಿಣೀ" ಎಂದು ಒಬ್ಬ ಸಂತರು ಹಾಡಿಕೊಂಡಿದ್ದಾರೆ. ಇದರಲ್ಲಿ ಗೌರಿ ಸರ್ವದೇವತಾಸ್ವರೂಪಿಣಿಯಾಗಿದ್ದಾಳೆ. ಇದು ನಮ್ಮ ದೇವತೆ ಹೆಚ್ಚು, ನಿಮ್ಮ ದೇವತೆ ಹೆಚ್ಚು ಎಂಬ ಬಡಿದಾಟದ ಭಾವನೆಯ ಫಲವಲ್ಲ. ಪ್ರತಿ ವ್ಯಕ್ತಿಯಲ್ಲಿಯೂ ಸರ್ವದೇವತಾಸ್ವರೂಪನು ಇರಬಹುದಾದರೆ "ಗೌರಿಯಲ್ಲಿ" ಆತನೇಕೆ ಇರಬಾರದು? ಈ ದೃಷ್ಟಿಯಿಂದಲೇ ವೈದಿಕ ದೇವತೆಗಳಲ್ಲಿ ಪ್ರತಿಯೊಬ್ಬರೂ ಪರಬ್ರಹ್ಮಸ್ವರೂಪರೇ ಆಗಿದ್ದಾರೆ.

ಹಾಗಾದರೆ ಹೆಚ್ಚುಕಡಿಮೆಯ—ತಾರತಮ್ಯದ ಭಾವ ಎಲ್ಲಿಂದ ಬರುತ್ತದೆ? ಪ್ರಜ್ಞೆ

ಅಥವಾ ಚೈತನ್ಯದಲ್ಲಿ ಮೂರು ನೆಲೆಗಳನ್ನು ನಮ್ಮವರು ಗುರುತಿಸಿದ್ದಾರೆ. (೧) ವಿಕಾಸ ಶೀಲ ಪ್ರಜ್ಞೆ. (೨) ನಿತ್ಯಸ್ವಚ್ಛಂದ ಪ್ರಜ್ಞೆ. (೩) ಸಾರ್ವಭೌಮಿಕ ಪ್ರಜ್ಞೆ. ಇವುಗಳಲ್ಲಿ ಮೊದಲನೆಯದರ ದೃಷ್ಟಿಯಿಂದ ನೋಡಿದಾಗ ಪ್ರಜ್ಞೆಯ ವಿವಿಧ ಸ್ತರಗಳ ಅಧಿದೈವತೆ ಗಳು ಗೋಚರವಾಗಿ ತಾರತಮ್ಯಕ್ಕೆ ಅವಕಾಶವಾಗುತ್ತದೆ. ಇದು ಸಾಧನೆಯಿಂದ ಪಡೆಯುವ ಸ್ಥಿತಿ (ಕ್ಷರಪ್ರಜ್ಞೆ).

ಎರಡನೆಯದೇ ಪರಾಶಕ್ತಿ-ಮಹಾಮಾಯೆ—ಮೂಲ ಪ್ರಕೃತಿ ಎನ್ನುವ ನಿತ್ಯಸ್ವಚ್ಛಂದ ಪ್ರಜ್ಞೆ. ಇದು ಪಡೆದುಕೊಳ್ಳುವದಲ್ಲ. ತಾನಾಗಿ ಆವಿಷ್ಕಾರವಾಗುವ ಶಕ್ತಿ. (ಅಕ್ಷರ ಪ್ರಜ್ಞೆ)

ಮೂರನೆಯದೇ ಸಾರ್ವಭೌಮಿಕವಾದ ಈಶ್ವರಾ ಪ್ರಜ್ಞೆ. ಇದನ್ನೇ ಪುರುಷೋತ್ತಮ ಪ್ರಜ್ಞೆ ಎನ್ನುತ್ತಾರೆ. ಒಬ್ಬೊಬ್ಬ ದೇವತೆಯಲ್ಲಿಯೂ ಈ ಮೂರು ಪ್ರಜ್ಞಾನೆಲೆಗಳು ಗೋಚರವಾಗುತ್ತವೆ.

ಗೌರಿ ಮೊದಲನೆಯ ಪದ್ಯದಲ್ಲಿ ಒಬ್ಬ ಮಾನವೀಯ 'ಸೊಸೆ' ಎಂಬ ಭಾವದಿಂದ ಮನಸ್ಸನ್ನರಳಿಸಿದರೆ, "**ನಿನ್ನ ನಿನ್ನವರ ನುಂಗಿ ನೊಣೆವೆ ನಾ**" ಎಂಬ ಹಾಡಿನಲ್ಲಿ ಕಾಳಿಯನ್ನೇ ನುಂಗಿ ಕಾಳಿಯ ಬಳಗವನ್ನೂ ನುಂಗಿ ಸ್ವತಃ ಕಾಳಿಯ ಸ್ವರೂಪನಾಗಿ ನಿಲ್ಲುವ ಅದ್ಭುತ ಧೈರ್ಯದ ಮಾತು ಕೇಳಬರುತ್ತವೆ. ಕಾಳಿಯ ಮಗನ ಮಹಿಮೆ ಜಗತ್ತಿಗೆ ತೋರಬೇಕಾದರೆ ಕಾಳಿಯ ಸತ್ವವನ್ನೆಲ್ಲ ತನ್ನಲ್ಲಿ ಅಡಗಿಸಿಕೊಳ್ಳಬೇಕು. ಇದರಿಂದ ಕಾಲಪುರುಷ ರೇಗಿದರೆ ಕಾಳಿಯ ನಾಮ ಬಲದ ರಕ್ಷೆ ಇದೆ ಎನ್ನುತ್ತಾನೆ ಈ ಭಕ್ತ. ಇಂಗ್ಲಂಡಿನ ಮೆಟಾಫಿಜಿಕಲ್ ಕವಿಗಳಂತೆ ಚಮತ್ಕಾರಿಕವಾದ ಕಲ್ಪನೆಗಳನ್ನೂ ಇವರು ಬಳಸುತ್ತಾರೆ. ತಾನು ಕಾಳಿಯನ್ನು ನುಂಗುವದೆಂದರೆ "ಗಂಡಯೋಗದಲ್ಲಿ ಜನಿಸಿದಂಥ ಶಿಶು ತಿನುವದಂತೆ ತಾಯ" ಎಂಬ ಹಾಗೆ ಎಂದು ಭಾವಿಸುತ್ತದೆ. ಈ ಲೌಕಿಕ ಉಪಮೆಗಳ ಮೂಲಕ ಒಂದು ಅಲೌಕಿಕ ತತ್ತ್ವಾನುಭೂತಿಗೆ ಮಾರ್ಗರೂಪ ಕೊಡಲಾಗಿದೆ.

ತೀರ್ಥವಾಣಿಯಲ್ಲಿಯ ಐವತ್ತು ಗೀತೆಗಳಲ್ಲಿ ಹದಿನೈದು ಗೀತೆಗಳು ಕಾಳಿಯನ್ನು-ಶಕ್ತಿಯನ್ನು—ಕಾರುಣ್ಯ ತತ್ವವನ್ನು ಕುರಿತು ಇವೆ. ಶ್ರೀರಾಮಕೃಷ್ಣಪರಮಹಂಸರು ಕಾಳಿಭಕ್ತರಾಗಿರುವುದರಿಂದ ಕಾಳಿಕಾಪ್ತವನಗಳು ಇರುವದು ಸ್ವಾಭಾವಿಕ. ಈ ಎಲ್ಲ ಗೀತೆಗಳನ್ನು ಬರೆದವರು ರಾಮಪ್ರಸಾದ, ದಾಶರಥಿ, ಉದ್ಧವದಾಸ, ನಾನಕ್, ಕಬೀರ್ ಮೊದಲಾದವರಾದರೂ ಅವರೆಲ್ಲರ ಹಾಡುಗಳು ಶ್ರೀರಾಮಕೃಷ್ಣರ ಪವಿತ್ರ ಅನುಭಾವ ಪೂರ್ಣಕಂಠದಿಂದ ಹರಿದುಬಂದು "ತೀರ್ಥವಾಣಿ"ಗಳಾಗಿವೆ. ಇವರ ಹಾಡುಗಳಲ್ಲಿ ಕಾಳಿ, ಶಿವ, ರಾಧಾಕೃಷ್ಣ ಹಾಗೂ ಕೃಷ್ಣಮುರಳಿ, ಬೃಂದಾವನ, ಗೋಪಿಕಾವಿರಹ, ಸಂತಸ, ಸಂಭ್ರಮಗಳೆಲ್ಲ ಸೊಗಸಾದ ಪ್ರತಿಮೆಗಳಲ್ಲಿ, ಭಾವಲಹರಿಗಳಲ್ಲಿ ಮೈದಾಳಿವೆ.

೨

ಶ್ರೀಕೃಷ್ಣನಿಗೆ ಸಂಬಂಧಿಸಿದ ಗೀತಗಳಲ್ಲಿ ಮಧುರಭಾವಕ್ಕೆ ಸ್ವಾಭಾವಿಕವಾಗಿ ಹಿರಿಯ

ಸ್ಥಾನವಿದೆ. ಕಾಳಿಯನ್ನು ಶಿವನನ್ನು ಕುರಿತ ಗೀತೆಗಳಲ್ಲಿ ಮುಖ್ಯವಾಗಿ ಶಿಶು ದೃಷ್ಟಿಯಿಂದ ಪಡೆದ ಅನುಭವ-ವಾತ್ಸಲ್ಯಭಾವ ಪ್ರಧಾನವಾಗಿವೆ. ಎಲ್ಲ ಗೀತೆಗಳಲ್ಲಿಯೂ ಮಾನುಷ ಅತಿಮಾನುಷ ಅಂಶಗಳು ಒಂದರೊಳಗೊಂದು ಸಮರಸವಾಗಿರುತ್ತವೆ. ಅವುಗಳಲ್ಲಿಯ ಮಾನವತೆಯಿಂದ ನಮಗೆ ಹತ್ತಿರವಾಗಿ, ಅತಿಮಾನುಷತೆಯಿಂದ ಅಲೌಕಿಕ ಸತ್ಯದ ಉದ್ದೀಪಕವಾಗಿ ಈ ಗೀತೆಗಳು ಹೃದಯಸ್ಪರ್ಶಿಯಾಗುತ್ತವೆ.

ಭಾವವಾತ್ಸಲ್ಯವಿರಲಿ, ಮಾಧುರ್ಯವಿರಲಿ, ಸಖ್ಯವಿರಲಿ, ದಾಸ್ಯವಿರಲಿ ಯಾವುದಿದ್ದರೂ ಅವೆಲ್ಲವುಗಳೂ ಆತ್ಮಸಮರ್ಪಣೆಯಲ್ಲಿ ಪರಿಸಮಾಪ್ತಿ ಹೊಂದುತ್ತವೆ.

ಆತ್ಮಸಮರ್ಪಣೆ, ಶರಣಾಗತಿ—ಇವೆಲ್ಲ ಬುದ್ಧಿವಾದಿಗಳಿಗೆ ಹೇಡಿತನವಾಗಿ ಕಂಡು ಬರುತ್ತದೆ. ಆದರೆ "ನಾವು" ಎಂಬವರು "ಬುದ್ಧಿ"ಗಾದರೂ ಏಕೆ ಶರಣಾಗಬೇಕು? ನಿಜವಾಗಿ ಬುದ್ಧಿಗೆ ಶಕ್ತಿಯನ್ನೂ ತೇಜಸ್ಸನ್ನೂ ಪ್ರೇರಿಸುವ ಸೂರ್ಯಶಕ್ತಿಗೆ ಗಾಯತ್ರಿ ಮಂತ್ರವು ಪ್ರಾರ್ಥಿಸುತ್ತದೆ. ಶರಣಾಗತಿ, ಆತ್ಮನಿವೇದನೆ—ಇತ್ಯಾದಿ ಭಕ್ತಿಪಂಥದ ಪರಮಸಾಧನೆಯೆಲ್ಲವೂ ಗಾಯತ್ರಿಮಂತ್ರಾಂತರ್ಗತ ಸಾಧನವೇ ಆಗಿದೆ. ಇಂದ್ರಿಯ, ಮನಸ್ಸು, ಬುದ್ಧಿ, ಆತ್ಮ (ಸಃ) ಈ ನಾಲ್ಕು ನೆಲೆಗಳನ್ನು ಗೀತೆಯು ಪ್ರತಿಪಾದಿಸುತ್ತದೆ. ಆತ್ಮನಿಂದ ಬುದ್ಧಿಯನ್ನು ಪ್ರಚೋದಿಸುವ ಸಾಧನೆಯೇ ಶರಣಾಗತಿಯ ಸಾಧನೆ.

ಇಂದ್ರಿಯ, ಮನಸ್ಸು, ಬುದ್ಧಿಗಳು ಕಾಮಕ್ರೋಧಗಳಿಗೆ ಬದ್ಧವಾಗಿರುತ್ತವೆ; ಇವುಗಳಿಗೆ ಬದ್ಧವಾದ ಜೀವವೆಂಬ **ಗೋಪಗೋಪಿಯರು** ಇವೆಲ್ಲವುಗಳಿಂದ ಅತೀತವಾದ ಶ್ರೀಕೃಷ್ಣತತ್ವಕ್ಕೆ ಸಮರ್ಪಿತರಾಗಿ ಪ್ರೇರಣೆ ಪಡೆಯುತ್ತಾರೆ. ಇದು ಮುಗಿಲ ಕಡೆಗೆ ನೋಡುವ ಭಾವವಲ್ಲ. ನಮ್ಮೊಳಗೇ ಇರುವ ಅತಿ ಶ್ರೇಷ್ಠ ತತ್ವದಿಂದ ಪ್ರೇರಣೆ ಪಡೆಯುವದು. ಇದರ ಫಲವೇ **ಅವತಾರ**; ಅಂದರೆ ಆ ಅತಿಶ್ರೇಷ್ಠ ತತ್ವವು ನಮ್ಮಲ್ಲಿ ಅಭಿವ್ಯಕ್ತವಾಗುವದು ಇಳಿದುಬರುವದು.

ದ್ವಾರಕೆಯ ಗೋಪಗೋಪಿಯರು ಶ್ರೀಕೃಷ್ಣಪರಮಾತ್ಮ—ಇವರೆಲ್ಲ ಐತಿಹಾಸಿಕ ಸಾಂಕೇತಿಕ ವ್ಯಕ್ತಿಗಳು. ಅವುಗಳಿಂದ ಧ್ವನಿತವಾಗುವದು ನಮ್ಮ ಅಂತರಂಗದ ವಿಕಾಸವೇ ವಿನಾ ಬೇರೆಯಲ್ಲ.

ಹೃದಯ ಬೃಂದಾವನದಿ
ಬಂದು ಮನೆಮಾಡಯ್ಯ ಕಮಲಾಪತೀ
ಓಹೋ ಭಕ್ತಿ ಪ್ರಿಯನೆ ನನ್ನ
ಭಕ್ತಿಯೇ ನಿನಗೆ ರಾಧಾಸತೀ

ಈ ಹಾಡಿನಲ್ಲಿ "ರಾಧಾಸತಿ"ಯು ಭಕ್ತಿಗೆ ಸಂಕೇತವಾಗಿರುವದು ಸ್ಪಷ್ಟವಾಗಿದೆ.

ನನ್ನ ದೇಹವೆ ನಂದಗೋಕುಲವಯ್ಯ
ನನ್ನ ನೇಹವೆ ನಿನಗೆ ಶ್ರೀಯಶೋದೆ
ನನ್ನ ಮುಕ್ತಿಯು ಬಯಕೆ ಗೋಪನಾರಿಯರಯ್ಯ
ಬಾ ಇಲ್ಲಿ ನೆಲಸಯ್ಯ, ಇದು ನಿನ್ನದೇ

"ದಾಶರಥಿ" ಎಂಬ ಭಕ್ತ ಕವಿಯ ಈ "ಹೃದಯ ಬೃಂದಾವನದಿ" ಎಂಬ ಗೀತದಲ್ಲಿ ಶ್ರೀಕೃಷ್ಣಭಕ್ತಿಯ ಸಾಂಕೇತಿಕತೆ ನಿಸ್ಸಂದಿಗ್ಧವಾಗಿದೆ. ಆದರೆ ಇಲ್ಲಿ ಒಂದು ಎಚ್ಚರಿಕೆಯನ್ನು ವಹಿಸಬೇಕು. ಯುಗಾಂತರಗಳಿಂದ ಬರುವ ವೈದಿಕ, ಔಪನಿಷದಿಕ, ಪೌರಾಣಿಕ, ಹಾಗೂ ಚಾರಿತ್ರಿಕ ಸಂಕೇತಗಳ ಅರ್ಥ ಏನು ಎಂಬ ಬಗೆಗೆ ಒಂದೇ ಅಭಿಪ್ರಾಯವಿರುವದು ಕಷ್ಟ; ಇರಬೇಕಿಲ್ಲ. ಭಿನ್ನಾಭಿಪ್ರಾಯವಿದ್ದರೂ ಬಾಧಕವಿಲ್ಲ. ಪ್ರತಿಯೊಬ್ಬ ಕವಿ ಯಾವ ಸಂಕೇತದಿಂದ ಯಾವ ಅರ್ಥಾಭಿವ್ಯಕ್ತಿಗೆ ಪ್ರಯತ್ನಿಸುತ್ತಿದ್ದಾನೆ ಎಂದು ತಿಳಿಯಬೇಕು; ಸಾಧ್ಯವಾದರೆ ಸಾರ್ವಕಾಲಿಕವಾದ ಸರ್ವಸಾಮಾನ್ಯವಾದ ಅರ್ಥಗಳು ಪರಂಪರೆಯಿಂದ ತಿಳಿದು ಬಂದಿದ್ದರೆ ಅವುಗಳನ್ನು ಕೈಬಿಡಬಾರದು.

ಉದಾಹರಣೆಗೆ "ರಾಧಾ" ತತ್ವ ಇತ್ತೀಚೆಗಿನ ಬೆಳವಣಿಗೆ ಎಂದು ಹೇಳಿ ಅದಕ್ಕೂ ಶ್ರೀಕೃಷ್ಣನಿಗೂ ಸಂಬಂಧವಿಲ್ಲವೆಂದು ಸಂಶೋಧಕ ಶ್ರೇಷ್ಠರಲ್ಲಿ ಕೆಲವರು ವಾದಿಸುತ್ತಾರೆ. ಹಾಗೆಯೇ ಅಕ್ಷಯಾಂಬರದ ಬಗೆಗೂ ಹೇಳುತ್ತಾರೆ. ಇಲ್ಲಿ ನಮಗೆ ಮುಖ್ಯವಾಗಿರುವದು "ಶ್ರೀಕೃಷ್ಣ ತತ್ವ"ದಲ್ಲಿ "ರಾಧಾತತ್ವ" ಹೇಗೆ ಹೊಂದಿಕೊಳ್ಳುತ್ತದೆ? ಅದರ ಸಾಂಕೇತಿಕ ಮೌಲ್ಯ ಏನು? ಎಂಬ ಪ್ರಶ್ನೆಗಳು. "ರಾ-ಧಾ-ಧರಾ...." ಎಂದು ಹೇಳಿ ರಾಧೆಯು ಪೃಥ್ವೀತತ್ವವನ್ನು ಸಂಕೇತಿಸುತ್ತಾಳೆ. ಇದು ಸೃಜನಶೀಲ ಜಡಪ್ರಕೃತಿ. ಇಲ್ಲಿ ಭಗವಂತನ ಪ್ರೇಮ ಇಳಿದು ಹೊಳೆದು ಮಧುರವಾಹಿನಿಯಾಗಿ, ಮುರಳಿಗಾನವಾಗಿ ಅಭಿವ್ಯಕ್ತಿ ಪಡೆಯುತ್ತದೆ. ಈ ಭಕ್ತಿ ಮಾಧುರ್ಯ ಯಾವ ಗ್ರಂಥಗಳಲ್ಲಿದ್ದರೇನು? ಇಲ್ಲದಿದ್ದರೇನು? ಭಾರತೀಯ ಪುರಾಣರಚನೆಯ ತಂತ್ರವು ನಮಗಿನ್ನೂ ತನ್ನ ರಹಸ್ಯ ಬಿಟ್ಟುಕೊಟ್ಟಿಲ್ಲ. ಇತ್ತೀಚೆಗೆ ನಾವು ಈ ರಹಸ್ಯ ತಿಳಿಯುವ ಗೊಡವೆಯನ್ನೇ ಬಿಟ್ಟಿದ್ದೇವೆ.

"ನಿಮ್ಮ ಪಾಲಿಗೆ ನನ್ನ ಕೃಷ್ಣನು ಬರಿಯ ಹೆಸರಾಗಿರುವನು
ನನಗೂ ಈತನು ಹೃದಯದೊಲವಿನ ಉಸಿರಿಸುಸುರಾಗಿರುವನು

ಎಂದು ರಾಧ "ಕೊಳಲುಲಿ" ಎಂಬ ಗೀತದಲ್ಲಿ ಹೇಳುವ ಮಾತು ಒಂದು ಆಳವಾದ ವಾಸ್ತವಿಕತೆಯನ್ನೇ ಧ್ವನಿಸುತ್ತದೆ. ಕೃಷ್ಣತತ್ವವು ಬರಿ ಕಲ್ಪನೆಯಾಗಿದ್ದರೂ ವಿಶ್ವದ ಅದ್ಭುತಗಳಲ್ಲೊಂದಾಗಿದೆ ಎನ್ನಬಹುದು. ಗ್ರೀಕ್ ಸಂಸ್ಕೃತಿಯಲ್ಲಿ ಸತ್ಯಂ, ಶಿವಂ, ಸುಂದರಂ ಎಂಬ ಮೂರು ಕಲ್ಪನೆ ಮೂಲತತ್ವಗಳಾಗಿ ಮೆರೆದವು. ಆದರೆ ಇದರಲ್ಲಿ "ಪ್ರೇಮ" ತತ್ವಕ್ಕೆ ಸ್ಥಾನವಿಲ್ಲವಾಗಿದೆ. ಶ್ರೀಕೃಷ್ಣತತ್ವದಲ್ಲಿ ಈ ಪ್ರೇಮದ ಮಾಧುರ್ಯವೂ ಸೇರಿ ಗ್ರೀಕ್ ಸಂಸ್ಕೃತಿಯ ಮೌಲ್ಯಗಳನ್ನು ಮೀರಿದ ಒಂದು ಸಮಗ್ರತೆಯನ್ನು ಕೃಷ್ಣ ತತ್ವವು ಭಾರತೀಯರಿಗೆ ನೀಡುತ್ತದೆ. ಶ್ರೀ ಅರವಿಂದರು ಹೇಳಿದ ಈ ವಿಚಾರಗಳನ್ನು ನಮ್ಮ ವಿಚಾರವಂತರು ವಿವೇಚನೆಮಾಡಬೇಕಾಗಿದೆ. ಏಕೆಂದರೆ ಅನೇಕ ಪ್ರಖ್ಯಾತರೆಂದು ಕರೆದುಕೊಳ್ಳುವ ವಿದ್ವಾಂಸರು ತತ್ವವೇತ್ತರು ಭಾರತೀಯ ತತ್ವಶಾಸ್ತ್ರವು ಬರಿ ಮತ ಸಿದ್ಧಾಂತಗಳ ಗೊಂದಲದಲ್ಲಿ ಬೆಳವಣಿಗೆ ಇಲ್ಲದೆ ನಿಂತುಹೋಗಿದೆ ಎಂಬ ಭ್ರಾಂತಿಯನ್ನು ಹುಟ್ಟಿಸಿದ್ದಾರೆ. ಭಾರತೀಯರಿಗೆ ಪಾಶ್ಚಿಮಾತ್ಯ ಸಂಪರ್ಕ ಬರುವವರೆಗೆ ವೈಚಾರಿಕತೆ, ನೂತನ ಮೌಲ್ಯಗಳ ಗಾಳಿಯೇ ತಟ್ಟದೆ ಉಸಿರುಗಟ್ಟಿದಂತಾಗಿತ್ತು ಎಂದು ಭಾವಿಸ

ಲಾಗಿದೆ. ನಿಜವಾಗಿ ಸಾಧುಸಂತರು, ಶರಣರು ಈ ಜನವನ್ನು ಜೀವಂತವಾಗಿಡುವ ಮೌಲ್ಯಗಳನ್ನು ತಮ್ಮ ಹಾಡುಗಳಲ್ಲಿ, ನಾಮಸಂಕೀರ್ತನೆಗಳಲ್ಲಿ ಜನತೆಗೆ ನೀಡಿದ್ದಾರೆ. ಆದರೆ ನಮ್ಮ ವಿಮರ್ಶಕ ದೃಷ್ಟಿಯೇ ವಿಚಿತ್ರವಾಗಿ ಬುದ್ಧಿಯನ್ನು ಕಂಡಲ್ಲಿ "ಇದು ಅತಿತರ್ಕ"ವೆಂದೂ ಭಾವವನ್ನು ಕಂಡಲ್ಲಿ "ವಿಚಾರಹೀನ"ವೆಂದೂ ವಾದವನ್ನೊಡ್ಡುತ್ತ ರಾಷ್ಟ್ರೀಯ ಚೈತನ್ಯವನ್ನು ಗುರುತಿಸದೆ ಹೋಗುತ್ತಿದ್ದೇವೆ.

ಹಾಗೆಯೇ ಕೃಷ್ಣತತ್ವವು ರಾಷ್ಟ್ರಾದ್ಯಂತ ಹಿರಿಕಿರಿಯರ ಅಂತಃಕರಣವನ್ನು ಸ್ಪಂದಿಸಿ ಆವರಿಸಿರುವದು ಭಾವುಕತೆಯ, ಸರಳೀಕರಣದ ಪರಿಣಾಮವಲ್ಲ. "ನೀಲ ತೋಯದ ಮಧ್ಯಸ್ಥೋ ವಿದ್ಯುಲ್ಲೇಖೇವ ಭಾಸ್ವರಃ" ಎಂಬ ನಾರಾಯಣೋಪನಿಷತ್ತಿನ ದರ್ಶನವೇ ಕೃಷ್ಣದರ್ಶನವಾಗಿ ವೈಷ್ಣವ ಸಾಧುಸಂತರ ಗೀತಗಳಲ್ಲಿ ಮಹಾ ಹೊನಲಾಗಿ ಹರಿದಿದೆ. "ನೀಲ ಮೇಘದ ಮಧ್ಯದಲ್ಲಿರುವ ವಿದ್ಯುಲ್ಲೇಖೆಯಂತೆ ಭಾಸ್ವರ" ವಾದ ಮಿಂಚಿನ ರೂಪವೇ ಕೃಷ್ಣ. ಒಮ್ಮೆ ಈ ನೀಲಮೇಘದ, ನೀಲವರ್ಣದ, ಕೃಷ್ಣವರ್ಣದ ಮೂಲತತ್ವವನ್ನು ಒಪ್ಪಿಕೊಂಡಮೇಲೆ, ಕವಿಕಲ್ಪನಾ ವಿಲಾಸವು ಈ ಕೃಷ್ಣವರ್ಣದ ಅನಂತ ಪರಿಗಳನ್ನು ಅರಳಿಸಿ ತೋರಿಸುತ್ತದೆ.

ಉದಾಹರಣೆಗೆ ಕೃಷ್ಣವಿರಹದಲ್ಲಿ ತಾನು ಸಾಯುವೆನೆಂಬ ಭಾವ ಬಂದಾಗ ರಾಧೆ ಹೇಳುವ ಮಾತಿನ ಚಮತ್ಕಾರ, ಕರುಣಸಿಂಚಿತ ಸ್ವಾರಸ್ಯ ಹೃದಯಸ್ಪರ್ಶಿಯಾಗಿವೆ:

"ನಾನು ಸತ್ತರೆ ಚಿತೆಯ ಬೆಂಕಿಗೆ
ಒಡ್ಡದಿರಿ ಈ ತನುವನು
ಬೇಡಿಕೊಳುವೆನು ಸಖಿಯರೇ, ಇದ—
ನೆಸೆಯಬೇಡಿರಿ ಯಮುನೆಗೆ
ಏಕೆನಲು ಈ ದೇಹದಲಿ ನಾ
ನೊಲಿದಿರುವ ಶ್ರೀಕೃಷ್ಣಗೆ !
ನನ್ನ ದೇಹವ ಬಿಗಿದು ಕಟ್ಟಿರಿ
ತಮಾಲ ವೃಕ್ಷದ ಕೊಂಬೆಗೆ
ನನ್ನ ತನುವೂ ಹೊಂದಿಕೊಳುವದು
ಆ ತಮಾಲದ ಬಣ್ಣಕೆ...

ಇಂಥ ಚಮತ್ಕಾರಿಕವಾದ ಕಲ್ಪನೆಗಳಿಂದ ಕೃಷ್ಣನಿಗೆ ಸಂಬಂಧಿಸಿದ್ದೆಲ್ಲವೂ ಪ್ರಿಯವಾಗುವಂತೆ ಸಾಧುಸಂತರು, ವೈಷ್ಣವ ಭಕ್ತಕವಿಗಳು ಹಾಡಿದ್ದಾರೆ.

೩

ಇಂಥ ಗೀತಗಳ ಮೌಲ್ಯವೇನು? ಇಂಥ ಹಾಡು ಹಾಡಿ. ಭಜನೆಮಾಡಿದರೆ ಅನ್ನ ಬಟ್ಟೆ, ವಸತಿ ಸಿಗುವದೆ? ಬುದ್ಧಿವಂತರು, ಸಾಹಿತ್ಯಸಂಸ್ಕಾರವುಳ್ಳವರೂ ಈ ತರಹದ ಪ್ರಶ್ನೆ ಕೇಳಿದಾಗ—ಪುನಃ ಪುನಃ ಕೇಳುತ್ತಲೇ ಹೋದಾಗ ಉತ್ತರಿಸುವದೇ ಕಷ್ಟವಾಗು

ತ್ತದೆ. ಅನ್ನವಸತಿ ಬಟ್ಟೆಗಾಗಿ ನಾಡಿನ ಜನತೆಯೆಲ್ಲರೂ ಒಗ್ಗೂಡಿ ದುಡಿಯುತ್ತಿರುವಾಗ ಅವರ ಮನಸ್ಸು ಸ್ವಸ್ಥವಾಗಿರುವದು, ಆರೋಗ್ಯಕರವಾಗಿರುವದು ಹೇಗೆಂಬ ಪ್ರಶ್ನೆಯೂ ಇದೆ. ಅದಕ್ಕೆ ಉತ್ತರವಾಗಿ ಈ ಪರಿಯ ಗೀತೆಗಳು ಬರುತ್ತವೆ. ಒಂದು ಪರಿಯ ಹಾಡಿನ ಕಾಲ ಮುಗಿದು ಇನ್ನೊಂದು ಬರುತ್ತದೆ ಎಂಬ ತತ್ವವೇ ಮೂಲತಃ ತಪ್ಪಾಗಿದೆ. ಒಂದರ ಜೊತೆಗೆ ಇನ್ನೊಂದು ಬರುತ್ತದೆ. ಅಪ್ಪನಿಗೆ ಒಬ್ಬ ಮಗನಾದ ಕ್ಷಣಕ್ಕೆ ಅಪ್ಪನು ಚಿತೆ ಏರಬೇಕಿಲ್ಲ. ಇಂದಿನ ಕುಟುಂಬ ಯೋಜನೆಯ ಯುಗದಲ್ಲಿ ಎರಡು ಬೇಕು ಮೂರು ಸಾಕು ಎಂದು ಪ್ರಚಾರಮಾಡಬಹುದು. ಆದರೆ ಸಾಹಿತ್ಯರಂಗದಲ್ಲಿ ಒಂದು ಯುಗದ ಗರ್ಭದಲ್ಲಿ ಇನ್ನೊಂದು ಯುಗ ಉದ್ಭವಿಸುತ್ತದೆ. ಹಳೆಯದರ ಮೌಲ್ಯಗಳನ್ನು ಹೊಸದು ಒಳಗೊಳ್ಳುವವರೆಗೆ ಹಳೆಯದು ಕಣ್ಮರೆಯಾಗುವುದಿಲ್ಲ. ಹಳೆಯದನ್ನು ನಿರಾಕರಿಸಿ ಬಂದ ಹೊಸತದು ಹಳೆಯದರ ಜೊತೆಗೂಡಿಯೇ ಇರಬೇಕಾಗುತ್ತದೆ. ನಿತ್ಯ ಮೌಲ್ಯಗಳನ್ನಾಧರಿಸಿದ ತೀರ್ಥವಾಣಿಯಂಥ ಗೀತಗುಚ್ಛಗಳ ಮೌಲ್ಯ ಎಂದೂ ಕಡಿಮೆಯಾಗುವದಿಲ್ಲ. ರಾಜಕೀಯ ಪಾರ್ಟಿಗಳಿಗೂ ಸಾಹಿತ್ಯ ಮತಗಳಿಗೂ ದೊಡ್ಡ ವ್ಯತ್ಯಾಸ ಒಂದಿದೆ: ರಾಜಕೀಯ ಪಾರ್ಟಿಗಳಲ್ಲಿ ತಮ್ಮದೇ ಸದಾ ಸರಿ ಎಂಬ ಹಟವಿರುತ್ತದೆ. ಸಾಹಿತ್ಯದಲ್ಲಿ ಎರಡನೆಯ ಪಂಥದಲ್ಲಿಯ ಸದಂಶಗಳನ್ನು ಗುರುತಿಸುವ ಔದಾರ್ಯವಿರುತ್ತದೆ. ಈ ಔದಾರ್ಯ ಕಾಯ್ದುಕೊಳ್ಳುವ ಸದಭಿರುಚಿಗೆ ತೀರ್ಥವಾಣಿಯಂಥ ಗೀತ ಸಂಕಲನಗಳು ಸದಾ ಆಕರ್ಷಕವಾಗಿರುತ್ತವೆ.

ಐವತ್ತನೆಯ ವರುಷದಲ್ಲಿ ಕಾಲಿಡುತ್ತಿರುವ ಶ್ರೀ ಜಿ. ಎಸ್. ಶಿವರುದ್ರಪ್ಪನವರು ತೀರ್ಥವಾಣಿಯ ಐವತ್ತು ಗೀತೆಗಳ ಮೌಲಿಕ ಸತ್ವ, ನವ್ಯ ನವೋದಯ ವಾದಗಳಿಗೆ ಅತೀತವಾದುದೆಂಬ ಸಂತೃಪ್ತಿ ಪಡೆದಿರುವರೆಂಬ ನಂಬಿಗೆಯಿಂದ ಈ ಲೇಖನವನ್ನು ಸಮಾಪ್ತಿಗೊಳಿಸುತ್ತೇನೆ. ಶ್ರೀ ಗೋಕಾಕರ ಸಮನ್ವಯ ಧ್ವನಿಗೆ ತನ್ನ ಧ್ವನಿಯನ್ನು ಸೇರಿಸಿದ ಶ್ರೀ ಜಿ.ಎಸ್.ಎಸ್. ಅವರು ಕನ್ನಡ ಸಾರಸ್ವತ ಪ್ರಪಂಚದಲ್ಲಿ ಸಮತೂಕವನ್ನು ಕಾಯ್ದುಕೊಳ್ಳುವ ಸಾಹಿತಿಗಳಾಗಿ ಇನ್ನೂ ಬೆಳೆಯಲಿ ಎಂದು ತೀರ್ಥವಾಣಿಯ ಅಧಿದೈವತಕ್ಕೆ ಪ್ರಾರ್ಥಿಸುತ್ತೇವೆ.

# ಟಿ. ಎಸ್. ನಾಗರಾಜಶೆಟ್ಟಿ

# ಅನಾವರಣ

೧

ನೋಡು ಇದೋ ಇಲ್ಲರಳಿ ನಗುತಿದೆ
ಏಳು ಸುತ್ತಿನ ಮಲ್ಲಿಗೆ
ಇಷ್ಟು ಹಚ್ಚನೆ ಹಸುರ ಗಿಡದಿಂ-
ದೆಂತು ಮೂಡಿತೊ ಬೆಳ್ಳಗೆ!

ಎಂದು ಆರಂಭದ ಒಂದು ಕವನದಲ್ಲೇ ಕವಿಸಹಜವಾದ ವಿಸ್ಮಯ, ಸಂತೋಷ, ಸಂಭ್ರಮ ಗಳನ್ನು ವ್ಯಕ್ತಪಡಿಸಿದ ಕವಿ ಜಿ. ಎಸ್. ಶಿವರುದ್ರಪ್ಪನವರು ಮುಂದೆ ಹೀಗೆಯೇ ಪ್ರಕೃತಿ ಸೌಂದರ್ಯದ ವಿವಿಧ ವಿನ್ಯಾಸಗಳನ್ನು, 'ಚೆಲುವು-ಒಲವು'ಗಳ ಹರವು ಹಬ್ಬುಗೆ ಗಳನ್ನು ಸಂಸಾರ ಸ್ವಾರಸ್ಯಗಳನ್ನು ಸಮರ್ಥ ಚಿತ್ರಗಳಲ್ಲಿ ಸೆರೆ ಹಿಡಿದ ಚಿತ್ರಕಾರರು. ಓದಲು ಮಿತವಾದ ಬಂಧ, ಕೇಳಲು ಹಿತವಾದ ಲಯ, ಸರಳ ಸುಂದರವೂ ಮಾರ್ದವವೂ ಆದ ಪದಗಳಲ್ಲೇ ಕಾವ್ಯಕಮನೀಯತೆಯನ್ನು ಹೊಳೆಯಿಸಿಬಿಡುವ ಸಂಯಮ ಸಾಮರ್ಥ್ಯ ಗಳ ಪ್ರತಿಭೆ ಇವರಿಗಿದೆ. ಇದೇ ಇವರ ವಿಶಿಷ್ಟತೆಯೂ ಆಗಿದೆ. ಈ ದಿಸೆಯಲ್ಲಿ ಸಾಕಷ್ಟು ಸಿದ್ಧಿ ಪಡೆದಿರುವ ಈ ಕವಿ ಆಳವಾದ ಜಿಜ್ಞಾಸೆಯುಳ್ಳ ಮತ್ತು ಧ್ವನಿ ಸಾಮರ್ಥ್ಯದಿಂದ ಮನಸೆಳೆಯುವ ಕೆಲವು ಉತ್ಕೃಷ್ಟ ಕವನಗಳನ್ನು ಸಹ ಕೊಟ್ಟಿದ್ದಾರೆ. 'ಮಬ್ಬಿನಿಂದ ಮಬ್ಬಿಗೆ', 'ಸಂಜೆ ದಾರಿ', 'ಮುಂಬೈ ಜಾತಕ', 'ಜಡೆ', 'ದೇವಶಿಲ್ಪ', 'ಕೃಷ್ಣಶಕ್ತಿ' ಮುಂತಾದುವು ಈ ಸಾಲಿಗೆ ಸೇರುವ ಕವನಗಳು. ಇಲ್ಲಿನ ತಾತ್ವಿಕತೆ ಕೂಡ ಬಹಳ ಆರೋಗ್ಯಕರವಾದುದೆನ್ನುವುದು ಗಮನಿಸಬೇಕಾದ ಸಂಗತಿ.

೨

ಈಗಾಗಲೇ ಒಂಬತ್ತು ಕವನ ಸಂಕಲನಗಳನ್ನು ಕೊಟ್ಟಿರುವ ಜಿ.ಎಸ್.ಎಸ್. ಅವರು ಇತ್ತೀಚೆಗೆ ಅವೆಲ್ಲವುಗಳಿಂದಲೂ ೧೧೭ ಉತ್ತಮ ರಚನೆಗಳನ್ನು ಆಯ್ಕೆಮಾಡಿ "ನನ್ನ ನಿನ್ನ ನಡುವೆ" ಎನ್ನುವ ಹತ್ತನೆಯ ಸಂಕಲನದಲ್ಲಿ ಸೇರಿಸಿ ಕೊಟ್ಟಿದ್ದಾರೆ. ಪ್ರಕೃತ ಅವಲೋಕಿಸಬೇಕಾಗಿರುವ 'ಅನಾವರಣ' ಅವರ ಏಳನೆಯ ಸಂಕಲನ. ಇದರಲ್ಲಿ ೪೧ ಕವನಗಳಿವೆ.

ಹಿಂದಿನ ಸಂಕಲನಗಳ ಹಿನ್ನೆಲೆಯಲ್ಲಿ 'ಅನಾವರಣ'ಕ್ಕೆ ವಿಶೇಷ ಮಹತ್ವವಿದೆ. ಇಲ್ಲಿನ ಕವನಗಳು 'ಹರಿದ ಮನವನು ಹಿಡಿದು ಒಂದೆಡೆ ನಿಲಿಸಿಕೊಳ್ಳುವ'ಷ್ಟಕ್ಕೇ (ಪ್ರತಿಸ) ಸೀಮಿತವಲ್ಲ. 'ನೆಲ-ಬಾನುಗಳನ್ನು ಕೂಡಿಸುವ ಆದರ್ಶ'(ಸುಜನಾ)ದಲ್ಲೇ ಮುಳುಗಿ ಇಹದಿಂದ ಹೊರತಾಗಿಲ್ಲ. ಅಮೂರ್ತತತ್ವಗಳನ್ನು ಮೂರ್ತಗೊಳಿಸುವ ಪ್ರಯತ್ನಕ್ಕೆ ಕವಿ ಇಲ್ಲಿ ಸ್ವಲ್ಪ ವಿರಾಮ ಕೊಟ್ಟಿದ್ದಾರೆ. ಹಿಂದಿನ ಸಂಕಲನಗಳ ಸೌಂದರ್ಯಾರಾಧನೆ, ಚೆಲುವು-ಒಲವುಗಳ ಆಸ್ವಾದನೆಯನ್ನು ಅನಾಸಕ್ತಿನಲ್ಲಿಟ್ಟಿದ್ದಾರೆ. ಸ್ವಕಪೋಲಕಲ್ಪಿತ ಲೋಕದ ವಿಹಾರವನ್ನು ಕಡೆಗಣಿಸಿ ತಾನು ನಿಂತ 'ನಿಜದ ನೆಲೆ'ಯತ್ತ ಕೊಂಚ ದೃಷ್ಟಿ ಹಾಯಿಸಿದ್ದಾರೆ.

ಸದ್ಯಕ್ಕೆ ಬೇಡ ಬಿಡು ದೂರಗಿರಿನೆತ್ತಿಗಳ
ಮಂಜಿನಾಚೆಗೆ ನಿಂತು ಕರೆವ ತಾರೆ.
ಇರುವ ಹಣತೆಗೆ ಮೊದಲು ಎಣ್ಣೆ ಬತ್ತಿಯನೂಡು,
ಹಳೆಯ ಪಣತದ ಕಾಳ ಮಾಡದಿರು ಸೂರೆ

('ಹಾರೈಕೆ')

ಎನ್ನುವ ಅವರ ಹಾರೈಕೆಗೆ ಸ್ವತಃ ಮಣಿದಿದ್ದಾರೆ. ಮನುಷ್ಯನ ಅವನತಿಗೆ ಕೊರಗಿದ್ದಾರೆ; ಅವನ ಇರುಕಾಟಕ್ಕೆ ಕರಗಿದ್ದಾರೆ. ತಮ್ಮ ಚಿಕಿತ್ಸಕ ದೃಷ್ಟಿಯನ್ನು ಎಚ್ಚರಿಸಿ ಅದರ ಕಣ್ಣಿನಲ್ಲಿ ನೆಲವನ್ನು ಕಂಡು ಲೋಪದೋಷಗಳ ಗವಾಕ್ಷ ತೆರೆದು ತೋರಿದ್ದಾರೆ. ಜೊತೆಗೆ ಅಮೂಲ್ಯ ಸಲಹೆಗಳನ್ನೂ ನೀಡಿರುವುದು ಮಹತ್ವದ ವಿಚಾರ.

ಚಂದ್ರಶೇಖರ ಕಂಬಾರರು ಹೇಳಿರುವಂತೆ "ಶಿವರುದ್ರಪ್ಪನವರು ಅಡಿಗರ ನಂತರದ ತಲೆಮಾರಿನಲ್ಲಿ ತಮ್ಮ ವಿಶಿಷ್ಟ ಧ್ವನಿಯಿಂದ ಅತಿರೇಕವಲ್ಲದ ವೈವಿಧ್ಯಮಯವಾದ ಕಾಳಜಿಗಳಿಂದ ತುಂಬ ಮಹತ್ವದ ಕವಿಯಾಗಿದ್ದಾರೆ." 'ಅನಾವರಣ'ದ ಕವನಗಳು ನಾಲ್ಕು ರೀತಿಯ ಧೋರಣೆಗಳನ್ನು ಒಳಗೊಂಡಿವೆ. ಅವನ್ನು ವಿಭಜಿಸಿಕೊಂಡು ವಿಶ್ಲೇಷಿಸುವುದು ಸರಿಯೆನ್ನಿಸುತ್ತದೆ.

ಇಂದಿನ ಜನಾಂಗ ತನ್ನ ಪರಂಪರೆಯ ಮೌಲ್ಯಗಳನ್ನು ಮರೆತು ಸ್ವಾರ್ಥಕ್ಕೆ ಪಕ್ಕಾಗಿದೆ. ಪರಿಣಾಮವಾಗಿ ಗೊಂದಲಕ್ಕೀಡಾಗಿದೆ. ಸಾತ್ವಿಕ ಹಾದಿಯಲ್ಲಿ ನಡೆದು ಬಂದು ರಜೋಗುಣಕ್ಕೆ ಹೊರಳಿ ತಾಮಸಕ್ಕೆ ಉರುಳಿ ರಾಕ್ಷಸೀ ಶಕ್ತಿಯಲ್ಲಿ ಕೊಳೆಯುತ್ತ ನರಳುತ್ತಿದೆ. ಇದರಿಂದ ಕವಿಯ ಅಂತರಂಗಕ್ಕಾದ ಅಪಾರ ನೋವು ಹರಡಿಕೊಂಡಿರುವ ಕವನಗಳು ಇಲ್ಲಿ ಪ್ರಧಾನವಾಗಿವೆ.

ರಾವಣ ಸಂಹಾರದ ಕಾಲದ ಹಾಗೆಯೆ
ಸಮಸ್ತ ಗ್ರಹಗಳು ಒಂದು ಕಡೆ
ಸೇರಿಕೊಂಡಿವೆ ಈ ಸಂವತ್ಸರದಲಿ,
ಬಂತೋ ಭೂಮಿಗೆ ಇಂದೆ ಕಡೆ.

ಎನ್ನುವಷ್ಟರ ಮಟ್ಟಿಗೆ ಅನಾಚಾರ ಭ್ರಷ್ಟಾಚಾರಗಳು ತಾಂಡವವಾಡುತ್ತಿವೆ. ಅವುಗಳ ಪರಿಹಾರದ ಪ್ರಶ್ನೆ ಬಂದರೆ,

ರಾವಣ ಸಂಹಾರವೆ? ಅಯ್ಯೋ ಮಂಕೆ
ನಂಬಬಹುದೆ ಈ ವಾಣಿಯನು?
ರಾವಣಶಕ್ತಿಯೆ ಗುತ್ತಿಗೆ ಹಿಡಿದಿದೆ
ಎಂದಿನಿಂದ ಈ ಭೂಮಿಯನು!

ಎಂದು ಕವಿ ನೊಂದುಕೊಂಡಿದ್ದಾರೆ. ಈ ಶಕ್ತಿಯಲ್ಲೇ ಜನರ ವಿಲಾಸವನ್ನು ಕಂಡು,

ರಾಕ್ಷಸಶಕ್ತಿಯೆ ಸ್ಥಾಯಿಯಾಗಿರಲು
ಅವತಾರವೆ ಸಂಚಾರಿ!
ರಾವಣರದೆ ಈ ರಾಜ್ಯ ಎಂದಿಗೂ,
ರಾಮುನಿಗೆಲ್ಲಿದೆ ರಹದಾರಿ?

('ಪ್ಲವ ಸಂವತ್ಸರದ ಭವಿಷ್ಯ')

ಎಂದು ವ್ಯಂಗ್ಯವಾಗಿ ಚುಚ್ಚಿದ್ದಾರೆ.

ಅರಿಷಡ್ವರ್ಗದ ಬಗೆಗಿನಿತಾದರು
ರೋಷವ ತಾಳದ ಮಹಾನುಭಾವರು;
ಕಾಮಕ್ರೋಧಗಳೊ, ಮೋಹ ಮತ್ಸರವೊ
ಭಗವಂತನ ಶಕ್ತಿಗಳೆಲ್ಲವ ಗೌರವಿಸಿ
ಅವುಗಳ ಜೊತೆಯೊಳು ಕೆಳೆ ಬೆಳೆಸಿ
ನಾವು ಬದುಕಿ, ಅವುಗಳನ್ನೂ ಬದುಕಿಸಿ
ವರ್ಧಿಸುವೆವು ನಾವು
ನಿರಂತರ ಬದ್ಧರು ನಾವು!

ಎಂದು ಹೆಮ್ಮೆಯಿಂದ ತಮ್ಮ ಅವಗುಣಗಳನ್ನು ಹೇಳಿಕೊಂಡೇ ಬೆನ್ನು ತಟ್ಟಿಕೊಳ್ಳುವವರ ಚಿತ್ರವನ್ನು ಕೊಟ್ಟು, "ಬದ್ಧ ಜಯಂತಿ" ಕವನದಲ್ಲಿ ಈ ರೀತಿಯ 'ಸ್ಥಗಿತ'ರನ್ನು ವಿಡಂಬಿಸಿದ್ದಾರೆ. ಈ ಕವನದ ಉದ್ದಕ್ಕೂ ಇಂದಿನ ಜನರ ಭೋಗಲಾಲಸೆಯನ್ನು ಸ್ವಾರ್ಥಲೋಲುಪತೆಯನ್ನು ವ್ಯಂಗ್ಯವಾಗಿ ಆಕ್ಷೇಪಿಸಿದ್ದಾರೆ. ಬೆನ್ನುಬಿಡದ ಪೆಡಂಭೂತದಂತೆ ಭೂಮಿಯ ಮೇಲೆ ಗಟ್ಟಿಸಿಕೊಂಡು ಕೂತಿರುವ "ಆಸುರೀಶಕ್ತಿ'ಯನ್ನು ಈ ಸಂಕಲನದ ಉದ್ದಕ್ಕೂ ಜಿ.ಎಸ್.ಎಸ್. ಅವರು ಗುರುತಿಸಿ ಅದಕ್ಕಾಗಿ ಬಹಳ ವಿಷಾದಿಸಿದ್ದಾರೆ.

ಹೊಟ್ಟೆಗಾಗಿ ಗೇಣುಬಟ್ಟೆಗಾಗಿ ಅನೇಕ ಪರಿಪಾಟಲು ಪಡುವ, ಬೂಟಕವಾಡುವ, ವೇಷ ಕಟ್ಟುವ ಜನರ ಸ್ವಭಾವ ಕಂಡು ದುಃಖಿಸಿದ್ದಾರೆ. ಶನಿದೇವರ ವಿಗ್ರಹವನ್ನು ಬೀದಿಗಳಲ್ಲಿ ಕಂಡು, 'ತಿರುಪೆಯುವರ ಸಾಲಿನಲ್ಲಿ ತಂದಿಪನನು ನಿಲಿಸಬಹುದೆ?' 'ಶನಿಗೂ ಕೂಡ ಶನಿಕಾಟವೆ?' ಎಂದು ಪ್ರಶ್ನಿಸಿ

ತೆರೆದ ಬೀದಿ ಗದ್ದಲದಲಿ
ಒಣಗುತಿಹುದು ಶನಿದೇವರು
ಹಾಳು ಸುರಿವ ಬಿಸಿಲಲಿ !

(‘ಶನಿದೇವರ ವಿಗ್ರಹ’)

ಎಂದು ತಿಳಿಸಿ ಹೊಟ್ಟೆಪಾಡಿಗಾಗಿ ಎಂತೆಂಥ ದಾರಿಗಳನ್ನು ಜನ ಅವಲಂಬಿಸುತ್ತಿದ್ದಾರೆಂದು ವಿಚಾರ ಮಾಡಿದ್ದಾರೆ. ಹಿಂದಿನವರು ಬದುಕಿನ ದೊಡ್ಡ ಮೌಲ್ಯವೆಂದು ನಂಬಿದ್ದ ‘ತೇನ ವಿನಾ ತೃಣಮಪಿ ನ ಚಲತಿ’ ಎಂದಿದ್ದ, ‘ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ’ ಎಂದು ಎಲ್ಲವನ್ನೂ ಅರ್ಪಿಸಿದ್ದ ದೇವರಿಗೇ ಈ ಗತಿಯೆ?

ಹೀಗೆ ‘ಉದರ ವೈರಾಗ್ಯ’ದ ಜನಗಳಿಗೆ ದೇವರೇ ಸ್ವಾರ್ಥ ಸಾಧನೆಯ ಒಂದು ಸಾಧನವಾಗಿ ಪರಿಣಮಿಸಿದ್ದು ಮಾನವತೆಯ ದುರಂತವೇ ಸರಿ! ಇದಕ್ಕೆ ಇನ್ನೂ ಕೆಲವು ದೃಷ್ಟಾಂತಗಳನ್ನು ಕೊಟ್ಟಿದ್ದಾರೆ. ಬೆಳೆವಷ್ಟು ಕಾಲ ಬೇಲಿ ಹಾಕಿ ‘ಕಾಪಾಡದ ಜನ ‘ಶಾಖೋಪಶಾಖೆಗಳ ಚಾಚಿ ಬಿಳಲನು ಬೀಸಿ’ದ ಮೇಲೆ ಸುತ್ತ ಬೇಲಿ ಹಾಕತೊಡಗುವುದನ್ನು ಗುಡಿಯ ಗಂಟೆಗಳನ್ನು ಕೊಂಬೆಕೊಂಬೆಗೂ ತೂಗಿಬಿಟ್ಟು “ಈ ಆಲದ ಮರವೇ ಕಲ್ಪವೃಕ್ಷ”ವೆಂದು ಬೋರ್ಡು ಹಾಕುವುದನ್ನು ‘ಮರ-ಬೇಲಿ’ ಕವನದಲ್ಲಿ ಟೀಕಿಸಿದ್ದಾರೆ. ಎಂಟು ಗ್ರಹ ಒಟ್ಟಿಗೇ ಸೇರಿರುವಾಗ ಪ್ರಳಯವೇ ಘಟಿಸಬಹುದೆಂಬ ಹೆದರಿಕೆಯ ಭೀತಿಯನುಂಡು ಭಜನೆಗೆ ತೊಡಗುವ ಪ್ರಥಮ ವರ್ಗಕ್ಕೆ ಸೇರಿರುವ ಠಕ್ಕರನ್ನು ‘ಅಷ್ಟ ಗ್ರಹ ಕೂಟದ ಇರುಳು’ ಕವನದಲ್ಲಿ ಗೇಲಿ ಮಾಡಿದ್ದಾರೆ. ಒಂದು ರಾತ್ರಿ ಕಳೆದು ಬೆಳಗಾದಾಗ ದಬ್ಬೆ ಬಿಚ್ಚಿದ ಬಾಲವಾಗುವ ಇವರ ಭಕ್ತಿಯ ರೀತಿಗೆ, ಈ ಜೀವಗಳ್ಳರ ಜಪಕ್ಕೆ ಆ ದೇವರು ಜಗ್ಗುವುದಿಲ್ಲವೆನ್ನುತ್ತಾರೆ. ‘ಜನ ಮರುಳೊ ಜಾತ್ರೆ ಮರುಳೊ’ ಎನ್ನುವಂತೆ ‘ತೀರದ ದಾಹದ ಪೂಜಾರಿ ರಚಿಸಿದ ನಂಬಿಕೆಯ ವ್ಯೂಹ’ದಲ್ಲಿ ತೊಳಲುವವರ ವಿಶ್ಲೇಷಣೆಯನ್ನು ‘ಜಾತ್ರೆ’ ಕವನದಲ್ಲಿ ನಡೆಸಿದ್ದಾರೆ. ಮಾರಿ, ಮಸಣಿ, ಭೂತ, ಬೆಂತರಗಳ ಹೆಸರಿನಲ್ಲಿ ವಿವಿಧ ವಾದ್ಯಗಳನ್ನು ಬಾರಿಸಿ ಕುರಿಕೋಳಿ ಆಡುಗಳನ್ನು ಬಲಿಗೊಟ್ಟು ದಕ್ಷಿಣೆಯನ್ನು ಗಿಟ್ಟಿಸಿಕೊಳ್ಳುವುದು ಪೂಜಾರಿಯ ಚಾತುರ್ಯವಷ್ಟೆ. ಶತಶತಮಾನಗಳಿಂದಲೂ ನಡೆಯುತ್ತಿರುವ ಸಲ್ಲದ ಈ ಆಚಾರವನ್ನು ಕವಿ ಬಯಲಿಗೆಳೆದಿದ್ದಾರೆ. ‘ನಮ್ಮವರೆ ಇವರೆಲ್ಲರೂ’ ಕವನದಲ್ಲಿ,

ನೂರಾರು ರೀತಿಯಲಿ ಅಡ್ಡಹಾದಿಯ ಕಡಿದು
ಗುಡ್ಡವ ದಾಟಿ ಚಿನ್ನಕ್ಕೆ ಕನ್ನವ ಕೊರೆಯುವ ಜನರು.
ಬೆವರಿಲ್ಲದೆಯೆ ಬಳಿಗೆ ಬಂದುದ ತುಡುಕಿ, ಅಡಕಿ,
ಬ್ಯಾಂಕಿನಲಿ ಬೆಳೆವ ಬಡ್ಡಿಗೆ ತುಡಿವ ತಾಪಸಿಗಳು.
ಬೆಳಗಾದೊಡನೆ ನೀರಿಗೆ ಹಾಲನು ಬೆರಸಿ, ಅನ್ನಕ್ಕೆ
ಕಲ್ಲನು ಇಡುಕಿ, ಹಳಸಿದ್ದನ್ನೆ ಬಿಸಿ ಮಾಡಿ ಬಡಿಸಿ
ನಾಲಗೆಯಲ್ಲೆ ಮೂಲೋಕವನೆ ಜಾಲಿಸಿ ನಿಂತ
ಮಹಾನುಭಾವರು ಇವರು ; ನಮ್ಮವರೆ ಇವರೆಲ್ಲ

ಎಂದು ನಮ್ಮವರ ಚಾತುರ್ಯ (!)ಗಳ ಪಟ್ಟಿಯನ್ನೇ ಕೊಟ್ಟಿದ್ದಾರೆ.

ಈ ಸಂಕಲನದ ಮೊದಲ ಕವನದಲ್ಲೇ ನಮ್ಮ ಜನರ ನಡವಳಿಕೆಯನ್ನು, ಡಂಬಾಚಾರವನ್ನು ಖಂಡಿಸಿದ್ದಾರೆ. ಮಂತ್ರಿವರ್ಯರ ಅಮೃತ ಹಸ್ತದಿಂದ ಗಾಂಧೀಜಿಯ ಭಾವ ಚಿತ್ರದ ಅನಾವರಣವಾದ ಸುದ್ದಿಯ ಚೋದ್ಯವನ್ನು ಪತ್ರಿಕೆಯಲ್ಲಿ ಕಂಡು ಬೆರಗುಗೊಂಡು

ಇಲ್ಲದಿರುವ ತೆರೆಯನೆಳೆದು ಗಾಂಧೀಜಿಯ ಮೋರೆಗೆ
ಅಮೇಲದ ತೆರೆಯುವಾಟ ನಮ್ಮ ನಾಡ ಮಂದಿಗೆ !
. . . . . . . . . . .
ಭಾಷಣಗಳು ನಡೆದುವಂತೆ ಕುಸಿಯಿತೇನೊ ವೇದಿಕೆ
. . . . . . . . . . .
ಗಾಂಧೀಜಿಯ ಪಟ ಸೇರಿತು ಜೇಡನ ಬಲೆ ನೆರಳಿಗೆ !

ಎಂದು ಹೇಳಿದ ಕವಿ ಹೀಗೆ ಕೇವಲ ಭಾಷಣಗಳಲ್ಲೇ ನಾಟಕದಲ್ಲೇ ಸಾರ್ಥಕ್ಯವನ್ನು ಕಂಡುಕೊಳ್ಳುವ ಮಂದಿಗೆ 'ಕಿವಿ ಮಾತು' ಹೇಳುತ್ತಾರೆ :

ಅನಾವರಣವಾಗಬೇಕು ಮೊದಲು ನಮ್ಮ ಹೃದಯಕೆ
ಅನಾವರಣವಾದಮೇಲೆ ಸಿದ್ಧವಾಗು ಶಿಕ್ಷೆಗೆ.

ಈ ಮಾತು ಇಡೀ ಸಂಕಲನದಲ್ಲಿ ಅಂತಸ್ಸೂತವಾಗಿ ಜಿ. ಎಸ್. ಶಿವರುದ್ರಪ್ಪನವರ ಆಶಯವಾಗಿ ಹರಡಿಕೊಂಡಿದೆ. ಕೇವಲ ಸಿನಿಕನಾಗಿ ಉಳಿಯದೆ ಕವಿ ಜನರು ಗುಣಧನಿಕರಾಗಬೇಕೆಂದು ಹಾರೈಸಿದ್ದಾರೆ.

* * *

ಪ್ರಸಿದ್ಧ ಮನಶ್ಶಾಸ್ತ್ರಜ್ಞನಾದ ಯೂಂಗನ ಪ್ರಕಾರ ನಮ್ಮ ಆಗುಹೋಗುಗಳಿಗೆ ವ್ಯವಸ್ಥೆಯನ್ನು ಕಲ್ಪಿಸಿಕೊಳ್ಳುತ್ತ ಹೋಗುವುದೇ ನಾಗರಿಕತೆ, ನಿಜ. ಆದರೆ ವ್ಯವಸ್ಥೆ ಹೆಚ್ಚುತ್ತಾ ಹೋದ ಹಾಗೆಲ್ಲಾ ಅಡೆತಡೆಗಳೂ ಅಪಾಯಗಳೂ ಮಿತಿಗಳೂ ಕೂಡ ಹೆಚ್ಚುತ್ತಲೇ ಹೋಗುತ್ತವೆನ್ನುವುದೂ ಸುಳ್ಳಲ್ಲ. ನಾಗರಿಕತೆ ಬೆಳೆದಂತೆಲ್ಲಾ ಕೆಲವು ಅಂಶಗಳಲ್ಲಿ ನಮ್ಮ ಕೈಗಳಿಗೆ ನಾವೇ ಕೋಳಗಳನ್ನು ಹಾಕಿಕೊಳ್ಳುವುದು ಕೂಡ ಅನಿವಾರ್ಯ. ಇದನ್ನು ಜಿ.ಎಸ್.ಎಸ್. ಅವರ ಕೆಲವು ಕವನಗಳು ಪ್ರತಿಪಾದಿಸುತ್ತವೆ :

ಕಾಲುದಾರಿಯ ಮೇಲೆ ಕಣ್ಣಿಟ್ಟು ನಡೆಯಣ್ಣ
ಎಲ್ಲೆಂದರಲ್ಲಿ ನೀ ದಾಟಬೇಡ ;
ದಾರಿಯು ತುಂಬ ನಿಂತ ಹಲಗೆಯ ಮಾತ
ಅರಿತು ನಡೆ, ನಿನಗೆ ಕ್ಷೇಮ.
ಚೌಕ ಚೌಕದ ನಡುವೆ ಖಾಕಿ ಬಟ್ಟೆಯ ಬೆರಳ
ಸನ್ನೆಯಲಿ ಬಿಡು ನಿನ್ನ ವಾಹನಗಳ ;
ಕೆಂಪು-ಹಸುರಿನ ಮುಖದ ದೀಪಗಳ ಕಣ್ಣರಿತು
ಮುಂದೆ ನಡೆ, ಬೇಡ ಚಪಲ.

('ಇದು ನಗರ')

ಸದಾ ಎಚ್ಚರದಿಂದ ನಡೆಯಬೇಕು. ಸಹಜ ಸುಖದ ಬದುಕಿಗೆ ಅವಕಾಶವಿಲ್ಲದ ನಾಗರಿಕತೆಯ ಬದುಕು ವೇಗದ ಗತಿಯಿಂದ ಕೂಡಿದ್ದು; ಗಡಿಬಿಡಿ ತಪ್ಪಿದ್ದಲ್ಲ. ಹೋಟಲಿನಲ್ಲಿ ಊಟ ಮಾಡುವಾಗ,

............ತರಾತುರಿಯಲ್ಲಿ
ಸಾಗಲಿ ರೈಲು,
ಸಲ್ಲದು ಇಲ್ಲಿ ಮನೆಯ ಭೋಜನದ ಸಾವಧಾನದ ಶೈಲಿ
ಬೆನ್ನಿನ ಹಿಂದೆ ಜಮಾಯಿಸಿ ಕಾದಿದ್ದಾರೆ ಜನ.

ಯಾಂತ್ರಿಕ ಬದುಕನ್ನು ಈ ಸಾಲುಗಳು ಬಹಳ ಸಮರ್ಥವಾಗಿ ವ್ಯಕ್ತಪಡಿಸುತ್ತವೆ. ನಾಗರಿಕತೆಯಡಿಯಲ್ಲಿ ವ್ಯಕ್ತಿತ್ವ ನುಚ್ಚುನೂರಾಗುತ್ತಿದೆಯೆಂದು ಕವಿ ಸೂಚಿಸುತ್ತಾರೆ. ಹೋಟೆಲಿನಲ್ಲಿ ಬಿಲ್ಲುತೆತ್ತು ಹೊರಟಾದ ಮೇಲೆ ನಮ್ಮನ್ನು ನಾವೇ ಮರೆತುಬಿಡುತ್ತೇವಂತೆ!

ಎಲ್ಲ ಸರಿಯಾಗಿದೆಯೆ ನಿನ್ನೊಳಗೆ?
ನೋಡಿಕೋ ಒಂದು ಸಲ.
ಏನು, ಹೆಸರೇನು, ನಿನ್ನದು?
ಜೇಬಿನಲ್ಲಿರಬೇಕು ನಿನ್ನ ವಿಸಿಟಿಂಗ್ ಕಾರ್ಡು,
ಅಥವಾ ನೆನೆಸಿಕೋ ನಿನ್ನ ಮನೆಯ ಮುಂದಿನ ಬೋರ್ಡು

('ಹೋಟಲಿನಲ್ಲಿ')

ಎಂದು ಗೇಲಿ ಮಾಡಿದ್ದಾರೆ. ಸಹಜತೆಯಿಂದ ಕೃತಕತೆಗೆ ವಾಲುತ್ತಿರುವುದೇ ನಾಗರಿಕತೆ ಎನ್ನುವಷ್ಟರ ಮಟ್ಟಿಗೆ ಈ ಬದಲಾವಣೆ ಕುರಿತು ಕವಿಗೆ ಗಾಬರಿ. ಸಹಜತೆ ಮರೆಯಾಗುತ್ತಿರುವುದನ್ನು 'ಕೋಳಿ ಕೂಗಿತು' ಕವನದಲ್ಲಿ ಬಹಳ ಸ್ಪಷ್ಟವಾಗಿ ಮೂಡಿಸಿದ್ದಾರೆ.

ಹಳ್ಳಿಗಳಲ್ಲಿ ಬೆಳಗಾದದ್ದನ್ನು ಸೂಚಿಸುವ ಕೋಳಿಯ ಕೂಗು ನಗರದಲ್ಲಿ ಕೇಳಿಸಲೇ ಇಲ್ಲ. ಆದರೆ ಮಾರ್ಕೆಟ್ಟಿನಲ್ಲಿ ಮಾತ್ರ ಬುಟ್ಟಿಯ ತುಂಬ ಕೋಳಿಯ ಮೊಟ್ಟೆ. ಅಲ್ಲೂ ಕೋಳಿಗಳಿವೆ ಎನ್ನಲು ಆಧಾರ. ಆದರೆ ಮನುಷ್ಯನ ಸ್ವಪ್ರಯೋಜನದ ಉದ್ದೇಶದಲ್ಲಿ ಅವುಗಳ ಸ್ಥಿತಿ ಹೇಗಿರಬಹುದು?

ಯಾವುದೋ ಸದ್ದಿರದ ಮೂಲೆಯಲಿ
ಕೊರಳನು ಹಿಸುಕಿ, ಬರಿ ಮೊಟ್ಟೆಯಿಡುವುದ ಮಾತ್ರ
ಕಲಿಸಿದಂತಿದೆ ಅವಕೆ.
ಪಾಪ, ಮಾರ್ಕೆಟ್ಟಿನಲಿ ಬುಟ್ಟಿಯ ತುಂಬ
ಅವುಗಳ ಕರುಳು ಸದ್ದಿರದೆ ಬಿದ್ದಿವೆ.
ಒಂದೊಂದು ಮೊಟ್ಟೆಯ ಒಳಗು ಮಲಗಿವೆ ನೋಡು
ಎಂದೆಂದಿಗೂ ತಲೆಯೆತ್ತಿ ಕೂಗದ ಕೊರಳು.

ಗದ್ದಲ ತುಂಬಿದ ನಗರದಲ್ಲಿ ವಾತಾವರಣ ಕೆಡುವುದನ್ನು ಮೌನ ಸಾಯುವುದನ್ನು ಮಿಲ್ಲಿನ ಸೈರನ್ನಿನ ಪ್ರತಿಮೆಯ ಮೂಲಕ ಸೊಗಸಾಗಿ ಸೂಚಿಸಿದ್ದಾರೆ:

ಬೆಳಗಿನ ಮುಖಕೆ ಕಪ್ಪು ಹೊಗೆಯನು ಬಳಿದು
ಮೌನದ ಕೊರಲಿಗುರುಲನು ಹಾಕಿ
ಜೀವ ವಸೇದಿ ಕೊಲ್ಲುವ ಕೂಗು.

('ಕೋಳಿ ಕೂಗಿತು')

ಬದಲಾಗಿರುವ ಜಗತ್ತಿನ ಪ್ರಸ್ತುತ ಪರಿಸ್ಥಿತಿಯನ್ನು—ಅದರ ಶಿಥಿಲತೆಯೊಂದಿಗೆ—ಸ್ತಬ್ಧವೂ ತಟಸ್ಥವೂ ಆದ ಒಂದು ಕಾರ್ಖಾನೆಯ ಚಿತ್ರದ ಮೂಲಕ ಬಿಚ್ಚಿರುವ ಕವನ, 'ಏನಾಗಿರಬಹುದು ?'

ಸಹಜಕ್ರಿಯೆ ಸತ್ತು ಬಿದ್ದಿದೆ; ಸ್ಮಶಾನ ಮೌನ ಆಳುತ್ತಿದೆ. ನಿರಂತರವೂ ಸನಾತನವೂ ಆದ ಬದುಕು ಹೀಗೆ ಬರಡಾಗಿ ಹೋಗಿದೆಯಲ್ಲ, ಏನಾಗಿರಬಹುದು ? ಎಂದು ಕವಿ ಪ್ರಶ್ನಿಸುತ್ತಾರೆ. ಈ ಕವನದಲ್ಲಿ ಇಂದಿನ ಜಗತ್ತಿನ ಅರ್ಥರಹಿತ ಜಡತೆಯನ್ನು ಕೆಲವು ಚಿತ್ರಗಳಲ್ಲಿ ಬಿಂಬಿಸಿದ್ದಾರೆ. ವಿಕೃತ ಕ್ರಿಯೆ ಮಾತ್ರ ಮುಂದುವರಿದಿದೆ :

ಭೋರೆಂದು ಮೊರೆದಿದೆ ಗಾಳಿ-
ನಟ್ಟು ಬೋಲ್ಟುಗಳಿರದ ಕಿಟಕಿ ಕದಗಳು ಮಾತ್ರ
ಕಟು ವಿಕಟರವದಲ್ಲಿ ರೆಕ್ಕೆ ಬಡಿಯುವ ಚಿತ್ರ !

ಇದೇ ರೀತಿಯಲ್ಲಿ ಬದುಕು ಭಾರವಿಲ್ಲದೆ ಕಳೆಯಲು ಅಗತ್ಯವಾದ ಒಂದು ಅಂತಶ್ಶಕ್ತಿ, ಚೈತನ್ಯದಿಂದ ನಾವು ವಂಚಿತರಾಗಿದ್ದೇವೆಂದು 'ಕುಲುಮೆಯ ಒಳಗೆ ಕಿಡಿಯಿಲ್ಲ' ಕವನದಲ್ಲಿ ಕವಿ ಸಮರ್ಪಕ ಪ್ರತಿಮಾ ವಿಧಾನದಲ್ಲಿ ಹೇಳಿದ್ದಾರೆ; ಜೀವಂತಿಕೆ ಬತ್ತಿದೆ ಎನ್ನುವುದಕ್ಕೆ ಕನ್ನಡಿ ಹಿಡಿದಿದ್ದಾರೆ. ಮತ್ತೊಂದು ಕವನದಲ್ಲಿ,

ಗರಿಗೆದರಿ ನಿಂತ ತೆಂಗಿನತೀರ ರೆಕ್ಕೆ ಮುರಿ-
ದರಚುತಿದೆ ಅಲೆಯ ಹೆಡೆ ಬಡಿತಕ್ಕೆ

('ಮೊರೆ')

ಎಂದು ಚಿತ್ರವೊಂದರ ಮೂಲಕ ಹೆದರಿಕೆ ನಮ್ಮನ್ನು ಪೀಡಿಸುತ್ತಿದೆಯೆನ್ನುವುದನ್ನು ಪ್ರಕಟಿಸಿದ್ದಾರೆ. ಹಾವಿನ ಹೆಡೆಯ ಬಡಿತಕ್ಕೆ ಹೆದರಿ ಹಕ್ಕಿ ರೆಕ್ಕೆ ಮುರಿದರಚುವ ಹೃದಯ ವಿದ್ರಾವಕ ಪರಿಸ್ಥಿತಿಯಲ್ಲಿ ಜಗತ್ತು ಸಿಲುಕಿಕೊಂಡಿದೆ ಎನ್ನುವ ಈ ಪ್ರತಿಮೆ ಕವಿಯ ಪ್ರತಿಭೆಗೆ ದ್ಯೋತಕ.

. . . . . ಯಾವ
ಟೆಲಿಸ್ಕೋಪಿಗೂ ಕಾಣಿಸದು ಈ ಕ್ರಾಂತಿ,
ಮಾಡಲಾರರೆ ಯಾರೂ ಇದಕ್ಕೆ ಹೋಮಶಾಂತಿ ?

ಎಂದು ಜಿ.ಎಸ್.ಎಸ್. ಅವರು ಇಲ್ಲಿ ಲೋಕಕಲ್ಯಾಣದ ತಮ್ಮ ಆಶಯವನ್ನು ತುಂಬ ಕಳಕಳಿಯಿಂದ ವ್ಯಕ್ತಪಡಿಸಿದ್ದಾರೆ.

'ಹಳೇ ಪೇಪರ್ ಖಾಲಿಶೀಶೆ' ಈ ಸಂಕಲನದ ಉತ್ತಮ ಕವನವೆಂದು ನನ್ನ ಅನ್ನಿಸಿಕೆ. ಇಲ್ಲಿ ಸಂಭಾಷಣೆಯ ತಂತ್ರ ಬಳಕೆಯಾಗಿದೆ. ಹಳೆಯದು ಕೊಚ್ಚಿಹೋಗಿ ಹೊಸತನದ

ಅನ್ವಯ ಸಾಧಿಸಬೇಕೆಂಬ ಹಂಬಲದ 'ಸಾತ್ವಿಕ ದನಿ' ಒಂದು. ಹಳೇ ಪೇಪರ್ ಖಾಲಿಶೀಶೆ ಯವನಿಗೆ ಈ ಶುಭ್ರತೆಯು ಮರ್ಜಿ ಏಕೆಂದು ಕೂಗಾಡುವ ಜಡತೆಯ, ಸೋಮಾರಿತನದ 'ಆಸುರೀ ದನಿ' ಮತ್ತೊಂದು. ಈ ಎರಡೂ ಸಂಚಾರೀ ಭಾವಗಳು ಸಾರ್ವತ್ರಿಕವೂ ಸಾರ್ವಕಾಲಿಕವೂ ಆಗಿವೆ. ಸ್ವಚ್ಛತೆಯ ದನಿ ಸ್ಥಾಯಿಯಾದರೆ ಒಳಿತು. ಆದರೆ ಸೋಮಾರಿತನವೇ ಇಂದು ಗೆಲ್ಲುತ್ತಿದೆಯೆಂಬ ವಿಷಾದದೊಂದಿಗೆ ಕವನ ಮುಗಿದಿದೆ.

ಕಾಲಿಟ್ಟೆಡೆ ಖಾಲಿ ಶೀಶೆ
ಮೂಲೆ ತುಂಬ ಹಳೆ ಪೇಪರು

ಸ್ವಚ್ಛದೂರವಾಗಿ ಮಲಿನಮಯವಾಗಿ ಗೆದ್ದಲು ಹಿಡಿದು ಕೂತಿರುವ ಜಗತ್ತನ್ನು ಈ ಸಾಲುಗಳು ವ್ಯಂಜಿಸುತ್ತವೆ.

ಇದನು ಗುಡಿಸಿ ಇದನು ಬಳಿದು
ಕೊಟ್ಟಾದರು ತೊಳೆಯಬೇಕು
ಹಳೆಯ ಹೊಲಸು ಕಸವನು.
ಆಗ ಮಾತ್ರ ಒಪ್ಪವಾಗಿ
ಇಡಬಹುದೋ ಏನೊ ಕಾಣೆ
ನಮ್ಮದಾದ ಮನೆಯನು

ಎನ್ನುವ ಬಯಕೆ ಮೂಡಿದರೂ

'ಹಳೇ ಪೇಪರ್ ಖಾಲಿ ಶೀಶೆ'—
ಇವನಪ್ಪನ ಮನೆಯ ಗಂಟು,
ಅವಕು ಇವಗು ಏನು ನಂಟು?
ಇವನಾವನೊ ಸದಾ ಬಂದು
ಹೀಗೆ ಅರಚಿ ನಿಲ್ಲುವವನು!

ಎಂದು ಮತ್ತೊಂದು ಅಪೇಕ್ಷಣೀಯವಲ್ಲದ ದನಿಯೆದ್ದು ಅದರ ಹುಟ್ಟಡಗಿಸಿಬಿಡುತ್ತದೆ. ಇದು ಸಾಂಕೇತಿಕ ಕವನ. ಜಗದ ನಿರ್ಮಲೀಕರಣದ ಉದ್ದೇಶದಿಂದಲೇ ಆಗಾಗ ಆವಿರ್ಭವಿಸುವ ಸಾತ್ವಿಕ ಶಕ್ತಿಯೇ ಇಲ್ಲಿ 'ಹಳೇ ಪೇಪರ್ ಖಾಲಿಶೀಶೆ'ಯವ. ಧರ್ಮ ಸಂಸ್ಥಾಪನೆಗಾಗಿ ಯುಗಯುಗದಲ್ಲಿ ಸಂಭವಿಸುವನೆಂದು ಹೇಳುವ ದೇವರು ಇದ್ದಾನೋ ಇಲ್ಲವೋ ತಿಳಿಯದು; ಆದರೆ ಮಾನವನಾಗಿಯೇ ಹುಟ್ಟಿ ಆ ಉದ್ದೇಶ ಸಾಧನೆಗೆ ಪ್ರಯತ್ನಿಸಿದ ಮಹನೀಯರು ಆಗಿ ಹೋಗಿದ್ದಾರೆ. ಇಂಥ ಕ್ರಿಸ್ತ, ಗಾಂಧಿ ಮುಂತಾದ ವರಿಗೆ ಒದಗುವ ಗತಿಯನ್ನು 'ಆಸುರೀ ದನಿ'ಯ ಮಾತುಗಳಲ್ಲಿ ಹಿಡಿದಿಟ್ಟಿದ್ದಾರೆ.

ಇವನಿಗೇಕೊ ಇಂಥ ಕರ್ಮ
ಇವನೊಬ್ಬನು ಕಳ್ಳಕೊರಮ
ಕತ್ತು ಹಿಡಿದು ದಬ್ಬಬೇಕು
ಶಿಲುಬೆಗಿಟ್ಟು ಬಡಿಯಬೇಕು

ಸಿಡಿಗುಂಡಿಗೆ ಒಡ್ಡಬೇಕು
ಇವನ ಒಡಕು ಬಾಯನು.
ನಮ್ಮೊಳಗಿನ ಕಸದ ಚಿಂತೆ
ಇವನಿಗೇಕೊ ಕಾಣೆನು !

'ಸಾತ್ವಿಕ' ಶಕ್ತಿ ಮಾತ್ರ ಕಸದ ನಿರ್ಮೂಲನಕ್ಕಾಗಿ ಸದಾ ಮಹಾತ್ಮನ ಬರವನ್ನು ನಿರೀಕ್ಷಿಸುತ್ತಲೇ ಇರುತ್ತದೆ :

'ಛೆ ಛೆ ಛೆ ಬರಲಿಲ್ಲವೆ
ಕಾಯಬೇಕೆ ಹೀಗೆಯೇ ?'

ಇದು ಕೇವಲ ಪ್ರತೀಕ್ಷೆಯಾಗಿಯೇ ಉಳಿಯುವುದು ಮಾರ್ಮಿಕ ದುರಂತವಾಗಿದೆ. ಏಕೆಂದರೆ ಸುಖಲಾಲಸೆಗಳ ಸಮಾಧಾನದ ಮುಸುಕಿನಡಿಯಲ್ಲಿ ಚೈತನ್ಯ ಮುಲುಗುತ್ತ ಬಿದ್ದಿದ್ದರೂ ಲೆಕ್ಕಿಸದೆ ಬದುಕನ್ನು ವೈಭವಿಸಿಕೊಂಡು ಮೆರೆಯುವ ಸೋಮಾರೀ ಶಕ್ತಿಗೇ ಅಂತಿಮ ವಿಜಯ! ಹಳೇ ಪೇಪರ್ ಖಾಲಿಶೀಶೆಯವನು ಹೊರಟುಹೋದ ಮೇಲೂ ಅದಕ್ಕೆ ಸಂಪೂರ್ಣ ಸಮಾಧಾನವಿಲ್ಲ.

ಸದ್ಯ, ತೊಲಗಿ ಹೋದನಲ್ಲ
ಆಚೆ ಕಡೆಯ ಬೀದಿಗೆ.
ಇವತ್ತಲ್ಲ ನಾಳೆದಿನ
ಮತ್ತೆ ಬಂದರೇನು ಗತಿ
ಈಚೆ ಕಡೆಯ ಬೀದಿಗೆ.

ಹೀಗೆ ಕ್ರಿಸ್ತ ಗಾಂಧಿಯರಂಥ ಮಹಾತ್ಮರ ಪ್ರಯತ್ನವೂ ಬೂದಿಯಾಯಿತೆಂಬ ನೋವು ಮಾತ್ರ ಕವಿಗೆ ಮಿಗಸಲು. ಈ ಸಂಕಲನದ ತುಂಬ ಇದು ಹರಡಿಕೊಂಡಿದೆ. ಆದ್ದರಿಂದ ಈ ಕವನವನ್ನು 'ಅನಾವರಣ'ದ ಪ್ರಾತಿನಿಧಿಕ ಕವನವೆಂದರೂ ಒಂದು ದೃಷ್ಟಿಯಲ್ಲಿ ಸರಿ.

ಹೀಗೆ ಬದುಕಿನ ಅಧಃಪತನವನ್ನು ಮನಗಂಡ ಕವಿ ನಿರಾಶಾವಾದಿಯೇನೂ ಅಲ್ಲ. ಕಳ್ಳತನದ ಮುಖಮರೆಯ ಈ ಗೋಜಲು ಸಾಕು, ಇನ್ನಾದರೂ ಪ್ರಾಮಾಣಿಕನಾಗ ಎನ್ನುವ ಸೂಚನೆಯನ್ನು ಕೊಟ್ಟು, ಗೆಲುವು ಸಾಧ್ಯವೆಂದು ಭರವಸೆ ನೀಡುತ್ತಾರೆ.

ಬಾ, ಪಾಪೀ ಬಾ ; ಕೈ ಕಟ್ಟಿ ನಿಂತುಕೋ
ಈ ಕಟಕಟೆಯೊಳಗೆ—
ಬೊಗಳು ಇದುವರೆಗು ಮಾಡಿದ್ದೆಲ್ಲವನು ಬಾಯ್ಬಿಟ್ಟು ;
ಇಲ್ಲಿ ಗೆಲುವುದು ದಿಟವೆ, ಸಟೆ ಅಲ್ಲ,
ನೆನಪಿರಲಿ ನಿನಗೆ.

ಒಳಗೆ ಹೊರಗೆ ಸಾಮ್ಯವಿಲ್ಲದೆ ಮಿಡುಕಾಡಿ, ಮುಖವಾಡದೊಳಗೆ ನಿಜದ ಮುಖವನು ಕಂಡು ಕಣ್ಣೀರ ಸುರಿಸಿ, ಬಯಲಾದೀತೆಂಬ ಹೆದರಿಕೆಯಿಂದ ಹೊದ್ದು ಮಲಗಿ, ಕಣಿವೆ ಕಗ್ಗಾಡುಗುಹೆಗಳಲ್ಲಿ ತಲೆಮರೆಸಿಕೊಂಡ ಪ್ರಚ್ಛನ್ನತೆಗೆ ವಿದಾಯ ಹೇಳಬೇಕೆನ್ನುತ್ತಾರೆ.

ಏನೇನಿದೆಯೋ ಸುಮ್ಮನೆ ವರದಿ ಒಪ್ಪಿಸಿ ವೇದನೆಗಳಿಂದ ಬಿಡುಗಡೆ ಪಡೆದು ಎದೆಯನ್ನು ಹಗುರ ಮಾಡಿಕೊಂಡು ಹೊಸ ಹುಟ್ಟನ್ನು ಪಡೆಯಲು ಕಾತರದಿಂದ ಸಲಹೆ ಮಾಡುತ್ತಾರೆ.

ಅಳಬೇಡ, ಅಳಬೇಡವೋ ತಮ್ಮ,
ಅಳಬೇಡವೋ —
ಇಷ್ಟು ದಿನ ಸುತ್ತಲೂ ಮುತ್ತಿದ್ದ ಪ್ರಶ್ನೆಗಳಿಗುತ್ತರ ಕೊಡದೆ
ಉಪವಾಸ ಸಾಯಿಸಿದೆ,
ಈಗಲೋ, ಹಸಿದ ತೋಳಗಳಾಗಿ ಕಿತ್ತು ತಿನ್ನುತ್ತಲಿವೆ ಉತ್ತರವ;
ಚಾವಟಿಯೆಸೆದು ಬರಿಗೈಯಲ್ಲಿ ನಿಂತಿರುವೆ ಮುಚ್ಚುಮರೆಯೆಲ್ಲವನು ಬಿಚ್ಚಿ ಎಸೆದು.
ಕಡೆಗೆ ಬಲು ದಿನಕ್ಕೆ ಬಂದಿದೆ ನಿನಗೆ
ನೀನಾಗಿಯೇ ಬಂದು ಒಪ್ಪಿಸಿಕೊಳ್ಳುವ
ಶುಭ ಘಳಿಗೆ.
ಹೇಳಿಬಿಡು ಎಲ್ಲವನು, ಹೇಳಿಬಿಡು ಮಗೂ,
'ಶುಭಮಸ್ತು' ನಿನಗೆ.

('ವಿಚಾರಣೆ')

—ಸಾಂತ್ವನದ ಈ ಧಾಟಿ ಜನರ ಏಳಿಗೆಯನ್ನು ಬಯಸುವ ಕವಿಗೆ ಅಗತ್ಯ.

೩

ಕಾಲ ಹದಗೆಟ್ಟ ವಿಚಾರವನ್ನು ಪ್ರಕೃತಿಗೂ ಅನ್ವಯಿಸಿರುವ ಕವನಗಳು ಎರಡನೆಯ ಬಗೆಯವು. ಈ ಕವನಗಳಲ್ಲಿ ಇತ್ತೀಚೆಗೆ ಅವ್ಯವಸ್ಥೆ ಹೆಚ್ಚುತ್ತಿದೆಯೆನ್ನುವ ಕೊರಗು ಹಣಿಕಿದೆ. ಆದರ್ಶದ ಮೌಲ್ಯಗಳು, ರಸಿಕತೆಯ ಭಾವನೆಗಳು, ತನಿಯಾದ ಸೌಜನ್ಯದ ಅಂಶಗಳು ಮರೆಯಾಗುತ್ತಿರುವುದನ್ನು ವಿಷಾದದ ಛಾಯೆ ಬೆರೆತ ದನಿಯಲ್ಲಿ ಅಭಿವ್ಯಕ್ತಿಸಲಾಗಿದೆ.

ಪ್ರಕೃತಿ ಕಾಲಕಾಲಕ್ಕೆ ತಕ್ಕಂತೆ ಬದಲಾಗುತ್ತ ಆ ಮೂಲಕ ಮನುಷ್ಯನಿಗೂ ಅನುಕೂಲಗಳನ್ನು ಕಲ್ಪಿಸುವುದು ಸಾಮಾನ್ಯವಾದ ಚಕ್ರೀಯ ಪ್ರಕ್ರಿಯೆ. ಆದರೆ ಈಗ ಅದಕ್ಕೂ ಬರಗಾಲ ಬಂದ ಹಾಗಿದೆ! ಅದೂ ತನ್ನ ಹಾದಿ ತಪ್ಪಿದಂತಿದೆಯಲ್ಲ ಎಂದು ಸಂದೇಹವಾಗುತ್ತದೆ.

ಕ್ಯೂ ನಿಂತು ಚೈತ್ರನಿಗಾಗಿ ಕಾಯುತ್ತಿದ್ದೇವೆ ನಾವೆಲ್ಲ
ಆದರೆ,
. . . . . ಇವನೊಬ್ಬ ಮುನಿಸಿಪಲ್ ಕಂಟ್ರಾಕ್ಟರು;
ತನಿಖೆ ಮಾಡುವರಿಲ್ಲ, ಇವನನ್ನು ಕೇಳುವರಿಲ್ಲ ವರದಿ.
ಅಲ್ಲರ್ಧ ಇಲ್ಲರ್ಧ ಇವನ ಕೆಲಸ. ನಮ್ಮ ಸರದಿ ಯಾವಾಗಲೋ ಗೊತ್ತಿಲ್ಲ.
ಸಾಕಪ್ಪ ಸಾಕು; ಕೊರೆವ ಕತ್ತರಿಗಾಳಿ ಹತ್ತರಿ ಹೊಡೆದು,

ಇದ್ದ ತರಗು-ಬರಗನು ತೆಗೆದು ಬತ್ತಲೆ ಮಾಡಿ,
ಥಳಿಯ ಪಾಲಿಷ್ ಹಾಕಿ, ಹೀಗೆ ಬಿರುಬಿಸಿಲಲ್ಲಿ
ನಿಲಿಸಬಹುದೇ ಇವನು ನಮ್ಮ ಮರ್ಯಾದೆಯನು ?

('ಕಂಪ್ಲೇಂಟು')

ಹೆಚ್ಚುತ್ತಿರುವ ಅವ್ಯವಸ್ಥೆಗೆ ಬೇಸರಿಸಿದ ಕವಿ ಅರ್ಜಿ ಸಲ್ಲಿಸಿ ಎಷ್ಟೋ ದಿನಗಳಾದರೂ ಬಾರದ ಚೈತ್ರನ ಆಲಸ್ಯಕ್ಕೆ ಹೆಸರಾದ ಸಂಸ್ಥೆ ಹೀಗೆ ಕೆಡಬಾರದೆಂದು ಪ್ರತಿಕ್ರಿಯಿಸಿದ್ದಾರೆ. ಜನಾಂಗದ ಅವನತಿ ಕವಿಗೆ ನೋವನ್ನುಂಟುಮಾಡಿದೆ.

'ಬಾರಯ್ಯ ಬೆಳುದಿಂಗಳೇ
ನಮ್ಮೂರ ಹಾಲಿನಂಥ ಬೆಳುದಿಂಗಳೇ'

ಎಂದು ಒಂದು ಜಾನಪದ ಗೀತೆಯ ಪ್ರಾರಂಭವನ್ನು ಉದ್ಧರಿಸಿ ಇಂದು,

ಅವತ್ತಿನ ಹಾಲೂ ಇಲ್ಲ, ಅವತ್ತಿನ ಬೆಳ್ದಿಂಗಳೂ ಇಲ್ಲ,
ಉಪಮಾನ ಉಪಮೇಯವೆರಡಕ್ಕೂ ಏನೆಂಥ ದುಃಸ್ಥಿತಿ !

ಏಕೆಂದರೆ,

ಬೆಳ್ದಿಂಗಳೂ ಕೂಡ ನೀರಾಗಿ ಹೋಗಿದೆಯಯ್ಯ ಇತ್ತೀಚೆಗೆ.

('ಬಾರಯ್ಯ ಬೆಳುದಿಂಗಳೇ')

ಈ ಗೀತೆ ಈಗ ಕೇವಲ ಧ್ವನಿಮುದ್ರಿಕೆಯಲ್ಲಿ ದಾಖಲೆಯಾಗಿ ಉಳಿದಿದೆಯಷ್ಟೆ ಎಂದು ಕವಿಯ ನೋವು.

ಹಿಂದಿನ ತಲೆಮಾರುಗಳ ರಸಿಕತೆ ಕಳೆದು ಹೋಗಿ ಮನುಷ್ಯನ ಮನೋಧರ್ಮ ವ್ಯತ್ಯಸ್ತವಾಗಿರುವುದರಿಂದ ಕಾಲಕ್ಕೆ ತಕ್ಕಂತೆ ತಾಳ ಹಾಕಬೇಕಾಗಿರುವುದು ಅನಿವಾರ್ಯ. ಸ್ವಸಹಜ ಕಲೆಗೆ ಪ್ರತಿನಿಧಿಯಂಥ ಕೋಗಿಲೆಗೂ ಕವಿ 'ಕಿವಿ ಮಾತು' ಹೇಳುತ್ತಾರೆ :

ಹಳೆಗಾಲದ ವಸ್ತು ನೀನು,
ನೀನು ಹೇಗೆ ಕೂಗಲೇನು ?
ನಿನ್ನ ದನಿಯೊ ಅದೇ ರಾಗ,
ವ್ಯತ್ಯಾಸವೆ ಇಲ್ಲವಲ್ಲೊ !
ಹೊಸಕಾಲಕ್ಕೆ ತಕ್ಕ ಹಾಗೆ
ರೈಲು-ಕಾರು-ಮಿಲ್ಲು ಹೀಗೆ
ಕೂಗುವುದನು ಕಲಿಯಲಿಲ್ಲ
ಹೊಸ ಕವಿಗಳ ಸೆಳೆಯಲಿಲ್ಲ.
ತಡವಾದರು ಚಿಂತೆಯಿಲ್ಲ
ಈಗಾದರು ನೋಡಿ ಕಲಿ
ಏನಾದರು ಆಗಲಿ

ಈ ಉಪದೇಶದ ಹಿನ್ನೆಲೆಯಲ್ಲಿ ಸಹಜತೆ ಕೃತ್ರಕತೆಯನ್ನು ಅಳವಡಿಸಿಕೊಳ್ಳಬೇಕಾಗಿ

ಬಂದಿರುವ ದುಸ್ಥಿತಿಯ ಅರಿವು ಇದೆ. ಗಾಯನ ಕೋಗಿಲೆಯ ಸ್ವಪ್ರತಿಭೆಯಿರಬಹುದು. ಸುಮ್ಮನೆ ಕೂತರೆ ಅದಕ್ಕೆ ಬೆಲೆಯಿಲ್ಲ. ಮೇಲೆ ಬಿದ್ದು ಚುನಾವಣೆಯ ಕಣ ಹತ್ತ ಬೇಕಾಗಿರುವ ದಾರುಣ ಪರಿಸ್ಥಿತಿ ಬಂದಿದೆಯೆನ್ನುವ ವ್ಯಂಗ್ಯದ ಮೂಲಕ,

ಪಾಪ, ನಿನಗೆ ತಿಳಿಯಲಿಲ್ಲ,
ಪಕ್ಷಿ ಮಹಾ ಸಂಘದಲ್ಲಿ
ಚುನಾವಣೆಯ ಗಡಿಬಿಡಿ,
ನೀನು ಕೂಡ ಮೆಂಬರಾಗಿ
ಏನಾದರೂ ಜಾಗ ಹಿಡಿ
ಹಾಗಾದರೆ ನಿನಗೆ ಸ್ಥಾನ
ಅದಕೆ ತಕ್ಕ ಹಾಗೆ ಮಾನ

ಎಂದು ಸಲಹೆ ಮಾಡಿ,

ನೂರು ಬಗೆಯ ಅನುಭವದಲಿ
ಕಲಿಯಬೇಕು ಬುದ್ಧಿಯ.

('ಕೋಗಿಲೆಗೆ ಉಪದೇಶ')

ಎಂದು ಮುಕ್ತಾಯ ಹಾಡಿದ್ದಾರೆ.

೪

ಯುದ್ಧ ಗೀತೆಗಳು ಮೂರನೆಯ ಬಗೆ. 'ಕರೆ', 'ಸತ್ಕಾರ', 'ಕೃತಜ್ಞತೆಯ ವಂದನೆ' ಮತ್ತು 'ಒರೆಗಲ್ಲು'—ಈ ನಾಲ್ಕು ಕವನಗಳು ಈ ಸಾಲಿಗೆ ಸೇರುತ್ತವೆ. ಯುದ್ಧಭೂಮಿಯಿಂದ ಬಹುದೂರದಲ್ಲಿ ರೇಡಿಯೋ ಮುಂದೆ ಕುಳಿತು ನಮ್ಮವರ ರಣವಿಕ್ರಮದ ವಾರ್ತೆಗಳನ್ನು ಕೇಳಿ ನಮಗಾಗಿ ರಕ್ತಲಿಪಿಯನು ಬರೆದು ಗಡಿಕಾಯ್ವ ಸೋದರರಿಗೆ ಕವಿ 'ಕೃತಜ್ಞತೆಯ ವಂದನೆ' ಅರ್ಪಿಸಿರುವ ಕವನದಲ್ಲಿ ವಿಶೇಷವೇನೂ ಇಲ್ಲ.

ಮನೆಯಾಚೆಗೇ ನಡೆದ ಹಳದಿಗಣ್ಣಿನ ಹೊಂಚಾಟಿಕೆ ಗೊತ್ತಿಲ್ಲದೆ, ಬಿಟ್ಟಿ ಬಂದುದನು ಪಟ್ಟಾಗಿ ಹೊಡೆದು ಗುಟ್ಟಾಗಿ ಮಲಗಿದವರಿಗೆ ಯುದ್ಧ ಹೊಸಿಲ ಬಳಿಗೇ ಬಂದಾಗ ಸನ್ನದ್ಧರಾಗಲು ಕವಿ 'ಕರೆ' ಕೊಟ್ಟಿದ್ದಾರೆ.

ಒಂದು ಸಲವಾದರೂ ಅನುಭವಿಸು, ಈ ಮಣ್ಣು
ನನ್ನದು-ನನಗೆ ಜೀವ ಕೊಟ್ಟದ್ದು-ಎಂದು.
ಈ ಭಾವವಿಲ್ಲದ ಬದುಕೊಂದು ಬದುಕಲ್ಲ,
ಇದರಲ್ಲೆ ಸಾಯುವುದು ಪುಣ್ಯವೆಂದು.

('ಕರೆ')

ಈ ಕವನದಲ್ಲೂ ಕೂಡ ಸಾಮಾನ್ಯವಾಗಿ ಎಲ್ಲ ಯುದ್ಧ ಗೀತೆಗಳಲ್ಲೂ ಕಂಡುಬರುವ ಕ್ಲೀಷೆಯ ಮಾತುಗಳಷ್ಟೇ ಇವೆ.

ಪ್ರೀತಿ ವಿಶ್ವಾಸಗಳಲ್ಲೇ ಬಹಳ ಶ್ರದ್ಧೆಯಿಟ್ಟು ಬಂದವರನ್ನೆಲ್ಲ ನಸುನಗೆಯಿಂದ ಸ್ವಾಗತಿಸುವ ನಮ್ಮ ಜನ ಮಕ್ಕಳಿಗೆ ಅದೇ ಹಳೆಯ ಶಾಂತಿ ಮಂತ್ರವನ್ನೇ ಪಾಠ ಹೇಳುತ್ತಿದ್ದಾರೆ. ಆಗ ಶೀತಲವಿದ್ಯೆಯ ಶತ್ರು ಕಾಮಾಲೆ ಕಾಲಸು ತಂದು ನೆಟ್ಟಗೇ ನುಗ್ಗಿ ಎಚ್ಚರಿಸಿದ್ದಾನೆ. ಇದಕ್ಕಾಗಿ ಅವನಿಗೆ ವಂದನೆ ಸಲ್ಲಿಸಿದ ಕವಿ ನಾವು ಹೊಸತನ ವನ್ನೂ ಅಳವಡಿಸಿಕೊಂಡು ನಿಮಗೆ ಸರಿಯಾದ ಸಿಡಿಗುಂಡಿನ ಉತ್ತರ ಕೊಡಲು ಬಲ್ಲೆವೆಂದು ಅವನಿಗೆ ದಿಟ್ಟತನದಿಂದ ಜವಾಬು ಕೊಟ್ಟಿರುವ 'ಸತ್ಕಾರ' ಕವನದಲ್ಲೂ ಅಂಥ ಹೊಸ ವಿಚಾರ ಇಲ್ಲ. ಆದರೆ 'ಒರೆಗಲ್ಲು' ಅರ್ಥಪೂರ್ಣವಾದುದು ; ಈ ಸಂಕಲ ನದ ಮತ್ತೊಂದು ಉತ್ತಮ ಕವನ.

ಲಗ್ಗೆ ನುಗ್ಗುವ ಸಮಯ ಬಂದಿದೆ
ಏಳಿ, ಮಸೆಯಿರೊ ಕತ್ತಿಯ
ಗಂಡುಗಲಿಗಳ ದಂಡು ದಾಳಿಗೆ
ಹೊಡೆಯಿರೋ ರಣ ಭೇರಿಯ !

—ಎಂದು ಭಾವಪರವಶನಾಗಿ ಆವೇಶ ಉತ್ಸಾಹಗಳಿಂದ ಹಾಡುವ ಕವಿಯನ್ನು ಮಗ್ಗುಲಿಗೆ ಕರೆದು ಕೂರಿಸಿಕೊಂಡು ಕಾಫಿ ಕೊಟ್ಟು ಸಮಾಧಾನಪಡಿಸಿದ ಹಳೆಯ ಒರೆ ಗಲ್ಲೊಂದು ವಿವೇಕದಿಂದ ಯೋಚಿಸಲು ಸಲಹೆ ಕೊಡುತ್ತದೆ.

ಕತ್ತಿ, ಕಠಾರಿ, ಖಡ್ಗ, ಬಲ್ಲೆಗಳೆಲ್ಲಾ ಈಗ ಮ್ಯೂಸಿಯಮ್ಮಿನ ವಸ್ತುಗಳಷ್ಟೆ ! ಬಾಡಿಗೆಗೆ ಪಡೆದು ತುಕ್ಕಿಲ್ಲವನು ಉಜ್ಜಿ ಮಸೆದು ಮೆರವಣಿಗೆಯಲ್ಲಿ ಹೊತ್ತು ಹೊರಟರೆ ಬೀದಿಯ ಜನ ನಕ್ಕಾರು ! ಬಂದೂಕು ಹಿಡಿಯುವುದು ಲೇಸು. ಆದರೆ ಅದಕ್ಕೂ ಬೇಕು ಲೈಸೆನ್ಸು ! ಬಂದೂಕು ಹಿಡಿದು ಹೊರಟರೆ ಕಾನೂನು ಇವನನ್ನು ನಂಬಿ ಹಿಂಬಾಲಿಸಿದ ಬಡಪಾಯಿಗಳ ಹೊಟ್ಟೆಗೆ ಕಲ್ಲು ಹಾಕುತ್ತದೆ (ಅರ್ಥಾತ್ ಶಿಕ್ಷಿಸುತ್ತದೆ). ಆದ್ದರಿಂದ ಶಸ್ತ್ರಯುದ್ಧ ಈಗ ಸಲ್ಲದು ; ಆವೇಶಕ್ಕಿಂತ ಪ್ರಮುಖವಾಗಿ ವಿವೇಕವನ್ನು ಅವಲಂಬಿಸಬೇಕು. ಅಷ್ಟೇ ಹೊರತು ಯುದ್ಧಕ್ಕೆ ಇದು ಅಕಾಲವೆಂದೇನೂ ಅಲ್ಲ. ಲಗ್ಗೆ ನುಗ್ಗುವ ಮನಸು ಅವಶ್ಯಕ. ಏಕೆಂದರೆ ಮುಗಿಯದ ಹೊಲಸು ಕಿತ್ತಷ್ಟೂ ಮತ್ತಷ್ಟು ಬೆಳೆಯುತ್ತಲೇ ಇದೆ. ಈ ಹೊಲಸನ್ನು ಜಿ.ಎಸ್.ಎಸ್. ಅವರು ಬಹಳ ಶಕ್ತಿಪೂರ್ಣ ವಾಗಿ ಚೌಕಟ್ಟಿನಲ್ಲಿ ಹಿಡಿದಿದ್ದಾರೆ :

ನೂರಾರು ಹಾಲುಬಿಳಿಕೊರಳಿನ ಸುತ್ತ ಕಂಸನ ಬೆರಳಿ_
ನೊತ್ತುಗಳ ತೋರಿಸಲೆ ?
ನಕಲಿ ಪಾರ್ಥರಿಗಾಗಿ ಏಸೊ ಜನ ಏಕಲವ್ಯರ ಬೆರಳ
ಕತ್ತರಿಸುವಾಚಾರ್ಯ ತಂತ್ರಗಳ ಗರುಡಿಗಳ ತೋರಿಸಲೆ ?
. . . . . . . . .
ಇದ್ದ ಬೆಳಕನ್ನೆಲ್ಲ ಬಚ್ಚಿಟ್ಟು, ಸುತ್ತ ಮಂಡಲ ಹಾಕಿ
ಮಲಗಿರುವ ಫಣಿಪತಿಯ ಹುತ್ತಗಳ ತೋರಿಸಲೆ ?

> ಹುಲ್ಲು ತುರುಕಿದ ಕರುವಿನಾಕಾರಗಳ ತೋರಿ ಕೆಚ್ಚಲ ಕರಿವ,
> ನಿಪುಣರನು ತೋರಿಸಲೆ?

ಆದ್ದರಿಂದ ಈ ಎಲ್ಲ ಸೈನ್ಯ ವಾಪಸಾಗಬೇಕಿಲ್ಲ. ಆದರೆ ಯುದ್ಧ ವಿಧಾನ ಮತ್ತು ಸಾಧನ ಸಲಕರಣೆಗಳನ್ನು ಮಾತ್ರ ಬದಲಾಯಿಸಬೇಕಾಗಿದೆ.

> ಕತ್ತಿ ಖಡ್ಗಗಳೇಕೆ? ಬೇಕಾದುದೀಗ ನಿಯತ್ತು
> ಹಾಗೆಯೇ ತಾಕತ್ತು.

ಹೀಗೆ ಈ ಹೊಲಸನ್ನು ಒಡಿದೋಡಿಸಲು ಹಳೆಯ ಮಾರ್ಗದ ಅಸಾಧ್ಯತೆಯ ಜೊತೆಯಲ್ಲೆ ಹೊಸಬಗೆಯ ಕ್ರಾಂತಿಯ ನಿರ್ದೇಶನವಿರುವುದು ಈ ಕವನದ ವಿಶಿಷ್ಟತೆ ಮತ್ತು ಯಶಸ್ಸು.

೫

ಚಮತ್ಕಾರದಿಂದ ಕೂಡಿದ ಸೊಗಸಾದ ಕಲ್ಪನೆ, ಆಕರ್ಷಕ ಚಿತ್ರಕಶಕ್ತಿ, ಹಾಸ್ಯ ಧೋರಣೆ, ಕವಿ ಕಾವ್ಯಗಳ ಸಂಬಂಧ ಮುಂತಾದ ವಿವಿಧ ವಿಷಯಗಳನ್ನು ಕುರಿತ ಸಂಕೀರ್ಣ ಕವನಗಳು ನಾಲ್ಕನೆಯ ರೀತಿಯವು.

ಶಿವರುದ್ರಪ್ಪನವರ ಕಾವ್ಯದಲ್ಲಿ ಅಪೂರ್ವ ಚಿತ್ರಕಶಕ್ತಿ ಇದೆ. 'ಸಪಿನುಡಿಯ ಚಿತ್ತಾರ'ಗಳ ಸುಗ್ಗಿಯೇ ದೊರೆಯುತ್ತದೆ. ಬೇರೆ ಸಂಕಲನಗಳಿಂದ ಕೆಲವು ಉದಾಹರಣೆಗಳನ್ನು ನೋಡಬಹುದು:

'ಯಾರು ಕೊಟ್ಟರೋ ಬಾನಿಗೊಂದು ಬಂಗಾರದ ಮೆಡಲು', 'ನಿರ್ಭಾವ ನೀಲಿಯ ನಡುವೆ ಉರಿಯುವ ಕಣ್ಣು' ಎಂದು ಸೂರ್ಯನಿಗೆ ಹೇಳಿದ ಕವಿ ಇಂದಿನ ವಿಜ್ಞಾನ ಯುಗದಲ್ಲಿ ಚಂದ್ರ 'ಒಂದು ಸವೆದ ಖೋಟಾ ನಾಣ್ಯ'ವೆಂದೂ 'ಕತ್ತಲಿನ ತಿಪ್ಪೆಯ ರಾಶಿಯಂಚಿನಲ್ಲಿ ತಿಂದೆಸೆದ ಮಾವಿನ ವಾಟೆ'ಯೆಂದೂ ನಗೆಯಾಡಿದ್ದಾರೆ. 'ಚಿಕ್ಕೆ ಚೆಲ್ಲಾಪಿಲ್ಲಿ; ಕೋಳಿ ಕೆದರಿದ ಕಾಳು'ಗಳೆಂದು ನಕ್ಷತ್ರಗಳನ್ನು ಅನನ್ಯವಾಗಿ ಕರೆದಿದ್ದಾರೆ.

ಈ ಸಂಕಲನದಲ್ಲೂ ಈ ರೀತಿಯ 'ಚಿತ್ರ ನಿರ್ಮಾಣ ಸಾಮರ್ಥ್ಯ' ಅಲ್ಲಲ್ಲಿ ಕಂಡು ಬರುತ್ತದೆ. ಕೆಲವಂತೂ ಮತ್ತೆ ಮತ್ತೆ ಮೆಲುಕುಹಾಕಬಹುದಾದಂಥವು ಸಿಗುತ್ತವೆ.

ಐ. ಎ. ರಿಚರ್ಡ್ಸ್ ಪ್ರತಿಭೆಯನ್ನು ಆರು ಬಗೆಗಳಲ್ಲಿ ವ್ಯಾಖ್ಯಾನಿಸುವಾಗ ಈ ರೀತಿಯ 'ಸಂಘಟನಾ ಮೂಲವಾದ ಮಾಂತ್ರಿಕ ಶಕ್ತಿ'ಯನ್ನು ಕೂಡ ಒಂದನ್ನಾಗಿ ಹೇಳಿದ್ದಾನೆ. ಹಾಗೆಯೇ ಸ್ಟೀಫನ್ ಸ್ಪೆಂಡರ್, 'Imagination is nothing but the exercise of memory' (ಪ್ರತಿಭೆಯೆಂದರೆ ಸ್ಮರಣಾನುಭವಗಳ ಸಂಘಟನೆಯಲ್ಲದೆ ಬೇರೆಯಲ್ಲ) ಎಂದು ಅಭಿಪ್ರಾಯಿಸಿದ್ದಾನೆ.

ಜಿ.ಎಸ್.ಎಸ್ ಅವರು ಹಾಸ್ಯಧಾಟಿಯಲ್ಲಿ ಗೊರಕೆಯನ್ನು ಹೀಗೆ ಕಂಡಿದ್ದಾರೆ:

ಇರುಳು ಮೌನದ ಕೊರಡ ಕೊರೆಯುವ
ಇವರ ಗೊರಕೆಯ ಗರಗಸ

ಕವಿ ಎಲ್ಲೋ ಎಂದೋ ಗರಗಸದಿಂದ ಕೊರಡು ಕೊರೆಯುವುದನ್ನು ಕಂಡಿದ್ದರು. ಇರುಳಿನಲ್ಲಿ ಅದೇ ರೀತಿಯ ಏರಿಳಿತಗಳ ಗೊರಕೆಯ ಶಬ್ದ ಕೇಳಿಸಿದಾಗ ಅದು ಮೌನದ ಕೊರಡನ್ನು ಕೊರೆಯುತ್ತಿರುವಂತೆ ಥಟ್ಟನೆ ಅನ್ನಿಸಿತು. ಪರಿಣಾಮವಾಗಿ ಎರಡಕ್ಕೂ ಗಂಟು ಹಾಕಿದರು! ಇದನ್ನೇ 'ಪ್ರತಿಭೆಯ ವಿಲಕ್ಷಣ ಪೌರೋಹಿತ್ಯ' ಎನ್ನುತ್ತಾರೆ. ಈ ಗೊರಕೆಯ 'ಕಸಿವಿಸಿ ಯಾತನೆ'ಯನ್ನು ಮತ್ತಷ್ಟು ಹೋಲಿಕೆಗಳಿಂದ ಆಕರ್ಷಣೀಯವಾಗಿ ಅಭಿನೀತವಾಗಿ ವಿವರಿಸಿದ್ದಾರೆ:

ಗಾನದೇವಿಯ ಶಿಲುಬೆಗೇರಿಸ-
ಲವಳು ನರಳುವ ದನಿಗಳೋ,
ಜಗದಪಸ್ವರಗಳನು ಭಟ್ಟಿಯ-
ನಿಳಿಪ ಗಾಣದ ಮೊರೆತವೋ,
. . . . . . . . .
ಏನು ಬಣ್ಣಿಸಲಯ್ಯ ಉಪಮಾ-
ತೀತವಾದೀ ಗಾನವ,
ಇಂಥ ಗೊರಕೆಯ ನಕ್ರಪೀಡನೆ-
ಯಿಂದ ಬಿಡಿಸೋ ಕೇಶವ.

('ಗೊರಕೆ')

ಈ ಕೊನೆಯ ಸಾಲುಗಳನ್ನು ಓದಿದಾಗ ಕಿರುನಗೆಯೊಂದು ಸುಳಿದು ಹೋಗುತ್ತದೆ. 'ನಾಯಿಗಳಿವೆ ಎಚ್ಚರಿಕೆ' ಕವನದ ಹಾಸ್ಯಧೋರಣೆಯನ್ನು ನೋಡಬೇಕು. ಮನೆಯ ಮುಂದೆ 'ನಾಯಿಗಳಿವೆ ಎಚ್ಚರಿಕೆ' ಎಂದಿದ್ದ ಹಲಗೆಯನ್ನು ನೋಡಿದ ಕವಿ,

ನಿಜಕೂ ದೊಡ್ಡವರಿಂಥ ಜನ.
ನಾಯಿಗಳಿರಬಹುದೆಲ್ಲರ ಮನೆಯೊಳು,
ಹೇಳಿಕೊಳ್ಳುವರು ಎಷ್ಟು ಜನ?

ಎಂದು ಅವರ 'ಪ್ರಾಮಾಣಿಕತೆ'ಯನ್ನು ಹೊಗಳಿ ಅಪರೋಕ್ಷವಾಗಿ ಗೇಲಿ ಮಾಡಿದ್ದಾರೆ.

'ಕೆಲವೆಡೆಗಳಲ್ಲಿ ಅವರ ಕಲ್ಪನೆ ನವೀನವಾಗಿದೆ, ಸೂಕ್ಷ್ಮವಾಗಿದೆ' (ರಂ. ಶ್ರೀ. ಮುಗಳಿ) ಇದಕ್ಕೆ 'ನನ್ನ ಛತ್ರಿ' ಕವನ ಒಳ್ಳೆಯ ಉದಾಹರಣೆ.

ಕವಿಯ ಛತ್ರಿ ಪ್ರಶ್ನಾರ್ಥಕ ಚಿಹ್ನೆಯ ಹಾಗೆ ಇದೆಯಂತೆ (ಕೊಡೆಯ ಹಿಡಿಯ ಆಕಾರವನ್ನು ನೆನೆಸಿಕೊಳ್ಳಿ)

. . . . . ಈ ಪ್ರಶ್ನೆಯನು
ಹಿಡಿದು ನನ್ನ ದಾರಿಯ ನಾನು ತುಳಿಯದ ದಿನವೆ
ಇಲ್ಲವೆಂದರು ಸರಿಯೆ. ಪ್ರಶ್ನೆಯಿಲ್ಲದ ಬದುಕೊಂದು
ಬದುಕೆ? ನನಗಿಲ್ಲ ಪೂರ್ಣವಿರಾಮ, ನನ್ನರಸಿ

ನಡೆಯುವ ಬಯಕೆ. ಈ ಪ್ರಶ್ನೆಯ ಕೆಳಗೆ ಮಡಿಸಿರುವ
ಸಂಶಯದ ನೆರಳ ಬಿಚ್ಚಿ ನಡೆಯುವುದು ನನಗಿಷ್ಟ!

ಈ ಕಲ್ಪನೆಯಲ್ಲೂ ಕವಿ ತಾತ್ವಿಕ ಜಿಜ್ಞಾಸೆಯನ್ನು ಬಿಟ್ಟಿಲ್ಲ. ಎಲ್ಲವನ್ನೂ ಸಂದೇಹಿಸುತ್ತಲೇ ಅರ್ಥೈಸಿಕೊಳ್ಳುವುದು ಅವರ ಜಾಯಮಾನವಂತೆ. ಅದಕ್ಕೆ ತಕ್ಕಂತೆಯೇ ಅವರ ಛತ್ರಿಯ ಆಕಾರದಂತೆ!

ಹೆಂಗಸರ ಛತ್ರಿಯೋ ವಿಸ್ಮಯದ ಚಿಹ್ನೆ. ಅದ-
ರಿಂದಲೇ ಅವುಗಳಿಗಷ್ಟು ಬಣ್ಣ-ಬೆಡಗು. ಪ್ರಶ್ನೆ-
ಯಿಂದ ವಿಸ್ಮಯದತನಕ ಹಬ್ಬಿದೆ ಬದುಕು ಎರಡು
ಛತ್ರಿಯ ನಡುವೆ. ಹೆಣ್ಣಿಗೆ ಗಂಡು ಪ್ರಶ್ನೆ, ಗಂಡಿಗೆ ಹೆಣ್ಣು
ವಿಸ್ಮಯ; ಅದಕ್ಕುಚಿತವಾಗಿವೆ ಛತ್ರಿಯ ಮಾಟ,
ಇದರೊಳಗು ಇರಬಹುದು ಮಾಡಿದಾತನ ಹೂಟ.

ಈ ವ್ಯಾಖ್ಯಾನ ಚಮತ್ಕಾರದಷ್ಟೇ ಅರ್ಥಪೂರ್ಣವೂ ಆಗಿದೆ. ಆದರೆ ಕೊನೆಯಲ್ಲಿ ಕವಿಯ ಸೊಗಸಾದ ಕಲ್ಪನೆ ದೇವರಿಗೆ ವರ್ಗಾಯಿಸಲ್ಪಟ್ಟಿದೆ! ಅದನ್ನು ನಾವು ಒಪ್ಪಬೇಕಾಗಿಲ್ಲ.

ಸೊಳ್ಳೆಗಳನ್ನು 'ರೆಕ್ಕೆ ಬಂದ ರೇಡಿಯೋ'ಗಳೆಂದು ಕರೆದಿದ್ದಾರೆ.

ಸೊಳ್ಳೆ ಎನ್ನಬಹುದೆ ಇಂಥ ಸಂಗೀತದ ಮರಿಗಳ
ಬಿಟ್ಟು ಗಾನವೆರೆವ ನೆಲದ ಗಂಧರ್ವರ ಬಳಗವ?

'ಶೇವಿಂಗ್ ಸೆಲೂನಿನಲ್ಲಿ' ಇಂಥ ತಮಾಷೆಯ ಮತ್ತೊಂದು ಕವನ.

'ಕ್ಷೌರಕೆ ಮೊದಲು' 'ಕ್ಷೌರದ ತುದಿಗೆ'
ಏನೆಂಥ ಗಾರುಡಿ!
ಮುಗಿದಿಲ್ಲ ಈಗಲೂ ಪವಾಡಗಳ ಕಾಲ!
ಬಗೆಬಗೆ ಸದ್ದು ಬೆಳೆದ ಹೊಲಗಳ ಮೇಲೆ;
ಕತ್ತರಿಸಿದಂತೆ ಕೆಲಸಕ್ಕೆ ಬಾರದ ಪೈರು
ಉದುರುವುದು ಕೆಳಗೆ,
ಮಳೆ ಬರಲಿ, ಬರದಿರಲಿ, ಕೊರತೆಯೇ ಇಲ್ಲ ಈ ಬೆಳೆಗೆ!

ಹೆಚ್ಚಿನ ತತ್ವವೇನೂ ಇಲ್ಲದ ಕೇವಲ ಚಮತ್ಕಾರವೇ ಇಂಥ ಕವನಗಳ ಜೀವಾಳವಾದರೂ 'ಪರಿಚಿತ ವಸ್ತುಗಳಿಗೆ ಹೊಸ ಭಾವಕೋಶಗಳನ್ನು ಸೃಷ್ಟಿಸುತ್ತಾರೆ, ಕವಿ' (ಪ್ರಭುಶಂಕರ). 'ಬಟ್ಟೆಯಂಗಡಿಯಲ್ಲಿ', 'ತಲೆನೋವಿನಲ್ಲಿ'—ಕವನಗಳಲ್ಲಿ ಕೂಡ ಇಂಥ ಕೆಲವು ಚೆಲುವಾದ ಚಿತ್ರಗಳ ಹೆಣಿಗೆಯಿದೆ.

ಕವಿ ಕಾವ್ಯ ನಿರ್ಮಾಣ ಸಾಮರ್ಥ್ಯ ಮತ್ತು ಸಹೃದಯರ ಸಂಬಂಧ ಕುರಿತ ಕೆಲವು ಕವನಗಳಿವೆ.

ದೈನಂದಿನ ಬದುಕಿನ ಸರಳ ಸುಂದರ ದೃಶ್ಯಗಳಷ್ಟೇ, ವರ್ತಮಾನದ ಸರಕಷ್ಟೇ ಚೌಕಟ್ಟು ಹಾಕಲು ಸಾಕೆಂದು ಹೇಳುವ ಕವಿ ಸಹೃದಯರನ್ನು ಬೇಡುತ್ತಾನೆ,

ಒಂದಿಷ್ಟು ಜಾಗ ಕೊಡಿ ನನಗೆ ಈ ಮನೆಯಲ್ಲಿ
ನಾನು ಒಬ್ಬ ಕವಿ.
ನನಗೆ ಬೇಕಾದದ್ದು ಹೃದಯವಿರುವಂಥ
ಐದೊ ಆರೊ ಕಿವಿ!

(‘ಕವಿ–ಕಿವಿ’)

ಈ ನಾಲ್ಕು ಸಾಲುಗಳು “ಕವಿ ಕಾವ್ಯದ ಉಗಮ ಸ್ಥಾನ; ಸಹೃದಯ ಸಂಗಮ ಸ್ಥಾನ” ಎಂಬ ಹೇಳಿಕೆಗೆ ಬರೆದ ಸಂಕ್ಷಿಪ್ತ ಭಾಷ್ಯದಂತಿವೆ!

ಕವಿತೆ ಕೇವಲ ಜಳ್ಳಾಗದೆ ಪಕ್ವ ಅನುಭವದಿಂದ ಮೂಡಿದ ಪಾಕವಾಗಿರಬೇಕು ಗುರುತರವಾಗಿರಬೇಕು ಎನ್ನುವುದನ್ನು ‘ಈ ಕವಿತೆ’ ಕವನದಲ್ಲಿ ನಿರ್ವಚಿಸಲಾಗಿದೆ.

ಯೌವನೋನ್ಮತ್ತ ವಿಕೃತ ಭ್ರಮೆಗಳಿಗೆಲ್ಲ
ಕೋಡಂಗಿ ವೇಷವನು ಕಟ್ಟಿ ಕುಣಿಸಿದ್ದಲ್ಲ.
ಬೆಟ್ಟದ ಮೇಲಕಸ್ಮಾತ್ತಾಗಿ ಎಡವಿದ ಮೋಡ
ಸುರಿದ ತಡಸಲು ಅಲ್ಲ.
ಯಾವತ್ತಿನಿಂದಲೋ ಸುರಿದ ಜಡಿಮಳೆ ಇಳಿದು
ಒಳಗಿನ ಕುದಿಗೆ ಹದವಾಗಿ ಮಿದುವಾಗಿ
ಮಲಗಿರುವಾಗ,
ಬಾವಿಯ ತೋಡಿ, ಯಾತವ ಹೊಡೆದು
ತಂದದ್ದು ಈ ರಾಗ!

(‘ಈ ಕವಿತೆ’)

ಹೀಗೆ ಕವಿತೆ ಲಘುವಾದದ್ದಲ್ಲ, ಪರಿಶ್ರಮ ಪ್ರಯತ್ನಗಳಿಂದ ಆವಿರ್ಭವಿಸಿದ್ದು ಎನ್ನುವುದನ್ನು ಪ್ರತಿಪಾದಿಸುವ ಈ ಸಾಲುಗಳು ಸಮರ್ಥವಾಗಿವೆ. ಹಾಗಲ್ಲದೆ ನವ್ಯತೆಯ ಸೋಗಿನಲ್ಲಿ ತಿರುಳಿಲ್ಲದ ಮಾತುಗಳ ಹೆಣಿಗೆ, ಅನುಭವರಹಿತವಾದ ಪದಗಳ ಬುಡುಬುಡಿಕೆ, ಅರ್ಥವಾಗದ ತಲೆ ತುರಿಕೆ ಕವನವಾಗುವುದಿಲ್ಲ ಎನ್ನುವುದನ್ನು ವ್ಯಂಗ್ಯವಾಗಿ ‘ಕವಿತೆ ಬರೆಯುವುದು ಹೇಗೆ?’ ಹೆಸರಿನ ಕವನದಲ್ಲಿ ವಿವೇಚಿಸಿದ್ದಾರೆ.

ನೀ ಬರೆದ ಕವಿತೆ, ಬಡಪೆಟ್ಟಿಗರ್ಥವಾಗಲೇ ಬಾರದು
ಯಾರಿಗೂ
ಎಲ್ಲೆಲ್ಲಿಯೊ ಕೈ ಎಲ್ಲೆಲ್ಲಿಯೊ ಕಾಲ್
ಎಲ್ಲೆಲ್ಲಿಯೊ ಕಣ್ ತಾನಾದ
ವಿರಾಟ್‌ರೂಪಕ್ಕೆ ಹುಚ್ಚಾಗಲೇಬೇಕು ಯಾರಾದರೂ
ಸರಳ ಸುಂದರವಾಯ್ತೊ—ಕೆಟ್ಟೆ.

ಗಹನ, ಗಂಭೀರ, ಗುಹ್ಯಾತ್ ಗುಹ್ಯತರ-
ವಾಗಿರಬೇಕು ಕವಿತೆಯ ರೀತಿ
ಹತ್ತಾರು ಬೃಹಸ್ಪತಿಗಳಿಗೂ ಬೆಪ್ಪುಹಿಡಿಸಿದರಷ್ಟೆ
ನಮಗೆ ಸಂಪ್ರೀತಿ

ತೆಲುಗುಕವಿಗಳನ್ನು, ದಿಘೀರ್ ಕವಿಗಳನ್ನು ಇದಕ್ಕಿಂತ ಚೆನ್ನಾಗಿ ವಿಡಂಬಿಸಲಾಗುವುದಿಲ್ಲ.

ನಮ್ಮ ಎಣಿಕೆಯನ್ನು ಮುರಿಯುವ, ಸಾಮರ್ಥ್ಯವನ್ನು ಮೀರುವ, ಮಮತೆಯ ಬಂಧನದ ಬಲೆ ಬೀಸುವ, ಆಕಸ್ಮಿಕಗಳಿಗೆ ಪಕ್ಕಾಗಿಸಿ ಆಕಾಂಕ್ಷೆಗಳನ್ನು ತಲೆಕೆಳಗು ಮಾಡುವ, ಬಯಕೆ ಬಿಸಿಗೆ ತಣ್ಣೀರೆರಚುವ ಯಾವುದೋ ಒಂದು ಸಿಗದ, ಅರಿವಿಗೆ ಬರದ ಆದರೆ ಅಪರಿಹಾರ್ಯವಾದ ಮೋಡಿಯೊಂದು ಎಲ್ಲರನ್ನೂ ಸದಾ ಕಾಡುತ್ತದೆ. ಅದನ್ನು 'ಕಿಲಾಡಿ' ಎಂದು ಸಂಬೋಧಿಸಿ, ಅಮೂರ್ತವೂ ಅಸ್ಪಷ್ಟವೂ ಆದ ಅದರ ಅಸ್ತಿತ್ವವನ್ನು ಕವಿ ನಿದರ್ಶನಗಳ ಸಹಾಯದಿಂದ ಮೂರ್ತಗೊಳಿಸಿರುವುದೇ 'ಕಿಲಾಡಿ' ಕವನದ ಸಾಧನೆ.

ಇದನ್ನು ಗೆಲ್ಲುವ ಪ್ರಯತ್ನ ವ್ಯರ್ಥ, ಗಾಳಿ ಗುದ್ದಿ ಮೈ ನೋಯಿಸಿಕೊಳ್ಳುವ ಹೆಡ್ಡತನ. ಆದ್ದರಿಂದಲೇ

'ಕಿಡಿಯಿರದ ತಿದಿಯೊತ್ತಿ ಏನುಪಯೋಗ? ತೆಪ್ಪಗಿರುವುದೆ ವಾಸಿ' ಎಂದು ಕವಿ ಉದ್ಗಾರ ತೆಗೆದಿದ್ದಾರೆ. ಈ ಕವನದ ಒಂದು ಚಿತ್ರ ಮತ್ತೆ ಮತ್ತೆ ಮೆಲುಕು ಹಾಕಿ ಸವಿಯುವಂತಿದೆ:

. . . . . ರೆಪ್ಪೆ ತಕ್ಕಡಿಯಲ್ಲಿ ನಿದ್ದೆಯಂಗಡಿ ಸರಕು
ಹಾಗು ಹೀಗೂ ತೂಗುವುದು ವ್ಯಾಪಾರ ಸಾಗುವುದು ಹರಕುಮುರುಕು.

ಒಟ್ಟಾರೆ ಈ ಸಂಕಲನದಲ್ಲಿ ಉದ್ದಕ್ಕೂ ಮನುಷ್ಯನು ನಡವಳಿಕೆಯ ಹಾದಿ ತಪ್ಪಿದ ಸತ್ಯ ಸಂಗತಿಯ ಜೊತೆಯಲ್ಲೇ ಬದಲಾವಣೆಯಾಗಬೇಕು, ಸಮನ್ವಯ ಸಾಧನೆ ಮಾಡಬೇಕು ಎನ್ನುವ ಜಿ.ಎಸ್.ಎಸ್ ಅವರ ಆಶಾವಾದದ ಮನೋಧರ್ಮ ಹರಡಿಕೊಂಡಿದೆ ಎನ್ನಬಹುದು. ಇದೇ ಈ ಸಂಕಲನದ ವಿಶಿಷ್ಟತೆ.

'ಅಸಾಧಾರಣ' ಶ್ರೇಷ್ಠಮಟ್ಟದ ಸಂಕಲನವಲ್ಲದಿದ್ದರೂ ಕವಿಯ ಬೆಳವಣಿಗೆಯ ದೃಷ್ಟಿಯಿಂದ ಗಮನೀಯವಾದುದು. ಜಿ.ಎಸ್.ಎಸ್. ಅವರ ಪ್ರಾತಿನಿಧಿಕ ಕವನಗಳಿಲ್ಲದಿದ್ದರೂ ಜನರ ಬದುಕಿನ ಕಾಳಜಿ ಕಾಣಿಸಿಕೊಂಡಿದೆ. ಹಲವು ಹೊಳಹುಗಳಿಂದ ಕವಿಯ ಬೆಳವಣಿಗೆಯ ಸೂಚನೆಗಳನ್ನು ಒಳಗೊಂಡಿದೆ.

ಚಂದ್ರಶೇಖರ ಕಂಬಾರರ ಅಮೂಲ್ಯವಾದ ಅಭಿಪ್ರಾಯ (ಇಲ್ಲಿ ಹೊಂದಿಕೊಳ್ಳುವುದರಿಂದ)ದೊಂದಿಗೆ ಈ ಅವಲೋಕನವನ್ನು ಮುಗಿಸುತ್ತೇನೆ:

"ಬದುಕಿನ ದುರಂತ ವಿಕಾರವನ್ನು ಅದರೊಂದಿಗಿನ ಸೋಲಿನ ನೋವನ್ನು ಇವರು (ಜಿ.ಎಸ್.ಎಸ್) ಒಪ್ಪಿಕೊಂಡವರು. ಇವರ ಕಾವ್ಯದ ನಾಯಕ ಸಮಾಜದ ಟೀಕಾಕಾರನಾಗಿ ಸಂಭಾಷಿಸಬಲ್ಲಂತೆ ವಿದೂಷಕನಾಗಿಯೂ ನಗಬಲ್ಲವನಾಗಿದ್ದಾನೆ. ಟೀಕಾ

ಕಾರನಾಗಿ ಸಂಭಾಷಿಸಿದ್ದು ನಿರರ್ಥಕ, ನಿಷ್ಪ್ರಯೋಜಕವೆಂಬ ತಿಳುವಳಿಕೆ ಮೂಡಿ ತನ್ನ ಶಬ್ದಶಕ್ತಿಯ ಮಿತಿಯನ್ನು ಕಂಡುಕೊಳ್ಳುತ್ತಾನೆ. ಇದರ ಪರಿಣಾಮವಾಗಿ ವಿದೂಷಕನಾಗುತ್ತಾನೆ. ವಿದೂಷಕನಟನೆಯ ಲಘುತ್ವದ ಅರಿವಾಗಿ ಮತ್ತೆ ನಾಯಕನ ಪೋಜು ಕೊಡಲು ಸುರುಮಾಡುತ್ತಾನೆ. ಈ ಮಧ್ಯದ ಲಾಳಿ ಎಸೆತ, ಸಂದಿಗ್ಧ ಭಯಂಕರ ಸ್ಥಿತಿ ಈ ಕಾವ್ಯನಾಯಕನ ದಾರಿ.”

## ಎಸ್. ವಿ. ಭಾಗ್ಯಲಕ್ಷ್ಮಿ

# ತೆರೆದ ದಾರಿ

ನವೋದಯ ಸಮಯದಲ್ಲಿ ಸಾಮಗಾನಕ್ಕೆ ತೊಡಗಿ ಕಾವ್ಯಪ್ರಪಂಚದಲ್ಲಿ ತಮ್ಮದೇ ಆದೊಂದು ಸ್ಥಾನ ಗಳಿಸಿಕೊಂಡ ಕವಿ ಶಿವರುದ್ರಪ್ಪನವರು. ಕೆ. ಎಸ್. ನರಸಿಂಹಸ್ವಾಮಿಯವರಂತೆ ಬುಡಮಟ್ಟ ನವ್ಯಕ್ಕೆ ಹೊರಳಿಬಿಡದೆ ಎರಡೂ ರೀತಿಗಳಲ್ಲಿ ಬರೆಯುತ್ತಿರುವುದಕ್ಕೆ ಅಥವಾ ಅವರ ಕಾವ್ಯರಚನೆಯಲ್ಲಿ ಸ್ಪಷ್ಟವಾಗಿ ಯಾವುದೇ ಒಂದು ಪಂಥಕ್ಕೆ ಸೇರಿಸಿಬಿಡುವಂತಹ ದೃಷ್ಟಿ ಮತ್ತು ಶೈಲಿಗಳು ಕಾಣದ್ದಕ್ಕೆ ಅವರನ್ನು ಸಮನ್ವಯ ಕವಿ ಎಂದು ಕರೆದಿರಬಹುದು. ಏನಾದರೂ ಜಿ.ಎಸ್.ಎಸ್.ರವರು ನವೋದಯಮಾರ್ಗದಲ್ಲಿ ಬರೆದ ಭಾವಗೀತಗಳಷ್ಟು ಅವರ ಹೊಸರೀತಿಯ ಬರವಣಿಗೆ ಸಶಕ್ತವಾಗಿ ಕಾಣುವುದಿಲ್ಲ. ಇದಕ್ಕೆ ಕಾರಣ ಮುಖ್ಯವಾಗಿ ಅವರ ಶೈಲಿಯಲ್ಲಿರುವ ಒಂದು ಬಗೆಯ ಮಾರ್ದವತೆ. ಭಾವಗೀತೆಗಳ ಯಶಸ್ಸಿಗೆ ಕಾರಣವಾಗುವ ಈ ಮಾರ್ದವತೆ ವೈಚಾರಿಕ ವಸ್ತುವುಳ್ಳ ಮತ್ತು ಹೊಸ ಪ್ರಜ್ಞೆಯ ಕೆಲವು ಕವನಗಳ ಸೋಲಿಗೂ ಕಾರಣವಾಗುತ್ತದೆ.

ಸರ್ವರಿಗೂ ಅರ್ಥವಾಗಬಲ್ಲ ಭಾವನೆಗಳನ್ನು ಸರ್ವರಿಗೂ ಅರ್ಥವಾಗುವ ಭಾಷೆ ಮತ್ತು ಶೈಲಿಗಳಲ್ಲಿ ಸರಳವಾಗಿ ಮತ್ತು ಮನೋಹರವಾಗಿ ಕಟ್ಟಿಕೊಡುವುದು ಜಿ. ಎಸ್. ಎಸ್.ರವರ ಕಾವ್ಯದ ಒಂದು ಲಕ್ಷಣ. ಇವರ ಎಂಟನೇ ಕವನಸಂಗ್ರಹವಾದ 'ತೆರೆದ ದಾರಿ'ಯಲ್ಲಿ ಕಾಣುವುದೂ ಈ ಸರ್ವಗ್ರಾಹ್ಯ ಭಾವನೆಗಳ ಸರಳ ಅಭಿವ್ಯಕ್ತಿಯನ್ನೇ.

'ಈ ದಾರಿ ನನಗೆ ತೆರೆದದ್ದು ಅಥವಾ ನಾನು ಬರೆಯುತ್ತಾ ಹೋದಹಾಗೆ ತೆರೆಯುತ್ತಾ ಹೋದದ್ದು. ಅನುಭವದ ಅನೇಕ ಮುಖಗಳು ತೆರೆದದ್ದು, ಅದರ ಪರಿಣಾಮವಾಗಿ ಅಭಿವ್ಯಕ್ತಿಗಳು ತೆರೆದದ್ದು, ಈ ದಾರಿ'—ಕವಿಯ ಮುನ್ನುಡಿಯಲ್ಲಿರುವ ಈ ಮಾತುಗಳು ಈ ಸಂಕಲನದ ಬಗೆಗಷ್ಟೇ ಅಲ್ಲ, ಇಡೀ ಕಾವ್ಯಕ್ರಿಯೆಯ ಬಗ್ಗೆ ಬರೆದ ಭಾಷ್ಯವಾಗಿದೆ. ಅನುಭವದ ಮುಖಗಳು ತೆರೆದ ದಾರಿಯಲ್ಲಿ ಎಲ್ಲ ಕವಿಗಳಂತೆಯೇ ಈ ಕವಿಯೂ ಮುಂದುವರೆಯುತ್ತಾರೆ. ಇವರು ಅನುಭವಗಳನ್ನು ಭಾವಿಸುವ ಮತ್ತು ಅನುಭವಿಸುವ ರೀತಿಗಳಿಂದಾಗಿ ಸುಜನಾರವರು ಇವರನ್ನು 'ಸುಂದರ ಕವಿ' ಎಂದು ಕರೆದಿರುವುದು ಒಂದು ಬಗೆಯಲ್ಲಿ ಅರ್ಥಪೂರ್ಣವೆನ್ನಿಸುತ್ತದೆ. ಏಕೆಂದರೆ ಇವರ ಕಾವ್ಯದ ಸಮಗ್ರತೆಯಲ್ಲಿ ಮುಖ್ಯವಾಗಿ ತೇಲಿಬರುವ ಅಂಶವೆಂದರೆ ಅವರ ಸೌಂದರ್ಯಪ್ರಜ್ಞೆಯೇ.

ಲೋಕದಲ್ಲಿರುವ ಇಂದ್ರಿಯಗ್ರಾಹ್ಯವಾದ ನಾನಾ ರೀತಿಯ ಸುಂದರ ರೂಪ ಮತ್ತು ಭಾವಗಳನ್ನು ಸಮರ್ಥವಾಗಿ ಕಾವ್ಯಸೌಂದರ್ಯವನ್ನಾಗಿ ಮಾರ್ಪಡಿಸುವ ಇವರ ರೀತಿ ಗಮನಾರ್ಹವಾದುದು.

'ಶಾಕುಂತಲ ಸಂಧ್ಯೆ' ಈ ಸಂಕಲನದ ಆಕರ್ಷಣೆ ಕವನಗಳಲ್ಲೊಂದು. ಶಾಕುಂತಲದ ಕಥಾಕೇಂದ್ರವನ್ನು ಸುಂದರ ಸಂಜೆಯೊಂದರ ಜತೆ, ಅಭಿನ್ನವೆಂಬಂತೆ ನವಿರಾಗಿ ಹೆಣೆದ ಚಿತ್ರವಿದು. ಮೂರು ಮಾತ್ರೆಯ ಗಣಗಳ ಸುಲಲಿತ ಓಟದಿಂದಾಗಿ ನಿಶ್ಶಬ್ದ ವಾತಾವರಣದ ನಿರ್ಮಿತಿಯಾಗಿ ಕವಿಯ ಆಶಯ ಬಹುಮಟ್ಟಿಗೆ ಸಾಧಿತವಾಗಿದೆ. ಪ್ರಕೃತಿಯು ಸಂಜೆಯ ಮಾಧ್ಯಮದಲ್ಲಿ ಶಕುಂತಲೆಗಾಗಿ ದುಃಖಮಿಡಿಯುವುದು ಮನಕ್ಕೆ ತಟ್ಟುವಂತಿದೆ. ಈ ಕವನದ ಯಶಸ್ಸಿಗೆ ಮುಖ್ಯ ಕಾರಣ ಕಾವ್ಯದ ಉತ್ತಮ ಗುಣಗಳಲ್ಲೊಂದಾದ ಸಾಂದ್ರತೆ.

ನೆಲದ ಹೆಣ್ಣನ್ನು ಪ್ರಕೃತಿಗೆ ಹೋಲಿಸಿ ಮಹಮೀಕರಿಸುವ ಕವನ 'ಸ್ತ್ರೀ'. ವಸ್ತು ಹೊಸದಲ್ಲವಾದರೂ ಅದನ್ನು ಹೇಳುವ ರೀತಿ ಹೊಸದಾಗಿದೆ.

ಆಕಾಶದ ನೀಲಿಯಲ್ಲಿ
ಚಂದ್ರತಾರೆ ತೊಟ್ಟಿಲಲ್ಲಿ
ಬೆಳಕನಿಟ್ಟು ತೂಗಿದಾಕೆ—

ಎಂಬುದಾಗಿ ಪ್ರಕೃತಿಯ ವೈಶಾಲ್ಯವನ್ನು ನಿರ್ದೇಶಿಸುತ್ತಾ ಪ್ರಾರಂಭವಾಗುವ ಕವನ ಮೆಲ್ಲನೆ ನೆಲಕ್ಕಿಳಿದು ಬರುತ್ತಾ

ಮನೆಮನೆಯಲಿ ದೀಪಮುಡಿಸಿ
ಹೊತ್ತುಹೊತ್ತಿಗನ್ನವುಣಿಸಿ
ತಂದೆ-ಮಗುವ ತಬ್ಬಿದಾಕೆ

ಎಂಬಲ್ಲಿ ಮನೆ-ಜಗತ್ತನ್ನು ತಲುಪಿ ಆತ್ಮೀಯವಾಗಿ ಪರಿಣಮಿಸಿಬಿಡುತ್ತದೆ. ಕವನ ಇಲ್ಲಿಗೇ ನಿಂತಿದ್ದರೆ ಚೆನ್ನಾಗಿತ್ತು. ಕೊನೆಯ ಸಾಲುಗಳು ಸೂತ್ರಪ್ರಾಯವಾಗಿ ಬಂದು ಕವನದ ಗಾಂಭೀರ್ಯವನ್ನು ಸ್ವಲ್ಪಮಟ್ಟಿಗೆ ತಗ್ಗಿಸಿವೆ.

ಆಪ್ತಜೀವವೊಂದರ ಬಗೆಗಿನ ಭಾವನೆಗಳನ್ನು ಸ್ವಗತದ ರೀತಿಯಲ್ಲಿ ಹೇಳುವ ಧಾಟಿ 'ಸಂಕ್ರಮಣ'ದಲ್ಲಿದೆ. ಆತ್ಮೀಯತೆಯ ಸುಂದರ ಅಭಿವ್ಯಕ್ತಿಯನ್ನು ಇಲ್ಲಿ ಕಾಣಬಹುದು. ಬದುಕಿನ ಏಕತಾನತೆಗೆ ಬೇಸತ್ತಿದ್ದ ಮತ್ತು ಯಥಾಪ್ರಕಾರ ಬಾಳುತ್ತಿದ್ದ ವ್ಯಕ್ತಿಯ ಬಾಳಿನಲ್ಲಿ ಹೊಸತಿನ ಆಗಮನವಾಗುತ್ತದೆ—

ನೀ ಬಂದೆ; ಎಲ್ಲಿಂದ ಬಂದೆಯೋ ಹೇಗೆ ಬಂದೆಯೋ ಕಾಣೆ.
ನಾಯಿ ಬೊಗಳಿದ ಸದ್ದು ಕೂಡ ಕೇಳಿಸಲಿಲ್ಲ
ಒಳಗಿನ ಚಿಲಕ ಯಾವ ಮೋಡಿಗೆ ಹೇಗೆ ತೆರೆಯಿತೋ ಗೊತ್ತಾಗಲಿಲ್ಲ
ಎಲ್ಲೋ ಗಾಳಿ ಬೀಸಿದ ಸದ್ದು; ಸುತ್ತ ಹತ್ತಾರು ಮರ

ಝಗ್ಗನೆ ಚಿಗುರಿ ನುಗ್ಗಿತ್ತು ಕಾಲವಸಂತಸೇನೆ,
ಎದ್ದು ಕುಳಿತದ್ದಾಯ್ತು, ಇನ್ನು ನಿದ್ರೆಬಂದರೆ ತಾನೆ?

ಸಂಯಮದಿಂದ ಕೂಡಿದ ಶೈಲಿ ಮತ್ತು ಬಾಯಲ್ಲಿಟ್ಟರೆ ಕರಗಿ ಹೋಗುವುದೇನೋ ಎಂಬಂತಹ ಮೃದುಗತಿಯ ಪದಸಂಯೋಜನೆ ಇವುಗಳಿಂದಾಗಿ ಈ ಕವನ ಹೃದ್ಯವಾಗಿದೆ. 'ಚಿಗುರಿ ನುಗ್ಗಿತ್ತು ಕಾಲ—' ಎಂಬಲ್ಲಿ ನುಗ್ಗುವುದರ ಹಠಾತ್ ಕ್ರಿಯೆಯನ್ನು ಲಯದ ಮೂಲಕ ಸಾಧಿಸಿರುವ ಬಗೆ ಮೆಚ್ಚುವಂತಿದೆ. ಈ ಕವಿ ಭಾವಪ್ರಧಾನ ಕವನಗಳನ್ನು ಎಷ್ಟು ಚೆನ್ನಾಗಿ ರಚಿಸಬಲ್ಲರೆಂಬುದಕ್ಕೆ ಈ ಕವನ ಸಾಕ್ಷಿಯಾಗಿದೆ.

ಸ್ವವಿಮರ್ಶೆಯ ಧಾಟಿಯಲ್ಲಿ ರಚಿತವಾಗಿರುವ ಕವನ 'ನಾವು ಗುಲಾಮರು.' ಕವಿ ತಾನು ಹುಟ್ಟಿದ ದೇಶದ ಮತ್ತು ಆ ದೇಶದ ಜನತೆಯ ಹೀನ ಬದುಕನ್ನು ಕುರಿತು ಕೊರಗುತ್ತಾ ಹೇಳಿಕೊಳ್ಳುತ್ತಾರೆ. 'ಶತಮಾನಗಳ ಕಾಲ ಕೊರಳಪಟ್ಟಿಯಲ್ಲೇ ಬೆಳೆದ ನಾಯಿಗಳು ನಾವು' ಎಂಬಂಥ ಸಬಲಸಾಲುಗಳು ಗುಲಾಮಸ್ಥಿತಿಯನ್ನು ಸಶಕ್ತವಾಗಿ ಅಭಿವ್ಯಕ್ತಿಸಿವೆ. ಪ್ರತಿಯೊಂದು ನುಡಿಯ ಕೊನೆಯಲ್ಲಿ ಬರುವ 'ನಾವು ಗುಲಾಮರು' ಎಂಬ ಪುನರುಕ್ತಿ ಮತ್ತು ಕವಿ ತನ್ನನ್ನೂ ಸೇರಿಸಿಕೊಂಡು ಬಳಸಿರುವ 'ನಾವು' ಎಂಬ ಪದ ಇವು ಕವನದ ತೀವ್ರತೆ ಮತ್ತು ಅರ್ಥಗಾಂಭೀರ್ಯವನ್ನು ಹೆಚ್ಚಿಸಿವೆ.

ಭಾವತೀವ್ರತೆಯ ಹೊನಲು 'ವಿವೇಕಾನಂದ' ಕವನದಲ್ಲಿ ತೀವ್ರವಾಗಿ ಹರಿದಿದೆ. ವಿವೇಕಾನಂದರ ವಿದ್ಯುತ್-ವ್ಯಕ್ತಿತ್ವವನ್ನು

ಮೊರೆಯುವ ಕಡಲಿಗೆ ಹಾರಿ ಧುಮುಕಿದ
ತೆರೆಗಳ ಸೀಳಿದ, ಈಜಿದ, ನುಗ್ಗಿದ,
ಘಟ್ಟಿ ಬಂಡೆಯಲಿ ಬೇರೂರಿದ, ಬಾನೆತ್ತರ ನೆಗೆದ
ಬೆಳಕಿನ ಗೋಪುರವಾದ

—ಈ ನಾಗಾಲೋಟದ ಶೈಲಿ ಮತ್ತು ಚಿತ್ರಗಳ ಮೂಲಕ ಮಿಂಚಿಸಿದ್ದಾರೆ. ಕನ್ಯಾ ಕುಮಾರಿಯ ವಿವೇಕಾನಂದ ಬಂಡೆಯನ್ನು ಜ್ಞಾಪಿಸುವುದರ ಮೂಲಕ ಈ ಸಾಲುಗಳು ಅನುಭವವನ್ನು ಚಿತ್ರವತ್ತಾಗಿಸಿವೆ. ಕವನದ ಭಾವಕ್ಕೆ ಭಾಷೆ ಮಣಿದಿರುವುದನ್ನು ಇಲ್ಲಿ ಕಾಣುತ್ತೇವೆ—

ವಜ್ರದ ಮೈ, ಉಕ್ಕಿನ ನರ, ಕುಡಿಮಿಂಚಿನ ಕಣ್ಣು;
ಗುಡುಗಿನ ದನಿ, ಮುಂಗಾರಿನ ವಾಗ್‌ವೈಖರಿ ಹೊನಲಿನ ನಡೆ,
ಎದೆ ಬೆಳುದಿಂಗಳ ಹೆಣ್ಣು!

'ಆದಿಕವಿ'ಯ ಬಗ್ಗೆ ಹೇಳುವಾಗ ಸಾಹಿತ್ಯ ಮತ್ತು ಭಾಷೆಯ ಕೃಷಿಯಲ್ಲಿ ಆದಿಕವಿಯ ಪಾತ್ರವನ್ನು ಹೀಗೆ ಸ್ಪಷ್ಟಪಡಿಸುತ್ತಾರೆ—

ಮೊಟ್ಟಮೊದಲನೆಯ ಬಾರಿಗೆ ಹೆಳವಭಾಷೆಗೆ ಗರುಡಗರಿ ಮೂಡಿಸಿದ
ಮೋಡಿಕಾರ.

ತನ್ನ ಪಾತ್ರವನು ತಾನೇ ನಿರ್ಮಿಸುತ ಹರಿವ
ಮುಂಗಾರಿನ ಮಹಾಪೂರ

ಆದಿಕವಿಯ ಶಕ್ತಿ ಮತ್ತು ಅವನ ಕುರಿತಾದ ಮೆಚ್ಚುಗೆ ಇಲ್ಲಿ ಗಟ್ಟಿಯಾಗಿ ಮೂಡಿವೆ.

ಅತಿ ವಿವರಣೆಯಿಂದಾಗಿ ಕವನ ತನ್ನ ಬಿಗಿ ಕಳೆದುಕೊಂಡುದು ಕೆಲವೆಡೆ ಕಂಡು ಬರುತ್ತದೆ. 'ನೀರು' ಇದಕ್ಕೆ ಉದಾಹರಣೆ. ಕಲ್ಪನಾಸಾಮ್ರಾಜ್ಯ ಮತ್ತು ವಾಸ್ತವ ಪ್ರಪಂಚಗಳ ಬಗ್ಗೆ 'ನೀರಿ'ನ ಮೂಲಕ ಹೇಳಹೊರಟ ಕವಿ ಕೊನೆಗೆ—

ಕಲ್ಪನೆಯು ಮೋಡ ಕರಗಿ ವಾಸ್ತವದ ನೆಲಕಿಳಿದಾಗ
ಮುಕ್ತಿ ಈ ಮಣ್ಣಿನಲ್ಲಿ

ಎಂದು ಬರೆದು ಕವನವನ್ನು ವಾಚ್ಯವಾಗಿಸಿಬಿಡುತ್ತಾರೆ. ಇದ್ದ ಗೂಢಾರ್ಥವನ್ನು ಇಡಿಯಾಗಿ ಬಿಚ್ಚಿಟ್ಟು ಇಡೀ ಕವನದ ಸಾರ್ಥಕತೆಯನ್ನು ಪ್ರಶ್ನಿಸುವಂತೆ ಮಾಡಿದ್ದಾರೆ. 'ದಾಸಪಂಥ'ದಲ್ಲೂ ಹೀಗೇ ಆಗಿದೆ. 'ದಾಸ' ಪದವನ್ನು ದ್ವಿಯಾರ್ಥದಲ್ಲಿ ಬಳಸಿರುವ ಈ ಕವನ ಸ್ವಾರ್ಥಸಾಧನೆಗಾಗಿ ಆತ್ಮಗೌರವವನ್ನು ಈಡಾಡುವ ವ್ಯಕ್ತಿಗಳನ್ನು ವಿಡಂಬಿಸುವ ಪ್ರಯತ್ನ ಮಾಡುತ್ತದೆ. ಸಶಕ್ತವಾಗಿಯೇ ಪ್ರಾರಂಭವಾಗುವ ಕವನ ಕೊನೆಯ

ನೀನೆ ದಾಸವರೇಣ್ಯ
ದಾಸಕುಲ ಶಿರೋಮಣಿ
ದಾಸನೆಂದರೆ ನೀನೆ
ಈ ಪರಿಯ ಸೊಬಗನ್ನು ಮತ್ತಾವನಲ್ಲೂ ಕಾಣೆ

ಎಂಬಲ್ಲಿ ಪದಬಾಹುಳ್ಯದಿಂದಾಗಿ ವ್ಯಂಗ್ಯದ ಬಿಗಿ ಕಳೆದುಕೊಳ್ಳುತ್ತದೆ.

ಜಿ.ಎಸ್.ಎಸ್.ರವರ 'ಅನಾವರಣ' ಸಂಕಲನದ ಬಗ್ಗೆ ಸಿ. ಪಿ. ಕೃಷ್ಣಕುಮಾರರು ಕೇಳಿದ "ಬಾಳಿನಲ್ಲಿ ಇಂದ್ರಿಯಗಮ್ಯವಾಗುವ ಎಲ್ಲ ಅನುಭವಗಳಿಗೂ ಕವಿ ಪ್ರತಿಸ್ಪಂದಿಸುತ್ತ ಹೋದರೆ ಕಾವ್ಯಗುಣ ಏಕಪ್ರಕಾರವಾಗಿ ಮೈದೋರುವುದು ಅಸಂಭವವಲ್ಲವೆ ?" ಎಂಬ ಪ್ರಶ್ನೆ 'ತೆರೆದ ದಾರಿ'ಯನ್ನು ಓದುವಾಗಲೂ ಏಳುತ್ತದೆ. 'ದುರಂತ' 'ಮಿತ್ರ-ಶತ್ರು' ಮುಂತಾದುವು ಇಂತಹ ಕವನಗಳು. 'ಎರಡು ಶಿಖರದ ನಡುವೆ' ಹುಟ್ಟು ಸಾವು ಮತ್ತು ಬದುಕುಗಳಂತಹ ಸಂಕೀರ್ಣ ವಿಷಯಗಳ ಬಗ್ಗೆ ಹೇಳತೊಡಗಿದರೂ ಕೊನೆಯ ಪದಗಳಿಂದಾಗಿ ವೈಚಾರಿಕವಾಗಷ್ಟೇ ಅಲ್ಲ, ಕಾವ್ಯದೃಷ್ಟಿಯಿಂದಲೂ ಸೋತಿದೆ. ಕವಿ ಉದ್ದೇಶಿಸಿದ ವಿಸ್ಮಯಭಾವ ಇಲ್ಲಿ ಮೂಡದೆ ಕೇವಲ ಪ್ರಶ್ನೆಯಾಗಿ ಸರಳ ಹಂತದಲ್ಲಿ ನಿಂತಿದೆ.

ಕೆಲವು ಕವನಗಳ ಕೆಲವು ಸಾಲುಗಳು ತಮ್ಮ ಕಾವ್ಯಗುಣದಿಂದಾಗಿ ನೆನಪಿನಲ್ಲುಳಿಯುವಂತಿವೆ. 'ತಮಸ್ಸಿನಿಂದ ಜ್ಯೋತಿಗೆ'ಯ "ಒಡಕು ಹಣತೆಗೆಣ್ಣೆ ಬತ್ತಿ ತುಂಬಿ ನಂಬಿ ಕಾಯಲೆ ?" ಸಾಲು ಜೀವನದಲ್ಲಿ ನಿರರ್ಥಕವಾಗಿ ಕಾಯುವುದರ ನಿರರ್ಥಕತೆಯನ್ನು ಧ್ವನಿಸಿದೆ. ವೈವಿಧ್ಯರಹಿತ ಬದುಕಿನಲ್ಲಿ ಜೀವಿಗೆ ಆಗುವ ನಿತ್ಯನಿರಾಶೆ ಮುಂಬೈ ಜಾತಕದ

ಸಾವಿರಗಾಲಿಯುಜ್ಜುವ ಕನಸುಬಂಡಿಯ ಕೆಳಗೆ
ಹಾಸುಗಂಬಿಯ ಹಾಗೆ ತತ್ತರಿಸುತ್ತ ಮಲಗುವುದು

ಎಂಬ ಸಾಲುಗಳಲ್ಲಿ ಅದ್ಭುತವಾಗಿ ಮೈದೋರಿದೆ. "ಎರಡು ಕತ್ತಲ ನಡುವೆ"ಯಲ್ಲಿನ

ದೀಪವಾರಿಸಿದಾಗ ಕವಿದ ಕತ್ತಲಿನಲ್ಲಿ ಒಂದೇ ಬೆರಗು !
ಇಷ್ಟೊಂದು ದೀಪದ ಬೆಳಕು ಎಲ್ಲಿ ಹೋಯ್ತು ?

ಎಂಬ ಸಾಲುಗಳಲ್ಲಿ ಕಾಣುವ ಕವಿಹೃದಯದ ಸೋಜಿಗ ಆಹ್ಲಾದಕರವಾಗಿದೆ.

ನೆಹರೂ ಇನ್ನಿಲ್ಲವಾದ ಸುದ್ದಿ ಕೇಳಿ 'ಇನ್ನಿಲ್ಲ ನಮಗೆ ನೆಹರೂ' ಎಂದು ಕಂಬನಿ ಮಿಡಿದ ಕವಿ

ಎತ್ತರವಾಗಿದೆ ಬಿತ್ತರವಾಗಿದೆ ಉಜ್ವಲವಾಗಿದೆ
ನೆಹರೂ ಕಟ್ಟಿದ ಈ ದೇಶ

ಎಂಬುದಾಗಿ ಜೀವನೋತ್ಸಾಹದಿಂದ ಬಾಳಿನೆಡೆಗೆ ಮುಖಮಾಡಿ ಮುಂದುವರೆಯುವ ರೀತಿ ಆರೋಗ್ಯಕಾರಿಯಾಗಿದೆ.

ಮುಂಬೈಜಾತಕ, ಪ್ರಶ್ನೆ, ಸೋಲಿನ ಹಾಡು, ಮತ್ತು ಬಾರದಿರು ಉಲ್ಕೆಯಂತೆ— ಇವು ಈ ಸಂಕಲನದ ಇನ್ನಿತರ ಗಮನಾರ್ಹ ಕವನಗಳು.

ಇವರ ರಸವತ್ತಾದ ಕವನಗಳು ಓದುಗರ ಗಮನವನ್ನು ಸಂಪೂರ್ಣವಾಗಿ ಸೆಳೆದುಕೊಂಡು ಕಾವ್ಯದ ಪ್ರಯೋಜನಗಳಲ್ಲೊಂದಾದ ಮಾನಸಿಕಶಮನವನ್ನು ನೀಡುವುದರಲ್ಲಿ ಯಶಸ್ಸು ಪಡೆಯುತ್ತವೆ. ಸಂಗೀತದ ಸಾಹಚರ್ಯದಿಂದಾಗಿ ಹೆಚ್ಚಿನ ಆನಂದ ಕೊಡುವ ಕವನಗಳ ದೃಷ್ಟಿಯಿಂದಲೂ ಕಾವ್ಯಕ್ಷೇತ್ರಕ್ಕೆ ಜಿ.ಎಸ್.ಎಸ್.ರವರ ಕೊಡುಗೆ ಮಹತ್ವಪೂರ್ಣದ್ದಾಗಿದೆ. ಅನುಭವಗಳನ್ನು ವರ್ಣನೆಯ ಮೂಲಕ ಅಭಿವ್ಯಕ್ತಿಸುವ ರೀತಿ ಇವರದು. ಈ ವರ್ಣನೆಗಳು ಕವಿಯ ಆಶಯವನ್ನು ಚಿತ್ರವತ್ತಾಗಿ ಮನಮುಟ್ಟಿಸಿ ಓದುಗರನ್ನು ಖಚಿತತೆಯೆಡೆಗೊಯ್ಯುತ್ತವೆ. ಕೆಲವೆಡೆ ಮಾತ್ರ ರೂಪಕಶಕ್ತಿಗಿಂತ ಹೆಚ್ಚಾಗಿ ವರ್ಣನೆಗಳೇ ಕಾಣಿಸಿಕೊಳ್ಳುವುದರಿಂದ ಅನುಭವ ಘನೀಭೂತವಾಗಿ ಓದುಗರನ್ನು ಅಬ್ಬ ! ಎನ್ನಿಸುವ ರೀತಿಯಲ್ಲಿ ತಲುಪದೆ ಹೋಗುತ್ತದೆ. 'ತೆರೆದ ದಾರಿ'ಯಲ್ಲಿ ಅನೇಕ ಉತ್ತಮ ಭಾವಕವನಗಳು ಮೂಡಿವೆ; ಆದರೆ ಅರಿವಿನ ಆಳಕ್ಕಿಳಿದು ಚಿಂತಿಸಲು ಹಚ್ಚುವ ಮತ್ತು ಓದಿದವರಲ್ಲಿ ಯಾವುದೇ ಗಂಭೀರ ವ್ಯತ್ಯಾಸ ಮೂಡಿಸುವ ಸಬಲ ಕವನಗಳು ಇಲ್ಲಿ ಕಡಮೆ. ಅನುಭವ, ಅಭಿವ್ಯಕ್ತಿ ಮತ್ತು ಜೀವನ ತತ್ವಗಳೆಲ್ಲದರ ದೃಷ್ಟಿಯಿಂದಲೂ ಮುಖ್ಯವಾಗಿರುವ ಮತ್ತು ಇವರ ಕಾವ್ಯ-ಶಕ್ತಿಯ ಎಲ್ಲ ಸಾಧ್ಯತೆಗಳನ್ನು ಮನಗಾಣಿಸುವ ಕವನಗಳ ದೃಷ್ಟಿಯಿಂದ 'ದೀಪದ ಹೆಜ್ಜೆ' ಈ ಕವಿಯ ಗಮನಾರ್ಹ ಕೃತಿಯಾಗಿದೆ. ಈ ದಿಶೆಯಲ್ಲಿ 'ತೆರೆದ ದಾರಿ' ಇವರ ಪ್ರಾತಿನಿಧಿಕ ಕವನಸಂಕಲನವಾಗುವುದಿಲ್ಲ.

## ಎಸ್. ಎಲ್. ಭೈರಪ್ಪ

# ಸೌಂದರ್ಯ ಸಮೀಕ್ಷೆ

"ಶ್ರೀ ಛಾಯಾಪತಿಯವರು 'ಸೌಂದರ್ಯ ಸಮೀಕ್ಷೆ'ಯ ಪ್ರತಿಯನ್ನು ತುಂಬ ಹಿಂದೆಯೇ ತಂದುಕೊಟ್ಟರು. ಭಾರತೀಯ ಹಾಗೂ ಐರೋಪ್ಯ ಸೌಂದರ್ಯಮೀಮಾಂಸೆಗಳ ಸಾಮಾನ್ಯ ತತ್ವಗಳನ್ನು ಚರ್ಚಿಸಿರುವ ಭಾಗ ಮತ್ತು ಮುಂದೆ ಎರಡು ಅಧ್ಯಾಯಗಳನ್ನು ಓದಿದೆ. ನಾನು ಐರೋಪ್ಯ ಸೌಂದರ್ಯಮೀಮಾಂಸೆಯನ್ನು ಓದಿರುವಷ್ಟು ವಿವರವಾಗಿ ಭಾರತೀಯವನ್ನು ಓದಿಲ್ಲ. ಐರೋಪ್ಯ ಭಾಗವನ್ನು ಕೂಡ ನೀವು ತತ್ವಶಾಸ್ತ್ರದ ವಿದ್ಯಾರ್ಥಿಯಂತೆ ಖಚಿತವಾಗಿ ಅರ್ಥಮಾಡಿಕೊಂಡು ಬರೆದಿದ್ದೀರಿ. ಅಲ್ಲಲ್ಲಿ ಬರುವ ನಿಮ್ಮ ಟೀಕೆ, ವಿಮರ್ಶೆಗಳು ನ್ಯಾಯವಾಗಿವೆ. ಓದುವಾಗ ಅಲ್ಲಲ್ಲಿ ನಾನು ಮೆಚ್ಚಿದ ಮತ್ತು ಭಿನ್ನಾಭಿಪ್ರಾಯ ಹೊಂದಿದ ಭಾಗಗಳನ್ನು ಗುರುತು ಹಾಕಿದೆ. ನಿಮಗೆ ಬರೆಯಬೇಕೆಂದು ಒಂದು ಪುಟ ಬರೆದೂ ಇದ್ದೆ. ಮುಂದೆ ಏನೋ ಅಡ್ಡಿಯಾಯಿತು. ಅನಂತರ ಮಹಾಭಾರತದ ಅಧ್ಯಯನಕ್ಕೆ ಮನಸ್ಸು ಹಿಂತಿರುಗಿತು. ಆದ್ದರಿಂದ ಪತ್ರ ಬರೆಯಲಿಲ್ಲ.

ಸೌಂದರ್ಯಮೀಮಾಂಸೆಯ ಪ್ರವೇಶವಿಲ್ಲದವರು ಸಮದೃಷ್ಟಿಯಿಂದ ಸಾಹಿತ್ಯ ವಿಮರ್ಶೆ ಮಾಡುವುದು ಕಷ್ಟವೆಂದು ನಾನು ಮೊದಲಿನಿಂದ ನಂಬಿದ್ದೇನೆ. ಈ ಪುಸ್ತಕವನ್ನು ಓದಿದ ನಂತರ ನಿಮ್ಮ ಸಾಹಿತ್ಯವಿಮರ್ಶಕ ಬುದ್ಧಿಯ ತರಬೇತಿ ಮತ್ತು ಸಿದ್ಧತೆಯ ಒಂದು ತಕ್ಕಮಟ್ಟಿನ ಕಲ್ಪನೆಯೂ ನನ್ನಲ್ಲಿ ಉಂಟಾಗಿದೆ."*

* ಡಾ॥ ಜಿ.ಎಸ್.ಎಸ್. ಅವರಿಗೆ ಡಾ॥ ಎಸ್. ಎಲ್. ಭೈರಪ್ಪನವರು ತಾ. ೫-೧೨-೭೩ರಂದು ಬರೆದ ಪತ್ರದಿಂದ ಆಯ್ದದ್ದು.

## ಕೆ. ಕೃಷ್ಣಮೂರ್ತಿ

# ಸೌಂದರ್ಯ ಸಮೀಕ್ಷೆ

ಪ್ರೊ॥ ಶಿವರುದ್ರಪ್ಪನವರು ಹೆಸರಾಂತ ಕವಿಗಳು ; ನುರಿತ ವಿಮರ್ಶಕರು. ಸಂಶೋಧನೆಯ ಕ್ಷೇತ್ರದಲ್ಲಿ ಇವರು ಕೈಗೊಂಡಿರುವ ಸಾಧನೆ ಪ್ರಸ್ತುತ ಪ್ರಬಂಧವಾಗಿ ವ್ಯಕ್ತವಾಗಿದೆ. ಕೇವಲ ಶುಷ್ಕಪಂಡಿತರ ಸ್ವತ್ತೆನಿಸುತ್ತಿದ್ದ ಸಂಶೋಧನೆ ರಸದೃಷ್ಟಿಗೂ ಸಹೃದಯ ಸೃಷ್ಟಿಗೂ ಶತ್ರುವಲ್ಲವೆಂಬುದನ್ನು ಎತ್ತಿ ತೋರಿಸಲೋ ಎಂಬಂತೆ ರೂಪುಗೊಂಡಿದೆ ಈ ಕೃತಿ.

ಕವಿಗಳನ್ನು ಹುಚ್ಚರೆಂದು ಹೀಗಳೆಯುವ ಕಾಲ ಒಂದಿತ್ತು. ತತ್ವಚಿಂತನೆಯ ಗಹನ ಚರ್ಚೆಯಲ್ಲಿ, ಇಲ್ಲವೇ ಧರ್ಮನಿರ್ಣಯದ ಮಹಾಕಾರ್ಯದಲ್ಲಿ, ಕವಿಗಳಿಗೆ ಮನ್ನಣೆ ಯಾಗಲೀ, ಮಹತ್ವವಾಗಲೀ ಈ ನಾಡಿನಲ್ಲಿ ಹಿಂದೆ ಎಷ್ಟಿತ್ತೋ ಯಾರು ಬಲ್ಲರು? ಇಂದು ಸುಸಂಸ್ಕೃತರ ಜೀವನದಲ್ಲಿ ಕವಿಗೆ ಸಂತರ, ಜ್ಞಾನಿಗಳ, ಋಷಿಗಳ, ಆಚಾರ್ಯರ, ಸಿದ್ಧರ ಸ್ಥಾನವೂ ಸಲ್ಲಬಹುದೆಂದು ಕೆಲವರಾದರೂ ಭಾವಿಸುವಂತಾಗಿದೆ. ಈ ಹೊಸ ದೃಷ್ಟಿಯಿಂದ ಹೊರಟು, ಸಕಲ ಕಾವ್ಯಕಲೆಗೂ ಮೂಲವಾದ, "ಸೌಂದರ್ಯ"ವನ್ನು 'ಬುದ್ಧಿಪೂರ್ವಕವಾಗಿ ಪರಿಶೀಲಿಸಿ, ವಿಶ್ಲೇಷಿಸಿ, ವಿವೇಚಿಸುವುದು'—ಇದು ಅತ್ಯಂತ ತೊಡಕಾದ ಸಾಹಸವೆಂದು ಲೇಖಕರೇ ಹೇಳಿದ್ದಾರೆ—ಈ ಪ್ರಬಂಧದ ಉದ್ದೇಶ. 'ಆ ಒಂದು ಸಾಹಸದ ಸೋಲು ಗೆಲವುಗಳನ್ನು ಈ ಪ್ರಬಂಧದ ತರಂಗ ತರಂಗಗಳಲ್ಲಿ ಯಾರಾದರೂ ಕಾಣಬಹುದು' (ಪು–೧).

ಈ "ಮೊದಲ ಮಾತು"ಗಳಲ್ಲೇ ಪ್ರಬಂಧದ ಗೊತ್ತುಗುರಿಗಳ ಬಗೆಗೆ ಇನ್ನೊಂದು ಮಾತಿದೆ :

'ಸೌಂದರ್ಯ, ಸೌಂದರ್ಯಾನುಭವ ಎನ್ನುವುದು ತುಂಬ ದುರವಗಾಹ್ಯ (abstract) ವಾದ ಸಂಗತಿ. ಆದುದರಿಂದ ಇದನ್ನು ಮೂಲಮಾನವನ್ನಾಗಿ ಮಾಡಿಕೊಂಡು ಕವಿಗಳನ್ನು, ಕಾವ್ಯಗಳನ್ನು ಪರಿಶೀಲಿಸಲು ಹೊರಟಿರುವುದರಿಂದ ಇದು ಎಷ್ಟರಮಟ್ಟಿಗೆ ಆಧುನಿಕ ವಿಮರ್ಶೆಯ ವಿಧಾನವಾಗಲು ಸಾಧ್ಯ—ಎನ್ನುವ ಪ್ರಶ್ನೆಗೆ ಇಲ್ಲಿ ಅವಕಾಶವಿದೆ. ವಿಮರ್ಶೆಗೆ ಮೂಲವಾದ ಕಾವ್ಯದ, ಕಾವ್ಯಸೌಂದರ್ಯದ ಅಥವಾ ಕಾವ್ಯಾನುಭವದ ವಿವಿಧ ಅಭಿ ವ್ಯಕ್ತಿಯ ಮುಖಗಳನ್ನು ಕುರಿತ ಪರಿಶೀಲನೆ ಇದು' ಎಂದು ಪ್ರಬಂಧದ ಉದ್ದೇಶ ವನ್ನು ಲೇಖಕರು ತಿಳಿಸಿದ್ದಾರೆ.

ಗ್ರಂಥದಲ್ಲಿ ಕ್ರಮವಾಗಿ—ಸೌಂದರ್ಯಬೋಧೆ, ಸೌಂದರ್ಯ ವಿಚಾರ, ಭಾರತೀಯ ಸೌಂದರ್ಯ ದರ್ಶನ, ಪ್ರಾಚೀನ ಕನ್ನಡ ಕವಿಗಳಲ್ಲಿ ಸೌಂದರ್ಯದೃಷ್ಟಿ, ನವೋದಯ ಕವಿಗಳಲ್ಲಿ ಸೌಂದರ್ಯಾನುಭವ ಎಂಬ ಐದು ಭಾಗಗಳೂ, ಕಡೆಗೆ ವಿಕೃತಿ, ಭವ್ಯತೆ, ಸತ್ಯಂ ಶಿವಂ ಸುಂದರಂ ಇವುಗಳ ವಿವೇಚನೆಯೂ ಇವೆ; 'ಚೆಲುವಿಗೆ' ಎಂಬ ಪದ್ಯದಿಂದ ಗ್ರಂಥ ಮುಗಿಯುತ್ತದೆ. ಆ ಪದ್ಯದ ಕಡೆಯ ಎರಡು ಸಾಲುಗಳಿವು—

"ನಿನ್ನ ಕೃಪೆಗೊಳಗಾದ ಸಂತಗೆ ಸರ್ವಸೃಷ್ಟಿಯೆ ಚಿತ್‌ಕಳೆ,
ಕಂಡುದೆಲ್ಲವು ಚೆಲುವು, ಮತ್ತಲ್ಲುಂಡುದೇ ರಸವಲ್ಲವೆ?"

ಈ ಬಗೆಯ ಪೂರ್ಣದೃಷ್ಟಿಗೆ ವೇದರಾಶಿ ಎಲ್ಲವೂ ಮೂರ್ತ ಸೌಂದರ್ಯದ ಪ್ರಗಾಥವಾಗಿ, ಉಪನಿಷತ್ತೆಲ್ಲವೂ ಅಮೂರ್ತ ಸೌಂದರ್ಯದ ಆವಿಷ್ಕಾರವಾಗಿ, ಚಿತ್ರನಾಟ್ಯಾದಿ ಕಲೆಗಳೆಲ್ಲವೂ ಯೋಗಸಿದ್ಧಿಯ ಮಾಧ್ಯಮಗಳಾಗಿ ಕಂಡಿರುವದು ಸಹಜವಾಗಿಯೇ ಇದೆ. ಆದರೆ ಈ ದೃಷ್ಟಿ ಎಷ್ಟರಮಟ್ಟಿಗೆ ಇಂದು ಸಾಹಿತ್ಯ ಚಿಂತನೆಗೆ ಅನ್ವಯಿಸುತ್ತದೆ ಎಂಬುದೇ ನಮ್ಮ ಮೊದಲ ಸಮಸ್ಯೆ. ೧೮೫೨ರಲ್ಲಿಯೇ ಫ್ರಾನ್ಸ್ ದೇಶದ ಫ್ಲಾಬರ್ಟ್ ಹೇಳಿದ ಒಂದು ವಾಕ್ಯ ಇಲ್ಲಿ ನೆನಪಿಗೆ ಬರುತ್ತದೆ—

"Perhaps beauty will become a sentiment for which mankind has no further use and art will be something halfway between algebra and Music" (Correspondence)

(ಬಹುಶ: ಸೌಂದರ್ಯವೆಂಬುದು ಮಾನವ ಕುಲಕ್ಕೇ ನಿರುಪಯೋಗಿಯಾದ ಒಂದು ಭಾವನೆಯಾದೀತು; ಕಲೆಯು ಬೀಜಗಣಿತಕ್ಕೂ ಸಂಗೀತಕ್ಕೂ ನಡುವಣ ಯಾವುದೋ ಒಂದು ಪ್ರಕಾರವೆನಿಸೀತು.)
ಸೌಂದರ್ಯವೆಂಬ ಕಲ್ಪನೆಯನ್ನು ಅತಿಯಾಗಿ ಹಿಂಜಿದರೆ ಆಗುವ ದುಷ್ಪರಿಣಾಮ ಫ್ಲಾಬರ್ಟ್‌ನ ಎಚ್ಚರಿಕೆಯಲ್ಲಿ ಅಡಗಿದೆ.

ಕಾವ್ಯ ಹಾಗೂ ಕಲೆಗಳನ್ನು ವಿಮರ್ಶಕನ ದೃಷ್ಟಿಕೋನದಿಂದ ಬೆಲೆ ಕಟ್ಟುವ ಪರಿಪಾಠ ಪೂರ್ವ ಪಶ್ಚಿಮಗಳೆರಡರಲ್ಲೂ ಕಂಡುಬರುವ ಸಂಗತಿ. ಇದಕ್ಕೆ ಪ್ರತಿಯಾಗಿ ಕವಿಯ ದೃಷ್ಟಿಕೋನವೊಂದು ಉಂಟೆಂಬುದು ನಿರ್ವಿವಾದ. ಈ ಕವಿಮುಖವನ್ನು, ಕವಿಯ ಅಂತರನುಭವದ ವಿಕಾಸಾಂಶವನ್ನು ವಿಚಾರದೃಷ್ಟಿಯಿಂದ ನೋಡುವುದು ಅತ್ಯಗತ್ಯವಾದ ಕಾರ್ಯ. ಈ ಕಾರ್ಯವನ್ನು ಕನ್ನಡದಲ್ಲಿ ಪ್ರಥಮವಾಗಿ ಕೈಗೊಂಡುದಕ್ಕಾಗಿ ಲೇಖಕರು ಅಭಿನಂದನಾರ್ಹರು. ಆದರೆ ದರ್ಶನನಿರ್ಣಯ, ಅಭಿವ್ಯಕ್ತವಾದ ಕಲಾಕೃತಿಯ ವಿಶ್ಲೇಷಣೆಯಿಂದ ಮಾತ್ರ ಶಕ್ಯವಾಗುವುದರಿಂದ ಕವಿ-ವಿಮರ್ಶಕ ದೃಷ್ಟಿಗಳೆರಡಕ್ಕೂ ಬಿಡಲಾಗದ ಬೆಸುಗೆಯಿದ್ದೇ ಇರುತ್ತದೆ.

ಲೇಖಕರು ಉದ್ದಕ್ಕೂ 'ಸೌಂದರ್ಯ', 'ಸೌಂದರ್ಯಾನುಭವ', 'ರಸ', 'ಆನಂದ' —ಇವುಗಳನ್ನು ಪರ್ಯಾಯಪದಗಳಾಗಿ ಬಳಸಿದ್ದಾರೆ. ಕಾವ್ಯ ಮೂಡುವ ಮುನ್ನ

ಕವಿಯ ಅಂತರಂಗದಲ್ಲಿ ಉದಿಸುವ ನಿಸ್ಸಂಗ ಪರಿಭಾವನೆಯೇ ಇದರ ಸ್ವರೂಪನೆಂದಿದ್ದಾರೆ (ಪು. ೭, ೮, ೯, ೧೦, ೧೫, ೭೭, ೭೮ ಇತ್ಯಾದಿ) ನಡುನಡುವೆ.

ಚಂದ್ರ ಎಂಬ ವಸ್ತುವಿಗೇ ಸಹಜ ಸೌಂದರ್ಯವಿದೆ....ವಾಸ್ತವವಾಗಿ ಪ್ರೇಮವೇ ಸೌಂದರ್ಯ ಧರ್ಮ....ಈ ಸಂದರ್ಭದಲ್ಲಿ ಭಾವ ಕೇವಲ ಪ್ರೇಮ (ಪು. ೧೩)

ಅನುಭವದ ಚರ್ವಣರೂಪದ ಪುನರನುಭವವೇ ಕಲಾಸೃಷ್ಟಿಗೆ ಕಾರಣವಾದ ಅನುಭವ (ಪು. ೧೪-೧೮).

ಮುಂತಾಗಿ ಬರೆಯುವಾಗ, ಅಥವಾ

Coleridge ಹೇಳುವ suspension of disbelief—ಸರಿಯಲ್ಲ. ಯಾರೂ ಇದನ್ನು ಅನ್ವಯಿಸಿ ನೋಡುವುದಿಲ್ಲ....(ಪು. ೮)

ಎಂದು ಒಮ್ಮೆ ಬರೆದು,

ನಾಟಕ ನೋಡುವ ಪ್ರೇಕ್ಷಕನಿಗೆ ತಾನು ನೋಡುವುದು ನಾಟಕವೆಂಬ ಅರಿವಿದ್ದೂ, ನಾಟಕದ ಕ್ರಿಯೆಯಲ್ಲಿ ಐಕ್ಯ ಹೊಂದಿದರೆ ತಾನೆ ರಸಾನುಭವ? (ಪು. ೧೮)

ಎಂದು ಮತ್ತೊಮ್ಮೆ ಪ್ರಶ್ನಿಸುವಾಗ; ಮತ್ತೆ,

ಸೌಂದರ್ಯಾನುಭವ ಎಂದರೆ ಕೇವಲ ಆಹ್ಲಾದಕಾರಿಯಾದ, ಸಂತೋಷಕಾರಿಯಾದ ಅನುಭವ ಎಂದಲ್ಲ (ಪು. ೨೭೬ ಟಿ)

ಎಂಬ ವ್ಯಾಖ್ಯೆಯನ್ನು ಕೊಟ್ಟಮೇಲೂ,

ಸುತ್ತ ಕಾಣುವ ನಿಸರ್ಗ ರಮ್ಯತೆಯಾಗಲೀ, ಮಾನವ ಸೌಂದರ್ಯವಾಗಲೀ ಅಥವಾ ಇವುಗಳ ಅನುಕೃತಿ ರೂಪವಾದ ಕಲಾಸೌಂದರ್ಯದ ಉಪಾಸನೆಯಾಗಲೀ ಶಾಶ್ವತವಾದ ಶಾಂತಿಯನ್ನೂ ಬಿಡುಗಡೆಯನ್ನೂ ನೀಡಲಾರದು ಎಂದು ಭಾವಿಸಿದಂತೆ ತೋರುತ್ತದೆ (ಪು. ೪೧೨)

ಎಂದು ಪ್ರಾಚೀನ ದೃಷ್ಟಿಯನ್ನು ವಿಮರ್ಶಿಸುತ್ತ, 'ಕಲಾನುಭವ ಈ ಮತದ ಪ್ರಕಾರ ಕೇವಲ ಕಾಮುಕಪೌಲ್ಯ' ಎಂಬ ಸಿದ್ಧಾಂತಕ್ಕೆ ಬಂದಾಗ, ಲೇಖಕರು ಪದಪ್ರಯೋಗದಲ್ಲಿ ಶೈಥಿಲ್ಯಕ್ಕೋ, ಇಲ್ಲವೆ ವಿಚಾರಪ್ರತಿಪಾದನೆಯಲ್ಲಿ ವಿರೋಧಾಭಾಸಗಳಿಗೋ ಎಡೆ ಕೊಟ್ಟಂತೆ ಕಾಣುತ್ತದೆ. ಪ್ರಾಚೀನ ಕವಿಗಳ ಸೌಂದರ್ಯದರ್ಶನ ಕಾಮುಕಪೌಲ್ಯಕ್ಕೇ ಸೀಮಿತವಾಗಿತ್ತೇ ಎಂಬ ಪ್ರಶ್ನೆ ಏಳುವಂತೆ ಲೇಖಕರು ಪ್ರತಿಪಾದನೆಯಲ್ಲಿ ಅಷ್ಟಾದಶ ವರ್ಣನೆ, ಸ್ತ್ರೀವರ್ಣನೆ, ಪೌರುಷ ವರ್ಣನೆ, ಶಿಶುವರ್ಣನೆ, ದೇವತಾವರ್ಣನೆ, ನೃತ್ಯ ಚಿತ್ರಾದಿ ವರ್ಣನೆಗಳನ್ನು ಮಾತ್ರ ಗಮನಿಸಿದ್ದಾರೆ, ಪು. ೧೭೦ರಿಂದ ೨೫೫ರ ವರೆಗೆ.

ಹೀಗೆಯೇ ಸಹೃದಯನ ಸಂಸ್ಕಾರಕ್ಕೆ ಅನುಗುಣವಾಗಿ ಕವಿಯ ಅನುಭವಕ್ಕೂ ಸಹೃದಯನ ಅನುಭವಕ್ಕೂ ಬೇಕಾದಷ್ಟು ಅಂತರವಿರಬಹುದೆಂದು ಪುಟ ೧೯ರಲ್ಲಿ ಒಪ್ಪಿ, ಅನಂತರ ಕವಿಯ ಅನುಭವವನ್ನು ಅಳೆಯಲು ನವೀನ ಕವಿಗಳನ್ನು ಕುರಿತಾಗ ಸೌಂದರ್ಯ ವಿಷಯಕ ಕವಿವಚನಗಳನ್ನೇ ಆಧಾರವಾಗಿಯೂ ಪೂರ್ವಕವಿಗಳನ್ನು

ಕುರಿತಾಗ ಸಹೃದಯ ಕಲ್ಪನೆಗಳನ್ನೇ ಬಹುಮಟ್ಟಿಗೆ ಆಧಾರವಾಗಿಯೂ ಹಿಡಿಯುವುದು ಅಷ್ಟು ಯುಕ್ತವೆನಿಸದು. ಸೌಂದರ್ಯವನ್ನು ಕುರಿತ ಕವಿಗಳ ವಚನಗಳಲ್ಲಿ ತಾನೆ ಏಕವಾಕ್ಯತೆ ಎಲ್ಲಿಂದ ಸಾಧ್ಯ? ಜನಪದಕವಿಗಳು ಕಂಡ ಸೌಂದರ್ಯ ದೃಷ್ಟಿಯನ್ನು ವಿವರಿಸುತ್ತ,

'ದೈವೀ ಅನುಭಾವದಿಂದ ಎಚ್ಚರಗೊಂಡ ಇವರ ಕಣ್ಣುಗಳು ಇಂದ್ರಿಯ ಸೌಂದರ್ಯದಿಂದ ಆತ್ಮಸೌಂದರ್ಯದವರೆಗಿನ ಚೆಲುವಿನ ನಿಲುವುಗಳನ್ನು ಗುರುತಿಸಿ ಹಾಡಿರುವುದು ಆಶ್ಚರ್ಯವೇನಲ್ಲ' (ಪು ೨೭೧),

ಎಂದು ತೀರ್ಮಾನಿಸಿದ್ದನ್ನು ನೋಡಿದರೆ, ಇವರು ಒಬ್ಬ ಮಹಾಕವಿಗೂ ಒಂದು ಜನಪದಗೀತೆಯ ನಿರ್ಮಾತನಿಗೂ ಅಂತರವನ್ನು ಗುರುತಿಸುವ ಬದಲು ಸಾಮ್ಯವನ್ನು ಸಾಧಿಸಲು ಹೊರಟಂತೆ ಕಾಣುತ್ತದೆ. ಈ ದೃಷ್ಟಿಯಿಂದ ಕವಿ, ಕವಿಗೆ ಇರುವ ವ್ಯತ್ಯಾಸಗಳು ಮಾಯವಾಗುತ್ತವೆ. 'ಕಾವ್ಯದ ಉದಯವೇ ಸೌಂದರ್ಯದಿಂದ' ಎಂಬ ಸೂತ್ರವನ್ನೊಪ್ಪಿದಮೇಲೆ ಯಾವ ಕಾವ್ಯದಲ್ಲಿ ತಾನೇ ಒಂದಿಲ್ಲೊಂದು ರೀತಿಯ ಸೌಂದರ್ಯ ಪ್ರಕಾಶ ಇಲ್ಲದೆಹೋದೀತು? ಯಾವ ಕವಿಯಲ್ಲಿ ತಾನೆ, ಚತುರ್ಮುಖ ಸೌಂದರ್ಯವನ್ನು ವ್ಯಾಖ್ಯಾನಮಾಡಿ ತೋರಿಸುವುದು ಅಶಕ್ಯವಾದೀತು?

ಮೂರನೆಯ ಭಾಗವಾದ ಭಾರತೀಯ ಸೌಂದರ್ಯದರ್ಶನ, ಅದಕ್ಕೆ ಹಿಂದಿನ ಭಾಗ, ಪಾಶ್ಚಾತ್ಯ ವಿಚಾರ ಸರಣಿ—ಎರಡೂ ವಿದ್ವಾಂಸರ ವಿಭಿನ್ನ ಮತಗಳ ಒಂದು ಸೂಕ್ಷ್ಮ ಸಂಗ್ರಹ ಎನ್ನಬಹುದು. ಇಲ್ಲಿ ಲೇಖಕರ ಗ್ರಂಥಸಂಗ್ರಹಕಾರ್ಯವೇ ಪ್ರಶಂಸನೀಯವಾಗಿದೆ. ಆದರೆ ಭಾರತೀಯ ವಿಚಾರಗಳ ಸಂಗ್ರಹಕಾಲದಲ್ಲಿ ಕೇವಲ ಎ. ಸಿ. ಬೋಸ್, ನಲಿನೀಕಾಂತಗುಪ್ತ, ಶ್ರೀಅರವಿಂದರು, ಪಿ. ಎಸ್. ಶಾಸ್ತ್ರೀ ಮುಂತಾದ ಒಂದು ವಿಚಾರ ಪ್ರಣಾಲಿಯವರ ಆಧ್ಯಾತ್ಮಿಕ ವ್ಯಾಖ್ಯೆಗೆ ಹೆಚ್ಚಿನ ಮಹತ್ವಕೊಟ್ಟು, ಮಿಕ್ಕ ಪ್ರಸಿದ್ಧ ವಿದ್ವಾಂಸರನ್ನೆಲ್ಲ ಮರೆತುಬಿಟ್ಟಿರುವುದು ವಿಷಯದ ಸಮತೋಲ ಪ್ರತಿಪಾದನೆಗೆ ಸಹಾಯವಾಗಿದೆ ಎನ್ನುವಂತಿಲ್ಲ. ಸೌಂದರ್ಯ, ರಸ ಈ ಶಬ್ದಗಳನ್ನು ಕೈಬಿಟ್ಟು ಸಹ ವೇದ, ಶಾಸ್ತ್ರ, ಉಪನಿಷತ್ತುಗಳಿಗೆ ಅನೇಕರು ಹಿಂದೆ ವ್ಯಾಖ್ಯಾನ ಮಾಡಿದ್ದಾರೆ. ಈಗಲೂ ಮಾಡುತ್ತಿದ್ದಾರೆ.

'ಸೌಂದರ್ಯ' ಶಬ್ದದ ಅನಂತ ಅರ್ಥವ್ಯಾಪ್ತಿಯು, ಹಾಗು ವಿಶಿಷ್ಟ ಪ್ರಕಾರಗಳ ನಿರ್ದೇಶನಕ್ಕೆ ಆಧಾರವಾಗಿ, ಎಲ್ಲವನ್ನೂ ಬಿಟ್ಟು, ಅಮರಕೋಶದ ಪರ್ಯಾಯಪದಗಳ ಪಟ್ಟಿಯನ್ನು ಹಿಡಿದು—

'ರುಚಿರಂ' ಎಂದರೆ ಪ್ರಕಾಶಿಸುವುದು....ಅನಂತರ ಅದು ನಮ್ಮ ಅಂತರಂಗದಲ್ಲಿ ಚರಿಸುತ್ತದೆ (ಚಾರು ಚರತಿ ಮಾನಸ್ಯೇ), ಹೀಗೆ ಅದು ನಮ್ಮ ಪರಿಭಾವನೆಯ ವಸ್ತುವಾಗಿ, ಸಂಪೂರ್ಣ ಸಮಾನವಾಗಿ (ಸುಷುಮ್) ಬೆಳೆಯುತ್ತದೆ...(ಪು. ೪೭),

ಇತ್ಯಾದಿಯಾಗಿ ವ್ಯಾಖ್ಯಾನ ಕೌಶಲವನ್ನು ತೋರಿಸಿ, 'ಸೌಂದರ್ಯಾನುಭವದ ಪರಿಯನ್ನೇ ಇದು ಎಷ್ಟೋ ಸೊಗಸಾಗಿ "ಮನಶ್ಶಾಸ್ತ್ರೀಯವಾಗಿ" ನಿರೂಪಿಸಿದೆ!' ಎಂಬ

ಮಾತು ವಿದ್ವದ್ಗ್ರಾಹ್ಯವಾಗುವಂತಿಲ್ಲ. ಆ ಕೋಶದ ಪಟ್ಟಿಯಲ್ಲಿ ಇವರು ಹೇಳುವ ಯಾವ ಅಂಶವೂ ಇಲ್ಲ; ಮನಶ್ಶಾಸ್ತ್ರ ದೂರವೇ ಉಳಿಯಿತು. ಇದರಂತೆಯೇ—

ನಮ್ಮಲ್ಲಿ 'ಸುಂದರ' ಎಂಬ ಪದವನ್ನು ವೇದೋಪನಿಷತ್ತುಗಳ ಕಾಲದಲ್ಲಿ ಬಳಸದೆ, ಅವುಗಳ ಮುಂದಿನ ಕಾಲದ ಕೃತಿಗಳಲ್ಲಿಯೂ ಅದನ್ನು ಕ್ವಚಿತ್ತಾಗಿ ಬಳಸಿರುವುದರ ಮೂಲಕ ನಮ್ಮವರು ಆ ಪದ ವಿವರಣೆಗೆ ದೂರವಾದುದು ಎಂಬುದನ್ನು ಸೂಚಿಸಿರುವರು (ಪು ೫೨),

ಎನ್ನುವ ಮಾತಾದರೂ ಸಂಶೋಧನಾ ಗ್ರಂಥದಲ್ಲಿ ನಿರೀಕ್ಷಿಸುವ ತರ್ಕಸಾಧುತ್ವವನ್ನು ಪಡೆದಿಲ್ಲ. Negative argumentನಿಂದ Positive conclusion ಯಾವುದೂ ಬಾರದು.

ಆಲಂಕಾರಿಕರ ಮತದಲ್ಲಿ ಸೌಂದರ್ಯವನ್ನು ವಿವರಿಸುವಾಗ—

"ಕಾವ್ಯದ ಸಾರ ರಸ; ಅದೇ ಸೌಂದರ್ಯ—ಈ ಒಂದು ಸಿದ್ಧಾಂತ ನಿರ್ವಿವಾದವಾಗಿ ಖಚಿತವಾಗಿ ನೆಲೆಗೊಂಡದ್ದು ಅಭಿನವಗುಪ್ತನ ಕಾಲಕ್ಕೆ" (ಪು. ೧೫೬) ಎಂಬ ಬರವಣಿಗೆಯಿದೆ. ಈ ಮಾತನ್ನು, ಸೌಂದರ್ಯ, ರಸ ಎರಡೂ ಅಭಿನ್ನವೆಂದು ಯಾವ ಆಲಂಕಾರಿಕರು ಹೇಳಿರುವುದೂ ನಮಗೆ ಗೊತ್ತಿಲ್ಲ.

ಹೀಗೆ ಎಷ್ಟೋ ವಿವರಗಳಲ್ಲಿ ಅಭಿಪ್ರಾಯಭೇದವಿದ್ದರೂ, ಲೇಖಕರ ಸೂಕ್ಷ್ಮ ಸಂವೇದನೆ, ಪ್ರತಿಪಾದನ ಶೈಲಿ ಇವುಗಳಿಂದ ಪರವಶರಾಗಿ ಮೊದಲಿನಿಂದ ಕಡೆಯವರೆಗೆ ಆಸಕ್ತಿಯಿಂದ ಪುಸ್ತಕವನ್ನು ಓದುವಂತೆ ಇರುವದು ಇಲ್ಲಿಯ ದೊಡ್ಡ ಗುಣ. ಸೌಂದರ್ಯದ ಪ್ರಕಾರಗಳನ್ನು, ಸಂಸ್ಕಾರಗಳನ್ನು, ಇಷ್ಟು ಸಮಗ್ರವಾಗಿ ವಿಶ್ಲೇಷಿಸುವ ಗ್ರಂಥ ಕನ್ನಡದಲ್ಲಿ ಇದೊಂದೇ. ಚೆಲುವು, ಅದರ ಬಗ್ಗೆ ಕವಿಯ ಒಲವು, ರಸಿಕನ ನಿಲವು ಮೂರನ್ನೂ ಮನವರಿಕೆಯಾಗುವಂತೆ ಅನೇಕ ಉದಾಹರಣೆಗಳಿಂದ ವಿವರಿಸಿರುವುದು ಇಲ್ಲಿಯ ವೈಶಿಷ್ಟ್ಯ. ತಾತ್ವಿಕವಾಗಿ ಕೊನೆಯ ಮಾತು ಇಲ್ಲಿ ಉಕ್ತವಾಗಿದೆ ಎನ್ನಲಾಗದಿದ್ದರೂ, ಒಂದು ಹೊಸ ದೃಷ್ಟಿಯಿಂದ ಪೂರ್ವತರ ಹಾಗೂ ಅದ್ಯತನ ಸಾಹಿತ್ಯವನ್ನು ಇವರು ಅವಲೋಕಿಸುವಾಗ ತಮ್ಮ ಉತ್ತಮ ಅಭಿರುಚಿಯನ್ನು ವ್ಯಕ್ತಪಡಿಸಿದ್ದಾರೆ. ಈಗಾಗಲೇ ಇದಕ್ಕೂ ಮುಂದಿನ ಹೆಜ್ಜೆಗಳನ್ನು ಇಟ್ಟಿರುವ ಈ ಗ್ರಂಥಕರ್ತರಿಂದಲೇ ತಾತ್ವಿಕ ವಿಚಾರದಲ್ಲಿಯೂ ಹೆಚ್ಚಿನ ಸಂಶೋಧನೆಗಳನ್ನು ನಾವು ನಿರೀಕ್ಷಿಸಬಹುದಾಗಿದೆ.*

* ಪ್ರ.ಕ ೪೮. ೨

ಕೆ. ವಿ. ನಾರಾಯಣ

# 'ಸೌಂದರ್ಯ ಸಮೀಕ್ಷೆ' ಮತ್ತು ನವೋದಯ ಸಾಹಿತ್ಯ ಮೀಮಾಂಸೆ

ಚಾರಿತ್ರಿಕವಾದ ಕಾರಣಗಳಿಂದ ಉಂಟಾದ ನವೋದಯವು ಕನ್ನಡಸಾಹಿತ್ಯದಲ್ಲಿ ಒಂದು ಹೊಸತನವನ್ನು ತಂದಿತಷ್ಟೆ. ಈ ಹೊಸತನ ಸೃಜನಶೀಲತೆಯಲ್ಲಿ ಮೈದಾಳಿ ಬಂದಂತೆ ವಿಮರ್ಶಕನ ಪ್ರಜ್ಞೆಯಲ್ಲೂ ಕಾಣತೊಡಗಿತು. ಹಾಗೆ ನೋಡಿದರೆ ಇವೆರಡೂ ಅಕ್ಕಪಕ್ಕದಲ್ಲೇ ಬೆಳೆದಂತೆ ತೋರುತ್ತದೆ. ಇದರ ಜತೆಗೆ ಸಾಹಿತ್ಯವನ್ನು ವಿಶೇಷವಾಗಿ ಅಧ್ಯಯನ ಮಾಡುವುದು ಶಿಕ್ಷಣ ಪ್ರಣಾಲಿಯಲ್ಲಿ ಸೇರಿಕೊಂಡು ಬಂದದ್ದು ಕೂಡಿತು. ಆದರಿಂದ 'ಸಾಹಿತ್ಯ'ದ ಜತೆ 'ಸಾಹಿತ್ಯವನ್ನು ಕುರಿತ ಸಾಹಿತ್ಯ'ವೂ ಬೆಳೆಯಿತು. ಇಂಗ್ಲಿಷಿನ ಮೂಲಕ ತೆರೆದುಕೊಂಡ ಪಾಶ್ಚಾತ್ಯ ಸಾಹಿತ್ಯ ಮತ್ತು ಮೀಮಾಂಸೆಗಳ ಬೆಳಕಿನಲ್ಲಿ ಆವರೆಗೆ ಮಾದರಿಗಳಾಗಿದ್ದ ಪ್ರಾಚೀನ ಸಾಹಿತ್ಯ ಮತ್ತು ಮೀಮಾಂಸೆಗಳನ್ನು ನೋಡುವುದು; ಪರಿಣಾಮವಾಗಿ ಈವರೆಗೆ ಸ್ವೀಕರಿಸಿದ್ದ ಮಾದರಿಗಳಲ್ಲಿ ಅಕಾಲೀಕವಾದದ್ದನ್ನು ಕೈಬಿಟ್ಟು, ಸೂಕ್ತವಾದ ಪಾಶ್ಚಾತ್ಯಮಾದರಿಗಳನ್ನು ಸ್ವೀಕರಿಸುವುದು ಪ್ರಾರಂಭವಾದವು. ಈ ಚಟುವಟಿಕೆಯ ಮುಂಚೂಣಿಯಲ್ಲಿ ಕವಿಗಳೇ ಇದ್ದರು. ಎಂದರೆ ಸೃಜನಶೀಲ ಚಟುವಟಿಕೆಯಲ್ಲಿ ತೊಡಗಿದವರೆ ಸೂಕ್ತವಾದ ವಿಮರ್ಶಾನೆಲೆಗಳನ್ನು ಸಿದ್ಧಪಡಿಸುವುದು ಕಂಡುಬರುತ್ತದೆ. ಈ ಸಂಗತಿಗಳ ಹಿನ್ನೆಲೆಯಲ್ಲಿ ಡಾ. ಜಿ. ಎಸ್. ಶಿವರುದ್ರಪ್ಪನವರ ಮಹಾಪ್ರಬಂಧ 'ಸೌಂದರ್ಯ ಸಮೀಕ್ಷೆ'ಯನ್ನು ಗಮನಿಸಬೇಕಾಗುತ್ತದೆ.

'ಸೌಂದರ್ಯ'ವೆಂಬ ಸಂಪ್ರತ್ಯಯ (concept) ಭಾರತೀಯ ಕಾವ್ಯ ಮೀಮಾಂಸೆಗೆ ಅಪರಿಚಿತವಾದುದೇನೂ ಅಲ್ಲ. ಕಾವ್ಯದ ಚರ್ಚೆಯ ಸಂದರ್ಭದಲ್ಲಿ ಅದರ ಪ್ರಾಸಂಗಿಕ ಉಲ್ಲೇಖಗಳು ಬಂದಿವೆ. ಅವುಗಳನ್ನು ಆಧರಿಸಿ ಭಾರತೀಯರ ಸೌಂದರ್ಯಸಂಬಂಧಿ ವಿಚಾರಗಳನ್ನು ಪುನಾರಚಿಸುವ ಬೇರೆಬೇರೆ ಪ್ರಯತ್ನಗಳು ನಡೆದಿವೆ. (ಈ ಪುನಾರಚನೆಗೆ ಕಾವ್ಯಮೀಮಾಂಸೆಯ ಜತೆಗೆ ಕಲೆಯ ವಿವಿಧ ಪ್ರಕಾರಗಳಾದ ವಾಸ್ತುಶಿಲ್ಪ, ಸಂಗೀತ, ನೃತ್ಯ, ಚಿತ್ರಕಲೆಗಳ ನೆರವನ್ನು ಪಡೆದಿರುವ ಸಂದರ್ಭಗಳು ಕನ್ನಡದಲ್ಲಿ ಇಲ್ಲವೆನ್ನುವಷ್ಟು ಕಡಿಮೆ.) ಕಾವ್ಯಾನುಭವವನ್ನು ಸೌಂದರ್ಯಾನುಭವವೆಂದು ಕರೆಯುವುದಾದರೆ ಈ ಅನುಭವದ ಸ್ವರೂಪವನ್ನು ಚರ್ಚಿಸುವುದರ ಜತೆಗೆ ಅದರ ಕಾರಣ ಮೀಮಾಂಸೆಯನ್ನೂ ಮಾಡು

ಇದು ತೀರಾ ಅವಶ್ಯವಾದ ಕೆಲಸವೇನೊ ಹೌದು. ಕನ್ನಡದ ಸಂದರ್ಭದಲ್ಲಿ ಈ ಬಗೆಯ ಕೆಲಸವನ್ನು ಈ ಪ್ರಬಂಧದಲ್ಲಿ ಮೊದಲಬಾರಿಗೆ ಮಾಡಲಾಗಿದೆ ಎನ್ನುವುದನ್ನು ಗಮನಿಸಬೇಕು. ಒಂದು ಕಾವ್ಯ ಒಟ್ಟಾಗಿ ಇಲ್ಲವೇ ಆಂಶಿಕವಾಗಿ ಓದುಗನನ್ನು ಆಕರ್ಷಿಸಲು ಇರುವ ಕಾರಣಗಳನ್ನು ಸಾಂಪ್ರದಾಯಿಕವಲ್ಲದ ಅನ್ಯತ್ರನೆಲೆಗಳಲ್ಲಿ ಹುಡುಕುವ ಯತ್ನ ಈ ಪ್ರಬಂಧದಲ್ಲಿದೆ. ಸಾಂಪ್ರದಾಯಿಕವಾಗಿ ಅಲಂಕಾರ, ರಸ, ಧ್ವನಿ, ರೀತಿ ಮುಂತಾದ ಪರಿಕರಗಳನ್ನು ಬಳಸಿ ಕಾವ್ಯರಚನೆ ಓದುಗನಿಗೆ ನೀಡುವ ಅನುಭವವನ್ನು ವಿವರಿಸಲು ಯತ್ನಿಸಲಾಗುತ್ತಿತ್ತು. ಈ ಪರಿಕರಗಳು ಅಭಿವ್ಯಕ್ತಗೊಂಡ ಕಾವ್ಯದ ಭಾಷಿಕಸ್ವರೂಪವನ್ನು ಆಧರಿಸಿ, ಪ್ರಾಸಂಗಿಕವಾಗಿ ಗಮನಾರ್ಹವಾದ ನಿಲುವುಗಳಿಗೆ ಕಾರಣವಾದರೂ ಸರ್ವತ್ರವ್ಯಾಪ್ತಿಯನ್ನು ಪಡೆಯುವಂತಿರಲಿಲ್ಲ. ಆದಕಾರಣವೇ ಅನ್ಯತ್ರನೆಲೆಗಳು ಬೇಕೆನಿಸಿದ್ದವು. ಒಂದು ವರ್ಣನೆಯ ಹೊಸತನವೇ ಅದರ ಆಕರ್ಷಣೆಗೆ ಕಾರಣವೆಂಬ ಮಾತು ಪ್ರತಿಭೆಯ ಚರ್ಚೆಯ ಸಂದರ್ಭದಲ್ಲಿ ಬಂದಿದ್ದರೂ ಅದನ್ನು ಇಡೀ ಕಾವ್ಯಾನುಭವದ ವ್ಯಾಪ್ತಿಯಲ್ಲಿ ವಿವರಣೆಗೆ ತಂದದ್ದು ಈ ಪ್ರಬಂಧದ ಮುಖ್ಯಸಾಧನೆ. ನವೋದಯದ ಪ್ರಮುಖ ಪ್ರಯತ್ನಗಳು ಈ ದಿಕ್ಕಿನಲ್ಲೇ ಇದ್ದು, ಆ ಅಂಶದ ಪ್ರಾತಿನಿಧಿಕ ಮಹತ್ವಗಳನ್ನು ಇಲ್ಲಿ ಗುರುತಿಸಬಹುದಾಗಿದೆ. ಅವುಗಳಲ್ಲಿ ಕೆಲವನ್ನು ಮೊದಲು ನೋಡಬಹುದು.

ಕಾವ್ಯಕ್ಕೆ ಕವಿಯೇ ಕಾರಣನೆಂಬ ಮಾತು ಆನುಷಂಗಿಕವಾಗಿ ಪ್ರಾಚೀನರಲ್ಲಿ ಕಂಡರೂ ಅದನ್ನು ಅವರು ಗಣನೀಯವಾಗಿ ಬೆಳಸಿಲ್ಲ. ಕಾವ್ಯಹೇತುವಾದ ಪ್ರತಿಭೆಯನ್ನು ದೈವದತ್ತವೆಂದೇ ತಿಳಿದಿದ್ದರು. ಪ್ರತಿಭೆಯನ್ನು ಗಳಿಸಲು ಸಾಧ್ಯವಿದ್ದರೂ ಅದು ಪ್ರಥಮದರ್ಜೆಯದ್ದಾಗಿರಲು ಸಾಧ್ಯವಿಲ್ಲವೆಂಬುದೇ ಅವರ ನಿಲುವು. ಹೀಗಾಗಿ ಕಾವ್ಯವನ್ನು ಕವಿಯ ಮಾನಸಿಕ ವ್ಯಾಪಾರವೆಂದು ಗಣಿಸಲಿಲ್ಲ. ಪ್ರಾಪಂಚಿಕ ವ್ಯವಹಾರಗಳನ್ನು ತಾನು ಗ್ರಹಿಸಿದ ರೀತಿಯನ್ನು ಅವು ತನ್ನ ಮೇಲೆ ಬೀರಿದ ಪರಿಣಾಮಗಳನ್ನು ಗುರುತಿಸಲೆಂದೇ ಕಾವ್ಯ ರಚಿಸುವನೆಂಬ ಮಾತಂತೂ ನವೋದಯಕಾಲದಲ್ಲಿ 'ಭಾವಗೀತೆ'ಯ ಉದಯದೊಡನೆ ಮಾತ್ರ ಪ್ರಚಲಿತವಾದದ್ದು. ಇದರ ಪರಿಣಾಮವಾಗಿ ಕಾವ್ಯವನ್ನು ಕವಿಯ ಅನುಭವದ ಅನಿಸಿಕೆಗಳ ದಾಖಲೆಯನ್ನಾಗಿ ಪರಿಗಣಿಸುವ ಪ್ರವೃತ್ತಿ ಬೆಳೆಯಿತು. ಈ ಪ್ರಬಂಧದುದ್ದಕ್ಕೂ ಕಾವ್ಯವನ್ನು ನವೋದಯಕಾಲ ರೂಪಿಸಿಕೊಂಡ ಹೊಸ ದೃಷ್ಟಿಯಲ್ಲಿ ಎಂದರೆ ಕವಿಯ ಅನಿಸಿಕೆಗಳನ್ನಾಗಿ ನೋಡಲಾಗಿದೆ. ಹೀಗೆ ಬದಲಾದ ದೃಷ್ಟಿಕೋನವನ್ನು ಪಡೆದದ್ದು ತಾಂತ್ರಿಕ ಸೌಲಭ್ಯವೇ ಅಥವಾ ಗುಣಾತ್ಮಕ ವ್ಯತ್ಯಾಸವೇ (Qualitative difference) ಎಂಬುದು ಈಗ ಏಳುವ ಪ್ರಶ್ನೆ. ಪ್ರಾಚೀನರಲ್ಲಿ ಕಾವ್ಯಾನುಭವವೆಂಬುದು ಒಂದು ಪ್ರಚೋದಕ (Stimulus) ಮಾತ್ರ. ಎಂದರೆ ವಾಸನಾರೂಪದಲ್ಲಿ ಓದುಗನಲ್ಲೋ ನೋಟಕನಲ್ಲೋ ಇದ್ದ ಅನುಭವಗಳು ಸಾಹಿತ್ಯಕೃತಿಗಳ ಮೂಲಕ ಪ್ರಚೋದನೆಯನ್ನು ಪಡೆದು ಜಾಗೃತ ಅವಸ್ಥೆಗೆ ಬರುತ್ತವೆ. ಕಾವ್ಯವನ್ನು ಪ್ರಚೋದಕ ಉಪಕರಣವನ್ನಾಗಿ ನಿರೂಪಿಸುವ ತತ್ತ್ವ ಅಭಿನವಗುಪ್ತನಲ್ಲಿ ಖಚಿತವಾದ ರೂಪವನ್ನು ತಳೆಯಿತು. ಆದರೆ ಇಲ್ಲಿ—'ಸೌಂದರ್ಯ ಸಮೀಕ್ಷೆ'ಯಲ್ಲಿ ತಳೆಯಲಾದ

ನಿಲುವು ಕಾವ್ಯಾನುಭವದ ಪ್ರೇರಣೆಯನ್ನು ಕಾವ್ಯದಲ್ಲೇ ಇರಿಸುತ್ತದೆ. ಓದುಗ ಯಾವುದನ್ನೂ ತನ್ನೊಳಗಿನಿಂದ ಹೊರಗೆ ತಂದುಕೊಳ್ಳುವುದಿಲ್ಲ; ಕಾವ್ಯದಿಂದಲೇ ಗ್ರಹಿಸುತ್ತಾನೆ. ಎಂದರೆ ಸಹೃದಯ ನಿರುಪಯುಕ್ತನಾದನೆಂದಲ್ಲ. ಕಾವ್ಯವನ್ನು ಕೇವಲ ಸಾಧನ (means)ವನ್ನಾಗಿ ಗಣಿಸದೆ ಸಾಧ್ಯ (end)ವೆಂದು ರೂಪಿಸಿದ್ದು ಮುಖ್ಯ ಬದಲಾವಣೆ; ಇದು ಗುಣಾತ್ಮಕ ವ್ಯತ್ಯಾಸವೆಂದು ಹೇಳಲಡ್ಡಿಯಿಲ್ಲ. ಹೀಗೆ ಕಾವ್ಯವನ್ನು ಬದಲಾದ ನೆಲೆಯಲ್ಲಿ ಇರಿಸಿದ್ದರ ಪರಿಣಾಮಗಳು ಎರಡು.

(೧) ನವೋದಯಕಾವ್ಯವನ್ನು ಗ್ರಹಿಸಬೇಕಾದ ನಿಲುವು ಈ ಮೂಲಕ ಖಚಿತವಾಯಿತು. ಏಕೆಂದರೆ ಕವಿಯ ವಿಶಿಷ್ಟಭಾವಗಳನ್ನೆ ಕಾವ್ಯ ಹೊತ್ತು ನಿಂತಿರುವಾಗ ಅದು ಸಾಧಾರಣೀಕೃತ ಭಾವವೊಂದರ ಪ್ರಚೋದಕವಾಗುತ್ತದೆಯೆಂದು ಹೇಳುವ ವಿರೋಧ ತಪ್ಪಿತು.

(೨) ಚಾರಿತ್ರಿಕವಾಗಿ ಬದ್ಧವಾಗಿರುವ ಪ್ರಾಚೀನ ಕಾವ್ಯಗಳು ನಿರ್ದಿಷ್ಟ ಶ್ರೋತೃವೃಂದಕ್ಕೆ ಕೇವಲ 'ಸಾಧನ'ಗಳೇ ಆಗಿದ್ದಿರಬಹುದಾದ ಸಾಧ್ಯತೆಯನ್ನು ಮೀರಿ ಅದನ್ನು ಈ ಕಾಲದಲ್ಲೂ ಗ್ರಹಿಸಲು, ಮೆಚ್ಚಲು ಇದ್ದ ಮಾರ್ಗಗಳಲ್ಲೊಂದು: ಕೃತಿಯನ್ನು 'ಸಾಧ್ಯ'ವೆಂದು ತಿಳಿಯುವುದು. ಆದ್ದರಿಂದ ಪ್ರಾಚೀನವಾದ ಕಾವ್ಯಗಳೂ ನೀಡುವ ಅನುಭವಗಳನ್ನು ನಿರ್ವಾತದಲ್ಲಿ ವಿವರಿಸುವುದು ಬಳಕೆಗೆ ಬಂತು. ಮತ್ತು 'ಸೌಂದರ್ಯ ಸಮೀಕ್ಷೆ' ತನ್ನ ವ್ಯಾಪ್ತಿಯನ್ನು ವೇದಗಳಿಂದ ಹಿಡಿದು 'ನವ್ಯಕಾವ್ಯ'ದವರೆಗೆ ಇಟ್ಟುಕೊಳ್ಳಲು ಸಾಧ್ಯವಾಯಿತು.

ಈ ಪರಿಣಾಮಗಳು ಸರಿಯೋ ತಪ್ಪೋ ಎಂಬುದು ಈಗ ಮುಖ್ಯವಲ್ಲ. ಈ ಕುರಿತ ಚರ್ಚೆ ಮುಂದಿದೆ. ಆದರೆ ಚಾರಿತ್ರಿಕ ಅವಶ್ಯಕತೆಗಳು ರೂಪಿಸಿದ ಮೀಮಾಂಸೆಯ ಅಂಶಗಳನ್ನು ಈ ಪ್ರಬಂಧ ಒಳಗೊಂಡಿದೆಯೆಂಬುದು ಇಲ್ಲಿ ಗಮನಾರ್ಹ.

ಸೌಂದರ್ಯವನ್ನು ಕುರಿತ ವಾದಗಳನ್ನು, ಚರ್ಚೆಗಳನ್ನು ಪ್ರಬಂಧದ ಮೊದಲಲ್ಲಿ ಸಂಗ್ರಹಿಸಲಾಗಿದೆ. ಪಾಶ್ಚಾತ್ಯರ ವಾದಗಳನ್ನು ಅಲ್ಲಿರುವ ಭಿನ್ನಾಭಿಪ್ರಾಯಗಳೊಡನೆ ಮಂಡಿಸಲಾಗಿದೆ. ಈ ಹಂತದಲ್ಲಿ ಖಚಿತವಾಗಿ ಯಾವೊಂದು ತಾತ್ತ್ವಿಕನಿಲುವನ್ನು ಒಪ್ಪಿದಂತೆ ಕಾಣುವುದಿಲ್ಲವಾದರೂ ಕಾಂಟನ 'ನಿಸ್ಸಂಗ ಪರಿಭಾವನೆ'ಯನ್ನು ಸ್ಥೂಲವಾಗಿ ಸೌಂದರ್ಯಾನುಭವಕ್ಕೆ ಕಾರಣವನ್ನಾಗಿ ಗುರುತಿಸಿಕೊಳ್ಳುವಂತಿದೆ. ಲೌಕಿಕ ಪ್ರಯೋಜನಾಕಾಂಕ್ಷೆಯನ್ನು ಬಿಟ್ಟು, ಬುದ್ಧಿಪೂರ್ವಕವಾಗಿಯಾದರೂ ದಮನಿಸಿ, ಅನುಭವವನ್ನು ಗ್ರಹಿಸುವುದರ ಮೂಲಕ ಸೌಂದರ್ಯಾನುಭೂತಿ ಸಾಧ್ಯವೆಂದು ಹೇಳಲಾಗಿದೆ. ಒಂದು ವಸ್ತು ಯಾ ಅನುಭವ ಸಾಧಾರಣವಾಗಿ ಲೌಕಿಕ ಪ್ರಯೋಜನಾಕಾಂಕ್ಷೆಯಂತಹ ಸಿದ್ಧಪ್ರತಿಕ್ರಿಯೆ (stock response)ಗಳನ್ನು ಉಂಟುಮಾಡಬಲ್ಲುದು: ಮತ್ತೊಬ್ಬನಿಗೆ ನಿಸ್ಸಂಗಪರಿಭಾವನೆಯಿಂದ ಸೌಂದರ್ಯಾನುಭೂತಿಯನ್ನುಂಟುಮಾಡಬಲ್ಲುದು. ಎರಡನೆಯವನು ತನಗಾದ ವಿಶಿಷ್ಟ ಅನುಭವವನ್ನು ಹೇಳಿದಾಗ ಮೊದಲನೆಯ

ವನಿಗೆ ತನಗಾದ ಅನುಭವವು ನೆನಪಿಗೆ ಬಂದರೂ ಅದರ ವಿಶಿಷ್ಟ ಅಂಶವನ್ನು ಆತ ಪರ್ಯಾಯವಾಗಿ ಗ್ರಹಿಸಿ ಆನಂದಿಸುತ್ತಾನೆ. ಇಲ್ಲಿ ಎಚ್ಚರದಿಂದ ಗ್ರಹಿಸಬೇಕಾದ ಮಾತೆಂದರೆ ಇದು. ಪ್ರಾಚೀನರ ವಾದದಂತೆ ಕಾವ್ಯದ ವರ್ಣನೆಗಳು ಓದುಗನ ಸ್ವಂತ ಅನುಭವಗಳನ್ನು ಸಾಧಾರಣೀಕರಿಸಿಕೊಳ್ಳಲು ಪ್ರಚೋದಿಸುತ್ತವೆ. ಏಕೆಂದರೆ ಕವಿಯೂ ಅನುಭವಗಳನ್ನು ಸಾಧಾರಣೀಕರಿಸಿರುತ್ತಾನೆ. ಆದರೆ ಇಲ್ಲಿನ ವಾದದಂತೆ ಓದುಗ ಕಾವ್ಯದ ವರ್ಣನೆಯಿಂದಾಗಿ ತನ್ನ ಸ್ವಂತ ಅನುಭವದಲ್ಲಿ ತಾನು ಸಾರಭೂತ (essential) ಎಂದುಕೊಂಡ ಲೌಕಿಕ ಪ್ರಯೋಜನಾಕಾಂಕ್ಷೆ ಭಾಗವನ್ನು ಕೈಬಿಟ್ಟು ಕವಿಯು ಕಂಡ ವಿಶಿಷ್ಟ ಅಂಶಗಳನ್ನು ಉಳಿಸಿಕೊಳ್ಳುತ್ತಾನೆ. ಎಂದರೆ ನಿಸ್ಸಂಗ ಪರಿಭಾವನೆಯನ್ನು ಒಪ್ಪಿಕೊಳ್ಳುವುದರ ಮೂಲಕ ಕಾವ್ಯದಲ್ಲಿ ಮೂಡಿದ ಅನುಭವದ ವಿಶಿಷ್ಟತೆಯನ್ನು ಮತ್ತು ಅದು ತನ್ನಲ್ಲೇ ಪೂರ್ಣವಾಗಿರುವುದನ್ನು ಸೂಚಿಸಿದಂತಾಯಿತು.

ಸೌಂದರ್ಯವೆಂದರೆ ಅದು ವಸ್ತುವಿನಲ್ಲಿ ಇರತಕ್ಕದ್ದೋ ಅಥವಾ ನೋಟಕನಲ್ಲೇ ಇರತಕ್ಕದ್ದೋ ಎಂಬುದು ಮುಂದಿನ ಪ್ರಶ್ನೆ. ಪಾಶ್ಚಾತ್ಯ ಸೌಂದರ್ಯಶಾಸ್ತ್ರದಲ್ಲಿ ಎರಡೂ ಬಣಗಳೂ ಬಲವಾಗಿಯೇ ಬೆಳೆದು ಘರ್ಷಿಸಿವೆ. ಈ ಮಾತನ್ನು ಪ್ರಬಂಧದ ಪೂರ್ವಾರ್ಧದಲ್ಲಿ ಚರ್ಚಿಸಲಾಗಿದೆ. ಪ್ರಬಂಧದಲ್ಲಿ ಪಕ್ಷಗಳನ್ನು ಸಮರ್ಥಿಸುವ ಇಲ್ಲವೇ ವಿರೋಧಿಸುವ ಧಾಟಿ ಏನೂ ಇಲ್ಲ. ಉಲ್ಲೇಖಗಳೊಡನೆ ವಿವರಿಸಲಾಗಿದೆ. ಮುಂದೆ ಕಾವ್ಯಗಳನ್ನು ಉದಾಹರಿಸಿಕೊಂಡು ಅಲ್ಲಿನ ಸೌಂದರ್ಯವನ್ನು ವಿವರಿಸುವ ಪ್ರಸಂಗಗಳು ಬಂದಾಗ ಸೌಂದರ್ಯವೆಂದರೆ ಅದು ಕವಿಯ ಮನಸ್ಸಿನಲ್ಲಿ ಮೂಡಿದ ಅನುಭವದ ವಿಶಿಷ್ಟರೂಪಿನ ಪರಿಣಾಮವೆಂಬ ನಿಲುವನ್ನು ಒಪ್ಪಲಾಗಿದೆ—ಇದರಿಂದ ಸಿದ್ಧವಾಗುವುದೆಂದರೆ ಲೌಕಿಕ ಜಗತ್ತು ಈಗ ಪ್ರಚೋದಕದ ಪಾತ್ರವನ್ನು ವಹಿಸುತ್ತದೆ ಎಂಬುದು. ಕವಿಯ ಹೊರಗಿನ ಜಗತ್ತು ತನ್ನ ನಿತ್ಯದ ವ್ಯಾಪಾರಗಳನ್ನು 'ತನ್ನ ಪಾಡಿಗೆ ತಾನು' ನಿರ್ವಹಿಸಿಕೊಳ್ಳುತ್ತಿದೆ. ಆದರೆ ಮನೋಭಾವ ವಿಶಿಷ್ಟನಾದ ಕವಿ ಈ ವ್ಯಾಪಾರಗಳನ್ನು ಅವುಗಳ ಸದ್ಯನಿಬದ್ಧತೆಯಿಂದ ಮುಕ್ತಗೊಳಿಸಿ ಬೇರೊಂದು ಬಗೆಯಲ್ಲಿ 'ಕಾಣು'ತ್ತಾನೆ. ಇದೇ ಓದುಗನಲ್ಲಿ ಸೌಂದರ್ಯಾನುಭೂತಿಗೆ ಕಾರಣವಾಗುವ ಮೂಲವಸ್ತು. ಇದರಿಂದ ನೋಡುವವನ 'ಬಗೆಗಣ್ಣಿ'ನಲ್ಲಿ ಸೌಂದರ್ಯವನ್ನು ಉಂಟುಮಾಡುವ, ಕಾಣುವ ಶಕ್ತಿ ಇರುತ್ತದೆ ಎಂಬುದನ್ನು ಒಪ್ಪಿದಂತಾಯಿತು. ಇದರಿಂದ ಕವಿಯ ವಿಶಿಷ್ಟ ಅನುಭವಗಳಿಗೆ ಪ್ರಚೋದನೆಯನ್ನು ಒದಗಿಸುವುದೇ ಹೊರಜಗತ್ತಿನ ಕೆಲಸವೆಂದಾಗುತ್ತದೆ.

ಪ್ರಬಂಧದ ಉತ್ತರಾರ್ಧದಲ್ಲಿ ಕಾವ್ಯಗಳಲ್ಲಿ ಸೌಂದರ್ಯವನ್ನು ಗುರುತಿಸುವ ಭಾಗಗಳಿವೆಯಷ್ಟೆ. ಇಲ್ಲಿ ವಸ್ತುವನ್ನು ವಿಭಜಿಸಿಕೊಳ್ಳುವ ಕ್ರಮ ಮತ್ತೊಂದು ಸಂಗತಿಯನ್ನು ಹೊರಚೆಲ್ಲುತ್ತದೆ. ಕಾವ್ಯಗಳಲ್ಲಿ ಸೌಂದರ್ಯವನ್ನು ವಿವರಿಸುವಾಗ ನಿಸರ್ಗದ ಕೆಲವು ವ್ಯಾಪಾರಗಳನ್ನು ಮೂಲಮಾನವನ್ನಾಗಿ ಇರಿಸಿಕೊಳ್ಳಲಾಗಿದೆ. ಉದಾಹರಣೆಗೆ ಹಗಲು, ರಾತ್ರಿ, ಸೂರ್ಯೋದಯ, ಚಂದ್ರೋದಯ, ಋತುಗಳು ಹೀಗೆ....ಈ ವ್ಯಾಪಾರಗಳನ್ನು ಪ್ರತಿಯೊಂದು ಕಾವ್ಯವೂ ಹೇಗೆ ವಿಶಿಷ್ಟವಾಗಿ ನೋಡಿದೆ ಎಂಬುದನ್ನು ವಿವರಿಸಲಾಗಿದೆ.

ಈ ವಿಶಿಷ್ಟತೆಯೇ ಆಯಾ ಕಾವ್ಯಭಾಗಗಳ ಸೌಂದರ್ಯವೆಂದು ಗೃಹೀತ. ಈ ಚೌಕಟ್ಟನ್ನು ನಿರ್ಮಿಸಿಕೊಂಡದ್ದರಿಂದ ಎಲ್ಲ ಕಾವ್ಯಗಳ ಸೌಂದರ್ಯಾನುಭೂತಿಯನ್ನು ವಿವರಿಸಲು ಒಂದು ಸಾಮಾನ್ಯ ನೆಲೆ ದೊರಕಿತು. ಇದು ಮೇಲುನೋಟಕ್ಕೆ ಅಧ್ಯಯನ ಸೌಲಭ್ಯವೆಂದು ಕಾಣುತ್ತದೆ. ಆದರೆ ಈ ವರ್ಗೀಕರಣದ ಹಿನ್ನೆಲೆಯಲ್ಲಿ ಒಂದು ಚಾರಿತ್ರಿಕ ಆಶಯವಿದೆ. ಅದನ್ನು ಹೀಗೆ ವಿವರಿಸಬಹುದು. ವಸ್ತುಜಗತ್ತನ್ನು ಅದರ ವ್ಯಾಪಾರಗಳನ್ನು ಸದ್ಯನಿಬದ್ಧತೆಯ ಹಿನ್ನೆಲೆಯಲ್ಲಿ ವಿವರಿಸಿ ಅದು ಎಲ್ಲ ಕಾಲಕ್ಕೂ ಒಂದೇ ಬಗೆಯಲ್ಲಿ ನಡೆಯುವ ಪ್ರಕ್ರಿಯೆಗಳ ಮೊತ್ತವೆಂದು ತಿಳಿಯುವುದು ಈ ಚಾರಿತ್ರಿಕ ಆಶಯದ ತಿರುಳು. ಎಂದರೆ ಸೂರ್ಯೋದಯವೆಂಬುದು. ನಿಸರ್ಗದ ವ್ಯಾಪಾರ. ಅದರ ಪ್ರಾಥಮಿಕ ಉದ್ದೇಶ ಬೇರೆ ಅದು ದಿನವೂ ನಡೆಯುವ ವ್ಯವಹಾರ. ಇದನ್ನು ವೇದದ ಋಷಿಗಳಿಂದ ಹಿಡಿದು ಸಮಕಾಲೀನ ಕವಿಗಳವರೆಗೆ ಬೇರೆಬೇರೆ ರೀತಿ ಕಾಣುತ್ತಾ ಬಂದಿದ್ದಾರೆ. ಇಲ್ಲಿ ಬದಲಾಗುತ್ತಿರುವುದು ನೋಡುತ್ತಿರುವ ಮಾನವರ ವಿಚಾರಗಳು. ಸ್ಥಿರವಾಗಿರುವುದು ವಸ್ತು ಜಗತ್ತು. ಹೀಗೆ ವಸ್ತು ಜಗತ್ತನ್ನು ಸ್ಥಿರ (Static) ಮತ್ತು ವಿಚಾರಗಳು (Idea) ಚಲನಶೀಲ (dynamic) ಎಂದು ವಿವರಿಸಿದ್ದು ಈ ಪ್ರಬಂಧದ ಅನ್ವಯಿಕ ಭಾಗ ಪ್ರತಿನಿಧಿಸುವ ಚಾರಿತ್ರಿಕ ಆಶಯ. ವ್ಯಕ್ತಿಕೇಂದ್ರಿತ ಆಲೋಚನೆಗಳು ಬೆಳೆಯುತ್ತಿದ್ದ ನವೋದಯದಲ್ಲಿ ಈ ಆಶಯ ಪ್ರಾತಿನಿಧಿಕವಾದದ್ದು ಸಹಜವಾಗಿಯೇ ಇದೆ.

ಇನ್ನೂ ಒಂದು ವಿಚಾರವನ್ನು ನಾವೀಗ ಗಮನಿಸಬಹುದು. ಸೌಂದರ್ಯವನ್ನು ಶ್ರೇಣಿಯೇ ಇಲ್ಲದ ಏಕರೂಪದ ಅನುಭವವೆಂದು ಇಲ್ಲಿ ಭಾವಿಸಿಲ್ಲ. ಅದರಲ್ಲಿ ನಾಲ್ಕು ಬಗೆಗಳನ್ನು ಗುರುತಿಸಲಾಗಿದೆ (ನೋಡಿ: ಚತುರ್ಮುಖ ಸೌಂದರ್ಯ, ಪು. ೨೨–೪೧). ಈ ನಾಲ್ಕು ಬಗೆಗಳ ನಡುವೆ ಗುಣಾತ್ಮಕವಾದ ವ್ಯತ್ಯಾಸವಿದೆ. ಸೌಂದರ್ಯಪ್ರಜ್ಞೆಯ ಏರುವಿಕೆಯಲ್ಲಿ ಈ ಬಗೆಗಳ ಅಳವಡಿಕೆ ಹೀಗಿರುತ್ತದೆ. ‘ಇಂದ್ರಿಯ ಸೌಂದರ್ಯ’ ‘ಕಲ್ಪನಾ ಸೌಂದರ್ಯ’ ‘ತಾತ್ತ್ವಿಕ ಸೌಂದರ್ಯ’ ಮತ್ತು ‘ಆತ್ಮದ ಸೌಂದರ್ಯ’ ಇವು ಒಂದಕ್ಕಿಂತ ಇನ್ನೊಂದು ಶ್ರೇಷ್ಠವಾಗುತ್ತಾ ಹೋಗುವಂತಹವು. ಒಂದು ಇರುವಲ್ಲಿ ಇನ್ನೊಂದು ಇರುವುದಿಲ್ಲವೆನ್ನುವಂತಿಲ್ಲ—ಇದಿಷ್ಟು ಸಂಗ್ರಹಿಸಿ ಹೇಳಬಹುದಾದ ಮಾತುಗಳು. ಹೀಗೆ ಸೌಂದರ್ಯದ ಬಗೆಗಳನ್ನು ಗುರುತಿಸುವಲ್ಲಿ ಮತ್ತು ಅವುಗಳ ಮೌಲ್ಯನಿರ್ಧಾರದಲ್ಲಿ ಜಾರಿಯಲ್ಲಿರುವ ತಾತ್ತ್ವಿಕನೆಲೆಯನ್ನು ಗಮನಿಸಬೇಕು. ವಸ್ತುಜಗತ್ತು ಸೌಂದರ್ಯಾನುಭವಕ್ಕೆ ನೇರವಾಗಿ ಮತ್ತು ಬಹುಮಟ್ಟಿಗೆ ಕಾರಣವಾಗುವ ಹಂತ ‘ಇಂದ್ರಿಯ ಸೌಂದರ್ಯ’ ಇಲ್ಲಿಂದ ಮುಂದಿನ ಹಂತಗಳಲ್ಲಿ ವಸ್ತುಜಗತ್ತು ನಿಷ್ಕ್ರಿಯವಾಗುತ್ತಾ ಹೋದಂತೆ ಮೊದಲ ಹಂತದಲ್ಲಿ ಪ್ರಾತಿನಿಧ್ಯವೇ ಇಲ್ಲದ ವಿಚಾರಜಗತ್ತು ಹೆಚ್ಚು ಹೆಚ್ಚು ಚಲನಶೀಲವಾಗುತ್ತಾ ಬರುತ್ತದೆ. ಇದರಿಂದಾಗಿ ವಸ್ತುಜಗತ್ತು ಸ್ವತಃ ತಾನೇ ಸೌಂದರ್ಯಾನುಭವದ ಮೂಲವಸ್ತುವನ್ನು ಹೊಂದಿರುವುದರ ಸಾಧ್ಯತೆಯನ್ನು ಒಪ್ಪಿಕೊಂಡರೂ ಅದು ಸೌಂದರ್ಯದ ಶ್ರೇಷ್ಠ ಬಗೆಯಲ್ಲ ಎಂದು ವಾದಿಸಿದಂತಾಯ್ತು. ಈ ಹಿಂದೆ ಹೇಳಿದ ಚಾರಿತ್ರಿಕ ಆಶಯದ ವ್ಯಾಪ್ತಿ ಈ ಸಂಗತಿಯಿಂದ ಇನ್ನಷ್ಟು ಹೆಚ್ಚಾಯಿತು. ವಸ್ತು

ಜಗತ್ತಿನ ವ್ಯಾಪಾರಗಳು ಸೌಂದರ್ಯಕ್ಕೆ ಕಾರಣವಾಗುತ್ತವೆಯಾದರೂ ಅವು ಶ್ರೇಷ್ಠ ಬಗೆಯ ಸೌಂದರ್ಯಕ್ಕೆ ಪೋಷಕವಾಗುತ್ತವೆ. 'ಉತ್ಕಟ ಸೌಂದರ್ಯ'ವೆಂಬ ಶ್ರೇಷ್ಠ ಬಗೆಯಲ್ಲಿ 'ಇಂದ್ರಿಯ ಸೌಂದರ್ಯ'ದ ಪ್ರಭಾವ ಇಲ್ಲವೆನ್ನುವಷ್ಟು ಕಡಿಮೆ. ಹೀಗೆ ಸೌಂದರ್ಯವನ್ನು ವಿಂಗಡಿಸಿಕೊಂಡು ಅಧ್ಯಯನ ಮಾಡಿರುವುದು ವಿಚಾರ ಜಗತ್ತಿನ ಮಹತ್ತ್ವವನ್ನು ಎತ್ತಿಹಿಡಿದ ನವೋದಯ ಸಾಹಿತ್ಯಮೀಮಾಂಸೆಯ ಪ್ರಾತಿನಿಧಿಕ ವಿಚಾರವೇ ಆಗಿದೆ.

ಈ ಪ್ರಬಂಧದಲ್ಲಿ ಒಪ್ಪಲಾದ, ಅನ್ವಯಿಸಲಾದ ಸೌಂದರ್ಯಸಿದ್ಧಾಂತಗಳು ವಿಚಾರ ಮೂಲವಾದಿ (Idealist)ಯವು. ಈವರೆಗೆ ವಿವರಿಸಲಾದ ಸಂಗತಿಯಿಂದ ಈ ಮಾತು ಸ್ಪಷ್ಟವಾಗಿದೆ. ಈಗ ಮುಂದುವರಿದು ಇನ್ನೊಂದು ಪೂರಕ ಅಂಶವನ್ನು ಗಮನಿಸಬಹುದು. 'ವಿಕೃತಿ'ಯನ್ನು ಕುರಿತು ಅಧ್ಯಾಯವೊಂದಿದೆ. (ನೋಡಿ : ವಿಕೃತಿ, ಪುಟ ೩೬೯–೩೮೩) ಇಲ್ಲಿನ ವಿಚಾರಗಳ ಪ್ರಕಾರ ವಸ್ತುಜಗತ್ತಿನ ಹಲವಾರು ಘಟನೆಗಳು, ವಸ್ತುಗಳು ಆಕರ್ಷಣೀಯವಲ್ಲದಿದ್ದರೂ ಅವುಗಳನ್ನು ಚಿತ್ರಿಸುವಾಗ ಕವಿ ಸುಂದರವೆನಿಸುವಂತೆ ಮಾಡಬಲ್ಲ. ಅಂತಹ ವರ್ಣನೆಗಳನ್ನು ಓದಿದಾಗ, ಆ ವರ್ಣನೆಗೆ ಮೂಲವಾದ ವಸ್ತು ಓದುಗನಿಗೆ ನಿಜಜೀವನದಲ್ಲಿ ತರುವ ವಿಕರ್ಷಣೆಯ ಬದಲು ಆಕರ್ಷಣೆಯುಂಟಾಗುತ್ತದೆ. ಈ ವಾದ ಮಿತವ್ಯಾಪ್ತಿಯುಳ್ಳದ್ದೆಂದು ಹೇಳಬೇಕಾಗಿದೆ. ಈ ವಾದದ ಪ್ರಕಾರ ವಸ್ತುಜಗತ್ತಿನ ಕೆಲವು ವಸ್ತುಗಳು ಉಂಟುಮಾಡುವ ಅನುಭವಗಳನ್ನು ವಿಕರ್ಷಣೆಯೆಂದು ಕರೆಯಲಾಗಿದೆ. ವಸ್ತುವನ್ನು ಅದರ ಪ್ರಯೋಜನದಿಂದ ಬೇರ್ಪಡಿಸಿ ಅದರ ಬಗ್ಗೆ ಚಿಂತಿಸಿ ಅದು ವಿಕರ್ಷಿಸುತ್ತದೋ, ಆಕರ್ಷಿಸುತ್ತದೋ ಎಂದು ನಿರ್ಧರಿಸುವುದು ಚಾರಿತ್ರಿಕವಾಗಿ ಸರ್ವತ್ರವ್ಯಾಪ್ತಿಯನ್ನು ಪಡೆಯುವುದಿಲ್ಲ. ಒಂದು ವಸ್ತು ಅದರ ಪ್ರಯೋಜನದಲ್ಲೇ ಮೂಲಭೂತವಾಗಿ ಮನುಷ್ಯನ ಅನುಭವಕ್ಕೆ ಕಾರಣವಾಗುವುದು. ಆದ್ದರಿಂದ ಕಾವ್ಯದ ವರ್ಣನೆಯಲ್ಲಿ ಸುಂದರವಾಗಿದ್ದು, ಅದು ವಸ್ತುಜಗತ್ತಿನಲ್ಲಿ ವಿಕೃತವಾಗಿರುತ್ತದೆ ಎಂದು ಭಾವಿಸಿದಾಗ ಇವೆರಡೂ ಅನುಭವಗಳಿಗೆ ಕಾವ್ಯವೇ ಕಾರಣವಾಗಿದ್ದು, ಪರಿಣಾಮದಲ್ಲಿ ಸುಂದರ ಮತ್ತು ವಿಕೃತಿಯ ಘರ್ಷಣೆಯನ್ನೇ ಅಪೇಕ್ಷಿಸಿರುತ್ತದೆ. ಉಲ್ಲೇಖಿಸಿರುವ ಉದಾಹರಣೆಯಾದ ಮಂಥರೆಯ ಪಾತ್ರದ ವರ್ಣನೆಯನ್ನೇ ಗಮನಿಸಿ. ಅವಳ ಪಾತ್ರದ ವರ್ಣನೆ ಮತ್ತು ವರ್ತನೆಗಳನ್ನು ವಿರುದ್ಧದಿಕ್ಕಿನಲ್ಲಿಡುವುದರಿಂದ ತತ್ತ್ವವನ್ನು ಸಾಧಿಸಲಾಗಿದೆ. ಆದ್ದರಿಂದ ವಿಕೃತ ವಸ್ತುವೆಂಬುದು ಭಾವಾರೋಪಣೆಯಿಂದ ಮುಕ್ತವಾದ ವಸ್ತುಜಗತ್ತಿನಲ್ಲಿ ಇರುವುದನ್ನು ಒಪ್ಪುವುದು ಕಷ್ಟ. ಅಂದರೆ ವಿಕೃತಿ ಮತ್ತು ಸೌಂದರ್ಯವನ್ನು ಕುರಿತ ಸಂಬಂಧ ಮತ್ತೆ ಸೌಂದರ್ಯವನ್ನು ವಿಚಾರ ಮೂಲವಾದದ ನೆಲೆಯಲ್ಲೇ ವಿವರಿಸುತ್ತದೆ.

'ಭವ್ಯತೆ'ಯನ್ನು ಕುರಿತ ವಿಚಾರಗಳನ್ನು (ಪುಟ ೩೮೪–೪೦೮) ಈಗ ಗಮನಿಸಬಹುದು. ಸೌಂದರ್ಯಾನುಭವದ ಒಂದು ಬಗೆಯಲ್ಲಿ ಅನುಭವಿಸುತ್ತಿರುವವನ ವ್ಯಕ್ತಿತ್ವಕ್ಕೆ 'ಅಲ್ಪತೆ'ಯ ಅರಿವು ಉಂಟಾಗುತ್ತದೆ. ಇದು ಭವ್ಯತಾನುಭವ. ವಸ್ತುಜಗತ್ತಿನ ನೂರೆಂಟು ವಿವರಗಳು ವ್ಯಕ್ತಿಯನ್ನು ಆಘಾತಕ್ಕೆ ಪಕ್ಕಾಗಿಸಬಹುದು. ಆದರೆ ಕಾವ್ಯದಲ್ಲಿ

ಓದಿನಿಂದ ಉಂಟಾಗುವ ಆಘಾತ ಸುಂದರವೆನಿಸುತ್ತದೆ. ಇಲ್ಲಿಯ ಸೌಂದರ್ಯವನ್ನು ನೇತ್ಯಾತ್ಮಕ (Negative)ವೆಂದು ಕಾಂಟನು ಕರೆದದ್ದು ಗಮನಾರ್ಹ. ಇಂತಹ ಅನುಭವದ ಸಾಧ್ಯತೆಗಳು ವಸ್ತುವಿನಲ್ಲೇ ಇರಬಹುದೆಂದು ಒಪ್ಪಿದರೂ ಕವಿಯು ವಸ್ತುವನ್ನು ಕುರಿತು ಆಲೋಚಿಸುವ ಕ್ರಮದಲ್ಲೇ ಭವ್ಯತೆಯ ಸಾಧ್ಯತೆಯೆಂಬ ನಿಲುವಿನ ಕಡೆಗೆ ಹೆಚ್ಚು ಒತ್ತಿದೆ. ಇಲ್ಲಿ ಗಮನಿಸಬೇಕಾದ ವಿಚಾರವೊಂದಿದೆ. ಲೌಕಿಕ ಜಗತ್ತಿನ ವಸ್ತುಗಳು ವ್ಯಕ್ತಿಗೆ ಆಘಾತವನ್ನು ತಂದರೂ ಚಾರಿತ್ರಿಕವಾಗಿ ಅದು ನೇತ್ಯಾತ್ಮಕ ಪರಿಣಾಮವನ್ನುಂಟುಮಾಡುವುದಿಲ್ಲವೆಂಬುದಕ್ಕೆ ಜ್ಞಾನದ ಬೆಳವಣಿಗೆಯ ಇತಿಹಾಸವೇ ಸಾಕ್ಷಿ. ಆದರೆ ಕಾವ್ಯ ನೀಡುವ ಭವ್ಯತಾನುಭವ ಹೇಗೆ ಇತ್ಯಾತ್ಮಕವಾಗಬಲ್ಲವೆಂಬುದು ಇನ್ನೂ ಸಿದ್ಧವಾಗದ ಸಂಗತಿ.

ವಿಚಾರಮೂಲವಾದಿ ಸೌಂದರ್ಯ ತತ್ತ್ವಗಳನ್ನು ನವೋದಯ ಸಾಹಿತ್ಯಮೀಮಾಂಸೆ ಒಪ್ಪಿಕೊಂಡಿದ್ದರ ಪ್ರಾತಿನಿಧಿಕ ಕೃತಿಯಾಗಿ 'ಸೌಂದರ್ಯಸಮೀಕ್ಷೆ'ಯನ್ನು ಗಮನಿಸಿದ್ದೇವೆ. ಈ ಸೌಂದರ್ಯ ತತ್ತ್ವಗಳು ವಸ್ತುಜಗತ್ತನ್ನು ಸ್ಥಿರವೆಂದು ಭಾವಿಸುತ್ತವೆ. ಸೌಂದರ್ಯವನ್ನು ವಿಚಾರಮೂಲದಲ್ಲಿ ವಿವರಿಸುತ್ತವೆ. ಇದರಿಂದ ಕಾವ್ಯವೆಂಬುದು ವಿಜ್ಞಾನದ ಜತೆ ವಿರೋಧವನ್ನು ರಚಿಸಿಕೊಳ್ಳುತ್ತದೆ. ಇದನ್ನು ಹೀಗೆ ವಿವರಿಸಬಹುದು. ಕಾವ್ಯವನ್ನು ಅವಿಚಾರಿತ ರಮಣೀಯವೆಂದು ವಿಜ್ಞಾನವನ್ನು ವಿಚಾರಿತ ಸುಂದರವೆಂದು ಕರೆದಿದ್ದಾರಷ್ಟೆ. ವಸ್ತುಜಗತ್ತನ್ನು ಅರಿಯುವ ಮನುಷ್ಯಪ್ರಯತ್ನದ ಎರಡು ಮುಖಗಳಾದ ವಿಜ್ಞಾನ ಮತ್ತು ಕಲೆಯಾಗಿ—ಕಾವ್ಯ ಇವುಗಳ ನಡುವೆ ವಿರೋಧವಿಲ್ಲವೆಂಬುದು ವಸ್ತುಮೂಲವಾದಿಗಳ (Materialists) ನಿಲುವು. ವಸ್ತುಜಗತ್ತು ಚಲನಶೀಲ ಮತ್ತು ಬದಲಾವಣೆಯ ಸಾಧ್ಯತೆಗಳನ್ನು ತನ್ನಲ್ಲೇ ಒಳಗೊಂಡಿರುತ್ತದೆ. ಅದ್ದರಿಂದ ಕವಿಯಾಗಲೀ, ವಿಜ್ಞಾನಿಯಾಗಲಿ ಒಂದು ಚಾರಿತ್ರಿಕ ಸನ್ನಿವೇಶಕ್ಕೆ ಬದ್ಧರು. ಅವರ ವಿಚಾರಗಳು ಆ ಕಾಲಕ್ಕೆ ಬದ್ಧ. ಆದ್ದರಿಂದ ಪ್ರಾಚೀನ ಕವಿಯು ಸುತ್ತ ಇದ್ದ ವಸ್ತುಜಗತ್ತಿಗೂ ಆತನಿಗೂ ಇದ್ದ ಸಂಬಂಧದ ಸ್ವರೂಪ ಈಗಿನ ಕವಿಯ ವಿಚಾರದಲ್ಲಿ ಬದಲಾಗಿದೆ. ಈ ಮಾತು ವಿಜ್ಞಾನಿಗೂ ನಿಜ. ಆದ್ದರಿಂದ ಸೌಂದರ್ಯವನ್ನು ಕುರಿತು ಆಲೋಚಿಸುವಾಗ ಅದನ್ನು ನಿರ್ವಾತದಲ್ಲಿಟ್ಟು ನೋಡುವುದು ಸರಿಯಾಗಲಾರದು. ವಸ್ತುಜಗತ್ತಿನ ಸಾಧ್ಯತೆಗಳು ವಿಜ್ಞಾನ ಮತ್ತು ಕವಿ ಇವರಿಗೆ ಅರಿವಾಗುತ್ತಾ ಬಂದ ಬೆಳವಣಿಗೆಯ ಕ್ರಮವನ್ನು ಗುರುತಿಸಬೇಕಾಗುತ್ತದೆ. ಈ ಸಂಗತಿ ಕಾವ್ಯವನ್ನು ಸಂಸ್ಕೃತಿಯ ಸಂದರ್ಭದಲ್ಲಿಡುತ್ತದೆ ಮತ್ತು ಇಲ್ಲಿಗೆ ಅಪ್ರಸ್ತುತವಾದ ಹಲವಾರು ಪ್ರಶ್ನೆಗಳಿಗೆ ಕಾರಣವಾಗುತ್ತದೆ. ಆದರೆ 'ಸೌಂದರ್ಯಸಮೀಕ್ಷೆ' ನವೋದಯ ಸಾಹಿತ್ಯಮೀಮಾಂಸೆಯ ಲಕ್ಷಣಗಳನ್ನು ಪ್ರತಿನಿಧಿಸುವಾಗಲೇ ಅದರ ಮಿತಿಗಳನ್ನು ಸೂಚಿಸುತ್ತದೆಯೆಂಬುದು ಮಾತ್ರ ಇಲ್ಲಿ ಮುಖ್ಯ.

[ಇಲ್ಲಿ ಉಲ್ಲೇಖಿಸಲಾದ ಪುಟಸಂಖ್ಯೆಗಳು 'ಸೌಂದರ್ಯಸಮೀಕ್ಷೆ'ಯ ಪ್ರಥಮ ಮುದ್ರಣ (೧೯೬೫)ದವು.]

ಪಿ. ವಿ. ನಾರಾಯಣ

# ಪರಿಶೀಲನ

ಡಾ|| ಜಿ. ಎಸ್. ಶಿವರುದ್ರಪ್ಪನವರ 'ಪರಿಶೀಲನ'ವು* ಹದಿನೈದು ಲೇಖನಗಳ ಸಂಗ್ರಹ. ಇದರಲ್ಲಿ ಪಂಪನ ಕೃತಿಗಳ ಬಗ್ಗೆ ಮೂರು ಲೇಖನಗಳು, ರಾಘವಾಂಕನ ಬಗ್ಗೆ ಎರಡು, ವಚನಕಾರರ ಬಗ್ಗೆ ಎರಡು, ಹರಿದಾಸರ ಬಗ್ಗೆ ಎರಡು, ದಾಸ-ಶರಣರ ಬಗ್ಗೆ ಒಂದು ಹಾಗೂ ರಾಮಾಯಣ ರಜಕಪಾತ್ರ, ಜೈಮಿನಿಭಾರತ, ರತ್ನಾಕರನ ಕಾವ್ಯ, ಭಾರತದ ಅಕ್ಷಯವಸ್ತ್ರಪ್ರಸಂಗ ಮತ್ತು ರವೀಂದ್ರನಾಥ ಠಾಕೂರರ 'ಫಲಸಂಚಯ' (Fruit Gathering)—ಇವುಗಳ ಬಗ್ಗೆ ತಲಾ ಒಂದೊಂದು ಲೇಖನಗಳಿವೆ. ಇಲ್ಲಿನ ಬಹು ಪಾಲು ಲೇಖನಗಳ ದೃಷ್ಟಿಯು ಸಹೃದಯ ವಿಮರ್ಶಕನದಾದರೂ, ಅನೇಕ ಸಂದರ್ಭ ಗಳಲ್ಲಿ ಲೇಖಕರು ಸಂಶೋಧಕನ ದೃಷ್ಟಿಯನ್ನೂ ತಳೆದಿದ್ದಾರೆ, ಮತ್ತೆ ಕೆಲವೆಡೆ ಚಾರಿತ್ರಿಕ ಬೆಳವಣಿಗೆಯನ್ನು ಗುರುತಿಸುವ ದೃಷ್ಟಿಯೂ ಸೇರಿದೆ.

'ಪಂಪನ ಪುಷ್ಪೋದ್ಯಾನ'ವು ಆದಿಪುರಾಣದಲ್ಲಿನ ಪುಷ್ಪೋದ್ಯಾನವರ್ಣನೆಯನ್ನು ಕುರಿತದ್ದು. ಪುರುದೇವನ ಭವಾವಳಿಗಳ ದೀರ್ಘವಾದ ಕತೆಯಾದ ಮೇಲೆ, ಭರತ ದಿಗ್ವಿಜಯವನ್ನು ವರ್ಣಿಸುವಾಗ ಅವನ ಅಂತಃಪುರ ಲಲನೆಯರು ಪ್ರಯಾಣದಿಂದ ಬಳಲಿ ಒಂದು ಹೂದೋಟವನ್ನು ಹೊಕ್ಕು ಅಲ್ಲಿ ಹೂ ತಿರಿದು ವಿಹರಿಸಿದ ಪ್ರಸಂಗವು ಈ ಲೇಖನದ ವಿವೇಚನೆಗೆ ಒಳಬಂದಿದೆ. ಹೂಗಳನ್ನು ಕಿತ್ತು, ಮುಡಿದು, ತೋಟದಲ್ಲಿ ದಾಂಧಲೆಮಾಡಿದ ಸ್ತ್ರೀಯರು ಅಲ್ಲಿಂದ ಹೊರಡುವಾಗ ಆ ಹೂಗಿಡಗಳಲ್ಲಿ ಅಪಾರ ಆತ್ಮೀಯತೆಯನ್ನು ವ್ಯಕ್ತಪಡಿಸಿ ತಾವು ಅತಿರೇಕದಿಂದ ವರ್ತಿಸಿದ ಬಗ್ಗೆ ಪಶ್ಚಾತ್ತಾಪ ಗೊಳ್ಳುವುದು ಪ್ರಾಯಶಃ ಪಂಪನ ಸುಕುಮಾರ ಮನೋಭಾವದ ಪ್ರತೀಕವಾಗಿದೆ ಯೆಂಬುದನ್ನೂ; ಪುರುದೇವನ ಕತೆಯ ನಡುವೆ ವರ್ಣನೆಗಳು ಬಂದರೂ ಅವು ಸಂಸಾರದ ನಶ್ವರತೆಯನ್ನು ಸೂಚಿಸಲು ಬರುವಂಥದು, ಇಲ್ಲಿನದು ಸೌಂದರ್ಯೋಪಾಸನೆಯ ದೃಷ್ಟಿಯ ನ್ನೊಳಗೊಂಡದ್ದು, ಈ ಸೌಂದರ್ಯೋಪಾಸನೆಯ ಎರಡು ಮಜಲುಗಳು ಅಂತಃಪುರ ಸ್ತ್ರೀಯರ ವನವಿಹಾರ ಹಾಗೂ ತಪ್ಪು ನಡವಳಿಕೆಗೆ ಪಶ್ಚಾತ್ತಾಪವನ್ನು ವ್ಯಕ್ತಪಡಿಸುವ ಸುಕುಮಾರತೆಗಳಲ್ಲಿ ವ್ಯಕ್ತವಾಗಿದೆ—ಎಂಬ ಅಂಶವನ್ನೂ ಇಲ್ಲಿ ಲೇಖಕರು ವಿವರಿಸಿ ದ್ದಾರೆ.

* ಪ್ರ: ಉಷಾ ಸಾಹಿತ್ಯಮಾಲೆ, ಮೈಸೂರು, ೧೯೬೭

ಪಂಪನದು ಸಮರಸದೃಷ್ಟಿಯೆಂಬುದು ಎರಡನೆಯ ಲೇಖನದ ಸಾರಾಂಶ. ಅವನ ರಸಿಕಬಾಳು—ಕಾವ್ಯಜೀವನಗಳು, ಕಾವ್ಯಗಳಲ್ಲಿರುವ ಧರ್ಮ-ಕಾವ್ಯಧರ್ಮಗಳ ಸಮನ್ವಯ, ಜೀವನದಲ್ಲಿ ತ್ಯಾಗ-ಭೋಗಗಳ ವಿರಸರಹಿತ ಸಹಯೋಗ, ಈ ಜೀವನದಲ್ಲಿನ ಸೌಂದರ್ಯವು ಅಲ್ಪವಲ್ಲ, ಆದರೂ ಅದೇ ಶಾಶ್ವತವಲ್ಲ ಎಂಬ ಎಚ್ಚರದ ಜೀವನ ಪ್ರೀತಿ —ಈ ವೈಶಿಷ್ಟ್ಯಗಳು ಪಂಪನಲ್ಲಿ ಹೇಗೆ ಗೋಚರಿಸುತ್ತವೆಂಬ ವಿವೇಚನೆಯನ್ನಿಲ್ಲಿ ಕಾಣಬಹುದು. ಪಂಪನ ಬಗೆಗಿನ ಮೂರನೆಯ ಲೇಖನ 'ಪಂಪನಲ್ಲಿ ಭಗವದ್ಗೀತೆ.' ವ್ಯಾಸಭಾರತದ "ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ" ಸಮಸ್ತಭಾರತ ವನ್ನೂ ಸಂಗ್ರಹವಾಗಿ ಹೇಳುವ ಪಂಪನ ಸಂಕಲ್ಪ ಭಗವದ್ಗೀತಾಪ್ರಸಂಗದಲ್ಲಿಯೂ ಹೇಗೆ ಸಾರ್ಥಕವಾಗಿದೆಯೆಂಬುದನ್ನಿಲ್ಲಿ ಲೇಖಕರು ವಿಶ್ಲೇಷಿಸಿ ತೋರಿಸಿದ್ದಾರೆ. ಮೂಲ ಭಾರತದ ಭಗವದ್ಗೀತೆಯ ಪ್ರಸಂಗವೂ ಅನೇಕ ಪ್ರಕ್ಷೇಪಗಳಿಗೆ ಒಳಗಾಗಿದ್ದರೂ, ಪಂಪ ನಲ್ಲಿನ ಈ ಭಾಗ ತುಂಬ ಸಂಗ್ರಹವಾಗಿಯಾದರೂ ಅತ್ಯಂತ ಶಕ್ತಿಯುತವಾಗಿ ಬಂದಿದೆ. ಅರ್ಜುನನ ವ್ಯಾಮೋಹವನ್ನು ಹೋಗಲಾಡಿಸಲೋಸುಗ ಶ್ರೀಕೃಷ್ಣನು ಮಾಡಿದ ಭಗವದ್ಗೀತೆಯ ದೀರ್ಘ ಉಪದೇಶವೆಲ್ಲ ಪಂಪನಲ್ಲಿ "ಅದಿರದಿದಿರ್ಚಿ ತಳ್ತಿಱಿಯಲೀ ನುಲಿದೊಡ್ಡಿದ ಚಾತುರಂಗಮೆಂಬುದು ನಿನಗೊಡ್ಡಿನಿಂದುದು, ಇದನೋವದೆ ಕೊಲ್ವೊಡೆ ನೀನುಮೆನ್ನ ಕಜ್ಜದೊಳೆಸಗು" ಎಂಬ ಎರಡೇ ವಾಕ್ಯಗಳಲ್ಲಿ ಅಡಕವಾಗಿದೆ. ಇದಕ್ಕೆ ಶಿವರುದ್ರಪ್ಪನವರು ಭಗವದ್ಗೀತೋಪದೇಶದ ಅರ್ಥವನ್ನೆಲ್ಲ ಆರೋಪಿಸುವ ರೀತಿ ಚೆನ್ನಾಗಿದೆ. "ಕ್ಷತ್ರಿಯನಾದ ಅರ್ಜುನನಿಗೆ ತನಗೆ ಒಡ್ಡಿ ನಿಂದ ಈ ಪರಬಲವನ್ನು ಎದುರಿಸುವುದೇ ಸ್ವಧರ್ಮವಲ್ಲದೆ ಬೇರೆಯ ದಾರಿಯಿಲ್ಲ—ಎನ್ನುವ ಕರ್ತವ್ಯನಿರ್ದೇಶನದ ಅಧಿಕಾರವಾಣಿ ಧ್ವನಿತವಾಗುತ್ತದೆ. 'ಅದಿರದೆ ನಿನಗೊಡ್ಡಿ ನಿಂದುದು' ಎಂಬ ಮಾತಿನಲ್ಲಿ" "ನಿನಗೆ ಒಡ್ಡಿದ ಈ ಚಾತುರಂಗ ಬಲವನ್ನೂ, ಇವರು ನನ್ನವರು ತನ್ನವರು ಎನ್ನುವ ಸ್ವಜನಾಸಕ್ತಿಯನ್ನೂ ತಾಳಿಕೊಳ್ಳದೆ ಕೊಲ್ಲುವುದಾದರೆ ನೀನೂ ನನ್ನ ಕಾರ್ಯದಲ್ಲಿ— ಇದು ನಿನ್ನ ಕೆಲಸ ಎಂದು ಅಲ್ಲ, ನನ್ನ ಸೃಷ್ಟಿ-ಸ್ಥಿತಿ-ಲಯಕರ್ತನಾದ ನನ್ನ ಕಾರ್ಯ ಎಂದು ತಿಳಿದು—ವ್ಯವಹರಿಸು ಎನ್ನುತ್ತಾನೆ ಪಂಪನ ಕೃಷ್ಣ. 'ನಿಮಿತ್ತಮಾತ್ರಂ ಭವ ಸವ್ಯಸಾಚಿನ್'—ಎನ್ನುವ ಮಾತೂ ಅದರ ಹಿನ್ನೆಲೆಯ ಸಮೇತ 'ನೀನುಂ ಎನ್ನ ಕಜ್ಜದೊಳ್ ಎಸಗು' ಎಂಬ ಒಂದು ಮಾತಿನಲ್ಲಿ ಅಡಕವಾಗಿದೆ"—ಈ ರೀತಿಯಲ್ಲಿ ಪಂಪನ ಎರಡು ವಾಕ್ಯಗಳಿಗೆ ದೀರ್ಘವಾದ ವ್ಯಾಖ್ಯಾನವಿದೆ ಇಲ್ಲಿ. ಪಂಪನ ಸಂಗ್ರಹ ಸಾಮರ್ಥ್ಯವು ಈ ಪ್ರಸಂಗದಲ್ಲಿ ಹೇಗೆ ಕಾಣಿಸಿಕೊಂಡಿದೆಯೆಂಬುದನ್ನು ಲೇಖಕರು ಸಮರ್ಪಕವಾಗಿ ತೋರಿಸಿದ್ದಾರೆ.

ಆಸ್ಕರ್ ವೈಲ್ಡ್ ಸಂಸ್ಕೃತಿಯನ್ನು 'ಸೌಂದರ್ಯಪ್ರಿಯತೆ' ಎಂದರೆ ಮ್ಯಾಥ್ಯೂ ಆರ್ನಾಲ್ಡ್ 'ಪರಿಪೂರ್ಣತೆಯ ಅನ್ವೇಷಣೆ' ಎಂದು ಕರೆದ; ವಚನಗಳಲ್ಲಿ ನಡೆ- ನುಡಿಯೆರಡರ ಪಾರಿಶುದ್ಧತೆಯೇ ಸತ್ವವಾಗುಳ್ಳ ಸೌಂದರ್ಯದ ಅಭಿವ್ಯಕ್ತಿಯೂ, 'ಲಿಂಗಾಂಗಸಾಮರಸ್ಯ'ದ ಆದರ್ಶವನ್ನು ಪಡೆದು ಆ ಮೂಲಕ ಪರಿಪೂರ್ಣತೆಯ

ಅನ್ವೇಷಣೆಯಲ್ಲಿ ತೊಡಗಿದ ಶರಣರ ಸಾಧಕಜೀವನದ ಅನಿಸಿಕೆ-ಅನುಭವಗಳ ಅಭಿವ್ಯಕ್ತಿಯೂ ಸೇರಿದೆ ಎಂಬುವನ್ನು 'ವಚನಕಾರರ ದೃಷ್ಟಿಯಲ್ಲಿ ಸಂಸ್ಕೃತಿ' ಎಂಬ ಚಿಕ್ಕ ಲೇಖನದಲ್ಲಿ ವಿವರಿಸಲಾಗಿದೆ. 'ಕನ್ನಡಕ್ಕೆ ಬಸವಸಿಧಿ'ಯಾಗಿ ಉಳಿದು ಬಂದ ಬಸವಣ್ಣನ ವಚನಗಳು ಆತನ ಅಂತರಂಗದ ತೊಳಲಾಟದ ನಿರೂಪಣೆ, ರೂಪಕ ವೈಭವ, ಚಿತ್ರಪರಂಪರೆ, ವಚನಶೈಲಿಯ ಮುಕ್ತಗಮನ ಇವುಗಳನ್ನು ಗರ್ಭೀಕರಿಸಿ ಕೊಂಡು "ಶಿವನ ಸೋಪಾನವನ್ನೇರಿ ಹೊರಟ ಆತ್ಮಸಾಧಕರ ಮಿಂಚಿನ ಹೆಜ್ಜೆ ಗುರುತು"ಗಳಾಗಿ ಉಳಿದಿರುವ ರೀತಿಯು 'ಕನ್ನಡಕ್ಕೆ ಬಸವಸಿಧಿ' ಎಂಬ ಲೇಖನದಲ್ಲಿ ವರ್ಣಿತವಾಗಿದೆ.

'ಪರಂಪರೆ ಮತ್ತು ರಾಘವಾಂಕ ಪ್ರತಿಭೆ'ಯೆಂಬುದು ಈ ಸಂಕಲನದ ಒಂದು ಉತ್ತಮ ಲೇಖನ. ಪಂಪನಿಂದ ಪ್ರಾರಂಭವಾದ ಚಂಪೂ ಸಂಪ್ರದಾಯಕ್ಕೆ 'ಗಿರಿಜಾ ಕಲ್ಯಾಣ'ದ ಮೂಲಕ ಗೌರವವನ್ನು ತೋರಿದ ಹರಿಹರನು ವಚನಕಾರರ ಪ್ರಭಾವಕ್ಕೆ ಸಿಲುಕಿ 'ದೇವಪೂಜೆಯ ಶಂಖಧ್ವನಿ'ಯಾಗಿ ಕಾವ್ಯವನ್ನು ಮಾರ್ಪಡಿಸಿಕೊಂಡು ಹೊಸ ತೊಂದು ಪರಂಪರೆಯ ಆಚಾರ್ಯನಾದ; ರಾಘವಾಂಕನ ಕಾವ್ಯಧರ್ಮವು ಹರಿಹರನದೇ ಆದರೂ 'ರೀತಿ'ಯ ಎಂದರೆ ಷಟ್ಪದಿಯ ಮೂಲಕವಾಗಿ ಅಭಿವ್ಯಕ್ತಿನೀಡಿದ ದೃಷ್ಟಿ ಯಿಂದ ಹೊಸತಾಯಿತು, ಈ ಪರಂಪರೆ; ಹೀಗಾಗಿ ವಚನಕಾರರ ನಂತರದ ಈ ಕಾವ್ಯ ಪರಂಪರೆಯನ್ನು ಹರಿಹರ-ರಾಘವಾಂಕ ಪರಂಪರೆಯೆಂದೇ ಕರೆಯಬಹುದೆಂದು ಲೇಖಕರು ಸೂಚಿಸುವುದು ಸಮಂಜಸವಾಗಿದೆ. 'ರಾಘವಾಂಕ ಚಾರಿತ್ರ', 'ಪದ್ಮರಾಜಪುರಾಣ', 'ಗುರುರಾಜ ಚಾರಿತ್ರ' ಇವುಗಳಲ್ಲಿ ನಿರೂಪಿತವಾಗಿರುವ—ರಾಘವಾಂಕನು 'ಹರಿಶ್ಚಂದ್ರ ಕಾವ್ಯ'ವನ್ನು ರಚಿಸಿ ಹರಿಹರನಿಂದ ಹಲ್ಲುಗಳನ್ನುದುರಿಸಿಕೊಂಡು, ಅನಂತರ 'ಶೈವ ಪಂಚಕ' ರಚನೆಯಿಂದ ಮುಕ್ತಿ ಪಡೆದ ಕತೆಯನ್ನು ಸಾಂಕೇತಿಕವಾಗಿಯಾದರೂ ಒಪ್ಪಿ ಕೊಂಡ ಲೇಖಕರು ಈ ಕತೆಯು 'ರಾಘವಾಂಕನ ಕಾವ್ಯಧರ್ಮ ಹರಿಹರ ಪರಂಪರೆಗೆ ಶರಣಾಗಿ ಮಾಡಿಕೊಂಡ ಒಡಂಬಡಿಕೆಯ ಪ್ರತೀಕವಾಗಿದೆ' ಎಂಬ ತೀರ್ಮಾನಕ್ಕೆ ಬರುತ್ತಾರೆ. ಇದರಿಂದ ರಾಘವಾಂಕನು ಹರಿಹರನಿಂದ ತುಸು ಭಿನ್ನವಾದ ಸ್ವತಂತ್ರ ಕಾವ್ಯಮನೋಧರ್ಮದಿಂದ ತನ್ನ ಕಾವ್ಯರಚನೆಯನ್ನು ಪ್ರಾರಂಭಿಸಿದರೂ, ಹರಿಹರನ ಪ್ರಭಾವದ ಒತ್ತಡಕ್ಕೆ ಸಿಲುಕಿ ಅವನ ಮಾರ್ಗಾನುಸರಣೆಯನ್ನು ಮಾಡಿ 'ಸೋಮನಾಥ ಚಾರಿತ್ರ' ಮೊದಲಾದ ಕೃತಿಗಳನ್ನು ರಚಿಸಿದನೆಂಬುದೇ ಲೇಖಕರ ಅಭಿಪ್ರಾಯವೆಂಬುದು ಸ್ಪಷ್ಟವಾಗಿದೆ. ಆದರೆ ರಾಘವಾಂಕನ ಕೃತಿಸಮುಚ್ಚಯವನ್ನು ನೋಡಿದರೆ 'ಸೋಮನಾಥ ಚಾರಿತ್ರ', 'ವೀರೇಶಚರಿತೆ'ಗಳ ರಚನೆಯಿಂದ ಪ್ರಾರಂಭಿಸಿ ಕೊನೆಯಲ್ಲಿ 'ಹರಿಶ್ಚಂದ್ರ ಕಾವ್ಯ'ವನ್ನು ರಚಿಸಿದನೆಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಪ್ರಾಯಶಃ ಈ ಕೃತಿಗಳ ಆಂತರಿಕ ಲಕ್ಷಣಗಳಿಂದ ಆರಿಯಹೊರಟರೆ ಎ.ಆರ್.ಕೃ., ಆರ್. ಸಿ. ಹಿರೇಮಠ್ ಮುಂತಾದವರ ಈ ಅಭಿಪ್ರಾಯವೇ ಸಮಂಜಸವೆಂಬಂತೆ ತೋರುತ್ತದೆ. "ಸಂಪ್ರದಾಯ ಮತ್ತು ಪ್ರಯೋಗಶೀಲತೆಯ ದೃಷ್ಟಿಯಿಂದ ನೋಡಿದರೆ ಆತ

(ರಾಘವಾಂಕ) ಹರಿಶ್ಚಂದ್ರಕಾವ್ಯವನ್ನು ಬರೆದ ನಂತರ ಉಳಿದ ಕೃತಿಗಳನ್ನು ಬರೆದಂತೆ ತೋರುತ್ತದೆ" ಎಂಬ ಲೇಖಕರ ತೀರ್ಮಾನವು ವಿಪರ್ಯಾಸಗೊಂಡ ವಸ್ತುಸ್ಥಿತಿಯನ್ನು ಸೂಚಿಸುತ್ತದೆ ಎಂದು ನಮ್ಮ ಭಾವನೆ. ಅನುಕರಣಶೀಲನಾಗಿದ್ದ ಕಿರಿಯನೊಬ್ಬನು ಸನಿಹದ ಪ್ರಭಾವಶಾಲೀ ಕವಿಯೊಬ್ಬನಿಂದ ಪ್ರೇರಿತನಾಗಿ ಅವನ ರೀತಿಯಲ್ಲಿಯೇ ಕಾವ್ಯ ರಚನೆಯಲ್ಲಿ ತೊಡಗಿ ಬರಬರುತ್ತ ತನ್ನ ಸ್ವಂತಿಕೆಯನ್ನು ಮೆರೆಯುವುದು ಸಹಜ ವಿಕಾಸಕ್ರಮವಾಗಿದೆ; ಹಾಗಲ್ಲದೆ ಸ್ವತಂತ್ರ ಮನೋಭಾವವನ್ನು ತೋರ್ಪಡಿಸಿ ಅನಂತರ ಒತ್ತಡಕ್ಕೆ ಮಣಿದು ಸಂಪ್ರದಾಯಬದ್ಧ ರಚನೆಗಳಿಗೆ ಕೈಹಾಕುವುದು ಕವಿಯ ದುರಂತವೇ ಹೌದು. ನಮ್ಮ ಈ ಊಹೆಗೆ ಚಿಕ್ಕನಂಜೇಶ ಮೊದಲಾದವರ ಆಧಾರ ವಾದರೂ ಇದೆ ಎಂಬುದು ಕೇವಲ ಸಮಾಧಾನದ ಮಾತು. ಹರಿಹರನಿಂದ ಪ್ರೇರಿತನಾಗಿ ಮೊದಲು ಧಾರ್ಮಿಕವಸ್ತು ಪ್ರಧಾನವಾದ ಕೃತಿಗಳನ್ನು ರಚಿಸಿ ಕ್ರಮೇಣ ಪರಂಪರೆಯ ಬಿಗಿಮುಷ್ಠಿಯಿಂದ ಮುಕ್ತನಾಗಿರಬಹುದು ರಾಘವಾಂಕ; ಮುಂದೆ ಈ ವಸ್ತುಸ್ಥಿತಿಯನ್ನು ತಮ್ಮ ಧಾರ್ಮಿಕೋದ್ದೇಶಗಳಿಗೆ ತಕ್ಕಂತೆ ಕತೆಯ ರೂಪದಲ್ಲಿ ಮುಂದಿನ ಕವಿಗಳು ವಿಕೃತಗೊಳಿಸಿರುವುದೂ ಸಾಧ್ಯ. ಅಲ್ಲಮನ, ಮಹಾದೇವಿಯ ಬಗೆಗೆ ಚಾರಿತ್ರಿಕ ಸಂಗತಿಗಳನ್ನು ಮುಂದಿನ ಕೃತಿಕಾರರು ವ್ಯತ್ಯಾಸಮಾಡಿಕೊಂಡಿರುವುದನ್ನಿಲ್ಲಿ ಗಮನಿಸ ಬಹುದು. ತಮ್ಮ ಧರ್ಮದ ಅತ್ಯಂತ ಮಹತ್ವದ ಒಬ್ಬ ಕವಿಯ ಬಗ್ಗೆಯೂ ಈ ಬಗೆಯ ಕತೆಗಳನ್ನು ಹರಡುವುದು ಸಹಜವಾದುದೇ ಆಗಿದೆ. ಮೊದಲು ವೀರಶೈವದ ಬಗ್ಗೆ ಕಟ್ಟಾ ಅಭಿಮಾನಿಯಾಗಿದ್ದು, ಅನಂತರ ಅನುಭವಗಳಿಂದ ಮಾಗಿ ಉದಾತ್ತತೆಯನ್ನು ಪಡೆದ ರೀತಿ 'ಸೋಮನಾಥಚಾರಿತ್ರ' ರಚನೆಯಿಂದ ಪ್ರಾರಂಭಿಸಿ 'ಹರಿಶ್ಚಂದ್ರಕಾವ್ಯ'ದಲ್ಲಿ ಪರ್ಯವಸಾನವಾದ ರಾಘವಾಂಕನ ಕಾವ್ಯಜೀವನದಲ್ಲಿ ಸಹಜ ಬೆಳವಣಿಗೆಯಾಗಿದೆ ಯೆಂದೇ ನಮ್ಮ ಸ್ಪಷ್ಟವಾದ ಅಭಿಪ್ರಾಯ.

ರಾಘವಾಂಕನ ಕೃತಿಗಳ ಪರಿಚಯವನ್ನು ಮಾಡಿಕೊಡುತ್ತ 'ಸೋಮನಾಥಚಾರಿತ್ರ' ದಲ್ಲಿ ಬರುವ "ನಾರದ, ಶಿವ, ಆದಯ್ಯ—ಎಲ್ಲರೂ ಮತಭ್ರಾಂತಿಯ ತಾಮಸದಲ್ಲಿ ಅದ್ದಿ ತೆಗೆದ ಮೂರ್ತಿಗಳಾಗಿದ್ದಾರೆ", "ಆದರೆ ಆದಯ್ಯ ಸೋಮೇಶ್ವರಸ್ಥಲದಲ್ಲಿಯೇ ಐಕ್ಯನಾದ ಭಕ್ತ!", "ಒಟ್ಟಿನಲ್ಲಿ ಹರಿಶ್ಚಂದ್ರಕಾವ್ಯವನ್ನು ಬರೆಯುವಾಗ ಉನ್ನತವಾದ ನೆಲೆಯಲ್ಲಿ ತೆರೆದ 'ದರ್ಶನ'ದ ಕಣ್ಣು ಇಲ್ಲಿ (ವೀರೇಶಚರಿತೆ)...ಮತಾವೇಶದ ಕತ್ತಲಲ್ಲಿ ತೊಳಲುತ್ತಿದೆ", "ಈ 'ರಾಜಸ'ಪ್ರವೃತ್ತಿಯಿಂದ (ಸೊನ್ನಲಿಗೆ ಕೈಲಾಸ, ಸಿದ್ಧರಾಮನೇ ಶಿವ, ಗುಡ್ಡರು ಗಣೇಶ್ವರರು ಎಂಬ ತನ್ನ ಮಾತನ್ನು ಅಲ್ಲಗಳೆಯುವವರ ತಲೆಯ ಮೇಲೆ ತನ್ನ ಎಡಗಾಲಿನ ಚಪ್ಪಲಿಯಿಕ್ಕುತ್ತೇನೆಂಬ ಪ್ರವೃತ್ತಿ) ಕವಿ ಕೃತಿರಚನೆಗೆ ತೊಡಗಿದರೂ, ಸಿದ್ಧರಾಮನ ಪಾತ್ರದಲ್ಲಿ ಕವಿ ವೀರಶೈವಧರ್ಮದ ಸಾತ್ವಿಕಾಂಶವನ್ನು ಚಿತ್ರಿಸಿದ್ದಾನೆ" ಮುಂತಾದ ವಾಕ್ಯಗಳು ಆಯಾ ಕೃತಿಗಳ ಬಗ್ಗೆ ಸಂಕ್ಷಿಪ್ತವಾಗಿಯಾದರೂ ಸಮರ್ಥವಾಗಿ ಹಾಗೂ ಸಮಂಜಸವಾಗಿ ವಿಮರ್ಶೆಮಾಡುವಂತಹವು. ರಾಘವಾಂಕನ ಕೃತಿಪರಿಚಯದ ಈ ಭಾಗ ಜಿ.ಎಸ್.ಎಸ್ ಅವರ ವಿಮರ್ಶನಸಾಮರ್ಥ್ಯವನ್ನು

ಎತ್ತಿ ತೋರಿಸುವಂಥದು; ಈ ಹಿಂದೆ ಹೇಳಿದ ರಾಘವಾಂಕನ ಕಾವ್ಯದ ಬೆಳವಣಿಗೆಯು ಕ್ರಮದ ಬಗ್ಗೆ ಅಭಿಪ್ರಾಯಭೇದಕ್ಕೆ ಎಡೆಯಿರುವುದಾದರೂ, ಆ ಭಾಗದಲ್ಲಿ ಕಾಣಬರುವ ಲೇಖಕರ ಸೂಕ್ಷ್ಮ ಒಳನೋಟ ಹಾಗೂ ಯುಗದ ಹಿನ್ನೆಲೆಯಲ್ಲಿ ಕವಿಯೊಬ್ಬನ ಸ್ಥಾನ ನಿರ್ದೇಶಮಾಡುವ ದೃಷ್ಟಿ ಹೊಸತಾದುದು. ರಾಘವಾಂಕನ ಅತ್ಯಂತ ಶ್ರೇಷ್ಠ ಕಾವ್ಯವಾದ 'ಹರಿಶ್ಚಂದ್ರಕಾವ್ಯ'ದ ಹರಿಶ್ಚಂದ್ರನು "ಹರನೆಂಬುದೇ ಸತ್ಯ. ಸತ್ಯವೆಂಬುದೆ ಹರನು" ಎಂಬುದನ್ನು ಅನುಭವಪೂರ್ವಕವಾಗಿ ರುಜುವಾತು ಮಾಡಿ ತೋರಿಸಿದ ರೀತಿಯನ್ನು ಪರಿಚಯ ಮಾಡಿಕೊಡುವುದು ಈ ಸಂಕಲನದ ಮುಂದಿನ ಲೇಖನವಾದ 'ಸತ್ಯಸಾಧಕ ಹರಿಶ್ಚಂದ್ರ'ದ ಉದ್ದೇಶ.

ಅನುದ್ದಿಷ್ಟವಾಗಿ ಸಾಹಿತ್ಯ ರಚನೆಯಲ್ಲಿ ತೊಡಗಿದ ವಚನಕಾರರಂತೆಯೇ ಹರಿದಾಸರೂ ತಮ್ಮ ಸಾಹಿತಿಯ ಮನೋಧರ್ಮದಿಂದಾಗಿ 'ಅಂದಂದಿನ ಅನುಭವಗಳಿಗೆ ಆಗಾಗ ಅಲ್ಲಲ್ಲಿಯೇ ರೂಪುಕೊಟ್ಟ ಸದ್ಯೋಜಾತ ಪ್ರತಿಭೆಯ ಅಭಿವ್ಯಕ್ತಿ'ಯೇ ದಾಸಸಾಹಿತ್ಯವೆಂಬುದನ್ನು ವಿವರಿಸುವ ಲೇಖನ 'ಈ ಪರಿಯ ಸೊಬಗು.' ಸೃಷ್ಟಿ ಶಕ್ತಿಯ ಅದ್ಭುತಸಾಮರ್ಥ್ಯವನ್ನು ಕಂಡು ವಿಸ್ಮಯಗೊಂಡ ದಾಸ-ಶರಣರ ಭಕ್ತ ಚೇತನಗಳು ಕೀರ್ತನೆ-ವಚನಗಳಲ್ಲಿ ಹೇಗೆ ತಮ್ಮ ಈ ದಿವ್ಯಸೌಂದರ್ಯದ ದರ್ಶನವನ್ನು ಮಾಡಿಸುತ್ತವೆಂಬುದನ್ನು 'ದಾಸರು ಶರಣರು ದರ್ಶಿಸಿದ ದಿವ್ಯಸೌಂದರ್ಯ'ದಲ್ಲಿ ಪರಿಚಯ ಮಾಡಿಕೊಡಲಾಗಿದೆ. ಬಸವಣ್ಣನ 'ಕೆರೆಹಳ್ಳಬಾವಿಗಳು ಮೈದೆಗೆದರೆ' ಎಂಬ ವಚನವನ್ನು ಕವಿಗಳ ದೃಷ್ಟಿಯಿಂದ ವ್ಯಾಖ್ಯಾನ ಮಾಡಿರುವ ರೀತಿ ಇಲ್ಲಿ ತುಂಬ ಸುಂದರವೂ ನವೀನವೂ ಆಗಿದೆ: ದಾಸ-ಶರಣರ ಬೆರಗು ಚೆಲುವಿನ ಪರಿಭಾವನೆಯಿಂದ ಮಾತ್ರ ಉಂಟಾಗಿರದೆ, ಅದರ ಹಿಂದಿರುವ ಪ್ರೇರಕಶಕ್ತಿಯನ್ನು ಕುರಿತ ಜಿಜ್ಞಾಸೆಯಿಂದಾದುದೆಂಬಂತಹ ಮಾತುಗಳು ವಸ್ತುವಿಗೆ ತಕ್ಕ ದೃಷ್ಟಿಯಿಂದ ಕೂಡಿದವು. ಇಂತಹ ಸಂದರ್ಭಗಳಲ್ಲಿ ಶಿವರುದ್ರಪ್ಪನವರ ವಿಮರ್ಶನಪ್ರಜ್ಞೆಯ ಜೊತೆಗೆ ಕವಿಮನೋಭಾವವೂ ಎಚ್ಚತ್ತಿರುವುದನ್ನು ನಾವು ಕಾಣಬಹುದು.

ದಾಸರಾಗಿದ್ದುಕೊಂಡೇ ವಸ್ತುನಿಷ್ಠ-ವ್ಯಕ್ತಿನಿಷ್ಠ ಕೃತಿಗಳೆರಡನ್ನೂ ರಚಿಸಿದುದು, ಹೆಚ್ಚಿನ ಕಾವ್ಯಸತ್ವದಿಂದ ಕೂಡಿದ ಕೀರ್ತನೆಗಳನ್ನು ರಚಿಸಿದುದು, ಷಟ್ಪದಿಯ ಶತಕ ರಚನೆ, ಕಾವ್ಯಗಳ ವಸ್ತುವೈವಿಧ್ಯ, 'ಮೋಹನತರಂಗಿಣಿ'ಯಲ್ಲಿ ದೈವೀಪಾತ್ರಗಳ ಹಿನ್ನೆಲೆಯು ಸಮಕಾಲೀನವಾಸ್ತವವಾಗಿರುವ ರೀತಿ, ಪೌರಾಣಿಕ ಗಡಿಬಿಡಿಯ ಹಿನ್ನೆಲೆಯಲ್ಲಿ ಷಟ್ಪದಿಯ ರೂಪದಲ್ಲಿ ಬರೆದ 'ರಾಮಧಾನ್ಯಚರಿತೆ', ತಮ್ಮ ಕಾವ್ಯಗಳಲ್ಲಿ ಪ್ರಕಟಪಡಿಸಿರುವ ಸಮಕಾಲೀನ ಜೀವನ ಚಿತ್ರಣ, ಸರಳತೆ-ಹೃದ್ಯತೆ-ಲಾಲಿತ್ಯ-ವೈಚಾರಿಕ ಮನೋಧರ್ಮ—ಪ್ರತಿಮಾವೈಭವಗಳಿಂದ ಕೂಡಿದ ಶೈಲಿ—ಈ ಎಲ್ಲವೂ ಕನಕದಾಸರ ವಿಶಿಷ್ಟತೆಗಳಾಗಿ 'ಕನಕದಾಸರ ವಿಶಿಷ್ಟತೆ' ಎಂಬ ಲೇಖನದಲ್ಲಿ ನಿರೂಪಿತವಾಗಿವೆ. ವಾಲ್ಮೀಕಿಯಲ್ಲಿಲ್ಲದ, ಸೀತೆಯ ಮರು ವನವಾಸಕ್ಕೆ ಕಾರಣವಾದ ಮಾತನ್ನಾಡಿದ, ಅಗಸನ ಪಾತ್ರವು ಪ್ರಾಯಶಃ ಭಾಗವತದಿಂದ ಪ್ರಾರಂಭವಾಗಿ ವ್ಯತ್ಯಾಸ

ಗೊಂಡು ವಿವಿಧ ಕವಿಗಳಲ್ಲಿ ವಿಧವಿಧವಾಗಿ ಚಿತ್ರಿತವಾದ ಬಗೆಯನ್ನು 'ರಾಮಾಯಣ ಕಥೆಯಲ್ಲಿ ರಜಕ ಪಾತ್ರ'ವೆಂಬ ಲೇಖನದಲ್ಲಿ ಹೇಳಲಾಗಿದೆ. "ರಾಮನ ಕಾಲದ ಜನದ ಮರ್ಯಾದೆಯನ್ನುಳಿಸಲು ಹೋಗಿ ನಮ್ಮ ಪುರಾಣಕರ್ತರು ರಜಕನನ್ನು ತಂದರು; ಆದರೆ ರಾಮನನ್ನು ಕೊಂದರು" ಎಂಬಂತಹ ಮಾತಿನಲ್ಲಿ ಲೇಖಕರು ಈ ಕತೆಯ ಬದಲಾವಣೆಯ ಬಗ್ಗೆ ತಮ್ಮ ಅಭಿಪ್ರಾಯವನ್ನು ಹೇಳುವ ರೀತಿ ಸ್ವಾರಸ್ಯಕರವಾಗಿದೆ.

ಜ್ಞಾತಿಗಳನ್ನು ಯುದ್ಧದಲ್ಲಿ ಕೊಂದು ಪರಿತಪ್ತನಾದ ಧರ್ಮರಾಯನು ಅದನ್ನು ಹೋಗಲಾಡಿಸಿಕೊಳ್ಳಲು ಇನ್ನೊಂದು ಯುದ್ಧಪರಂಪರೆಗೇ ಕಾರಣವಾದ ಅಶ್ವಮೇಧ ಯಾಗವನ್ನು ಕೈಕೊಂಡ ವಿರೋಧಾಭಾಸ ಕಥಾವಸ್ತುವನ್ನುಳ್ಳ ಜೈಮಿನಿ ಭಾರತದ ಬಗ್ಗೆ ತಮ್ಮ ಅನಿಸಿಕೆಗಳನ್ನು 'ಜೈಮಿನಿಭಾರತವನ್ನು ಕುರಿತು' ಎಂಬ ಲೇಖನದಲ್ಲಿ ಜಿ.ಎಸ್.ಎಸ್. ಸ್ವಾರಸ್ಯಕರವಾದ ಶೈಲಿಯಲ್ಲಿ ನಿರೂಪಿಸುತ್ತಾರೆ. "ಆದರೆ ಧರ್ಮರಾಯನಿಗಿಂತ ಪ್ರಬಲವಾದದ್ದು ಧರ್ಮಶಾಸ್ತ್ರ", "ಅಂತೂ ಅಶ್ವಮೇಧಕ್ಕೆ ಮುನ್ನ ಅಶ್ವಾಪಹರಣ!", "ಪಾರ್ಥನ ಪಡೆಗೆ ಕಥನ ಕುತೂಹಲ ಇಲ್ಲವೇ ಕದನ ಕುತೂಹಲ" ಎಂಬಂತಹ ಮಾತುಗಳು ಓದುಗನನ್ನು ಪ್ರಸನ್ನಮುಖಿಯನ್ನಾಗಿ ಮಾಡಿ ಓದಿಸಿಕೊಂಡು ಹೋಗುತ್ತವೆ.

'ರತ್ನಾಕರನ ಯೋಗಭೋಗದ ತೊಡಕು' ಎಂಬುದು ಈ ಸಂಕಲನದ ಮತ್ತೊಂದು ತುಂಬ ಸುಂದರವಾದ ಲೇಖನ. ಇಲ್ಲಿ ವಿಮರ್ಶೆ ಮತ್ತು ಸಂಶೋಧನೆಗಳ ಸುಂದರವಾದ ಸಮನ್ವಯವನ್ನು ಕಾಣಬಹುದು. ತನ್ನ 'ಭರತೇಶ ವೈಭವ'ದಲ್ಲಿ ರತ್ನಾಕರನು ಕಥಾನಾಯಕನಾದ ಭರತ ಚಕ್ರವರ್ತಿಯ ಮೂಲಕ ಭೋಗಜೀವನವನ್ನು ನಡೆಸಿದರೂ ಆಧ್ಯಾತ್ಮಿಕ ಸಾಧನೆಯಲ್ಲಿ ತೊಡಗಿರಲು ಸಾಧ್ಯವೆಂಬ ಮನೋಭಾವವನ್ನು ಪ್ರಸಾರ ಮಾಡಲು ಪ್ರಯತ್ನಿಸುತ್ತಾನೆ. ಜೈನಧರ್ಮವು ಪ್ರಮುಖವಾಗಿ ವಿರಕ್ತಿಪರವಾದ ಧರ್ಮ, ಅಲ್ಲಿ ಭೋಗ-ಯೋಗಗಳು ಪರಸ್ಪರ ವಿರುದ್ಧವಾದ ಕಲ್ಪನೆಗಳು, ಅವುಗಳ ಸಮನ್ವಯವು ಜೈನಧರ್ಮ ಸಿದ್ಧಾಂತಕ್ಕೇ ವಿರುದ್ಧವಾದುದು. ಹೀಗಿದ್ದರೂ ಈ ಸಮನ್ವಯವನ್ನು ಸಾಧಿಸಲು ಕಾರಣವಾದ ರತ್ನಾಕರನ ಕಾಲದ ಧಾರ್ಮಿಕ ಹಿನ್ನೆಲೆಯನ್ನೂ, ಯೋಗ-ಭೋಗಗಳ ಸಮನ್ವಯ ಮಾಡುವುದರ ಮೂಲಕ ರತ್ನಾಕರನು ತನ್ನ ಕಾಲದಲ್ಲಿ ಕ್ಷೀಣದೆಶೆಯನ್ನು ಪಡೆದಿದ್ದ ಜೈನಧರ್ಮವನ್ನು ಇತರ ಧರ್ಮಗಳ ಜನಪ್ರಿಯ ಅಂಶಗಳೊಡನೆ ಸಮನ್ವಯಗೊಳಿಸಿ ಬೋಧಿಸಬೇಕಾದ ಚಾರಿತ್ರಿಕ ಅನಿವಾರ್ಯತೆಯು ಉಂಟಾದ ಬಗೆಯನ್ನೂ ಲೇಖನದ ಮೊದಲ ಅರ್ಧದಷ್ಟು ಭಾಗದಲ್ಲಿ ಲೇಖಕರು ತುಂಬ ಸುಂದರವಾಗಿ ವಿವರಿಸಿದ್ದಾರೆ. ರತ್ನಾಕರನು ಬದುಕಿದ್ದ ವಿಜಯನಗರ ಸಾಮ್ರಾಜ್ಯದ ಕಾಲವೇ ಎಲ್ಲ ಭಾಷೆ–ಧರ್ಮಗಳ ಸಮನ್ವಯದ ಕಾಲ. ಪ್ರಾಯಶಃ ಆಗ ಉಚ್ಛ್ರಾಯಸ್ಥಿತಿಯನ್ನು ಪಡೆದಿದ್ದ ವೀರಶೈವಧರ್ಮವು ಭೋಗವನ್ನು ನಿರಾಕರಿಸದೆಯೇ ಯೋಗಸಾಧನೆಯ ಸಾಧ್ಯತೆಯನ್ನು ಹೇಳಿದುದು ರತ್ನಾಕರನ ಮೇಲೆ ಪ್ರಭಾವವನ್ನು ಬೀರಿರಬೇಕು. ವಾಸ್ತವ ನೆಲೆಯಲ್ಲಿ ಈ ಭಾವನೆಯು ಯಾವುದೇ ಒಂದು ಮತದತ್ತ ಸಾಮಾನ್ಯ ಜನತೆಯನ್ನು

ಆಕರ್ಷಿಸಲು ಅನಿವಾರ್ಯವೆಂಬ ಅರಿವು ರತ್ನಾಕರನಿಗುಂಟಾಗಿರಬೇಕು. ರತ್ನಾಕರನ ಭಾಷೆಯ ಮೇಲೆಯೂ ಆದ ವಚನಕಾರರ ದಟ್ಟ ಪ್ರಭಾವವನ್ನು ಸಮರ್ಥವಾಗಿ ಲೇಖಕರು ಗುರುತಿಸಿದ್ದಾರೆ. ಹಾಡುಗಳಲ್ಲಿ ರತ್ನಾಕರನು ಜಿನ-ಶಿವರಿಗೆ ಅಭೇದವನ್ನು ಕಲ್ಪಿಸಿರುವುದರ ಜೊತೆಗೆ, ಮತ್ತೆ ಕೆಲವೆಡೆಗಳಲ್ಲಿ ಜೈನ-ಶೈವವ್ರತಗಳಲ್ಲಿಯೂ ಅಭೇದವನ್ನು ಹೇಳುತ್ತಾನೆ. "ಹಂಸ", "ಹಂಸಕಲೆ" ಮುಂತಾದ ಕಲ್ಪನೆಗಳಲ್ಲಿ ಈ ಕವಿಯ ಮೇಲೆ ವೈದಿಕ ಪರಂಪರೆಯೂ ಮಾಡಿರುವ ಪ್ರಭಾವವನ್ನು ಗುರುತಿಸಬಹುದು. ಇದಕ್ಕೆ ಕಾರಣವೆಂದರೆ ವೀರಶೈವ-ವೈಷ್ಣವ ಧರ್ಮಗಳ ಪ್ರಬಲ ಸ್ಪರ್ಧೆಯನ್ನು ಎದುರಿಸಲಾಗದ ಜೈನ ಧರ್ಮಕ್ಕೆ ಆ ಧರ್ಮಗಳ ಉತ್ತಮಾಂಶಗಳನ್ನು ಪಡೆದು ಒಪ್ಪಂದವನ್ನು ಮಾಡಿಕೊಳ್ಳಬೇಕಾಗಿದ್ದುದು. "ಇದನ್ನು ಮನಗಂಡ ರತ್ನಾಕರ, ಅಂದಿನ ಯುಗಧರ್ಮದ ಆವಶ್ಯಕತೆಯನ್ನು ಪ್ರೋತ್ಸಾಹಿಸುವ ಪ್ರತಿನಿಧಿಯಾಗಿ ನಿಂತು ಇಂಥ ಒಂದು ಒಪ್ಪಂದವನ್ನು, ಒಡಂಬಡಿಕೆಯನ್ನು ತರಲು ಭರತೇಶವೈಭವವನ್ನು ಬರೆದಂತೆ ತೋರುತ್ತದೆ" ಎಂಬ ತೀರ್ಮಾನವೂ, "ರತ್ನಾಕರನಲ್ಲಿ ಕಾಣುವುದು ಕೇವಲ ಭೋಗ-ಯೋಗ ಸಮನ್ವಯ ಮಾತ್ರವಲ್ಲ; ಜೈನಧರ್ಮದೊಂದಿಗೆ ಭಾರತೀಯ ಪರಂಪರೆಯ ಸಮನ್ವಯವನ್ನು ಎನ್ನುವುದು ಬಹು ದೊಡ್ಡ ಸಂಗತಿ"—ಎನ್ನುವ ಹೇಳಿಕೆಯೂ, ಈ ಭಾಗದಲ್ಲಿ ಅತ್ಯಂತ ಸಮರ್ಪಕವಾಗಿಯೂ ತಾರ್ಕಿಕವಾಗಿಯೂ ಪ್ರತಿಪಾದಿತವಾಗಿವೆ. ಈ ಕಾವ್ಯವನ್ನು ರಚಿಸಿದ ರತ್ನಾಕರನಿಗೆ ಮೊದಲು ಪ್ರೋತ್ಸಾಹ ದೊರೆಯದೆ ವೀರಶೈವಕ್ಕೆ ಮತಾಂತರಗೊಂಡನೆಂಬ ದಂತಕಥೆಯು "ಕವಿಗೆ ಉಂಟಾಗಿರಬಹುದಾದ ನಿರಾಶೆಯ ಪರಿಣಾಮವನ್ನು ಸಂಕೇತಿಸುತ್ತದೆ" ಎಂದು ಸಹಜ ರೀತಿಯ ವಿಶ್ಲೇಷಣೆಯನ್ನು ಲೇಖಕರು ನೀಡುತ್ತಾರೆ.

ಮೇಲಿನ ಚಾರಿತ್ರಿಕ ಅನಿವಾರ್ಯತೆಗೆ ಅಭಿವ್ಯಕ್ತಿಯನ್ನು ರತ್ನಾಕರನು ಭರತನ ಮೂಲಕ ನೀಡುತ್ತಾನೆ, ಪರಮವಿರಕ್ತನಾದ ಆದಿತೀರ್ಥಂಕರನು ಭೋಗದಲ್ಲಿದ್ದೂ ವೀತರಾಗನಾದ ಭರತನನ್ನು ಹೊಗಳುವ ರೀತಿಯಲ್ಲಿ ಅದು ವ್ಯಕ್ತವಾಗಿದೆ. ಆದರೆ ಭರತನ ಪಾತ್ರದಲ್ಲಿ ರತ್ನಾಕರನ ಈ ಸಮನ್ವಯ ಕಲ್ಪನೆಯು ಸಾಕ್ಷಾತ್ಕಾರ ಪಡೆದಿಲ್ಲವೆಂಬುವೇ ಲೇಖಕರು ಲೇಖನದ ಮುಂದಿನ ಅರ್ಧಭಾಗದಲ್ಲಿ ಹೇಳುವ ವಿಷಯ. ಭರತನು ದಿಗ್ವಿಜಯವನ್ನು ಮುಗಿಸಿ ವೃಷಭಾಚಲಕ್ಕೆ ಬಂದಾಗ ಹಿಂದಿನ ಚಕ್ರವರ್ತಿಗಳ ವಿಜಯ ವೈಭವವು ಅಲ್ಲಿನ ಶಿಲೆಗಳ ಮೇಲೆಲ್ಲ ಶಾಸನಸ್ಥವಾಗಿತ್ತು. ಅದನ್ನು ಕಂಡು ಭರತನ 'ಗರ್ವ ನೋಡಿದುದು' ಎಂದು ಕವಿ ಹೇಳಿದರೂ, ಮುಂದಿನ ಕ್ಷಣವೇ ಅದನ್ನೆಲ್ಲ ಅಳಿಸಿ ತನ್ನ ದಿಗ್ವಿಜಯ ವಿಷಯವನ್ನು ಬರೆಸುವ ಚಾಪಲ್ಯವನ್ನು ಭರತ ತೋರಿಸುತ್ತಾನೆ. ಈ ಸನ್ನಿವೇಶದಲ್ಲಿ; ತನ್ನ ಕುಮಾರರು ಜಿನದೀಕ್ಷೆಗೆ ಹೊರಟುನಿಂತಾಗ, ಅವರನ್ನು ತಡೆಯಲು ಪ್ರಯತ್ನಿಸಿ, ಅವರು ತಪಸ್ಸಿಗೆ ಹೊರಟೇಹೋದಾಗ ಭರತನು ಗೋಳಾಡುವ ರೀತಿಯಲ್ಲಿ; 'ನಸು ಮುಪ್ಪಡರಿದಂಗನೆಯರ್ಗೆ ಪ್ರತಿಗೈಸಿ' ಕಳಿಸಿ 'ಹೊಸ ಹರೆಯದ ಸತಿಯರೊಳರ್ತಿ ಮಾಡುವ', ಅವನ ನಡವಳಿಕೆಯಲ್ಲಿ; ಭರತನ ಭೋಗವು ಸ್ವೈರವೆಂಬಂತೆಯಾಗಲೀ,

ಯೋಗಸಮನ್ವಿತವಾದುದೆಂಬಂತಾಗಲೀ ವರ್ಣಿತವಾಗಿಲ್ಲ: “ಹಿಂದಿನ ಜೈನಕಾವ್ಯಗಳಲ್ಲಿ ಬರುತ್ತಿದ್ದ ಭೋಗನಿರಸನಭಾವಕ್ಕೆ ಪ್ರತಿಸ್ಪರ್ಧಿಯೆಂಬಂತೆ” ಇಲ್ಲಿ ಭೋಗವಿಜೃಂಭಣೆಯು ನಡೆದ ರೀತಿಯಲ್ಲಿ—ಭರತನ ಭೋಗ-ಯೋಗಗಳು ಸಮನ್ವಯವಾಗದೆ ಬೇರೆಯಾಗಿಯೇ ಉಳಿಯುತ್ತವೆ, ಆದ್ದರಿಂದ ಕವಿಯ ಆದರ್ಶ ಇಲ್ಲಿ ಕಾವ್ಯವಾಗಿ ವ್ಯಕ್ತವಾಗಿಲ್ಲ. “ಈ ರೀತಿಯಾಗಿ ಕವಿ ಶೃಂಗಾರದ ಅಥವಾ ಭೋಗದ ‘ವಿಭಾವ’ದ ಮೂಲಕವೇ ತನ್ನ ಭೋಗ-ಯೋಗಸಮನ್ವಯವನ್ನು ಚಿತ್ರಿಸಲು ತೊಡಗಿದ್ದಾನೆ” ಎಂಬ ವ್ಯಂಗ್ಯಪೂರ್ಣ ತೀರ್ಮಾನವು ವಿವರವಾದ ಪರಿಶೀಲನೆಯ ನಂತರ ಹೊರಬಂದಿದೆ. ‘ಭರತೇಶನಿರ್ವೇಗ ಸಂಧಿ’ಯಲ್ಲಿ ತನ್ನ ಭೋಗಜೀವನದ ಬಗ್ಗೆ ಪಶ್ಚಾತ್ತಾಪಪಡುವ ಭರತನ ಚಿತ್ರವು ಅವನು ಎಂದೂ ಈ ಸಮನ್ವಯವನ್ನು ಸಾಧಿಸಲಿಲ್ಲವೆಂಬುದನ್ನು ಸಾಬೀತು ಮಾಡುತ್ತದೆ. ಇಲ್ಲಿ “ರತ್ನಾಕರನು ಇದುವರೆಗೂ ಹೇಳಿಕೊಂಡ ಭೋಗಯೋಗ ಸಮನ್ವಯದ ಸ್ವಪ್ನ ಒಡೆದು ಚೂರಾಗಿದೆ”ಯೆಂಬ ಮಾತು ಸಮನ್ವಯಸಿದ್ಧಾಂತವು ಈ ಕಾವ್ಯದಲ್ಲಿ ಅನುಭವವಾಗಿ ಮೂಡಿಲ್ಲವೆಂಬುದನ್ನು ತೋರಿಸುತ್ತದೆ. ಈ ರೀತಿ ಈ ಲೇಖನವು ಒಂದೆಡೆ ಕಾವ್ಯವೊಂದರ ಕೇಂದ್ರಸಿದ್ಧಾಂತದ ಸಮಗ್ರಪರಿಶೀಲನೆಯಾಗಿರುವುದರ ಜೊತೆಗೆ, ಹಾಗೆ ಅಂತಹ ಸಿದ್ಧಾಂತವೊಂದನ್ನು ಹೊಂದಿರಲು ಕವಿಗೆ ಪ್ರೇರಕವಾದ ಯುಗಧರ್ಮದ ಹಿನ್ನೆಲೆಯ ವಿಶ್ಲೇಷಣೆಯನ್ನೂ ಪಡೆದು ಒಂದು ತುಂಬ ಉತ್ತಮವಾದ ಬರೆಹವಾಗಿದೆ.

‘ಅಕ್ಷಯ ವಸ್ತ್ರ’ ಎಂಬುದು ಮತ್ತೊಂದು ಉತ್ತಮ ಲೇಖನ. ಕುಮಾರವ್ಯಾಸನ ಅಕ್ಷಯವಸ್ತ್ರ ಪ್ರಸಂಗದ ಸ್ವಾರಸ್ಯವನ್ನು ಹೇಳಿ, ಆ ನೆಪದಿಂದ ಈ ಪ್ರಸಂಗವು ಮೂಲ ಭಾರತದಲ್ಲಿ ಇಲ್ಲವಿದ್ದು, ಹೇಗೆ ಯಾವ ಯಾವ ಕಾಲದಲ್ಲಿ, ಕವಿಗಳಲ್ಲಿ ವ್ಯತ್ಯಾಸಗೊಂಡು ಚಿತ್ರಿತವಾಗಿದೆಯೆಂಬ ವಿಕಾಸಕ್ರಮವನ್ನು ಇಲ್ಲಿ ಗುರುತಿಸಿದ್ದಾರೆ ಲೇಖಕರು. ಕುಮಾರವ್ಯಾಸನಿಗಿಂತ ಮುಂಚೆ ಈ ಪ್ರಸಂಗವು ಯಾವ ಮಹತ್ವದ ಕವಿಯಿಂದಲೂ ಗೌರವವನ್ನು ಪಡೆದಂತೆ ತೋರುವುದಿಲ್ಲ. ಅದು ಆಗ ಜನಮನದ ಭೂಮಿಕೆಯಲ್ಲಿ ಮಾತ್ರವೇ ಪ್ರಧಾನವಾಗಿತ್ತು ಎಂಬುದನ್ನು ಈ ಲೇಖನದಲ್ಲಿ ಜಿ.ಎಸ್.ಎಸ್. ಅವರು ತೋರಿಸಿಕೊಟ್ಟಿದ್ದಾರೆ. ಮೂಲಭಾರತದಲ್ಲಿ ಇಡೀ ವಸ್ತ್ರಾಪಹರಣ ಪ್ರಸಂಗವೇ ಪ್ರಕ್ಷಿಪ್ತವೆಂದು ವಿದ್ವಾಂಸರು ಹೇಳುವುದಿಲ್ಲ, ಅಲ್ಲಿ ಇಲ್ಲದಿದ್ದ ಅಂಶ ವಸ್ತ್ರವು ಅಕ್ಷಯವಾದ ವಿಷಯ ‘ವೇಣೀಸಂಹಾರ’ ನಾಟಕದಲ್ಲಿ ವಸ್ತ್ರಾಪಹರಣದ ವಿಷಯವು ಅನೇಕ ಕಡೆಗಳಲ್ಲಿ ಸೂಚಿತವಾಗಿದ್ದರೂ, ದ್ರೌಪದಿಯ ಮಾನಸಂರಕ್ಷಣೆಯಾದ ರೀತಿಯ ಬಗ್ಗೆ ಎಲ್ಲಿಯೂ ಸೂಚನೆಯಿಲ್ಲ. ಜಿನಭಾರತ ಪರಂಪರೆಯಲ್ಲಿ ಕೇಶಾಪಕರ್ಷಣವಾಗಲೀ ವಸ್ತ್ರಾಪಹರಣವಾಗಲೀ ಇಲ್ಲವೇ ಇಲ್ಲ. ವೈದಿಕ ಪರಂಪರೆಯ ಭಾರತವನ್ನು ಅನುಸರಿಸಿದ ಪಂಪನ ಭಾರತದಲ್ಲಿ ವಸ್ತ್ರಾಪಹರಣವೇ ನಡೆಯದು. ದುಶ್ಶಾಸನನು ‘ಉಟ್ಟುಗಾಸಂಕೈದುಡು’ ಸುಮ್ಮನಾಗುತ್ತಾನೆ. ಇದಕ್ಕೆ ಮುಖ್ಯಕಾರಣ, ಪಂಪನು ದ್ರೌಪದಿಯನ್ನು ಅರಿಕೇಸರಿಯ ಧರ್ಮಪತ್ನಿಯೊಡನೆ ಸಮಾವೇಶಗೊಳಿಸಿದ್ದು ಎಂಬ ಈ ವಿಮರ್ಶಕರ ಮಾತು ಒಪ್ಪತಕ್ಕದ್ದು. ರನ್ನನ ‘ಗದಾಯುದ್ಧ’ ಕಾವ್ಯದಲ್ಲಿ ವಸ್ತ್ರವೆ ಅಪಹರಣಗೊಂಡದ್ದು ಸ್ಪಷ್ಟ

ವಾಗಿದ್ದರೂ, ವಸ್ತ್ರವು ಅಕ್ಷಯವಾದುದಾಗಲೀ ಕೃಷ್ಣನ ಕೃಪೆಯಾಗಲೀ ಕಾಣುವುದಿಲ್ಲ. ಕೃಷ್ಣನ ಕೃಪೆಯಿಂದ ದ್ರೌಪದಿಯುಟ್ಟ ಬಟ್ಟೆಯು ಅಕ್ಷಯವಾಗಿ ಆಕೆಯ ಮಾನವು ಸಂರಕ್ಷಿತವಾದ ಪವಾಡವು ನನ್ನಯನ 'ಆಂಧ್ರಭಾರತ'ದಲ್ಲಿ ಮೊದಲು ಕಾಣಿಸಿಕೊಂಡಿದೆ. ಸಂಸ್ಕೃತ ಭಾರತದಲ್ಲಿಯೇ ಈ ವಿಷಯವು ಪ್ರಕ್ಷೇಪಗೊಂಡಿರಬಹುದಾದ ಕ್ರಮ—ಕೃಷ್ಣ ನನ್ನು ತನ್ನ ಮಾನವನ್ನು ಕಾಪಾಡೆಂದು ಪ್ರಾರ್ಥಿಸಿದ್ದು, ಆ ಪ್ರಾರ್ಥನೆಯು ಬೆಳೆದಿರ ಬಹುದಾದ ಬಗೆ, ಕೃಷ್ಣನು ಅಲ್ಲಿಗೇ ಬಂದು ಆಕೆಯನ್ನು ಕಾಪಾಡಿದನು ಅಥವಾ ಅದೃಶ್ಯವಾಗಿಯೋ ದ್ವಾರಕೆಯಲ್ಲಿದ್ದೋ ಕಾಪಾಡಿದನು ಎಂಬ ವಿಷಯದ ಮಾರ್ಪಾಟು, ದುಶ್ಶಾಸನನು ಸೀರೆಯನ್ನು ಸೆಳೆಯಲು ಎಷ್ಟು ವಸ್ತ್ರಗಳು ಬಂದವು, ಅವು ಯಾವ ವರ್ಣದವು ಎಂಬ ವರ್ಣನೆ—ಇವೆಲ್ಲವೂ ಇಲ್ಲಿ ತುಂಬ ಸ್ವಾರಸ್ಯಕರವಾಗಿ ಲೇಖಕರ ಲೇಖನಿಯಿಂದ ಮೂಡಿಬಂದಿವೆ. ಶ್ರೀಕೃಷ್ಣನ ಕೃಪೆಯಿಂದ ತನ್ನ ಮಾನವು ಉಳಿದಿದ್ದರೂ ಅನಂತರ ಅವನಿಗೆ ತನ್ನ ಕೃತಜ್ಞತೆಯನ್ನು ಸಮರ್ಪಿಸದಿರುವುದು, ದೌತ್ಯಕ್ಕಾಗಿ ಕೃಷ್ಣನು ಉದ್ಯೋಗಪರ್ವದಲ್ಲಿ ಹೊರಟ ಸಂದರ್ಭದಲ್ಲಿ ದ್ರೌಪದಿಯು ತನ್ನ ಹಿಂದಿನ ಪರಾಭವಗಳನ್ನು ನೆನೆಯುವಾಗಲೂ ತಾನು ಧೃತರಾಷ್ಟ್ರನ ಕರುಣೆಯಿಂದ ದಾಸ್ಯ ವಿಮೋಚನೆಯನ್ನು ಪಡೆದುದನ್ನು ಹೇಳಿ ಶ್ರೀಕೃಷ್ಣನಿಂದ ಮಾನಸಂರಕ್ಷಿತಳಾದ ವಿಷಯ ವನ್ನು ಹೇಳದಿರುವುದು—ಇಂತಹವು ಅಕ್ಷಯವಸ್ತ್ರಪ್ರಸಂಗವು ಮೂಲಭಾರತದಲ್ಲಿ ಪ್ರಕ್ಷಿಪ್ತವಾಗಿದೆಯೆಂಬುದಕ್ಕೆ ಆಂತರಿಕ ಆಧಾರಗಳೆಂದು ಇಲ್ಲಿ ಲೇಖಕರು ಎತ್ತಿತೋರಿಸಿ ದ್ದಾರೆ. ಹೀಗೆ ಈ ಪ್ರಸಂಗವು ಕಾಲಕಾಲಕ್ಕೆ ಬೆಳೆದುಬಂದ ಪರಿಯನ್ನು ಸಂಸ್ಕೃತ, ಕನ್ನಡ, ತೆಲುಗು, ತಮಿಳು ಕಾವ್ಯಗಳ ಆಧಾರದ ಮೂಲಕ ತುಂಬ ಶ್ರಮಪೂರ್ಣವಾದ ರೀತಿಯಲ್ಲಿ ನಿರೂಪಿಸುತ್ತಾರೆ.

ವೇದದ ಖಗೋಳ ವರ್ಣನೆಗೂ ಪಾಂಡವ-ದ್ರೌಪದಿಪ್ರಸಂಗಕ್ಕೂ ಒಬ್ಬ ವಿದ್ವಾಂಸರು ಗುರುತಿಸಿದ ಸಾಮ್ಯ, ಮತ್ತೊಬ್ಬರು ಮಹಾಭಾರತದ ಈ ಪ್ರಸಂಗಕ್ಕೆ ಸಂಪೂರ್ಣ ಆಧ್ಯಾತ್ಮಿಕ ವಿವರಣೆಯನ್ನು ನೀಡಿರುವ ಔಚಿತ್ಯ—ಇವುಗಳ ಬಗ್ಗೆ ಲೇಖಕರು ತಮ್ಮ ಅಸಮ್ಮತಿಯನ್ನು ವ್ಯಕ್ತಪಡಿಸುತ್ತಾರೆ. ಈ ಪ್ರಸಂಗದ ಬಗ್ಗೆ ಮೂರು ಬಗೆಯ ಅಭಿಪ್ರಾಯಗಳನ್ನು—ವಸ್ತ್ರಾಪಹರಣ ಪ್ರಸಂಗವೇ ಪ್ರಕ್ಷೇಪಗೊಂಡಿದೆ, ಅದು ಕೇವಲ ವ್ಯತ್ಯಾಸಗೊಂಡಿದೆ, ಪೂನಾದ ಪರಿಷ್ಕೃತ ಭಾರತದ ಈ ಭಾಗವನ್ನು ಇದ್ದಹಾಗೆ ಒಪ್ಪಿ ಕೊಳ್ಳುವುದು—ಲೇಖಕರು ಪರಿಶೀಲಿಸಿ ಕೊನೆಗೆ ಕೊನೆಯ ಮಾರ್ಗವೇ ಸಮಂಜಸವಾದು ದೆಂಬ ತೀರ್ಮಾನಕ್ಕೆ ಬರುತ್ತಾರೆ. ವಸ್ತ್ರಾಪಹರಣ ಪ್ರಯತ್ನವು ನಡೆದರೂ ಸಫಲವಾಗ ಲಿಲ್ಲ, ಕಾರಣ ಆ ವಸ್ತ್ರವು ಎಳೆದಂತೆಲ್ಲ ಅಕ್ಷಯವಾದದ್ದು. ಅದನ್ನು 'ಅದ್ಭುತತಮ' ಎಂದು ಭಾರತವು ವರ್ಣಿಸುತ್ತದೆ. ಇದೇಕೆ ಅಕ್ಷಯವಾಯಿತು ಎಂಬುದಕ್ಕೆ ಲೌಕಿಕ ವಿವರಣೆಗಳನ್ನು ನೀಡುವುದು ಸಮಂಜಸವಾಗುವುದಿಲ್ಲವೆನ್ನುವ ಲೇಖಕರು, "ಆ ಪ್ರಯತ್ನ ವಿಫಲವಾಯಿತೆಂಬ ಸತ್ಯವನ್ನು ಕಾವ್ಯ ಅಕ್ಷಯವಾಯಿತು, ಅದೇ ಬಗೆಯ ಅನೇಕ ವಸ್ತ್ರಗಳು ಬಂದುವು—ಎನ್ನುತ್ತದೆ" ಎಂದು ಆ ಪ್ರಸಂಗವು ಮೂಲಭಾರತದಲ್ಲಿ ಕೇವಲ

ಪ್ರತಿಮಾತ್ಮಕವಾದದ್ದು ಎಂಬ ನಿಲವನ್ನು ತಾಳುತ್ತಾರೆ. ಇದು ನಮಗೂ ಸಮ್ಮತ ವಾಗುತ್ತದೆ. ಹೀಗೆ ಈ ಲೇಖನವು ನಾನಾ ಭಾಷೆಗಳ ಭಾರತ ಕಾವ್ಯಗಳ ಆಳವಾದ ಅಧ್ಯಯನದಿಂದಲೂ, ಅತ್ಯಂತ ಸೂಕ್ಷ್ಮವಾದ ವಿಶ್ಲೇಷಕ ದೃಷ್ಟಿಯಿಂದಲೂ ತುಂಬ ಶ್ರಮದ, ಆಳವಾದ ಪಾಂಡಿತ್ಯದ ಫಲದಿಂದಲೂ ಒಂದು ಶ್ರೇಷ್ಠ ಲೇಖನವಾಗಿದೆ.

'ಫಲಸಂಚಯು'ವೆಂಬ ಕಿರುಪ್ರಬಂಧವು ಠಾಕೂರರ ಜನ್ಮಶತಾಬ್ದ ಕಾಲದಲ್ಲಿ ಜಿ.ಎಸ್.ಎಸ್. ಅವರು ಆ ಕವಿಗೆ ಸಮರ್ಪಿಸಿ ಬರೆದ ಪ್ರಬಂಧಕಾಣಿಕೆಯಾಗಿದೆ. ಭಾರತೀಯ ಪರಂಪರೆಯು ಪ್ರತಿಪಾದಿಸಿದ ತತ್ವಗಳನ್ನೇ ಠಾಕೂರರ ಫಲಸಂಚಯದ ಗದ್ಯಕವನಗಳು ಹೇಳಿದರೂ ಅವು ಕಾವ್ಯವಾಗಿ ಮೂಡಿಬಂದ ನವೀನತೆಯನ್ನು ಇಲ್ಲಿ ಪರಿಚಯ ಮಾಡಿಕೊಡಲಾಗಿದೆ; ಠಾಕೂರರ ಕಾವ್ಯದಲ್ಲಿ ಪೌರುಷತೆ, ಉತ್ಸಾಹ, ಜೀವನ ಪ್ರೀತಿ ಹಾಗೂ ಶ್ರದ್ಧೆಗಳು ಹೇಗೆ ಜೀವನಾಡಿಗಳಾಗಿದೆಯೆಂಬುದನ್ನೂ, ರವೀಂದ್ರರ ಅನುಭಾವದೃಷ್ಟಿಯು ನಿರ್ಮಿಸಿಕೊಂಡಿರುವ ಸಾರ್ವತ್ರಿಕಪ್ರತಿಮಾವೈಭವದ ಬಗೆ ಯನ್ನೂ ಇಲ್ಲಿ ಸಂಕ್ಷೇಪವಾಗಿ ವಿವರಿಸಲಾಗಿದೆ.

ಒಟ್ಟಾರೆ ಡಾ|| ಜಿ. ಎಸ್. ಶಿವರುದ್ರಪ್ಪನವರ ಈ ಲೇಖನಸಂಗ್ರಹವು ಅವರ ವಿಮರ್ಶನದೃಷ್ಟಿ, ಸಂಶೋಧಕಪ್ರವೃತ್ತಿ, ಕಾವ್ಯಸೌಂದರ್ಯವನ್ನು ಸವಿಯುವ ರಸ ದೃಷ್ಟಿಗಳಿಂದ ಕೂಡಿದ ಉತ್ತಮ ಗ್ರಂಥವಾಗಿದೆ. ಅನೇಕ ಕಡೆಗಳಲ್ಲಿ ಅವರು ತೋರುವ ಒಳನೋಟ, ನೀಡುವ ವ್ಯಾಖ್ಯಾನ, ಮಾಡುವ ವಿಶ್ಲೇಷಣೆ, ತರ್ಕಬದ್ಧವಾದ ವಿವೇಚನೆ ಇವುಗಳು ಅವರ ಲೇಖನಗಳಲ್ಲಿ ಹೊಸದಾದ ಅಂಶಗಳಿರುವಂತೆ ಮಾಡುತ್ತವೆ. ಅವರು ಎಲ್ಲೆಡೆಯೂ ಸಹೃದಯ ವಿಮರ್ಶಕರಾಗಿಯೇ ಮೆರೆದಿದ್ದಾರೆ. ಮರೆವಿನಾಳದ ವಿಷಯ ಗಳನ್ನು ಅಗೆದು ತೆಗೆಯುವ ಸಂದರ್ಭಗಳಲ್ಲಿಯೂ ಅವರ ರಸದೃಷ್ಟಿಯು ಅವರ ಲೇಖನ ಗಳನ್ನು ನೀರಸತೆಯಿಂದ ಬಿಡುಗಡೆ ಮಾಡುತ್ತದೆ. ಹೀಗಾಗಿ "ಕೃತಿಪರಿಶೀಲನೆಯ ಹೆಸರಿನಲ್ಲಿ ಸೆರೆಸಿಕ್ಕಿಕೊಳ್ಳಬಹುದಾದ ಭಾವನಾಮಯತೆಯಿಂದ, ಸಂಶೋಧನೆಯ ಹೆಸರಿ ನಲ್ಲಿ ಸೆರೆಸಿಕ್ಕಿಕೊಳ್ಳಬಹುದಾದ ನೀರಸತೆಯಿಂದ ನಾನು ಪಾರಾಗಿದ್ದೇನೆಂದು ನನ್ನ ಭಾವನೆ" ಎನ್ನುವ ಲೇಖಕರ ಮಾತು ಈ ಸಂಗ್ರಹದ ಮಟ್ಟಿಗಂತೂ ಸಂಪೂರ್ಣ ಸತ್ಯ ವಾಗಿದೆ. ಕೃತಿಸಮೀಕ್ಷೆಯ ಕಾಲದಲ್ಲಿಯೇ ಉದಾಹರಿಸಿರುವ ಅವರ ಅನೇಕ ವಾಕ್ಯ ಗಳಿಂದ ಅವರ ಶೈಲಿಯ ಪರಿಚಯವು ಸ್ವಲ್ಪಮಟ್ಟಿಗಾದರೂ ಆಗಬಹುದು. ಎಲ್ಲಿಯೂ ಬೇಸರತರಿಸದ ಸ್ವಾರಸ್ಯಪೂರ್ಣ ಶೈಲಿಯಿಂದ ಈ ಲೇಖನಗಳು ಸಾಮಾನ್ಯ ಓದುಗ ನನ್ನೂ ಸೆಳೆಯಬಲ್ಲ ಆಕರ್ಷಣೆಯನ್ನೊಳಗೊಂಡಿವೆ.

## ಬಸವರಾಜ ಕಲ್ಗುಡಿ

# ಗತಿಬಿಂಬ—ಒಂದು ಸಮೀಕ್ಷೆ

ಕನ್ನಡ ಕಾವ್ಯಪರಂಪರೆಯ ಬೆಳವಣಿಗೆ ಹಾಗೂ ಪ್ರಮುಖ ಧೋರಣೆಗಳನ್ನು ಕುರಿತ ವಿಚಾರಗಳುಳ್ಳ—ಹೊಸ ಕಾವ್ಯದ ಹೊಯ್ದಾಟ, ಪ್ರೇರಣೆ–ಪರಂಪರೆ–ಪ್ರಯೋಗ; ಹಾಗೂ ಇಂದಿನ ಕವಿತೆ—ಈ ಲೇಖನಗಳಿಗೆ ಪೂರಕವಾಗಿ ಕಾವ್ಯಮೀಮಾಂಸೆ ಮತ್ತು ವಿಮರ್ಶೆಯ ವಿಚಾರಗಳನ್ನು ಹೇಳುವ (ಸಾಹಿತ್ಯ-ಜೀವನದ ಗತಿಬಿಂಬ, ಕವಿಯಲ್ಲಿ ವಿಶಿಷ್ಟತೆ, ವಿಮರ್ಶೆ ಮತ್ತು ಕಾಲಾತೀತಸ್ಥಿತಿ.) ಪ್ರಬಂಧಗಳು ಬರುವದರಿಂದ ಇವುಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಕಾವ್ಯವಿಚಾರಗಳನ್ನು ಕುರಿತ ಲೇಖನಗಳ ಧೋರಣೆಗಳನ್ನು ಪರಿಶೀಲಿಸಿದೆ.

ಕಾವ್ಯಮೀಮಾಂಸೆಗೆ ಸಂಬಂಧಪಟ್ಟ ಹಾಗೆ, ಸ್ವತಂತ್ರವಾದ ಮೂರು ಲೇಖನಗಳನ್ನು (ಸಮಕಾಲೀನಪ್ರಜ್ಞೆ, ಸಾಹಿತ್ಯದಲ್ಲಿ ಪ್ರಾಮಾಣಿಕತೆ, ಮತ್ತು ಕವಿ-ಸಹೃದಯ) ಒಂದೊಂದಾಗಿ ಆಮೇಲೆ ಚರ್ಚಿಸಿದೆ. ಕಾವ್ಯಮೀಮಾಂಸೆಯ ಬೆಳವಣಿಗೆಯನ್ನು ಕುರಿತ ಸಮೀಕ್ಷೆಯ ಪ್ರಮುಖ ವಿವರಗಳನ್ನು ಕೊನೆಯಲ್ಲಿ ಕೊಡಲಾಗಿದೆ. ಇದು ಗತಿಬಿಂಬ ಸಮೀಕ್ಷೆಯ ಒಂದು ರೂಪರೇಖೆ.

'ಸಾಹಿತ್ಯ ಜೀವನದ ಗತಿಬಿಂಬ' ಎನ್ನುವ ಲೇಖನದಲ್ಲಿ 'ಪ್ರತಿಬಿಂಬ' ಎನ್ನುವ ಮಾತಿಗಿಂತ 'ಗತಿಬಿಂಬ' ಎನ್ನುವ ಮಾತು ಹೇಗೆ ಅರ್ಥಪೂರ್ಣವಾಗುತ್ತದೆಂದು ಲೇಖಕರು ವಿವರಿಸುತ್ತಾರೆ. 'ಗತಿ' ಎನ್ನುವ ಮಾತು ಕೊಡುವ ಅರ್ಥವ್ಯಾಪ್ತಿಯನ್ನು ವಿವರಿಸುತ್ತ ಜನಜೀವನದ ಅವಸ್ಥೆ, ಚಲನೆ, ಮತ್ತು ಉದ್ದೇಶಗಳೆಲ್ಲವನ್ನೂ ಈ ಮಾತಿನಲ್ಲಿ ಅಳವಡಿಸಬಹುದು ಎನ್ನುವ ಅಭಿಪ್ರಾಯಪಡುತ್ತಾರೆ.

'ಪ್ರತಿಬಿಂಬ' ಎನ್ನುವದು—ಸಾಹಿತ್ಯದ ಕ್ರಿಯೆಯನ್ನು ಕುರಿತ ಹಾಗೆ ಒಂದು ಮಿತಿಯಾದ ಅಭಿಪ್ರಾಯವನ್ನು ಕೊಡುತ್ತದೆ. 'ಗತಿಬಿಂಬ' ಎನ್ನುವ ಮಾತು ಜೀವನದ ಅವಸ್ಥೆ, ಚಲನಶೀಲತೆ, ಪರಿವರ್ತನಶೀಲತೆಯನ್ನೂ ಗುರುತಿಸುವ ಶಕ್ತಿಯನ್ನು ಹೊತ್ತಿದೆ ಎನ್ನುವದನ್ನು ಗಮನಿಸಬೇಕು. ಸಾಹಿತ್ಯ ಜನಜೀವನದ ಈ ಅವಸ್ಥೆ ಹಾಗೂ ಬದಲಾವಣೆಗಳನ್ನು ಅವುಗಳ ಹಿಂದಿನ ಪ್ರೇರಣೆಗಳ ಸಹಿತ ಹಿಡಿಯುತ್ತದೆ.

ಈ ವಾಕ್ಯದ ಅರ್ಥವನ್ನು ಲೇಖಕರು ನವೋದಯ ಕಾವ್ಯಮೀಮಾಂಸೆಯ ಹಿನ್ನೆಲೆಯಲ್ಲಿ ವಿವರಿಸುತ್ತಾರೆ. 'ಬಿಂಬನ' ಎನ್ನುವ ಮಾತಿನ ಅರ್ಥವನ್ನು ಹೇಳುವಲ್ಲಿ "ಸಾಹಿ

ತ್ಯದ ನಿಲುವಿನಲ್ಲಿ 'ಬಿಂಬನ' ಎಂದರೆ ಇದ್ದುದನ್ನು ಇದ್ದಹಾಗೆ ಪಡಿಮೂಡಿಸುವದು ಎಂದು ಅರ್ಥವಲ್ಲ; ಇರುವದನ್ನು ತನ್ನ ಮಾಧ್ಯಮದ ಮೂಲಕ ಅದು ಬೇರೊಂದೆಂಬಂತೆ ಪರಿವರ್ತಿಸಿ ಅಭಿವ್ಯಕ್ತಿಗೊಳಿಸುವದು ಎಂದರ್ಥ"—ಎನ್ನುವ ಮಾತನ್ನು ಗಮನಿಸಿ. ಇದು ಇನ್ನೂ ಸ್ಪಷ್ಟವಾಗುವದು—'ಕವಿಯಲ್ಲಿ ವಿಶಿಷ್ಟತೆ' ಎನ್ನುವ ಲೇಖನದಲ್ಲಿ ಅವರು ಸೂರ್ಯೋದಯದ ವರ್ಣನೆಯ ಮೂರು ಉದಾಹರಣೆಗಳನ್ನು ಕೊಟ್ಟು 'ಸಾಧಾರಣದ ಸಾಮಗ್ರಿಯಿಂದಲೇ ಕವಿಗಳು ಬೇರೊಂದು ಅಸಾಧಾರಣವಾದ, ಅಪೂರ್ವವಾದ ಸೃಷ್ಟಿಯನ್ನು 'ತೆರೆದಿರುವ'ರು ಎಂದು ಹೇಳುವ ಮಾತುಗಳಲ್ಲಿ.

'ಕವಿಯಲ್ಲಿ ವಿಶಿಷ್ಟತೆ' ಲೇಖನದಲ್ಲಿ ಕವಿಯ ಕಾರ್ಯವನ್ನು ಕುರಿತಂತೆ ಕೆಲವು ಮುಖ್ಯವಾದ ಅಭಿಪ್ರಾಯಗಳನ್ನು ಗುರುತಿಸಬಹುದು. 'ಒಂದು ದೇಶದ ಕವಿಗೆ ಹಿನ್ನೆಲೆಯಾದ 'ಸಾಧಾರಣ' ಎನ್ನುವದು ಆ ದೇಶದ ಜನಜೀವನ, ಅದರ ನಂಬಿಕೆಗಳು, ಅದರ ಜೀವನ ದೃಷ್ಟಿ, ಅದರದೇ ಆದ ಭಾಷಾವೈಲಕ್ಷಣ್ಯಗಳು ಈ ಎಲ್ಲವನ್ನೂ ಒಳಗೊಂಡಿರುತ್ತದೆ.' 'ಪ್ರತಿಯೊಬ್ಬ ನಿಜವಾದ ಕವಿಗೂ ಹೀಗೆ ಅನುಭವದೊಂದಿಗೆ ಭಾಷೆಯೊಂದಿಗೆ ಹೋರಾಡಿ ವಿಶಿಷ್ಟ ಪದರಚನೆಯೊಂದನ್ನು ರೂಪಿಸಿಕೊಳ್ಳುವ ತನಕ ತನ್ನ ವಿಶಿಷ್ಟತೆಯನ್ನು ಸಾಧಿಸುವುದು ಸಾಧ್ಯವಲ್ಲ.' ಈ ಮಾತುಗಳು ಕವಿ ಸಮಾಜದ ಅಂಗ, ಅದರ ಕೆಲವು ವಿಶಿಷ್ಟ ಧೋರಣೆಗಳಿಂದ ಪ್ರೇರಿತನಾದವ, ಸಮರ್ಥ ಕವಿ ತನ್ನ ವಿಶಿಷ್ಟತೆಯನ್ನು ಸಾಧಿಸುವಲ್ಲಿ ಹೋರಾಟ ನಡೆಸುವವ, ಮುಂತಾದ ವಿಚಾರಗಳನ್ನು ಹೇಳುತ್ತವೆ.

ಆದರೆ ಮೇಲಿನ ಕವಿಯ 'ಹೋರಾಟ'ದ ಮಾತುಗಳನ್ನು ಅವರು ನವೋದಯ ಮಾರ್ಗದ ಕವಿಗಳಿಗೂ ಅನ್ವಯಿಸಿ ಹೇಳುವದು (ಉದಾ : "ಶ್ರೀ ಕುವೆಂಪುರವರು "ನನ್ನ ಕವಿತೆಯು 'ನನ್ನ ಕವಿತೆ', ನನ್ನವಳೆ ಎಂದೆಂದಿಗೂ ...ಪಂಪ ರನ್ನರು ಕಾಣಲಿಲ್ಲ. ನನ್ನ ಕವಿತೆಯ ಕಣ್ಣನು"....ಎಂದದ್ದೂ ಇದೇ ಅರ್ಥದಲ್ಲಿಯೆ") ಪೂರ್ಣವಾಗಿ ಸಮಂಜಸವಾಗಲಾರದು....ಏಕೆಂದರೆ ಬಹುಪಾಲು ನವೋದಯ ಕವಿಗಳು ಭಾಷೆಯ ಬಳಕೆಗೆ ಸಂಬಂಧಿಸಿದಂತೆ ಬಹಳ ಕಡೆಗಳಲ್ಲಿ ಅರ್ಥಪೂರ್ಣ ಹೋರಾಟ ನಡೆಸಿದ್ದಿಲ್ಲ. 'ಅನುಭವವನ್ನು ಸಾಧ್ಯಗೊಳಿಸಿಕೊಡುವ ವಿವರಗಳನ್ನು ಭಾಷೆಯಲ್ಲಿ ಹಿಡಿಯುವ ಪ್ರಯತ್ನವೇ ನಡೆಯುವದಿಲ್ಲ' (ನೋಡಿ—ಭಾಷಾ ಪ್ರಯೋಗ : ನವೋದಯ ಕಾವ್ಯದಲ್ಲಿ ಜಿ. ಎಚ್. ನಾಯಕ್ : ಹೊಸಗನ್ನಡ ಕಾವ್ಯದ ಎರಡು ಮಾರ್ಗಗಳು.)

'ವಿಮರ್ಶೆ ಮತ್ತು ಕಾಲಾತೀತ ಸ್ಥಿತಿ'—ಲೇಖನದಲ್ಲಿ ವಿಮರ್ಶೆಯ ಎರಡು ಕಾರ್ಯಗಳನ್ನು ಕುರಿತ ವಿವರಣೆಯನ್ನು ಕೊಡುತ್ತಾರೆ. 'ವಿಮರ್ಶೆ ಎಂದರೆ ಸಾಧಾರಣವಾಗಿ ಎಲ್ಲರಿಗೂ ಗೊತ್ತಿರುವಂತೆ ಕವಿ-ಕೃತಿಯೊಂದನ್ನು ಸಮರ್ಥವಾದ ಓದುಗ ತನಗಾಗಿ ಅರ್ಥಮಾಡಿಕೊಳ್ಳುವ ಮತ್ತು ತನ್ನ ಸುತ್ತಣವರಿಗೆ ಅರ್ಥಮಾಡಿಕೊಡುವ ಒಂದು ಪ್ರಾಮಾಣಿಕವಾದ ಪ್ರಯತ್ನ ಎನ್ನುವದು ಒಂದು; ಹಾಗೆ ಅರ್ಥಮಾಡಿಕೊಂಡ ಕವಿಯ ಮೌಲ್ಯವನ್ನು ನಿರ್ಣಯಿಸುವುದು ಮತ್ತೊಂದು'. ವಿಮರ್ಶೆಯ ಈ ಎರಡೂ ಕಾರ್ಯಗಳನ್ನು ಬಹುಪಾಲು ಎಲ್ಲ ವಿಮರ್ಶಕರು ಒಪ್ಪಿಕೊಳ್ಳುತ್ತಾರೆ. ಮೌಲ್ಯನಿರ್ಣಯ ವಿಮರ್ಶ

ಕನ ಕೆಲಸವಲ್ಲ ಎನ್ನುವ ವಾದವೊಂದು ಇದೆ. ಇದರ ಪ್ರಕಾರ ವಿಮರ್ಶೆ ಏನಿದ್ದರೂ ಓದುಗನಿಗೆ ನೆರವು ನೀಡುವುದು. ಒಂದು ಕೃತಿಯ ಶ್ರೇಷ್ಠ ಓದುಗ ಇವನು. ಓದುಗನ ಅಭಿರುಚಿಯನ್ನು ನಿರ್ದೇಶಿಸುವ ಕೆಲಸ ಇವನದಲ್ಲ. ವಿಮರ್ಶಕ ಒಂದು ಕೃತಿಗೆ ಸಮಕಾಲೀನ ಪ್ರತಿಕ್ರಿಯೆ ಸೂಚಿಸುತ್ತಿರುವನೇ ಹೊರತು ಬೆಲೆಕಟ್ಟುತ್ತಿರುವದಿಲ್ಲ ಎನ್ನುವ ಇನ್ನೊಂದು ವಾದವೂ ಇದೆ. ಇವೆರಡೂ ವಾದಗಳನ್ನು ಸಂಪೂರ್ಣ ಒಪ್ಪಿಕೊಳ್ಳಲಿಕ್ಕೆ ಆಗುವದಿಲ್ಲ. ಆದರೆ ಮೌಲ್ಯನಿರ್ಣಯ ಸಾಧ್ಯವಿದೆ ಎನ್ನುವವರು, ಕೃತಿಯ ಆಯ್ಕೆಯಲ್ಲೇ ತರತಮ ಭಾವ ಗ್ರಹಿಸುತ್ತಾನೆ. ಎಂದೋ; ಅಥವಾ ಜನಪ್ರಿಯತೆಯನ್ನೋ ಮಾನದಂಡಗಳನ್ನಾಗಿ ಹೇಳಿದರೆ ಅವು ಭಾಗಶಃ ನಿಜವಾಗಬಹುದಾದರೂ ತಪ್ಪು ದಾರಿಯೂ ಆಗುತ್ತವೆ. ಏಕೆಂದರೆ ಸಾಹಿತ್ಯೇತರ ಕಾರಣಗಳು ಈ ಮಾನದಂಡಗಳನ್ನು ನಿರ್ಧರಿಸುವ ಸಾಧ್ಯತೆಯೂ ಉಂಟು.

ಸಾಹಿತ್ಯಕೃತಿಗಳಲ್ಲಿ ತರತಮಭಾವ ಇದೆ ಎನ್ನುವುದನ್ನು ಒಪ್ಪಿದರೆ ಅದು ಉಂಟಾಗಲು ಕೃತಿಯ ಆಶಯ, ಅಭಿವ್ಯಕ್ತಿ, ಪರಿಣಾಮಗಳು ಕಾರಣವಾಗುತ್ತವೆ. ಇವುಗಳೇ ಮುಂದಿನ ಹಂತದಲ್ಲಿ ಮೌಲ್ಯನಿರ್ಣಯಕ್ಕೆ ಮಾನದಂಡಗಳಾಗಬಹುದು ಆದ್ದರಿಂದ ಸಾರ್ವತ್ರಿಕ ಮಾನದಂಡಗಳನ್ನು ಮೌಲ್ಯನಿರ್ಣಯಕ್ಕೆ ಕೊಡಲು ಸಾಧ್ಯವಿಲ್ಲ. ಈ ವಿವೇಚನೆಯ ಹಿನ್ನೆಲೆಯಲ್ಲೇ—ಶಿವರುದ್ರಪ್ಪನವರ 'ವಿಮರ್ಶೆಯ ಸ್ವರೂಪವೂ ಕಾಲ ಕಾಲಕ್ಕೆ ಬದಲಾಗುವದರಿಂದ ಮೌಲ್ಯವಿವೇಚನೆಯೂ ಒಂದು ನಿರಂತರ ಕ್ರಿಯೆಯೇ ಹೊರತಾಗಿ 'ಸುರುಳಿಯಲ್ಲಿ ಸುತ್ತಿ ಭದ್ರವಾಗಿರಿಸುವ ಪ್ರಯತ್ನವಲ್ಲ' ಎನ್ನುವ ಮಾತು ಮುಖ್ಯವಾದದ್ದು.

ಮೌಲ್ಯನಿರ್ಧಾರಕ್ಕೆ—ವಿಮರ್ಶಕನಿಗೆ ಇರಬೇಕಾದ—ಸ್ಥಿತಿಯನ್ನು ಹೇಳುತ್ತ ಇವರ—ಉಭಯದೇಶಕಾಲ ಸಂಬಂಧದಿಂದ ತಪ್ಪಿಸಿಕೊಂಡು 'ಕಾಲಾತೀತ' ನೆಲೆಯಲ್ಲಿ ನಿಲ್ಲುವ ಸ್ಥಿತಿ ವಿಮರ್ಶಕನಿಗೆ ಉಂಟಾದರೆ ಮಾತ್ರ ಮೌಲ್ಯನಿರ್ಣಯ ಸಾಧ್ಯ ಎನ್ನುವ ಎಚ್ಚರವು ವಿಮರ್ಶಕನಿಗೆ ಇರಬೇಕಾದ, ಅತ್ಯಗತ್ಯವಾದ ಗುಣವನ್ನು ಗುರುತಿಸುತ್ತದೆ.

ಮೇಲಿನ ಎರಡೂ ಪ್ರಬಂಧಗಳಲ್ಲಿ ಕನ್ನಡ ಕಾವ್ಯವನ್ನು ಕುರಿತಂತೆ ಎರಡು ಅಭಿಪ್ರಾಯಗಳ ಸ್ಥೂಲವಾದ ಪರಿಶೀಲನೆ ಇದೆ.

೧. ಕನ್ನಡ ನವ್ಯಕಾವ್ಯದ ವಸ್ತುವಿನ ಹಿನ್ನೆಲೆ 'ಸಾಧಾರಣ'ವಾದದ್ದಲ್ಲ. ಎನ್ನುವುದು–

೨. ನವ್ಯಮಾರ್ಗದ ಕವಿಗಳು, ವಿಮರ್ಶಕರು ನವೋದಯ ಕಾವ್ಯಪರಂಪರೆಯ ಬಗ್ಗೆ ಮಾಡುತ್ತಿರುವದು ವಿಡಂಬನೆಯೇ ಹೊರತು ವಿಮರ್ಶೆಯಲ್ಲ—ಎನ್ನುವದು.

೧. ಕನ್ನಡ ನವ್ಯಕಾವ್ಯದ ವಸ್ತುವಿನ ಹಿನ್ನೆಲೆ ಸಾಧಾರಣವಾದದ್ದಲ್ಲ ಎನ್ನುವ ಮಾತುಗಳನ್ನು ಅವರ ಕನ್ನಡ ಕಾವ್ಯದ ಸ್ಥಿತಿಗತಿಯನ್ನು ಗುರುತಿಸುವ ಲೇಖನಗಳಲ್ಲಿ ನೋಡಬಹುದು. ಲೇಖಕರ ಅಪಾದನೆಯ ಮುಖ್ಯಕಾರಣವೆಂದರೆ ನವ್ಯಕಾವ್ಯ ಅಕಾಲಿಕವಾದ ಒಂದು ಧೋರಣೆಯನ್ನು ಪಾಶ್ಚಾತ್ಯ ಪ್ರಭಾವದಿಂದ ಮಾಡಿಕೊಂಡಿತ್ತು; ಇದು 'ಆಗತಾನೆ ಸ್ವಾತಂತ್ರ್ಯವನ್ನು ಪಡೆದು ಉದಯೋನ್ಮುಖವಾಗುತ್ತಿದ್ದ ರಾಷ್ಟ್ರದ

ಉತ್ಸಾಹಪೂರ್ಣ ಮನೋಧರ್ಮಕ್ಕೆ ಸಂಪೂರ್ಣ ವಿರುದ್ಧವಾಗಿ ಅಪಸ್ವರದಂತೆ ಭಾಸವಾಯಿತು' (ಹೊಸ ಕಾವ್ಯದ ಹೊಯ್ದಾಟ). ಇದಕ್ಕೆ ವಿರುದ್ಧವಾದ ಅಭಿಪ್ರಾಯಗಳನ್ನು ಕೊಡುವವರು—'ಬ್ರಿಟಿಷರ ಕಾಲದಿಂದಲೇ ಯಾಂತ್ರಿಕ ವಿಜ್ಞಾನದಿಂದ, ಆರ್ಥಿಕ ಸ್ಥಿತಿಗತಿಗಳ ಮೇಲೆ ಆದ ಪರಿಣಾಮ—ಪರಕೀಯತೆ, ನಿರಾಶೆಗಳನ್ನುಂಟುಮಾಡಿದ್ದವು'—ಎಂದೂ ಹೇಳುತ್ತಾರೆ. ಇಂತಹ ಮಾತುಗಳು ಕಾವ್ಯಚರಿತ್ರೆಗೆ ಸಂಬಂಧಪಟ್ಟಹಾಗೆ ಭಿನ್ನಾಭಿಪ್ರಾಯಗಳಾಗಿಯೇ ಉಳಿಯುವುದು ಖಚಿತ. ಸಮಸ್ಯೆಗಳನ್ನು ಕವಿಗಳು ಹೇಗೆ ನೋಡಿದರು—ಎನ್ನುವದರ ಮೇಲೆ ಕಾವ್ಯದ ಸಫಲತೆ-ವಿಫಲತೆಗಳು ನಿಲ್ಲುತ್ತವೆ. ಕೆಲವು ಲೇಖಕರ ಸ್ವಲ್ಪ ಪ್ರಯತ್ನಗಳನ್ನು ಬಿಟ್ಟರೆ ನವ್ಯ ಪಂಥದವರು ಬದುಕಿನ ಜಿಗುಪ್ಸೆ ವಿಕೃತಿ, ಮೌಲ್ಯಗಳ ತಲೆಕೆಳಕಾಗುವಿಕೆ ಮುಂತಾದುವುಗಳನ್ನು ತಮ್ಮದೇ ಆದ ತೀವ್ರ ಸಂವೇದನೆಯಲ್ಲೇ ನೋಡಿಕೊಂಡರೇ ಹೊರತು ಸಾಮಾಜಿಕ ಹಿನ್ನೆಲೆಯಲ್ಲಿಟ್ಟು ಅಲ್ಲ. ಹೀಗಾಗಿ ಕಾವ್ಯ ಒಳಮುಖ ಮಾಡಿಕೊಂಡಿತು. ಜಡ್ಡುಬಿದ್ದ ಈ ಸಮಾಜದೊಳಗೆ ತಾನೆಷ್ಟು ವಿಕೃತಿಗೊಂಡಿದ್ದೇನೆ; ಅನಾಥನಾಗಿದ್ದೇನೆ—ಎನ್ನುವ ಕೊರಗಿನ ನಿರಾಶೆಯ ವಿವರಗಳನ್ನು ಭಾಷೆಯೊಳಗೆ ಸಂಕೀರ್ಣವಾಗಿ ಹಿಡಿಯುತ್ತ ಹೋದರು. ಇದು ಅನೇಕ ಪ್ರತಿಗಾಮಿ ಧೋರಣೆಗಳಿಗೂ ಅವಕಾಶ ಮಾಡಿಕೊಟ್ಟಿತಲ್ಲದೆ, ಅಭಿವ್ಯಕ್ತಿಯೂ ಕೂಡ ಅನೇಕ ಕಡೆಗಳಲ್ಲಿ ತನ್ನೊಳಗಿನ ವಿವರಗಳನ್ನು ಸರಿಯಾಗಿ ಬಿಟ್ಟುಕೊಡದೆ ವ್ಯಕ್ತಿಗತವಾಗುತ್ತ ಹೋಯಿತು. ಇದು ನವ್ಯಕಾವ್ಯಕ್ಕೆ ಸಾಧಾರಣವಾಗಿ ಅನ್ವಯಿಸುವ ದೊಡ್ಡ ಮಿತಿ. ಪ್ರಗತಿಶೀಲ ಕಾವ್ಯಮಾರ್ಗಕ್ಕೆ ಅನ್ವಯಿಸಬಹುದಾದ ಆರೋಪವನ್ನೇ ಇನ್ನೊಂದು ಅರ್ಥದಲ್ಲಿ ಇವರಿಗೂ ಅನ್ವಯಿಸಬಹುದು. ಮುಂದಿನ ಕವಿಗಳ ಮೇಲೆ ಇದು ಮಾಡಿದ ಪರಿಣಾಮವೂ ಕೂಡ ಇದನ್ನೇ ಸ್ಪಷ್ಟಪಡಿಸುತ್ತದೆ.

೨. ನವ್ಯಪಂಥದವರ ವಿಡಂಬನೆಯ ಬಗ್ಗೆ ಇವರ ಎರಡನೆಯ ಅಭಿಪ್ರಾಯ ಸೂಕ್ತವಾದದ್ದೇ. ಯಾವುದೇ ಕೃತಿ ಆ ಕಾಲದ ಅವಶ್ಯಕತೆಗಾಗಿ ಹುಟ್ಟುತ್ತದೆ. ಮತ್ತು ಈ ಕೃತಿ ಕಾವ್ಯ ಬೆಳವಣಿಗೆಯ ಯಾವುದೋ ಘಟ್ಟದ ಫಲಿತಾಂಶವಾಗಿ ಹುಟ್ಟಿದ್ದು ಎನ್ನುವದಂತೂ ಒಪ್ಪಿಕೊಳ್ಳಬೇಕಾದದ್ದು. ಆದ್ದರಿಂದ ನವ್ಯಕವಿಗಳಿಗಿರುವ 'ಸಾಮಾಜಿಕಪ್ರಜ್ಞೆ' ಹಿಂದಿನವರಿಗಿಲ್ಲ ಎನ್ನುವ ಮಾತುಗಳು ವಿಡಂಬನೆಗಳು, ಆರೋಪಣೆಗಳಷ್ಟೇ ಆಗುತ್ತವೆ.

'ಪ್ರೇರಣೆ-ಪರಂಪರೆ-ಪ್ರಯೋಗ' ಲೇಖನದಲ್ಲಿ ನವೋದಯ ಕವಿಗಳಿಗೆ 'ಸಾಮಾಜಿಕ ಪ್ರಜ್ಞೆ' ಯಾಕೆ ಇರಲಿಲ್ಲ ಎನ್ನುವದನ್ನು ಗುರುತಿಸುತ್ತ ಜಿ.ಎಸ್.ಎಸ್ 'ಇಂದಿನ ಕವಿಗಳ ಹಾಗೆ, ಅಂದಿನ ರಾಜಕೀಯವನ್ನಾಗಲೀ, ದೇಶದ ಸ್ಥಿತಿಯನ್ನಾಗಲಿ, ಆಡಳಿತ ಮೂಲವಾದ ಸಾಮಾಜಿಕ ಅವ್ಯವಸ್ಥೆಯನ್ನಾಗಲಿ, ಟೀಕಿಸಿದ್ದರೆ, ಅದು ರಾಜದ್ರೋಹವೇ ಆಗುತ್ತಿತ್ತು ಎಂಬುದನ್ನು ನೆನೆಯಬೇಕು'—ಎನ್ನುವ ಮಾತು ಆ ಪಂಥವನ್ನು ಸಮರ್ಥಿಸುವ ರೀತಿಯದ್ದಾಗುತ್ತದೆಯೇ ಹೊರತು ಆ ಕಾವ್ಯ ಪರಂಪರೆಯ ಹುಟ್ಟಿನ ನಿಜವಾದ ಅವಶ್ಯಕತೆಯನ್ನು ಗಮನಿಸಿದಂತಾಗಲಿಲ್ಲ. ಇಂಗ್ಲಿಷ್ ರೊಮ್ಯಾಂಟಿಕ್ ಕಾವ್ಯ ನವೋ

ದಯಕಾವ್ಯದ ಧೋರಣೆಯ ಮೇಲೆ ಮಾಡಿದ ಪ್ರಭಾವ ಗಮನಾರ್ಹ. ನಿಸರ್ಗ ಪ್ರಿಯತೆ-ಸೌಂದರ್ಯಪ್ರಿಯತೆ, ಆದರ್ಶಮುಖತೆ, ತಾತ್ವಿಕತೆ—ಒಂದು ಕಡೆ : ಅರವಿಂದ, ವಿವೇಕಾನಂದ ಮೊದಲಾದವರ ಹಿಂದೂ ಧರ್ಮದ ಶ್ರೇಷ್ಠತೆಯ ಬಗೆಗಿನ ವಿಚಾರಗಳು ಇನ್ನೊಂದು ಕಡೆ ಆ ಕವಿಗಳ ಮೇಲೆ ಪರಿಣಾಮ ಮಾಡಿದವು. ಸ್ಫೂರ್ತಿ ಇವರ ಕಾವ್ಯದ ಪ್ರೇರಣೆಯಾಯಿತು. ವಿದ್ಯಾವಂತ ವರ್ಗದ ಮೇಲೆ ಉಂಟಾದ ಈ ಪ್ರಭಾವ ಸಾಮಾಜಿಕ ಕಾರಣಗಳನ್ನೂ ಕೂಡ ಒಳಗೊಂಡಿರುವಂಥದ್ದು.

'ಇಂದಿನ ಕವಿತೆ'—ನವ್ಯಕಾವ್ಯದ ಗತಿಯನ್ನು ಕುರಿತ ಅದರ ಇತ್ತೀಚಿನ ಘಟ್ಟದ ಒಂದು ಸಂಕ್ಷಿಪ್ತ ಪರಿಶೀಲನೆ. ನವ್ಯಕಾವ್ಯದ ಸ್ಥಾವರ ಸ್ಥಿತಿಯನ್ನು ಅದರ, ಸಿದ್ಧ ರೂಪದ ಏಕತಾನತೆ, ಅನುಕರಣೆ ಮುಂತಾದ ವಿವರಗಳಿಂದ ಗುರುತಿಸಿ—ಇಲ್ಲಿಯೇ ಭಾವಗೀತಾಪ್ರಕಾರ ವಿರಳವಾಗುತ್ತಿರುವುದನ್ನು ಹೇಳುತ್ತ 'ಗೇಯಾತ್ಮಕವಾದ, ಭಾವ ಗೀತಾಪ್ರಕಾರದ ರಚನೆಯ ಪದ್ಯಬಂಧಗಳ ಪ್ರಯೋಗದ ಅಗತ್ಯ'ವನ್ನು ಕುರಿತ ಅವರ ಮಾತು ಮೂಲದೊಳಗೆ ನವೋದಯ ಧೋರಣೆಯನ್ನು ಒಳಗೊಂಡಿರುವಂಥದ್ದು ಅಷ್ಟೆ.

## ಕವಿ-ಸಹೃದಯ

ಈ ಲೇಖನದಲ್ಲಿ ಸಹೃದಯನನ್ನು ಕುರಿತ ನವೋದಯ ಕಾವ್ಯಮೀಮಾಂಸೆಯ ಧೋರಣೆಗಳು ಕಂಡುಬರುತ್ತವೆ. ಭಾರತೀಯ ಕಾವ್ಯಮೀಮಾಂಸೆಯ ಕವಿ-ಸಹೃದಯರ ಸಂಬಂಧಕ್ಕಿಂತ ಇಲ್ಲಿಯದು ಬೇರೆ ರೀತಿಯದ್ದು.

'ಭಾರತೀಯ ಕಾವ್ಯಮೀಮಾಂಸೆಯಂತೂ ಸಹೃದಯಾನುಭವವನ್ನೇ ಪ್ರಧಾನ ಗಮನದಲ್ಲಿರಿಸಿಕೊಂಡು ನಡೆದ ವಿವೇಚನೆ. ಭಾರತೀಯ ರಸತತ್ವದ ವ್ಯಾಖ್ಯಾನವೆಲ್ಲ ಕವಿಯ ಕೃತಿಯನ್ನು ಸಹೃದಯ ಹೇಗೆ ಸಂಪೂರ್ಣಗೊಳಿಸುತ್ತಾನೆ ಎನ್ನುವದು....ಇವರ ಪ್ರಕಾರ ಕಾವ್ಯಕ್ರಿಯೆ ಸಂಪೂರ್ಣಗೊಳ್ಳುವದು ಸಾರ್ಥಕವಾಗುವದು—ಸಹೃದಯನು ತಾನು ರಸಾನುಭವವನ್ನು ಹೊಂದಿದ ಮೇಲೆಯೇ. ಸಹೃದಯನ ಈ ಅನುಭವದಿಂದಲೇ ಕಾವ್ಯದಲ್ಲಿಯ ಇದ್ದಿರಬಹುದಾದ ರಸಗಳೂ ವಾಸ್ತವವಾಗುತ್ತವೆ.

ಈ ಮೀಮಾಂಸೆ ಕವಿಯ ಸೃಜನಶೀಲ ಕ್ರಿಯೆಯ ಕಡೆಗೆ ಗಮನವನ್ನು ಕೊಡುವದೇ ಇಲ್ಲವೆನ್ನುವದನ್ನು ಗಮನಿಸಬೇಕು. ಆದರೆ ನವೋದಯ ಕಾವ್ಯಮೀಮಾಂಸೆ ಕವಿಯ ಸೃಜನಕ್ರಿಯೆಯ ಬಗ್ಗೆ ಒತ್ತು ಕೊಡುತ್ತದೆ. ಲೇಖನದ "ಕವಿ ಏಕೆ ಬರೆಯುತ್ತಾನೆ ಎನ್ನುವದರ ಮೊದಲ ಕಾರಣ, ಆತ ತಾನು ಬರೆಯಲೇಬೇಕಾಗುವಂಥ ಒತ್ತಡಕ್ಕೆ ಸಿಲುಕುತ್ತಾನೆ ಎನ್ನುವುದು. ಆತ ಹಾಗೆ ಬರೆಯದಿದ್ದರೆ, ಸುಮ್ಮನೆ ಇರಲು ಸಾಧ್ಯವೇ ಇಲ್ಲ. ಕವಿಗೆ ಒದಗುವ ಈ ಅನುಭವ ಅಭಿವ್ಯಕ್ತಿಯೊಂದರಲ್ಲಿ ಮೈದೋರುವದರ ಮೂಲಕ ಕವಿಹೃದಯಕ್ಕೆ ಬಿಡುಗಡೆ ಉಲ್ಲಾಸವನ್ನೂ, ತನ್ನನ್ನು ತಾನು ಕಂಡುಕೊಂಡ ಸಂತೃಪ್ತಿಯನ್ನೂ ತಂದುಕೊಡುತ್ತದೆ. ಈ ಆನಂದವೇ ಕವಿಕೃತಿ ನಿರ್ಮಾಣಕ್ಕೆ ಮೊದಲ ಕಾರಣ" ಈ ಮಾತುಗಳು ಮೇಲಿನ ಹೇಳಿಕೆಯನ್ನು ಸಮರ್ಥಿಸುತ್ತವೆ.

ಕವಿಗೆ ಈ ಅನುಭವ ಕೊಟ್ಟ ಸಂತೋಷವನ್ನು ಸಹೃದಯರಿಗೂ ಕೊಡಬೇಕು 'ತನ್ನ ಅನುಭವ ಸಹೃದಯರ ಮೇಲೆ ಪರಿಣಾಮ ಮಾಡಿಯೇ ತೀರುತ್ತದೆ' ಎನ್ನುವ ಸಹೃದಯ ಕಲ್ಪನೆಯೂ ಇದೆ. ಈ ಲೇಖನದಲ್ಲೇ ಕೊಟ್ಟ ಬೇಂದ್ರೆಯವರ 'ಎನ್ನ ಪಾಡೆನಗಿರಲಿ. ಅದರ ಹಾಡನಷ್ಟೇ ನೀಡುವೆನು ರಸಿಕ ನಿನಗೆ, ಕಲ್ಲುಸಕ್ಕರೆಯಂಥ ನಿನ್ನೆದೆಯು ಕರಗಿದರೆ, ಆ ಸವಿಯು ಹಣಿಸು ನನಗೆ'—ಎನ್ನುವ ಸಾಲು ಕವಿ ಸಹೃದಯರ ಈ ಬಗೆಯ ಸಂಬಂಧವನ್ನು ಕುರಿತ ಹಾಗೆ ನವೋದಯ ಕಾವ್ಯಮೀಮಾಂಸೆಯ ವಿಚಾರವನ್ನು ಹೇಳುತ್ತದೆ.

ಕಾವ್ಯಮೀಮಾಂಸೆ, ರಸಾಸ್ವಾದವನ್ನು ಸಹೃದಯನ ಆಸ್ವಾದನೆಯ ಉದ್ದೇಶವಾಗಿ ಹೇಳಿದರೆ, ಕಾವ್ಯಗಳು ಸಹೃದಯನನ್ನು ಬೇರೆ ಉದ್ದೇಶಗಳಿಗಾಗಿಯೂ ಗಮನಿಸಿದವು. ಆಸ್ಥಾನಪಂಡಿತರು ಸಹೃದಯರಿಗಾಗಿ ಮೆಚ್ಚುವಂತಹ ಲಕ್ಷಣಗಳನ್ನೊಳಗೊಂಡ ಕಾವ್ಯಗಳು ಬಂದವು. ನೀತಿ, ಧರ್ಮತತ್ವ ಉದ್ದೇಶ ಮಾಡಿಕೊಂಡ ಕಾವ್ಯಗಳೂ ಕೂಡ ಜೈನ, ವೀರಶೈವ, ವೈದಿಕ ಕವಿಗಳಿಂದ ಬಂದವು.

ಸಹೃದಯ ಇಂದು ಕಾವ್ಯದಿಂದ ಪಡೆಯಬೇಕೆನ್ನುವ ಉದ್ದೇಶ್ಯ ನವೋದಯದ ಉದ್ದೇಶ್ಯಕ್ಕಿಂತ ಭಿನ್ನ.

## ಸಮಕಾಲೀನ ಪ್ರಜ್ಞೆ

ಒಬ್ಬ ಕವಿಯ "ಸಮಕಾಲೀನ ಪ್ರಜ್ಞೆ"ಯನ್ನು ಅವನು ತನ್ನ ಸಮಾಜದ ಗತಿಯನ್ನು, ಧೋರಣೆಗಳನ್ನು ತನ್ನ ಕಾವ್ಯದಲ್ಲಿ ಎಷ್ಟರಮಟ್ಟಿಗೆ, ಹೇಗೆ ಪ್ರಕಟಿಸಿದ್ದಾನೆ ಎನ್ನುವುದರ ಮೇಲೆ ಗುರುತಿಸುತ್ತೇವೆ.

ಸಮಕಾಲೀನ ಪ್ರಜ್ಞೆಯನ್ನು ಕುರಿತ ಹಾಗೆ ಈ ಲೇಖನದಲ್ಲಿ ವ್ಯಕ್ತವಾದ ಕೆಲವು ವಿಚಾರಗಳನ್ನು ಇಲ್ಲಿ ಪರಿಶೀಲಿಸಲಾಗಿದೆ :

'ಒಬ್ಬ ಕವಿಯ ಸಮಕಾಲೀನತೆಯನ್ನು ನಾವು ಗುರುತಿಸುವಾಗ ಅವನ ಬದುಕಿನ ಕೇಂದ್ರದ ಸುತ್ತ ಇರುವ ಅಂದಿನ ಶತಮಾನವೆ ನಮಗೆ ಪರಿಧಿ'....'ಪ್ರತಿಯೊಂದು ಶತಮಾನಕ್ಕೂ ತನ್ನದೇ ಆದ ಗುರುತಿಸಬಹುದಾದ ಕೆಲವು ವೈಲಕ್ಷಣ್ಯಗಳಿವೆ. ಒಂದೊಂದು ಶತಮಾನವೂ ತನಗಿಂತ ಹಿಂದಿನ ಶತಮಾನಗಳಿಂದ ಭಿನ್ನವಾದ ಪರಿಸರವನ್ನು ಹೊಂದುವುದು ಪ್ರಗತಿಯನ್ನೋ ಬದಲಾವಣೆಯನ್ನೊ ಸೂಚಿಸುತ್ತದೆ' ಎನ್ನುವ ಅಭಿಪ್ರಾಯವನ್ನು ಲೇಖಕರು ವ್ಯಕ್ತಪಡಿಸುತ್ತಾರೆ. ಇವರ ಅಭಿಪ್ರಾಯದ ಪ್ರಕಾರ ಸಾಹಿತಿ ತನ್ನ ಕಾಲದ ಮೌಲ್ಯಗಳನ್ನು ಹೇಳುತ್ತಾನೆ ಅಂದರೆ, ಒಂದು ಶತಮಾನದ ಮೌಲ್ಯಗಳನ್ನು ಪರಿಗಣಿಸಬೇಕು. ಆದರೆ ಒಂದು ಶತಮಾನ ಒಂದೇ ಬಗೆಯ ಸಮಾಜವನ್ನು ಕಂಡಿರುತ್ತೆ ಎನ್ನಲು ಸಾಧ್ಯವಿಲ್ಲ. ಸಮಾಜ ಚಲಿಸುತ್ತ, ಬದಲಾಗುತ್ತ ಹೋಗುವದರಿಂದ ಸಾಹಿತಿ, ಹಾಗೂ ಸಮಾಜದ ಸಂಬಂಧ ಸೂಕ್ಷ್ಮವಾಗುತ್ತ ಹೋಗುತ್ತದೆ ಎನ್ನುವದನ್ನು ಲೇಖಕರೂ ಒಪ್ಪುವದರಿಂದ, ಸಮಕಾಲೀನ ಪ್ರಜ್ಞೆಯನ್ನು ಗುರುತಿಸಲು

ಶತಮಾನದ ಮೌಲ್ಯಗಳ ಮಾನದಂಡ ಹೇಳಿದಾಗ ಸಮಸ್ಯೆಯನ್ನು ಸರಳವಾದ ನೆಲೆಯಲ್ಲಿ ಇಟ್ಟು ನೋಡುವ ಅಪಾಯ ಇರುತ್ತದೆ. ಸಮಾಜ ಮತ್ತು ಲೇಖಕನ ಈ ಜೀವಂತ ಸಂಬಂಧದಿಂದ ಲೇಖಕನ ಬಗೆಯಲ್ಲೇ ವಿರೋಧಗಳಾಗುವದು ಸಹಜ. ಆದರೆ ಇದು ಕಾಲದ ಬದಲಾವಣೆಯೊಳಗೇ ಆದ ವಿರೋಧ.

ಸಮಕಾಲೀನ ಪ್ರಜ್ಞೆಯನ್ನು ವ್ಯಕ್ತಪಡಿಸಲು ವಸ್ತು ಸಮಕಾಲೀನವಾಗಬೇಕೆ? ಎನ್ನುವ ಚರ್ಚೆಯೂ ಇಲ್ಲಿ ನಡೆದಿದೆ. 'ವಸ್ತುವಿನ ಆಧಾರದ ಮೇಲಿನಿಂದಲೇ ಕವಿಯಲ್ಲಿ ಸಮಕಾಲೀನತೆ ಪ್ರಕಟವಾಗಿದೆಯೇ ಎಂದು ಪರಿಶೀಲಿಸುವುದು ಸರಿಯಲ್ಲ. ಕೇವಲ ವಸ್ತುವೈವಿಧ್ಯ ಏನನ್ನೂ ಸೂಚಿಸುವುದಿಲ್ಲ. ವಸ್ತು ಯಾವ ಕವಿಗೂ ಬರೀ ಒಂದು ನಿಮಿತ್ತಮಾತ್ರ. ಕವಿ ತಾನು ಆರಿಸಿಕೊಂಡ ವಸ್ತುವಿನ ಮೂಲಕ ಪ್ರಕಟಪಡಿಸಿರುವ ಅವನ ಅನುಭವ ಶ್ರೀಮಂತಿಕೆ ಮತ್ತು ಅಭಿವ್ಯಕ್ತವಾಗಿರುವ ರೀತಿ ಇವುಗಳಲ್ಲಿ ನಾವು ಅಂದಿನ ಜನಮನೋಧರ್ಮ ಅಥವಾ ಸಮಕಾಲೀನತೆ ವ್ಯಕ್ತವಾಗಿದೆಯೋ ಇಲ್ಲವೋ ನೋಡಬೇಕು' ಎನ್ನುವ ನಿಲುವು ಸರಿಯಾದುದಾದರೂ, ವಸ್ತುನಿಷ್ಠವಾಗಿಯೇ ಬರಿಯಬೇಕಾದ ಕಾಲದಲ್ಲಿ ಒಂದು ಸಮಸ್ಯೆಯೂ ಕೂಡ, ಆಗುತ್ತದೆ. ಇಂಥ ಕಡೆಯಲ್ಲಿ ವಾಸ್ತವತೆಯನ್ನು ಎದುರಿಸುವ ಬದಲು ಅದರ ಸ್ವರೂಪವನ್ನು ಮಾತ್ರ ಗ್ರಹಿಸುತ್ತ ಹೋಗುತ್ತಾನೆ ಎನ್ನುವ ಆಪಾದನೆಯನ್ನೂ ಕೂಡ ಮಾಡಬಹುದು.

ಭಾಷೆ ಮತ್ತು ಶೈಲಿಯ ವಿಚಾರವನ್ನೂ ಕೂಡ ಸಮಕಾಲೀನ ಪ್ರಜ್ಞೆಗೆ ಖಚಿತವಾದ ಮಾನದಂಡಗಳಾಗಿ ತೆಗೆದುಕೊಳ್ಳಲು ಸಾಧ್ಯವಿಲ್ಲ. ಶೈಲಿ ಹೆಚ್ಚು ವ್ಯಕ್ತಿಗತವಾದದ್ದು, ಆದರ ಮೇಲೆ ಕಾಲದ ಪ್ರಭಾವವನ್ನು ಗುರುತಿಸುವದು ಕಷ್ಟ.

'ಕವಿ ನಿತ್ಯವರ್ತಮಾನಕ್ಕೆ ಸಲ್ಲಬೇಕಾದರೆ ಅವನು ತನ್ನ ಸಮಕಾಲೀನತೆಯನ್ನು ಎಷ್ಟರಮಟ್ಟಿಗೆ ಸಮಕಾಲೀನವನ್ನಾಗಿಸುವ ಸಾಮರ್ಥ್ಯವನ್ನು ಪಡೆದಿದ್ದಾನೆ ಎನ್ನುವುದು ಮುಖ್ಯವಾದದ್ದು' ಎನ್ನುವ ನಿಲುವು ಕೂಡ ಕೆಲವು ವೇಳೆ ಅಪಾಯಕಾರಿಯಾದದ್ದು. ಏಕೆಂದರೆ ಲೇಖಕ ಅನಂತಕಾಲದ ಸಮಸ್ಯೆಗಳನ್ನು ಗುರುತಿಸುತ್ತ ಪ್ರಸ್ತುತ ಸಮಸ್ಯೆಯಿಂದ ದೂರವಾಗುತ್ತ ಹೋಗುತ್ತಾನೆ. ಗಿರೀಶರ ನಾಟಕಗಳ ಸಮಸ್ಯೆ ಅಪೂರ್ಣತೆಯ ಸಮಸ್ಯೆ. 'ತುಘಲಕ್'ನಲ್ಲಿ ತನ್ನ ಕಾಲದ ಸಮಸ್ಯೆಯೊಳಗೆ ಈ ಸಾರ್ವಕಾಲಿಕ ಸಿದ್ಧಾಂತವನ್ನು ಗುರುತಿಸುತ್ತ ಅವರು ಸಮಕಾಲೀನ ಸಮಸ್ಯೆಯಿಂದ ದೂರವಾಗುವುದನ್ನು ಗಮನಿಸಬಹುದು.

## ಸಾಹಿತ್ಯದಲ್ಲಿ ಪ್ರಾಮಾಣಿಕತೆ

'ಸಾಹಿತ್ಯದಲ್ಲಿ ಪ್ರಾಮಾಣಿಕತೆ' ಎನ್ನುವ ಮಾತು ನವ್ಯ ವಿಮರ್ಶಕರಿಂದ, ನವೋದಯ ಕಾವ್ಯ ವಿಮರ್ಶೆಯ ಮಾತುಗಳಲ್ಲಿ ಪ್ರಚಾರಕ್ಕೆ ಬಂದ ಪದ. ಸಾಹಿತ್ಯದ ಪ್ರಾಮಾಣಿಕತೆ—ಜೀವನದಲ್ಲಿಯ ಪ್ರಾಮಾಣಿಕತೆಗಿಂತ ಭಿನ್ನವಾದ ಅರ್ಥವುಳ್ಳದ್ದು.

ಬೇರೆಯವರ ಅನುಭವವನ್ನು ಸ್ವೀಕರಿಸುವುದು, ಸಾಂಪ್ರದಾಯಿಕ ಸಿದ್ಧರೂಪಗಳ

ಮೊರೆ ಹೋಗುವದು—ಮುಂತಾದ ಅಪ್ರಾಮಾಣಿಕತೆಯಂತೆ ತೋರುವ ಕೆಲವು ರೀತಿಗಳನ್ನು ವಿಚಾರಮಾಡಿ ಪ್ರತಿಭೆಯ ಅಸಾಮರ್ಥ್ಯ ಇಂಥ ಕಡೆ ಹೇಗೆ ಅಪ್ರಾಮಾಣಿಕತೆ ಎನಿಸಿಕೊಳ್ಳುವುದಕ್ಕೆ ಕಾರಣವಾಗುತ್ತದೆ ಎನ್ನುವದನ್ನು ಲೇಖಕರು ವಿವರಿಸುತ್ತಾರೆ.

ಅನುಭವವಾಗಲೀ, ಜೀವನದೃಷ್ಟಿಯಾಗಲೀ ಪ್ರಾಮಾಣಿಕತೆ ಇಲ್ಲದಿದ್ದರೂ ಕವಿ ಪ್ರತಿಭಾವಂತನಾದರೆ ಹೊಸ ಹೊಸ ಅರ್ಥ ಹೊಳೆಯಿಸಬಲ್ಲ; ತನ್ನ ಸಂವೇದನೆಯೊಳಗೆ ತರಬಲ್ಲ. ಆದರೆ ಕೆಲವು ವೇಳೆ ಜೀವನದಲ್ಲಿ ಆಳವಾದ ಪ್ರಜ್ಞೆ ಇಲ್ಲವೆ ಸ್ವಂತ ಸಂವೇದನೆಯಿಂದ ನೋಡುವ ಕವಿ, ವಸ್ತು ಸತ್ಯವನ್ನು ತನ್ನ ಮಿತಿಯಲ್ಲೇ ಗ್ರಹಿಸುವ ಸಾಧ್ಯತೆ ಇದೆ.

## ಕಾವ್ಯಮೀಮಾಂಸೆ (ಕಳೆದ ೨೫ ವರ್ಷಗಳಲ್ಲಿ)

ಇದು ೧೯೬೯ರಲ್ಲಿ ಬರೆದ ಲೇಖನ. ಹಿಂದಿನ ೨೫ ವರ್ಷಗಳಲ್ಲಿ ಕಾವ್ಯಮೀಮಾಂಸೆಯ ಗ್ರಂಥಗಳು, ಲೇಖನಗಳು, ಅನುವಾದಗಳು—ಇವುಗಳ ಪರಿಶೀಲನೆ ಇಲ್ಲಿನ ಉದ್ದೇಶ್ಯ.

ಸಂಸ್ಕೃತ ಗ್ರಂಥಗಳ ಅನುವಾದ; ಹಾಗೂ ಸಂಸ್ಕೃತ ಕಾವ್ಯಮೀಮಾಂಸೆಯ ವಿಷಯಗಳನ್ನು ಕನ್ನಡದಲ್ಲಿ ಅಡಕಗೊಳಿಸಿದ ಪುಸ್ತಕಗಳನ್ನು ಮೊದಲು ಸಮೀಕ್ಷಿಸಿದ್ದಾರೆ. ಕೆ. ಕೃಷ್ಣಮೂರ್ತಿಯವರ ಅನುವಾದ ಗ್ರಂಥಗಳು, ಕೌಜಲಗೀ ಶೇಷಾಚಾರ್ಯ, ಕೆ. ವಿ. ಸುಬ್ಬಣ್ಣ ಮೊದಲಾದವರ ಅನುವಾದ ಕೃತಿಗಳನ್ನೂ ಬಿ. ಕೆ. ಶಿವರಾಮಯ್ಯನವರ 'ಅಲಂಕಾರಶಾಸ್ತ್ರ'ವೆಂಬ ಚಿಕ್ಕ ಪುಸ್ತಕದ—ವಿವರ ವೈಶಿಷ್ಟ್ಯಗಳನ್ನೂ ಗುರುತಿಸಿದ್ದಾರೆ.

ಕನ್ನಡದಲ್ಲಿ ಬಂದ ಕಾವ್ಯಮೀಮಾಂಸೆಯ ಗ್ರಂಥಗಳು, ಲೇಖನಗಳನ್ನು ಕುರಿತ ಸಮೀಕ್ಷೆಯಲ್ಲಿ ಡಿ.ವಿ.ಜಿ, ಕೃಷ್ಣಮೂರ್ತಿ, ಕುವೆಂಪು, ಪು.ತಿ.ನ, ಗೋಕಾಕ್, ವಿಸೀ, ಮುಗಳಿ ಮೊದಲಾದವರ ಕಾವ್ಯಮೀಮಾಂಸೆಯ ಧೋರಣೆಗಳ ಪರಿಚಯ, ವೈಶಿಷ್ಟ್ಯತೆಗಳನ್ನು ಗುರುತಿಸಿದ್ದಾರೆ.

ಗೋಕಾಕರನ್ನೊಬ್ಬರನ್ನು ಬಿಟ್ಟರೆ ಉಳಿದವರೆಲ್ಲರೂ ಸಾಮಾನ್ಯವಾಗಿ ನವೋದಯ ಕಾವ್ಯಮೀಮಾಂಸೆಯ ಧೋರಣೆಯನ್ನೇ ಬೇರೆ ಬೇರೆ ಮಾತುಗಳಲ್ಲಿ ಹೇಳುತ್ತಾರೆ. ಗೋಕಾಕರ ಕಾವ್ಯಮೀಮಾಂಸೆಯ 'ನನಮಾನವತಾವಾದ'ದ ವಿಚಾರಗಳನ್ನು ಗುರುತಿಸುತ್ತ, ಇನ್ನೊಂದು ಕಡೆ 'ಆನಂದವೇ ಕಾವ್ಯದ ಗುರಿ' ಎನ್ನುವ ಮಾತನ್ನೂ ಇವರೇ ಹೇಳುವದನ್ನು ಗಮನಿಸಿದ್ದಾರೆ. ಇವರ ಕಾವ್ಯಮೀಮಾಂಸೆಯ ಮಾತುಗಳಿಗೆ ಒಂದು ನಿಲುವು ಇಲ್ಲ ಎನ್ನುವ ಅಭಿಪ್ರಾಯವನ್ನು 'ಗೋಕಾಕರ ಕಾವ್ಯಮೀಮಾಂಸೆಯಲ್ಲಿ ಒಂದು ಬಗೆಯ ಸಂಕೀರ್ಣತೆಯಿದೆ. ವಿಷಯ ನಿರೂಪಣೆಯಲ್ಲಿ ವಿಷಯಾಂತರದಿಂದ ವಿಸ್ತಾರದಿಂದ ಪ್ರಸ್ತುತ ವಸ್ತು ಕೇಂದ್ರವೇ ಒಮ್ಮೊಮ್ಮೆ ಕಾಣದಾಗುತ್ತದೆ' ಎನ್ನುವ ಮಾತಿನಲ್ಲಿ ಹೇಳುತ್ತಾರೆ.

ಸೌಂದರ್ಯ ಸಮೀಕ್ಷೆ, ಕನ್ನಡದಲ್ಲಿ ಭಾವಗೀತೆ, ಸಾಹಿತ್ಯದಲ್ಲಿ ಪ್ರತೀಕ—ಈ ಗ್ರಂಥಗಳ ವೈಶಿಷ್ಟ್ಯ ಹಾಗೂ ವಿಮರ್ಶೆಯನ್ನು ಸ್ಥೂಲವಾಗಿ ಮಾಡಿದ್ದಾರೆ.

ಇಂಗ್ಲಿಷ್, ಗ್ರೀಕ್, ಬಂಗಾಳಿ, ಮರಾಠಿ, ಹಿಂದಿ—ಭಾಷೆಗಳಿಂದ ಅನುವಾದಗೊಂಡ ಕೃತಿಗಳು ಮತ್ತು ಲೇಖನಗಳನ್ನು ಅವುಗಳ ವಿವರ, ಶೈಲಿ ಮತ್ತು ಭಾಷೆಯ ದೃಷ್ಟಿಯಿಂದ ಗಮನಿಸಿದ್ದಾರೆ.

ನವ್ಯ ಕಾವ್ಯಮೀಮಾಂಸೆಯು ಹೇಳುವ ವಸ್ತು, ಭಾಷೆಯಲ್ಲಿನ ವೈಶಿಷ್ಟ್ಯಗಳನ್ನು ಗುರುತಿಸುತ್ತ ಪಾಶ್ಚಾತ್ಯರ ಈಲಿಯಟ್, ಈಟ್ಸ್, ಎಜ್ರಾಪೌಂಡನ ಮಾತುಗಳಿಗೆ ಇವು ಹೇಗೆ ಸಂವಾದಿಯಾಗುತ್ತವೆ ಎಂದು ಗುರುತಿಸಿದ್ದಾರೆ.

ಕೊನೆಯಲ್ಲಿ ಕನ್ನಡ ಕಾವ್ಯಮೀಮಾಂಸೆಯ ಬೆಳವಣಿಗೆ, ಹಾಗೂ ವೈಶಿಷ್ಟ್ಯಗಳ ವಿವರಗಳನ್ನು ಕೊಡುತ್ತಾರೆ.

## ಶ್ರೀರಂಗ

# ವಿಮರ್ಶೆಯ ವಿಮರ್ಶೆ

ಡಾ|| ಜಿ. ಎಸ್. ಶಿವರುದ್ರಪ್ಪನವರ ಪರಿಚಯ ನನಗೆ ಸಾಕಷ್ಟಿದೆ. ದೀರ್ಘವಾದುದಿಲ್ಲ. ನಾಲ್ಕೈದು ವರ್ಷಗಳಿಗೆ ಮುಂಚಿತ ಒಂದು ಸಂದರ್ಭದಲ್ಲಿ ಇಬ್ಬರು ಗೆಳೆಯರು ಒಬ್ಬರು ಆತ್ಮೀಯ, ಇನ್ನೊಬ್ಬರು ಔಪಚಾರಿಕ—ಬೇರೆ ಬೇರೆಯಾಗಿಯಾದರೂ ಒಂದೇ ಆಶಯದ ಮಾತನ್ನು ಹೇಳಿದರು : 'ನಿಮಗೆ ಬುದ್ಧಿವಂತ ಮತ್ತು ಪ್ರಾಮಾಣಿಕ ವಿಮರ್ಶೆ ಬೇಕಿದ್ದರೆ ಡಾ|| ಶಿವರುದ್ರಪ್ಪನವರಿಗೆ ಒಪ್ಪಿಸಿರಿ' ಎಂದು. ಯಾರು ಈ ಡಾಕ್ಟರರು? ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕನ್ನಡದ ಅಧ್ಯಾಪಕರು ಎಂದರು. 'ಸರಿ' ಎಂದೆ. ಆದರೆ ನನ್ನ ಮಾತಿನಲ್ಲಿ ಉತ್ಸಾಹದ ದನಿ ಇರಲಿಲ್ಲ.

ಈ ಅನುತ್ಸಾಹಕ್ಕೆ ಒಂದು ದೀರ್ಘಾವಧಿಯ ಕಾರಣವಿದ್ದೀತು. ಕನ್ನಡದ ಅಧ್ಯಾಪಕರೆಂದರೆ ಕೂಪಮಂಡೂಕರು. ಬೇರೆ ಯಾವ ಸಾಹಿತ್ಯದ ಅಭ್ಯಾಸವಿಲ್ಲ ಮತ್ತು ಜಿಜ್ಞಾಸೆಯೂ ಇಲ್ಲ, ಹೀಗಿದ್ದರೂ 'ಪಂಪ-ರನ್ನರು ವಿಶ್ವಕವಿಗಳು, ಅಂತಹ ಕಾವ್ಯಗಳು ಬೇರೆ ಯಾವ ಸಾಹಿತ್ಯದಲ್ಲಿಯೂ ಇಲ್ಲ' ಎಂದು ಒಂದು ಸಲವೂ ನಿದರ್ಶನಸಮೇತವಾಗಿ ತೋರಿಸದೆ, ತೌಲನಿಕ ದೃಷ್ಟಿ ಇಲ್ಲದೆ ಹೇಳುತ್ತಿದ್ದ ಅನೇಕ ಕನ್ನಡ ಪಂಡಿತರನ್ನು ನನ್ನ ಕಾಲೇಜು ಜೀವನದಲ್ಲಿ ಕಂಡಿದ್ದೆ. ಪ್ರಚಾರ ಭಾಷಣಗಳಲ್ಲಿ ಪಂಪ ರನ್ನರನ್ನು ಓದದ ನಾನೂ ಆ ಮಾತನ್ನು ಹೇಳುತ್ತಿದ್ದೆನಾದರೂ ಸಂಸ್ಕೃತ ಮತ್ತು ಇಂಗ್ಲಿಷ ಸಾಹಿತ್ಯಗಳನ್ನು ಮಾತ್ರ ಓದಿದ ನನಗೆ ಮಿಕ್ಕ ಸಂದರ್ಭಗಳಲ್ಲಿ ಈ ಪಂಡಿತರ ಮಾತು ಒಪ್ಪಿಗೆಯಾಗುತ್ತಿರಲಿಲ್ಲ. (ಕನ್ನಡದ ಬಗ್ಗೆ ಹೆಚ್ಚಾಗಿ ಇಂಗ್ಲಿಷಿನಲ್ಲಿಯೆ ಮಾತನಾಡುತ್ತಿದ್ದುದಕ್ಕಾಗಿಯೊ ಏನೊ—ಆ ಕಾಲದಿಂದ ಪ್ರೊ. ವಿ. ಸೀ.ಯವರೊಬ್ಬರೆ ನನಗೆ ಸ್ನೇಹಿತರೆನ್ನಿಸಿದ ಕನ್ನಡ ಪ್ರಾಧ್ಯಾಪಕರಾಗಿದ್ದರು. ದಿ. ಬಿ.ಎಂ.ಶ್ರೀ. ಅವರ ಪರಿಚಯ ನನಗೆ ಆ ಬಗ್ಗೆ ಸಾಕಷ್ಟಿರಲಿಲ್ಲ). ಅನೇಕ ವರ್ಷಗಳಿಂದ ನನ್ನಲ್ಲಿ ಮೂಡಿ ನಿಂತ ಈ ಪೂರ್ವಗ್ರಹವೆ ಡಾ|| ಜಿ.ಎಸ್.ಎಸ್. ಅವರ ಹೆಸರನ್ನು ಕೇಳಿದಾಗ ಅನುತ್ಸಾಹಕ್ಕೆ ಕಾರಣವಾಗಿರಬೇಕು.

ಅಂತೂ ವೈಯಕ್ತಿಕ ಸಂಪರ್ಕ ಒದಗಿತು. ನನ್ನ ಪೂರ್ವಗ್ರಹ ಸಡಿಲಾಗುವ ಲಕ್ಷಣ ಕಂಡುಬರಲಿಲ್ಲ. ಯಾಕೆಂದರೆ, ನನ್ನ ಅನುಭವದ ಮಟ್ಟಿಗಂತೂ ಡಾಕ್ಟರರು ಕಡಮೆ ಮಾತಿನವರು. ಕೆದರಿ ಕೆದರಿ ಮಾತನಾಡಿಸಿದರೂ ಮಾತಿಗೆ ಸಮರ್ಪಕವೆನ್ನಿಸುವಷ್ಟು ಬಜ್ಞ

ಗಳಲ್ಲಿ ಉತ್ತರ, ಅದೂ ಮೆತ್ತನೆ ದನಿಯಲ್ಲಿ! ನನಗಿಂತ ವಯಸ್ಸಿನಿಂದ ಕಿರಿಯನಾದ ಸಾಹಿತಿಯ ಪರಿಚಯವಾದಲ್ಲಿ ಒಂದು ಅನುಭವ ಅನಿವಾರ್ಯ; ಅದೆಂದರೆ ಕಿರಿಯ ಸಾಹಿತಿಯು ತನ್ನ ಸಾಹಿತ್ಯ ಕೃತಿಯನ್ನು (ಒಮ್ಮೊಮ್ಮೆ—ಗಳನ್ನು) ಹಿರಿಯ ಸಾಹಿತಿಗೆ ಕೊಡುವುದು. ಆಗ ಡಾ|| ಶಿವರುದ್ರಪ್ಪನವರು ತಮ್ಮ 'ವಿಮರ್ಶೆಯ ಪೂರ್ವ ಪಶ್ಚಿಮ' ಎಂಬ ಪುಸ್ತಕವನ್ನು ಕೊಟ್ಟರು. ನನಗೆ ಆಶ್ಚರ್ಯವಾಯಿತು. ಸಾಮಾನ್ಯ ವಾಗಿ ಕವನಗಳನ್ನೊ ನಾಟಕವನ್ನೊ ಕೊಡುವ ವಾಡಿಕೆ—(ಅರಸಿಕನಾದ ನಾನು ಕವನ ಗಳನ್ನು ಓದುವುದು ಕಡಮೆ, ನಾಟಕಕಾರನಾದ್ದರಿಂದ ನನ್ನ ನಾಟಕ ಸಾಹಿತ್ಯವೆ ಸಾಕಷ್ಟು ನನ್ನ ತಲೆ ತುಂಬಿರುವುದು, ಆದ್ದರಿಂದ) ಇವುಗಳನ್ನು ಓದುವ ತೊಂದರೆ ನನಗಿರುವುದಿಲ್ಲ. ಈಗ ಕೈಸೇರಿದುದು ವಿಮರ್ಶೆಯ ಪುಸ್ತಕ. ಅರ್ಥಾತ್, ಪಂಪ-ರನ್ನ ರೆಂಬ ವಿಶ್ವಕವಿಗಳ ವಿಶ್ವಸಾಹಿತ್ಯದ ಬಗ್ಗೆ ಭಾಷಣವಿರಬಹುದು—ಎಂದುಕೊಳ್ಳುತ್ತ, ಪುಟ ತಿರುವುತ್ತ, ಕೊನೆಯವರೆಗೆ ಓದಿದೆ ಎಂದು 'ಸತ್ಯವಾಗಿ' ಹೇಳಲು ಶಕ್ಯವಾಗಲಿ ಎಂದು ಕೊನೆಯ ಪುಟಗಳತ್ತ ದೃಷ್ಟಿ ಹಾಯಿಸಿದೆ. ಆಗ ನನ್ನ ದೃಷ್ಟಿಗೆ ಬಿದ್ದ ಎರಡು ವಾಕ್ಯಪುಂಜಗಳನ್ನು ಇಲ್ಲಿ ಕಾಣಿಸುವೆ:

(೧) 'ನಮ್ಮಲ್ಲಿ ಉತ್ತಮವಾದ ವಿಮರ್ಶೆ ಬೆಳೆಯಬೇಕಾದರೆ, ವಿಮರ್ಶಕರಿಗೆ ಮೊದಲು "ಭಾರತೀಯ ಕಾವ್ಯಮೀಮಾಂಸೆ"ಯ, ಹಾಗೂ ತಮ್ಮ ಸಾಹಿತ್ಯ ಪರಂಪರೆಯ ಪರಿಚಯವಿರಬೇಕು. ಭಾರತೀಯ ಕಾವ್ಯಮೀಮಾಂಸೆಯಲ್ಲಿ ಕಾವ್ಯಚರ್ಚೆಗೆಂದು ಅವರು ಬಳಸಿದ ನೂರಾರು ಪಾರಿಭಾಷಿಕ ಪದಗಳಿವೆ; ಅವುಗಳಲ್ಲಿ ಕೆಲವನ್ನಾದರೂ ಇಂದು ಚಲಾವಣೆಗೆ ತಂದು, ವಿಮರ್ಶೆಯ ಪರಿ ಭಾಷೆಗೆ ಸಹೃದಯರ ಕಿವಿ ಬಳಕೆಯಾಗುವಂತೆ ಮಾಡಲು ಸಾಧ್ಯವಿದೆ.... ಎಲ್ಲದಕ್ಕೂ ನಾವು ಆಂಗ್ಲಸಾಹಿತ್ಯದ ಕಡೆಗೇ ನೋಡಬೇಕಾಗಿಲ್ಲ; ಅಲ್ಲದೆ ಅಲ್ಲಿನ ಸಾಹಿತ್ಯಕ್ಕೆ ಅನುಸಾರವಾಗಿ ಅವರಲ್ಲಿ ಮೂಡಿದ ವಿಮರ್ಶೆಯ ತತ್ತ್ವ ಗಳೇ ನಮ್ಮ ಸಾಹಿತ್ಯವನ್ನೂ ಅಳೆದು ನೋಡುವ ಮೂಲ ಮಾನಗಳಾಗುತ್ತವೆ ಎನ್ನುವ ಭ್ರಮೆಯನ್ನು ಬಿಡಬೇಕು.'

(೨) 'ಸಾಹಿತ್ಯವಿಮರ್ಶೆಯಲ್ಲಿ ಪ್ರಚಾರಕ್ಕಿಂತ ವಿಚಾರಕ್ಕೆ ವಿಶೇಷ ಗಮನಕೊಡ ಬೇಕಾಗುತ್ತದೆ. ಇಂದು ಸಾಹಿತ್ಯವಿಮರ್ಶೆಯಲ್ಲಿ ಬಳಕೆಯಾಗುತ್ತಿರುವ ಎಷ್ಟೋ ಮಾತುಗಳು ಕೇವಲ ರಭಸಮತಿಗಳ ಪ್ರಚಾರದ ಮಾತಾಗಿವೆ.'

ಇವನ್ನೋದಿದ ಮೇಲೆ ಬೆಮಟಿಟ್ಟ ಪೂರ್ವಗ್ರಹ ಜ್ವರದಂತೆ ಇಳಿದುಹೋಯಿತು. ಮನಸ್ಸಿನಲ್ಲಿಯೆ ಅವರಿಗೆ ಕ್ಷಮಾಯಾಚನೆಯನ್ನರ್ಪಿಸಿ ಪುಸ್ತಕವನ್ನು ಮೊದಲಿನಿಂದಲೂ ಕೊನೆಯವರೆಗೆ ಓದಿದೆ.

'ತುಂಬಿದ ಕೊಡ ತುಳುಕುವುದಿಲ್ಲ' ಎಂಬ ಗಾದೆ ಮಾತಿನ ಸತ್ಯತೆ ಆಗ ಹೊಳೆ ಯಿತು. ಡಾ|| ಶಿವರುದ್ರಪ್ಪನವರ ಮಾತು ಕಡಮೆ, ಪಾಂಡಿತ್ಯದಿಂದ ತುಂಬಿದ ಕೊಡ

ಅದು; ದನಿ ಮೆತ್ತಗೆ, ವಿಮರ್ಶಕನು ಅತ್ಯುತ್ತಮನೆನ್ನಿಸಿದಾಗಲೂ ಅವನದು ಕೊನೆಯ ತೀರ್ಪಲ್ಲ, ಆ 'ತೀರ್ಪನ್ನು ಕೊಡುವವರು ಇವರಿಬ್ಬರೇ : ಲೋಕ ಮತ್ತು ಕಾಲ' ಎಂದು ಧೈರ್ಯವಾಗಿ, ಪ್ರಾಮಾಣಿಕವಾಗಿ ಬರೆಯುವ ಸೌಜನ್ಯ ಅವರದು. ಸಾಹಿತಿಗಿರ ಬಹುದಾದ ಸೋಗು-ಸೌಜನ್ಯವಲ್ಲ ಇದು, ವ್ಯವಹಾರದಲ್ಲಿ ಅವರ ಎಲ್ಲ ನಡೆ-ನುಡಿಗಳಲ್ಲಿ ಸ್ವಭಾವವಾಗಿ ಮೈಗೂಡಿಕೊಂಡು ಸೌಜನ್ಯವಿದು ಎಂಬುದನ್ನು ದೆಹಲಿಯಲ್ಲಿ ನ್ಯಾಶನಲ್ ಬುಕ್ ಟ್ರಸ್ಟ್‌ದ ಒಂದು ವಿಚಾರಸಂಕಿರಣಕ್ಕಾಗಿ ನಾವಿಬ್ಬರೂ ಹೋದಾಗ ಮೂರು ದಿವಸ ಒಂದು ಹೊಟೆಲ್‌ನ ಒಂದೇ ಕೋಣೆಯಲ್ಲಿ ಅವರೊಡನೆ ವಾಸ ಮಾಡಿದಾಗ ಕಂಡ ಅನುಭವ.

ಅಡವಿಯಲ್ಲಿಯ ಗಿಡ-ಬಳ್ಳಿಗಳಂತೆ ಇಂದು ಕನ್ನಡದಲ್ಲಿ ಸಾಹಿತ್ಯ ಕೃತಿಗಳು ಹುಟ್ಟುತ್ತಿರುವಾಗ ಡಾ॥ ಶಿವರುದ್ರಪ್ಪನಂತಹರ ತೋಟಗಾರಿಕೆ ಅತ್ಯಗತ್ಯವಾಗಿದೆ, ಅದನ್ನು ಸುಂದರವಾಗಿಸುವುದಕ್ಕೆ ಮಾತ್ರವಲ್ಲ, ಯಾವುದು ಮತ್ತು ಯಾಕೆ ಸುಂದರ ಎಂದು ತಿಳುಹಿಸುವುದಕ್ಕೆ ಕೂಡ.

ಕಿ. ರಂ. ನಾಗರಾಜ

# ವಿಮರ್ಶೆಯ ಸಾಂಸ್ಕೃತಿಕ ಹೊಣೆಗಾರಿಕೆ

(ವಿಮರ್ಶೆಯ ಪೂರ್ವ ಪಶ್ಚಿಮ—ಒಂದು ಅಭ್ಯಾಸ)

ಒಂದು ಚಾರಿತ್ರಿಕ ಸಂದರ್ಭ ಮತ್ತು ಸಾಹಿತ್ಯ ಕೃತಿ—ಇವುಗಳ ನಡುವಣ ಸಂಬಂಧ ದಲ್ಲಿನ ನಿಲುವುಗಳ ಅಭ್ಯಾಸಕ್ಕೆ 'ವಿಮರ್ಶೆಯ ಪೂರ್ವ ಪಶ್ಚಿಮ' ಕೃತಿ ಒಂದು ಮಹತ್ವದ ಉದಾಹರಣೆ. ಏಕೆಂದರೆ—ಒಂದು ಕೃತಿ ಉಂಟುಮಾಡುವ ಪರಿಣಾಮದ ವಿಶ್ಲೇಷಣೆಯ ಮೂಲಕ ವಿಮರ್ಶಾವಿಧಾನಗಳು (Norms) ಮತ್ತು ಅಂಥ ವಿಧಾನಗಳ ಇತಿ-ಮಿತಿಗಳ ತಿಳಿವು ಮುಖ್ಯವಾಗುವುದರಿಂದ. ಒಂದು ಕೃತಿಯ ವಾಸ್ತು-ರಚನೆ, ಭಾಷೆ-ಶೈಲಿ ಮುಂತಾದ ಘಟಕಗಳು ತನ್ನ ಸಂದರ್ಭದ ಜೀವನ ಗ್ರಹಿಕೆಯ ದೃಢವಾಸ್ತವದೊಂದಿಗೆ ಸಂಬಂಧವನ್ನು ಪಡೆದುಕೊಂಡಿರುತ್ತದೆ. 'ವಿಮರ್ಶೆಯ ಪೂರ್ವ-ಪಶ್ಚಿಮ'ದಲ್ಲಿ ಚರ್ಚಿತ ವಾಗಿರುವ ಸಾಹಿತ್ಯ ವಿಮರ್ಶೆಯ ಮಾನದಂಡಗಳ ಪರಿಶೀಲನೆಯಲ್ಲಿ ಸೇರಿರುವ ಇಂಥ ಸಂಬಂಧಿಗಳ ಕಡೆಗೆ ಗಮನಹರಿಸುವುದಷ್ಟೇ ಈ ಲೇಖನದ ಉದ್ದೇಶ. ಇಂಥ ಮಾನ ದಂಡಗಳನ್ನು ಚಾರಿತ್ರಿಕವಾಗಿ ವಿಶ್ಲೇಷಿಸುವುದು ಲೇಖಕರ ಮೊದಲ ಉದ್ದೇಶ. ಅನಂತರದಲ್ಲಿ ಆ ವಿಶ್ಲೇಷಣೆಯಲ್ಲಿನ ಸಾಧಕ-ಬಾಧಕಗಳನ್ನು ಚರ್ಚೆಗೆ ಗುರಿಪಡಿಸು ವುದು ಎರಡನೆಯದು. ಮೂರನೆಯ ಹಂತದಲ್ಲಿ ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದ ಲೇಖಕರ ವಿಮರ್ಶೆಯ ನಿಲುವುಗಳನ್ನು ತಲುಪುವ ಉದ್ದೇಶವನ್ನು ಹೊಂದಿದೆ. ಹೀಗಾಗಿ ವಿಮರ್ಶೆಯ ಮಾನದಂಡಗಳ ಸ್ವರೂಪವನ್ನು ವಿವರಣೆಮಾಡುತ್ತಲೇ ನಮ್ಮ ಸಾಹಿತ್ಯಿಕ ಸಂದರ್ಭದ ವಿಶ್ಲೇಷಣೆ ನಡೆಯುತ್ತದೆ. ಇಂಥ ಪ್ರಕ್ರಿಯೆಯ ಹಿಂದೆ ಸಾಹಿತ್ಯಕ ಮಾನದಂಡಗಳು ವಿಶಿಷ್ಟವಾದ ವ್ಯಾಖ್ಯಾನ, ಖಂಡನ ಮಂಡನಗಳನ್ನು ಹಾಯ್ದು ಬಂದಿದೆ ಎಂಬುದು ಸ್ಪಷ್ಟವಾಗುತ್ತದೆ. ವಿಮರ್ಶೆಯಲ್ಲಿ ಪೂರ್ವದ ದೃಷ್ಟಿ ಯಾವುದು? ಪಶ್ಚಿಮದ ದೃಷ್ಟಿ ಯಾವುದು? ಒಂದು ಸಾಂಸ್ಕೃತಿಕ ಸಂದರ್ಭಕ್ಕೆ ಒಗ್ಗಿ ಬರುವ ಮಾನದಂಡ ಯಾವುದು? ಎರಡು ಭಿನ್ನ ಸಾಂಸ್ಕೃತಿಕ ಸಂದರ್ಭದಲ್ಲಿ ಏರ್ಪಟ್ಟಿರುವ ಮಾನದಂಡಗಳನ್ನು ಯಾವ ಮಟ್ಟದ ಔಚಿತ್ಯದಲ್ಲಿ ಗ್ರಹಿಸಬೇಕು ಮುಂತಾದ ಸಾಹಿತ್ಯಾಭ್ಯಾಸಿಯ ಪ್ರಶ್ನೆ ಗಳನ್ನು ಗಮನದಲ್ಲಿಟ್ಟುಕೊಂಡು ಈ ಕೃತಿಯ ವಿನ್ಯಾಸ ರೂಪುಗೊಂಡಿದೆ. ಇದು ಒಂದು ಕ್ರಮವನ್ನು ಅನುಸರಿಸಿದೆಯಾದರೂ ಸಿದ್ಧಾಂತದ (Theory) ನಿರೂಪಣೆಗೇ ನಿಲ್ಲುವುದಿಲ್ಲ. ಕನ್ನಡ ವಿಮರ್ಶೆಯ ನೆಲೆಗಳನ್ನು ಗುರುತಿಸಿ ಅದರ ವಿಮರ್ಶಾವಿವೇಕವನ್ನು ಪರಿಶೀಲಿಸುವ

ಪ್ರಯತ್ನ ನಡೆದಿದೆ. ಇಂಥ ಸಂದರ್ಭಗಳಲ್ಲಿ ಡಾ. ಜಿ.ಎಸ್.ಎಸ್.—ಅವರು ತಲುಪಿರುವ ತೀರ್ಮಾನಗಳು ವಿಮರ್ಶನ ಸಿದ್ಧಾಂತಗಳ ಆಧಾರದಿಂದಲೇ ಬಂದದ್ದೆಂದು ತಿಳಿಯುವುದು ತಪ್ಪಾಗುತ್ತದೆ. ಏಕೆಂದರೆ—ಸಾಹಿತ್ಯದಲ್ಲಿನ ಜೀವನಗ್ರಹಿಕೆಯ ಸಂದರ್ಭದಲ್ಲಿ ಸಾಮಾನ್ಯವೆನಿಸಬಹುದಾದ ಪೂರ್ವ-ಪಶ್ಚಿಮಗಳ ಸಂಬಂಧ ಸರಳಗೊಳಿಸುವಂಥದ್ದಲ್ಲ. ಭಾರತೀಯ ಅಭಾರತೀಯದ ಪ್ರಶ್ನೆಗಳು ಭಾವುಕ ತೀರ್ಮಾನಗಳಲ್ಲಿ ಪರ್ಯವಸಾನಗೊಳ್ಳುವ ಅಪಾಯವನ್ನು ಮುಟ್ಟುವಂತೆಯೇ ಅತಿ ಜಟಿಲ ಬೌದ್ಧಿಕ ಸರ್ಕಸ್ ಕೂಡ ಆಗಬಲ್ಲುದು. ಇಂಥ ಅಪಾಯದಿಂದ ತಪ್ಪಿಸಿಕೊಳ್ಳಲು ವಿಮರ್ಶಕ ಕೊಡುವ ಕಾರಣಗಳು ಮುಖ್ಯವಾಗುತ್ತದೆ. ಈ ಕಾರಣದಿಂದ ವಿಮರ್ಶೆಯ ಪೂರ್ವ–ಪಶ್ಚಿಮ ಒಂದು ಥಿಯರಿಯ ಕೃತಿ ಎಂದಷ್ಟೇ ಹೇಳಿದರೆ ತಪ್ಪಾಗುತ್ತದೆ. ಒಂದು ಸಾವಿರ ವರ್ಷಗಳ ಕನ್ನಡ ಸಾಹಿತ್ಯ ಮತ್ತು ಸಮಕಾಲೀನ ಕನ್ನಡ ಸಾಹಿತ್ಯದ ವಿವೇಚನೆಯೂ ಇಲ್ಲಿ ನಡೆದಿದೆ. ಜೊತೆಗೆ ಸಂಸ್ಕೃತ ಮತ್ತು ಇಂಗ್ಲಿಷ್ ಕಾವ್ಯಗಳ ಬಗೆಗೂ ಕೂಡ ವಿವೇಚನೆ ನಡೆದಿದೆ.

ಹೀಗೆ ವಿಮರ್ಶಕ ಡಾ|| ಜಿ ಎಸ್.ಎಸ್. ತಲುಪುವ ನಿರ್ಣಯಗಳಿಗೆ ಅವರು ವಿವರಿಸುವ ಸಾಹಿತ್ಯಕ ಮಾನದಂಡಗಳು ಎಷ್ಟರಮಟ್ಟಿಗೆ ಸಹಾಯಕವಾಗುತ್ತದೆ—ಎಂಬುದನ್ನು ನಾವು ಗುರುತಿಸಿಕೊಳ್ಳುವುದರ ಜೊತೆಗೆ ಅಂಥ ನಿರ್ಣಯಗಳ ಹಿನ್ನೆಲೆಯಲ್ಲಿ ವರ್ತಿಸುವ ಮಾನದಂಡಗಳ ಚರ್ಚೆಯ ಸಾರಸಂಗ್ರಹಗಳನ್ನು ಕ್ರಮಗೊಳಿಸಿಕೊಳ್ಳುವ ರೀತಿಯೂ ಇಲ್ಲಿ ಮುಖ್ಯ. ಏಕೆಂದರೆ ಯಾವುದೇ ವಿಮರ್ಶನ ಮಾನದಂಡ ತನ್ನಿಂದ ತಾನೇ ಸರ್ವಸ್ವತಂತ್ರವಲ್ಲ. ಸಾಹಿತ್ಯವನ್ನು ಸರ್ವಸ್ವತಂತ್ರ ರಚನೆಗಳೆಂದು ಅವರು ಎಲ್ಲೂ ಹೇಳುವುದಿಲ್ಲ. ಉದಾಹರಣೆಗೆ—'ಮನಶ್ಶಾಸ್ತ್ರದ ಕೀಲಿ ಕೈ'—'ಚಾರಿತ್ರಿಕ ವಿಧಾನ'—'ದರ್ಶನ ವಿಮರ್ಶೆ' ಇವುಗಳ ವಿಶ್ಲೇಷಣೆಯ ಹಿನ್ನೆಲೆಯಲ್ಲಿ ನಮ್ಮ ಸಾಂಸ್ಕೃತಿಕ ಸಂದರ್ಭದಲ್ಲಿ ಏರ್ಪಡಬೇಕಾಗಿರುವ ವಿಮರ್ಶಾ ವಿಧಾನದ ಕಡೆಗೂ ಲೇಖಕರು ಗಮನ ಸೆಳೆಯುತ್ತಾರೆ. ಈ ಕೆಲವು ಮಾತುಗಳನ್ನು ಗಮನಿಸಿ :

'ಕವಿಜೀವನ ಚರಿತ್ರೆಯು ಘಟನೆಗಳನ್ನು ಆ ಕಾಲದಲ್ಲಿ ತಾರದೆ, ಅದನ್ನು ಚಾರಿತ್ರಿಕ ಕುತೂಹಲದಿಂದ ನೋಡುವುದು ಒಳಿತು.'

* * *

'ಸಾಹಿತ್ಯ ಜನಜೀವನದ ಪ್ರತಿಬಿಂಬ', 'ಸಾಹಿತ್ಯ ಒಂದು ಯುಗ ಮನಸ್ಸಿನ ವಾಣಿ', 'ಸಾಹಿತ್ಯ ಒಂದು ರಾಷ್ಟ್ರದ ಜೀವಿತದ ಕಥೆ' ಇತ್ಯಾದಿ ಮಾತುಗಳನ್ನು ಯಾರು ತಾನೆ ಕೇಳಿಲ್ಲ? ಇದರ ಅರ್ಥ, ಅಂದಂದಿನ ಕವಿ ಕೃತಿಗಳಲ್ಲಿ ಒಂದು ಯುಗ, ಒಂದು ರಾಷ್ಟ್ರ, ಒಂದು ಜನಜೀವನ ತನ್ನನ್ನು ತಾನು ಪ್ರಕಟಿಸಿಕೊಳ್ಳುತ್ತದೆ ಎಂದು."

* * *

'ಇತಿಹಾಸ' ಎಂದರೆ ವಿಸ್ತಾರವಾದ ಅರ್ಥದಲ್ಲಿ ಒಂದು ಜನತೆ ತಾನು ಬಾಳಿ ಬದುಕಿದ ಪರಿ.

* * *

'ಆ ಜನತೆಯ ಮನೋಭಾವ, ಅದನ್ನು ರಾಜಕೀಯವಾಗಿ, ಧಾರ್ಮಿಕವಾಗಿ, ನೈತಿಕ ವಾಗಿ, ಸಾಮಾಜಿಕವಾಗಿ ಹಿಡಿದು ನಡೆಸುತ್ತಿದ್ದ ಶಕ್ತಿಗಳು ಇವೆಲ್ಲವೂ ಜನಜೀವನದ ಇತಿಹಾಸವನ್ನು ರೂಪಿಸುತ್ತದೆ.'

* * *

ಈ ಮಾತುಗಳನ್ನು ಇಲ್ಲಿ ನಿರೂಪಿಸುತ್ತಿರುವ ಉದ್ದೇಶ—ಸಾಹಿತ್ಯಕ ಮಾನದಂಡಗಳ ವಿಶ್ಲೇಷಣೆಯ ಮೂಲಕ ಡಾ|| ಜಿ.ಎಸ್.ಎಸ್. ತಲುಪುವ ನಿರ್ಣಯವೇ ಮುಖ್ಯ ವಾಗುತ್ತದೆ ಎಂಬ ಕಾರಣಕ್ಕಾಗಿ. ಮೇಲಿನ ಕೆಲವು ಉದ್ಧರಣಗಳಿಗೆ ಪೂರಕವಾದ ಮತ್ತು ವಿಶಿಷ್ಟವಾದ ಸಾಂಸ್ಕೃತಿಕ ಸಂದರ್ಭದ ವಿವರಣೆಯನ್ನು ತಿಳಿಯಲು ಈ ಮುಂದಿನ ತೀರ್ಮಾನಗಳನ್ನು ಗಮನಿಸಿ :

"ಸಾಹಿತ್ಯ ಕೃತಿಯೊಂದು ಅದು ರಚಿತವಾದ ಕಾಲದಿಂದ ಬದ್ಧವಾಗಿದೆ ಎಂದರೆ ಇದರ ಅರ್ಥ ಇಷ್ಟೆ : ಪಂಪ ತನ್ನ ಕೃತಿಯನ್ನು ಹತ್ತನೆಯ ಶತಮಾನದ ಕಾಲದಲ್ಲಿ, ಕನ್ನಡ ನಾಡಿನಲ್ಲಿ, ಒಂದು ನಿರ್ದಿಷ್ಟ ಅವಧಿಯಲ್ಲಿ ರಚಿಸಿದನು. ಎಂದರೆ ಪಂಪಭಾರತ ಹತ ನೆಯ ಶತಮಾನದ ಯಾವುದೋ ಒಂದು ಬಿಂದುವಿನಲ್ಲಿ ಆವಿರ್ಭವಿಸಿದ್ದು. ಒಂದು ವೇಳೆ ಪಂಪಭಾರತ, ಹತ್ತನೆಯ ಶತಮಾನದ ಬದಲು, ಹನ್ನೆರಡನೆಯ ಶತಮಾನದ ಒಂದು ಬಿಂದುವಿನಲ್ಲಿ ರಚಿತವಾಗಿದ್ದರೆ, ಅದರ ಸ್ವರೂಪ ಸ್ವಭಾವ ಉದ್ದೇಶಗಳಲ್ಲಿ ಈಗಿರುವುದಕ್ಕಿಂತ ತೀರಾ ಭಿನ್ನವಾಗಿಬಿಡುತ್ತಿತ್ತು ಎನ್ನುವಷ್ಟರಮಟ್ಟಿಗೆ ಹತ್ತನೆಯ ಶತಮಾನದ ಸತ್ತ್ವದಿಂದ ಬದ್ಧವಾಗಿದೆ."

ಇಂಥ ತೀರ್ಮಾನಗಳು ಕನ್ನಡ ಸಾಹಿತ್ಯದ ಚಾರಿತ್ರಿಕ ಸಂದರ್ಭವನ್ನು ಸಾಂಸ್ಕೃತಿಕ ವಾಗಿ ಗುರುತಿಸಿಕೊಂಡದ್ದರ ಮೂಲಕ ಬಂದದ್ದು. ಹೀಗಾಗಿ ಕೃತಿಯ ಉದ್ದೇಶದಲ್ಲಿಯೇ ಇರುವ ಎರಡು ಸ್ತರಗಳನ್ನು ಇಲ್ಲಿ ಗಮನಿಸಬಹುದು.

ವಿಮರ್ಶೆಯೂ ಕೂಡ ಪರಿಶೀಲನೆಗೆ ತೆರೆದುಕೊಂಡದ್ದು. ಸಾಹಿತ್ಯವನ್ನು ಓದಿದ ಹಂತದಲ್ಲೇ ನಿರ್ಣಯಾತ್ಮಕ ವಿಮರ್ಶೆಯನ್ನು ಬೆಳೆಸುವುದು ಸಾಧ್ಯ. ಒಬ್ಬ ವಿಮರ್ಶಕನ ನಿಲುವುಗಳನ್ನು ತೆಗೆದುಕೊಂಡು ಆ ನಿಲುವುಗಳನ್ನು ಪರಿಶೀಲನ ಪರೀಕ್ಷೆಗಳಿಗೆ ಗುರು ಪಡಿಸುವುದರ ಮೂಲಕ ಅಂಥ ನಿಲುವುಗಳನ್ನು ವಿಮರ್ಶಿಸುವುದು ಮತ್ತೊಂದು ವಿಧಾನ. ಒಬ್ಬ ವಿಮರ್ಶಕನ ಮಾನದಂಡಗಳನ್ನು ವಿಶ್ಲೇಷಿಸುವುದರ ಮೂಲಕ ಅವನ ನಿರ್ಣಯ ಗಳ ಪರಾಮರ್ಶೆ ಸಾಧ್ಯವಾಗುತ್ತದೆ. ಇಂಥ ಸಂದರ್ಭದಲ್ಲಿ ವಿಮರ್ಶೆಯ ಮಾನ ದಂಡಗಳ ಸ್ವರೂಪ ಯಾವುದು? ಎಂಬ ಪ್ರಶ್ನೆ ಬರುತ್ತದೆ. ಇಂಥ ಪ್ರಶ್ನೆಯನ್ನು ಸೈದ್ಧಾಂತಿಕವಾಗಿ ಪರಿಶೀಲಿಸಬೇಕು ಯಾವುದೇ ಸಿದ್ಧಾಂತ ಮತ್ತು ಮೌಲ್ಯಗಳನ್ನು ಪೂರ್ವಗ್ರಹಿಕೆಯಲ್ಲಿ ಇಟ್ಟುಕೊಳ್ಳುವುದು ಸಾಹಿತ್ಯ ಕೃತಿಯ ಬಗ್ಗೆ ಸ್ಪಷ್ಟ ನಿರ್ಣಯ ಗಳನ್ನು ತಲುಪುವಲ್ಲಿ ಅಪ್ರಸ್ತುತವಾಗುತ್ತದೆ. ಕೇವಲ ಸೈದ್ಧಾಂತಿಕ ಸಂದರ್ಭಗಳಲ್ಲಿಯೇ ನಿಂತರೆ ಸಾಹಿತ್ಯದ ಕಡೆಗೆ ಗಮನ ಕುಸಿಯುತ್ತದೆ. (ಹೀಗೆಂದ ಮಾತ್ರಕ್ಕೆ ಸಾಹಿತ್ಯಕ ಸಿದ್ಧಾಂತವೆಲ್ಲ ಸಾಹಿತ್ಯದ ಕಡೆಗೆ ಗಮನವನ್ನು ಕಡಿಮೆ ಮಾಡುತ್ತದೆ ಎಂದು ಅರ್ಥ

ವಲ್ಲ.) ಓದುಗ-ಸಾಹಿತ್ಯಕ ಸಿದ್ಧಾಂತದ ತಿಳಿವು ಪಡೆದುಕೊಂಡವನಾಗಿಲ್ಲ ಎಂಬ ಅಂಶ ಮುಖ್ಯವಲ್ಲ. ಆದಕ್ಕೆ ಬದಲಾಗಿ ನೇರವಾಗಿ ಕೃತಿಯನ್ನು ಪ್ರವೇಶಿಸುವ ಸಾಮರ್ಥ್ಯವನ್ನು ಕಳೆದುಕೊಂಡಿದ್ದಾನೆ ಎಂದಷ್ಟೇ ಹೇಳಬಹುದು. ಕೇವಲ ಸಿದ್ಧಾಂತದ ವಿವರಣೆಯಿಂದ ಅನೇಕ ವೇಳೆ ಪ್ರತಿಕೂಲ ಪರಿಣಾಮವೇ ಉಂಟಾಗುತ್ತದೆ. ಇಂಥ ಸಂದರ್ಭಗಳಲ್ಲಿ ಸಾಹಿತ್ಯದ ಪರಿಣಾಮ ಕ್ರಿಯಾತ್ಮಕವಾಗಿ ರೂಪುಗೊಳ್ಳಲು ವಿಮರ್ಶೆ ಹೇಗೆ ವರ್ತಿಸಬೇಕೆಂಬ ಚರ್ಚೆ ಮೊದಲ ಮೂರು ಭಾಗಗಳಲ್ಲಿ ವಿವರಣೆಗೊಂಡಿದೆ. ಕೃತಿಯ ಕಡೆಯ ಭಾಗಗಳಾದ 'ಕೃತಿಪರೀಕ್ಷೆ' 'ವಿಮರ್ಶೆಯಲ್ಲಿ ಏರುಪೇರು' ವಿಮರ್ಶೆಯ ಸ್ಥಿತಿ-ಗತಿ ಇವುಗಳಲ್ಲಿ ಸಮಕಾಲೀನ ಸಾಹಿತ್ಯದ ವಿಶ್ಲೇಷಣೆಯ ಸ್ವರೂಪದ ವಿಮರ್ಶೆ ಇದೆ. ಇಂಥ ಸಮಕಾಲೀನ ಸಾಹಿತ್ಯ ವಿಶ್ಲೇಷಣೆಯ ಸಂದರ್ಭದಲ್ಲಿನ ಜಿ.ಎಸ್.ಎಸ್. ಅವರ ತೀರ್ಮಾನಗಳನ್ನು ಇಲ್ಲಿ ಗುರುತಿಸಬಹುದು.

೧. ವಿಮರ್ಶೆ ಒಂದು ಸಾಮಾಜಿಕ ಕ್ರಿಯೆ; ವ್ಯಕ್ತಿಯೊಬ್ಬನ ಪ್ರತಿಕ್ರಿಯೆ ಮತ್ತು ತೀರ್ಮಾನ. ವಿಮರ್ಶಕನಿಗೆ ಅನುಭೂತಿ, ಹೊಂದಾಣಿಕೆ (Flexibility) ಮತ್ತು ಒಳ್ಳೆಯ ನಂಬಿಕೆಗಳು ಅಗತ್ಯ.
೨. ಗತಕಾಲದ ಮಹತ್ವದ ಅನುಭವಗಳನ್ನು ಚಾರಿತ್ರಿಕವಾಗಿ ಗುರುತಿಸುವುದು.
೩. ವಿಮರ್ಶೆ ಸಾಹಿತ್ಯದ ಧೋರಣೆ ಮತ್ತು ಕವಿಯ ಧೋರಣೆಗಳನ್ನು ಕಂಡುಕೊಳ್ಳಲು ಒಂದು ಸಾಧನ. ಇಂಥ ವಿಮರ್ಶನ ಮಾನದಂಡಗಳ ಮುಖಬೆಲೆ ಮತ್ತು ಮಿತಿಗಳು.
೪. ವಿಮರ್ಶಕನಿಗೆ ಇರಬೇಕಾದ ಸಾಂಸ್ಕೃತಿಕ ನಿಷ್ಠೆ.
೫. ಕವಿತೆಯ ಆಗುವಿಕೆಯಲ್ಲಿನ intense realization ಮತ್ತು ultimate refinementಗಳ ಸಂಬಂಧಗಳು.

ಇಂಥ ವಿವರಗಳು—ಸೈದ್ಧಾಂತಿಕ ವಿವರಣೆಯಾಗಿ ಮಾತ್ರ ಉಳಿಯದೆ ಒಂದು ಸಾಹಿತ್ಯದ ಸಂದರ್ಭದ ವಿವರಣೆಯ ಹಿನ್ನೆಲೆಯಲ್ಲಿ ಮೂಡಿಬರುತ್ತದೆ. ಹೀಗಾಗಿ ಸಾಹಿತ್ಯ ವಿಮರ್ಶೆಯ ಹಲವು ಶಿಸ್ತುಗಳು ಹೇಗೆ ಕೃತಿಯ ಅಭ್ಯಾಸದ ಸಂದರ್ಭದಲ್ಲಿ ಸಹಾಯಕವಾಗುತ್ತದೆ? ಅಂಥ ಶಿಸ್ತಿನ ಅನ್ವಯ ಮಾರ್ಗ ಯಾವುದು? ಮುಂತಾದ ಪ್ರಶ್ನೆಗಳು ಈ ಕೃತಿಯಲ್ಲಿ ಚರ್ಚಿತವಾಗಿದೆ.

ವಿಮರ್ಶೆಯ ನಡೆ—ಸಮಾಜದ ಆ ಆ ಕಾಲದ ರಾಜಕೀಯ, ಆರ್ಥಿಕ ಮತ್ತು ತಾತ್ವಿಕ ವಾಸ್ತವತೆಗಳ ದೃಢ ನಿಲುವುಗಳನ್ನು ತನ್ನ ಬೆಂಬಲಕ್ಕೆ ತಂದುಕೊಂಡದ್ದಾಗಿರುತ್ತದೆ. ಇವುಗಳ ನಡುವಣ ಸಂಬಂಧದಲ್ಲಿ ಏರ್ಪಡುವ ಪ್ರಕ್ರಿಯೆಗಳು ಸಾಹಿತ್ಯಕ ಚಟುವಟಿಕೆಗಳ ಕೇಂದ್ರ ಬಿಂದು ಕೂಡ. ಇದರ ಅಂತರ್ಯದಲ್ಲೇ ಒಗ್ಗೂಡಿರುವ ರಾಜಕೀಯ, ಧಾರ್ಮಿಕ, ಸೌಂದರ್ಯತತ್ತ್ವ ಮತ್ತು ತಾತ್ತ್ವಿಕ ಸ್ವರೂಪವನ್ನು ಗುರುತಿಸಿಕೊಳ್ಳುವುದರ ಮೂಲಕ ಮಾತ್ರ ಸಾಂಸ್ಕೃತಿಕ ವಿಶ್ಲೇಷಣೆ ಸಾಧ್ಯವಾಗುತ್ತದೆ.

ಕೃತಿಕಾರನಿಗೂ ಓದುಗನಿಗೂ ನಡುವೆ ಏರ್ಪಟ್ಟಿರುವ ಸೂಕ್ಷ್ಮ ಸಂಬಂಧಗಳ ವಿನ್ಯಾಸದ ತಿಳಿವಿಗೆ ವಿಮರ್ಶಾ ಮಾನದಂಡಗಳು ಎಷ್ಟರ ಮಟ್ಟಿಗೆ ಸಹಾಯಕವಾಗಬಹುದೆಂಬುದನ್ನು ಅನ್ವಯಿಕ ವಿಶ್ಲೇಷಣೆಯ ಆಧಾರದ ಮೇಲೆ 'ವಿಮರ್ಶೆಯ ಪೂರ್ವ-ಪಶ್ಚಿಮ' ಕೃತಿ ರೂಪುಗೊಂಡಿದೆ. ಒಂದು ಸಂಸ್ಕೃತಿಯ ದಾಖಲೆಯೆನಿಸಿದ ಸಾಹಿತ್ಯವನ್ನು ಒಂದು ಚಲನಶೀಲ ವಿಮರ್ಶಾವಿಧಾನದಿಂದ ಗುರುತಿಸಿಕೊಳ್ಳುವಾಗ ಯಾವುದೇ ಮಾನದಂಡವನ್ನು ಸಾಹಿತ್ಯಕ್ಕೆ ಅನ್ವಯಿಸುವಾಗ ತೋರಬೇಕಾದ ಎಚ್ಚರವೂ ಕೂಡ ಈ ಕೃತಿಯಲ್ಲಿ ನಿರ್ದೇಶಿತವಾಗಿದೆ. ವಿಮರ್ಶಾ ವಿಧಾನದಲ್ಲಿನ ಸಾಂಸ್ಕೃತಿಕ ಜವಾಬ್ದಾರಿಯು ಅನೇಕ ನೆಲೆಗಳ ವಿಶ್ಲೇಷಣೆಗೆ–ಕೃತಿಕಾರರು ಬಳಸಿರುವ ಅನೇಕ ವಿಧಾನಗಳು ಕನ್ನಡ ವಿಮರ್ಶೆಯ ಸ್ವರೂಪದ ವ್ಯಾಖ್ಯಾನವೂ ಆಗಿದೆ ಎಂಬುದು ಈ ಪುಸ್ತಕದ ಮುಖ್ಯ ಅಂಶಗಳಲ್ಲಿ ಒಂದು.

ಉಷಾಕಿರಣ್

# ಕರ್ಮಯೋಗಿ

ಜನಮನಕ್ಕೆ ಅತಿ ಹತ್ತಿರವಾದ, ಅತಿಯಾದ ನಿರ್ಬಂಧಗಳಿಗೊಳಪಡದ ಒಂದು ಸಾಹಿತ್ಯ ಪ್ರಕಾರ ಕಾದಂಬರಿ. ವಾಸ್ತವಿಕ ಅಂಶಗಳನ್ನು ನಿರ್ವಹಿಸಬಲ್ಲ ಕಲ್ಪನೆಯೇ ಕಾದಂಬರಿಯ ಆಧಾರ. ಸಾಮಾನ್ಯವಾಗಿ ಒಂದು ಕಾದಂಬರಿಯಲ್ಲಿ ಯಾವುದೇ ಕಲ್ಪನೆ ಸಂಭಾವ್ಯವಾಗುವಂತಹ ರೀತಿಯಲ್ಲಿ ನಿರೂಪಿತವಾಗಿರಬೇಕು. ಐತಿಹಾಸಿಕ ಸಂಗತಿಗಳೊಡನೆ ಕಲ್ಪನೆಯನ್ನು ಬೆರೆಸಿ ಅದು ಸಂಭಾವ್ಯವಾಗಿದ್ದಂತಹ ರೀತಿಯಲ್ಲಿ ನಿರೂಪಿಸಿದಾಗ ಅದು ಐತಿಹಾಸಿಕ ಕಾದಂಬರಿ ಎನ್ನಿಸಿಕೊಳ್ಳುತ್ತದೆ. ದೇಶಕಾಲದಿಂದ ಮಿತವಾದ ಗತಘಟನೆಗಳಿಗೆ ಇದರಿಂದ ಸಾರ್ವಕಾಲಿಕವಾದ ಸ್ಥಾನ ಸಿಕ್ಕುತ್ತದೆ. ಇಲ್ಲಿ ಬರುವ ಕಲ್ಪನೆ, ಚರಿತ್ರೆಯಲ್ಲಿ ಸೂಚಿತವಾಗಿರುವ ಅಂಶಗಳನ್ನು ಪೋಷಿಸುವಂತೆ, ವಿಸ್ತರಿಸುವಂತೆ ಇರಬೇಕು. ಮನುಷ್ಯಸ್ವಭಾವದ ಆಳವನ್ನೂ ಒಳಸೂಕ್ಷ್ಮಗಳನ್ನೂ ಚಿತ್ರಿಸಲು ಇದು ಸಹಾಯಕವಾಗಬೇಕು. ಇದರಿಂದ ಒಬ್ಬ ವ್ಯಕ್ತಿಯ ಜೀವನದ ಹಲವಾರು ಮುಖಗಳನ್ನು ವಿಸ್ತರಿಸಲು ಸಾಧ್ಯ. ಐತಿಹಾಸಿಕ ಸಂಗತಿಗಳೊಡನೆ ಪೌರಾಣಿಕತೆಯೂ ಸೇರಿದಾಗ ಅದು ಪೌರಾಣಿಕ ಕಾದಂಬರಿಯಾಗುತ್ತದೆ. ಆದರೆ ಪೌರಾಣಿಕತೆಗಿಂತ ಮನುಷ್ಯಸ್ವಭಾವದ ವಿಶ್ಲೇಷಣೆ, ವಾಸ್ತವಿಕ ಅಂಶಗಳ ನಿರ್ವಹಣೆಯೇ ಪ್ರಮುಖವಾಗಿರಬೇಕಾದುದು ಕಾದಂಬರೀ ಸ್ವರೂಪಕ್ಕೆ ಅತ್ಯಾವಶ್ಯಕವೆನಿಸುತ್ತದೆ.

ಜಿ. ಎಸ್. ಶಿವರುದ್ರಪ್ಪನವರ 'ಕರ್ಮಯೋಗಿ' ರಾಘವಾಂಕ ಕವಿಯ ಸಿದ್ಧರಾಮ ಚಾರಿತ್ರ್ಯದ ಆಧಾರದಿಂದ ರಚಿತವಾದದ್ದು. ಇದು ಮುಖ್ಯವಾಗಿ ಪೌರಾಣಿಕ ಕಾದಂಬರಿಯಾದರೂ ಐತಿಹಾಸಿಕವಾಗಿಯೂ ಇದೆ. ಕಥಾನಾಯಕನಾದ ಸಿದ್ಧರಾಮ ಐತಿಹಾಸಿಕ ವ್ಯಕ್ತಿಯಾಗಿರುವುದಕ್ಕಿಂತ ಪೌರಾಣಿಕ ವ್ಯಕ್ತಿಯಾಗಿ ಹೆಚ್ಚಿನ ಪ್ರಾಶಸ್ತ್ಯ ಪಡೆದಿದ್ದಾನೆ. ಇವನ ಕಥೆಯೊಂದಿಗೆ ಅಲ್ಲಮನ ಕಥೆಯೂ ಬೆರೆಯುವುದರಿಂದ ರಾಘವಾಂಕನ ನಂತರದ ಕವಿಗಳ ಕಥಾಪರಂಪರೆಯಲ್ಲಿ ಅನೇಕ ವ್ಯತ್ಯಾಸಗಳುಂಟಾಗಿವೆ. ಸಿದ್ಧರಾಮನ ಬಗೆಗಿನ ಭಕ್ತಿ ಆದರಗಳಿಂದಾಗಿ ಕವಿಗಳು ಅವನನ್ನು ಕಾರಣಪುರುಷ ಮುಂತಾದ ಪ್ರಸಿದ್ಧ ಪೌರಾಣಿಕ ಅಂಶಗಳನ್ನು ಅವನ ಜೀವನಚರಿತ್ರೆಯಲ್ಲಿ ಸೇರಿಸುವುದರ ಮೂಲಕ ತಮ್ಮ ಗೌರವವನ್ನು ಸಲ್ಲಿಸಿದ್ದಾರೆ. ಹೇಗೇ ಇರಲಿ, ಈ ಕವಿಕಾವ್ಯಪರಂಪರೆಯ ಮೂಲಕ ಸಿದ್ಧರಾಮನ ಅನೇಕ ಮುಖವಾದ ಕಥೆಗಳು ಪ್ರಚಲಿತವಿದ್ದು ಅವನನ್ನು ಅಮರ

ವ್ಯಕ್ತಿಯನ್ನಾಗಿಸಿರುವುದು ಸಂತೋಷಕರ ಸಂಗತಿ. ವಚನಕಾರರಲ್ಲಿ ಮಾತ್ರ ಈ ರೀತಿ ಅವರನ್ನೇ ಕುರಿತಾದ, ಮುಖ್ಯವಾದ ದೃಷ್ಟಿ ಶಿವಭಕ್ತರೆಂದೇ ಇದ್ದರೂ, ಕಾವ್ಯಸೃಷ್ಟಿಯಾಗಿರುವಂತೆ ತೋರುತ್ತದೆ. ಇದಕ್ಕೆ ಕಾರಣ ಜನಸಾಮಾನ್ಯರು ಅವರನ್ನು ಶಿವನ ಅವತಾರವೆಂದೋ, ಇನ್ನಾವುದೇ ರೀತಿಯಲ್ಲಿ ಕಾರಣಪುರುಷರೆಂದೋ ಭಾವಿಸಿ, ಗುರುಸ್ಥಾನವನ್ನಿತ್ತು ಪೂಜಿಸಿದುದರಿಂದ ಇರಬಹುದು. ಇಂತಹ ಧಾರ್ಮಿಕಚರಿತ್ರೆಯನ್ನು ಕಾದಂಬರಿ ರೂಪದಲ್ಲಿ ನಿರೂಪಿಸುವುದರಿಂದ ಸಾಮಾನ್ಯಜನತೆಗೆ ಸಾಹಿತ್ಯವೂ, ಧರ್ಮಕ್ಕೆ ಸಂಬಂಧಪಟ್ಟ ವಿವರಗಳೂ, ಚರಿತ್ರೆಯೂ ಒಟ್ಟಿಗೇ ಹತ್ತಿರವಾಗುವುವು.

'ಕರ್ಮಯೋಗಿ' ಸಿದ್ಧರಾಮನನ್ನು ಕುರಿತಾದ ಕಾದಂಬರಿ ರೂಪದಲ್ಲಿರುವ ಒಂದು ವ್ಯಕ್ತಿ ಚಿತ್ರ. ಕೃತಿಕಾರರು ಮುನ್ನುಡಿಯಲ್ಲಿ 'ಇದು ಕಾದಂಬರಿ ರೂಪಕ್ಕಿಂತ ಕೊಂಚ ಭಿನ್ನವಾಗಿರುವುದರಿಂದ ಇದನ್ನು ಒಂದು ಭಾವಚಿತ್ರ' ಎಂದು ಕರೆದಿದ್ದಾರೆ. ಕಾದಂಬರಿಯಲ್ಲವೆಂದರೂ ಸೊಗಸಾದ ಕಥಾನಿರೂಪಣೆಯಿದೆ. ಆದರೆ ಕಾದಂಬರಿಯ ನೇರವಾದ ಓಟವನ್ನು ತಪ್ಪಿಸಿ, ಕಥಾನಕಗಳನ್ನು ಬಳಸಿಕೊಂಡು, ಸಿದ್ಧರಾಮನ ವ್ಯಕ್ತಿತ್ವವನ್ನೇ ಕೇಂದ್ರವನ್ನಾಗಿರಿಸಿಕೊಂಡಿರುವ ಈ ಕೃತಿ ದೃಷ್ಟಿಯಿಂದ ವಿಶಿಷ್ಟವಾಗಿದೆ. ರಾಘವಾಂಕ ನಿರೂಪಿಸಿದ ಸಿದ್ಧರಾಮನ ಸತ್ವಶಾಲಿಯಾದ ಪಾತ್ರಕ್ಕೆ ಮುಗ್ಧರಾಗಿರುವ ಕೃತಿಕಾರರು ಅವನ ಪಾತ್ರಕ್ಕೆ ಅನವಶ್ಯವಾಗಿ ಅಂಟಿಕೊಂಡಿರುವ ಪೌರಾಣಿಕ ತೊಡವುಗಳನ್ನು ಕಳಚಿಹಾಕುವ ಪ್ರಯತ್ನದ ಮೂಲಕ ನವೀನತೆಯನ್ನು ಸಾಧಿಸಿದ್ದಾರೆ. ಶಿವಭಕ್ತಿಗಾಗಿ ಕರ್ಮಯೋಗಿಯಾದ ಸಿದ್ಧರಾಮನಲ್ಲಿ ಶ್ರಮದಾನ, ಸ್ವಯಂಸೇವಕತ್ವಗಳಂತಹ ತತ್ವಗಳನ್ನು ದರ್ಶಿಸಿರುವ ಇವರ ನವೀನದೃಷ್ಟಿ ಈ ಕೃತಿಯ ವಿಶಿಷ್ಟತೆಗೆ ಮತ್ತೊಂದು ಕಾರಣವಾಗಿದೆ. ಸಿದ್ಧರಾಮನ ವ್ಯಕ್ತಿತ್ವಕ್ಕೆ ಅಂಟಿಕೊಂಡಿರುವ ಪೌರಾಣಿಕತೆಯನ್ನು ಮೀರಿ ಅವನ ವ್ಯಕ್ತಿಸ್ವರೂಪಕ್ಕೆ ಪ್ರಾಶಸ್ತ್ಯಕೊಟ್ಟಿರುವುದು ಗಮನಾರ್ಹವಾಗಿದೆ. ಕೆಲವು ಮುಖ್ಯ ಘಟನೆಗಳನ್ನು ಹೃದಯಂಗಮವಾದ ದೃಶ್ಯಗಳ ಮೂಲಕ ಚಿತ್ರಿಸಿರುವುದು ಕೃತಿಯ ಪರಿಣಾಮಕಾರಿತೆಯನ್ನು ಹೆಚ್ಚಿಸಿದೆ ಕೃತಿಯ ಉದ್ದಕ್ಕೂ ಸುಲಲಿತವಾಗಿ ಸಾಗಿರುವ ಭಾಷೆಯ ಭಾವುಕ ಸೌಂದರ್ಯ ಸಿದ್ಧರಾಮನ ವ್ಯಕ್ತಿ ಚಿತ್ರಣಕ್ಕೆ ಕಳೆಗೊಟ್ಟಿದೆ.

ಸಿದ್ಧರಾಮನ ಜನನದಿಂದ ಕೃತಿ ಮೊದಲಾಗುತ್ತದೆ. ಅದರೊಂದಿಗೇ ಬಂದಿರುವ ಸೂರ್ಯೋದಯದ ವರ್ಣನೆ ಸಿದ್ಧರಾಮನ ಜನನದ ಮಹತ್ತಿಗೆ ಸೂಕ್ತ ಹಿನ್ನೆಲೆಯಾಗಿವೆ. ಸುಗ್ಗವ್ವೆಯ ಕನಸು, ಶಿಶುವಿನ ವರ್ತನೆ, ಸಿದ್ಧರಾಮ ಅವತಾರಪುರುಷನೆನ್ನುವುದನ್ನೇ ಸೂಚಿಸುವಂತೆಯೂ, ಜೊತೆಗೇ ಬರುವ ಕೆಲವು ಹೆಂಗಸರ ಸಂಭಾಷಣೆ ಮತ್ತು ಮುದ್ದಗೌಡನ ಹೇಳಿಕೆ ಅದನ್ನು ಕೇವಲ ಭ್ರಮೆಯೆಂದು ಕರೆಯುವಂತೆಯೂ ಇವೆ. ಕಥೆಯನ್ನು ಪೌರಾಣಿಕತೆಯಿಂದ ಬೇರ್ಪಡಿಸುವ ಪ್ರಯತ್ನ ಸ್ವಾಗತಾರ್ಹವಾಗಿದೆ. ಮುಗ್ಧಗಾಂಭೀರ್ಯದ ನಿಧಿಯಾಗಿ ಬೆಳೆದ ಸಿದ್ಧರಾಮ ಕೊನೆಗೆ ಮಲ್ಲಯ್ಯನ ಮಾರ್ಗದರ್ಶನದಿಂದ ಕರ್ಮಯೋಗಿಯಾಗಿ ಧೀಮಂತ ಸಂನ್ಯಾಸಿಯಾಗುತ್ತಾನೆ. ಈ

ಎರಡೂ ಘಟ್ಟಗಳ ನಡುವೆ ಮನೋಜ್ಞವಾದ ಸನ್ನಿವೇಶಗಳೂ ದೃಶ್ಯಗಳೂ ರೂಪುಪಡೆದಿವೆ. ಮುಗ್ಧರಾಮ ಸಿದ್ಧರಾಮನಾಗುವ ಹಿನ್ನೆಲೆ ಪೌರಾಣಿಕವಾಗಿದ್ದರೂ ಸೊಗಸಾದ ನಿರೂಪಣೆಯನ್ನು ಪಡೆದಿದೆ. ಮಾತೇ ಆಡದ ಮೌನಿ ಸಿದ್ಧರಾಮ ಅನುಭಾವಸಿದ್ಧಿಯನ್ನು ಪಡೆದು ಈಗ ಶರಣರನ್ನು ತನ್ನತ್ತ ಸೆಳೆಯಬಲ್ಲ ಒಂದು ಅಗಾಧಶಕ್ತಿಯಾಗಿದ್ದಾನೆ. ಕಾಯಕವನ್ನೇ ಯೋಗವನ್ನಾಗಿಸಿಕೊಂಡು, ಲೋಕಹಿತಸಾಧನೆಯನ್ನೇ ಗುರಿಯಾಗಿಸಿಕೊಂಡು ಪ್ರಾಣಿಗಳು, ಮನುಷ್ಯರು, ಸಂಸಾರಿಗಳು, ವಿರಕ್ತರು ಎಂದು ಭೇದಭಾವ ತೋರಿಸದೆ ಎಲ್ಲರ ಬಗ್ಗೆ ಒಂದೇ ಸಮನಾದ ದಯಾದೃಷ್ಟಿಯನ್ನಿರಿಸಿಕೊಂಡು ಉನ್ನತ ವ್ಯಕ್ತಿಯಾಗಿದ್ದಾನೆ. ವಾತ್ಸಲ್ಯಮಯ ಗುರುವಾದರೂ ನ್ಯಾಯನಿಷ್ಠುರತೆಯ ಮೂರ್ತಿಯೂ ಆಗಿದ್ದಾನೆ. 'ತನ್ನ ಮಗನೂ ಸಂಸಾರಿಯಾಗಿದ್ದರೆ'—ಎಂದು ಬಯಸುವ ಸುಗ್ಗವ್ವೆಯೂ ಕೂಡ 'ಸಂನ್ಯಾಸಿಯಾದರೇನಂತೆ? ನೂರಾರು ಜನ ಪೂಜಿಸುತ್ತಾರೆ. ಈ ಪುಣ್ಯ ಯಾರಿಗುಂಟು?'—ಎಂದು ಸಮಾಧಾನ ಹೊಂದುವ ಮುನ್ನ ಆಗಲಿಹೋದ ಮಗನನ್ನು ನೆನೆದು ಹಂಬಲಿಸುವ ದೃಶ್ಯ ಹೃದಯಂಗಮವಾಗಿದೆ. ಈಗ ಮಾತೆಯ ಕಣ್ಣಲ್ಲಿ ಮಹಾವ್ಯಕ್ತಿಯಾಗಿದ್ದಾನೆ ಸಿದ್ಧರಾಮ. ಕುಟಿಲಸಿದ್ಧನ ಕುಹಕಗಳಿಂದ ಸಿದ್ಧರಾಮನೂ ಪವಾಡಗಳನ್ನು ಮೆರೆಯಬೇಕಾದ ಪ್ರಸಂಗ ಸ್ವಾರಸ್ಯಕರವಾಗಿ ನಿರೂಪಿತವಾಗಿದೆ. ಕೃತಿಯ ಅಂತ್ಯ ರೋಮಾಂಚಕಾರಿಯಾಗಿದೆ. ಅಲ್ಲಮನ ಬಗೆಗೆ ಸಿದ್ಧರಾಮನ ಭಾವನೆಗಳು ಅಮೂಲ್ಯವಾದವು. ಹೆಸರಿಗೆ ತಕ್ಕಂತೆ ಎಂತಹ ಸನ್ನಿವೇಶಕ್ಕೂ ಸಿದ್ಧಮನದವನು. ಅಲ್ಲಮನ ಪರಿಯನ್ನು ತಿಳಿಯುವ ಅವನ ಬಗೆ ವಿಶಿಷ್ಟವಾದದ್ದು. ಇಷ್ಟೊಂದು ವಾತ್ಸಲ್ಯಮಯವಾಗಿ ನಿರೂಪಿತವಾಗಿರುವ ಈ ಗುರುಶಿಷ್ಯ ಸಂಬಂಧವು ಮುಂದಿನ ಕವಿ ಕಥಾಪರಂಪರೆಗಳಲ್ಲಿ ನಿಷ್ಠುರವಾದೊಂದು ರೂಪವನ್ನು ತಾಳಲು ಹೇಗೆ ಸಾಧ್ಯವಾಯಿತೆಂಬುದು ಆಶ್ಚರ್ಯಕರ ಸಂಗತಿ. ಅಲ್ಲಮನ ಪಾತ್ರವನ್ನು ಉಜ್ವಲಗೊಳಿಸುವ ಉದ್ದೇಶದಿಂದ ಹಾಗಾಗಿರಬಹುದೆನ್ನಿಸುತ್ತದೆ. ಒಟ್ಟಿನಲ್ಲಿ ಸಿದ್ಧರಾಮ ಮುಗ್ಧಬಾಲಕನಂತೆ, ವಿಧೇಯ ಶಿಷ್ಯನಂತೆ, ಮಲ್ಲಯ್ಯನ ಅನನ್ಯ ಶರಣನಾಗಿ ಕೃತಿಯುದ್ದಕ್ಕೂ ಬೆಳೆದು ನಿಂತಿದ್ದಾನೆ.

ಸುಗ್ಗವ್ವೆ, ಕಲ್ಲಯ್ಯ, ಚೆನ್ನವ್ವ, ಸಂಗಯ್ಯ, ಬಿಲ್ಲೇಶ ಬೊಮ್ಮಯ್ಯ, ಅಲ್ಲಮ—ಈ ಪಾತ್ರಗಳು ಸಿದ್ಧರಾಮನ ಪಾತ್ರಪೋಷಣೆಗಾಗಿಯೇ ರಚಿತವಾಗಿದ್ದರೂ ತಮ್ಮದೇ ಆದ ಸ್ವಂತಿಕೆಗಳಿಂದ ಆಪ್ಯಾಯಮಾನವಾಗಿವೆ. ಕೃತಿಯ ಕೊನೆಯಲ್ಲಿ ಮಿಂಚಿನಂತೆ ಹೊಳೆದು ಮಾಯವಾಗುವ ಅಲ್ಲಮನ ಪಾತ್ರ ಪ್ರಭಾವಶಾಲಿಯಾಗಿದೆ. ಸುಗ್ಗವ್ವೆಯ ಮಾತೃಹೃದಯದ ತಳಮಳ, ಆತಂಕಗಳ, ಕೊನೆಗಾಲದ ತೃಪ್ತಿ—ಸಮಾಧಾನಗಳ ವರ್ಣನೆ ನೈಜತೆಯಿಂದ ಕೂಡಿದೆ. ಕಲ್ಲಯ್ಯ, ಸಂಗಯ್ಯ, ಚೆನ್ನವ್ವ–ಸಿದ್ಧರಾಮನ ಶಿಷ್ಯರ ಪ್ರತಿನಿಧಿಗಳು, ಅವನ ಭೂತದಯೆಯ ಸವಿಯುಂಡು ಸನ್ಮಾರ್ಗಿಗಳಾದವರು. ಬಿಲ್ಲೇಶ ಬೊಮ್ಮಯ್ಯನದೊಂದು ಅಪೂರ್ವ ಚಿತ್ರ. ಕೆಟ್ಟಮೇಲಾದರೂ ಬುದ್ಧಿ ತಂದುಕೊಂಡು ಪಶ್ಚಾತ್ತಾಪದಲ್ಲಿ ಮಿಂದು ಕಳೆದುಹೋದ ಗುರುಕರುಣೆಯನ್ನು ಸತ್ತಮೇಲೆಯೂ ನರಕ

ದಲ್ಲಿ ದೊರಕಿಸಿಕೊಳ್ಳುವ ವಿಶಿಷ್ಟ ಪಾತ್ರ ಇವನದು. ಇವನ ಮಾನಸಿಕ ಹೋರಾಟ ವನ್ನು ನಿರೂಪಿಸುವಲ್ಲಿ ಕೃತಿಕಾರರು ಯಶಸ್ವಿಯಾಗಿದ್ದಾರೆ.

ಸರಳವಾದ ಲಾಲಿತ್ಯಮಯ ಭಾಷೆಯ ಮೂಲಕ, ರಸಮಯವಾದ ಸನ್ನಿವೇಶಗಳ ಮೂಲಕ, ನಯವಾದ ಶೈಲಿಯಲ್ಲಿ ಭಾವನೆಗಳಿಗೆ ಮೀರಿದ ಒಂದು ಅಲೌಕಿಕ ಸೌಂದರ್ಯವನ್ನು ಕೃತಿಗೆ ತಂದುಕೊಟ್ಟಿದ್ದಾರೆ ಕೃತಿಕಾರರು. 'ಇರುಳು ತನ್ನ ಸಾವಿರ ಚಿಕ್ಕೆಯ ಹೆಡೆಯನ್ನು ತೆರೆದು ನಿಂತಿತು', 'ವಾಸ್ತವದ ಲೋಕ ಬೆಳುದಿಂಗಳ ಮಾಯೆಗೆ ಸಂದು ಅವಾಸ್ತವವಾಯಿತು'–ಇಂತಹ ವರ್ಣನೆಗಳು ನವೀನತೆಯೊಂದಿಗೆ ಚೇತೋಹಾರಿ ಯಾಗಿದ್ದು ಕೃತಿಕಾರರ ಕವಿಹೃದಯವನ್ನು ತೋರಿಸುತ್ತವೆ. ಇವುಗಳ ಕಾವ್ಯಮಯ ಭಾಷೆ ಕೃತಿಯ ಸೊಗಸನ್ನು ಹೆಚ್ಚಿಸಿದೆ. ಒಟ್ಟಿನಲ್ಲಿ 'ಕರ್ಮಯೋಗಿ' ಚಿಕ್ಕದಾದರೂ ಚೊಕ್ಕವಾದ ಕೃತಿ.

---

## ಜಿ. ಎಚ್. ನಾಯಕ

# ಮಾಸ್ಕೋದಲ್ಲಿ ಇಪ್ಪತ್ತೆರಡು ದಿನ

---

"ನಿಮ್ಮ ರಷ್ಯಾ ಪ್ರವಾಸದ—'ಮಾಸ್ಕೋದಲ್ಲಿ ಇಪ್ಪತ್ತೆರಡು ದಿನ'—ಗ್ರಂಥ ಓದಿದೆ. ಸೊಗಸಾದ ಗದ್ಯದಲ್ಲಿ ಮಿತ ಕಾಲಾವಧಿಯ ಅನುಭವಗಳನ್ನು ಯಾವ ವಿಧವಾದ ಸುಳ್ಳು ನಿಲುವುಗಳನ್ನೂ ಆರೋಪಿಸಿಕೊಳ್ಳದೆ ತಕ್ಕ ಕುತೂಹಲ ಮತ್ತು ಶ್ರದ್ಧೆಯಿಂದ ಸ್ವೀಕರಿಸಿ, ಒಂದು ಕ್ರಮ ಮತ್ತು ತಿಳುವಳಿಕೆಯಿಂದ ಪರಿಷ್ಕರಿಸಿ ಕೊಟ್ಟಿದ್ದೀರಿ. ಚೆನ್ನಾಗಿ ಓದಿಸಿಕೊಳ್ಳುತ್ತದೆ. ನಾನು ಒಂದೇ ರಾತ್ರಿ ಕೈಗೆತ್ತಿಕೊಂಡವನು ಓದಿ ಮುಗಿಸಿಯೇ ಮಲಗಿಕೊಂಡೆ. ನಿಮ್ಮಂಥವರಿಗೆ ಇನ್ನೂ ಹೆಚ್ಚು ಕಾಲದ ಅವಕಾಶವಾಗಿದ್ದಿದ್ದರೆ ಎಷ್ಟು ಸೊಗಸಾಗಿರುತ್ತಿತ್ತು, ಪ್ರಯೋಜನಕಾರಿಯಾಗಿರುತ್ತಿತ್ತು ಎಂದೆಲ್ಲಾ ಅನಿಸಿತು. ನಿಮ್ಮಂಥವರಿಗೆ ಇದಕ್ಕೂ ಹೆಚ್ಚಿನ ಸದವಕಾಶಗಳು ಒದಗಿಬರುತ್ತಿರಲೆಂದು ಹೃತ್ಪೂರ್ವಕವಾಗಿ ಹಾರೈಸುವವರಲ್ಲಿ ನಾನೊಬ್ಬ. ಅದರಿಂದ ವೈಯಕ್ತಿಕವಾಗಿ ನಿಮಗೆ ಆಗಬಹುದಾದ ಪ್ರಯೋಜನಕ್ಕಿಂತ ಮುಖ್ಯವಾಗಿ ನಾಡಿಗೆ ಪ್ರಯೋಜನ ಖಂಡಿತ ಉಂಟು."*

---

* ಡಾ॥ ಜಿ.ಎಸ್.ಎಸ್. ಅವರಿಗೆ ಶ್ರೀ ಜಿ. ಎಚ್. ನಾಯಕರು ಆಗಸ್ಟ್ ೩, ೧೯೬೩ರಂದು ಬರೆದ ಪತ್ರದಿಂದ ಸ್ವೀಕೃತ.

ಸಿ. ವೀರಣ್ಣ

# ಮಾಸ್ಕೋದಲ್ಲಿ ಇಪ್ಪತ್ತೆರಡು ದಿನ

'ಪ್ರವಾಸ ಸಾಹಿತ್ಯ' ಕನ್ನಡದಲ್ಲಿ ಒಂದು ಪ್ರಕಾರವಾಗಿ ಬೆಳೆದುಬಂದಿರುವುದು ಇತ್ತೀಚೆಗೆ. ಅದರಲ್ಲೂ ಗಮನಾರ್ಹವಾದಂತಹ ಕೃತಿಗಳು ಬೆರಳೆಣಿಸುವಷ್ಟು. ವಿದೇಶವನ್ನು ನೋಡಲು ಹೊರಟ ಪ್ರವಾಸಿಯೊಬ್ಬನಿಗೆ ಆ ದೇಶ, ಅಲ್ಲಿನ ಪ್ರಗತಿ, ಸಂಪತ್ತುಗಳು ಕಣ್ಣಿಗೆ ತಟ್ಟಿ, ಇದಕ್ಕಿಂತ ಬೇರೆ ಸ್ವರ್ಗವಿಲ್ಲವೆಂದು ಭಾವಿಸಿ,ಅದನ್ನೇ ಸ್ಥಾಯಿಯಾಗಿಟ್ಟು ಕೊಂಡು ವರ್ಣಿಸುತ್ತಾ ಹೋಗುವುದು ಒಂದು ಮುಖವಾದರೆ, ಎಲ್ಲವನ್ನೂ ನಾಶದ ಸಂಕೇತವೆಂದೂ, ಸಂಸ್ಕೃತಿಯ ಪತನವೆಂದೂ ಅಳುತ್ತಾ ಈಗ ನಾವಿರುವ ಸ್ಥಿತಿಯೇ ಆದರ್ಶದ್ದೆಂದು ನಂಬುವುದು ಇನ್ನೊಂದು ಮುಖವಾಗುತ್ತದೆ. ಈ ಎರಡೂ ಅತಿಗಳಿಗೆ ಸಿಕ್ಕಿಹಾಕಿಕೊಳ್ಳದೆ, ಯಾವ ಪೂರ್ವಗ್ರಹಿಕೆಯೂ ಇಲ್ಲದೆ, ತಾವು ಕಂಡದ್ದನ್ನು, ತಮಗೆ ಉಂಟಾದ ಅನುಭವಗಳನ್ನು 'ವಸ್ತುನಿಷ್ಠ'ವಾಗಿ—ಇಷ್ಟವಾದುದನ್ನು ಮೆಚ್ಚಿ, ಕಷ್ಟ ವಾದುದನ್ನು ಗಮನಿಸಿ ಹೇಳಬಲ್ಲ ದಾರಿಯಲ್ಲಿ ಸಾಗುವ ಬರೆಹಗಾರರು ಇಲ್ಲವೆನ್ನುವಷ್ಟು ಅಲ್ಪಸಂಖ್ಯಾತರು. ಈ ಬಗೆಯ ನಿಷ್ಠಾವಂತ ಮನೋಭಾವ ಪ್ರವಾಸ ಸಾಹಿತ್ಯ ರಚಿಸುವವರಿಗೆ ಬರಬೇಕಾದರೆ, ಅವರು ಕೆಲವು ಅನುಕೂಲಗಳಿಂದ ವಂಚಿತರಾಗಬಾರದು. ಎಲ್ಲಕ್ಕೂ ಮೊದಲು, ಪ್ರವಾಸ ಹೊರಟ ವ್ಯಕ್ತಿಯು ತಾನು ನೋಡಿದ ಜಗತ್ತನ್ನು ಆಳಕ್ಕಿಳಿದು ಅರ್ಥ ಮಾಡಿಕೊಳ್ಳಲು ಬೇಕಾದ ಚಾರಿತ್ರಿಕ ಪ್ರಜ್ಞೆ ಮತ್ತು ಅದನ್ನು ವಿವರಿಸಲು ಬೇಕಾದ ಸಂವೇದನಾಶೀಲ ಅಭಿವ್ಯಕ್ತಿ—ಇವುಗಳನ್ನು ಹೊಂದಿರಬೇಕು. ಇವಿಲ್ಲದೆ ಯಾರೂ ನಾವು ನಿರೀಕ್ಷಿಸಿದಂತೆ ಬರೆಯಲು ಆಗುವುದಿಲ್ಲ. ಇವಲ್ಲದೆ ಈ ಬಗೆಯ ಬರವಣಿಗೆ ಕೇವಲ ಸಾಹಿತ್ಯವಾಗಿರದೆ, ಆ ಜನಾಂಗದ ಅಭಿವೃದ್ಧಿ ಸಂಸ್ಕೃತಿಗಳ ಅಳತೆ ಗೋಲೂ ಆಗುವುದರಿಂದ, ಅದಕ್ಕೆ ಹಿನ್ನೆಲೆಯಾಗಿರಬೇಕಾದ ಆ ಜನತೆಯ ಜೀವನ ವ್ಯವಸ್ಥೆ ಅರಿವು, ಭಾಷೆಯ ಮೂಲಕ ಕಾಣಬರುವ ಬದುಕು, ಅವರೊಂದಿಗೆ ಸಾಕಷ್ಟು ಕಾಲ ಬದುಕುವ ಅವಕಾಶ ಇವುಗಳೆಲ್ಲ ಇರಬೇಕಾಗುತ್ತದೆ. ಇವುಗಳಲ್ಲಿ ಯಾವುದೊಂದು ಕಡಿಮೆ ಯಾದರೂ ನಾವು ಆ ಜನತೆಯ ಜೀವನದ ಬಗ್ಗೆ ತೆಗೆದುಕೊಳ್ಳಬಹುದಾದ ತೀರ್ಮಾನ ಗಳು ಅವುಗಳನ್ನು ಹೇಳಿದ ವ್ಯಕ್ತಿಯ ಆಲೋಚನೆಯ ಇತಿಮಿತಿಗಳನ್ನು ಮಾತ್ರ ತಿಳಿಸು ತ್ತವೆ. ಈ ಹಿನ್ನೆಲೆಯಲ್ಲಿ "ಮಾಸ್ಕೋದಲ್ಲಿ ಇಪ್ಪತ್ತೆರಡು ದಿನ" ಕೃತಿಯನ್ನು ಗಮನಿಸು ವುದು ಹೆಚ್ಚು ಉಪಯುಕ್ತ.

ಮನೋಧರ್ಮದಲ್ಲಿ ಕವಿಗಳಾದ ಜಿ.ಎಸ್.ಎಸ್. ಅವರು ಭಾರತ ಸೋವಿಯೆತ್ ಸಾಂಸ್ಕೃತಿಕ ವಿನಿಮಯ ಯೋಜನೆಯ ಮೂಲಕ ಇಪ್ಪತ್ತೆರಡು ದಿನಗಳ ಕಾಲ ಮಾಸ್ಕೋಗೆ ಸಂದರ್ಶಕ ಪ್ರಾಧ್ಯಾಪಕರಾಗಿ ಹೋಗಿದ್ದ ಪ್ರವಾಸಾನುಭವ ಇಲ್ಲಿದೆ. ಆಯಾ ದಿನದ ಅನುಭವಗಳನ್ನು ದಿನನಿತ್ಯ ಬರೆದ ದಿನಚರಿಯ ರೂಪದಲ್ಲಿ ಕೊಡುವಾಗಲೂ ಆ ದಿನಗಳ ಹಿಂದಿನ ಮುಂದಿನ ಆಲೋಚನೆಗಳೂ ಇಲ್ಲಿ ನುಸುಳಿರುವುದಕ್ಕೆ ಕಾರಣ, ಟಿಪ್ಪಣಿಗಳನ್ನು ಬರೆಹರೂಪಕ್ಕೆ ಒಂದೇ ಬಾರಿಗೆ ಇಳಿಸಿದ್ದಿರಬಹುದು.

ತಮ್ಮ ಪ್ರವಾಸದ ಅನುಭವಗಳಿಗೆ, ಅವುಗಳಿಂದ ತಾವು ಕೊಡುತ್ತಿರುವ ತೀರ್ಮಾನಗಳಿಗೆ ಇರುವ ಮಿತಿಯನ್ನು 'ಎರಡು ಮಾತು'ನಲ್ಲಿ ಮೊದಲೇ ಸ್ಪಷ್ಟ ಮಾಡಿದ್ದಾರೆ. ಈ ಅಲ್ಪಕಾಲದಲ್ಲಿ ದೇಶ, ಭಾಷೆಗಳ ತೊಂದರೆಗಳಿರುವಾಗ, ಒಬ್ಬಿಬ್ಬರೊಂದಿಗೆ ವ್ಯವಹರಿಸಿದ, ತರ್ಕಿಸಿದ, ಅವರ ಅನಿಸಿಕೆಗಳನ್ನು ಅನುಭವಗಳೆಂದು ಗಂಭೀರವಾಗಿ ಭಾವಿಸುವುದು ತಪ್ಪಾದೀತೆಂಬ ಆರೋಗ್ಯಕರ ಶಂಕೆ ಇದೆ. ರಷ್ಯಾವನ್ನು ನೋಡಿದ್ದರಿಂದ ತಮಗಾದ ಲಾಭವನ್ನು ಹೇಳುವಾಗ, ರಷ್ಯಾವನ್ನು ಕುರಿತ ತಪ್ಪು ಕಲ್ಪನೆಗಳು ದೂರವಾಗಿ, ಆ ರಾಷ್ಟ್ರದ ಸಾಧನೆಯೊಂದಿಗೆ ನಮ್ಮದನ್ನು ಹೋಲಿಸಿಯೇ ಮಾತನಾಡುವುದರಿಂದ, ಆಗ ಅವರಿಗುಂಟಾದ ವಿಷಾದ ನಾಚಿಕೆಗಳೂ ವ್ಯಕ್ತವಾಗುತ್ತವೆ. ಈ ಬಗೆಯ ಮನತೆರೆದು ಮಾತನಾಡುವ ಜಾಯಮಾನ ಅವರ ಈ ಬರೆಹದ ತುಂಬೆಲ್ಲಾ ಆವರಿಸಿರುವುದನ್ನು ಕಾಣಬಹುದು.

ಪ್ರವಾಸದ ಆರಂಭಕ್ಕೆ ಉಂಟಾದ ಅಡೆತಡೆಗಳನ್ನು 'ಮುಚ್ಚುವ ಬಿಚ್ಚುವ ಕಿಟಕಿ' 'ಮಾಸ್ಕೋಗೆ ಕಳುಹಿಸಬೇಡಿ' ಈ ಭಾಗಗಳಲ್ಲಿ ಪ್ರಸ್ತಾಪಿಸುವಾಗಲೂ ಸಹ ಸಂಯಮದ ಬರೆಹವಿದೆ. ಮಾಸ್ಕೋಗೆ ತಲುಪಿದ ಮೇಲೆ, ಆ ನಗರದ ಸಾರಿಗೆ ವ್ಯವಸ್ಥೆ, ಅದು ಅತಿ ಸುಲಭವಾಗಿ ಜನತೆಗೊದಗಿಸಿರುವ ಸೌಲಭ್ಯ, ನಮ್ಮ ನಗರ ಜೀವನಕ್ಕಿಂತ ಭಿನ್ನವಾಗಿ ನೂಕುನುಗ್ಗಲಿನಿಂದ ದೂರವಿರುವ ಆ ಮಹಾನಗರದ ಬದುಕಿನ ವಿವರಗಳು ಕಣ್ಣಿಗೆ ಕಟ್ಟುತ್ತವೆ. ಮಾಸ್ಕೋ ವಿಶ್ವವಿದ್ಯಾಲಯ, ಅದರ ಭವ್ಯ ಸ್ವರೂಪ, ಅಲ್ಲಿಯೇ ವಾಸಿಸುವ ಗುರು-ಶಿಷ್ಯ ವರ್ಗ, ಇವಿಷ್ಟೇ ಅಲ್ಲದೆ ಅಲ್ಲಿನ ಸಸ್ಯ ಸಮೃದ್ಧತೆ ಕಣ್ಣನ್ನು ಸೆಳೆದಿದೆ.

ಸರ್ಕಾರ ಜನತೆಗೆ ಮಾಡಿಕೊಟ್ಟಿರುವ ಅನುಕೂಲಗಳ ವಿಧಾನಗಳನ್ನು ಕುರಿತು ಗಮನಿಸುತ್ತಾರೆ. ಜನತೆಯ ಅವಶ್ಯಕತೆಗೆ ತಕ್ಕಂತೆ ವಾಸಗೃಹವೇ ಹೊರತು ಅಧಿಕಾರಕ್ಕೆ ತಕ್ಕಂತಲ್ಲ. ನಿರುದ್ಯೋಗದ, ಮುದಿತನದಲ್ಲಿ ಅನಾಥರಾಗುವ ಭಯಗಳಿಲ್ಲ. ಮಕ್ಕಳ ಪಾಲನೆಯನ್ನು ಸರ್ಕಾರವೇ ಹೊತ್ತಿದೆ. ಹೆಂಗಸರಂತೂ ದುಡಿಯುವುದರಲ್ಲಿ ತಮ್ಮದೇ ಮೇಲುಗೈಯಾಗಿರಿಸಿಕೊಂಡಿದ್ದಾರೆ. ರಷ್ಯಾದಲ್ಲಿ ಸ್ತ್ರೀ ದೈನ್ಯತೆಯಿಂದ ಬಿಡುಗಡೆ ಪಡೆದಿದ್ದಾಳೆ—ಇವೆಲ್ಲದರ ಬಗ್ಗೆ ಮೆಚ್ಚುಗೆ ಸಂತೋಷಗಳನ್ನು ವ್ಯಕ್ತಪಡಿಸಿದ್ದಾರೆ.

ಇಷ್ಟೆಲ್ಲ ಉತ್ತಮಾಂಶಗಳನ್ನು ಕಂಡವರಿಗೆ ಜನ ಮಾತನಾಡುವುದು ಕಡಿಮೆ, ನಾಳೆಗೆಂತೋ ಎನ್ನುವ ಚಿಂತೆ ಇಲ್ಲದ ಬದುಕಿನಿಂದ ಗೆಲವು ಕಳೆದುಕೊಂಡಿರಬಹುದೇ ಎಂಬ ಸಂಶಯಬಂದಿದೆ. ಈ ಜನ ಬದುಕುತ್ತಿರುವುದೇ ಹೀಗೆಯೋ ತಿಳಿಯದೆನ್ನುವ ಆಶ್ಚರ್ಯವಿದೆ. ಅವರವರ ಶ್ರಮದ ಗಳಿಕೆಯನ್ನು ಯಾವ ಯಾವ ಮಾರ್ಗಗಳಲ್ಲಿ ಕೂಡಿ

ಹಾಕಿಕೊಳ್ಳಬೇಕೆಂಬ ಅವಕಾಶಗಳಿರುವ ಕಡೆ ಬರೀ ಮಾತು ಹೆಚ್ಚು. ಇಲ್ಲದ ಭಾವನೆಗಳನ್ನು ತೋರಿಸಿ ಆಟವಾಡಬೇಕಾಗುತ್ತದೆ. ಅದು ಅಲ್ಲಿಲ್ಲ ಅಷ್ಟೆ! ಉಪಯೋಗಿಕ ದೃಷ್ಟಿ ಪ್ರಧಾನವಾದ ಬದುಕಿನಲ್ಲಿ ಜಾಹೀರಾತುಗಳ ಗದ್ದಲವಿಲ್ಲದೆ ಬದುಕಿದ್ದಾರೆ, ವರ್ಣೀಯರನ್ನು ಕಡೆಗಣಿಸಿಲ್ಲ—ಇವು ಗಮನ ಸೆಳೆದಿವೆ.

ಮುಂದಿನ ಭಾಗದಲ್ಲಿ ರಷ್ಯನ್ ವಿದ್ಯಾಭ್ಯಾಸ ಪದ್ಧತಿಯನ್ನು ವಿವರಿಸಿ, ವಿದ್ಯಾರ್ಥಿಗಳ ಅಶಿಸ್ತನ್ನೇ ಕಾಣದಿರುವ ವಿಶ್ವವಿದ್ಯಾಲಯಗಳ ಶುಭ್ರ ವಾತಾವರಣದ ಚಿತ್ರವಿದೆ. ತಮ್ಮ ಇತಿಹಾಸದ ಬಗ್ಗೆ ಆ ಜನ ತಳೆದಿರುವ ಅಭಿಮಾನ. ಆ ಇತಿಹಾಸದಿಂದ ಜನ ಕಲಿಯಬೇಕಾದದ್ದಿದೆ ಎಂಬುದರ ಬಗ್ಗೆ ಮೆಚ್ಚುಗೆಯ ಮಾತುಗಳಿವೆ. ಮಾಸ್ಕೋ ನಗರದ ಐತಿಹಾಸಿಕ ಮಹತ್ವ, ಅದರ ಸುಭದ್ರತೆಗಾಗಿ ವಹಿಸಿರುವ ಎಚ್ಚರ, ಅಲ್ಲಿನ ರಸ್ತೆಗಳ ಇಕ್ಕೆಲಗಳಲ್ಲಿ ಬೆಳೆಸಿರುವ ಸಸ್ಯಸಂಪತ್ತು. ಇವುಗಳ ವರ್ಣನೆ ಮಾಡಿ, ಮರಗಿಡಗಳು ಮನುಷ್ಯನ ದೈಹಿಕ ಮಾನಸಿಕ ಆರೋಗ್ಯಕ್ಕೆ ಎಷ್ಟು ಮುಖ್ಯ ಎನ್ನುವುದನ್ನು ಈ ಜನ ಕಂಡುಕೊಂಡಂತೆ ಇನ್ನಾರೂ ಕಂಡುಕೊಂಡಿರಲಾರರು ಎಂದು ಪ್ರಶಂಸಿಸಿದ್ದಾರೆ. ಲೆನಿನ್ ಶವಾಲಯದ ಬಗ್ಗೆ ಈ ಜನಕ್ಕಿರುವ ಗೌರವವನ್ನು, ಧರ್ಮದಿಂದ ದೂರಾದ ಜನ ಲೆನಿನ್ನನ್ನೇ ದೇವರನ್ನಾಗಿಸಿಬಿಟ್ಟಂತೆ ಕಾಣುತ್ತದೆ ಎಂದು, ಹಳೆಯದನ್ನು ಹೊಸ ದೇವರು ಬಂದು ತುಂಬಿರಬೇಕು ಎಂದು ವಿಶ್ಲೇಷಿಸುತ್ತಾರೆ.

ಲೆನಿನ್ ಮತ್ತು ಕ್ರಾಂತಿಯ ಮ್ಯೂಸಿಯಂಗಳು, ಈ ಒಂದು ಹೊಸ ವ್ಯವಸ್ಥೆಯನ್ನು ತರಬೇಕಾದರೆ ತಮ್ಮ ಹಿಂದಿನ ಜನಾಂಗ ಯಾವ ಅಗ್ನಿಕುಂಡಗಳನ್ನು ಹಾಯಬೇಕಾಯಿತು, ಯಾರ ವಿರುದ್ಧ ಹೋರಾಡಬೇಕಾಯಿತು ಎಂಬ ಐತಿಹಾಸಿಕ ಪ್ರಜ್ಞೆಯ ಪ್ರೇರಕಗಳು. ಇದಿಲ್ಲದೆ ಇಂದಿನ ಜನ ತಮ್ಮ ವರ್ತಮಾನವನ್ನು ಸರಿಯಾದ ರೂಪದಲ್ಲಿ ನಿರ್ಮಿಸಿಕೊಳ್ಳಲಾರರೆಂಬ ಉದ್ದೇಶದ ಬಗ್ಗೆ ಸಂತೋಷಪಟ್ಟು, ಈ ಕ್ಷೇತ್ರದಲ್ಲೂ ನಮ್ಮದು ಎಂಥ ಬಡತನ ಎಂದು ನೊಂದು ತಳಮಳಗೊಂಡಿರುವುದಕ್ಕೆ ಅರ್ಥವಿದೆ.

ಇಲ್ಲಿನ ಸಮಕಾಲೀನ ಕವಿ ರಾಬರ್ಟ್ ರೊಸ್ಡಸ್ಟವೆನ್‌ಸ್ಕಿಯ ಜೊತೆ ನಡೆದ ಮಾತುಕತೆಯಿಂದ ಅಲ್ಲಿನ ಬರಹಗಾರರು ಒಂದು ರೀತಿಯ 'ಸೆನ್ಸಾರ್' ಮನೋಭಾವದಿಂದಿರುತ್ತಾರೆಂದು ಲೇಖಕರು ಶಂಕಿಸಿದ್ದಾರೆ. ಬರೆಹಗಾರರದೇ ಆದ 'ಬರೆಹಗಾರರ ಒಕ್ಕೂಟ' ಉತ್ತಮ ಲೇಖಕನ ಬೆಳವಣಿಗೆಯಲ್ಲಿ, ಕೈತುಂಬ ಸಂಭಾವನೆ ಕೊಡುವುದರಲ್ಲಿ ನಿರತವಾಗಿದೆ ಎಂಬ ಅಂಶಗಳು ಅನುಕರಣೀಯವೆಂದು ತಿಳಿಸಿದ್ದಾರೆ. ಇತ್ತೀಚೆಗೆ ಬಂದ ಲಾಟರಿ ವ್ಯವಸ್ಥೆ ರಷ್ಯಾದಲ್ಲಾಗುತ್ತಿರುವ ಬದಲಾವಣೆಯ ರೀತಿಗೆ ಸಂಕೇತವೆಂಬ ಆಲೋಚನೆ ಸರಿಯಾದದ್ದು. ಈ ದೇಶದ ಜನ, ನಮ್ಮ ಜನಜೀವನದ ಬಗ್ಗೆ ಸಂಸ್ಕೃತಿಯ ಬಗ್ಗೆ ಎಂದೂ ಕುತೂಹಲ ತಳೆಯದೆ, ತಾವೇನೂ ಇವರಿಂದ ತಿಳಿಯಬೇಕಾದ್ದಿಲ್ಲವೆನ್ನುವ ಅವರ ವರ್ತನೆ ಜಿ.ಎಸ್.ಎಸ್. ಅವರಿಗೆ ಆಶ್ಚರ್ಯ ಮೂಡಿಸಿದೆ. ಇಂಡಿಯಾ ದೇಶದ ವ್ಯವಸ್ಥೆಯನ್ನು ಅಧ್ಯಯನ ಮಾಡಿದವರಿಗೆ ಜನಜೀವನ, ಸಂಸ್ಕೃತಿಗಳು ಯಾರವು, ಹೇಗಿವೆ ಎಂಬುದನ್ನು ಕೇಳಿ ತಿಳಿಯುವ ಪ್ರಮೇಯವಿರುವುದಿಲ್ಲ.

ಸಾಮಾಜಿಕ ಜೀವನದಲ್ಲಿ ಗಂಡು ಹೆಣ್ಣುಗಳ ಸ್ವಾತಂತ್ರ್ಯ ಮತ್ತು ಭದ್ರತೆಗಳನ್ನು, ವ್ಯಕ್ತಿತ್ವ ವಿಕಾಸದ ಪೋಷಣೆಗಳನ್ನು ಮೆಚ್ಚಿದ್ದಾರೆ. ಪ್ರಜೆ ರಾಷ್ಟ್ರದ ಸೊತ್ತಾಗಿರುವುದ ರಿಂದ, ಅವನಿಗೆ ಬಂದಿರುವ ನಿರುತ್ಸಾಹ ಹೋಗಲಾಡಿಸಲು, ಸ್ವಂತ ಮನೆ ಕೊಳ್ಳುವ, ಸ್ವಂತ ಜಮೀನು ಇಟ್ಟುಕೊಳ್ಳುವ, ಹಣ ಕೂಡಿಡಲು ಅವಕಾಶಕೊಡುವ ಸಂಗತಿಗಳೆಲ್ಲ ಬದಲಾಗುತ್ತಿರುವ ಧೋರಣೆಯ ಮುಖ್ಯ ಅಂಶ ಎಂಬ ವಿಶ್ಲೇಷಣೆ ಅವರ ರಾಜಕೀಯ ಚಿಂತನೆಗೆ ಸಾಕ್ಷಿ. ಎಲ್ಲರಿಗೂ ಮನೆ, ಭಿಕ್ಷುಕರೇ ಇಲ್ಲ, ಉಚಿತ ವಿದ್ಯೆ—ಇಂತಹ ಅನುಕೂಲಗಳನ್ನು ಒಂದು ದೇಶ ಮೊದಲು ಮಾಡಿಕೊಡಬೇಕೆಂದು ಸಮರ್ಥಿಸುತ್ತಾರೆ. ಇಲ್ಲಿ ನಮ್ಮ ಸ್ಥಿತಿಯನ್ನು ವಿಮರ್ಶಿಸುತ್ತಾ "ಸಾವಿರಾರು ಜನ ಹೊಟ್ಟೆಗಿಲ್ಲದೆ ನರಳುವಲ್ಲಿ ಕೆಲವೇ ಜನ ತಿಂದು ತೇಗುತ್ತ ಬದುಕುವ ಪರಿಸ್ಥಿತಿ ನಮ್ಮಲ್ಲಿದೆ. ಆಧ್ಯಾತ್ಮದಲ್ಲಿ ಎಲ್ಲರೂ ಸಮಾನರೇ! ಪರಬ್ರಹ್ಮ ಸ್ವರೂಪರೆ—ಆದರೆ ವಾಸ್ತವದಲ್ಲಿ ಎಲ್ಲರೂ ಬೇರೆ ಬೇರೆಯೆ" ಎಂದು ನಮ್ಮ ಬೋಳೆ ವೇದಾಂತಕ್ಕೆ ಕನ್ನಡಿ ಹಿಡಿಯುತ್ತಾರೆ.

ರಷ್ಯಾದಲ್ಲಿ ಬುದ್ಧಿಜೀವಿಗಳಿಗೆ ಸ್ವಾತಂತ್ರ್ಯವಿಲ್ಲವೆಂಬ ಹುಯಿಲಿಗೆ "ನಮ್ಮ ದೇಶದಲ್ಲಿ ವಾಕ್ ಸ್ವಾತಂತ್ರ್ಯವಿದ್ದೂ ಎಷ್ಟು ಜನ ನಿಜವಾದ ಪ್ರತಿಭಾವಂತರನ್ನು ಈ ಪರಿಸರ ಬೆಳೆಯಗೊಟ್ಟಿದೆ" ಎಂದು ಪ್ರಶ್ನಿಸಿ, "ಲಕ್ಷಾಂತರ ಜನ ಹೊಟ್ಟೆಗಿಲ್ಲದೆ ನರಳುವ ಸ್ಥಿತಿ ಯಲ್ಲಿರುವುದು, ಕೋಟ್ಯಂತರ ಜನ ಬದುಕಿನಲ್ಲಿ ಯಾವ ಸುಖವನ್ನೂ ಕಾಣದೆ, ನಾಳೆ ಎಂತೋ ಏನೋ ಎಂದು ತಾಕಲಾಡುವುದು, ನಮ್ಮ ಬುದ್ಧಿಜೀವಿಗಳನ್ನು ಸದಾ ಕೆರಳಿಸಿ, ಅವರ ಸಾಹಿತ್ಯಕ್ಕೆ ಮುಖ್ಯ ಪ್ರೇರಣೆಯಾಗುವ ಅವಕಾಶ ಎಷ್ಟು ಬೇಗ ಮುಗಿದರೆ ಅಷ್ಟು ಒಳ್ಳೆಯದು, ಅಂಥ ಕಾಲ ಎಂದು ಬಂದೀತು" ಎಂದು ಪ್ರಶ್ನಿಸುವ ಈ ಮನಸ್ಸು, ಲೇಖಕನೊಬ್ಬನ, ಕಲಾವಿದನೊಬ್ಬನ ಮನಸ್ಸಲ್ಲ. ಸಾಮಾನ್ಯ ಪ್ರಜೆಯೊಬ್ಬನ ಸಾಮಾಜಿಕ ಕಾಳಜಿಯ ಕೂಗಾಗಿ ಈ ಮಾತುಗಳು ಬಂದಿವೆ.

ಅಲ್ಲಿನ ಜನರ ಉತ್ತಮ ಕಲಾಭಿರುಚಿಯ ದ್ಯೋತಕವಾದ, ರಂಗಮಂದಿರಗಳು, ಮಕ್ಕಳ ರಂಗಮಂದಿರಗಳು, ಗೊಂಬೆಯ ನಾಟ್ಯಶಾಲೆಗಳನ್ನು ಕಂಡು ಮೆಚ್ಚುಗೆ ಸೂಚಿಸಿ, ಈ ಜನಕ್ಕೆ ತಮ್ಮ ಕವಿಗಳನ್ನು ಕುರಿತು ಇರುವ ಅಭಿಮಾನವನ್ನು ಅನುಕರಣೀಯ ಎನ್ನುತ್ತಾರೆ. ಧರ್ಮವನ್ನು ರಾಜ್ಯದಿಂದ ದೂರ ಇಟ್ಟು ನಂಬಿದ ಹಳೆಯ ತಲೆಮಾರಿ ಗಾಗಿ ಚರ್ಚುಗಳನ್ನು ಉಳಿಸಿರುವ ಈ ಜನದ ಧೋರಣೆಯನ್ನು ಗಮನಿಸಿ, ಆ ಹಳೆಯ ಉಳಿಕೆಗಳ ಆಯುಷ್ಯ ಇಪ್ಪತ್ತು ವರ್ಷ ಇರಬಹುದಷ್ಟೆ ಎಂದು ತರ್ಕಿಸಿದ್ದಾರೆ.

ಇಂತಹದೊಂದು ದಿನಚರಿ ವಸ್ತುನಿಷ್ಠವಾದ ವಿವರಗಳನ್ನು ಒದಗಿಸುವುದರತ್ತಲೇ ಹೆಚ್ಚು ಮಗ್ನವಾಗುವುದರ ಸಾಧ್ಯತೆಯಿದೆ. ಆದರ ನಡುವೆಯೂ ಅಲ್ಲಲ್ಲಿ, ಪ್ರಕೃತಿ ಯನ್ನು ಕಂಡ ಕವಿಯ ಮನಸ್ಸು ಗದ್ಯವನ್ನು ಪದ್ಯವನ್ನಾಗಿಸಿಬಿಡುತ್ತದೆ—'ಹೊರಟಾಗ ಸಂಜೆಗೆಂಪು ಬಾನ ತುಂಬ....ಕಿಟಕಿ ಪಕ್ಕದಲ್ಲಿ ಕೂತ ನನಗೆ ವಿಮಾನದ ಕೆಳಗೆ ಮೊಸರ ಮೋಡಗಳ ಹಿಂಡು ತೂಕಡಿಸುವ ನೋಟ ಕಾಣಿಸಿತು....ಗೆರೆ ಬರೆದ ದಾರಿಗಳು. ಉಲೂ ತಿದ್ದುವ ಹೊಳೆ ಗುರುತುಗಳು....ಕೆಳಗೆ ಪರಿಚಿತವಾದ ನೆಲದ ದೀಪದ ಸನ್ನೆಯಿಲ್ಲ. ಮೇಲೆ

ಚಿರಪರಿಚಿತವಾದ ನಕ್ಷತ್ರಗಳ ಕಣ್ಣಿಲ್ಲ.” ಇಲ್ಲಿನ ಒಂದೊಂದು ಸಾಲನ್ನೂ ಒಂದರ ಕೆಳಗೊಂದು ಬರೆದರೆ ಪದ್ಯ ಎಂದು ನಿಸ್ಸಂಶಯವಾಗಿ ಹೇಳಬಹುದಲ್ಲ! ‘ಗದ್ಯ’ಕ್ಕೆ ಈ ಮಾಧುರ್ಯವನ್ನು ತಂದುಕೊಡುವ ಕೆಲಸವನ್ನು ಅವರಿಂದ ಇನ್ನಷ್ಟು ನಿರೀಕ್ಷಿಸಬಹುದು. ಚಿತ್ರಗಳನ್ನು ಗದ್ಯದಲ್ಲಿ ಕಣ್ಣಿಗೆ ಕಟ್ಟುವಂತೆ ಮಾಡುವ ಚಮತ್ಕಾರದ ಶೈಲಿ ಅವರದು. “ಬೆಳಗಿನ ಬಿಸಿಲು ಮೋಡಗಳ ಮೇಲ್ಭಾಗಕ್ಕೆ ಬಿದ್ದು ಅವೆಲ್ಲ ಗುಲಾಬಿ ಹಾಲಿನಕೆನೆಯಾಗಿದ್ದವು. ಇನ್ನಷ್ಟು ದೂರ ಹೋದ ನಂತರ ಕೆಳಗೆ ವಿಚಿತ್ರ ವರ್ಣದ ನೆಲ. ಕೆಳಗೆಲ್ಲೋ ತೊದಲುತ್ತಿದ್ದ ಬೆಟ್ಟಗಳ ಮುಡಿಯಲ್ಲಿ ಮಂಜಿನ ಹೊದಿಕೆ. ಕಂದರಗಳಲ್ಲಿ ತೆಳ್ಳಗೆ ಹರಿದು ಮೆತ್ತಿದ ಮೋಡ. ಮಕ್ಕಳು ಪಾಟಿಯ ಮೇಲೆ ಅಕ್ಷರ ತಿದ್ದಿದಂತೆ ಹೊಳೆ ಹಳ್ಳಿಗಳ ಚಿತ್ರ. ಮಕ್ಕಳಾಟಿಗೆಯ ಸಾಮಾನುಗಳಂತೆ ಅಲ್ಲಲ್ಲಿ ಊರುಗಳು; ನಗರಗಳು”—ಪ್ರಕೃತಿಯನ್ನೂ ಆತ್ಮೀಯವಾಗಿಸಿ, ನಯದ ವಿನಯದ ತೊಟ್ಟಿಲಲ್ಲಿಟ್ಟು ತೂಗುವ ವರ್ಣನಾಶೈಲಿ ಇದು. ಈ ಮನೋಧರ್ಮವೇ ಸ್ಥಾಯಿಯಾಗಿ, ಪ್ರವಾಸ ಮಾಡಿದ ಲೇಖಕರು ತಾವು ತಿಳಿದವರೆಂದು ಸ್ವಪ್ರಶಂಸೆ ಮಾಡಿಕೊಳ್ಳುವುದಾಗಲೀ, ಜ್ಞಾನ ಹಂಚುವುದಕ್ಕೆ ಹೊರಟ ಪ್ರವಾದಿಯೆಂದಾಗಲೀ ಭಾವಿಸದೆ, ಜಗತ್ತನ್ನು ನೋಡಲು ಹೊರಟ ನಮ್ಮ ಪ್ರವಾಸಿಯಂತೆ ಕಾಣಬರುವವೇ ಈ ಪುಟ್ಟ ಕೃತಿಯ ಅನನ್ಯತೆಗಳಲ್ಲಿ ವಿಶಿಷ್ಟವಾಗಿ ಎದ್ದು ಕಾಣುವ ಅಂಶವಾಗಿದೆ.

ಹು. ಕಾ. ಜಯದೇವ್

# ಡಾ|| ಜಿ.ಎಸ್.ಎಸ್. ಅವರ ನಾಟಕಗಳು

ಡಾ|| ಜಿ.ಎಸ್.ಎಸ್. ಅವರು ಸಾರಸ್ವತಲೋಕದಲ್ಲಿ ಪರಿಚಿತರಾಗಿರುವುದು ಕವಿಗಳಾಗಿ, ಸಹೃದಯ ವಿಮರ್ಶಕರಾಗಿ ಅವರು ಕೆಲವು ನಾಟಕಗಳನ್ನು ಬರೆದಿರುವ ವಿಚಾರ ಬಹುಜನರಿಗೆ ತಿಳಿದಿಲ್ಲ. ಸುಮಾರು ಇಪ್ಪತ್ತು ವರ್ಷಗಳಷ್ಟು ಹಿಂದೆ ಜಿ. ಎಸ್. ಶಿವರುದ್ರಪ್ಪನವರು ಕೆ. ಬಿ. ಪ್ರಭುಪ್ರಸಾದರೊಡನೆ ನಾಲ್ಕು ನಾಟಕಗಳನ್ನು ಬರೆದಿದ್ದಾರೆ. ಈ ನಾಟಕಗಳೆಲ್ಲವೂ ರೇಡಿಯೊ ನಾಟಕಗಳು—ಪ್ರಸಾರ ನಾಟಕಗಳು.* ರಾಣಿ ದುರ್ಗಾವತಿ ಇಪ್ಪತ್ತು ನಿಮಿಷದ ನಾಟಕವಾದರೆ ಮಹಾಸಂಗಮ, ನಾದಸೇತು ಮೂವತ್ತು ನಿಮಿಷಗಳ ನಾಟಕ ಮತ್ತು ಅವಳು ತೋರಿದ ಬೆಳಕು ೫೦ ನಿಮಿಷಗಳ ಅವಧಿಯ ನಾಟಕ. ರಂಗಸ್ಥಳದ ಮೇಲೆ ಪ್ರದರ್ಶಿತವಾಗುವ ನಾಟಕಗಳಿಗಿಂತ ರೇಡಿಯೊ ನಾಟಕಗಳಿಗೆ ಹೆಚ್ಚಿನ ಅನುಕೂಲಗಳಿವೆ. ರಾಣಿದುರ್ಗಾವತಿ ಐತಿಹಾಸಿಕ ನಾಟಕವಾದರೆ ಮಹಾಸಂಗಮ, ಅವಳು ತೋರಿದ ಬೆಳಕು ಮತ್ತು ನಾದಸೇತು ಐತಿಹಾಸಿಕವೂ ಪೌರಾಣಿಕವೂ ಆದ ನಾಟಕಗಳು.

* * *

'ರಾಣಿ ದುರ್ಗಾವತಿ'ಯ ಕಥಾವಸ್ತು ಸುಮಾರುನಾನೂರು ವರ್ಷಗಳಷ್ಟು ಹಿಂದಿನದು. ಅಕ್ಬರನ ಕಾಲದ ಚರಿತ್ರೆಯ ಒಂದು ಸಣ್ಣ ಘಟನೆ ಈ ನಾಟಕದ ಕಥಾವಸ್ತು. ಸಿರಿಸಂಪತ್ತುಗಳಿಂದ ತುಂಬಿ ತುಳುಕಾಡುತ್ತಿದ್ದ ಗೊಂಡವಾನದ ವೀರರಮಣಿ ದುರ್ಗಾವತಿ. ಮದುವೆಯಾದ ತರುಣದಲ್ಲೆ ಪತಿಯನ್ನು ಕಳೆದುಕೊಂಡು ಎಳೆಯಕಂದ ವೀರನಾರಾಯಣ ಮತ್ತು ಗೊಂಡವಾನದ ರಕ್ಷಣೆಯನ್ನು ಹೊತ್ತು ವೀರ ರಜಪೂತ ಸೈನಿಕರ ನೆರವಿನಿಂದ ಸಮರ್ಥಳಾಗಿ ನಿರ್ವಹಿಸುತ್ತಿದ್ದಳು ರಾಣಿ ದುರ್ಗಾವತಿ. ಅಕ್ಬರನಿಂದ ಖಾರಾಜಿಲ್ಲೆಯ

* ಮಹಾಸಂಗಮ—ಮೈಸೂರು A.I.R.ನಲ್ಲಿ ೫.೪–೫೪ರಲ್ಲಿ ಪ್ರಸಾರವಾಯಿತು.

ರಾಣಿ ದುರ್ಗಾವತಿ—ಮೈಸೂರು A.I.R.ನಲ್ಲಿ ೧೫–೮.೫೪ರಲ್ಲಿ ಪ್ರಸಾರವಾಯಿತು.

ನಾದಸೇತು— ? ? ? ? ? ? ?

ಅವಳು ತೋರಿದ ಬೆಳಕು—ಬೆಂಗಳೂರು ಆಕಾಶವಾಣಿ ಕೇಂದ್ರದವರಿಂದ ೧೬-೭-೬೧ರಲ್ಲಿ ಪ್ರಸಾರವಾಯಿತು.

ಈ ನಾಲ್ಕೂ ನಾಟಕಗಳು ಕ್ರಮವಾಗಿ ಪ್ರಬುದ್ಧ ಕರ್ಣಾಟಕದ ೩೭-೧, ೩೯-೨, ೩೯-೪ ಮತ್ತು ೪೪-೧ರಲ್ಲಿ ಪ್ರಕಟವಾಗಿವೆ.

ಅಧಿಪತಿಯಾಗಿ ನೇಮಕಗೊಂಡಿದ್ದ ಅಫಸಲ್‌ಖಾನನಿಗೆ ರಾಣಿ ದುರ್ಗಾವತಿಯ ಅಪೂರ್ವ ಸೌಂದರ್ಯದ ಮೇಲೆ ಕಣ್ಣು ಬೀಳುತ್ತದೆ ಸುಳ್ಳುಹೇಳಿ ರಾಣಿ ದುರ್ಗಾವತಿಯ ಮೇಲೆ ಯುದ್ಧಕ್ಕೆ ಅಕ್ಬರನಿಂದ ಅನುಮತಿಯನ್ನು ಪಡೆದು ಗೊಂಡವಾನವನ್ನು ವಶಪಡಿಸಿ ಕೊಳ್ಳುತ್ತಾನೆ ಅಫಸಲ್‌ಖಾನ್. ಆದರೆ ಅವನ ಆಸೆ ಮಾತ್ರ ಕೈಗೂಡುವುದಿಲ್ಲ. ದುರ್ಗಾವತಿ ಶತ್ರುಗಳಿಗೆ ಸೆರೆಸಿಕ್ಕುವುದಕ್ಕಿಂತಲೂ ಆತ್ಮಹತ್ಯೆಯೇ ಮೇಲೆಂದು ರಣರಂಗದಲ್ಲಿ ಯುದ್ಧಮಾಡುತ್ತಿರುವಾಗ ಶತ್ರುವಶಳಾಗುವ ಸಮಯದಲ್ಲಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಸಿರಿಸಂಪತ್ತು ಸಂಸ್ಕೃತಿಗಳಿಗೆ ಆಗರವಾಗಿದ್ದ ಗೊಂಡವಾನ ಹಾಳು ಸುರಿಯುತ್ತದೆ.

ಈ ನಾಟಕದಲ್ಲಿ ಅಕ್ಬರನ ಪಾತ್ರ ಔನ್ನತ್ಯಕ್ಕೇರಿದೆ. ಎರಡನೆಯ ದೃಶ್ಯದಲ್ಲಿ ಅಫಸಲ್‌ಖಾನ್ ರಾಣಿ ದುರ್ಗಾವತಿಯ ಮೇಲೆ ಚಾಡಿ ಹೇಳಿದಾಗ ಅಕ್ಬರ್ "ಆದಾಗದು ಅಫಸಲ್‌ಖಾನ್, ಆದಾಗದು. ಮೊಗಲ್ ಸಾಮ್ರಾಟನಾದ ನಾನು ಕೇವಲ ಹೆಣ್ಣು ಹೆಂಗಸಾದ ಅದರಲ್ಲೂ ವಿಧವೆಯಾದ ರಾಣಿ ದುರ್ಗಾವತಿಯ ಮೇಲೆ ಕೈ ಮಾಡುವುದೇ? ನಾಳಿನ ಜನ ಏನೆಂದಾರು? ಹಿಂದೂಮುಸ್ಲಿಂ ಐಕ್ಯದ ನನ್ನ ಆದರ್ಶ ಏನಾದೀತು? ಅದು ಸಲ್ಲದ ಮಾತು" ಎಂದು ಹೇಳಿದರೂ ಅಫಸಲ್‌ಖಾನ್ ಹೇಳಿದ ಚಾಡಿಮಾತುಗಳನ್ನು ನಂಬಿ ಅವನಿಗೆ ರಾಣಿ ದುರ್ಗಾವತಿಯ ಮೇಲೆ ಯುದ್ಧಕ್ಕೆ ಅನುಮತಿಯನ್ನು ಕೊಡುತ್ತಾನೆ. ಆಗಲೂ "ಆದರೆ ರಾಣಿ ದುರ್ಗಾವತಿ ಹೆಂಗಸು ಎಂಬುದನ್ನು ಮರೆಯಬಾರದು. ಅಕ್ಬರನಾಗಲೀ ಆತನ ಕಡೆಯವರಾಗಲೀ, ಹೆಂಗಸನ್ನು ಮರ್ಯಾದೆಯಿಂದ ಕಾಣತಕ್ಕವರು. ರಾಣಿಯನ್ನು ಸೆರೆಹಿಡಿದು ಸುರಕ್ಷಿತವಾಗಿ ಎಲ್ಲ ಗೌರವ-ಮರ್ಯಾದೆಗಳಿಂದ ಇಲ್ಲಿಗೆ ಕರೆತರಬೇಕು. ತಿಳಿಯಿತೇ?" ಎಂದು ಹೇಳಿ ಕಳುಹಿಸುತ್ತಾನೆ. ಅವನ ಈ ಮಾತುಗಳಿಂದ ಅವನ ಔನ್ನತ್ಯ, ಆದರ್ಶ, ಕನಸು ಇತ್ಯಾದಿಗಳು ಗೊತ್ತಾಗುತ್ತವೆ. ಆದರೆ ಅಕ್ಬರನ ಅನುಯಾಯಿಗಳು ಅಕ್ಬರನಷ್ಟೇ ಆದರ್ಶವ್ಯಕ್ತಿಗಳಾಗಿಲ್ಲದಿದ್ದುದರಿಂದ ಅಕ್ಬರನ ಧವಳಕೀರ್ತಿಗೆ ಕುಂದುಂಟಾಗುವಂತಹ ಘಟನೆಗಳು ಅವನ ಕಾಲದಲ್ಲಿ ಆಗಿಹೋದುವು. ಅಂತಹ ಘಟನೆಗಳಲ್ಲಿ ಈ ನಾಟಕದ ಕಥಾವಸ್ತು ಒಂದು.

ವಿನಾಕಾರಣ ಮೇಲೆಬಿದ್ದ ಅಫಸಲ್‌ಖಾನನನ್ನು ರಾಣಿ ದುರ್ಗಾವತಿ ರಜಪೂತರಿಗೆ ಸಹಜವಾದ ದೇಶಪ್ರೇಮದಿಂದ, ಸ್ವಾತಂತ್ರ್ಯಕಾಂಕ್ಷೆಯಿಂದ, ಅಭಿಮಾನದಿಂದ ಸೋಲಿಸುತ್ತಾಳೆ. ನೇರವಾಗಿ ಯುದ್ಧದಿಂದ ರಾಣಿ ದುರ್ಗಾವತಿಯನ್ನು ಗೆಲ್ಲಲಾರದ ಅಫಸಲ್‌ಖಾನ್ ಕುತಂತ್ರಕ್ಕಿಳಿಯುತ್ತಾನೆ. ರಾಣಿಯ ಕಡೆಯವರನ್ನು ಹಣದ ಆಮಿಷಕ್ಕೆ ಒಳಗುಮಾಡಿಕೊಂಡು ಮತ್ತೆ ಯುದ್ಧಮಾಡುತ್ತಾನೆ. ಈ ಎರಡನೆಯ ಯುದ್ಧದಲ್ಲೇ ರಾಣಿ ಹತಳಾಗುವುದು (ಆತ್ಮಹತ್ಯೆ ಮಾಡಿಕೊಳ್ಳುವುದು).

ನಾಟಕದ ಹೆಸರಿನಿಂದ ರಾಣಿ ದುರ್ಗಾವತಿಯ ಧೈರ್ಯ, ಸಾಹಸ, ನಾಡಭಕ್ತಿ ಇತ್ಯಾದಿಗಳನ್ನು ಚಿತ್ರಿಸುವುದು ನಾಟಕಕಾರರ ಉದ್ದೇಶ ಎನಿಸುತ್ತದೆ. ಆದರೆ ಎರಡನೆ ದೃಶ್ಯದಲ್ಲಿ ಮಾತ್ರ ಕಂಡುಬಂದು ಕೇವಲ ಕೆಲವು ಮಾತನ್ನಷ್ಟೇ ಆಡುವ ಅಕ್ಬರ್

ಶ್ರೋತೃಗಳ ಗಮನವನ್ನು ಸೆಳೆಯುತ್ತಾನೆ. ರಾಣಿ ದುರ್ಗಾವತಿ ತನ್ನ ಸೈನಿಕರನ್ನು ಹುರಿದುಂಬಿಸುವಾಗ ಆಡುವ ಮಾತುಗಳು, ಎರಡನೆಯ ಬಾರಿ ಯುದ್ಧಕ್ಕೆ ತೊಡಗುವಾಗ ತನ್ನ ಸೈನ್ಯದ ಕೆಲವರು ಶತ್ರುವಶರಾಗಿರುವುದನ್ನು ತಿಳಿದಾಗ ಆಡುವ ಮಾತುಗಳು ವೀರರಮಣಿಗೆ ಉಚಿತವಾದ ಮಾತುಗಳೇ. ಆದರೂ ಅಕ್ಬರನ ಪಾತ್ರದ ಮುಂದೆ ರಾಣಿ ದುರ್ಗಾವತಿಯ ಪಾತ್ರ ಮಂಕಾಗಿ ಕಾಣುತ್ತದೆ.

ಈ ಪುಟ್ಟ ನಾಟಕದಲ್ಲಿ ಆರು ದೃಶ್ಯಗಳಿವೆ. ಇದು ಈ ನಾಟಕಕ್ಕೆ ಭಾರವಾಯಿತು ಎನಿಸುತ್ತದೆ. ಅಲ್ಲದೆ ಇದು ರೇಡಿಯೊ ನಾಟಕ ಎಂಬುದನ್ನು ನಾಟಕಕಾರರು ಮರೆತಂತೆ ಕಾಣುತ್ತದೆ. ಏಕೆಂದರೆ ರೇಡಿಯೊ ನಾಟಕಗಳಲ್ಲಿ ರಂಗನಿರ್ದೇಶನ ಮತ್ತು ಧ್ವನಿ ವ್ಯತ್ಯಾಸಗಳಿಂದ ಬೇಕಾದ ದೃಶ್ಯಗಳನ್ನು ಬೇಕಾದಾಗ ರೂಪಿಸಿಕೊಳ್ಳಲು ಅವಕಾಶವಿದೆ. ಹಾಗೆ ಮಾಡಿದ್ದರೆ ದೃಶ್ಯದಲ್ಲಿ ಅಕ್ಬರನ ಆಸ್ಥಾನ ಮಾಯವಾಗಿ ಗೊಂಡವಾನ ಕಾಡೂ ಅಲ್ಲಿ ಈ ನಾಟಕದ ಪಾತ್ರಗಳಾದ ಪ್ರವಾಸಿಕರು ಮತ್ತು ನಿರ್ದೇಶಕ ಬರುತ್ತಾರೆ. ಹಾಗೆಯೆ ಆರನೆಯ ದೃಶ್ಯದಲ್ಲಿ ರಣರಂಗ ಮಾಯವಾಗಿ ಮತ್ತೆ ಗೊಂಡವಾನ ಕಾಡೂ ಪ್ರವಾಸಿಕರು ಮತ್ತು ನಿರ್ದೇಶಕ ಕಂಡುಬರುತ್ತಾರೆ. ಎರಡು ಮತ್ತು ಆರನೆಯ ದೃಶ್ಯಗಳಲ್ಲಿ ಸಾಧ್ಯವಾದುದು ಉಳಿದ ಕಡೆಗಳಲ್ಲಿಯೂ ಸಾಧ್ಯವಾಗಬಹುದಿತ್ತು. ಒಟ್ಟಿನಲ್ಲಿ ಹೇಳಬಹುದಾದರೆ ರೇಡಿಯೊ ನಾಟಕದ ಸಕಲ ಸಾಧ್ಯತೆಗಳನ್ನು ಬಳಸಿಕೊಂಡು ಈ ನಾಟಕವನ್ನು ಇನ್ನೂ ಪರಿಣಾಮಕಾರಿಯಾಗಿ ರೂಪಿಸಬಹುದಿತ್ತು ಎನಿಸುತ್ತದೆ.

* * *

'ಮಹಾಸಂಗಮ' ಮತ್ತು 'ನಾದಸೇತು' ಐತಿಹಾಸಿಕ ನಾಟಕಗಳು. ಅಂದರೆ ಇವುಗಳ ಕಥಾವಸ್ತು ಹನ್ನೆರಡನೆಯ ಶತಮಾನದಲ್ಲಿ ಬಾಳಿ ಬದುಕಿದ ಬಸವಣ್ಣ ಮತ್ತು ಅಲ್ಲಮರ ಜೀವನದ ಪ್ರಮುಖ ಘಟನೆಗಳು. ಇವು ಇನ್ನೊಂದು ದೃಷ್ಟಿಯಿಂದ ಪೌರಾಣಿಕ ನಾಟಕಗಳೂ ಹೌದು. ಹೇಗೆಂದರೆ ಈ ವ್ಯಕ್ತಿಗಳ ಸುತ್ತ ಹರಡಿರುವ ಪವಾಡಗಳು, ದಂತಕಥೆಗಳು ಮತ್ತು ವೀರಶೈವ ಪುರಾಣಗಳಲ್ಲಿ ಇವರಿಗಿರುವ ಸ್ಥಾನ ಇವರನ್ನು ಪೌರಾಣಿಕ ವ್ಯಕ್ತಿಗಳನ್ನಾಗಿ ಮಾಡಿದೆ.

ಮಹಾಸಂಗಮ ನಾಟಕದ ವಸ್ತುವಿನಲ್ಲಿ ಕೆಲವು ಮಾರ್ಪಾಡುಗಳನ್ನು ನಾಟಕಕಾರರು ಮಾಡಿಕೊಂಡಿದ್ದಾರೆ. ಅವು ಹೀಗಿವೆ: ಬಸವರಾಜದೇವರ ರಗಳೆಯಲ್ಲಿ ಬಿಜ್ಜಳನನ್ನು ಬಸವಣ್ಣನೇ ಕೊಲ್ಲಿಸಿದನೆಂದು ಹೇಳಿದೆ (ಶಿವದ್ರೋಹವಂ ಗೈದ ಬಿಜ್ಜಳನ ಕೊಲಿಸುತಂ) ನಾಟಕದಲ್ಲಿ ಬಿಜ್ಜಳನ ಕೊಲೆಗೂ ಬಸವಣ್ಣನಿಗೂ ಯಾವುದೇ ಸಂಬಂಧವಿಲ್ಲ. ಮತಾಂಧರೋಷಭೀಷಣಮತಿಗಳಾರೊ ಬಿಜ್ಜಳನನ್ನು ಕೊಲೆಮಾಡುತ್ತಾರೆ. ಬಿಜ್ಜಳನ ಕೊಲೆಯಾಗುವ ಕಾಲಕ್ಕೆ ಬಸವಣ್ಣ ಮಂತ್ರಿಪದವಿಯಲ್ಲಿರಲಿಲ್ಲ. ಆಗ ಮಂತ್ರಿಯಾಗಿದ್ದವನು ಚನ್ನಬಸವಣ್ಣ—ಬಸವಣ್ಣನ ಸೋದರಳಿಯ. ಚನ್ನಬಸವಣ್ಣ ಬಿಜ್ಜಳನ ಮಂತ್ರಿಯಾಗಿದ್ದನೆಂಬುದು ನಾಟಕಕಾರರ ಕಲ್ಪನೆ. ಬಸವಣ್ಣ ಅಧಿಕಾರವನ್ನು ಯಾವುದೇ ಅಹಿತಕರವಾದ ಘಟನೆಗಳಿಂದಾಗಿ ಬಿಟ್ಟವನಲ್ಲ. ಬಿಜ್ಜಳನೆ ಬಸವಣ್ಣನ ಭಕ್ತಿಯನ್ನು ಅರಿತು, ಅದಕ್ಕೆ

ಅನುವು ಮಾಡಿಕೊಡಬೇಕೆಂದು ಬಸವಣ್ಣನನ್ನು ಮಂತ್ರಿಪದವಿಯಿಂದ ಬಿಡುಗಡೆಮಾಡಿ ಚನ್ನಬಸವಣ್ಣನಿಗೆ ಆ ಮಂತ್ರಿಪದವಿಯನ್ನು ಹೇರಿರುತ್ತಾನೆ ಈ ಮಾತನ್ನು ಬಸವಣ್ಣನೇ ನಾಟಕದಲ್ಲಿ ಹೇಳಿದ್ದಾನೆ. ಅಲ್ಲದೆ ಬಿಜ್ಜಳನನ್ನು ಶರಣವತ್ಸಲ, ಧರ್ಮಾಧರ್ಮಗಳ ತಿಳಿದವನು, ಗೆಳೆಯ ಮುಂತಾಗಿ ಬಸವಣ್ಣ ಸಂಬೋಧಿಸಿರುವುದರಿಂದ ಬಿಜ್ಜಳನ ಪಾತ್ರ ಔನ್ನತ್ಯಕ್ಕೆ ಏರಿದೆ. ಉದಾತ್ತೀಕರಿಸಲಾಗಿದೆ. ಈ ವಿಚಾರಗಳು ಹೇಗೇ ಇರಲಿ ಬಸವಣ್ಣನಿಂದಾಗಿಯೆ ಆಗಲಿ ಅಥವಾ ಧಾರ್ಮಿಕ ಕ್ರಾಂತಿಯಿಂದಾಗಿಯೆ ಆಗಲಿ ಬಿಜ್ಜಳನ ಕೊಲೆಯಾಗ ಲಿಲ್ಲವೆನ್ನುವುದು ಐತಿಹಾಸಿಕ ಸತ್ಯ. ಬಿಜ್ಜಳ ಕ್ರಿ.ಶ. ೧೧೬೭ರಲ್ಲಿ ತನ್ನ ಮಗ ರಾಯಮುರಾರಿ ಸೋವಿದೇವನಿಗೆ ರಾಜ್ಯದ ಸೂತ್ರಗಳನ್ನು ವಹಿಸಿಕೊಡುತ್ತಾನೆ. ಆದರೆ ಸತ್ತಿರಲಿಲ್ಲ. ಕ್ರಿ.ಶ. ೧೧೬೮ರ ವರೆಗೂ ಅವನು ಬದುಕಿದ್ದುದಕ್ಕೆ ಐತಿಹಾಸಿಕ ದಾಖಲೆ ಗಳಿವೆ (ಶಾಸನಗಳು ಸಿಗುತ್ತವೆ). ಚಾಲುಕ್ಯರಿಂದ ರಾಜ್ಯವನ್ನು ಅಪಹರಿಸಿದ ಬಿಜ್ಜಳ ನಿಗೆ ಅಂತರಂಗ ಬಹಿರಂಗ ಶತ್ರುಗಳು ಇದ್ದಿರಬೇಕು. ಅಲ್ಲದೆ ಬಸವಣ್ಣನ ಧಾರ್ಮಿಕ ಕ್ರಾಂತಿಗೆ ವೀರಶೈವರ ನಿರೀಕ್ಷೆಯ ಮಟ್ಟದ ಸಹಕಾರ ಅವನಿಂದ ದೊರಕದೆ ಹೋಗಿರ ಬಹುದು. ಈ ಕಾರಣಗಳಿಂದಾಗಿ ಸ್ವಭುಜಬಲಪರಾಕ್ರಮಗಳಿಂದ ರಾಜ್ಯವನ್ನು ಸಂಪಾದಿಸಿದರೂ ಅದನ್ನು ನೆಮ್ಮದಿಯಿಂದ ಆಳಲಾಗಲಿಲ್ಲ, ಬಿಜ್ಜಳನಿಗೆ. ಬಸವಣ್ಣನ ಅನಂತರ ಬಂದ ಕವಿಗಳು (ಹರಿಹರನೇ ಮೊದಲನೆಯವನು) ಬಿಜ್ಜಳನನ್ನು ಬಸವಣ್ಣನ ವಿರೋಧಿಯಂತೆ ಚಿತ್ರಿಸಿರುವುದಲ್ಲದೆ ಆಗ ನಡೆದ ಧಾರ್ಮಿಕ ಕ್ರಾಂತಿಯಲ್ಲಿ ಬಸವಣ್ಣ ನಿಂದಾಗಿ ಕೊಲೆಯಾದನೆಂದು ಚಿತ್ರಿಸುತ್ತಾರೆ. ಬಿಜ್ಜಳನ ಮೇಲಿನ ಈ ವೃಥಾರೋಪ ವನ್ನು ನಾಟಕಕಾರರು ನಿವಾರಿಸಿರುವರಾದರೂ ಬಿಜ್ಜಳನ ಕೊಲೆಯಾದಂತೆ ಚಿತ್ರಿಸಿದ್ದಾರೆ. ಬಹುಶಃ ನಾಟಕ ರಚನೆಯಾದ ಕಾಲಕ್ಕೆ (೫-೪-೧೯೫೪), ಲಭ್ಯವಿದ್ದ ಆಧಾರಗಳೇ ಆದಕ್ಕೆ ಕಾರಣ. ಬಸವರಾಜದೇವರ ರಗಳೆಯಲ್ಲಿ ಬಸವಣ್ಣನಿಗೆ ಗಂಗಾದೇವಿಯಲ್ಲಿ ಸಿದ್ಧರಸನೆಂಬ ಮಗನಿದ್ದ ಸಂಗತಿ ತಿಳಿದುಬರುತ್ತದೆ. ನಾಟಕದಲ್ಲಿ ಸುಗ್ಗಲೆ ಎಂಬ ಸಾಕು ಮಗಳು ಇದ್ದಂತೆ ಹೇಳುತ್ತಾರೆ. ಬಸವರಾಜದೇವರ ರಗಳೆಯಲ್ಲಿ ಗಂಗಾದೇವಿ ಮತ್ತು ಮಾಯಿದೇವಿಯರು ಬಸವಣ್ಣನ ಪತ್ನಿಯರು ಎಂದು ಹೇಳಿದೆ. ಇವರು ಯಾರ ಮಕ್ಕಳು ಎಂದು ಅಲ್ಲಿ ತಿಳಿಯುವುದಿಲ್ಲ. ಬಸವಪುರಾಣದಲ್ಲಿ ಬಸವಣ್ಣ ತನ್ನ ಸೋದರಮಾವ ಬಲದೇವನ ಮಗಳಾದ ಗಂಗಾಂಬೆಯನ್ನು ಮದುವೆಯಾಗಿದ್ದಂತೆ ಹೇಳಿದೆ. ನಾಟಕದಲ್ಲಿ ನೀಲಾಂಬಿಕೆ ಬಸವಣ್ಣನ ಪತ್ನಿ ಎಂದು ಹೇಳಿದೆ. ಈ ಕೆಲವು ವ್ಯತ್ಯಾಸಗಳನ್ನು ಬಿಟ್ಟರೆ ಹೆಚ್ಚಿನ ವ್ಯತ್ಯಾಸಗಳಾವುವೂ ಇಲ್ಲ. ಈ ವ್ಯತ್ಯಾಸಗಳಿಂದ ನಾಟಕಕ್ಕೆ ಯಾವುದೇ ರೀತಿಯ ತೊಂದರೆಯೂ ಇಲ್ಲ.

ನಾಟಕದ ಹೆಸರೇ ಹೇಳುವಂತೆ ಬಸವಣ್ಣ ಕಪ್ಪಡಿಯ ಸಂಗಮದಲ್ಲಿ ಐಕ್ಯವಾಗುವ ಮಹಾಘಟನೆಯನ್ನು ನಿರೂಪಿಸುವುದೇ ಈ ನಾಟಕದ ಉದ್ದೇಶ. ಆದರೆ ಅದಕ್ಕಿಂತ ಮಿಗಿ ಲಾಗಿ ಅವನ ಪತ್ನಿ ನೀಲಾಂಬಿಕೆ ಇಷ್ಟಲಿಂಗದಲ್ಲಿ ಸಂಗಯ್ಯನೊಡವೆರೆದು ಐಕ್ಯವಾಗುವುದು ಹೆಚ್ಚು ಪರಿಣಾಮಕಾರಿಯಾಗಿ ಬಂದಿದೆ. ಇದೇ ಅಭಿಪ್ರಾಯವನ್ನು ಚೆನ್ನಬಸವಣ್ಣ—

ಅಬ್ಬಾ ಏನು ಮಹತ್ಪ್ರಕಾಶವಿದು ಮಂದಿರದ ತುಂಬೆಲ್ಲ
ಪುಳಕಗೊಳಿಸುತಿದೆ ತನುವನಾದ್ಯಂತ !
ಜ್ಯೋತಿ ಜ್ಯೋತಿಯೊಳೊಂದಾಗುವೀ
ಮಹಾಸಂಗಮದ ದರ್ಶನಕೆ !

ಎಂದು ಹೇಳುತ್ತಾನೆ. ಇಲ್ಲಿ ನಾಟಕಕಾರರ ಅಭಿಪ್ರಾಯವೂ ಬಸವಣ್ಣನು ಕಪ್ಪಡಿ ಸಂಗಮದಲ್ಲಿ ಐಕ್ಯವಾದುದಕ್ಕಿಂತ ನೀಲಾಂಬಿಕೆ ಇಷ್ಟಲಿಂಗದಲ್ಲಿ ಐಕ್ಯವಾದುದು ಹೆಚ್ಚಿನದು, ಮಹತ್ವದ್ದು ಎಂದಿರುವಂತೆ ಕಾಣುತ್ತದೆ. ನೀಲಾಂಬಿಕೆಯ ಪಾತ್ರ ರಾಜ್ಞೀಭಾವದಿಂದ ಕೂಡಿದೆ.

ನಾಟಕದ ಮೊದಲ ದೃಶ್ಯದ ಕೊನೆಯಲ್ಲಿ ಬಿಜ್ಜಳನು ಕೊಲೆಯಾದುದು ತಿಳಿದು ಬರುತ್ತದೆ. 'ಕೊಲೆಯ ರಕುತದ ನೆಲದಿ ಇರಬಹುದೆ ನಾನಿನ್ನು ?' 'ಇರಲಾರೆ ನಾನಿನ್ನು' ಎಂದುಕೊಂಡು ಬಸವಣ್ಣ 'ಅವಳು ಬಂದು ಸಂಗಮದಲ್ಲಿ ಐಕ್ಯವಾಗಲಿ' ಎಂದು ನೀಲಾಂಬಿಕೆಗೆ ತಿಳಿಸುವಂತೆ ಸುಗ್ಗಲೆಗೆ ಹೇಳಿ ನಿರ್ಗಮಿಸುತ್ತಾನೆ. ಎರಡನೆಯ ದೃಶ್ಯದ ಆರಂಭದಲ್ಲಿ ಚನ್ನಬಸವಣ್ಣ ನೀಲಾಂಬಿಕೆಯೊಡನೆ ಕಲ್ಯಾಣದಲ್ಲಿ ಆದ ದುರಂತವನ್ನು (ಬಿಜ್ಜಳನ ಕೊಲೆಯನ್ನು) ಹೇಳುತ್ತಿರುವಾಗ ಸುಗ್ಗಲೆಯ ಪ್ರವೇಶವಾಗುತ್ತದೆ. ಅಂದರೆ ಬಿಜ್ಜಳನ ಕೊಲೆಯಾಗಿ ಬಹಳ ವೇಳೆಯಾಗಿರುವುದಿಲ್ಲ. ಇಂತಹ ಸಮಯದಲ್ಲಿ ಚನ್ನಬಸವಣ್ಣ ನೀಲಾಂಬಿಕೆಯನ್ನು ನೋಡಲು ಬಂದುದು ಆಶ್ಚರ್ಯ! ರಾಜನ ಕೊಲೆಯಾದಾಗ ಅರಮನೆಯ ಕುಟಿಲ ರಾಜಕಾರಣದಿಂದ ದೂರವಿರುವಷ್ಟು ಬಿಡುವು ಮಂತ್ರಿಯೊಬ್ಬನಿಗೆ ದೊರಕೀತೆ? ಈ ಒಂದು ಕುಂದನ್ನು ಬಿಟ್ಟರೆ ನಾಟಕ ಚೆನ್ನಾಗಿದೆ. ಅಲ್ಲದೆ ಶ್ರೋತೃಗಳ ಗಮನ ಬಸವಣ್ಣನು ಕಪ್ಪಡಿ ಸಂಗಮದಲ್ಲಿ ಐಕ್ಯವಾಗುವ ವಿಷಯದ ಕಡೆಗಿರುವುದರಿಂದ ಈ ಕಡೆಗೆ ಹರಿಯುವುದಿಲ್ಲ ಎಂದೇ ಹೇಳಬೇಕು.

ನಾಟಕ ಪ್ರಾರಂಭವಾಗುವುದು

ಚಕೋರಂಗೆ ಚಂದ್ರಮನಾ ಚಿಂತೆ
ಅಂಬುಜಕೆ ಭಾನುವಿನ ಉದಯದ ಚಿಂತೆ
ಭ್ರಮರಂಗೆ ಪರಿಮಳದ ಬಂಡುಂಬುವ ಚಿಂತೆ
ಎನಗೆ ನಮ್ಮ ಕೂಡಲಸಂಗಮನ ನೆನೆವ ಚಿಂತೆ

ಇದು ಅರ್ಥಪೂರ್ಣವಾದ ವಚನ. ಹೊರಗಾದ ಶಿವದ್ರೋಹ, ಬೀಳದಿದ್ದರು ಕಣ್ಗೆ, ಕೇಳದಿದ್ದರು ಕಿವಿಗೆ, ಬಸವಣ್ಣನ ಮನ ಶೃತಿಗೈದ ವೀಣೆಯಂತಿರುವುದರಿಂದ ಶಿವದ್ರೋಹ ಎಲ್ಲಿಯೋ ನಡೆದಿರಲಿ ಅದು ಬರುವ ಸದ್ದಿಗೇ ಸೂಕ್ಷ್ಮಜ್ಞನಾದ ಬಸವಣ್ಣನ ಮನ ಝುಮ್ಮೆನ್ನುತ್ತದೆ. ಅವನ ಮನದಲ್ಲಾಗಲೆ ಕಪ್ಪಡಿಯ ಸಂಗಮನ ನೆನಪಾಗುತ್ತದೆ. ಅಲ್ಲಿಂದ ಶ್ರೀಸೂತ್ರ ಬಾ ಎಂದು ಎಳೆದಂತೆ ಭಾಸವಾಗುತ್ತದೆ. ಮೇಲೆ ಹೇಳಿದ ವಚನದ ಜೊತೆಯಲ್ಲಿಯೇ

ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ ?
ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ ರಜತುಂಬಿ
ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ ?
ತನುವಿನಲಿ ಹುಸಿ ತುಂಬಿ, ಮನದೊಳಗೆ ವಿಷಯತುಂಬಿ
ಮನೆಯೊಳಗೆ ಮನೆಯೊಡೆಯನಿಲ್ಲ,
ಕೂಡಲಸಂಗಮದೇವ

ಎಂಬ ವಚನ ಬರುತ್ತದೆ. ಮತ್ತೆ ಇದೇ ವಚನವನ್ನು ಎರಡನೇ ದೃಶ್ಯದ ಕೊನೆಯಲ್ಲಿಯೂ ನುಡಿಸಲಾಗುತ್ತದೆ. ಈ ಎರಡು ಸನ್ನಿವೇಶಗಳಲ್ಲಿಯೂ ಇದು ಅರ್ಥಪೂರ್ಣವಾಗಿದೆ.

"ಎಲೆ ಮಗನೆ, ಬಸವಣ್ಣ, ನಿನ್ನಂ ಮಹೀತಳದೊಳು ಮೆಱೆದಪೆವು, ನೀಂ ಬಿಜ್ಜಳರಾಯನಿರ್ಪ ಮಂಗಳವಾಡಕ್ಕೆ ಪೋಗು" "ಎಲೆ ಮಗನೆ, ಎಲೆ ಕಂದ, ಎಲೆ ಬಸವ... ನಿನ್ನೊಡನೆ ಬಪ್ಪೆಂ...." (ಬ.ದೇ.ರ.) ಎಂದು ಶಿವನಿಂದ ಅಭಯವನ್ನು ಹೊಂದಿ ಅವನ ಕಾರುಣ್ಯದ ಶಿಶುವಾದ ಬಸವ ಮತ್ತೆ ಶಿವನಲ್ಲಿ ಐಕ್ಯವಾಗಲು ಕಪ್ಪಡಿ ಸಂಗಮಕ್ಕೆ ಶಿವನನ್ನು ಅರಸಿಕೊಂಡು ಹೋಗುವುದು ಧ್ವನಿಪೂರ್ಣವಾಗಿದೆ. ಅವನ ಮನಸ್ಸಿನ ರಿಕ್ತ ಸ್ಥಿತಿಯನ್ನು ಈ ವಚನ ಈ ಸಂದರ್ಭದಲ್ಲಿ ತೆರೆದು ತೋರುತ್ತದೆ. ನೀಲಾಂಬಿಕೆಯೂ 'ಸಂಗಯ್ಯನೇ ಇಂತು ಅಂಗಯ್ಯ ಇಷ್ಟಲಿಂಗವಾಗಿರಲಾಗಿ ಕಪ್ಪಡಿಯ ಕ್ಷೇತ್ರದಲೆ ಅವನನರಸಲುಬೇಕೆ' ಎಂದು ಬಸವಣ್ಣ ಕಪ್ಪಡಿ ಸಂಗಮಕ್ಕೆ ಹೋದುದಕ್ಕೆ ಅಸಮ್ಮತಿಯನ್ನು ಸೂಚಿಸುತ್ತಾಳೆ. ಈ ನಿಲುವಿನಿಂದ ನೋಡಿದಾಗ ಬಸವಣ್ಣ ಕಪ್ಪಡಿ ಸಂಗಮದಲ್ಲಿ ಐಕ್ಯವಾದುದಕ್ಕಿಂತ ನೀಲಾಂಬಿಕೆ ಅಲ್ಲಿಯೇ ಇಷ್ಟಲಿಂಗದಲ್ಲಿ ಐಕ್ಯವಾದುದು ಹೆಚ್ಚಿನದಾಗಿ, ಮಹತ್ವದ್ದಾಗಿ, ಮಹಾಸಂಗಮವಾಗಿ ಕಾಣುತ್ತದೆ.

ಭಾವನಾಪ್ರಧಾನವಾದ ಈ ನಾಟಕದಲ್ಲಿ ಸಂಭಾಷಣೆಗಳು ಗೀತಾತ್ಮಕವಾಗಿರುವುದರಿಂದ ಶ್ರೋತೃಗಳ ಮೇಲೆ ಹೆಚ್ಚಿನ ಪರಿಣಾಮವನ್ನು ಬೀರುತ್ತದೆ.

* * *

'ಮಹಾಸಂಗಮ' ನಾಟಕದ ವಸ್ತುವಿನಲ್ಲಿ ಕೆಲವು ಬದಲಾವಣೆಗಳನ್ನು ಮಾಡಿಕೊಂಡಿರುವಂತೆಯೇ 'ನಾದಸೇತು' ನಾಟಕದ ವಸ್ತುವಿನಲ್ಲೂ ಕೆಲವು ಬದಲಾವಣೆಗಳನ್ನು ನಾಟಕಕಾರರು ಮಾಡಿಕೊಂಡಿದ್ದಾರೆ. ಹರಿಹರನ ಪ್ರಕಾರ ಅಲ್ಲಮ ನಿರ್ಮಾಯನೆಂಬ ಗಣನಾಥ. ಶಾಪನಿಮಿತ್ತದಿಂದ ಭೂಲೋಕದಲ್ಲಿ ಬಳ್ಳಿಗಾವೆಯ ನಾಗಾವಾಸದ ಅಧಿಪತಿಯ ಮಗನಾಗಿ ಹುಟ್ಟಿ ಕಾಮಲತೆಯ ಸಹವಾಸದಲ್ಲಿ ಕೆಲವು ಕಾಲವಿದ್ದು, ಅವಳ ಮರಣಾನಂತರ ವಿರಕ್ತನಾಗಿ, ಅನಿಮಿಷಯ್ಯನ ಅನುಗ್ರಹದಿಂದಾಗಿ ಸಿದ್ಧನಾಗುತ್ತಾನೆ. ಹರಿಹರನ ಅನಂತರ ಬಂದ ವೀರಶೈವ ಕವಿಗಳಿಗೆ ಅಲ್ಲಮ ಶಾಪನಿಮಿತ್ತವಾಗಿ ಭೂಲೋಕದಲ್ಲಿ ಹುಟ್ಟಿದ ಎಂಬುದೂ, ಕಾಮಲತೆಯೊಡನೆ ಕೆಲಕಾಲ ಇದ್ದ ಎಂಬುದೂ ಸಹ್ಯವಾದಂತೆ ಕಾಣುವುದಿಲ್ಲ. ಇದನ್ನು ಪ್ರಥಮವಾಗಿ ವಿರೋಧಿಸಿದವನು ಚಾಮರಸ.

ಅವನು ಅಲ್ಲಮನನ್ನು ಶಿವನ ಅವತಾರವೆಂದೇ ಪರಿಗಣಿಸಿದ್ದಾನೆ. ಪ್ರಭುಲಿಂಗಲೀಲೆಯಲ್ಲಿ ಅಲ್ಲಮನ ಒಳಗನ್ನು ಅರಿಯಲು ಮೊದಲು ಪಾರ್ವತಿಯು ತಾಮಸಕಳೆ ಬೆಳುವಲನಾಡಿನ ಮಮಕಾರ ಮತ್ತು ಮೋಹಿನಿಯರಿಗೆ ಮಾಯೆ ಎಂಬ ಮಗಳಾಗಿ ಹುಟ್ಟುತ್ತಾಳೆ. ತನ್ನ ಪ್ರಯತ್ನದಲ್ಲಿ ಸೋತ ಮಾಯೆ ಕೈಲಾಸಕ್ಕೆ ಹಿಂದಿರುಗುತ್ತಾಳೆ. ಅನಂತರ ಪಾರ್ವತಿಯು ಸಾತ್ವಿಕ ಕಳೆ ಉಡುತಡಿಯ ನಿರ್ಮಳ ಮತ್ತು ಸುಮತಿಯರಿಗೆ ಮಹಾದೇವಿಯಾಗಿ ಜನಿಸಿ ಪಾರ್ವತಿಯ ಪೈಜೆಯನ್ನು ಪೂರ್ಣಗೊಳಿಸಿ ಶ್ರೀಶೈಲದಲ್ಲಿ ಮಲ್ಲಿಕಾರ್ಜುನನನ್ನು ಅರಸುತ್ತಾ ಹೋಗಿ ಐಕ್ಯಳಾಗುತ್ತಾಳೆ. ಚಾಮರಸನಂತೆಯೆ ಹರಿಹರನ ನಿಲುವನ್ನು ವಿರೋಧಿಸಿ ಕೆಲವು ಶೂನ್ಯಸಂಪಾದನೆಗಳು ಸಂಕಲನವಾದವು. ಪ್ರಕೃತ ನಾಟಕದಲ್ಲಿ ಅಲ್ಲಮ ಶಿವನ ಅವತಾರ–ಶಿವನೆ. ನಾಟಕದ ಕೊನೆಯಲ್ಲಿ ಬರುವ ಅಲ್ಲಮನ ಮಾತುಗಳಿಂದ ಅಲ್ಲಮ ಶಿವನೆ ಎನ್ನುವುದು ಸ್ಪಷ್ಟವಾಗುತ್ತದೆ.

ಕಾಮಲತೆಯ ಪಾತ್ರದಲ್ಲಿ ಮಾಯೆ ಮತ್ತು ಅಕ್ಕಮಹಾದೇವಿಯ ಪಾತ್ರಗಳು ಮೇಳವಿಸಿವೆ. ಅಲ್ಲಮನೆ ಕಾಮಲತೆಯನ್ನು ಒಂದೆಡೆ 'ಮಾಯೆ' ಎಂದು ಸಂಬೋಧಿಸುತ್ತಾನೆ. (ಕಾಮಲತೆ ಎಂದರೆ ಮಾಯೆ ಎಂದು ತಾನೆ ಅರ್ಥ !) ಕಾಮಲತೆ ನಾಟಕದ ಕೊನೆಯಲ್ಲಿ—

ಈಗಳರಿತೆನು ನಾನು
ಸಾವಿಲ್ಲದ ಕೇಡಿಲ್ಲದ, ರೂಹಿಲ್ಲದ ಚಲುವಂಗೇಕೊಲಿದೆನೆಂಬುದನು,
ಅನಂತಕಾಲವೂ ನಿನಗೇಕೆ ನಾನಿಂತು ತಪಿಸಿದ್ದೆನೆಂಬುದನು

ಎನ್ನುವ ಮಾತುಗಳು ಅಕ್ಕಮಹಾದೇವಿಯ ಪ್ರಸಿದ್ಧ ವಚನವನ್ನು ನೆನಪಿಗೆ ತರುತ್ತದೆ. ಹೀಗೆ ಕಾಮಲತೆಯ ಪಾತ್ರದಲ್ಲಿ ಮಾಯೆ ಮತ್ತು ಅಕ್ಕಮಹಾದೇವಿಯ ಪಾತ್ರಗಳು ಐಕ್ಯವಾಗಿವೆ.

ಅಲ್ಲಮ ನಾಟಕದ ಪ್ರಾರಂಭದಲ್ಲಿಯೆ ಮಾಯಾ ಕೋಲಾಹಲನಾಗಿ, ಸಿದ್ಧನಾಗಿ ಕಂಡುಬರುತ್ತಾನೆ. ಅವನು ಕಾಮಸನ್ನಿಭ ಚದುರ; ಬೆಳುದಿಂಗಳನು ತೊಟ್ಟ ಕುಸುಮಾಸ್ತ್ರನಂತೆ. ಇಂತಹ ಅಲ್ಲಮ ತಾನಾಗಿಯೆ ಮಧುಕೇಶ್ವರನ ಗುಡಿಗೆ ಬಂದು ಮದ್ದಳೆಯನ್ನು ನುಡಿಸಿದಾಗ (ಪ್ರಭುಲಿಂಗಲೀಲೆಯಲ್ಲಿ ಅಲ್ಲಮನ ಮದ್ದಳೆಯ ದನಿಯನ್ನು ಕೇಳಿದ ಮಾಯೆ ಅಲ್ಲಮನನ್ನು ತಾನಾಗಿಯೆ ಕರೆಸಿಕೊಳ್ಳುತ್ತಾಳೆ ಮಧುಕೇಶ್ವರ ದೇವಾಲಯಕ್ಕೆ.) ಸಹಜವಾಗಿಯೆ ಅವನ ರೂಪಿಗೂ, ಕಲೆಗಾರಿಕೆಗೂ ಕಾಮಲತೆ ಸೋಲುತ್ತಾಳೆ. ಆ ಧ್ವನಿ (ಮದ್ದಳೆಯ ಶಬ್ದ) ಅವಳಿಗೆ—

ಜನ್ಮಜನ್ಮಾಂತರದ ಅಕ್ಕರೆಯ ಕರೆ ಮೊರೆಯೊ,
ಭವಭವದ ವಿಸ್ಮೃತಿಯ ಸವಿ ನೆನಹುಗಳ ತೆರೆಯೊ,
ಅಥವಾ ಮುಂದನ್ನೊರೆವ ಅಭಯ ಶಂಖಧ್ವನಿಯೊ

ಎಂಬಂತೆ ಭಾಸವಾಗುತ್ತದೆ.

ಅಲ್ಲಮ ಕಾಮಲತೆಗೆ ಗುರುವಾಗಿ, ನಾಟ್ಯಶಿಕ್ಷಾಚಾರ್ಯನಾಗಿ ಅರಮನೆಯಲ್ಲಿದ್ದಾಗಲೂ

ಅವಳು ಪ್ರೀತಿಯನ್ನು ಬೇಡಿದರೆ ಅವಳಿಗೆ ಸಿಗುವುದು ಕಸಿಕರದ ಕೂರಲಗು ! ಅವಳು ರೂಪಮದದಿಂದ, ದೇಹಮೋಹದಿಂದ ಅಲ್ಲಮನನ್ನು ಪಡೆಯಲು ಪ್ರಯತ್ನಿಸಿ ವಿಫಲಳಾಗುತ್ತಾಳೆ. ಕಾಳಿಕೆಯಿಂದ ಮುಕ್ತವಾದಾಗಲೆ ಒಲುಮೆ ಪೂರ್ಣವಾಗುವುದು. ರೂಪಮದ, ದೇಹಮೋಹವ ತೊರೆದು ದಿವ್ಯಪ್ರೇಮದ ಹೈಮಾಚಲೋನ್ನತಿಗೆ ಏರಲು ಅಲ್ಲಮ ಹೇಳುತ್ತಾನೆ. 'ಅಂಗವನು ಧರಿಸಿಯೂ ಅಂಗದ ಹಂಗ ತೊರೆಯಬೇಕೆಂದೆಂಬ ಹಟವೇಕೆ ?' ಎಂಬ ಕಾಮಲತೆಯ ಪ್ರಶ್ನೆಗೆ 'ತನುವಿನೊಳಗಿದ್ದೂ ತನುವ ಗೆಲಬೇಕು ಕಾಮಲತೆ ಬಂಧನಕೆ ಒಳಪಡಿಸಿದೀವಸ್ತು ಎಂದಿಗೂ ಬಂಧನವೆ !' 'ಎದೆಯೊಲವಿಗಲ್ಲದೆಯೆ ಮೈಚೆಲುವಿಗಾನೊಲಿಯೆ' 'ಬೆಳಕು ಬೆಳಕಿಗೆ ಸನಿಯ ಕತ್ತಲೆಗೆ ದೂರ' ಎಂದು ಅಲ್ಲಮ ಹೇಳುತ್ತಾನೆ. ಹೀಗೆ ಎಚ್ಚರಿಸಿ ಕಾಮಲತೆಯನ್ನು ಅಲ್ಲಮ ಬೆಳಕಿನರಮನೆಯತ್ತ ಕರೆದೊಯ್ಯುತ್ತಾನೆ. ಕಾಮಲತೆ ಬಯಲ ಜಂಗಮನಾದ ಅಲ್ಲಮನಿಂದ ಬೆಳಕನ್ನು ಕಾಣುತ್ತಾಳೆ.

ಈ ಪುಟ್ಟ ನಾಟಕದಲ್ಲಿ ಮದ್ದಲೆಯ ಅಥವಾ ಮುರಜದ ಪಾತ್ರ ಪ್ರಮುಖವಾದುದು. ಅಲ್ಲಮ ಮದ್ದಲೆಯನ್ನು ನುಡಿಸುವುದರಲ್ಲಿ ಬಲುಚದುರ. ಆದರೆ ಅವನ ವಾದನ ರೀತಿ ವಿಶಿಷ್ಟವಾದುದು : ಮದ್ದಲೆಯ ದನಿಯಿಂದ ಮದನನೆಚ್ಚರಗೊಳಿಸಿ ಒಳಗ ಬೆಳಗುವುದಕ್ಕಾಗಿ ಅನಂತರ ಆ ದನಿಗು ಮಿಗಿಲುಂಟು ಮನದ ಮದ್ದಲೆಯ ನಿನಾದ ! ಎಂದು ತಿಳಿಸುವುದಕ್ಕಾಗಿ. ಮದ್ದಲೆಯ ದನಿ ಬರಿ ದನಿಯಲ್ಲ : ಅದು ಅನುರಾಗ ದೀಪ್ತಿಯನ್ನು ಹತ್ತಿಸುವ ಬೆಳಕು ದನಿ. ಮತ್ತೆ ವಿರಹದುರಿಯನ್ನು ಕೆದಕಿ ಮೊಳಗುವ ಬೆಂಕಿ ದನಿ. ಹೀಗೆ ತನ್ನೆಡೆಗೆ ಸೆಳೆದು, ವಿರಹದುರಿಯ ಮೂಸೆಯಲ್ಲಿ ಕಾಸಿ ಪುಟವಿಡುವ ದನಿ. ಕಾಮಲತೆ ಇನ್ನೂ ಪ್ರೇಮಲತೆಯಾಗದಿದ್ದಾಗ ಅಲ್ಲಮ ಕಾಮಲತೆಯರನ್ನು ಬೇರ್ಪಡಿಸುವ ನಾದದ ಹೊನಲು. ಕಾಮಲತೆ ಪ್ರೇಮಲತೆಯಾದಾಗ ಅವಳನ್ನು ಅಲ್ಲಮನಲ್ಲಿಗೊಯ್ಯುವ ನಾದಸೇತು !

ಪ್ರಭುಲಿಂಗಲೀಲೆಯಲ್ಲಿ ಅಲ್ಲಮ ಮಾಯೆಯೊಡನೆ ವ್ಯವಹರಿಸುವ ರೀತಿ ಸ್ವಲ್ಪ ಒರಟಾದುದು ಎನ್ನಿಸಿದರೆ 'ನಾದಸೇತು'ವಿನಲ್ಲಿ ಒರಟುತನವನ್ನು ಕಳೆದುಕೊಂಡ ಕಾಮಲತೆಯನ್ನು ಎಚ್ಚರಗೊಳಿಸಬೇಕೆಂಬ ಅಲ್ಲಮನನ್ನು ಕಾಣುತ್ತೇವೆ. 'ನಾದಸೇತು'ವಿನಲ್ಲಿ ಅಲ್ಲಮ ಕಾರುಣ್ಯಮೂರ್ತಿಯಾಗಿದ್ದಾನೆ; ಹೆಳವನೆಡೆಗೇ ಹರಿದು ಬರುವ ಜ್ಞಾನಗಂಗೆಯಾಗಿದ್ದಾನೆ. ಪ್ರಭುಲಿಂಗಲೀಲೆಯಲ್ಲಿ ಬರುವ ಮಾಯೆ ಮತ್ತು ಅಕ್ಕಮಹಾದೇವಿಯ ಪ್ರಸಂಗಗಳನ್ನು ಇಲ್ಲಿ ಚಾತುರ್ಯದಿಂದ ಬೆಸೆಯಲಾಗಿದೆ. ಬೆಸುಗೆಯೆಲ್ಲಿ ಎಂಬುದು ತಿಳಿಯುವುದೇ ಇಲ್ಲ. ಅಷ್ಟೊಂದು ಕಲಾತ್ಮಕವಾಗಿದೆ ಕಾಮಲತೆಯ ಪಾತ್ರ ! 'ನಾದಸೇತು' 'ಪ್ರಭುಲಿಂಗಲೀಲೆ'ಯ ಮಾಯೆಯ ಪ್ರಸಂಗ ಮತ್ತು ಅಕ್ಕಮಹಾದೇವಿಯ ಪ್ರಸಂಗಗಳನ್ನು ಒಂದೆಡೆ ಭಟ್ಟಿಯಿಳಿಸಿದ ರಸಘಟ್ಟಿ !

ಎರಡು ದೃಶ್ಯಗಳ ಈ ನಾಟಕ ಚುರುಕಾದ, ಅರ್ಥಪೂರ್ಣವಾದ ಸಂಭಾಷಣೆಗಳಿಂದ ಕೂಡಿದೆ. ಅಲ್ಲಮನ ಮಾತುಗಳೂ ಅವನ ವಚನಗಳಂತೆಯೆ ! ಆದರೆ ಬೆಡಗಿನ

ವಚನಗಳನ್ನು ಅರ್ಥಮಾಡಿಕೊಳ್ಳಬೇಕಾದ ಕ್ಲೇಶ ಇಲ್ಲಿ ಇಲ್ಲ. ಎರಡನೆಯ ದೃಶ್ಯದಲ್ಲಿ ಅಲ್ಲಮ ಅದೃಶ್ಯವಾದ ಮೇಲೆ ಕಾಮಲತೆಗೆ ಕೇಳಿಬರುವ ಅಲ್ಲಮನ ಧ್ವನಿ (ಮಾತುಗಳು) ಬಹು ಪರಿಣಾಮಕಾರಿಯಾಗಿ ಬಂದಿವೆ.

'ಅವಳು ತೋರಿದ ಬೆಳಕು' ಪ್ರೊ. ರಾಹುಲ ಸಾಂಕೃತ್ಯಾಯನ ಅವರ "ಪ್ರಭಾ" ಎಂಬ ಸಣ್ಣ ಕತೆಯ ಆಧಾರದ ಮೇಲೆ ರಚಿತವಾದ ಪ್ರಸಾರ ನಾಟಕ. ಇದರ ನಾಯಕ ನಾಯಕಿಯರು ಅಶ್ವಘೋಷ—ಪ್ರಭಾ. ಸಾಕೇತದ ಮಡಿವಂತ ಬ್ರಾಹ್ಮಣಕುಲದಲ್ಲಿ ಹುಟ್ಟಿದ ಅಶ್ವಘೋಷ ಯವನರ ಹೆಣ್ಣು ಪ್ರಭಾಳಲ್ಲಿ ಮೋಹಿತನಾಗಲು ಇವರ ಪ್ರೇಮಕ್ಕೆ ಸಂಪ್ರದಾಯ ಅಡ್ಡಬರುವುದು. ಅಶ್ವಘೋಷನ ತಂದೆಯ ಪ್ರಾರ್ಥನೆಗೆ ಕಟ್ಟುಬಿದ್ದು ಮದುವೆಯ ಯೋಚನೆಯನ್ನೇ ಕೈಬಿಡುವ ತ್ಯಾಗವನ್ನು ಪ್ರಭಾ ಮಾಡು ವಳು. ತನ್ನಿನಿಯನಿಗೆ ಪ್ರಭಾ ಪ್ರೇಮದ ಅಮರತ್ವವನ್ನು ತಿಳಿಯಪಡಿಸಿ ಸರಯೂ ಪ್ರವಾಹದಲ್ಲಿ ತೇಲಿಹೋಗುವಳು. ಇನಿಯಳು ತೋರಿದ ಬೆಳಕಿನಲ್ಲಿ ಅಶ್ವಘೋಷ ನಡೆಯು ವನು. ಇದಿಷ್ಟು ನಾಟಕದ ವಸ್ತು. ಪ್ರೇಮ ಚಿರಂತನವಾದುದೆಂಬ ಸಂದೇಶವನ್ನು ಸಾರ ಹೊರಟಿರುವ ಈ ನಾಟಕ ತನ್ನ ಮಿತಿಯಲ್ಲೇ ಪರಿಣಾಮವನ್ನುಂಟುಮಾಡಲು ಪ್ರಯ ತ್ನಿಸಿದೆ. ಸ್ವಲ್ಪಮಟ್ಟಿನ ಯಶಸ್ಸನ್ನೂ ಪಡೆದಿದೆ. ಅಶ್ವಘೋಷ-ಪ್ರಭಾರ ಪ್ರಣಯ ವರ್ಧ ನೆಗೆ ಅವರ 'ಊರ್ವಶೀ ವಿಯೋಗ' ನಾಟಕದಲ್ಲಿನ ಪಾತ್ರ ಸಹಾಯವಾಗಿದ್ದರೂ, ನಾಟಕದಲ್ಲಿ ಪ್ರತಿಪಾದಿತವಾಗಿರುವಷ್ಟರಮಟ್ಟಿಗೆ ಪ್ರೇಮ ಗಾಢತ್ವವನ್ನು ಹೊಂದಿಲ್ಲ. ಬಹುಶಃ, ಇದು ಪ್ರಸಾರನಾಟಕವಾದುದರಿಂದ ತನ್ನ ಮಿತಿಯಲ್ಲಿ ಸಾಧ್ಯವಾದಷ್ಟು ಪರಿಣಾಮ ಬೀರಲು ಪ್ರಯತ್ನಿಸಿದೆಯೆಂದು ಮೇಲಿನ ಕೊರತೆಗೆ ಕಾರಣವನ್ನು ಗ್ರಹಿಸ ಬಹುದು. ಅಶ್ವಘೋಷ-ಪ್ರಭಾರ ಗಾಢಮೈತ್ರಿಯ ಬೆಸುಗೆ ಬಿಡಿಸಲು ಕಾರಣವಾಗಿ ಬಂದ ಮೇಲು-ಕೀಳುಗಳ ಘರ್ಷಣೆ ಇನ್ನಷ್ಟು ಸ್ಪಷ್ಟಗೊಳ್ಳಬೇಕಾಗಿದ್ದಿತು. ಅಶ್ವ ಘೋಷನ ತಂದೆ ಹಾಗೂ ಪ್ರಭಾರ ಭೇಟಿ ಪರಿಣಾಮದಲ್ಲಿ ಸಪ್ಪೆ. ಪುತ್ರಭಿಕ್ಷೆ ಬೇಡಿದ ಅಶ್ವಘೋಷನ ತಂದೆಗೆ ಪ್ರಭಾ ತಾನು ಚಿರಕನ್ಯೆಯಾಗಿಯೇ ಉಳಿಯುವ ವಾಗ್ದಾನ ಕೊಡುವಳು. ಅವಳ ಮನದಾಳದ ತೊಳಲು ಈ ಸಂದರ್ಭದಲ್ಲಿ ಎಲ್ಲಿಯೂ ಪ್ರಕಟ ಗೊಳ್ಳುವುದೇ ಇಲ್ಲ. ಪ್ರೇಮ ಕೇಳಿದಾಗ ತ್ಯಾಗಮಾಡುವಷ್ಟು ಸುಲಭವೆ? ಎಂಬ ಅನಿಸಿಕೆ ಓದುಗನಲ್ಲಿ ಸಹಜವಾಗಿಯೇ ಉಂಟಾಗುತ್ತದೆ. ಈ ಕೊರತೆ ಪೂರ್ಣಗೊಳ್ಳು ವುದು ಅಶ್ವಘೋಷನನ್ನು ಪ್ರಭಾ ಕೊನೆಯ ಬಾರಿ ಭೇಟಿ ಮಾಡುವಲ್ಲಿ. ತಾನು ಕೊಟ್ಟ ಮಾತು ಫಲಿಸಲು ಅವಳು ಇನಿಯನ ಮನದ ಪ್ರೇಮದ ತುಡಿತವನ್ನು ಒಂದು ಹದಕ್ಕೆ ತರುವಳು. ತನ್ನಿನಿಯನ ಮನಃಪರಿವರ್ತನೆ ಮಾಡುವ ಈ ಭಾಗ ನಿಜಕ್ಕೂ ನಾಟಕದಲ್ಲಿ ಬಹಳ ಪ್ರಭಾವಶಾಲಿಯಾಗಿ ಬಂದಿದೆ. ಪ್ರೇಮ ತ್ಯಾಗದಿಂದ ಅಮರವಾಗುವುದೆಂಬ ಪಾಠವನ್ನು ತನ್ನ ಬಲಿದಾನದ ಮೂಲಕ ಪ್ರಭಾ ವ್ಯಕ್ತಗೊಳಿಸುವಳು. ಓದುಗರ ಮನ ದಲ್ಲಿ ಅವಳ ಪಾತ್ರ ಈ ಕಾರಣದಿಂದಲೇ ಮಸುಕಾಗದೆ ನಿಲ್ಲುತ್ತದೆ. ಈ ನಾಟಕ ಗದ್ಯದಲ್ಲಿ ದ್ದರೂ ಅದರ ಗದ್ಯಶೈಲಿ ಬಿಟ್ಟೂಬಿಡದೆ ಓದಿಸಿಕೊಂಡು ಹೋಗುವ ಶಕ್ತಿಯನ್ನು ಪಡೆದಿದೆ.

‘ರಾಣಿ ದುರ್ಗಾವತಿ’, ‘ಮಹಾಸಂಗಮ’, ‘ನಾದಸೇತು’ ಮತ್ತು ‘ಅವಳು ತೋರಿದ ಬೆಳಕು’ ಈ ನಾಟಕಗಳಲ್ಲಿ ‘ರಾಣಿ ದುರ್ಗಾವತಿ’ಯನ್ನುಳಿದು ಉಳಿದ ಮೂರು ತುಂಬಾ ಚೆನ್ನಾಗಿವೆ. ಇಪ್ಪತ್ತು ನಿಮಿಷದಿಂದ ಐವತ್ತು ನಿಮಿಷದ ವರೆಗಿನ ಹರಹಿನಲ್ಲಿ ಈ ನಾಟಕಗಳನ್ನು ಪ್ರಸಾರಗೊಳಿಸಬೇಕಾಗಿದ್ದುದರಿಂದ ನಾಟಕಕಾರರಿಗೆ ಅನೇಕ ರೀತಿಯ ಮಿತಿಗಳು ಇದ್ದುವು. ಆ ಮಿತಿಗಳಿದ್ದೂ ‘ಮಹಾಸಂಗಮ’ ‘ನಾದಸೇತು’ ‘ಅವಳು ತೋರಿದ ಬೆಳಕು’—ಈ ಉತ್ತಮ ನಾಟಕಗಳನ್ನು ಕೊಟ್ಟ ನಾಟಕಕಾರರು ಪ್ರಯತ್ನಿಸಿದ್ದರೆ ಇನ್ನಷ್ಟು ನಾಟಕಗಳನ್ನು ಬರೆಯಬಹುದಿತ್ತು. ನಾಟಕದ ತಂತ್ರಗಳನು ಇಷ್ಟೊಂದು ಚೆನ್ನಾಗಿ ಅಳವಡಿಸಿಕೊಳ್ಳಬಲ್ಲ ನಾಟಕಕಾರರಿಂದ ಈ ಇಪ್ಪತ್ತು ವರ್ಷಗಳ ಅವಧಿಯಲ್ಲಿ ಹೆಚ್ಚಿನ ನಾಟಕಗಳು ಬರಲಿಲ್ಲವೆಂಬುದು ನಿಜಕ್ಕೂ ಆಶ್ಚರ್ಯ. ಡಾ. ಜಿ. ಎಸ್. ಶಿವರುದ್ರಪ್ಪ ಮತ್ತು ಪ್ರೊ. ಕೆ. ಬಿ. ಪ್ರಭುಪ್ರಸಾದರು ಬರೆದ ರೇಡಿಯೋ ನಾಟಕಗಳಲ್ಲಿ ಪ್ರಬುದ್ಧ ನಾಟಕಕಾರರ ಲಕ್ಷಣಗಳನ್ನು ಕಾಣಬಹುದು. ಅವರು ಮತ್ತಷ್ಟು ನಾಟಕಗಳನ್ನು ಬರೆದಿದ್ದರೆ ನಮ್ಮ ಇತಿಹಾಸದ, ಪುರಾಣದ ಅನೇಕ ಘಟನೆಗಳನ್ನು ಹೊಸ ದೃಷ್ಟಿಯಿಂದ ನೋಡಬಹುದಿತ್ತು. ಹೊಸಹೊಸ ಅರ್ಥಗಳನ್ನು ಕಾಣಬಹುದಿತ್ತು.

## ಎಂ. ಎಂ. ಕಲ್ಬುರ್ಗಿ

# ಶಬರಶಂಕರವಿಳಾಸ ಸಂಗ್ರಹ

ಕಾವ್ಯಗಳನ್ನು ಸಂಗ್ರಹಿಸುವುದರ ಪರಮೋದ್ದೇಶವೆಂದರೆ ಕವಿ ಮತ್ತು ಕೃತಿಗಳ ನಿಜ ಸ್ವರೂಪವನ್ನು ಒಂದು ಪರಿಮಿತ ವ್ಯಾಪ್ತಿಯಲ್ಲಿ ತೋರಿಸಿಕೊಡುವುದು. ಅಸಗನ ಸಂಸ್ಕೃತ ಶಾಂತಿಪುರಾಣದ ಸಂಕ್ಷಿಪ್ತರೂಪವಾದ 'ಲಘುಶಾಂತಿ ಪುರಾಣಂ', ಕುಮಾರವ್ಯಾಸ ಭಾರತ, ಕುಮಾರವಾಲ್ಮೀಕಿ ರಾಮಾಯಣಗಳ ಸಂಗ್ರಹಗಳಾದ 'ಸಂಕ್ಷೇಪ ಭಾರತ', 'ಸಂಕ್ಷೇಪ ರಾಮಾಯಣ' ಇತ್ಯಾದಿ. ಪ್ರಾಚೀನ ಸಂಗ್ರಹಗಳಿಗಿಂತ ಬಹುಶಃ ಬೇರೆಯಾಗಿವೆ ಇಂದು ಸಿದ್ಧಗೊಳ್ಳುತ್ತಿರುವ ಸಂಗ್ರಹಗಳು.

ಈ "ಸಂಗ್ರಹ"ಗಳ ಸೃಷ್ಟಿಗೆ ಮುಖ್ಯ ಪ್ರಚೋದನೆಯೆಂದರೆ ವಿದ್ಯಾರ್ಥಿಗಳು ಮಿತ ಗಾತ್ರದಲ್ಲಿ ಕೃತಿಯನ್ನೋದಲೆಂಬ ಹಂಬಲ. ತಾಯ ಮೈ-ಮನಗಳನ್ನು ಮೇಳವಿಸಿಕೊಂಡು ಅವತರಿಸುವ ಶಿಶುವಿನಂತೆ ಸಂಗ್ರಹವು ಮೂಲ ಕಾವ್ಯದ ಒಡಲಿನಿಂದ 'ಪುನಃ ಸೃಷ್ಟಿ'ಯಾಗಿ ಹೊರಬರಬೇಕು; ತಪ್ಪಿದರೆ ಕವಿ ಕೃತಿಗಳ ಘನತೆಗೆ ಚ್ಯುತಿ ಬರದಂತೆ ಸಂಗ್ರಹಗೊಳ್ಳಬೇಕು. ಆದರೆ "ಸಂಗ್ರಹಕಲಾಶೀಲ"ರ ಕೈಯಲ್ಲಿ ಉಳಿದು ಕಲೆಯಾಗಿ ಬೆಳೆಯಬೇಕಾಗಿದ್ದ ಈ ಕಾರ್ಯ, "ಪಠ್ಯಪುಸ್ತಕ ಪ್ರಲೋಭನ ಲೋಲ"ರ ಕಪಿಮುಷ್ಟಿಯಲ್ಲಿ ಸಿಕ್ಕು ತನ್ನ ಮೂಲೋದ್ದೇಶವನ್ನು ಕಳೆದುಕೊಳ್ಳುತ್ತಿರುವ ಇಂದಿನ ಕಾಲದಲ್ಲಿ ಆದಿಪುರಾಣ, ಪಂಪರಾಮಾಯಣ, ಮಲ್ಲಿನಾಥಪುರಾಣ, ಗಿರಿಜಾಕಲ್ಯಾಣ, ಹರಿಶ್ಚಂದ್ರ ಕಾವ್ಯ, ಸಿದ್ಧರಾಮಪುರಾಣ, ಪ್ರಭುಲಿಂಗಲೀಲೆಗಳಿಂದ ಬಿಡಿಸಿದ ಉತ್ತಮೋತ್ತಮ ಸಂಗ್ರಹಗಳೂ ಹುಟ್ಟಿಕೊಂಡಿವೆ. ಒಂದೆರಡು ಕೊರತೆಗಳಿದ್ದರೂ ಈ ಸಂಗ್ರಹಗಳ ಸಾಲಿನಲ್ಲಿ ನಿಲ್ಲುವ ಅರ್ಹತೆಯನ್ನು ಪಡೆದಿದೆ, ಡಾ|| ಜಿ. ಎಸ್. ಶಿವರುದ್ರಪ್ಪನವರು ಶ್ರೀ ಬಿ. ಎನ್. ಶಾಸ್ತ್ರಿಗಳೊಂದಿಗೆ ಸಿದ್ಧಪಡಿಸಿದ ಶಬರಶಂಕರ ವಿಳಾಸ ಸಂಗ್ರಹ. ಆದರೆ ಕುಮಾರವ್ಯಾಸ ಮೊದಲಾದವರ ಸುತ್ತ ಹುಟ್ಟಿದ ಹತ್ತಾರು ಅಸಮರ್ಪಕ ಸಂಗ್ರಹಗಳು ವಿಜೃಂಭಿಸುತ್ತಿರುವ ಇಂದಿನ ಕಾಲದಲ್ಲಿ, ಇಂಥ ಒಂದು ಒಳ್ಳೆಯ ಸಂಗ್ರಹ ೨೦ ವರ್ಷ ಕಳೆದರೂ ಪ್ರಚಾರ ದೃಷ್ಟಿಯಿಂದ ಹಿಂದೆ ಬಿದ್ದುದು ಆಶ್ಚರ್ಯವೇ ಸರಿ.

ಪೀಠಿಕೆ, ಪಠ್ಯ, ಅನುಬಂಧ—ಇವು ಸಂಪಾದಿತ ಕೃತಿಗಳ ಅಂಗತ್ರಯ. ಪೀಠಿಕೆಯಲ್ಲಿ ಸಂಶೋಧನೆ ಮತ್ತು ವಿಮರ್ಶೆಗಳಿಗೆ ಸಮಾನ ಸ್ಥಾನವಿರಬೇಕು. ಇಲ್ಲಿ ಸಂಶೋಧನೆ, ಕವಿಯ ಬಹಿರಂಗವನ್ನು ಪರಿಚಯಿಸಿದರೆ ವಿಮರ್ಶೆ ಕವಿಯ ಅಂತರಂಗವನ್ನು ಕಾಣಿಸಿ

ಕೊಡುತ್ತದೆ. ನಮ್ಮ ಸಂಪಾದಕರು ವಿಮರ್ಶಕರಾಗಿರುವ ಕಾರಣ, ಅವರ ಸಂಪಾದನೆಗಳು ಸಾಮಾನ್ಯವಾಗಿ ಸಂಶೋಧನೆಯಿಂದ ತುಂಬಿಕೊಂಡು ವಿಮರ್ಶೆಯಿಂದ ಸೊರಗಿ ಹೋಗಿರುತ್ತದೆ. ಪ್ರಸ್ತುತ ಸಂಗ್ರಹ ಮಾತ್ರ ಇದಕ್ಕೆ ವಿರುದ್ಧವೆಂಬಂತೆ ವಿಮರ್ಶೆಯಿಂದ ತುಂಬಿಕೊಂಡಿದೆ. ಇದಕ್ಕೆ ಮುಖ್ಯ ಕಾರಣ ಡಾ। ಶಿವರುದ್ರಪ್ಪನವರು ಭಾರತೀಯ ಮಟ್ಟದಲ್ಲಿ ಪರಿಗಣಿತವಾಗಬಲ್ಲ ವಿಮರ್ಶಕರಾಗಿರುವುದು.

೫೪ ಪುಟಗಳ ಪಠ್ಯಕ್ಕೆ ಬರೆದ ೪೮ ಪುಟಗಳ ಸುದೀರ್ಘ ಪೀಠಿಕೆ ಈ ಕೃತಿಯ ಘನತೆಯನ್ನು ಹೆಚ್ಚಿಸಿದೆಯಾದರೂ ಸಂಶೋಧನೆಗೆ ಮೀಸಲಾಗಿರುವ "ಕವಿಚರಿತ್ರೆ" ವಿಭಾಗದಲ್ಲಿ ಈ ವರೆಗೆ ಬೆಳಕಿಗೆ ಬಂದ ಸಂಗತಿಗಳು ಮಾತ್ರ ನೆಲೆನಿಂತಿವೆ. ಕವಿಯ ದೇಶ, ಕಾಲ, ಚರಿತ್ರೆ, ಕಾವ್ಯಧೋರಣೆಗಳನ್ನು ವಿವರಿಸಿದ್ದರೂ ಷಡಕ್ಷರದೇವನ ಪೂರ್ವಾಶ್ರಮದ ಚರಿತ್ರೆ, ಆತನಿಗೆ ಚಿಕ್ಕದೇವರಾಯ, ಮುದ್ದುಭೂಪರೊಡನಿದ್ದ ಸ್ಪಷ್ಟ ಸಂಬಂಧ, ಕೃತಿ ಸಂಖ್ಯಾ ನಿರ್ಣಯ ಮೊದಲಾದ ಸಂಗತಿಗಳ ಮಥನಕ್ಕೆ ಇಲ್ಲಿ ಅವಕಾಶವಿತ್ತು. ಎರಡನೆಯ ವಿಭಾಗ "ಕಥಾಗರ್ಭ." ಇಲ್ಲಿ ಪದ್ಯರೂಪದ ಶಬರಶಂಕರವಿಳಾಸ, ತನಿಯಾದ ಗದ್ಯ ರೂಪದಲ್ಲಿ ಮೈದೋರಿದೆ. ಸಂಪಾದಕರ ಶ್ರಮಕ್ಕೆ ಸಾಕ್ಷಿಯಾಗಿದೆ. ಮೂರನೆಯ ವಿಭಾಗವಾದ "ಕಥೆಯ ಮೂಲ" ವ್ಯಾಸಭಾರತ, ಶಿವಪುರಾಣ, ಕಿರಾತಾರ್ಜುನೀಯ, ವಿಕ್ರಮಾರ್ಜುನವಿಜಯ, ಕುಮಾರವ್ಯಾಸಭಾರತ, ಚೆನ್ನಬಸವಪುರಾಣಗಳೊಂದಿಗೆ ಶಬರಶಂಕರವಿಳಾಸದ ಘಟನೆ ವರ್ಣನೆಗಳನ್ನು ಇಲ್ಲಿ ಜೊತೆಯಿಟ್ಟು ನೋಡಿದುದು ಸಂಪಾದಕರ ಆಳವಾದ ಅಭ್ಯಾಸಕ್ಕೆ ನಿದರ್ಶನವೆನಿಸಿದೆ. ಬಹುಶಃ ಕನ್ನಡದಲ್ಲಿ ಶಬರಶಂಕರವಿಳಾಸವನ್ನು ಕುರಿತು ಇಂಥ ಅಭ್ಯಾಸ ನಡೆದುದು ಇಲ್ಲಿಯೇ ಮೊದಲು. ಇದು ಷಡಕ್ಷರಿಯ ಮೂಲಧನ—ಅನ್ಯಋಣಗಳ ಪ್ರಮಾಣವನ್ನು ಸ್ಪಷ್ಟಪಡಿಸುತ್ತದೆ. ನಾಲ್ಕನೆಯ ವಿಭಾಗ "ಪಾತ್ರಪರಿಚಯ." ಘಟನಾ ಪ್ರಧಾನವಾದ ಈ ಕೃತಿಯಲ್ಲಿ ಪಾತ್ರ ನಿರ್ಮಾಣಕೌಶಲ್ಯವಿಲ್ಲದ ಕಾರಣ ಅನಿವಾರ್ಯವಾಗಿ ಶಿವ, ಅರ್ಜುನರ ಪಾತ್ರ ಪರಿಚಯ ಮಾತ್ರ ಇಲ್ಲಿ ಎಡೆಪಡೆದಿದೆ. "ಕೃತಿ ವಿಮರ್ಶೆ" ಎಂಬುದು ಐದನೆಯ ವಿಭಾಗ. ಕಾವ್ಯೋದ್ದೇಶ ಮತ್ತು ಕಾವ್ಯಶೈಲಿಗಳ ವಿವೇಚನೆಗಳನ್ನೊಳಗೊಂಡ ಈ ವಿಭಾಗ "ಕಥೆಯ ಮೂಲ" ವಿಭಾಗದಷ್ಟೇ ಉತ್ಕೃಷ್ಟವಾಗಿದೆ.

ಒಟ್ಟಿನಲ್ಲಿ ಈ ಪೀಠಿಕೆ ಕೆಲವು ಗಮನಾರ್ಹ ಅಂಶಗಳನ್ನು ಹೊತ್ತು ನಿಂತಿದೆ. ಅವು: "ಷಡಕ್ಷರಿಯು ಕುಮಾರವ್ಯಾಸನನ್ನೇ ಸಂಪೂರ್ಣ ಅನುಸರಿಸಿದ್ದಾನೆ." "ಶಬರಶಂಕರ ವಿಳಾಸ ಘಟನಾಪ್ರಧಾನವಾದ ಕಾವ್ಯವೇ ಹೊರತು ಪಾತ್ರಪ್ರಧಾನವಾದುದಲ್ಲ." "ಶಬರಶಂಕರವಿಳಾಸ ಮಹಾಕಾವ್ಯವೂ ಅಲ್ಲ, ಖಂಡಕಾವ್ಯವೂ ಅಲ್ಲ, ಅದೊಂದು ಮಧ್ಯಮ ಕಾವ್ಯ." "ಶಿವನಿಗೂ ಅರ್ಜುನನಿಗೂ ನಡೆಯುವ ಕಾಳಗವೇ ಈ ಕಾವ್ಯದ ಕೇಂದ್ರ." "ಅವನು ಮಹಾಕವಿಯೆನ್ನುವುದಕ್ಕಿಂತ ಮಹಾ ಪಂಡಿತನಾದ ಶ್ರೇಷ್ಠ ಕವಿ ಎನ್ನುವುದು ಹೆಚ್ಚು ಸತ್ಯ"—ಮೊದಲಾದ ಮಾತುಗಳಲ್ಲಿ ಸಂಪಾದಕರ ಸ್ವತಂತ್ರವೂ ನಿಷ್ಪಕ್ಷಪಾತವೂ ನಿರ್ದುಷ್ಟವೂ ಆದ ನಿರ್ಣಯ ಎದ್ದು ತೋರುತ್ತದೆ.

ಪಾಠಭಾಗದಲ್ಲಿ ಅಪೇಕ್ಷಿತವಾದುವು ಪಾಠಶುದ್ಧಿ ಮತ್ತು ಸಂಗ್ರಹಶಿಲ್ಪ. "ಇದರ ಸಂಗ್ರಹಕಾರ್ಯದಲ್ಲಿ ನಾವು ಬಹುಮಟ್ಟಿಗೆ ಪ್ರೊ. ಶಿ. ಶಿ. ಬಸವನಾಳರ ಪಾಠಾಂತರಗಳನ್ನು ಆಧಾರವಾಗಿರಿಸಿಕೊಂಡು ಸಂದೇಹಬಂದ ಕಡೆ ನಮ್ಮದೇ ಒಂದು ಪ್ರತಿಯನ್ನು ಅನುಸರಿಸಿದ್ದೇವೆ" ಎಂಬ ಮಾತು ಪೀಠಿಕೆಯಲ್ಲಿ ಬರುತ್ತದೆ. ಆದರೆ ಸಂದೇಹ ಬಂದ ಕಡೆ ತಾವು ಅನುಸರಿಸಿದ ಪಾಠಗಳನ್ನು ಪ್ರತ್ಯೇಕ ಚಿಹ್ನೆಯಿಂದ ಸೂಚಿಸಬೇಕಿತ್ತು. ಇದರಿಂದ ಶ್ರೀ ಬಸವನಾಳ ಪಾಠ ಮತ್ತು ಇವರ ಪಾಠಗಳನ್ನು ತೂಗಿ ನೋಡಲು ಸಾಧ್ಯವಾಗುತ್ತಿತ್ತು. ಅದೇನೇ ಇದ್ದರೂ ಪಾಠದೃಷ್ಟಿಯಿಂದ ಈ ಸಂಗ್ರಹ ಶುದ್ಧವಾಗಿದೆಯೆಂದೇ ಹೇಳಬೇಕು.

"ಸಂಗ್ರಹಶಿಲ್ಪ" ಈ ಕೃತಿಯಲ್ಲಿ ಚೆನ್ನಾಗಿ ಕೈಗೂಡಿದೆ. ಶಬರಶಂಕರವಿಳಾಸದ ೪೬೭ ಪದ್ಯ ಮತ್ತು ಅಧಿಕ ಗದ್ಯ ಇಲ್ಲಿ ೨೨೫ ಪದ್ಯ ಮತ್ತು ಗದ್ಯಗಳಲ್ಲಿ ಅಡಕಗೊಂಡಿದೆ. ಇದನ್ನು ಸಾಧಿಸಲೋಸುಗ ಪಾಂಡಿತ್ಯದ ಪ್ರತೀಕವಾದ ಶುಷ್ಕವರ್ಣನೆ, ಔಚಿತ್ಯ ಮೀರಿದ ಸುದೀರ್ಘ ಘಟನೆಗಳ ತುಂಬ ಎಚ್ಚರವಹಿಸಿ ಕತ್ತರಿಯಾಡಿಸಿದ್ದಾರೆ. ಹೀಗಾಗಿ ತಗ್ಗು ದಿನ್ನೆಗಳಿಂದ ಕೂಡಿದ ಕಥೆಯ ಕಾಡುದಾರಿ ಸಮತಲಮಾರ್ಗವಾಗಿ ಪರಿಣಮಿಸಿದೆ. ಸಹೃದಯಶಬರರಿಗೆ ದುರ್ಗಮವಾಗಿದ್ದ ಕಾವ್ಯಾರಣ್ಯ, ವಿಹಾರಯೋಗ್ಯ ಉಪವನವಾಗಿ ಮಾರ್ಪಟ್ಟಿದೆ. ಒಟ್ಟಿನಲ್ಲಿ ಮಧ್ಯಮಧ್ಯ ಒಟ್ಟಿನಿಂದ ವರ್ಣನೆಗಳನ್ನು ಮಿತಗೊಳಿಸಿದುದರಿಂದ ಕಥೆಯ ಪ್ರವಹನಕ್ಕೆ ಯೋಗ್ಯ ಅವಕಾಶ ಲಭಿಸಿದ್ದರೆ, ಪಾಂಡಿತ್ಯಪೂರ್ಣ ಶುಷ್ಕ ಭಾಗಗಳನ್ನು ಕೈಬಿಟ್ಟುದರಿಂದ ಕೃತಿಯ ಕಾಠಿನ್ಯ ಮಾರ್ದವಗೊಂಡಿದೆ. ಈ ಎರಡೂ ಕಾರ್ಯಗಳು ಕೃತಿಗೆ ಅನ್ಯಾಯವಾಗದಂತೆ, ಕವಿಗೆ ಅಪಚಾರವಾಗದಂತೆ ಕೈಗೂಡಿದುದು ಈ ಸಂಗ್ರಹದ ದೊಡ್ಡ ಸಾಧನೆಯಾಗಿದೆ. ಹೀಗೆ ಮಾಡುವಲ್ಲಿ "ಅರುಣೋದಯದರುಣದ್ಯುತಿ...."ಯಂತಹ ಒಂದೆರಡು ಒಳ್ಳೆಯ ಪದ್ಯಗಳು ಕೈಬಿಟ್ಟು ಹೋಗದಂತೆ ನೋಡಿಕೊಳ್ಳಬೇಕಿತ್ತು.

ಕೃತಿಯ ಕೊನೆಗೆ 'ಟಿಪ್ಪಣಿ'ಯನ್ನು ಅನುಬಂಧಿಸಲಾಗಿದೆ. ಸಂಪಾದಕರ ಆಲಸ್ಯ, ಅವಸರಗಳ ಪ್ರತೀಕವಾದ 'ಕಠಿಣಪದಕೋಶ'ಗಳು ಇಂದು ಎಲ್ಲೆಡೆ ಕಂಡುಬರುತ್ತವೆ. ವಿದ್ವಾಂಸರು ಹೋಗಲಿ, ವಿದ್ಯಾರ್ಥಿಗಳಿಗೂ ಉಪಯೋಗವಿಲ್ಲದ ಕೋಶಗಳವು. ಅವುಗಳಿಗಿಂತ ಪ್ರಸ್ತುತ ಕೃತಿಯ ಟಿಪ್ಪಣಿ ಬಹುಪಾಲು ಮೇಲು. ಸಮಾಸಗಳನ್ನು ವಿಗ್ರಹಿಸಿ ಅರ್ಥ ಹೇಳಿದುದು, ಅವಶ್ಯವೆನಿಸಿದಲ್ಲಿ ವಿವರಿಸಿ ಅರ್ಥ ಹೇಳಿದುದು ತುಂಬ ಸಮರ್ಪಕವಾಗಿದೆ. 'ಸಂಗ್ರಹ'ಗಳಿಗೆ ಇಷ್ಟು ಸಾಕೆನಿಸಬಹುದಾದರೂ ಆದಿಪುರಾಣ ಸಂಗ್ರಹ, ಗದಾಯುದ್ಧ ಸಂಗ್ರಹಗಳಿಗೆ ಬರೆದಂತಹ ಟಿಪ್ಪಣಿಯನ್ನೊಳಗೊಂಡಿದ್ದರೆ ಈ ಕೃತಿಯ ಗೌರವ ಇನ್ನೂ ಅಧಿಕವಾಗುತ್ತಿತ್ತು.

ಹೀಗೆ ವಿದ್ಯಾರ್ಥಿಗಳಿಂದಲೂ ವಿದ್ವಾಂಸರಿಂದಲೂ ಮನ್ನಣೆ ಪಡೆವ ರೀತಿಯಲ್ಲಿ ಸಂಗ್ರಹಗೊಂಡಿದೆ, ಈ ಕೃತಿ. ಸಂಪಾದನೆ, ಸಂಗ್ರಹ—ಈ ಉಭಯ ಹೊಣೆಯನ್ನು ತುಂಬ ಎಚ್ಚರಿಕೆಯಿಂದ ನಿರ್ವಹಿಸಿದ್ದಾರೆ, ಈ ಸಂಪಾದಕರು.

ಎನ್. ಬಸವಾರಾಧ್ಯ

# ಡಾ|| ಜಿ.ಎಸ್.ಎಸ್. ಅವರು ಸಂಪಾದಿಸಿರುವ ಕೃತಿಗಳು

ಆಧುನಿಕ ಕನ್ನಡ ಸಾಹಿತ್ಯದ ನವೋದಯ ಕವಿಗಳ ಅಗ್ರಪಂಕ್ತಿಗೆ ಸೇರಿದವರಲ್ಲಿ ಡಾ|| ಜಿ. ಎಸ್. ಶಿವರುದ್ರಪ್ಪನವರು ಪ್ರಮುಖರು. ಪ್ರಖ್ಯಾತರು. ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿ ಕನ್ನಡ ಪ್ರಾಧ್ಯಾಪಕ ರಾಗಿ ಅವರು ಹಮ್ಮಿಕೊಂಡಿರುವ ಹಲವಾರು ಯೋಜನೆಗಳು ಕನ್ನಡ ಸಾಹಿತ್ಯದ ಸರ್ವಾಂಗೀಣ ಪ್ರಗತಿಗೆ ಪರಿಪೂರಕವಾಗಿವೆ ಇದಕ್ಕೆ ಅವರ ದೂರದೃಷ್ಟಿ ಮತ್ತು ಸರ್ವ ವ್ಯಾಪಕ ಮನೋಭಾವವೇ ಕಾರಣ. ಕವಿಯಾಗಿ, ವಿಮರ್ಶಕರಾಗಿ ಅವರ ಹೆಸರು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಚಿರಂತನವಾಗಿ ಉಳಿಯತಕ್ಕಂತಹುದು. ಸ್ವತಂತ್ರವಾದ ಆಲೋಚನೆ ಮತ್ತು ವಿವೇಚನಾಶಕ್ತಿಗಳಿಂದ ಕೂಡಿರುವ ಇವರು ಪ್ರತಿಭಾನ್ವಿತ ಕವಿ ಗಳು. ನಾಡಿನಾದ್ಯಂತ ಶ್ರೀಯುತರ ಕವಿತೆಗಳು ಜನತೆಯ ನಾಲಿಗೆಯ ಮೇಲೆ ನಲಿಯುತ್ತಿವೆ. ಹುಟ್ಟುಕವಿಗಳಾದ ಇವರಿಗೆ ಐವತ್ತು ವರ್ಷಗಳು ತುಂಬುತ್ತಿರುವ ಈ ಸನ್ನಿವೇಶದಲ್ಲಿ ಸನ್ಮಾನಿಸಿ ಗೌರವಿಸಲು ಯೋಚಿಸಿ ಯೋಜಿಸಿರುವುದು ಸಮಯೋಚಿತವೂ, ಯುಕ್ತವೂ, ಅತ್ಯಂತ ಶ್ಲಾಘ್ಯವೂ ಆಗಿದೆ.

ಪ್ರಕೃತ ಡಾ|| ಶಿವರುದ್ರಪ್ಪನವರು ಸಂಪಾದಿಸಿರುವ ಕೆಲವು ಗ್ರಂಥಗಳ ಸ್ಥೂಲ ಪರಿಚಯವನ್ನು ಮಾಡಿಕೊಡಲು ಇಲ್ಲಿ ಯತ್ನಿಸಲಾಗಿದೆ. ಬೆಂಗಳೂರು ವಿಶ್ವವಿದ್ಯಾ ನಿಲಯದ ಕನ್ನಡ ವಿಭಾಗ ಕನ್ನಡ ಅಧ್ಯಯನ ಕೇಂದ್ರವಾಗಿ ಪರಿವರ್ತನೆಗೊಂಡಾಗ ರೂಪಿಸಿಕೊಂಡ ಒಂದು ಸಾರ್ಥಕ ಯೋಜನೆ 'ಸಾಹಿತ್ಯ ವಾರ್ಷಿಕ.' ಕನ್ನಡದಲ್ಲಿ ಆಯಾ ವರ್ಷದಲ್ಲಿ ಹೊರಬಂದ, ಹೊರಬರುತ್ತಿರುವ ಸಾಹಿತ್ಯ ಕೃತಿಗಳ ಒಂದು ಸಮಗ್ರ ಪಟ್ಟಿ ಯನ್ನೂ, ಅವುಗಳ ಒಂದು ವಿಮರ್ಶೆಯನ್ನೂ ಇದು ಒಳಗೊಂಡಿದೆ. ಈ ತೆರನ ಯೋಜನೆ ಮತ್ತೆಲ್ಲೂ ನಡೆದಂತೆ ಕಂಡುಬಂದಿಲ್ಲ. ಕನ್ನಡಿಗರಿಗೆ ಮಾತ್ರವಲ್ಲದೆ ಕನ್ನಡೇತ ರರಿಗೂ ಇದು ಪ್ರಯೋಜನಕಾರಿಯಾದುದು. ಕನ್ನಡ ಸಾಹಿತ್ಯದ ಯಾವ ಯಾವ ಕ್ಷೇತ್ರದಲ್ಲಿ ಏನೇನು ಕೆಲಸ ನಡೆದಿದೆ ಎಂಬುದು ಇದರಿಂದ ವ್ಯಕ್ತವಾಗುತ್ತದೆ. ಇತ್ತೀಚಿನ ವರ್ಷಗಳಲ್ಲಿ ಕನ್ನಡ ಸಾಹಿತ್ಯದ ಬೆಳಸು ಹುಲುಸಾಗಿದೆ. ಕಥೆ ಕಾದಂಬರಿ ವಿಮರ್ಶೆ

ಕಾವ್ಯ—ಇವೇ ಮೊದಲಾದ ಪ್ರಕಾರಗಳಲ್ಲಿ ಹೊರಬರುತ್ತಿರುವ ಎಲ್ಲ ಕೃತಿಗಳ ಒಂದು ಸಾರ್ಥಕ ವಿಮರ್ಶೆಯನ್ನು ಈ ಸಾಹಿತ್ಯ ವಾರ್ಷಿಕದಲ್ಲಿ ಕಂಡುಕೊಳ್ಳಬಹುದಾಗಿದೆ. ಇಲ್ಲಿ ಮಾಡಿರುವ ಎಲ್ಲ ವಿಮರ್ಶೆಗಳೂ ಶ್ರೇಷ್ಠವಾದವುಗಳೆಂದಾಗಲಿ, ಆಖೈರಾದವು ಗಳೆಂದಾಗಲೀ ಭಾವಿಸುವುದಕ್ಕೆ ಎಡೆಯಿಲ್ಲ. ಇದು ಎಂತಾದರೂ ಇರಲಿ, ಕನ್ನಡದಲ್ಲಿ ಪ್ರತಿ ವರುಷವೂ ಪ್ರಕಟವಾಗುವ ವಿವಿಧ ಸಾಹಿತ್ಯಪ್ರಕಾರಗಳ ಒಂದು ವಿಮರ್ಶಾತ್ಮಕ ಸಮೀಕ್ಷೆಯೇ ಈ ಯೋಜನೆಯ ಗುರಿಯಾಗಿದೆ. ಈ ಸಾಹಿತ್ಯ ವಾರ್ಷಿಕದ ಸಂಪಾದಕರು ಮುನ್ನುಡಿಯಲ್ಲಿ "ಇದು ಸುಲಭವಾದ ಕಾರ್ಯವೇನಲ್ಲ. ಬಹುಸಂಖ್ಯೆಯಲ್ಲಿ ವರ್ಷ ವರ್ಷವೂ ಪ್ರಕಟವಾಗುವ ಸಾಹಿತ್ಯ ಕೃತಿಗಳ ಜಾಡು ಹಿಡಿದು ಗುರುತಿಸುವುದು. ಅನಂತರ ಅವುಗಳನ್ನೆಲ್ಲ ಒಂದೆಡೆ ಕೂಡಿಸಿಕೊಳ್ಳುವುದು ಮೊದಲನೆಯ ಕಷ್ಟ. ಅವು ಗಳನ್ನು ತೀರಾ ಮುಖಾಮುಖಿಯಾಗಿ ನಿಂತು ವಿಮರ್ಶಿಸುವುದು ಎರಡನೆಯ ಕಷ್ಟ. ಕೃತಿಗಳಿಗೆ, ಕೃತಿಕಾರರಿಗೆ ತೀರ ಸಮೀಪದಲ್ಲಿಯೆ ನಿಂತು, ಅಂದಂದಿನ ಕೃತಿಗಳನ್ನು ಅಂದಂದೇ ವಿಮರ್ಶಿಸುತ್ತೇನೆಂದು ಹೊರಡುವುದೂ ಪ್ರಿಯವಾದ ಕಾರ್ಯವೇನಲ್ಲ. ಆದರೂ ಅಗತ್ಯವಾಗಿ ಮಾಡಬೇಕಾಗಿರುವ ಕಾರ್ಯ: ತಪ್ಪೋ ಒಪ್ಪೋ, ಯಾರಾ ದರೂ ಮಾಡಲೇಬೇಕಾದ ಕಾರ್ಯ. ಅದನ್ನು ಮಾಡಲು ನಾವು ಹೊರಟಿದ್ದೇವೆ. ನಾವು ಹೊರಟಿರುವ ಉದ್ದೇಶ ಒಳ್ಳೆಯದು. ಪ್ರಯತ್ನ ಪ್ರಾಮಾಣಿಕವಾದದ್ದು ಎಂಬುದೇ ನಮ್ಮ ಬೆಂಬಲಕ್ಕಿರುವ ಧೈರ್ಯ....

ನಾಳೆ, ಕನ್ನಡದಲ್ಲಿ ಯಾವುದೇ ಒಂದು ಸಾಹಿತ್ಯಪ್ರಕಾರವನ್ನು ಕುರಿತು ಕೆಲಸ ಮಾಡಲು ತೊಡಗುವವರಿಗೆ ಈ 'ಸಾಹಿತ್ಯ ವಾರ್ಷಿಕ'ಗಳಿಂದಾಗುವ ಪ್ರಯೋಜನ ಅಷ್ಟಿಷ್ಟಲ್ಲ. ಯಾವ ಯಾವ ವರ್ಷ ಕನ್ನಡದಲ್ಲಿ ಏನೇನು ಕೃತಿಗಳು ಪ್ರಕಟವಾಗಿವೆ. ಸಾಹಿತ್ಯದ ಯಾವ ಯಾವ ಪ್ರಕಾರಗಳಲ್ಲಿ ಏನೇನು ಹೊಸ ಕೆಲಸ ನಡೆದಿದೆ. ಯಾವ ದೃಷ್ಟಿ–ಧೋರಣೆಗಳು ಅವುಗಳ ಹಿನ್ನೆಲೆಗಿವೆ ಎಂಬುದು ನಾಳಿನ ವಿಮರ್ಶಕರಿಗೆ ಹಾಗೂ ಸಂಶೋಧಕರಿಗೆ ಮೂಲಭೂತ ಸಾಮಗ್ರಿಯಾಗಿ ಇದರಿಂದ ಒದಗುತ್ತವೆ. ಹಾಗೆಯೆ ಪ್ರತಿಯೊಂದು ವರ್ಷದ ಸಾಹಿತ್ಯಿಕ ಸಾಧನೆಗಳನ್ನೂ ತೌಲನಿಕವಾಗಿ ಅಧ್ಯಯನ ಮಾಡುವವರ ಪಾಲಿಗೆ ಮತ್ತು ಸಾಹಿತ್ಯ ಚರಿತ್ರೆಯ ಲೇಖಕನಿಗೆ ಇದೊಂದು ಹಣದ ಗಣಿಯಾಗುವುದರಲ್ಲಿ ಸಂದೇಹವಿಲ್ಲ" ಎಂದು ಹೇಳಿರುವ ಮಾತುಗಳು ಅತ್ಯಂತ ಉಚಿತ ವಾದುವು. ಈಗ ಹೊರಬಂದಿರುವ ೧೯೭೧, ೧೯೭೩ ಮತ್ತು ೧೯೭೪ನೆಯ ವರ್ಷದ ಸಾಹಿತ್ಯ ವಾರ್ಷಿಕಗಳು ಸಂಪಾದಕರ ಧ್ಯೇಯ-ಧೋರಣೆಗಳನ್ನು ಸಂಪೂರ್ಣವಾಗಿ ಪ್ರತಿ ಬಿಂಬಿಸುತ್ತಿವೆ ಎಂದು ಧೈರ್ಯವಾಗಿ ಹೇಳಬಹುದಾಗಿದೆ. ಸಂಪಾದಕರ ಪರಿಶ್ರಮ ಸಾರ್ಥಕ ವಾದುದು ಎಂಬುದರ ಬಗೆಗೆ ಎಳ್ಳಷ್ಟೂ ಸಂಶಯವಿಲ್ಲ.

ಡಾ|| ಶಿವರುದ್ರಪ್ಪನವರು ಸಂಪಾದಿಸಿರುವ ಮತ್ತೊಂದು ಕೃತಿ ಕೆ. ಎಸ್. ನರಸಿಂಹಸ್ವಾಮಿ ಅವರ ಅಭಿನಂದನ ಗ್ರಂಥ 'ಚಂದನ'. ಕನ್ನಡದ ಅತ್ಯಂತ ಜನಪ್ರಿಯ ಕವಿಗಳಲ್ಲಿ ಒಬ್ಬರಾದ ಮೈಸೂರು ಮಲ್ಲಿಗೆಯ ಖ್ಯಾತಿಯ ಕೆ.ಎಸ್. ನರಸಿಂಹಸ್ವಾಮಿಗಳು

ನವ್ಯ ನವೋದಯ ಕವಿಗಳ ಸಂಗಮಬಂತಿದ್ದಾರೆ. ಶ್ರೀಯುತರಿಗೆ ಈ ತೆರನ ಸಂಭಾವನಾ ಗ್ರಂಥವನ್ನು ಸಮರ್ಪಿಸಿರುವುದು ಇದೇ ಮೊದಲು. ಈ ಗ್ರಂಥ ಇತರ ಸಂಭಾವನಾ ಗ್ರಂಥಗಳಿಗಿಂತ ವಿಶಿಷ್ಟವಾಗಿರುವಂತೆ ನೋಡಿಕೊಂಡಿರುವುದಾಗಿ ಇದರ ಸಂಪಾದಕರು ಹೇಳಿಕೊಂಡಿದ್ದಾರೆ. ಇದು ಮೆಚ್ಚತಕ್ಕ ಅಂಶವೇ ಸರಿ. ಸಮಕಾಲೀನ ಕವಿಯೊಬ್ಬರಿಗೆ ಅವರ ಅಭಿಮಾನಿಗಳೂ ಮಿತ್ರರೂ ಸೇರಿ ಡಾ|| ಶಿವರುದ್ರಪ್ಪನವರ ಸಂಪಾದಕತ್ವದಲ್ಲಿ ಕೈಕೊಂಡ ಕಾರ್ಯ ಇತರರಿಗೆ ಮಾರ್ಗದರ್ಶಕವಾಗಿದೆ.

ಸಾಹಿತಿಗಳನ್ನು ಸನ್ಮಾನಿಸುವ ವಿಧಾನಗಳು ಹಲವಾರುಂಟು. ಅವುಗಳಲ್ಲಿ ಸ್ಥಿರವಾಗಿ ನಿಲ್ಲುವ, ಸಾಹಿತಿಯ ಸಾಧನೆಗಳನ್ನು ಸಾರ್ಥಕಗೊಳಿಸುವ ವಿಧಾನವೆಂದರೆ ಸಂಭಾವನಾ ಗ್ರಂಥದ ಪ್ರಕಟನೆ. ಸಾಹಿತಿಯನ್ನು ಕುರಿತು ಸಿದ್ಧವಾಗುವ ಸಂಭಾವನಾಗ್ರಂಥಗಳು; ಸಾಹಿತಿಯ ಕೃತಿಗಳನ್ನು ಕುರಿತು ಸಿದ್ಧವಾಗುವ ಸಂಭಾವನಾಗ್ರಂಥಗಳು—ಇವುಗಳಲ್ಲಿ ಎರಡನೆಯದು ಬಹುಮುಖ್ಯವಾದುದು. ಏಕೆಂದರೆ ಸಾಹಿತಿಯ ಕೃತಿಗಳ ಸಾರಸ್ವತ ವಿಮರ್ಶೆಯನ್ನೂ ವಿವೇಚನೆಯನ್ನೂ ನಿಷ್ಪಕ್ಷಪಾತವಾಗಿ ಮಾಡಿರುವುದನ್ನು ಸಂಭಾವನಾ ಗ್ರಂಥದಲ್ಲಿ ನೋಡಬಹುದಾಗಿದೆ. ಈ ಗ್ರಂಥದ ಕೆಲವು ಲೇಖನಗಳು ಇದಕ್ಕೆ ಅಪವಾದವೆನ್ನುವಂತಿದ್ದರೂ ಈ ವಿಧಾನ ಮೆಚ್ಚತಕ್ಕದ್ದೇ, ಉಪಯುಕ್ತವಾದದ್ದೇ. ಸಂಪಾದಕರು ಈ ಸಂಭಾವನಗ್ರಂಥದ ರೂಪರೇಷೆಗಳನ್ನು ಕುರಿತು: "ಸಮಕಾಲೀನ ಕವಿಯೊಬ್ಬನಿಗೆ ಸಮಕಾಲೀನ ಜನತೆ ಸಲ್ಲಿಸಬಹುದಾದ ಕರ್ತವ್ಯಪೂರ್ವಕವಾದ ಗೌರವಗಳಲ್ಲಿ, ಸಂಭಾವನಾಗ್ರಂಥ ಸಮರ್ಪಣೆ ಅತ್ಯಂತ ವಿಶಿಷ್ಟವೂ, ಹಾಗೂ ಶ್ರೇಷ್ಠವೂ ಆದುದೆಂದು ನನ್ನ ಭಾವನೆ. ಯಾಕೆಂದರೆ ಸಂಭಾವನಾಗ್ರಂಥ—ಅದರೊಳಗಿನ ಗುಣಮಟ್ಟ ಹೇಗೇ ಇರಲಿ—ಕಡೆಯ ಪಕ್ಷ, ಸಂಭಾವಿಸುವ ಕವಿ ಅಥವಾ ಸಾಹಿತಿಯ ಜೀವನ ಹಾಗೂ ಕೃತಿಗಳನ್ನು ಕುರಿತು ನಡೆಯಿಸಿದ ಸಮೀಕ್ಷೆಯೋ, ವಿಮರ್ಶೆಯೋ ಆಗಿರುವುದರಿಂದ, ಮತ್ತೆ ಕೆಲವರಾದರೂ ಆ ಲೇಖಕನ ಕೃತಿಗಳನ್ನು ಅರ್ಥಮಾಡಿಕೊಳ್ಳುವ ಹಾಗೂ ಅರ್ಥಮಾಡಿಕೊಡುವ ವೈಚಾರಿಕ ಪ್ರಯತ್ನಗಳ ಒಂದು ದಾಖಲೆಯಾಗುವ ಕಾರಣದಿಂದ, ಒಬ್ಬ ಸಾಹಿತಿಯನ್ನು ಸಂಭಾವಿಸುವ ಇತರ ವಿಧಾನಗಳಿಗಿಂತ ಇದು ವಿಶಿಷ್ಟವಾಗಿ ಕಾಣುತ್ತದೆ; ಅಲ್ಲದೆ, ಒಬ್ಬ ಕವಿ ಅಥವಾ ಸಾಹಿತಿಯನ್ನು ನಿಜವಾದ ಸಾಹಿತ್ತಿಕ ಕಾರಣಗಳಿಗಾಗಿಯೇ ಗೌರವಿಸುತ್ತಿದ್ದೇವೆ ಎಂಬ ಸಮಾಧಾನ ಹಾಗೂ ಧೈರ್ಯ ಈ ಬಗೆಯ ಸಂಭಾವನಾಗ್ರಂಥ ಸಮರ್ಪಣೆಯಿಂದ ಮೂಡುವುದರಿಂದ, ಮತ್ತು ಸಮರ್ಪಕವಾದ ಸಂಭಾವನಾಗ್ರಂಥ ಎಷ್ಟೋ ವೇಳೆ, ವಿಮರ್ಶೆಯ ಹಾಗೂ ವಿದ್ವತ್ತಿನ ಪ್ರಪಂಚಕ್ಕೆ ಒಂದು ಕೊಡುಗೆಯೂ ಆಗಿ ಉಳಿಯುವ ಕಾರಣ, ಈ ವಿಧಾನ ಶ್ರೇಷ್ಠವೆಂದು ತೋರುತ್ತದೆ" ಹೀಗೆ ಹೇಳಿದ್ದಾರೆ. ಸಂಪಾದಕರ ಈ ಒಕ್ಕಣೆ 'ಚಂದನ' ಸಂಭಾವನಾಗ್ರಂಥದಲ್ಲಿ ಸಾರ್ಥಕಗೊಂಡಿದೆ ಎಂದು ಹೇಳಬಹುದಾಗಿದೆ. ಅವರು ಕೈಕೊಂಡ ಈ ಕಾರ್ಯ ಸ್ತುತ್ಯವಾದುದು.

ವಿಮರ್ಶೆಯ ಕ್ಷೇತ್ರದಲ್ಲಿ ಡಾ|| ಜಿ. ಎಸ್. ಶಿವರುದ್ರಪ್ಪನವರು ಸಾಕಷ್ಟು ಕೃಷಿ

ಮಾಡಿದ್ದಾರೆ. ಅವರ 'ವಿಮರ್ಶೆಯ ಪೂರ್ವ ಪಶ್ಚಿಮ' ಒಂದು ವಿಶಿಷ್ಟ ಕೃತಿ. ಪಾಶ್ಚಾತ್ಯ ಪೌರಸ್ತ್ಯ ವಿಮರ್ಶೆಗಳೆರಡನ್ನೂ ಆಳವಾಗಿ ಅಭ್ಯಾಸ ಮಾಡಿ ಅರಗಿಸಿಕೊಂಡಿರುವ ಶ್ರೀಯುತರು ಶ್ರೇಷ್ಠ ವಿಮರ್ಶಕರೆಂದು ಪರಿಗಣಿತರಾಗಿದ್ದಾರೆ.

ಕನ್ನಡದಲ್ಲಿ ವಿಮರ್ಶಾಸಾಹಿತ್ಯ ಅಷ್ಟಾಗಿ ಬೆಳೆದಿಲ್ಲವೆಂಬುದು ಅನೇಕ ವಿದ್ವಾಂಸರ ಅಭಿಪ್ರಾಯವಾಗಿದೆ. ಪಾಶ್ಚಾತ್ಯ ಸಾಹಿತ್ಯ ವಿಮರ್ಶೆ ಕ್ಷೇತ್ರದೊಂದಿಗೆ ಹೋಲಿಸಿದಾಗ ಈ ಅಂಶ ಸ್ಪಷ್ಟವಾಗುತ್ತದೆ. ಆದರೆ ಭಾರತೀಯ ಸಾಹಿತ್ಯ ವಿಮರ್ಶಾಕ್ಷೇತ್ರದಲ್ಲಿ ಪ್ರಾಚೀನ ಕಾಲದಿಂದಲೂ ಪ್ರಬುದ್ಧಮಾನವಾಗಿತ್ತು ಎಂಬುದಕ್ಕೆ ನಮ್ಮಲ್ಲಿ ಆಗಿಂದಾಗ್ಗೆ ಹುಟ್ಟಿಕೊಂಡ ಲಾಕ್ಷಣಿಕರೇ ನಿದರ್ಶನವಾಗಿದ್ದಾರೆ. ವಿಮರ್ಶಾಕ್ಷೇತ್ರದಲ್ಲಿ ಇವರು ಮಾಡದ ಕಾರ್ಯವಿಲ್ಲ. ಆದರೆ ಪಾಶ್ಚಾತ್ಯರ ಸಂಪರ್ಕವಾದ ಮೇಲೆ ತೌಲನಿಕ ದೃಷ್ಟಿ ಬೆಳೆದು ವಿಮರ್ಶೆಗೆ ಹೊಸ ಹೊಸ ನಾಮಕರಣಗಳನ್ನು ಮಾಡಿದರು. ಅವುಗಳಲ್ಲಿ ಸಂಶೋಧನಾತ್ಮಕ ವಿಮರ್ಶೆ, ವರ್ಣನಾತ್ಮಕ ವಿಮರ್ಶೆ, ದರ್ಶನಾತ್ಮಕ ವಿಮರ್ಶೆಗಳು ಮುಖ್ಯವಾದುವು. ಡಾ|| ಕುವೆಂಪು ಅವರು ಈ ವಿಮರ್ಶೆಯ ಬಗೆಗೆ ಹೀಗೆ ಹೇಳಿದ್ದಾರೆ: "ಸಾಹಿತ್ಯ ವಿಮರ್ಶೆಯನ್ನು ಮೂರು ವಿಭಾಗಗಳಾಗಿ ವಿಂಗಡಿಸಬಹುದು: ಒಂದು, ಸಂಶೋಧನಾತ್ಮಕ; ಎರಡು ವರ್ಣನಾತ್ಮಕ; ಮೂರು ದರ್ಶನಾತ್ಮಕ. ಸಂಶೋಧನಾತ್ಮಕವಾದ ವಿಮರ್ಶೆ—ಕವಿಯ ಕಾಲ, ದೇಶ, ಮತ ಇತ್ಯಾದಿ ರೂಪವಾದದ್ದು—ನಮ್ಮಲ್ಲಿ ತಕ್ಕಮಟ್ಟಿಗೆ ವಿಪುಲವಾಗಿಯೆ ಬೆಳೆದಿದೆಯೆಂದು ಹೇಳಬಹುದು. ಈ ತೆರನ ವಿಮರ್ಶೆಗೆ ಎಷ್ಟರಮಟ್ಟಿನ ಮನ್ನಣೆಯಿದೆಯೆಂದರೆ ಅನೇಕರ ಮನಸ್ಸಿನಲ್ಲಿ ವಿದ್ವತ್ತಿನ ಮೂಲಚೂಲಗಳೆರಡೂ ಅಷ್ಟರಲ್ಲಿಯೆ ಐಕ್ಯವಾಗಿವೆಯೆಂಬ ಭಾವನೆಗೂ ಎಡೆಗೊಟ್ಟಿದೆ. ಎರಡನೆಯದಾದ ವರ್ಣನಾತ್ಮಕ ವಿಮರ್ಶೆ ಗಾತ್ರದಲ್ಲಾಗಲಿ ಗೌರವದಲ್ಲಾಗಲಿ ಸಂಶೋಧನಾತ್ಮಕ ವಿಮರ್ಶೆಯ ಮುಂದೆ ತಲೆ ತಗ್ಗಿಸಿಯೆ ನಿಂತುಕೊಂಡಂತಿದೆ. ಆದರೂ ನಮ್ಮ ಕವಿ ಕೃತಿಗಳ ಸ್ವಾರಸ್ಯ ಈ ವರ್ಣನಾತ್ಮಕವಾದ ಸಾಹಿತ್ಯ ವಿಮರ್ಶೆಯ ಸಹಾಯದಿಂದಲೆ ಅನೇಕ ಸಹೃದಯರಿಗೆ ಆಸ್ವಾದ್ಯವಾಗಿದೆ. ಮೂರನೆಯದಾದ ದರ್ಶನಾತ್ಮಕ ವಿಮರ್ಶೆ ನಮ್ಮಲ್ಲಿ ಅತ್ಯಂತ ಅಪೂರ್ವವಾದುದು."

ಪ್ರಕೃತ ಡಾ|| ಶಿವರುದ್ರಪ್ಪನವರು ಇತರರೊಡನೆ ಸಂಪಾದಿಸಿರುವ ಎರಡು ವಿಮರ್ಶೆಯ ಕೃತಿಗಳಲ್ಲಿ ಮೊದಲನೆಯದು ದರ್ಶನ ವಿಮರ್ಶೆ. ಸಾಹಿತ್ಯ ವಿಮರ್ಶೆಯಲ್ಲಿ ದರ್ಶನ ವಿಮರ್ಶೆ ಅತ್ಯಂತ ಶ್ರೇಷ್ಠವಾದುದು. ಆದುದರಿಂದಲೇ ಅದು ತೀರ ದುರ್ಲಭವಾದುದು. ಇದನ್ನು ಅರ್ಥೈಸಿಕೊಳ್ಳಬೇಕಾದರೆ ವಿಮರ್ಶಕ ಮತ್ತು ಸಹೃದಯರ ಸಂಸ್ಕಾರ ಮಿಗಿಲಾಗಿರಬೇಕು. ಅವರ ಕಾವ್ಯಮೀಮಾಂಸೆಯ ಜ್ಞಾನ ಸಾಕಷ್ಟು ಪರಿಪುಷ್ಟವಾಗಿರಬೇಕು. ಈ ಸಂಕಲನದಲ್ಲಿನ ಎಲ್ಲ ಲೇಖನಗಳೂ ದರ್ಶನಾತ್ಮಕ ವಿಮರ್ಶೆಗೆ ಸ್ಪಷ್ಟ ನಿದರ್ಶನಗಳಾಗಿವೆ.

ವಿಮರ್ಶೆಯ ಕೆಲವಾರು ಪ್ರಭೇದಗಳಲ್ಲಿ ಪ್ರಾಯೋಗಿಕ ವಿಮರ್ಶೆಯೂ ಒಂದು. ಈ ತೆರನ ವಿಮರ್ಶೆ ನಮಗೇನೂ ಹೊಸತಲ್ಲ. ಇದರ ವಿಶ್ಲೇಷಣೆಯನ್ನು ಸಂಪಾದಕರು ಹೀಗೆ

ಮಾಡಿದ್ದಾರೆ: "ಒಂದು ಕೃತಿಯ ಸಾರ್ಥಕ ವಿಮರ್ಶೆ ಸಾಧ್ಯವಾಗಲು ಮೊದಲ ಮೆಟ್ಟಿಲಾಗಿ ಆ ಕೃತಿಯನ್ನು ಅದರ ಮುಖ್ಯ ವಿವರಗಳಲ್ಲಿ ವಿಶ್ಲೇಷಿಸಿ ಅರ್ಥೈಸುವುದು ಅಗತ್ಯ. ವಿಮರ್ಶೆಯ ಈ ವಿಧಾನವನ್ನೇ ಪ್ರಾಯೋಗಿಕ ವಿಮರ್ಶೆ ಎಂದು ಕರೆಯು ಲಾಗುತ್ತದೆ. ಕೃತಿಯ ಬಂಧವನ್ನು ಅದರ ಅವಯವಗಳಾಗಿ ವಿಶ್ಲೇಷಿಸುವುದು; ಅವು ಗಳ ಪ್ರತ್ಯೇಕ ಅರ್ಥ; ಕೃತಿಯ ಸಂಕೀರ್ಣ ಬಂಧದಲ್ಲಿ ಅವು ಪಡೆಯುವ ಅರ್ಥ; ಕೃತಿಯ ಒಟ್ಟು ನಿಲುವನ್ನು ಕಟ್ಟುವುದರಲ್ಲಿ ಅವುಗಳ ಪಾತ್ರ; ತಮ್ಮ ಎಲ್ಲ ಸಾಧ್ಯತೆಗಳಲ್ಲಿ ಆ ನಿಲುವನ್ನು ಧ್ವನಿಸುವ, ಅಭಿನಯಿಸುವ ರೀತಿ; ಈ ಕೆಲಸದಲ್ಲಿ ಅವು ಎಷ್ಟು ಗೆದ್ದಿವೆ, ಎಲ್ಲಿ ಸೋತಿವೆ ಎನ್ನುವುದರ ವಿವೇಚನೆ—ಇವೆಲ್ಲ ಪ್ರಾಯೋಗಿಕ ವಿಮರ್ಶೆಯ ಗಡಿಯಲ್ಲಿ ಬರುವ ವಿಷಯಗಳು." ಈ ಪ್ರಾಯೋಗಿಕ ವಿಮರ್ಶೆ ಗ್ರಂಥದಲ್ಲಿ ಸೇರಿಸಿಕೊಂಡಿರುವ ಹತ್ತೊಂಬತ್ತು ಲೇಖನಗಳು ಸಂಪಾದಕರ ಸಮುಚಿತ ವಿವೇಚನೆಗೆ ದ್ಯೋತಕವಾಗಿವೆ.

ಡಾ|| ಶಿವರುದ್ರಪ್ಪನವರ ಪ್ರಧಾನ ಸಂಪಾದಕತ್ವದಲ್ಲಿ ಹೊರಬರುತ್ತಿರುವ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯ ಸಂಪುಟಗಳು ಅವರ ಇತರ ಸಂಪಾದಿತ ಕೃತಿಗಳಿಗೆಲ್ಲಾ ಕಿರೀಟಪ್ರಾಯವಾಗಿದೆ. ಸಾಹಿತ್ಯ ಚರಿತ್ರೆಯನ್ನು ಕುರಿತ ಕೆಲವಾರು ಗ್ರಂಥಗಳು ಕನ್ನಡ ದಲ್ಲಿ ಈವರೆಗೆ ರಚಿತವಾಗಿದ್ದರೂ ಅವು ಹಲಕೆಲವು ಅರೆಕೊರೆಗಳಿಂದ ಕೂಡಿವೆ. ಅದನ್ನು ಮನಗಂಡು ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯನ್ನು ಹತ್ತು ಸಂಪುಟಗಳಲ್ಲಿ ಹೊರತರ ಬೇಕೆಂದು ಸಂಕಲ್ಪಿಸಿ ಈಗಾಗಲೇ ಎರಡು ಸಂಪುಟಗಳನ್ನು ಪ್ರಕಟಿಸಿದ್ದಾರೆ. ಇದರ ಸ್ವರೂಪ ಇಂತಿದೆ: "ಕನ್ನಡ ಸಾಹಿತ್ಯದ ಆರಂಭಕಾಲದಿಂದ ಆಧುನಿಕಕಾಲದ ವರೆಗೆ ಹಲವು ಕಾಲಮಾನಗಳನ್ನು ಮಾಡಿಕೊಂಡು, ಪ್ರತಿಯೊಂದು ಕಾಲಮಾನದ ಸಾಹಿತ್ಯಾ ಭಿವೃತ್ತಿಯನ್ನು, ಅಂದಂದಿನ ಇತಿಹಾಸ, ಭಾಷಾಸ್ವರೂಪ, ಸಂಸ್ಕೃತಿ, ಧರ್ಮ ಇವುಗಳ ಹಿನ್ನೆಲೆಯಿಂದ ಸಮಗ್ರವಾಗಿ ಪರಿಶೀಲಿಸುವುದಲ್ಲದೆ, ಈ ಸಾಹಿತ್ಯ ಚರಿತ್ರೆ ಪ್ರಮಾಣ ಭೂತವೂ ಪುನರ್‌ಮೌಲ್ಯಮಾಪನ ದೃಷ್ಟಿಯುಳ್ಳದ್ದೂ ಆಗಿರಬೇಕೆಂಬುದು ಈ ಯೋಜನೆಯ ಉದ್ದೇಶವಾಗಿದೆ." ನಾಡಿನ ವಿದ್ವಾಂಸರನೇಕರು ಬರೆದ ವಿಶಿಷ್ಟ ಲೇಖನ ಗಳಿಂದ ಕೂಡಿರುವ ಈ ಸಂಪುಟಗಳು ಅದರ ಪ್ರಧಾನ ಸಂಪಾದಕರಿಗೆ ಶಾಶ್ವತವಾದ ಕೀರ್ತಿಯನ್ನು ತಂದುಕೊಡುವುದರಲ್ಲಿ ಸಂದೇಹವಿಲ್ಲ.

ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿ ಕನ್ನಡದ ಸರ್ವಾಂಗೀಣ ಪ್ರಗತಿಗೆ ನಿರಂತರವಾಗಿ ಶ್ರಮಿಸುತ್ತಿರುವ ಡಾ|| ಶಿವರುದ್ರಪ್ಪ ನವರು ಕನ್ನಡಿಗರೆಲ್ಲರ ಅಭಿನಂದನೆಗೆ ಪಾತ್ರರಾಗಿದ್ದಾರೆ. ಅವರು ಈವರೆಗೆ ಹಾಕಿ ಕೊಂಡಿರುವ ಯೋಜನೆಗಳೆಲ್ಲ ಫಲಪ್ರದವಾದಾಗ ಕನ್ನಡ ಭಾಷೆ ಸಾಹಿತ್ಯ ಸಂಸ್ಕೃತಿಗಳಿಗೆ ಒಂದು ದೃಢವಾದ ನೆಲಗಟ್ಟು ಸಿದ್ಧವಾದಂತಾಗುತ್ತದೆ. ಇದರಿಂದ ಡಾ|| ಶಿವರುದ್ರಪ್ಪ ನವರ ಕೀರ್ತಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಚಿರಂತನವಾಗಿ ಉಳಿಯುವಂತಾಗುತ್ತದೆ. ಆ ಕಾಲ ಕ್ಷಿಪ್ರದಲ್ಲೇ ಸನ್ನಿಹಿತವಾಗಲಿ ಎಂದು ಹಾರೈಸುತ್ತೇನೆ.

ವೇಣುಗೋಪಾಲ ಸೊರಬ

# ‘ಕಾವ್ಯಪ್ರಜ್ಞೆ’

ಕವಿಯ ಪಟ್ಟಕ್ಕೆ ಹಾತೊರೆಯುವ ಯಾವುದೇ ವ್ಯಕ್ತಿ, ತನ್ನ ಕೃತಿಗಳ ಬಗ್ಗೆ ತಾನೇ ಮೊಟ್ಟಮೊದಲ ವಿಮರ್ಶಕನಾಗಬೇಕು. ಕಾಳಿದಾಸನ ‘ಪುರಾಣ ಮಿತ್ಯೇನ ನ ಸಾಧು ಸರ್ವಂ’ ಎಂಬ ಮಾತು, ಕೇವಲ ಹೊಸದರ ಗುಣಪರೀಕ್ಷೆ ಮಾಡಿ, ಹೊಸದನ್ನು ಒಪ್ಪಿಕೊಳ್ಳಿ, ಎಂದಷ್ಟೇ ಅರ್ಥವಾಗುವುದಿಲ್ಲ. ಆ ಮಾತಿನಲ್ಲಿ ಕವಿಗೆ ತನ್ನದೇ ಆದ ಒಂದು ರೀತಿಯಿದೆ, ಎನ್ನುವುದನ್ನೂ ಧ್ವನಿಸುತ್ತದೆ. ವರ್ಡ್ಸ್‌ವರ್ತ್‌ನ ‘emotion recollected in tranquility’ ಎನ್ನುವುದಂತೂ ಅವನ ಕಾವ್ಯ ಗರ್ಭ ಕಟ್ಟುವ ರೀತಿಯನ್ನು ಬಿಚ್ಚಿ ಹೇಳುತ್ತದೆ. ಟಿ. ಎಸ್. ಎಲಿಯಟ್ಟನ ‘escape from personality’ ಎನ್ನುವ ಮಾತು ತತ್ತ್ವಶಾಸ್ತ್ರದಿಂದ ಎರವು ಪಡೆದದ್ದಾಗಿರಬಹುದು. ಆದರೆ, ಅದು ಎಲಿಯಟ್‌ಗೆ ಕಾವ್ಯ ಆವಿರ್ಭವಿಸಿದ ರೀತಿಯ ವಿವರಣೆ ಆಗಿದೆ. ಮಹಾಕವಿಯಾಗಬೇಕೆಂದೇ ತನ್ನ ಎಲ್ಲ ಮುಖ್ಯ ಕವಿತೆಗಳನ್ನು ಮತ್ತೆ ಮತ್ತೆ ಪುನರ್ರಚಿಸಿದ ಡಬ್ಲ್ಯು. ಬಿ. ಯೇಟ್ಸ್‌ನಿಗೆ ಕಾವ್ಯಸಿದ್ಧಿಯ ಕ್ರಮವೇ ಅದಾಗಿತ್ತು. ‘ಕಷ್ಟನಯ್ಯಾ ಹೊಗಲು ಕವಿಹೃದಯಕೆ, ನಷ್ಟವಿಲ್ಲದೆ ನಿನ್ನ ಮಮಕಾರಕೆ’ ಎಂದು ಕುವೆಂಪು ಹೇಳುವಾಗ, ತಮ್ಮ ಕಾವ್ಯಜಗತ್ತಿನ ಸಾರ್ವಭೌಮಿಕೆಯನ್ನೇ ಅವರು ಮುಖ್ಯವಾಗೆಣಿಸುತ್ತಾರೆ. ‘ಗಾಳಿ ಕಿರಿಸುಳಿ ಹುಟ್ಟಿತು’ ಎಂದು ಕವಿತೆಯ ಜನ್ಮಕ್ಕೆ ನಾಂದಿ ಹಾಡುವ ಬೇಂದ್ರೆಯವರಿಗೆ ಕಾವ್ಯೋದ್ಯೋಗ ಒಂದು ಲೀಲೆಯೂ ಆಗಿ ಕಂಡುಬರುತ್ತದೆ.

ಹೀಗೆ ಪಟ್ಟಿಯನ್ನು ಬೆಳೆಸುತ್ತಾ ಹೋಗಬಹುದು. ಆದರೆ ಇವುಗಳನ್ನೆಲ್ಲ ಪೋಣಿಸುವ ಸೂತ್ರವೆಂದರೆ, ಆಯಾ ಕವಿಯ ಕಾವ್ಯಪ್ರಜ್ಞೆ. ಅಂದರೆ, ಪ್ರತಿಯೊಬ್ಬ ಕವಿಯೂ ತನ್ನದೇ ಆದ ಒಂದು ಕಾವ್ಯಪ್ರಜ್ಞೆಯನ್ನು ಬೆಳೆಸಿಕೊಳ್ಳುತ್ತಾನೆ. ಈ ಪ್ರಜ್ಞೆಗೆ ಹಲವಾರು ಕಾರ್ಯಕಾರಣ ಸಂಬಂಧಗಳು ಇರುತ್ತವೆ. ಅವನು ಬೆಳೆದು ಬಂದ ವಾತಾವರಣ, ಅವನ ಸುತ್ತಮುತ್ತಲ ರಾಜಕೀಯ-ಸಾಮಾಜಿಕ ಪರಿಸ್ಥಿತಿ, ಆತನ ನಿತ್ಯದ ಬದುಕಿನ ಕೋಟಲೆಗಳು, ಅವನ ವೈಯಕ್ತಿಕ ಆಸಕ್ತಿಗಳು—ಇವುಗಳೆಲ್ಲವೂ ಅವನ ಕಾವ್ಯ ವ್ಯಕ್ತಿತ್ವದ ಮೇಲೆ ಪರಿಣಾಮವನ್ನು ಬೀರುತ್ತವೆ. ಹೀಗೆ ಬೆಳಸಿಕೊಂಡ ವ್ಯಕ್ತಿತ್ವದ ಪ್ರಕಟಣೆಗೆ ಸಮರ್ಥವಾದ ಮಾಧ್ಯಮವೇ ಕಾವ್ಯ: ಪ್ರಕಟಣೆಯ ರೀತಿಯೇ ಕಾವ್ಯಪ್ರಜ್ಞೆಯ ತೋರುಬೆರಳು. ಇಂತಹ ಕಾವ್ಯಪ್ರಜ್ಞೆಯ ಅಧ್ಯಯನ ಕವಿಯ ಬೆಳವಣಿಗೆಯನ್ನು ತೋರಿಸುವುದರ ಜತೆಗೆ, ಕವಿಯ ವೈಶಿಷ್ಟ್ಯಗಳನ್ನು ಎತ್ತಿ ತೋರಿಸುತ್ತದೆ.

೨

ಪ್ರಸ್ತುತ, ಜಿ.ಎಸ್.ಎಸ್.ರವರ ಕಾವ್ಯಪ್ರಜ್ಞೆಯನ್ನು ವಿವೇಚಿಸುವಾಗ, ಅವರ ಆರಂಭದ ಕಾವ್ಯರಚನೆಯನ್ನು ಗಮನಿಸುವುದು ಸೂಕ್ತ. ಅವರ ಮೊದಲ ಸಂಕಲನ 'ಸಾಮಗಾನ' ಪ್ರಕಟವಾದುದು ೧೯೩೮ರಲ್ಲಿ. ಅದಕ್ಕೆ ಮುನ್ನುಡಿ ಬರೆದ ಕುವೆಂಪು ಹೀಗೆ ಹೇಳಿದ್ದಾರೆ—

"....ಕನ್ನಡ ಸಾಹಿತ್ಯದ ಒಂದು ಶಾಖೆಯಾದ ಈ ಭಾವಗೀತೆ ಇತರ ಶಾಖೆಗಳಿಗಿಂತಲೂ ಉನ್ನತ ತರವಾಗಿ, ಸುಪುಷ್ಟವಾಗಿ ಬೆಳೆದು ನಿಂತಿದೆ...ಯಾವ ಭಾಷೆ, ಯಾವ ಶೈಲಿ, ಯಾವ ಛಂದಸ್ಸು, ಯಾವ ಕಲ್ಪನಾ ವಿಲಾಸ, ಯಾವ ಪದ ಸಂಘಟನಾ ಅಪೂರ್ವತೆ—ಇವುಗಳನ್ನು ಬಹು ಕಷ್ಟದಿಂದ ಹಿರಿಯ ಕವಿಗಳು ತಮ್ಮ ಬದುಕಿನ ಮೂಸೆಯಲ್ಲಿ ಕಾಯಿಸಿ, ಕರಗಿಸಿ, ಎರಕ ಹೊಯ್ದರೋ, ಆ ಪದಪುಂಜಾಯುಧ ಪಂಕ್ತಿ ಈಗಿನ ಕವಿಯೋಧರಿಗೆ ಸುಲಭ ಸರಬರಾಜಿನ ವಸ್ತುಗಳಾಗಿವೆ....ಆದರೆ ಅವುಗಳ ಪ್ರಯೋಗದ ಔಚಿತ್ಯದಲ್ಲಿ ಯಾವ ಕವಿ ತನ್ನ ಸ್ವಂತ ಭಾವಪ್ರಕಾಶನವನ್ನು ನಿಯಮಿಸಿಕೊಳ್ಳುತ್ತಾನೆಯೋ ಅವನು ಕೃತಕೃತ್ಯನಾಗುತ್ತಾನೆ. ಇಲ್ಲಿಯ ಕೆಲವು ಕವನಗಳಲ್ಲಾದರೂ ಅಂತಹ ಕೃತಕೃತ್ಯತೆಯನ್ನು ಸಹೃದಯರು ಅನುಭವಿಸದಿರರೆಂದು ನಂಬುತ್ತೇನೆ."[1]

ಇಲ್ಲಿನ ಮಾತುಗಳಿಂದ ಆ ಕಾಲಕ್ಕೆ ಯಾವುದು ಒಂದು ಸಂಪ್ರದಾಯವಾಗಿ, ತುಳಿದದಾರಿಯಾಗಿ ಯಾವುದು ಪ್ರಚಾರದಲ್ಲಿತ್ತೊ, ಅದೇ ದಾರಿಯನ್ನು ಜಿ.ಎಸ್.ಎಸ್. ಹಿಡಿದರು ಎಂದು ಗೊತ್ತಾಗುತ್ತದೆ. ಅದು, ಅವರ ಆಗಿನ ಬೆಳವಣಿಗೆಗೆ ತೃಪ್ತಿಕರ ಎನಿಸಿರಲೂಬೇಕು. ಯಾಕೆಂದರೆ,

ಪ್ರಕೃತಿಯಂತೆ ಕವಿಯ ಮನಸು
ವಿಪುಲ ರೂಪಧಾರಿಣಿ
ಬೊಮ್ಮನೆದೆಯ ಕನಸಿನಂತೆ
ಕೋಟಿ ಕಲ್ಪಗಾಮಿನಿ (ಕವಿಯ ಮನಸು)[2]

ಎಂಬ ಭಾವನೆ ರಮ್ಯಪಂಥದ ಪ್ರತಿಬಿಂಬವೇ ಆಗಿದೆ. ಅಲ್ಲದೆ ರಮ್ಯ ಪಂಥವನ್ನು ಕವಿ ಎಷ್ಟರ ಮಟ್ಟಿಗೆ ಒಪ್ಪಿಕೊಂಡುಬಿಟ್ಟಿದ್ದಾರೆಂದರೆ, ಬೇರೆ ಯಾವುದರ ಅಸ್ತಿತ್ವವೂ ಅನವಶ್ಯಕವಾಗಿ ತೋರುತ್ತದೆ—

ಗಿರಿದರಿಯಲೆಲ್ಲೊ ಹುಟ್ಟಿರುವ ಹೊಳೆಗೆ
ಭೂಗೋಳ ಶಾಸ್ತ್ರ ಬೇಕೆ? (ಕಾವ್ಯಮಾರ್ಗ)[3]

ಆದರೆ ಈ ಭಾವನೆ ಬಹಳ ದಿನ ಉಳಿಯಲಿಲ್ಲ. 'ಹಾಡುಹಕ್ಕಿಗೆ ಬೇಕೆ ಬಿರುದು ಸನ್ಮಾನ? (ತೃಪ್ತಿ)[4] ಎಂದು ವಿಸ್ಮಯದಿಂದ ಕೇಳಿದ ಇದೇ ಕವಿ ಮುಂದೆ, ನಾಗರಿಕ ಪ್ರಪಂಚದ ಕುಟಿಲತೆಗಳನ್ನು ಕಣ್ಣುಬಿಟ್ಟು ನೋಡಿ, ಟೀಕಿಸುತ್ತಾರೆ:

ಪಾಪ, ನಿನಗೆ ತಿಳಿಯಲಿಲ್ಲ
ಪಕ್ಷಿ ಮಹಾ ಸಂಘದಲ್ಲಿ

ಚುನಾವಣೆಯ ಗಡಿಬಿಡಿ,
ನೀನು ಕೂಡ ಮೆಂಬರಾಗಿ
ಏನಾದರೂ ಜಾಗಹಿಡಿ,
ಹಾಗಾದರೆ ನಿನಗೆ ಸ್ಥಾನ
ಅದಕ್ಕೆ ತಕ್ಕ ಹಾಗೆ ಮಾನ. (ಕೋಗಿಲೆಗೆ ಉಪದೇಶ)[5]

‘ಕೋಗಿಲೆಗೆ ಉಪದೇಶ’ ಹಳೆಯ ಸಂಪ್ರದಾಯಗಳ—ಮುಖ್ಯವಾಗಿ ಕವಿಸಮಯಗಳ ಟೀಕೆಯಿಂದ ಪ್ರಾರಂಭವಾಗಿ, ಕೊನೆಯಲ್ಲಿ ಹೊಸ ನಡವಳಿಕೆಯಲ್ಲಿನ ದೌರ್ಬಲ್ಯಗಳತ್ತ ನಮ್ಮ ಗಮನ ಸೆಳೆಯುತ್ತದೆ. ಈ ವೇಳೆಗಾಗಲೇ ಕನ್ನಡ ಕಾವ್ಯಲೋಕದಲ್ಲಿ ತಲೆ ಹಾಕಿದ್ದ ಗುಂಪು ಮನೋಭಾವದ ನೇರ ಖಂಡನೆಯನ್ನು ‘ಕವಿತೆ ಬರೆಯುವುದು ಹೇಗೆ?’ ಎಂಬ ಪದ್ಯದಲ್ಲಿ ದಾಖಲೆಗೊಳಿಸಿದ್ದಾರೆ, ಜಿ.ಎಸ್.ಎಸ್—

...ನಾಲ್ಕು ಜನ ಮಂದಿಮಾಗಧರ ಹುಡುಕು.
ಅವರಿಗಿರಬೇಕು ಅಲ್ಲಲ್ಲಿ ಸಾಕಷ್ಟು ಕೀರ್ತಿ.
ಅವರಿಗಿರಬಾರದಷ್ಟು ಸ್ವದೇಶೀ ಬುದ್ಧಿ ;
ಏನಿದ್ದರೂ ಆಮದಾಗಿ ಬಂದಿರಬೇಕು
ಸಾಕಷ್ಟಿತ್ತು ಅಮೆರಿಕಾದಿಂದಲೋ ಇಲ್ಲ ಇಂಗ್ಲೆಂಡಿನಿಂದಲೋ
ಮೆದುಳು.[6]

ಇವುಗಳೆಲ್ಲ ಕವಿ ಜಾಗೃತಪ್ರಜ್ಞೆಯಲ್ಲಿ, ತನ್ನ ಕಾವ್ಯದ ಬಗೆಗೆ ನಡೆಸಿದ ಚಿಂತನೆಯ ಫಲ. ಆದರೆ ಕಾವ್ಯಪ್ರಜ್ಞೆ ಇಲ್ಲಿಗೇ ಸೀಮಿತಗೊಳ್ಳುವುದಿಲ್ಲ. ಜಾಗೃತ ಪ್ರಜ್ಞೆಯ ಹೊರಗೆ ಕೂಡ—ಪ್ರಾಥಮಿಕವಾಗಿ, ಪ್ರಮುಖವಾಗಿ ಕವಿಚೇತನ ದುಡಿಯುತ್ತಿರುತ್ತದೆ. ಆದ್ದರಿಂದ ಕವಿಯ ವ್ಯಕ್ತಿತ್ವದ ನಿಜವಾದ ಅರಿವಾಗಬೇಕಾದರೆ, ಕವಿಯ ಕಾವ್ಯ ಮಾರ್ಗ ಅರ್ಥವಾಗಬೇಕಾದರೆ, ಕೆಲವು ಸಾರ್ಥಕ ಕವನಗಳನ್ನು ಅಭ್ಯಸಿಸಬೇಕಾಗುತ್ತದೆ.

ಜಿ.ಎಸ್.ಎಸ್ ಕಾವ್ಯರಚನೆಗೆ ತೊಡಗಿದಾಗ ಇದ್ದ ರಮ್ಯಪಂಥದ ವಾತಾವರಣ ಬಹುಕಾಲ ಉಳಿಯಲಿಲ್ಲ. ಹೊಸ ಸಂವೇದನೆಗಳೂ, ಹೊಸ ಲಯ, ಹೊಸ ಭಾಷೆಗಳು ಪ್ರಯೋಗಕ್ಕೆ ಬಂದವು. ಆದರೂ ಜಿ.ಎಸ್.ಎಸ್. ರಮ್ಯಪಂಥವನ್ನು ಹಿನ್ನೆಲೆಗಿಟ್ಟು ಕೊಂಡೇ ಕಾವ್ಯರಚನೆಯನ್ನು ಮುಂದುವರಿಸಿದರು. ‘ಚೆಲುವು-ಒಲವು’ ‘ದೇವಶಿಲ್ಪ’ ‘ದೀಪದ ಹೆಜ್ಜೆ’ ಮತ್ತು ‘ಕಾರ್ತೀಕ’ಗಳಲ್ಲಿನ ಬಹಳಷ್ಟು ಕವಿತೆಗಳು ಸರಳ ಅನಿಸಿಕೆಗಳ ನೇರ ನಿರೂಪಣೆಯಷ್ಟೇ ಆಗಿವೆ. ಪ್ರಕೃತಿ ಸೌಂದರ್ಯ, ಗೃಹಕೃತ್ಯದ ಅನುಭವ, ಮತ್ತು ನಗರ ಜೀವನದ ವಿವರಗಳಷ್ಟೇ ಇಲ್ಲಿನ ಕವಿತೆಗಳಿಗೆ ವಸ್ತುವನ್ನು ಒದಗಿಸಿವೆ. ‘ಚೆಲುವು-ಒಲವು’ ಮುನ್ನುಡಿಕಾರ ಪು.ತಿ.ನ ಹೇಳುವ ‘ಬಾಹ್ಯಸೌಂದರ್ಯ’ ಮತ್ತು ‘ಬಗೆಯ ಕಾಂತಿ’ ಇಲ್ಲಿನ ಕವಿತೆಗಳಲ್ಲಿ ಅಭಿವ್ಯಕ್ತಿಪಡೆದಿವೆ. ಜಿ.ಎಸ್.ಎಸ್‌ರವರ ಕವಿತೆಗಳ ಸತ್ವವನ್ನು ಎತ್ತಿ ಹಿಡಿಯುತ್ತಾ ಪು.ತಿ.ನ—“ರಸವನ್ನು ವಿಷಯಗಳ ಮುಖೇನ ಎತ್ತಿಕೊಡುವ ಸಾಮರ್ಥ್ಯವುಳ್ಳದ್ದು” ಎಂದಿದ್ದಾರೆ. ಜಿ.ಎಸ್.ಎಸ್ ಬಹಳ

ಮುಟ್ಟಿಗೆ ಸೌಂದರ್ಯದ ನೇರ ನಿರೂಪಣೆಯಿಂದ ತೊಡಗಿ, ಕಡೆಗೆ ವಾಚ್ಯಾರ್ಥದತ್ತ ಹೊರಳುವುದನ್ನು ಪು.ತಿ.ನ ಎತ್ತಿ ಹೇಳಿ 'ವ್ಯಂಗ್ಯಾರ್ಥವನ್ನು ವಾಚ್ಯಕ್ಕೆ ತಿರುಗಿಸಲು ಹವಣಿಸಿ ಆ ಉಪಮೆಗಳೂ ತಮ್ಮ ಪ್ರಾಧಾನ್ಯವನ್ನು ಕಳೆದುಕೊಂಡಿವೆ[8] ಎಂದು 'ಮಲ್ಲಿಗೆ' ಕವನದ ಉದಾಹರಣೆ ಕೊಡುತ್ತಾರೆ. 'ಕ್ರಾಂತಿಕಾರ'ದಂತಹ ಕವನಗಳಲ್ಲಿ ಸಾಧಿತವಾಗಿರುವ 'ಸಂಘಾತ'[9]ವನ್ನು ಗುಣವೆಂದು ಸ್ಪಷ್ಟಗೊಳಿಸುತ್ತಾರೆ, ಪು.ತಿ.ನ.

ಇಲ್ಲಿನ ಕವಿತೆಗಳಲ್ಲಿಯೂ ಅಲ್ಲಲ್ಲಿ ಕ್ರಾಂತಿಕಾರ ಭಾವನೆಗಳಿದ್ದರೂ, ಅವುಗಳನ್ನು ಕವಿ ಸಂಪೂರ್ಣವಾಗಿ ಬಳಸಿಕೊಂಡಿಲ್ಲ—

ಬಲು ಮಿದು, ಭಂಗುರ ನೀ
ಮುಟ್ಟಿದರೇ ಮುರಿವೆ
ಒಳಗಿನ ಕ್ರಮ ಎಚ್ಚೆತ್ತರೆ
ಮೆಲ್ಲನೆ ನೀ ಮೇಲೆದ್ದರೆ
ಚಿಪ್ಪಡಿಯನೆ ಒಡೆವೆ !— (ಉದಯ ರಾಗ)[10]

ಈ ಸಾಲುಗಳಲ್ಲಿನ 'ಒಳಗಿನ ಕ್ರಮ ಎಚ್ಚೆತ್ತರೆ' ಎನ್ನುವ ಮಾತು, ಯಾವುದೇ ಬದಲಾವಣೆ ಮೂಲಭೂತವಾಗಿದ್ದಿರಬೇಕು ಎನ್ನುವುದನ್ನು ಒಡೆದು ಹೇಳುತ್ತದೆ. ಆದರೆ ಕವಿಯಾಗಿ ಜಿ.ಎಸ್.ಎಸ್ ಈ ಮೂಲಭೂತ ಬದಲಾವಣೆಗೆ—ಅದು ಆಗ ವ್ಯೆತಾಳಿದಂತೆ—ಒಪ್ಪಿಕೊಳ್ಳಲು ಸಿದ್ಧರಾಗಿದ್ದಿಲ್ಲ ಎನ್ನುವುದು ಅವರಿಗೆ 'ಸಮನ್ವಯ ವಾದಿ' ಎಂಬ ಪಟ್ಟ ಹಚ್ಚಲು ವಿಮರ್ಶಕರಿಗೆ ಸಹಾಯವಾಯಿತು. ಆದರೆ ಈ ಸಮನ್ವಯ ದೃಷ್ಟಿ ಕಾವ್ಯದಲ್ಲಿ ಧೋರಣೆಯಾಗಿ ಕೇವಲ ಕ್ವಚಿತ್ತಾಗಿ ಕಾಣಬರುತ್ತದೆ—

ಅದೂ ಬೇಕು, ಇದೂ ಬೇಕು,
ಎಲ್ಲವೂ ಬೇಕು ನನಗೆ
...............
ನಾ ಬಲ್ಲೆ, ಇವು ಎಲ್ಲ ಏರುವೆಯ
ಒಂದೊಂದು ಹಂತ. (ಹಿನ್ನುಡಿ)[11]

ರಮ್ಯ-ನವ್ಯ ಪಂಥಗಳ ಸಂವೇದನೆ, ಶೈಲಿ, ಭಾಷೆಗಳನ್ನು ಅಷ್ಟಷ್ಟು ಬಳಸಿಕೊಂಡು ಅನೇಕರು ಒಂದು ಸುಲಭ ಮಾರ್ಗವನ್ನು ಸೃಷ್ಟಿಸಿಕೊಂಡಂತೆ, ಜಿ ಎಸ್.ಎಸ್‌ರವರೂ ಹೆಚ್ಚು ಪರಿತಾಪ—ಪರಿಶ್ರಮಗಳಿಲ್ಲದೆ ತಮ್ಮಷ್ಟಕ್ಕೆ ತಾವು ಬರೆಯುತ್ತ ಹೋದರು. ಇದು ಸುಮಾರು ೧೯೬೭ರ ವರೆಗಿನ ಸ್ಥಿತಿ. ನಿಜ. 'ದೀಪದ ಹೆಜ್ಜೆ' (೧೯೫೫)ಯ ಮುನ್ನುಡಿಯಲ್ಲಿ ಮೊಟ್ಟಮೊದಲ ಬಾರಿಗೆ ತಮ್ಮ ಕಾವ್ಯದ ಬಗೆಗೆ ತಾತ್ವಿಕವಾದ ಒಂದು ನಿಲವನ್ನು ಉಚ್ಚರಿಸುತ್ತಾರೆ: 'ಇವುಗಳಲ್ಲಿ ನನಗರಿಯದಂತೆಯೇ ಬದುಕಿನ ಸಮಸ್ಯೆಯ ಎರಡು ಮುಖಗಳ ವಿವೇಚನೆ ನಡೆದಿದೆ ಎನಿಸಿತು. ಒಂದು ಮಾನವ ಮತ್ತು ಆತನ ಅಂತರಂಗ; ಮತ್ತೊಂದು ಮಾನವ ಮತ್ತು ಕಾಲ."[12] ಅಲ್ಲಿಯೇ ಮುಂದುವರಿದು ಹೇಳುತ್ತಾರೆ: 'ತನ್ನನ್ನು ತಾನು ಗೆಲ್ಲುವುದು ಎಂದರೆ ಕಾಲವನ್ನು ಗೆಲ್ಲುವುದು ಎಂದಂ

ತಾಯಿತು.'[13] ಆದರೆ ಅಲ್ಲಿನ ಯಾವುದೇ ಕವನದಲ್ಲಿಯೂ ಇಂತಹ ಸಂಭಾವನೆಯ ಪ್ರಕಾಶನವಾಗಲೀ, ಮಂಡನೆಯಾಗಲೀ ಕಂಡುಬರುವುದಿಲ್ಲ. ಆದರಿಂದ ಮೇಲಿನ ಮಾತುಗಳು, ಅವರ ಗೋಚರ ಮನಸ್ಸಿನಲ್ಲಿ ನಡೆಯುತ್ತಿದ್ದ ವ್ಯಾಪಾರವನ್ನು ತಿಳಿಸುತ್ತದೆಯೇ ಹೊರತು, ಅವರ ಕಾವ್ಯಪ್ರಜ್ಞೆ ಮೈಗೂಡಿಸಿಕೊಂಡಿದ್ದನ್ನಲ್ಲ. ಈ ದೃಷ್ಟಿಯಲ್ಲಿ ನೋಡಿದಾಗ 'ಸಮನ್ವಯ ದೃಷ್ಟಿ' ಎಂಬ ಪಟ್ಟಿಯೂ ಕೂಡ, ಜಿ.ಎಸ್.ಎಸ್.ರವರ ಕಾವ್ಯ ಕ್ರಿಯೆಯಿಂದ ಹೊರಗೆ ನಿಂತುಬಿಟ್ಟಿತು ಎನ್ನುವುದರ ಅರಿವಾಗುತ್ತದೆ.

೩

ತಾತ್ವಿಕತೆ, ಕವಿಯ ಕಾವ್ಯಪ್ರಜ್ಞೆಯ ಪ್ರಕಟನೆಗೆ ಹಲವಾರು ಮಾರ್ಗಗಳಲ್ಲಿ ಒಂದು. ಸಾಮಾನ್ಯ ಕವಿಯ ಕೈಯಲ್ಲಿ ಅದು ಅಪಾಯಕಾರಿ; ಅವನ ಕಾವ್ಯಜೀವನವನ್ನೇ ಅದು ಬಲಿ ತೆಗೆದುಕೊಳ್ಳುತ್ತದೆ. ಅವನು ಕಾವ್ಯಕ್ಕೂ ತಾತ್ವಿಕತೆಗೂ ಸಲ್ಲದಂತಹ ಅಂತರಪಿಶಾಚಿ ಪಟ್ಟವನ್ನು ಅವನಿಗೆ ಕಟ್ಟುತ್ತದೆ. ಆದರೆ ಈಚೆಗೆ ಏನನ್ನೂ ಹೇಳಲಿಕ್ಕೇ ಇಲ್ಲದವನೂ ಕೂಡ, ತನ್ನ ಕಾವ್ಯದ ಧೋರಣೆಗಳ ಬಗ್ಗೆ, ತಾತ್ವಿಕ ಅಭಿಪ್ರಾಯಗಳ ಬಗ್ಗೆ ಸಂಪುಟಗಳಷ್ಟು ಮಾತಾಡಲು ತೊಡಗುತ್ತಾನೆ. ಇದೊಂದು ಆಧುನಿಕ ಜಾಡ್ಯ.

ಜಿ.ಎಸ್.ಎಸ್.ರವರಲ್ಲಿ ಮಾತ್ರ ತಾತ್ವಿಕ ಧೋರಣೆ ನಿಚ್ಚಳವಾಗಿ ಕಂಡುಬರುವುದು ಇತ್ತೀಚೆಗೆ. ಆದರ ಮೊದಲ ಹೊಳಹುಗಳನ್ನು 'ತೆರೆದ ದಾರಿ' (1966) ಯಲ್ಲಿ ಕಾಣುತ್ತೇವೆ—

> ಒಂದು ರೀತಿಯಲ್ಲಿ ಈ ಬದುಕೆಲ್ಲವು
> ಗಡಿನಾಡಿನ ಯುದ್ಧ : (ಒಡೆದ ಕನ್ನಡಿ)[14]

ಈ ಸಾಲುಗಳು ಸಮನ್ವಯದೃಷ್ಟಿಯ ಪೊಳ್ಳುತನಕ್ಕೆ ಚುಚ್ಚಿದ ಸೂಜಿಮೊನೆಯಾಗಿದೆ. 'ಗಡಿನಾಡಿನ ಯುದ್ಧ' ಎನ್ನುವಾಗ ಪ್ರತ್ಯೇಕತೆಯ ಅಸ್ತಿತ್ವವನ್ನು ಒಪ್ಪಿಕೊಂಡಂತೆಯೇ, ಅದನ್ನು 'ಸಾಮಾನ್ಯಸ್ಥಿತಿ' ಎಂದು ಒಪ್ಪಿಕೊಳ್ಳಲಾಗದ ಮನೋಸ್ಥಿತಿಯನ್ನೂ ಅದು ಸ್ಥಿರೀಕರಿಸುತ್ತದೆ. ಆದ್ದರಿಂದ ಸಮನ್ವಯದ ಪ್ರಶ್ನೆಯೇ ಬರುವುದಿಲ್ಲ.

ತಾತ್ವಿಕತೆಯನ್ನು ಬೆಳಸಿಕೊಂಡ ಕವಿಯಲ್ಲಿ, ಅವನ ಒಂದು ರಚನೆಯಿಂದ ಇನ್ನೊಂದಕ್ಕೆ ತಳಕುಹಾಕಿ, ವಾದ ಬೆಳಸುವುದು ಸಾಧ್ಯವಾಗುತ್ತದೆ. ಇದಕ್ಕೆ ಕಾರಣ ಒಂದೇ ವಾದದ, ಧೋರಣೆಯ ಹಲವು ಮುಖಗಳು, ಬೇರೆಬೇರೆಯಾಗಿರುವಂತೆ ಕಂಡರೂ, ಅವಿಚ್ಛಿನ್ನವಾಗಿ ಬೇರೆ ಬೇರೆ ಕಡೆಗಳಲ್ಲಿ ಪ್ರಕಟಗೊಳ್ಳುವುದು. ಆದ್ದರಿಂದಲೇ ಅಂತಹ ಕವಿಯ ಇಡೀ ಕಾವ್ಯ ಒಂದೇ ಹಿಡಿಗೆ ದಕ್ಕುವುದೂ ಸಹ ಸಾಧ್ಯ ಎನಿಸುತ್ತದೆ.

ಬದುಕನ್ನು 'ಗಡಿನಾಡಿನ ಯುದ್ಧ'ವಾಗಿ ಕಂಡ ಕವಿ, ಸಹಜವಾಗಿಯೇ ಮೂಲ ಪ್ರೇರಣೆಯತ್ತ ಆಸಕ್ತಿ ತಳೆಯುತ್ತಾನೆ. ಬದುಕಿನ ಎಲ್ಲ ವೈವಿಧ್ಯತೆಗಳೂ, ಕೃತಕೃತ್ಯತೆಯನ್ನು ಪಡೆಯುವುದು, ಮೂಲಕ್ಕೆ ನಮ್ಮನ್ನು ಕೊಂಡೊಯ್ಯುವಲ್ಲಿಯೇ—

ಬೀಜದಿಂದ ಬೀಜಕ್ಕೆ :
ಈ ನಡುವೆ ಎಷ್ಟೊಂದು ಮರ, ಎಷ್ಟು ಎಲೆ
ಎಷ್ಟು ಹೂ ಎಷ್ಟು ಹಣ್ಣು !
ಎಲ್ಲಾ ಮಣ್ಣು
ಈ ಒಂದು ಬೀಜ ಕಡೆಗೂ ಮತ್ತೆ
ಬೀಜವಾಗುವುದಕ್ಕೆ (ಬೀಜದಿಂದ ಬೀಜಕ್ಕೆ)[15]

ನಿರಾಡಂಬರವಾದ ಭಾಷೆಯಲ್ಲಿ, ಅನಿಸಿಕೆಯನ್ನು ನೇರವಾಗಿ ಇಟ್ಟಿರುವುದು, ಉಪಮೆಗಳಿಗೇ ಮಹತ್ವಕೊಡುತ್ತಿದ್ದ ಆರಂಭದಕಾಲ ಕೊನೆಗೊಂಡಿರುವುದನ್ನು ಸೂಚಿಸುತ್ತದೆ.

ಗೋಡೆ (೧೯೭೨)ಯಲ್ಲಿ ನಮಗೆ ಕವಿಯು ಅಂತರ್ಮುಖಿಯಾಗಿರುವುದು ಗೋಚರಿಸುತ್ತಾ ಹೋಗುತ್ತದೆ. ವ್ಯಕ್ತಿಯ ಪ್ರಶ್ನೆ ಕಂಡೂ ಕಾಣದಂತೆ ಈ ಮೊದಲು ಪ್ರಕಟವಾಗಿದ್ದರೆ, ವ್ಯಕ್ತಿತ್ವದ ಪ್ರಶ್ನೆ ತಟ್ಟದೆಯೇ ಹೋಗಿದ್ದರೆ,

ನಿನ್ನಡಿಯ ಹುಡಿಯೆನ್ನ
ಮುಡಿಯ ಸಿಂಗರಿಸಿರಲಿ
ಕಡೆಗಾನು ಹುಡಿಯಾಗಿ
ನಿನ್ನಡಿಗೆ ಸಲಲಿ.[16]

ಎಂಬಂತಹ ಸರಳೀಕರಣ ಒಪ್ಪಿಗೆಯಾಗಿದ್ದರೆ, ಈಗ ಅದು ಅಷ್ಟು ಸರಳವಾಗಿ ಕಂಡುಬರುವುದಿಲ್ಲ. ಕವಿಯ ಪರಿಸರ ಸಂಪೂರ್ಣವಾಗಿ ಬದಲಾವಣೆ ಹೊಂದಿ, ಈಗ ಬದುಕನ್ನು ನೋಡುವ ದೃಷ್ಟಿ ಭ್ರಮೆಗಳಿಂದ ದೂರವಾಗಿದೆ—

ನಟ್ಟ ನಡುರಾತ್ರಿ ಅಪರಿಚಿತ ಸಂದಿಗೊಂದಿಯ ನಡುವೆ
ಒಬ್ಬನೇ ತೊಳಲಿ ಬಳಲುತ್ತೇನೆ. (ನನ್ನ ಸುತ್ತ)[17]

ಅಲ್ಲದೆ. ಬದುಕಿಗೆ ನಿಕೃಷ್ಟವಾದ ಅರ್ಥ ಹೇಳುವುದಾದರೂ ಸಾಧ್ಯವೆ? ಬದುಕಿಗೆ ಹಚ್ಚಬಹುದಾದ ಅನೇಕ ಅರ್ಥಗಳಲ್ಲಿ ಬೇರೆಯವರು ನಮ್ಮ ಬಗೆಗೆ ಹೇಗೆ ಭಾವಿಸುತ್ತಾರೆ, ಭಾವಿಸಬೇಕು ಎನ್ನುವುದು ಕೂಡ ಮುಖ್ಯವಾಗುತ್ತದೆ. ನಮ್ಮ ನಮ್ಮ ಬದುಕಿನ ಜಂಜಾಟ, ನೋವು. ತಪ್ತತೆಗಳು ಹೇಗೇ ಆದರೂ ಇನ್ನೊಬ್ಬರ ಅರಿವಿಗೆ ಬರುವುದು ಅಸಾಧ್ಯ ಎನ್ನುವುದು ನಮ್ಮ ಜಾಗೃತ ಪ್ರಜ್ಞೆಗೆ ಹಾಕಿದ ಸವಾಲಾಗುತ್ತದೆ—

ನಾವು ಬದುಕಿದ್ದಾಗ
ನಮ್ಮ ದಿನದಿನದ ರೊಟ್ಟಿ
ಕಾದ ಹೆಂಚಿನಮೇಲೆ ಸೀದು ಹೋಗಿತ್ತೆಂದು,
ನನ್ನ ನಿನ್ನ ವಿಚಾರ ನೂರಾರು ಚರಂಡಿ ಬಾಯಿಗಳಲ್ಲಿ
ಕೊಚ್ಚೆಯಾಗಿತ್ತೆಂದು
ನಮ್ಮ ಹಾಸುಗೆಯ ಕೆಳಗೆ ಹಾವು ಹೆಡೆಯೆತ್ತಿದ್ದ
ಮುಳ್ಳುಪೊದೆ ಇತ್ತೆಂದು
ನಾಳಿನ ಆ ಸಂಶೋಧಕನಿಗೆ
ಹೇಗೆ ಗೊತ್ತಾದೀತು ? (ನನ್ನ ನಿನ್ನ ವಿಚಾರ)[18]

ಇದು ಮುಂದಿನ ಸಂಶೋಧಕನ ದೃಷ್ಟಿಯಿಂದ ಹೇಳಿದ್ದರೂ, ನಮ್ಮ ಸುತ್ತಮುತ್ತಣ ಜನವೇ ನಮ್ಮನ್ನು ತಪ್ಪಾಗಿ ಭಾವಿಸಿದರೆ, ಅದನ್ನು ತಪ್ಪಿಸಲು ಸಾಧ್ಯವಿಲ್ಲ ಎನ್ನುವುದು ವಿಚಾರಾರ್ಹ. ಇದೇ ಸಂದರ್ಭದಲ್ಲಿ ಕೆಳಗಿನ ಮಾತುಗಳನ್ನೂ ಸಹ ನೋಡಬೇಕು—

ಬಚ್ಚಿಟ್ಟುಕೊಂಡು ಬದುಕುವುದು ನನಗಿಷ್ಟವಿಲ್ಲ;
ಹಾಗಂತ ಎಲ್ಲವನ್ನೂ ಬಿಚ್ಚಿ ಹರಾಜಿಗಿಡುತ್ತೇನೆಂದು
ಇದರರ್ಥವಲ್ಲ. (ನಿಲುವು)[19]

ಕೇವಲ ಹೇಳಿಕೆಗಳ, ಪ್ರದರ್ಶನಗಳ, ಬೊಗಳೆ ಬದುಕು ವ್ಯಕ್ತಿತ್ವದ ಪೋಷಣೆಗೆ ಎಂದಿಗೂ ಸಹಾಯಕವಾಗಲಾರದು. ಅದೇ ರೀತಿ, ತನ್ನ ಸುತ್ತಲಿನ ಪ್ರಪಂಚದೊಂದಿಗೆ ಅವಿನಾಭಾವ ಹೊಂದದಿರುವ, ಸುತ್ತಲಿನ ಬದುಕಿನಿಂದ ಪೋಷಕಾಂಶಗಳನ್ನು ಸೆಳೆದು ಕೊಳ್ಳದ ಬದುಕು, ಬದುಕಿನ ಅಣಕವಾಗುತ್ತದೆಯೆ ಹೊರತು, ಆರೋಗ್ಯಕಾರಿ ಬದುಕಾಗುವುದಿಲ್ಲ. ಆದ್ದರಿಂದ ಸುತ್ತಣ ಬದುಕಿನೊಂದಿಗೆ ಹೊಂದಿಕೊಳ್ಳುವ ಅವಶ್ಯಕತೆಯನ್ನು ಕವಿ ಹೀಗೆ ನಿರೂಪಿಸುತ್ತಾರೆ—

...ಮನೆಯಂಗಳದ ಈ ಕುಂಡದ ಗಿಡಕ್ಕೆ
ಸುತ್ತಣ ನೆಲದ ಹಸುರಿಗಾದನುಭವದ ಪ್ರಜ್ಞೆಯೇ ಇಲ್ಲ.
ಇದು ಒಂದು ಕುಂಡದನಾಥಾಲಯದಲ್ಲಿ
ಬಲವಂತವಾಗಿ ತಂದಿರಿಸಿರುವ ಜೀವಂತ ಮುಗ್ಧ ಶಿಶು.
ಹೇಗಾದರೂ ಮಾಡಿ ಕುಂಡವನ್ನೊಡೆದು
ನೆಲದಲ್ಲಿದರ ಬೇರನ್ನಿಡು
ತಾಯಮೊಲೆಹಾಲಿಗಿದರ ತುಟಿಯನ್ನಿಡು. (ಪ್ರಜ್ಞೆ)[20]

ಆದರೆ 'ಹೇಗಾದರೂ ಮಾಡಿ' ಎನ್ನುವಲ್ಲಿ, ಕೈಕೊಳ್ಳಬೇಕಾದ ಕಾರ್ಯವಿಧಾನದ ಬಗ್ಗೆ ನಿಖರತೆ ಇಲ್ಲದಿರುವುದು ಒಂದು ಕೊರತೆ.

೪

ಮೇಲಿನ ಅಭ್ಯಾಸದಿಂದ ಜಿ.ಎಸ್.ಎಸ್.ರವರಲ್ಲಿ ಪ್ರಕಟವಾಗಿರುವ ಕಾವ್ಯಪ್ರಜ್ಞೆಯ ಹಲವು ಸ್ತರಗಳು ತಿಳಿದುಬರುತ್ತದೆ. ರಮ್ಯ ಸಂಪ್ರದಾಯವನ್ನು ಬೇಷರತ್ತಾಗಿ ಒಪ್ಪಿಕೊಂಡ ಮೊದಲನೆಯ ಘಟ್ಟ; ರಮ್ಯ ಸಂಪ್ರದಾಯವನ್ನು ಬಿಡದೆ, ಹೊಸ ಕಾವ್ಯ (ನವ್ಯಕಾವ್ಯ ?)ದ ಸಂವೇದನೆ, ಭಾಷೆ, ಶೈಲಿಗಳ ಬಗೆಗೆ ಒಲವು ಪ್ರಕಟಿಸಿದ ಎರಡನೆಯ ಘಟ್ಟ; ಮತ್ತು ಮೂರನೆಯದಾಗಿ, ತಾತ್ವಿಕ ನಿಲುವನ್ನು ವ್ಯಕ್ತಪಡಿಸುವುದರ ಮೂಲಕ ಕಾವ್ಯವ್ಯಕ್ತಿತ್ವದ ಪೋಷಣೆಗೆ ಪ್ರಯತ್ನಿಸಿದ ಘಟ್ಟ—ಈ ಮೂರು ಸ್ತರಗಳಲ್ಲಿಯೂ, ಕೆಲವು ಉತ್ತಮ ಕೃತಿಗಳನ್ನು ರಚಿಸಿದ್ದಾರೆ. 'ಮಲ್ಲಿಗೆ' 'ಕೃಷ್ಣಶಕ್ತಿ' 'ಹಳೇಪೇಪರ್ ಖಾಲೀಶೀಶೆ' 'ಸ್ಫೂಟ್ನಿಕ್-ವಿನೋಬಾ' 'ಮಬ್ಬಿನಿಂದ ಮಬ್ಬಿಗೆ' 'ತೆಂಗು' 'ಕಂಡದ್ದು ಮೂರುಸಲ' 'ಭೀಮಾಲಾಪ' 'ಜನಗಣ ಅಧಿನಾಯಕ' ಇತ್ಯಾದಿಗಳ ಪಟ್ಟಿ ದೊಡ್ಡದಾಗುತ್ತಾ ಹೋಗುತ್ತದೆ.

ಇಲ್ಲಿ ಗಮನಿಸಬೇಕಾದ ಇನ್ನೊಂದಂಶವೆಂದರೆ, 'ಸೌಂದರ್ಯ ಸಮೀಕ್ಷೆ' ನಡೆಸಿ, 'ಕಾವ್ಯಮೀಮಾಂಸೆ'ಯನ್ನು ಪಾಠ ಹೇಳಿದ ಜಿ.ಎಸ್.ಎಸ್‌ರವರು, ಯಾವುದೇ ಒಂದು ಕಾವ್ಯಸಿದ್ಧಾಂತಕ್ಕೆ ಕಟ್ಟುಬೀಳದಿರುವುದು. ಅವರಿಗೆ ಅತ್ಯಂತ ಆಪ್ತ ಸಿದ್ಧಾಂತವೆಂದರೆ,

> ತಳಿರ ಕಣ್ಣಂಚಿನಲಿ ತೊಟಕುವಿಬ್ಬನಿ ಒಂದು—
> ಸಾಕು, ನನಗಿಷ್ಟೇ ಸಾಕು, ಈ ವರ್ತಮಾನದ ಸರಕು,
> ಹಿಡಿದು ಚೌಕಟ್ಟು ಹಾಕುವೆ ನಾನು ಒಬ್ಬನೇ ಕುಳಿತು (ಕವಿ-ಕಿವಿ)[21]

ಎನ್ನುವ ನಿರ್ಲಿಪ್ತತೆ. ಅವರ ಬಹಳಷ್ಟು ಕವಿತೆಗಳಲ್ಲಿ 'ಈ ವರ್ತಮಾನದ ಸರಕು' ಎನಿಸುವ ಅನೇಕ ದೈನಂದಿನ ಚಿತ್ರಗಳನ್ನು ಹಾಗೆಯೇ ತದ್ವತ್ತಾಗಿ ನಿರೂಪಿಸುತ್ತಾರೆ. ಅದಕ್ಕೆ ಕಲೆಯ ಕುಂಚದ ಲೇಪ, ಕೃತಿಯ ಅಂತರಂಗದ ವಸ್ತುವನ್ನು ತಟ್ಟುವುದಕ್ಕಿಂತ ಹೆಚ್ಚಾಗಿ, ಬಾಹ್ಯ ಅಲಂಕಾರಗಳಲ್ಲಿ ಮಾತ್ರ ಪರ್ಯವಸಾನಗೊಳ್ಳುತ್ತದೆ. ಇದು ಅವರ ಧೋರಣೆಗಳಲ್ಲಿನ ಸೀಮಿತ ಬದಲಾವಣೆಗಳು ಕಂಡುಬಂದಂತೆ, ಬದಲಾಯಿಸುತ್ತಾ ಹೋಗುವುದೂ ಕಡಮೆ. ಆದ್ದರಿಂದಲೇ ಅವರ ಕಲೆಗಾರಿಕೆಯಲ್ಲಿ ಆರಂಭದ ದೆಶೆಯಿಂದ ಇಂದಿನವರೆಗೂ ಒಂದು ಬಗೆಯ ಏಕತಾನತೆಯನ್ನೇ ಕಾಣುತ್ತೇವೆ.

ನಮ್ಮಲ್ಲಿ ಬಹಳ ಜನ ಕವಿಗಳು ಇಂತಹುದೇ 'ತಮ್ಮ ಪಾಡಿಗೆ ತಾವು' ಎನ್ನುವ ಗುಂಗಿನಲ್ಲಿ ತಮ್ಮ ಕಾವ್ಯವ್ಯಕ್ತಿತ್ವವನ್ನೇ ಕುಬ್ಜಗೊಳಿಸಿಬಿಡುತ್ತಾರೆ. ಬೆಳವಣಿಗೆಯಿಲ್ಲದೆ ಅದು ಕೃಶವಾಗಿ ನವೆಯುತ್ತದೆ. ಬಹುಶ್ರುತರೂ, ಮೇಧಾವಿಗಳೂ ಆದ ಜಿ.ಎಸ್.ಎಸ್ ತಮ್ಮ ವ್ಯಕ್ತಿತ್ವವನ್ನು ಕಾವ್ಯದ ಅಡಿಗಲ್ಲಿನ ಮೇಲೆ ವೈವಿಧ್ಯಮಯ ಅನುಭವಗಳ ತಾಡನದ ಮೂಲಕ ವಿಸ್ತೃತಗೊಳಿಸುತ್ತಾರೆಂದು ಹಾರೈಸೋಣ. ಆಗ ಅವರಿಂದ ಕನ್ನಡ ಕಾವ್ಯಕ್ಕೆ ತಕ್ಕ ಕಾಣಿಕೆ ಸಂದಂತಾಗುತ್ತದೆ. ಕನ್ನಡ ಕಾವ್ಯ ಮತ್ತೊಂದು ಸಂಕ್ರಮಣ ಸ್ಥಿತಿಗೆ ಕಾದು ನಿಂತಿದೆ. ಈ ಸಂದರ್ಭದಲ್ಲಿ ಜಿ.ಎಸ್.ಎಸ್.ರವರಿಂದ ಸಹಜವಾಗಿಯೇ ಹೊಸದನ್ನು ನಿರೀಕ್ಷಿಸಬಹುದಾಗಿದೆ.

## ಟಿಪ್ಪಣಿಗಳು

1. ಸಾಮಗಾನ (1951) ಮುನ್ನುಡಿ: ಕುವೆಂಪು.
2. ಸಾಮಗಾನ (1951) ಕವಿಯ ಮನಸು, ಪು. 86
3. ಅದೇ, ಕಾವ್ಯಮಾರ್ಗ, ಪು 78
4. ಅದೇ, ತೃಪ್ತಿ, ಪು. 87
5. ಅನಾವರಣ (1963) ಕೋಗಿಲೆಗೆ ಉಪದೇಶ, ಪು. 3
6. ಅದೇ, ಕವಿತೆ ಬರೆಯುವುದು ಹೇಗೆ? ಪು. 30
7. ಚೆಲುವು-ಒಲವು (ದ್ವಿ ಮು. 1964). ಪು.ತಿ.ನ. ಮುನ್ನುಡಿ.
8. ಅದೇ
9. ಅದೇ, ಸಂಘಾತ; 'an element of surprise'ಗೆ ಸಂವಾದಿ?
10. ಅದೇ, ಉದಯರಾಗ, ಪು. 23.

11. ದೀಪದ ಹೆಜ್ಜೆ, ಹಿನ್ನುಡಿ, ಪು. 76
12. ಅದೇ, ಮುನ್ನುಡಿ, ಜಿ.ಎಸ್.ಎಸ್.ಪು. ii j
13. ಅದೇ, ಪು. v
14. ತೆರೆದ ದಾರಿ (1966) ಒಡೆದ ಕನ್ನಡಿ, ಪು. 28
15. ಅದೇ, ಬೀಜದಿಂದ ಬೀಜಕ್ಕೆ, ಪು. 95
16. ಸಾಮಗಾನ (1951) ಪು. ?
17. ಗೋಡೆ (1972) ನನ್ನ ಸುತ್ತ, ಪು. 21
18. ಅದೇ,ನನ್ನ ನಿನ್ನ ವಿಚಾರ, ಪು. 48
19. ಅದೇ, ನಿಲುವು, ಪು. 56
20. ಅದೇ, ಪ್ರಜ್ಞೆ, ಪು. 9.
21. ಅನಾವರಣ (1963) ಕವಿ_ಕಿವಿ, ಪು. 63.

ಎಚ್. ಎಸ್. ರಾಘವೇಂದ್ರರಾವ್

# ಕಾವ್ಯ ಮತ್ತು ಸಂಪ್ರದಾಯ

೧

ಒಬ್ಬ ವ್ಯಕ್ತಿಯ ಜೀವನ ಮತ್ತು ಅಭಿವ್ಯಕ್ತಿಗಳಲ್ಲಿ ಸಂಪ್ರದಾಯವು ಯಾವ ರೀತಿ ಕಾಣಿಸಿಕೊಂಡಿದೆಯೆಂಬ ಅಂಶದ ಅಧ್ಯಯನ ಕೆಲವು ಕುತೂಹಲಕಾರಿಯಾದ ಸಮಸ್ಯೆಗಳನ್ನು ಎತ್ತುತ್ತದೆ.

ಮನುಷ್ಯನ ವ್ಯಕ್ತಿತ್ವರೂಪಣೆಯಲ್ಲಿ ಸಂಪ್ರದಾಯವು ದ್ವಿವಿಧವಾದ ಪಾತ್ರವನ್ನು ವಹಿಸಬಹುದು. ಪ್ರಧಾನವಾಗಿ ಕವಿಯ ಪ್ರಸ್ತುತ ಪರಿಸರವೂ ಕೂಡ ಭೂತಕಾಲದ ಘಟನೆಗಳ ಪರಿಣಾಮವಾಗಿಯೇ ಮೈ ತಳೆಯುವುದರಿಂದ, ಅವನಿಗೆ ಇಷ್ಟವಿರಲಿ, ಬಿಡಲಿ, ಅವನು ಕೆಲವು ನಿರ್ದಿಷ್ಟ ಐತಿಹಾಸಿಕ ಶಕ್ತಿಗಳ ಪ್ರಭಾವಕ್ಕೆ ಅನಿವಾರ್ಯವಾಗಿ ಸಿಲುಕುತ್ತಾನೆ. ಇಲ್ಲಿ ಅವನಿಗೆ ಸಂಪ್ರದಾಯವನ್ನು ತಿರಸ್ಕರಿಸುವ ಸ್ವಾತಂತ್ರ್ಯ ಇರುವುದಿಲ್ಲ. ಈ ದೃಷ್ಟಿಯಿಂದ ಪ್ರತಿಯೊಬ್ಬ ಕಲಾವಿದ ಕೂಡ, ಅನಿವಾರ್ಯವಾಗಿ ತನ್ನ ಭೂತ ಮತ್ತು ವರ್ತಮಾನಗಳ ಬಂದಿ. ಸುತ್ತಲಿನ ವಾತಾವರಣದ ಗಾಳಿಯನ್ನು ತಿರಸ್ಕರಿಸುವುದು ಹೇಗೆ ಅಸಾಧ್ಯವೋ, ಹಾಗೆಯೇ ಸಂಪ್ರದಾಯದ ಪ್ರಭಾವದ ನಿರಾಕರಣೆ ಕೂಡ.

ಸಂಪ್ರದಾಯವೆಂದರೆ ಹಿಂದಿನಿಂದ ಬಂದ ಕೆಲವು ನಂಬಿಕೆಗಳ, ಆಚರಣೆಗಳ ಮೊತ್ತವೆಂಬ ಸೀಮಿತವಾದ ಅರ್ಥವನ್ನು ತೆಗೆದುಕೊಂಡರೆ ಆಗ ಸಮಸ್ಯೆಯು ಮತ್ತಷ್ಟು ತೀವ್ರವಾಗುತ್ತದೆ. ಬುದ್ಧಿ ಪಕ್ವವಾದ ಮೇಲೆ ಸಂಪ್ರದಾಯಗಳ ವೈಚಾರಿಕ ವಿಶ್ಲೇಷಣೆ ಮಾಡಿ ಅವುಗಳನ್ನು ಒಪ್ಪುವುದು ಅಥವಾ ನಿರಾಕರಿಸುವುದು ಬಹು ಸರಳವಾದ ಮೇಲುಪದರದ ಕೆಲಸ.

ಆದರೆ ಮನಶ್ಶಾಸ್ತ್ರೀಯ ದೃಷ್ಟಿಯಿಂದ ಪರಿಶೀಲಿಸಿದಾಗ ಈ ವಿಷಯದ ಕ್ಲಿಷ್ಟತೆ ಗೊತ್ತಾಗುತ್ತದೆ. ಒಬ್ಬ ವ್ಯಕ್ತಿಗೆ ಬುದ್ಧಿ ಬರುವ ಮೊದಲೇ, ಹಿರಿಯರ ಅನೇಕ ಆಚರಣೆಗಳು, ಮಾತುಗಳು, ಬೆಳೆಯುವ ಮನಸ್ಸಿನ ಭಾಗವಾಗಿ ಅವನ ವ್ಯಕ್ತಿತ್ವ ಮತ್ತು ಧೋರಣೆಗಳನ್ನು ನಿರ್ಧರಿಸಿಬಿಡುತ್ತವೆ. ಹೀಗಾದಾಗ ಸಂಪ್ರದಾಯ ಸುಪ್ತಚಿತ್ತದಲ್ಲಿ ಪ್ರತಿಷ್ಠಾಪಿತವಾಗಿ, ವ್ಯಕ್ತಿಯ ಸಮಸ್ತ ಕ್ರಿಯೆಗಳ ಮೇಲೂ ಪ್ರಭುತ್ವ ಹೊಂದಿರುತ್ತದೆ. ಹಾಗೆ ನೋಡಿದರೆ ಸಮಷ್ಟಿ ಪ್ರಜ್ಞೆ (Collective Consciousness) ಎಂದು

ಕರೆಯುವುದು ಹೀಗೆ ಒಳಮನದಲ್ಲಿ ಸ್ಥಿರವಾಗಿ ನಿಂತ ಸಂಪ್ರದಾಯಗಳನ್ನೇ ತಾನೆ?

ಕೆಲವು ಸಲ ಒಂದು ವಿಚಿತ್ರವಾದ ಪ್ರಕ್ರಿಯೆ ನಡೆಯುತ್ತದೆ. ಸಮಕಾಲೀನ ಘಟನೆಗಳಿಂದ ಪ್ರಭಾವಿತವಾದ, ವೈಯಕ್ತಿಕವಾದ ಸ್ಥಾನ-ಮಾನಗಳ ಆಸೆಗೆ ಬದ್ಧವಾದ, ಕಲಾವಿದ ಬಹಿರಂಗವಾಗಿ, ಹೇಳಿಕೆಗಳ ಮಟ್ಟದಲ್ಲಿ ಸಂಪ್ರದಾಯವನ್ನು ನಿರಾಕರಿಸಬಹುದು. ಆದರೆ ಅವನದೇ ಸುಪ್ತಚಿತ್ತ ಮೌನವಾಗಿಯೇ ಸಂಪ್ರದಾಯ ಶರಣವಾಗಿ ಉಳಿದಿರಬಹುದು. ಹೀಗಾದಾಗ, ಹೊರಮನ-ಒಳಮನಗಳ ಸಂಘರ್ಷ ಶ್ರೇಷ್ಠಮಟ್ಟದ ಕಲಾಕೃತಿಯ ಸೃಷ್ಟಿಗೆ ಸಾಧಕವಾಗಬಹುದು. ಅಥವಾ ಕಲಾವಿದನ ವ್ಯಕ್ತಿತ್ವ ಒಡೆದು ಹೋಗಿ ಆತ್ಮವಂಚನೆಗೆ ದಾರಿಯಾಗಬಹುದು.

ಆದ್ದರಿಂದ ಕವಿಯೊಬ್ಬನ ಕಾವ್ಯದಲ್ಲಿ ಸಂಪ್ರದಾಯವು ಮೈದಳೆದಿರುವ ವಿಧಾನದ ಸಮಗ್ರ ಪರಿಶೀಲನೆ ನಡೆಸಿ ಅರ್ಥಪೂರ್ಣ ತೀರ್ಮಾನಗಳಿಗೆ ಬರಬೇಕಾದರೆ ಕೆಳಗೆ ಹೇಳಿರುವ ಕೆಲವು ಮುಖ್ಯ ಅಂಶಗಳ ಸ್ಥೂಲ ಪರಿಶೀಲನೆಯನ್ನಾದರೂ ಮಾಡಬೇಕು. ಇಲ್ಲಿ ಮೌಲ್ಯಮಾಪನ ಗೌಣವಾಗಿ ವಿಶ್ಲೇಷಣೆ ಮುಖ್ಯವಾಗುತ್ತದೆ.

೧. ಕವಿಯ ವ್ಯಕ್ತಿತ್ವ ರೂಪಿತವಾದ ಕಾಲದಲ್ಲಿದ್ದ ರಾಜಕೀಯ ಮತ್ತು ಸಾಂಸ್ಕೃತಿಕ ಪರಿಸರ ಸಂಪ್ರದಾಯಗಳ ಬಗ್ಗೆ ತಳೆದ ಮನೋಧರ್ಮ.

೨. ಕವಿಯ ಜೀವನದ ವೈಯಕ್ತಿಕ ವಿವರಗಳು—ವಿದ್ಯಾಭ್ಯಾಸ, ಮಿತ್ರವರ್ಗ, ಗುರುವರ್ಗ, ಅಧ್ಯಯನ, ಪ್ರಭಾವ—ಇತ್ಯಾದಿ.

೩. ಕವಿ ಆರಿಸಿಕೊಂಡಿರುವ ಭಾಷೆಯ ಕಾವ್ಯ ಅವನ ಕಾಲದಲ್ಲಿ ಸಂಪ್ರದಾಯವನ್ನು ಕುರಿತು ತಳೆದ ಧೋರಣೆ ಮತ್ತು ಆದು ಕವಿಯ ಮೇಲೆ ಬೀರಿದ ಪ್ರಭಾವ.

೪. ಕವಿಯ ಕಾವ್ಯ ಬೆಳವಣಿಗೆ ಹೊಂದಿದೆಯೇ, ಹೊಂದಿದ್ದರೆ ಯಾವ ದಿಕ್ಕಿನಲ್ಲಿ, ಅಲ್ಲಿ ಕಂಡಿರುವ ಸಂಘರ್ಷ ಯಾವ ರೀತಿಯದು ಮೊದಲಾದ ವಿಷಯಗಳು.

೨

ಶ್ರೀಯುತ ಜಿ. ಎಸ್. ಶಿವರುದ್ರಪ್ಪನವರ ಕಾವ್ಯದ ಅಭ್ಯಾಸವನ್ನು ಈವರೆಗೂ ಹೇಳಿರುವ ವಿಚಾರಗಳ ಹಿನ್ನೆಲೆಯಲ್ಲಿ ನಡೆಸಿದರೆ ಕೆಲವು ಮೌಲಿಕವಾದ ನಿರ್ಧಾರಗಳನ್ನು ಮಾಡಲು ಸಾಧ್ಯವಾಗುತ್ತದೆ. ಆದ್ದರಿಂದ ಈ ಲೇಖನ ವೈಯಕ್ತಿಕ ಮೌಲ್ಯಮಾಪನದತ್ತ ಗಮನ ಹರಿಸದೆ ಕೇವಲ ಕಾರ್ಯಕಾರಣ ವಿಶ್ಲೇಷಣೆ ನಡೆಸುವುದರಲ್ಲೇ ತೃಪ್ತವಾಗುತ್ತದೆ.

ಸುಮಾರು ನಲವತ್ತೈದು ವರ್ಷಗಳ ಹಿಂದಿನ ಸ್ವಾತಂತ್ರ್ಯಪೂರ್ವದ ಚಿತ್ರದುರ್ಗದ ಬಳಿಯ ಗ್ರಾಮೀಣ ಪರಿಸರ ಕವಿಯ ಬಾಲ್ಯದ ಹಿನ್ನೆಲೆಯಾಗುತ್ತದೆ. ತಂದೆಯವರು ಅಧ್ಯಾಪಕರಾಗಿದ್ದರಿಂದ, ಹಳ್ಳಿಗಳ ಇತರ ರೈತವರ್ಗದೊಡನೆ ಬೆರೆಯದ, ವೀರಶೈವ ಧರ್ಮದ ಸಮಾನ ಹಿನ್ನೆಲೆಯಿರುವುದರಿಂದ, ಅವರೊಂದಿಗೆ ಬೆರೆಯುವ ಪರಿಸ್ಥಿತಿ, ಸಾಂಸ್ಕೃತಿಕ ಕೊಳುಕೊಡೆ ನಡೆದರೂ ಬೌದ್ಧಿಕ ಅಂತರವನ್ನು ಉಳಿಸಿಕೊಳ್ಳುವ

ಪ್ರಕ್ರಿಯೆಗೆ ಕಾರಣವಾಗಿರಬಹುದು. ಹಳ್ಳಿಗಳ ವಾತಾವರಣದಲ್ಲಿ ಬಹಿರಂಗದ ಒರಟು ತನವನ್ನು ಬೆಳೆಸಿಕೊಳ್ಳದೆ, ಸೂಕ್ಷ್ಮಸಂವೇದನಾಶೀಲತೆಯನ್ನು ಹೊಂದಿರುವ ಹುಡುಗ, ಸಂಗಡಿಗರಿಗೆ "ಅನ್ಯ"ನಾಗಿ ಅಂತರ್ಮುಖತೆಯನ್ನು ಬೆಳೆಸಿಕೊಳ್ಳುವುದು ಅನಿವಾರ್ಯ ವಾಗುತ್ತದೆ. ಅದರಲ್ಲಿಯೂ, ಆರ್ಥಿಕ ಬಲವಿಲ್ಲದಿದ್ದರಂತೂ ಸ್ವೇಚ್ಛಾನುಸಂಧಾನ, ಆತ್ಮಾಭಿಮಾನ ಮತ್ತ ಆದರ್ಶಪ್ರಿಯತೆಗಳು ಖಂಡಿತವಾಗಿ ಬೆಳೆಯುವ ಗುಣಗಳು

ಹೀಗಾದಾಗ, ವ್ಯಕ್ತಿ ತನ್ನ ಸುತ್ತಲಿನ ಸಾಮಾಜಿಕ ಪರಿಸರದಿಂದ ಹೇಗೆ ಪ್ರಭಾವಿತ ನಾಗಿರಬಹುದೆನ್ನುವುದನ್ನು ಊಹಿಸುವುದು ಸುಲಭ. ಬೆರಗುಗಣ್ಣುಗಳಿಗೆ, ಸುತ್ತ ನಡೆಯುವ ಪೂಜೆ, ಆಟ, ಹಾಡು, ಹಬ್ಬ, ಜಾತ್ರೆ, ಬದುಕು ಎಲ್ಲ ಆತ್ಮೀಯವಾಗು ತ್ತದೆ; ಅದ್ಭುತವಾಗುತ್ತದೆ. ಅಲ್ಲಿನ ಜನರ ಅಸ್ತಿತ್ವವೇ ಆಗಿರುವ ದೈವಭಕ್ತಿ ತಿಳಿಯದೆಯೇ ಮನದ ಒಳಗಿನಲ್ಲಿ ಮನೆ ಮಾಡುತ್ತದೆ. ಇದು ಪಾಂಡಿತ್ಯಗ್ರಾಹ್ಯವಾದ, ವೇದಾಂತನಿಷ್ಠವಾದ ಆಧ್ಯಾತ್ಮಿಕನಿಷ್ಠೆಯಾಗದೆ, ದೇವರನ್ನು ತಾಯಿ-ತಂದೆ ಎಂದು ಕರೆಯಬಲ್ಲ ಆತ್ಮೀಯವಾದ ನಂಬಿಕೆಯಾಗುತ್ತದೆ. ಇಂತಹ ಸಂದರ್ಭದಲ್ಲಿ ಭಾವುಕ ವಾದ, ಹೆಂಗರುಳಿನ, ಸೌಂದರ್ಯಪ್ರಿಯ ವ್ಯಕ್ತಿಗಳಿಗಂತೂ, ವೈಚಾರಿಕವಾದ ನಿಷ್ಠುರ ನಾಸ್ತಿಕತೆ ಬಹಳ ಕಷ್ಟ.

ಸ್ವಾತಂತ್ರ್ಯಪೂರ್ವದಿನಗಳ, ಮಹಾರಾಜರ ಆಡಳಿತದ, ಅನ್ನಕ್ಕೆ ಅಭಾವವಿಲ್ಲದ ದಿನಗಳಲ್ಲಿ ಸಾಮಾಜಿಕ ಅನ್ಯಾಯ, ಆಕ್ರೋಶಕ್ಕೆ ಕಾರಣವಾಗುವ ಸಂಭವ ಕಡಿಮೆ ಯಾಗಿತ್ತು. ಅಲ್ಲದೆ, ಆದರ್ಶಪ್ರಿಯತೆಯ ಬೆಂಬಲದಿಂದ, ಶ್ರೀಮಂತಿಕೆಯನ್ನು ಕುರಿತಾದ ಅಭಾವ ವೈರಾಗ್ಯವನ್ನು ಬೆಳೆಸಿಕೊಂಡು, ಬಡವರೇ ಭಾಗ್ಯವಂತರೆಂಬ ತೀರ್ಮಾನಕ್ಕೆ ಬರುವುದೂ ಕೂಡ ಸುಲಭವಿತ್ತು.

ಇಲ್ಲಿಂದ ಮುಂದೆ, ತುಮಕೂರಿನ ಸಿದ್ಧಗಂಗಾ ಮಠದ ಆಶ್ರಯದಲ್ಲಿ ಕಳೆದ ಐದು ವರ್ಷಗಳು ಇವರ ವ್ಯಕ್ತಿತ್ವರೂಪಣದಲ್ಲಿ ಅತ್ಯಂತ ಮಹತ್ವದ ವರ್ಷಗಳಾಗಿರಬೇಕು. ಅವರೇ ಹೇಳುವಂತೆ, "ಪವಿತ್ರವಾದ, ತಪೋವನಸದೃಶವಾದ" ಈ ಪ್ರದೇಶದ "ಬೆಟ್ಟ, ಈ ಆಶ್ರಮ, ಇಲ್ಲಿನ ದೇಗುಲಗಳ ಗಂಧನಾದ ವರ್ತುಲ, ಇಲ್ಲಿ ಬೆಳಗಿನ ಝಾವ ಭೋರ್ಗರೆಯುವ ವೇದಘೋಷ, ಎಲ್ಲಕ್ಕೂ ಮಿಗಿಲಾಗಿ, ಇಲ್ಲಿನ ಶ್ರೀ ಸ್ವಾಮಿಗಳವರ ಆಶೀರ್ವಾದ, ಆಗತಾನೇ ಮೊಳೆಯುತ್ತಿದ್ದ ನನ್ನ ಕವಿತೆಗೆ ಕಣ್ಣುಮಾಡಿಸಿ, ಗರಿ ಮೂಡಿಸಿ, ಹಾಲೂಡಿಸಿ, ನನ್ನನ್ನು ವಿಸ್ತಾರವಾದ ಲೋಕದ ಮೇಲೆ ಹಾರಿ ಬಿಟ್ಟವೆ."

ಈ ಮಾತುಗಳು ಕೇವಲ ಪ್ರಶಂಸೆಯ ವಾಕ್ಯಗಳಾಗಿರದೆ, ಪ್ರಾಮಾಣಿಕ ಅಭಿವ್ಯಕ್ತಿ ಯೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಆದ್ದರಿಂದ ಅವರಿಗೆ ಧರ್ಮದ ಸುಲಿಗೆಕೋರ, ಅಮಾನುಷ ಸ್ವರೂಪದ ದರ್ಶನವಾಗುವುದರ ಬದಲು, ಅದರ ಉದಾತ್ತರೂಪದ ಪರಿಚಯ ಆಗಿ ಅವರೊಳಗಿನ ಆದರ್ಶಪ್ರಿಯತೆ ಮತ್ತು ಪರಂಪರೆಯ ಅರಿವುಗಳು ಮತ್ತಷ್ಟು ಭದ್ರ ವಾಗಿರಬೇಕು.

ಮೈಸೂರು, ಶ್ರೀಯುತರ ಜೀವನದ ಮತ್ತು ಕಾವ್ಯದ ಬೆಳವಣಿಗೆಯಲ್ಲಿ ಅತ್ಯಂತ

ಪ್ರಮುಖವಾದ ಪಾತ್ರವನ್ನು ವಹಿಸಿದ ಸ್ಥಳ. ಆಗಿನ ಕಾಲದ ಮೈಸೂರು, ಕುವೆಂಪು ರವರ ವ್ಯಕ್ತಿತ್ವದ ನೆರಳಿನಲ್ಲಿ ಮುಳುಗಿಹೋಗಿತ್ತು.

ಪುಟ್ಟಪ್ಪನವರ ಪ್ರಭಾವವಲಯದಲ್ಲಿ ಸಿಕ್ಕಿಬಿದ್ದು, ತಮ್ಮ ಕಾವ್ಯದ ಅನೇಕ ಹಂತಗಳಲ್ಲಿ ಅವರ ಕಾವ್ಯದ ಅನುಕರಣೆ ಮಾಡಿದರೂ, ನಂತರ ಅದರಿಂದ ಹೊರ ಬಂದು ಸ್ವತಂತ್ರವಾದ ಕಾವ್ಯರಚನೆ ಮಾಡಿದ ಒಬ್ಬರೇ ಕವಿ ಶ್ರೀಯುತ ಶಿವರುದ್ರಪ್ಪ ನವರೆಂದರೆ ತಪ್ಪಾಗಲಾರದು.

ಅಂದಿನ ಮೈಸೂರಿನ ಗಂಧವಾಹದಲ್ಲಿಯೇ ಆದರ್ಶದ ಗಮಲು ಹೊಡೆಯುತ್ತಿತ್ತು. ರಾಮಕೃಷ್ಣ–ಅರವಿಂದ–ರವೀಂದ್ರ–ವಿವೇಕಾನಂದರು ಪುನರುಜ್ಜೀವನ ಮಾಡಿದ್ದ ಭಾರ ತೀಯ ಸಂಸ್ಕೃತಿಯ ತಿರುಳು ಇವರ ಮೇಲೆ ಬೀರಿರಬಹುದಾದ ಪ್ರಭಾವ ಅಪಾರ. ಈ ಜನಗಳಲ್ಲಿ ಸಂಸ್ಕೃತಿಯ ಬಾಹ್ಯರೂಪವಾಗಿದ್ದ ಎಲ್ಲ ವೈದಿಕ ಆಚರಣೆಗಳನ್ನು ಅಲ್ಲ ಗಳೆಯುವ, ಆದರೆ, ವೇದ-ಉಪನಿಷತ್ತುಗಳನ್ನು ಒಪ್ಪಿಕೊಳ್ಳುವ ದ್ವೈವಿಧ್ಯವನ್ನು (Duality)ಯನ್ನು ಕಾಣಬಹುದು. ಈ ಕಾಲದಲ್ಲೇ ವರ್ಗವೈಷಮ್ಯದ ದಾರುಣ ಚಿತ್ರ ಬಡವರನ್ನು ಕುರಿತ ಹುಸಿ ಸಹಾನುಭೂತಿಯಾಗಿ ಮಾತ್ರ ತಲೆದೋರಿತು. ಈ ರೀತಿಯ "ರೊಮ್ಯಾಂಟಿಕ್ ಬುದ್ಧಿಜೀವಿ"ಗಳು ಬಡವನನ್ನು ನೋಡಿ ಕನಿಕರ ಸೂಚಿಸುತ್ತಲೇ, ಪ್ರಗತಿಶೀಲ ಚಳುವಳಿಯನ್ನು ವಿರೋಧಿಸುವ ಪರಸ್ಪರ ವಿರೋಧವನ್ನು ತೋರಿಸಿದರು. ಇವರಿಗೆ ಆಧ್ಯಾತ್ಮ-ಆದರ್ಶ-ಸಮಾಜ ಸುಧಾರಣೆಗಳು ಒಂದೇ ಮನೆಯ ಬೇರೆಬೇರೆ ಕೋಣೆ ಗಳಂತೆ ಉಪಯೋಗವಾದವು. ಎಲ್ಲವೂ "ಕಾವ್ಯವಸ್ತು"ವಾಗಿ ಮುಖ್ಯವಾದವೇ ಹೊರತು, ಇವರನ್ನು ಕ್ರಿಯಾಶೀಲರನ್ನಾಗಿ ಮಾಡಲಿಲ್ಲ.

ಶ್ರೀಯುತ ಶಿವರುದ್ರಪ್ಪನವರನ್ನು ಆವರಿಸಿಕೊಂಡ ಸಂಪ್ರದಾಯದ ಪರಿಚಯವಾಗ ಬೇಕಾದರೆ ಮೇಲೆ ವಿವರಿಸಿರುವ ಪರಿಸರದ ಸ್ಪಷ್ಟ ಅರಿವು ಅಗತ್ಯ. ತುಮಕೂರಿನ "ಅಸಾಹಿತ್ಯಕ" ವಾತಾವರಣದಲ್ಲಿ ಗರಿಮೂಡಿಸಿಕೊಂಡಿದ್ದ ಈ ಸೌಂದರ್ಯಪ್ರಿಯ, ಆದರ್ಶಪ್ರಿಯ, 'ಬಡ' ಭಾವಜೀವಿ ತ. ಸು. ಶ್ಯಾಮರಾಯರೇ ಮುಂತಾದವರ ಸಂಪರ್ಕ ದೊಂದಿಗೆ ಮೈಸೂರಿನಲ್ಲಿ ಪ್ರವೇಶ ಮಾಡಿದಾಗ, ಅಲ್ಲಾ ಉದ್ದೀನ್ ಅರಮನೆಯೊಳಗೆ ಹೋದಂತಾಗಿ, ಸುಧಾರಣೆಯ ಸ್ನಾನ ಮಾಡಿದ್ದ ಭಾರತೀಯ ಸಂಸ್ಕೃತಿಗೆ ತನ್ನನ್ನು ತಾನು ಸಂಪೂರ್ಣವಾಗಿ ತೆತ್ತುಕೊಂಡಿದ್ದರಲ್ಲಿ ಆಶ್ಚರ್ಯವೇನೂ ಇರಲಿಲ್ಲ. ಕನ್ನಡ ಸಾಹಿತ್ಯಪರಂಪರೆಯ ಆಳವಾದ ಅಭ್ಯಾಸ ಮಾಡುತ್ತಿದ್ದ ಇವರು ತಮಗೇ ಅರಿವಿಲ್ಲ ದಂತೆ ತಾವೂ ಸಂಪ್ರದಾಯವೊಂದರ ಭಾಗವಾಗಿ ಬದಲಾವಣೆ ಹೊಂದುತ್ತಿದ್ದರು.

ಬಹಿರಂಗ ವ್ಯಕ್ತಿತ್ವದ ಈ ಬೆಳವಣಿಗೆಯೊಂದಿಗೆ, ಸೂಕ್ಷ್ಮವಾದ, ಸಂವೇದನಾಶೀಲ ವಾದ ಅಂತರಂಗವೊಂದು, ಬೆಳೆಯುತ್ತಿದ್ದ ರೀತಿಯನ್ನು ಮರೆಯಲಾಗುವುದಿಲ್ಲ. "ಋಣಭಾರ"ದಿಂದ ಕುಗ್ಗುವ ವ್ಯಕ್ತಿತ್ವಕ್ಕೆ ಕಾವ್ಯರಚನಾಶಕ್ತಿ, ಅಂತರ್ಮುಖತೆಗಳು ವರವಾಗಿ ಪರಿಣಮಿಸಿ, "ಜೀವನ ವಿಕಾಸ"ಕ್ಕೆ ದಾರಿ ಮಾಡಿಕೊಟ್ಟಿದ್ದರೂ ಆಶ್ಚರ್ಯ ವಿಲ್ಲ. ಹೀಗೆ ಹಿರಿಯತನಕ್ಕೆ ನಮಿಸುವ, ಹಿರಿಯ ಮೌಲ್ಯಗಳನ್ನು ಒಪ್ಪಿಕೊಳ್ಳುವ,

ಅನ್ಯಾಯವನ್ನು ವಿರೋಧಿಸುವ ಸುಸಂಸ್ಕೃತ, ಧೀರ ಚೇತನವೊಂದು "ಸಮಕಾಲೀನ ಸಂಪ್ರದಾಯ"ದ ಕುಲುಮೆಯಲ್ಲಿ ನಿಧಾನವಾಗಿ ರೂಪುಗೊಂಡಿತು.

ಈಚೆಗೆ, ಸಾಮಾಜಿಕ ಸಂದರ್ಭವನ್ನು ಕುರಿತು ಗಂಭೀರವಾಗಿ ಮಾತನಾಡು ತ್ತಿದ್ದರೂ, ಈ ಕವಿ ಮೂಲಭೂತವಾಗಿ "ಅಂತರ್ಮುಖಿಯಾದ ಭಾವಗೀತಕಾರ"ನೆನ್ನು ವುದು ಬಹಳ ಮಹತ್ವದ ಅಂಶ. ಪ್ರತಿಯೊಂದು ಘಟನೆಗೂ ಇವರು ಕವಿಯಾಗಿ ಪ್ರತಿ ಕ್ರಿಯಿಸುವುದು ವೈಯಕ್ತಿಕವಾಗಿಯೇ, ವ್ಯಕ್ತಿನಿಷ್ಠವಾಗಿಯೇ. ಆದ್ದರಿಂದ ಸಂಪ್ರ ದಾಯ ಇವರ ಕಾವ್ಯದಲ್ಲಿ ವೈಯಕ್ತಿಕ ಅಭಿವ್ಯಕ್ತಿಯ ಅವಿಭಾಜ್ಯ ಅಂಗವಾಗ ಬರ ಬೇಕೇ ವಿನಾ ವಸ್ತುನಿಷ್ಠ ಕಾಳಜಿಯಾಗಿ ಅಲ್ಲ.

ಹೀಗೆಂದ ಮಾತ್ರಕ್ಕೆ, ಈ ಕವಿಗೆ ಜೀವನದ ಕಠೋರ ವಾಸ್ತವತೆಗಳ ಪರಿಚಯವೇ ಆಗಲಿಲ್ಲವೆಂದಾಗಲೀ, ನೋವು ಇವರಿಗೆ ಅಪರಿಚಿತವೆಂದಾಗಲೀ, ಅರ್ಥವಲ್ಲ. ಆದರೆ ಕಾವ್ಯವು ಕೇವಲ ಉದಾತ್ತವಾದ ಭಾವನೆಗಳ ಅಭಿವ್ಯಕ್ತಿ ಮಾತ್ರವೆಂಬ, ಕ್ಷುಲ್ಲಕ, 'ಅಶಿವ' ಭಾವನೆಗಳಿಗೆ ಅಲ್ಲಿ ಅವಕಾಶವಿಲ್ಲವೆಂಬ ಸಮಕಾಲೀನ ಕಾವ್ಯಕಲ್ಪನೆ ಅವರನ್ನು ನಿಯಂತ್ರಿಸಿತು. ಕಾವ್ಯದಲ್ಲಿ, ಮನುಷ್ಯನ ಮನಸ್ಸಿನಲ್ಲಿ ನಡೆಯುವ ತುಮುಲ ವನ್ನು, ಅಲ್ಲಿನ ಕೊಳಚೆಯನ್ನು ಹೇಳುವುದು, 'ಅಸಂಸ್ಕೃತ'ವೆಂದು ಇವರಿಗೆ ತೋರಿರ ಬೇಕು.

ಈ ರೀತಿಯಲ್ಲಿ ಸಮಕಾಲೀನ ಕಾವ್ಯ ಸಂಪ್ರದಾಯದ "ಗೃಹೀತಗಳು" (Axioms) ಒಬ್ಬ ಕವಿಯ ಕಾವ್ಯದ ಸ್ವರೂಪವನ್ನೇ ನಿರ್ಧರಿಸುವ ಕ್ರಿಯೆಯನ್ನು ಇಲ್ಲಿ ಗಮನಿಸ ಬಹುದು.

ಶ್ರೀಯುತರ ಆದರ್ಶವಾದದ ಬಲೂನಿಗೆ ಗಾಳಿ ತುಂಬಿದ ಮೈಸೂರು, ಆ ಬಲೂ ನಿಗೆ ಚುಚ್ಚಿದ ಸೂಜಿಯೂ ಆಗಿದ್ದು, ಬಹಳ ಕುತೂಹಲಕಾರಿಯಾದ ಅಂಶ.

ವಾಸ್ತವಲೋಕವು ಆದರ್ಶಲೋಕಕ್ಕಿಂತ ಭಿನ್ನವೆಂಬ ಅರಿವು, "ಮೇರು ಸಮ ವ್ಯಕ್ತಿತ್ವ"ವನ್ನು ಹೊಂದಿದವರೂ ಕೂಡ, ಕೀಳಾಗುವರೆಂಬ ಕಹಿ ಅನುಭವ, ಇವರ ಕವಿತೆಗೆ ವಾಸ್ತವತೆಯ ರಕ್ತದಾನ ಮಾಡಿತೆನ್ನಬಹುದು. ಮೈಸೂರಿನಿಂದ ದೂರದ ಹೈದರಾಬಾದಿಗೆ ಕವಿ ಮಾಡಿದ ಪ್ರಯಾಣ, ಅವರ "ಭಾವಜೀವಿ"ಯಾಗಿದ್ದ ವ್ಯಕ್ತಿತ್ವ ಕ್ರಮೇಣ ವಾಸ್ತವದ ಕಡೆಗೆ ಮಾಡಿದ ಪ್ರಯಾಣವೂ ಹೌದು. ಆದರೆ ಅಲ್ಲಿಂದ ಮುಂದೆ ಅವರು ಬುದ್ಧಿಜೀವಿಯಾದರು; ವಿಮರ್ಶಕರಾದರು. ಆದರೆ, ಅವರ ಕವಿತ್ವದ ಸೆಲೆ ಅದರೊಂದಿಗೇ ಬತ್ತಿಹೋಗಿದ್ದು ಅವರ ಕಾವ್ಯಜೀವನದ ದುರಂತವೇ ಸರಿ. ಬಲಿತ ರೇಷ್ಮೆಯ ಹುಳ, ಗೂಡಿನಿಂದ ಹೊರಬರುವಾಗ, ನವಿರಾದ ಎಳೆಗಳನ್ನು ಹರಿದುಕೊಂಡು ಹೊರ ಬರುವಂತೆ, ಅವರ ವಾಸ್ತವಿಕತೆಯ ಅರಿವು ಕವಿ ಹೃದಯವನ್ನೇ ಸೀಳಿಹಾಕಿರು ವಂತೆ ಕಾಣುತ್ತದೆ.

ಈ ಸಂದರ್ಭದಲ್ಲೇ ನವ್ಯ ಕಾವ್ಯ ಸಂಪ್ರದಾಯ ಇವರ ಮೇಲೆ ಬೀರಿದ ಪ್ರಭಾವ ಮತ್ತು ಅದನ್ನು ಇವರು ತಮ್ಮದಾಗಿಸಿಕೊಂಡ ರೀತಿಯ ಪರಶೀಲನೆ ಕೂಡಾ ಸೂಕ್ತ

ವಾಗುತ್ತದೆ. ಕುವೆಂಪು ಸಂಪ್ರದಾಯಕ್ಕೆ ಸೇರಿದ್ದ ಇತರ ಕವಿಗಳಂತೆ, ಮೊದಮೊದಲು ಇವರೂ ಕೂಡ, ನವ್ಯಕಾವ್ಯವನ್ನು ಅನುಮಾನ, ಅಸಹನೆಗಳಿಂದಲೇ ಕಂಡರು. ಇದು ಅಭಾರತೀಯವಾದದ್ದು, ಅಕಾಲಿಕವಾದದ್ದು, ಪರಂಪರಾಗತವಾದ ಮೌಲ್ಯಗಳನ್ನು ಕೈಬಿಟ್ಟದ್ದು, ಕಾವ್ಯಸಂಪ್ರದಾಯದ ಸ್ಪಷ್ಟವಾದ ಕಲ್ಪನೆಯನ್ನು ಹೊಂದಿಲ್ಲದಿರುವುದು ಮೊದಲಾದ ಆಕ್ಷೇಪಣೆಗಳನ್ನು ಇವರೂ ಮಾಡಿದರು.

ಆದರೆ ಕ್ರಮೇಣ, ಅನಿವಾರ್ಯವಾಗಿ ನವ್ಯ ಕವಿತೆಯ ಬಹಿರಂಗವನ್ನು ಇವರೂ ಒಪ್ಪಿಕೊಂಡು ಮೈಗೂಡಿಸಿಕೊಂಡರು. ಆದರೆ ಇವರ ಕಾವ್ಯದ ಅತ್ಯಂತ ಮುಖ್ಯ ಗುಣ ವಾದ ಭಾವಗೀತಾತ್ಮಕತೆಯನ್ನು ನವ್ಯ ಕವಿತೆಯ ಚೌಕಟ್ಟಿನಲ್ಲಿ ದುಡಿಸಿಕೊಳ್ಳುವುದು, ಕಷ್ಟವಾದುದರಿಂದ ಇವರು ಪಡೆದಿರುವ ಯಶಸ್ಸು ಸೀಮಿತವಾಗುತ್ತದೆ.

೩

ಇಲ್ಲಿಯವರೆಗೂ ನಾನು ಶ್ರೀಯುತ ಶಿವರುದ್ರಪ್ಪನವರ ಕಾವ್ಯದಿಂದ ನಿದರ್ಶನಗಳನ್ನು ಕೊಡುವ ಪ್ರಯತ್ನ ಮಾಡಿಲ್ಲ. ಅವರ ಕಾವ್ಯವನ್ನು ಓದದೆ, ಅದನ್ನು ಕುರಿತ ವಿಮ ರ್ಶೆಯ ಅಭ್ಯಾಸಕ್ಕೆ ಯಾರೂ ತೊಡಗುವುದಿಲ್ಲವೆಂಬ ನನ್ನ ನಂಬಿಕೆ ಇದಕ್ಕೆ ಕಾರಣ. ಅಲ್ಲದೆ ಸಂಪ್ರದಾಯದ ಯಾವ ಅಂಶಗಳನ್ನು ಅವರು ಪ್ರಜ್ಞಾಪೂರ್ವಕವಾಗಿ ಸ್ವೀಕರಿಸಿ ದ್ದಾರೆ ಮತ್ತು ಯಾವ ಅಂಶಗಳನ್ನು ತಿರಸ್ಕರಿಸಿದ್ದಾರೆ ಎನ್ನುವುದನ್ನು ತಿಳಿಯಲು ಅಗತ್ಯವಾದ ವಿಸ್ತೃತ ಪರಿಶೀಲನೆಯನ್ನೂ ನಾನು ನಡೆಸಿಲ್ಲ.

ಈ ಲೇಖನದಲ್ಲಿ ಹಿಂದೆಯೇ ಸೂಚಿಸಿರುವಂತೆ, ಇವರು ವೈದಿಕ ಸಂಸ್ಕೃತಿಯ ಉದಾತ್ತ ಮೌಲ್ಯಗಳನ್ನು ತಾತ್ವಿಕ ಹಂತದಲ್ಲಿ ಅವಿಚಾರಿತವಾಗಿ ಸ್ವೀಕರಿಸಿ, ಅದೇ ವೈದಿಕ ಸಂಸ್ಕೃತಿಯ ಬಹಿರಂಗದ ವಿಧಿನಿಷೇಧಗಳನ್ನು ತಿರಸ್ಕರಿಸಿರುವಂತೆ ಕಾಣುತ್ತದೆ. ಹೀಗಾಗಲು, ವೈದಿಕತತ್ವಪ್ರಣಾಳಿಕೆಗೆ ಜಾನಪದ ಪರಿವೇಷವನ್ನು ಕೊಟ್ಟ ವಚನಕಾರರ ಕೃತಿ ಮತ್ತು ಬದುಕುಗಳು ಇವರ ಮೇಲೆ ಬೀರಿರುವ ಗಾಢವಾದ ಪ್ರಭಾವವೇ ಕಾರಣ ವೆಂದು ಹೇಳಬಹುದು. ಈ ರೀತಿ ರಸವನ್ನು ಸ್ವೀಕರಿಸಿ, ಕಸವನ್ನು ತ್ಯಜಿಸುವ ಕ್ರಿಯೆ ಖಂಡಿತವಾಗಿಯೂ ಸಹಜವಾದುದು ಮತ್ತು ಸರಿಯಾದುದು. ಆದರೆ ಭಾರತೀಯ ಸಮಾಜದಲ್ಲಿ ಕಂಡ, ಕಾಣುತ್ತಿರುವ ಆರ್ಥಿಕ ಅಸಮತೆ ಮತ್ತು ಸಾಮಾಜಿಕ ಶೋಷಣೆ ಗಳಿಗೆ ಇದೇ ವೈದಿಕಧರ್ಮವು ಕಾರಣವಾಯಿತೆನ್ನುವ ಐತಿಹಾಸಿಕ ಸತ್ಯವು ಇವರಿಗೆ ತೀರ ಈಚೆಗೆ ಬಂದಿರುವಂತೆ ಕಾಣುತ್ತದೆ. ಎಲ್ಲದರಲ್ಲಿಯೂ ಒಳ್ಳೆಯದನ್ನು ಗುರುತಿಸಲು ಪ್ರಯತ್ನಪಡುವ ಮಾನವೀಯತಾವಾದೀ ಧೋರಣೆ (Humanist Approch) ಗಳಿಂದ ಈ ರೀತಿಯ ಪ್ರಮಾದಗಳು ಸಂಭವಿಸುತ್ತದೆ. ಈ ಕವಿಗೆ ಅನ್ಯಾಯವನ್ನು ನೋಡಿದಾಗ ಕೋಪ ಬರುವ ಬದಲು ಜಿಗುಪ್ಸೆ ಹುಟ್ಟುತ್ತದೆ. ತಾನು ಇವರೆಲ್ಲರಿಗಿಂತ ಬೇರೆಯಾದ ವನು, ಉದಾತ್ತನಾದವನು, ಎನ್ನುವ ಮನೋಭಾವದಿಂದ ಕೂಡಿದ ತಾತ್ಸಾರ ಕಂಡು ಬರುತ್ತದೆ. ಪ್ರತಿಯೊಬ್ಬ ವ್ಯಕ್ತಿಯ (ಕವಿಯೂ ಸೇರಿದಂತೆ) ಅಂತರಂಗದಲ್ಲಿ ಹುದು

ಗಿರುವ ಒಳ್ಳೆಯ ಮತ್ತು ಕೆಟ್ಟ ಗುಣಗಳ ನಡುವಿನ ದ್ವಂದ್ವವು ಇವಂಗೆ ಸ್ಪಷ್ಟವಾಗುವು ದಿಲ್ಲ.

ಕನ್ನಡ ಕಾವ್ಯಸಂಪ್ರದಾಯದ ಸ್ಪಷ್ಟವಾದ ಅರಿವು ಮತ್ತು ಅಭ್ಯಾಸ, ಆ ಭಾಷೆ ಯಲ್ಲಿ ಜೀವಂತಸಾಹಿತ್ಯರಚನೆ ಮಾಡುವವರಿಗೆ ಇರಲೇಬೇಕೆಂಬ ಮಾತನ್ನು ಶ್ರೀಯುತ ಶಿವರುದ್ರಪ್ಪನವರು, ತಮ್ಮ ಭಾಷಣಗಳು ಮತ್ತು ಲೇಖನಗಳಲ್ಲಿ ಮತ್ತೆ ಮತ್ತೆ ಹೇಳು ತ್ತಾರೆ. ಪರಂಪರೆಯ ಪ್ರಜ್ಞೆಯಿಲ್ಲವೆನ್ನುವುದು ಇವರು ನವ್ಯಸಾಹಿತ್ಯಿಕಗಳ ಮೇಲೆ ಸಾಮಾನ್ಯವಾಗಿ ಹೊರಿಸುವ ಆರೋಪ. ಆದ್ದರಿಂದ ಇವರ ಕಾವ್ಯದ ಮೇಲೆ, ಕನ್ನಡ ಸಾಹಿತ್ಯ ಪರಂಪರೆಯ ಪ್ರಭಾವ ಎಷ್ಟರ ಮಟ್ಟಿಗೆ ಆಗಿದೆಯನ್ನುವುದರ ಪರಿಶೀಲನೆ ಔಚಿತ್ಯಪೂರ್ಣವಾದುದು.

ಬಹುಪಾಲು ಹಳೆಗನ್ನಡ ಕವಿಗಳು ತಮ್ಮ ಅಭಿವ್ಯಕ್ತಿ ಮಾಧ್ಯಮವಾಗಿ ಮಹಾಕಾವ್ಯ ವನ್ನು (Epic) ಆರಿಸಿಕೊಂಡವರು. ಈ ಕಾವ್ಯಗಳಲ್ಲಿ ಭಾವಗೀತಾತ್ಮಕವಾದ ಭಾಗ ಗಳು ಅಲ್ಲಲ್ಲಿ ಕಂಡುಬರುತ್ತವೆಯೇ ಹೊರತು, ಸ್ವತಂತ್ರ ಭಾವಗೀತೆಗಳೆಂದು ಕರೆಯ ಬಹುದಾದ ಕೃತಿಗಳು ನಮಗೆ ಸಿಗುವುದು ತೀರಾ ವಿರಳ. (ಕೆಲವು ವಚನಕಾರರ, ಕೆಲವು ವಚನಗಳು ಈ ಮಾತಿಗೆ ಅಪವಾದವಾಗಬಹುದು) ಅಲ್ಲದೆ ಈ ಕವಿಗಳೆಲ್ಲರೂ ಪುರಾಣಪ್ರಚೋದಿತವಾದ ಕಥಾವಸ್ತುಗಳನ್ನು ಆರಿಸಿಕೊಂಡು, ಪೂರ್ವಸಿದ್ಧವಾದ ಛಂದೋರೂಪಗಳನ್ನು ಒಪ್ಪಿಕೊಂಡು, ಮಹಾಕಾವ್ಯಲಕ್ಷಣಗಳ ನಿರ್ಬಂಧಿತ ಚೌಕಟ್ಟಿ ನಲ್ಲಿ ಕೃತಿರಚನೆ ಮಾಡಿದವರು.

ಪ್ರಸ್ತುತ ಕವಿಯಾದರೋ, ಸಮಕಾಲೀನ ಮನೋಧರ್ಮಕ್ಕೆ ಉಚಿತವಾಗಿ ಯಾವುದೇ ರೀತಿಯ ಮಹಾಕಾವ್ಯ ಅಥವಾ ಖಂಡಕಾವ್ಯವನ್ನು ರಚಿಸಿಲ್ಲ. ಇವರ ಅತಿ ದೀರ್ಘ ಕವನ ಕೂಡಾ ನೂರು ಸಾಲುಗಳ ಪರಿಮಿತಿಯನ್ನು ದಾಟುವುದಿಲ್ಲ. ವಸ್ತುವಿನ ದೃಷ್ಟಿಯಿಂದ ಹಳೆಗನ್ನಡಕಾವ್ಯಕ್ಕೆ ಧರ್ಮವೇ ಬುನಾದಿ. ಧಾರ್ಮಿಕ ಮಹಾಪುರುಷರ ಬದುಕು, ಈ ಕವಿಯ ಕೆಲವು ಕವನಗಳಿಗೆ ವಸ್ತುವಾದರೂ ಕೂಡಾ, ಪಂಪ, ರನ್ನ, ರತ್ನಾಕರ, ರಾಘವಾಂಕ ಮೊದಲಾದವರ ಅನುಕರಣೆ ಅಲ್ಲಿ ಕಾಣುವುದಿಲ್ಲ. ಪ್ರಕೃತಿ ವರ್ಣನೆ, ಪ್ರಣಯವರ್ಣನೆ ಮೊದಲಾದ ವಿವರಗಳಲ್ಲಿ ಕೂಡಾ, ಅಷ್ಟಾದಶವರ್ಣನೆ ಗಳಿಗೆ ನಿಷ್ಠವಾಗಿದ್ದ ಹಳೆಗನ್ನಡ ಕಾವ್ಯಶೈಲಿ ಇವರಿಗೆ ಇಷ್ಟವಾಗಿರುವಂತೆ ಕಂಡುಬರುವು ದಿಲ್ಲ. ವಚನಕಾರರ ಮಾತಿನ ರೀತಿ ಮತ್ತು ಅಭಿವ್ಯಕ್ತಿಯ ಧೈರ್ಯಗಳು ಇವರ ಮೇಲೆ ಸಾಕಷ್ಟು ಪರಿಣಾಮ ಬೀರಿರುವಂತೆ ಕಂಡರೂ ಕೂಡಾ, ಇವರ ಕವನಗಳು ವಚನಗಳ ಪರಂಪರೆಯನ್ನು ಮುಂದುವರಿಸುತ್ತವೆಂದು ಹೇಳಲಾಗುವುದಿಲ್ಲ.

ಈ ಎಲ್ಲ ಅಂಶಗಳನ್ನೂ ಗಮನಿಸಿದಾಗ, ಕನ್ನಡ ಕಾವ್ಯಪರಂಪರೆಯ ತೀವ್ರವಾದ ಪ್ರಭಾವವು, ಇವರ ಮೇಲೂ ಆಗಿಲ್ಲವೆನ್ನುವ ತೀರ್ಮಾನಕ್ಕೆ ಬರುವುದು ಅನಿವಾರ್ಯ ವಾಗುತ್ತದೆ. ಹಾಗೆಂದ ಮಾತ್ರಕ್ಕೆ ಅದು ವಿಷಾದಕರವಾದ ಸಂಗತಿಯೇನೂ ಅಲ್ಲ. ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲಾದ, ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದ,

ಕನ್ನಡ ಸಾಹಿತ್ಯವು, ಆಶಯ ಮತ್ತು ಅಭಿವ್ಯಕ್ತಿ ಕ್ರಮದಲ್ಲಿ ತನ್ನ ಹಿಂದಿನ ಬಹುಪಾಲು ಲಕ್ಷಣಗಳನ್ನು ಕಳೆದುಕೊಂಡಿತೆನ್ನುವ ಮಾತು ಸರ್ವವಿದಿತ. ಈ ಪರಿವರ್ತನೆಯಿಂದ ಆಗಿರುವ ನಷ್ಟಕ್ಕಿಂತ ಲಾಭವೇ ಹೆಚ್ಚೆನ್ನುವ ಅಂಶ ಕೂಡಾ ನಿರ್ವಿವಾದ. ಶ್ರೀಯುತ ಶಿವರುದ್ರಪ್ಪನವರ ಕಾವ್ಯ ಕೂಡಾ ಈ ಸಾಮಾನ್ಯ ನಿಯಮಕ್ಕೆ ಅಪವಾದವಲ್ಲ. ನಮ್ಮ ಬಹುಪಾಲು ಹಳೆಗನ್ನಡ ಕಾವ್ಯವು, ಈಗ, ಕೇವಲ ಶಾಲೆಕಾಲೇಜುಗಳಲ್ಲಿ ಕಡ್ಡಾಯವಾಗಿ ಓದಿಸಲ್ಪಡುವ, Museum piece ಆಗಿರುವುದನ್ನು ಬೇರೆ ಯಾವ ರೀತಿಯಲ್ಲೂ ಸಮಕಾಲೀನ ಸಾಮಾಜಿಕ ಮಹತ್ವವನ್ನು ಪಡೆದಿಲ್ಲವೆಂಬ ಮಾತನ್ನು ಅಭಿಮಾನದ ಮರೆಯಲ್ಲಿ ಬಚ್ಚಿಡಲೆತ್ನಿಸುವುದು ಆತ್ಮವಂಚನೆಯಾಗುತ್ತದೆ.

೪

ಈ ಪರಿಶೀಲನೆಯ ನಂತರ ನಾನು ತಲುಪಿರುವ ತೀರ್ಮಾನಗಳು ಸಂಕ್ಷಿಪ್ತವಾಗಿ ಈ ರೀತಿ ಇವೆ.

ಶ್ರೀಯುತ ಜಿ. ಎಸ್. ಶಿವರುದ್ರಪ್ಪನವರ ಕಾವ್ಯ ಹಾಗೂ ಸಾಹಿತ್ಯದ ಮೇಲೆ ಸಂಪ್ರದಾಯವು ಬೀರಿರುವ ಪ್ರಭಾವವು ಪರೋಕ್ಷವಾದುದು. ಅವರ ವ್ಯಕ್ತಿತ್ವ ಮೇಲೆ ಪ್ರಭಾವವು ಕಾವ್ಯದಲ್ಲಿ ಪ್ರತಿಫಲಿತವಾಗಿದೆ; ಅಷ್ಟೆ. ಅವರ ಬಾಲ್ಯ ಮತ್ತು ಹರೆಯದಲ್ಲಿ ನಮ್ಮ ದೇಶದ ಇತಿಹಾಸದಲ್ಲಿ ನಡೆಯುತ್ತಿದ್ದ ಅತ್ಯಂತ ಮಹತ್ವದ ಘಟನೆಗಳು, ಅವರ ಮೇಲೆ ಬೀರಿರುವಷ್ಟು ಪ್ರಭಾವವನ್ನು ಹಿಂದಿನ ಸಂಪ್ರದಾಯ ಬೀರಿಲ್ಲ. ಇತಿಹಾಸದ ಮತ್ತು ಸಮಕಾಲೀನ ಸಮಾಜದ ಸೂಕ್ಷ್ಮವಾದ ಮತ್ತು ಬುದ್ಧಿಪೂರ್ವಕವಾದ ಪರಿಶೀಲನೆಗಿಂತ ಹೆಚ್ಚಾಗಿ, ಅವರ ವೈಯಕ್ತಿಕ ಜೀವನ ಹಿಡಿದ ದಿಕ್ಕುದೆಸೆಗಳು, ಶ್ರೀ ಜಿ.ಎಸ್.ಎಸ್. ಅವರ ಕಾವ್ಯದ ಅಭ್ಯಾಸದಲ್ಲಿ ಹೆಚ್ಚು ಮಹತ್ವವಾದವು. ಕಾವ್ಯ ರಚನಾಶಿಲ್ಪದ ದೃಷ್ಟಿಯಿಂದ ಸಂಪ್ರದಾಯವು ಅವರ ಮೇಲೆ ಬೀರಿರುವ ಪ್ರಭಾವವು ಸೀಮಿತ.

ಈ ಕವಿಯ ಕಾವ್ಯ ಮತ್ತು ಇತರ ಸಾಹಿತ್ಯ ಕೃತಿಗಳ ಇನ್ನೂ ವಿವರವಾದ ಅಧ್ಯಯನವು, ಸಂಪ್ರದಾಯ ಮತ್ತು ವ್ಯಕ್ತಿಯ ನಡುವಿನ ಸಂಬಂಧದ ಸೂಕ್ಷ್ಮಗಳ ಮೇಲೆ ಇನ್ನೂ ಸ್ಪಷ್ಟವಾದ ಬೆಳಕನ್ನು ಚೆಲ್ಲಬಹುದು.

## ಆರ್. ರಾಜಪ್ಪ

# ಪ್ರಕೃತಿ

೧

ಮಾನವಚೇತನಕ್ಕೂ ಪ್ರಕೃತಿಗೂ ಅವಿನಾಭಾವಸಂಬಂಧವಿದೆ. ಈ ಎರಡೂ ಸೃಷ್ಟಿ ಶಕ್ತಿಯ ಬೇರೆ ಬೇರೆ ಮುಖಗಳು. ಮಾನವಚೇತನ ವಿಕಾಸಕ್ಕೆ ಪ್ರಕೃತಿ ಅವಶ್ಯಕ. ದ್ರಷ್ಟಾರ ಪ್ರಕೃತಿಯಲ್ಲಿ ದೈವಲೀಲೆಯನ್ನು ಕಾಣುತ್ತಾನೆ. ಭಾವನಾವೇಶಿಯಾದ ಕವಿ ತನ್ನ ಭಾವಾಭಿವ್ಯಕ್ತಿಗೆ ಪೂರಕವಾಗುವಂತೆ ಪ್ರಕೃತಿಯನ್ನು ವಸ್ತುವಾಗಿಸಿ ಕೊಳ್ಳುತ್ತಾನೆ. ರಮಣೀಯ ಹಾಗೂ ಭಯಂಕರವಾದ ವಸ್ತು, ಸನ್ನಿವೇಶಗಳು, ಪ್ರಕೃತಿಯಲ್ಲಿ ಸಹಜವಾಗಿ ಇವೆ. ಮನೋಜ್ಞವೆನಿಸುವ ಕೋಗಿಲೆಯಿಂಚರ, ಮಳೆಬಿಲ್ಲು, ಮಂಜುಳ ನಿನಾದದಿಂದ ಕೂಡಿ ಹರಿಯುವ ನದಿ, ನದೀಪ್ರದೇಶ, ಹಕ್ಕಿಗಳಿಂಚರ, ದುಂಬಗಳ ಮೊರೆತ, ವಸಂತಮಾಸದಲ್ಲಿ ಚಿಗಿತ, ಹೂತ, ತರುಲತಾದಿಗಳನ್ನು ಎಷ್ಟು ಆಸಕ್ತಿಯಿಂದ ವೀಕ್ಷಿಸಿ ತನ್ನ ಕಾವ್ಯದಲ್ಲಿ ಹೇಗೆ ಬಳಸುವನೋ ಹಾಗೆಯೇ, ಅದೇ ಆಸಕ್ತಿಯಿಂದ, ಬಿರುಮಳೆ, ಬಿರುಗಾಳಿ, ಗುಡುಗು, ಸಿಡಿಲು, ಭಯಂಕರವೆನಿಸುವ ಇರುಳು, ಹುಲಿ, ಕರಡಿ ಸಿಂಹಾದಿಗಳ ಆರ್ಭಟಗಳನ್ನೂ ತನ್ನ ಕಾವ್ಯದ ವಸ್ತುವಾಗಿಸಿಕೊಳ್ಳುತ್ತಾನೆ. ಹೀಗೆ ಕವಿ ಪ್ರಕೃತಿಯ ಆರಾಧಕನಾಗುತ್ತಾನೆ.

ಕಾವ್ಯಕ್ಕೆ ವಸ್ತು ಬಳಕೆಯಲ್ಲಿ ಮಡಿವಂತಿಕೆ ಇರಬಾರದು ಎಂದು ಪಾಶ್ಚಾತ್ಯ ರೊಮ್ಯಾಂಟಿಕ್ ಕವಿಗಳು ಸಾರಿದರು. ಅವರಲ್ಲಿ ವರ್ಡ್ಸ್‌ವರ್ತ್ ಪ್ರಕೃತಿ ಪೂಜಾರಿ ಎಂಬ ಕೀರ್ತಿಯನ್ನು ಗಳಿಸಿದ. ರೊಮ್ಯಾಂಟಿಕ್ ಕವಿಗಳಿಗೆ ಪ್ರಕೃತಿಯಲ್ಲಿ ಪ್ರತಿಯೊಂದು ವಸ್ತುವೂ ಕಾವ್ಯವಸ್ತುವಾಯಿತು. ಡಾಫೊಡೈಲ್ಸ್, ಮೋಡಗಳು, ಕೋಗಿಲೆ, ಮರಗಿಡ, ಮೊದಲಾದವು ಕಾವ್ಯವಸ್ತುವಾದುವು. ಹೀಗೆ ಕವಿ–ಯಾವುದೇ ಭಾಷೆ, ಸಾಹಿತ್ಯಕ್ಕೆ ಸೇರಿದವನಾಗಿದ್ದರೂ—ಪ್ರಕೃತಿಯ ಮರೆಹೊಗುವುದು ಸಹಜವಾದುದು.

ನಮ್ಮ ಹಿಂದಿನ ಕವಿಗಳು ಸಂಪ್ರದಾಯ ರೀತ್ಯಾ ಪ್ರಕೃತಿಯನ್ನು ಕಾವ್ಯದಲ್ಲಿ ಬಳಸಿದರು, ಅದು ಕಾವ್ಯಾಂಗ ಎನ್ನುವಷ್ಟರ ಮಟ್ಟಿಗೆ. ಅಷ್ಟಾದಶವರ್ಣನೆಗಳಲ್ಲಿ, ವಸಂತಋತು, ಗ್ರೀಷ್ಮ, ವರ್ಷ, ಶಿಶಿರ, ಹೇಮಂತ, ಶರದ್ ಋತುಗಳನ್ನೂ, ಸೂರ್ಯೋದಯ, ಸೂರ್ಯಾಸ್ತ, ಚಂದ್ರೋದಯ, ಚಂದ್ರಾಸ್ತ, ಸಾಗರ, ನದಿ–ನದ, ಮರಗಿಡ ಬಳ್ಳಿ, ಬೆಟ್ಟಗುಡ್ಡ, ಕಾಡು, ಪಶುಪಕ್ಷಿ, ಪ್ರಾಣಿಗಳನ್ನು ಬಳಸಿದರು. ಪ್ರಕೃತಿ ಜಡ

ವಲ್ಲ. ಅದು ಚೇತನಾತ್ಮಕ ಎಂಬ ಅಂಶವನ್ನು ಕಾಳಿದಾಸನೇ ಮೊದಲಾದ ಸಂಸ್ಕೃತ ಕವಿಗಳೂ ಲಕ್ಷ್ಮೀಶ ಮೊದಲಾದ ಕನ್ನಡ ಕವಿಗಳೂ ವ್ಯಕ್ತಗೊಳಿಸಿದ್ದಾರೆ. ಅಂದರೆ ಪ್ರಕೃತಿ ಮಾನವ ಜೀವನದಲ್ಲಿ ಹಾಸುಹೊಕ್ಕಾಗಿ ಬಳಕೆಯಾಗಿದೆ ಎಂಬಂಶವನ್ನು ವ್ಯಕ್ತಗೊಳಿಸಲಾಗಿದೆ. ಕೆಲವೊಮ್ಮೆ ತಮ್ಮ ಕಾವ್ಯಕ್ಕೆ ರಮಣೀಯತೆಯನ್ನು ತರಲು ಪ್ರಕೃತಿಯನ್ನು ಬಳಸಿರುವುದುಂಟು. ಹೀಗೆ ಕಾವ್ಯಪ್ರಪಂಚದಲ್ಲಿ ಪ್ರಕೃತಿ ಪ್ರಮುಖ ಪಾತ್ರವಹಿಸುತ್ತದೆ.

ಪ್ರಕೃತಿಯಲ್ಲಿ ಕಂಡುಬರುವ ವೈವಿಧ್ಯಮಯವಾದ ಸುಂದರ ದೃಶ್ಯಗಳು ಕವಿಯ ಕಣ್ಣಿಗೆ ಮಹತ್ತಾಗಿ ಕಾಣಿಸುತ್ತವೆ. ತನಗೆ ಆಯಾಸವಾದಾಗ ಆ ಮಧುರವಾದ ಅನುಭವಗಳು ತೇಲಿಬಂದು ಮನಸ್ಸಿಗೆ ಆಹ್ಲಾದವನ್ನುಂಟುಮಾಡುತ್ತವೆ. ತನ್ನ ಪವಿತ್ರ ಚೇತಸಕ್ಕೆ ಅವು ಅವತರಿಸಿ, ಅಪೂರ್ವ ಶಾಂತಿಯನ್ನು ತಂದುಕೊಡುತ್ತವೆ. ಅವುಗಳಿಗೆ ಕವಿ ಕೃತಜ್ಞತೆಯನ್ನು ಸೂಚಿಸುತ್ತಾನೆ. ಆಗ ಅವನಿಗೆ 'ಪ್ರಕೃತಿಯಾರಾಧನೆ ಪರಮನಾರಾಧನೆ'ಯಾಗುತ್ತದೆ. ಪ್ರಕೃತಿ ಭೌಗೋಳಿಕ ವಸ್ತುವಾಗದೆ ಭಗವಂತನ ಆವಿರ್ಭೂತಿಯಾಗುತ್ತದೆ. ಈ ಸೌಂದರ್ಯಾಸ್ವಾದನೆಯೇ ತನ್ನ ಜೀವಿತದ ಸಾಧನೆ ಎಂಬ ತೃಪ್ತಿ ಕವಿಗಾಗುತ್ತದೆ. ಪ್ರಕೃತಿಯ ಬಗೆಗೆ ಪ್ರೇಮವನ್ನು ತೋರಿಸುವುದು ಒಂದು ಬಗೆಯಾದರೆ, ಪ್ರಕೃತಿಯೂ ನಮ್ಮ ಬಗೆಗೆ ಅಂತಹ ಪ್ರೇಮವನ್ನು ತೋರಿಸುತ್ತದೆ ಎಂದು ಅನುಭವಿಸುವುದು ಇನ್ನೊಂದು ಬಗೆ. ಈ ಎರಡನ್ನೂ ಅರಿತ ಕವಿ ಪ್ರಕೃತಿ ತನಗೆ ನೀಡಿದ ಸೊಗವನ್ನೇ ಎಲ್ಲರಿಗೂ ನೀಡಲಿ ಎಂದು ಬಯಸುತ್ತಾನೆ. ಪ್ರಕೃತಿಯಲ್ಲಿ ತಾನು ಕಂಡುಂಡ–ಆನಂದ, ವಿಷಾದ–ಅನುಭವವನ್ನು ಸಹೃದಯನಿಗೆ ನಿವೇದಿಸುವಾಗ ಕವಿ ತನ್ನನ್ನು ಕುರಿತು ಹೇಳುವುದು. ತನ್ನನ್ನೇ ಒಂದು ಪಾತ್ರವನ್ನಾಗಿ ಚಿತ್ರಿಸಿಕೊಳ್ಳುವುದೂ ಸಹಜ. ತನಗಾದ ಅನುಭವವನ್ನು ಅತ್ಯಂತ ಜಾಗರೂಕತೆಯಿಂದ ಮಂಡಿಸಲೆಳಸುತ್ತಾನೆ. ಹೀಗೆ ಕವಿಗೂ ಪ್ರಕೃತಿಗೂ ಅವಿನಾಭಾವ ಸಂಬಂಧ ಬೆಳೆಯುತ್ತದೆ.

೨

ಹೊಸಗನ್ನಡ ಕಾವ್ಯಪರಂಪರೆಯಲ್ಲಿ ಪಂಜೆ, ಬಿ.ಎಂ.ಶ್ರೀ, ಕುವೆಂಪು, ಬೇಂದ್ರೆ ಮೊದಲಾದವರ ಹೆಸರು ಕಂಡುಬರುತ್ತವೆ. ಇವರೆಲ್ಲಾ ಒಂದು ಕಟ್ಟುಪಾಡಿನಲ್ಲಿ ಕಾವ್ಯ ರಚನೆ ಮಾಡಿದರೇನೋ ಎಂಬ ಭ್ರಮೆ ಆ ಕವನಗಳನ್ನು ಓದಿದಾಗ ಉಂಟಾಗುವುದು ಸಹಜ. ಈ ಹಿರಿಯ ತಲೆಮಾರಿನ ನೆರಳಿನಲ್ಲಿಯೇ ಬೆಳೆದು ಪುಷ್ಟಿಗೊಂಡ ಕವಿಗಳ ಸಾಲಿನಲ್ಲಿ ತನ್ನದೇ ಆದ ಪ್ರಭಾವದಿಂದ ಬೆಳೆದ, ಬೆಳೆಯುತ್ತಿರುವ ಕವಿ ಡಾ|| ಜಿ. ಎಸ್. ಶಿವರುದ್ರಪ್ಪ. ಭಾವಗೀತೆಗಳನ್ನು ಬರೆಯುವಲ್ಲಿ ಇವರ ಮೇಲೆ ಕುವೆಂಪುರವರ ಪ್ರಭಾವ ವಿದೆ ಎನ್ನುತ್ತಾರೆ. ಅನೇಕ ಒಳ್ಳೆಯ ಪ್ರಭಾವಗಳಿಗೆ ಸಿಕ್ಕಿಬೀಳುವುದು ಆರೋಗ್ಯಕರ. ಆದರೆ ಆ ಪ್ರಭಾವದ ಸುಳಿಯಲ್ಲಿಯೇ ಸಿಕ್ಕಿ ತೊಳಲದೆ ತನ್ನ ತನವನ್ನು ಬೆಳೆಸಿಕೊಳ್ಳುವ ಕವಿಗಳು ಅತಿ ವಿರಳ. ಆದರೆ, ಡಾ|| ಜಿ.ಎಸ್.ಎಸ್ ಪ್ರಭಾವಲಯದಿಂದ ತಾವು ಬೆಳೆ

ಯಲು ಬೇಕಾಗುವಷ್ಟನ್ನು ಸ್ವೀಕರಿಸಿ.. ಬೃಹತ್ತಾಗಿ ಬೆಳೆದಿರುವ, ಬೆಳೆಯುತ್ತಿರುವ ಕವಿ. "ಪುರೋನ್ನತ ವೃಕ್ಷವೊಂದು ಅಂಬರದಲ್ಲಿ ಅರಳುವ ಮುನ್ನ ಭೂಮಿಯ ಮೇಲೆ ನಾಟಿ ನಿಲ್ಲಬೇಕು: ಹತ್ತಾರು ಕಡೆ ಬಿಳಲು ಬಿಡಬೇಕು; ನೂರಾರು ಕಡೆ ಬೇರುಗಳನ್ನು ಹರಡಿ ಆಹಾರವನ್ನು ಸಂಗ್ರಹಿಸಬೇಕು. ಶ್ರೀ ಶಿವರುದ್ರಪ್ಪನವರ ಕವಿಚೇತನ ಅಂತಹ ಪ್ರಗತಿ ಪಥದಲ್ಲಿ ಮುಂದುವರಿಯುತ್ತಿದೆ" ಎಂಬ ತ. ಸು. ಶಾಮರಾಯರ ಅಭಿಪ್ರಾಯದಲ್ಲಿ ಅತ್ಯುಕ್ತಿಯಿಲ್ಲ ಎಂಬುದು ಶ್ರೀ ಜಿ.ಎಸ್.ಎಸ್. ಅವರ ಕವನಗಳನ್ನು ಓದಿದಾಗ ಸ್ಪಷ್ಟವಾಗುತ್ತದೆ." ಯಾವ ಭಾಷೆ, ಯಾವ ಶೈಲಿ, ಯಾವ ಛಂದಸ್ಸು. ಯಾವ ಕಲ್ಪನಾ ವಿಲಾಸ, ಯಾವ ಪದಸಂಘಟನಾ ಅಪೂರ್ವತೆ—ಇವುಗಳನ್ನು ಬಹು ಕಷ್ಟದಿಂದ ಹಿರಿಯ ಕವಿಗಳು ತಮ್ಮ ಬದುಕಿನ ಮೂಸೆಯಲ್ಲಿ ಕಾಯಿಸಿ, ಎರಕ ಹೊಯ್ದರೋ ಆ ಪದ ಪುಂಜಾಯುಧ ಪಂಕ್ತಿ ಈಗಿನ ಕವಿ ಯೋಧರಿಗೆ ಸುಲಭ ಸರಬರಾಜಿನ ವಸ್ತುಗಳಾಗಿವೆ. ಹಾಗಾಗುವುದೂ ಸ್ವಾಭಾವಿಕವೇ. ಆದರೆ ಅವುಗಳ ಪ್ರಯೋಗದ ಔಚಿತ್ಯದಲ್ಲಿ ಯಾವ ಕವಿ ತನ್ನ ಸ್ವಂತ ಭಾವಪ್ರಕಾಶವನ್ನು ನಿಯಮಿಸಿಕೊಳ್ಳುತ್ತಾನೆಯೋ ಅವನು ಕೃತಕೃತ್ಯನಾಗುತ್ತಾನೆ. ಇಲ್ಲಿಯ ಕೆಲವು ಕವನಗಳಲ್ಲಾದರೂ ಅಂತಹ ಕೃತಕೃತ್ಯತೆಯನ್ನು ಸಹೃದಯರು ಅನುಭವಿಸದಿರಲಾರರೆಂದು ನಂಬುತ್ತೇನೆ" ಎಂದು ಕುವೆಂಪುರವರು ಸಾಮಗಾನದ ಮುನ್ನುಡಿಯಲ್ಲಿ ಹೇಳಿರುವ ಮಾತುಗಳಿಂದ ಶ್ರೀ ಶಿವರುದ್ರಪ್ಪನವರು ಸ್ವಂತಿಕೆಯನ್ನು ಬೆಳೆಸಿಕೊಳ್ಳುವ ಧೀಮಂತಗುಣವುಳ್ಳವರು ಎಂದು ತಿಳಿಯುತ್ತದೆ.

೩

'ಸಾಮಗಾನ', 'ಚೆಲುವು-ಒಲವು', 'ದೇವಶಿಲ್ಪ', 'ಸಂಜೆದಾರಿ', 'ಕಾರ್ತೀಕ', 'ತೀರ್ಥವಾಣಿ', 'ದೀಪದಹೆಜ್ಜೆ', 'ಅನಾವರಣ', 'ಗೋಡೆ' ಇವು ಡಾ|| ಜಿ.ಎಸ್.ಎಸ್. ಅವರ ಕವನ ಸಂಕಲನಗಳು. ಇಲ್ಲಿ ಕವಿ ತಾನು ಕಂಡುಂಡ ಅನುಭವಗಳನ್ನು ತೋಡಿಕೊಳ್ಳುತ್ತಾ ಊರ್ಧ್ವಗಾಮಿಯಾಗಬಯಸಿರುವುದು ವ್ಯಕ್ತವಾಗುತ್ತದೆ. ಬಿಳುವಲದ ಮಡಿಲಲ್ಲಿ ಹುಟ್ಟಿದ ಕವಿ ಸಿದ್ಧಗಂಗಾ, ಮೈಸೂರು, ಮೊದಲಾದೆಡೆಗಳಲ್ಲಿ ಬೆಳೆದು, ತಾನು ಕಂಡ ಪ್ರಕೃತಿ ಸೊಬಗನ್ನು ಪಳಗಿಸಿ, ಕಾವ್ಯಕ್ಕೆ ಛಟ್ಟೆ ಇಳಿಸಿದ್ದಾರೆ.

ಡಾ|| ಜಿ.ಎಸ್.ಎಸ್. ಸಂಪ್ರದಾಯಬದ್ಧ ರೀತಿಯಲ್ಲಿ ಪ್ರಕೃತಿಯನ್ನು ಕಂಡಿಲ್ಲ ಎಂಬುದು ಅವರ ಕವನಗಳಲ್ಲಿ ನಾವು ಗಮನಿಸಬೇಕಾದ ಅಂಶ. ವರ್ಣನೆಗಾಗಿ ವರ್ಣನೆಯನ್ನು ತಂದು ತುರುಕುವ ಹವ್ಯಾಸವುಳ್ಳ ನಮ್ಮ-ಪ್ರಾಚೀನ ಕವಿಗಳು ಪ್ರಕೃತಿಯನ್ನು ಬಲವಂತವಾಗಿ ಎಳೆದು ತಂದು ಕಾವ್ಯದಲ್ಲಿ ತುರುಕಿರುವುದುಂಟು. ಆದರೆ ಇಲ್ಲಿ ಹಾಗಲ್ಲ. ಪ್ರಕೃತಿಯಲ್ಲಿ ಪ್ರತಿವಸ್ತುವನ್ನು ಕಂಡಾಗ ಮನಸ್ಸಿನ ಸಹಜಸ್ಥಿತಿಯಿಂದ ಹೊಮ್ಮಿದ ಅನಿಸಿಕೆಗಳು ಮಾತ್ರ ಇವರ ಕವನಗಳಲ್ಲಿವೆ. ಮನಸ್ಸಿನಂತೆ ಪ್ರಕೃತಿ. ಪ್ರಕೃತಿಯಂತೆ ಮನಸ್ಸು ಎಂಬಂತೆ ತನ್ನ ಕಣ್ಣೆದುರು ಕಂಡ ಪ್ರಕೃತಿಯನ್ನು ಕಂಡಂತೆ ಕಂಡರಿಸಿದ್ದಾರೆ. ಆಡಂಬರವಿಲ್ಲ. ಕ್ಲಿಷ್ಟತೆಯಿಲ್ಲ. ಭಾಷೆಯ ಬಿನ್ನಾಣವಿಲ್ಲ. ಎಲ್ಲ ಸಹಜ, ಸರಳ, ಸುಂದರ.

೪

ಪ್ರಕೃತಿಯನ್ನು ಆರಾಧಿಸುವ ಮನೋಭಾವ ಈ ಕವಿಗೆ ಇದೆ. ಅದಕ್ಕೆಂದೇ—

"ಪ್ರಕೃತಿ ಪೂಜೆಗೆ ಬನ್ನಿರೆಲ್ಲರು
ಪ್ರಕೃತಿ ಪೂಜೆಗೆ ಬನ್ನಿರಿ,
ಕಣ್ಣು ಹೃದಯಗಳೆಂಬ ಎರಡನು
ಮಾತ್ರ ಇಲ್ಲಿಗೆ ತನ್ನಿರಿ!"

ಎಂದು ಎಲ್ಲರನ್ನು ಆಹ್ವಾನಿಸುತ್ತಾರೆ. ಆಹ್ವಾನದೊಂದಿಗೆ ಕಣ್ಣು-ಹೃದಯಗಳೆರಡನ್ನು ಮಾತ್ರ ತರಬೇಕೆಂಬ ಎಚ್ಚರಿಕೆಯೂ ಇದೆ. ಏಕೆ ಈ ಪೂಜೆ ಎಂದರೆ ಈ ಪ್ರಕೃತಿ ಸಗ್ಗದೊಲವಾಗಿ ಈ ಬುವಿಗೆ ದಿನದಿನವೂ ಇಳಿಯುತ್ತದೆಯಂತೆ. ಆದುದರಿಂದ ಮಣ್ಣಿನ ಗಡಿಬಿಡಿಯನ್ನು ಬಿಟ್ಟು, ಭವ್ಯವಾದ ಪ್ರಕೃತಿಪೂಜೆ ಮಾಡಬೇಕು. ಅವೆಲ್ಲ ಸರಿಯೆ. ಈ ಪೂಜೆಯಿಂದ ಪ್ರಯೋಜನವೇನು? ಪ್ರಕೃತಿ ಅಮೃತಸೇಚನವಾಗುವುದು. ಪ್ರಕೃತಿ ಮಾತೆಯ ಸ್ತನ್ಯಪಾನದಿಂದ ನಮ್ಮ ಚೇತನ ಪುಷ್ಟಿಗೊಳ್ಳುವುದು ಎಂಬೆಲ್ಲ ಭಾವಗಳನ್ನು ಕವಿ ಇಲ್ಲಿ ತಂದಿದ್ದಾರೆ.

ಪ್ರಕೃತಿ ಕವಿಯ ಬಳಿಗೆ ಬಿಡುಗಡೆಯನ್ನು ಬಯಸಿ ಇಳಿದು ಬರುತ್ತದೆ. ಅದು ಕವಿಯ ಬಿಡುಗಡೆಯೂ ಹೌದು. ಆದುದರಿಂದ—

"ವ್ಯೋಮಕೇಶನಿಂದ ಗಂಗೆ
ಭಗೀರಥನ ಹತ್ತಿರ
ಇಳಿದುಬಂದ ಹಾಗೆ ಪ್ರಕೃತಿ
ಬಂತು ಕವಿಯ ಹತ್ತಿರ"

ಈ ಪ್ರಕೃತಿ ಹೇಗೆ ಬಂದಿತೆಂದರೆ—

"ಮಿಂಚಿನಲ್ಲಿ ನಗೆಯ ಬೀರಿ
ಗುಡುಗಿನಲ್ಲಿ ದನಿಯ ತೋರಿ
ಮಳೆಯ ನೂಲಿನೇಣಿಯಿಂದ
ತಿರೆಯ ಎದೆಗೆ ಇಳಿಯಿತು.
ನೆಲದೊಳಿಳಿದ ಮುಗಿಲ ಮನಸು
ಹಸುರಿನಲ್ಲಿ ಹೊಮ್ಮಿತು."

ಆದರೆ ಪ್ರಕೃತಿಗೆ ತೃಪ್ತಿಯಿಲ್ಲ. ಮತ್ತೂ ಅಭಿವ್ಯಕ್ತಗೊಳ್ಳುವಾಸೆ. ಅದಕೆ ತಪತಪದ ಫಲವೆಂಬಂತೆ ಸಿಕ್ಕಿದ ಕವಿ ಇದಕ್ಕೆ. ಆಗ—

"ಇಳಿದು ಬಂತು ಪ್ರಕೃತಿಯ ಕೃಪೆ
ಮನುಜನೆದೆಯ ಗುಡಿಯೆಡೆ!
ನನ್ನ ನೀ ವ್ಯಕ್ತಗೊಳಿಸಿ
ನೀಡು ನನಗೆ ಬಿಡುಗಡೆ."

ಲಗ ಪ್ರಕೃತಿಯೊಂದಿಗಿನ ಒಡನಾಟದ ಸಾಧನೆ ಸಫಲವಾಯಿತು. ಹಾಗೆಯೇ ಕವಿದೃಷ್ಟಿಯ ಸೌಂದರ್ಯಾರಾಧನೆಯೂ ಸಫಲವಾಯಿತು. ಹೀಗೆ ಪ್ರಕೃತಿಯ ಬಗೆಗೆ ಪೂಜ್ಯಭಾವವನ್ನು ತಳೆದ ಕವಿ ಅಲ್ಲಿ ಕಂಡುಬರುವ ಅಂಶಗಳ ಬಗೆಗೆ ತಮ್ಮ ಚಿಂತನೆಯನ್ನು ಹರಿಸಿದ್ದಾರೆ.

ಬೆಳಗಿನ ಸನ್ನಿವೇಶವನ್ನು ಸರಳ ಹಾಗೂ ನೂತನವಾದ ರೀತಿಯಲ್ಲಿ ಸೂಚಿಸುವರು

"ಬೀಸಿದೆ ತಂಗಾಳಿ
ಮಧುಗೀತವ ಹೇಳಿ
ಹೂ ಹೂವಿಗೆ ಹಾರಿರೆ ಭ್ರಮರಾಳಿ.
ಬೆಳಗಾಯಿತು ಬಾನ್
ಬೆಳಗಾದುದು ಬುವಿ
ನಿಶ್ಚಲವಾಗಿದೆ ಮುಗಿಲೋಳಿ"

ಈ ಸಾಲುಗಳು ಓದುಗರ ಮನಸ್ಸನ್ನು ಆಕರ್ಷಿಸಿ ಕವಿಯ ಬಗೆಗೆ ಆಶೆಯನ್ನು ತಳೆಯುವಂತೆ ಮಾಡುತ್ತವೆ. ಬಿಸಿಲನ್ನೂ ಬಿಸಿಲ ಕಿರಣಗಳನ್ನೂ ಕವಿ ಕಂಡಿರುವ ರೀತಿ ವಿನೂತನವಾದುದು. ಬಿಸಿಲಕಿರಣ–'ಮರ್ತ್ಯದ ಮಕ್ಕಳ ಮರ್ತ್ಯಕೆ ಏರಲು ಭೂಮಿಗೆ ಬಿದ್ದ' ಏಣಿಯಾಗಿ ಒಮ್ಮೆ ಕಂಡರೆ 'ಮರ್ತ್ಯದ ಮನೆಗೆ ಅಮರ್ತ್ಯದ ಹಾಲ್ ಇಳಿದಂತೆ' ಇನ್ನೊಮ್ಮೆ ಕಂಡುಬರುತ್ತದೆ. ಬಿಸಿಲು–'ಬತ್ತದ ಪೈರಿನ ಹಸುರಿನ ಕಿವಿಯಲಿ, ಉಪದೇಶ ಮಾಡುವಂತೆ' 'ಕೆರೆ ನೀರಿನ ಅಲೆಯಲೆಗಳ ಮೇಲೆ', ಶಿಶು ಆಡುವಂತೆ ಕಂಡುಬರುತ್ತದೆ.

'ಸಾಮಗಾನ'ದಲ್ಲಿ 'ಬಯಲ'ನ್ನು ಕುರಿತಾದ ಸುಂದರ ಕವನವಿದೆ—

"ಸುತ್ತಮುತ್ತ ನೋಡಿದತ್ತ
ಬರಿಯ ಬಯಲು ಹರಹಿದೆ
ಬಾನ ಕರೆಗೆ ಹರಿದಿದೆ,
......................
ಕಣ್ಣದಿಟ್ಟಿ ಹರಿಯುವತ್ತ
ಬಟ್ಟಬಯಲೆ ಮಲಗಿದೆ
ಬಾನನಪ್ಪಿ ಹಿಡಿದಿದೆ."

ಎಂದು ಬಯಲನ್ನು ಕಂಡು ಸೋಜಿಗಪಡುವ ಕವಿಯ ಭಾವನೆ ನಿಜಕ್ಕೂ ವಿಚಿತ್ರವೇ. ಬಯಲನ್ನು ಕಂಡ ಕವಿಯ ಹಾಗೆ ಚಿಕ್ಕಿಗಳೂ ಮುಗುಳುನಗೆಯ ಬೀರುತ್ತಿವೆ. ಇಲ್ಲಿ ಕವಿ ಎರಡು ಬಯಲನ್ನು ಕಂಡಿದ್ದಾರೆ. ಮೇಲೆ ಬಾನು–ಬಯಲು; ಕೆಳಗೆ ನೆಲ-ಬಯಲು. ಈ ಎರಡು ಬಯಲುಗಳ ನಡುವೆ ಬೆಟ್ಟ ಬೆಳೆದಿದೆ. ಇರುಳು ತೆರೆಯ ಕಟ್ಟಿದೆ. ಈ ಎರಡು ಬಯಲುಗಳ ಸಂಗಮವನ್ನು ಕಂಡು ಕವಿಯ ಜೀವ ಕರಗಿ ಬಟ್ಟಬಯಲೆ ಆಗಿದೆ! ಸಾಮಾನ್ಯ, ನೀರಸ ಎನಿಸಿಕೊಳ್ಳುವುದರಲ್ಲಿಯೂ ಚೆಲುವನ್ನು ಕಾಣುವ ಈ ಗುಣ ವಿನೂತನವಾದುದು.

ಹೂವುಗಳನ್ನು ಕಂಡು ಕವಿಯ ಮನ ನಾನಾ ರೀತಿಯಾಗಿ ಮಿಡಿದಿದೆ. 'ಮಲ್ಲಿಗೆ'ಯನ್ನು ಕಂಡು ಕವಿ—

'ನೋಡು ಇದೊ ಇಲ್ಲರಳಿ ನಗುತಿದೆ
ಏಳು ಸುತ್ತಿನ ಮಲ್ಲಿಗೆ'

ಎಂದು ನಮ್ಮ ಮನಸ್ಸನ್ನು ಆ ಸೌಂದರ್ಯದೆಡೆಗೆ ಎಳೆಯುತ್ತಾರೆ. ಅರಳಿ ನಿಂತಿರುವ ಮಲ್ಲಿಗೆ, ನಗುತ್ತಿರುವ ಕ್ರಮವೇ ನಮ್ಮ ಮನಸ್ಸನ್ನು ತುಂಬುತ್ತದೆ. ಈ ಚರಣ ನಮ್ಮ ಮನಸ್ಸನ್ನು ಹಿಡಿದು ನಿಲ್ಲಿಸುತ್ತದೆ. ಮುಂದೆ—

'ಇಷ್ಟು ಹಚ್ಚನೆ ಹಸುರು ಗಿಡದಿಂ-
ದೆಂತು ಮೂಡಿತೊ ಬೆಳ್ಳಗೆ'

ಎಂಬ ಸಾಲುಗಳು ಪರಮಾಶ್ಚರ್ಯವನ್ನುಂಟುಮಾಡುತ್ತವೆ. ಸೃಷ್ಟಿಸೌಂದರ್ಯದ ಪ್ರಕೃತಿ ರಹಸ್ಯದ ಮೂಲವನ್ನು ಕುರಿತ ಈ ಪ್ರಶ್ನೆ ನಮ್ಮನ್ನು ಆಶ್ಚರ್ಯ ಪಡುವಂತೆ ಮಾಡುತ್ತವೆ. ಈ ಸಹಜ ಕುತೂಹಲಿಕಭಾವನೇ ಕವನವನ್ನು ಶಾಶ್ವತಗೊಳಿಸಿದೆ.

"ಮೇಲೆ ನಭದಲಿ ನೂರು ತಾರೆಗ-
ಳರಳಿ ಮಿರುಗುವ ಮುನ್ನವೆ
ಬೆಳ್ಳಿಯೊಂದೆ ಬೆಳಗುವಂದದಿ
ಗಿಡದೊಳೊಂದೆ"

ಆಗಿ ಈ ಹೂವು ಅರಳಿದೆ. ಹೇಗೆಂದರೆ 'ಸತ್ವಶೀಲನ ಧ್ಯಾನಶೀಲವೆ ಅರಳಿಬಂದೊಲು.' ಕವಿಯ ಮನದೊಳಗಿನ ಕಲ್ಪನೆ ಅರಳಿ ಬರುವಂತೆ. ತನ್ನನ್ನು ತಿಳಿಯದೆ ಮೊಗ್ಗಿನಲಿ ಮಲಗಿದ್ದ ಚೆಲುವು ಈಗ ಅರಳಿ ನಿಂತಿದೆ. ಇದರ ದಳಗಳು ಹಸುಳೆ ಕಾಣುವ ಕನಸಿನಂತೆ. ಮಹಾತ್ಮರ ಮನದಂತೆ ಇದರ ಕಂಪು. ಚೆಲುವು ಬಾಳನು ಹಸನುಗೊಳಿಸುವ ಅಚ್ಚರಿಯ ಪರಿ ಈ ಹೂವು. ಹೀಗೆ ಮಲ್ಲಿಗೆಯನ್ನು ಕಂಡ ಕವಿ ಮನಸ್ಸು ತನಗೆ ತಾನೆ ಪುಟಿದು ನಿಂತಿದೆ. ಪು.ತಿ.ನ. ಅವರು ಈ ಕವನದ ಮೊದಲ ನಾಲ್ಕು ಸಾಲುಗಳ ಬಗೆಗೆ ಹೇಳುತ್ತಾ "ಈ ಕವನದಲ್ಲಿ ಬೇರೆ ಪದ್ಯಗಳಿಲ್ಲದೆ ಇದೊಂದೆ ಇದ್ದರೂ, ಈ ನಾಲ್ಕು ಸಾಲುಗಳು ನಮ್ಮ ಮನಸ್ಸನ್ನು ತಡೆದಿಡುವ ಸಾಮರ್ಥ್ಯಕ್ಕೆ ಕುಂದು ಬರುತ್ತಿರಲಿಲ್ಲ" ಎಂದೂ "ಮುಕ್ತಕದಂತಹ ಮಾತು" ಎಂದೂ ಹೇಳಿದ್ದಾರೆ.

ಎಂದೆದಿಂಗೂ ಈ ಹೂವಿನ ಚೆಲುವೇ ಶಾಶ್ವತ ಎಂಬ ಭಾವನೆ ಕೆಲವು ಕಾಲದ ನಂತರ ಬರೆದ 'ಗೆಲವು' ಕವನದಲ್ಲಿ ಮೂಡಿದೆ.

"ಮೊಗ್ಗಿನೆದೆಯ ಗರ್ಭಗುಡಿಯ
ಅತಿನಿಗೂಢ ಗಹನದಲ್ಲಿ
ಚೆಲುವು ಶಿಲ್ಪ ಕೆತ್ತುತ್ತಿರಲು
ಬಾನ ಕಮಂಡಲುವಿನಿಂದ
'ಓಂ ಸ್ವಸ್ತಿ' ತುಳುಕಲು-

ಅರಳಿ ನಿಂತ ಹೂವೆಂದಿತು:
ಚೆಲುವೊಂದೇ ಗೆಲುವುದು !"

ಎಂದು ಚೆಲುವಿನ ಶಾಶ್ವತ ಅಂಶವನ್ನು ಹೇಳಿದ್ದಾರೆ. 'ಮಲ್ಲಿಗೆ' ಕವನದ ಕೊನೆಯಲ್ಲಿ ಬರುವ—

"ಹರಿವ ಮನವನು ಹಿಡಿದು ಬಂದೆಡೆ
ನಿಲಿಸಿ ತೋಳೆದಿದೆ ಹೂವಿದು.
ಚೆಲುವು ಬಾಳನು ಹಸನುಗೊಳಿಸುವ
ಅಚ್ಚರಿಯ ಪರಿ ಎಂಥದು !"

ಎಂಬ ಸಾಲುಗಳಲ್ಲಿ ಪ್ರಕೃತಿಸೌಂದರ್ಯ ನಡಸುವ ಶಾಶ್ವತ ಕಾರ್ಯವನ್ನು ಹೇಳಿದ್ದಾರೆ. ಸುಂದರವಾದ ಹೂವುಗಳನ್ನು ತಳೆದು ಮೌನವಾಂತಿರುವ ಹೂಬಳ್ಳಿಯ ಚೆಲುವನ್ನು ಕಂಡು ವಿಸ್ಮಯ ವ್ಯಕ್ತಮಾಡಿ, ಚೆಲುವಿಗೆ ಚೆಲುವೆನ್ನಬೇಕು. ಅದಕ್ಕೆ ಬೇರೆ ಹೆಸರು ಊನ ಎಂದು ಸೂಚಿಸಿದ್ದಾರೆ. ಹೂವನ್ನು ಕುರಿತಾದ ಇನ್ನೊಂದು ಸುಂದರ ವರ್ಣನೆ ಇದೆ. ಅದು ದೇವಗಣಿಗಿಲೆಯನ್ನು ಕುರಿತದ್ದು.

'ಬೆಟ್ಟಬಂಡೆಯ ಮೇಲೆ ಕಲ್ಲೆಮರವಾದಂತೆ"

ಮುಗಿಲಿಗೆ ಹೂವಿನಾರತಿಯನೆತ್ತುವ ದೇವಗಣಿಗಿಲೆ ನಿಜಕ್ಕೂ ಚೆಲುವಾದುದು. ಕಲ್ಲು ಬಂಡೆಯೊಳು ಬೇರೂರಿ ರಸವ ಹೀರಿ ಈ ಹೂವನರಳಿಸಿದ ಆ ಮರದ ಕೋಡಿನಲ್ಲಿ ಬಂಡೆಯೆ ಹೂವಾಗಿ ಅರಳಿದಂತಹ ವಿಸ್ಮಯವನ್ನು ಕವಿ ಕಂಡಿದ್ದಾರೆ.

ದೀಪದ ಹೆಜ್ಜೆ ಕವನ ಸಂಕಲನದಲ್ಲಿ ಬರುವ 'ಹೂವುಗಳ ನಿಟ್ಟುಸಿರು' ಕವನದಲ್ಲಿ ಅವಿವಾಹಿತ ತರುಣಿಯರ ಮನಸ್ಸನ್ನು ಸಂಕೇತಿಸಲು ಹೂವನ್ನು ಬಳಸಿದ್ದಾರೆ.

ಹೂವಿನ ಜೀವನ ಸಂತೋಷಮಯವಾದುದು. ಬಡಿದಾಟ, ನರಳಾಟ, ನೋವು ತುಂಬಿರುವ ಬಾಳಿನಲ್ಲಿ ಸಂತೋಷದಿಂದ ಕೂಡಿರುವ ಸುಮವೆ ತಮಗೆ ಸಾಕು ಎಂದಿದ್ದಾರೆ. ಏಕೆಂದರೆ 'ಸಂತೋಷವೆ ಸುಮಜೀವನ.' ಹೂವಿನ ಬಾಳು ಕ್ಷಣಿಕ ಆದರೂ ಇರುವಷ್ಟು ಕಾಲದಲ್ಲೇ ತನ್ನ ಇರುವಿಕೆಯನ್ನು ಶಾಶ್ವತಗೊಳಿಸುವ ಹೂವಿನ ಗುಣವನ್ನು ಹಾಡಿ ತೋರಿಸಿದ್ದಾರೆ. ಹೂವನ್ನು ಮನುಷ್ಯನ ಜೀವನದ ಸಂಕೇತವಾಗಿಸಿರುವುದು ಮನೋಜ್ಞವಾಗಿದೆ. ಬಾಳನ್ನು ತೋಟ ಎಂದೂ, ಅದರಲ್ಲಿ ನಾನಾ ಜಾತಿಯ, ನಾನಾ ವರ್ಣದ, ಕಂಪಿರುವ, ಕಂಪಿಲ್ಲದ, ಚೆಲುವಿರುವ, ಚೆಲುವಿಲ್ಲದ ನಾನಾ ಹೂವುಗಳಿಗೆ ಮನುಷ್ಯನನ್ನು ಹೋಲಿಸಿ; ತೋಟದೊಡೆಯನನ್ನು ಭಗವಂತನನ್ನಾಗಿಸಿದ್ದಾರೆ. ಇನ್ನೊಮ್ಮೆ ಮರದಿಂದ ಉದುರಿ ಹುಡಿಯಲ್ಲಿ ಹುಡಿಯಾಗುವ ಹೂವು ಇವರಿಗೆ ಇರುಳ ತಾರೆಯ ಕಿಡಿ ಇಳೆಗುರುಳಿ ಬಿದ್ದಂತೆ, ಶ್ರಾವಣದ ಬೆಳ್ಮುಗಿಲ ಕಿರಿದಾದ ತುಣುಕಂತೆ, ಶೈಶವದ ಮುಗ್ಧತೆಯೆ ಹೂವಾಗಿರುವಂತೆ ಕಂಡುಬರುತ್ತದೆ. ಈ ಹೂವು "ಅಳುತ ಸತ್ತರೆ ನರಕ, ನಗುತ ಸತ್ತರೆ ನಾಕ, ಅಳುವು ನಗು ಕೂಡಿದರೆ ಅದೆ, ಮರ್ತ್ಯಲೋಕ" ಎಂಬ ತತ್ವವನ್ನು ಒರೆವ ಸಿದ್ಧನಂತೆ ಕಳಕಳಿಸುವುದು; ಎಂಬ ಕಲ್ಪನೆ ನವೋನವ್ಯ.

ಹೂವನ್ನು ವರ್ಣಿಸುವ ಶೈಲಿಯಲ್ಲಿಯೇ ಸುಂಟರಗಾಳಿಯನ್ನೂ ವರ್ಣಿಸಬಲ್ಲರು ಈ ಕವಿ.

“ಮೈಯಿಲ್ಲದ, ರೂಹಿಲ್ಲದ ಗಾಳಿ,
ಭಾವವು ಮೈತಳೆದಂದದಿ
ಆಕಾರವ ತಾಳಿತು ಇಲ್ಲಿ”

ಎಂದು ಹೇಳುತ್ತಾ ಅದು ಆಕಾರವನ್ನು ತಳೆದ ರೀತಿಯನ್ನು ಸೊಗಸಾದ ಉಪಮೆಗಳಿಂದ ವಿವರಿಸಿದ್ದಾರೆ.

‘ತರಗೆಲೆ ಕಸಕಡ್ಡಿಯನೊಗ್ಗಡಿಸಿ
ಧೂಳಿನ ಗೋಪುರವೆತ್ತಿ
ಸರ್‍ರನೆ ಗಿರ್‍ರನೆ ತಿರುಗುತ
ಕಾಳಿಂಗನವೊಲು ಹೆಡೆಯೆತ್ತಿ’

ಆಡುವ ಈ ಬಿರುಗಾಳಿ ‘ಬಯಲಾಟ’ದ ರಾವಣನಂತೆ ತಕಥೈದಿತ್ಥೈ ಎಂದು ಕುಣಿಯುತ್ತದೆ. ಈ ಬಿರುಗಾಳಿಯಲ್ಲಿ ಎಲ್ಲೋ ಬಿದ್ದಿದ್ದ ಹೇಗೊ ಬಿದ್ದಿದ್ದ ತರಗೆಲೆಗಳು ಕಸಕಡ್ಡಿ ಚೂರುಗಳು “ಗಾಂಧೀಜಿಯ ವ್ಯಕ್ತಿತೆಯಲಿ ಮೇಲೆದ್ದಾ ಜನತೆಯೊಲು ಮೇಲೆದ್ದು ಕುಣಿದುವು ಮರುಳಿನ ತೆರ. ಸುಂಟರಗಾಳಿ ಎದ್ದಾಗ ಆಗುವುದೇ ಹೀಗೆ. ಆದರೆ ಈ ಪ್ರತಿಮೆಯ ಮೂಲಕ ಈ ಭಾವವನ್ನು ನೀಡಿ ಪ್ರತಿಮೆಯನ್ನು ವಾಚ್ಯವನ್ನಾಗಿಸಿದ್ದಾರೆ. ಇದು ಅನಾವಶ್ಯಕವಾಗಿತ್ತು.

ಸುಂಟರಗಾಳಿಯನ್ನು ಚಿತ್ರಿಸಿದ ಕವಿಭಾವ ಅಲೆಗಳನ್ನೂ ಸುಂದರವಾಗಿ ಚಿತ್ರಿಸುತ್ತದೆ.

‘ಆಹಾ ಕೆರೆಯ ತೆರೆಗಳೇ
ಮುಗಿಲ ಬಣ್ಣ ಮುತ್ತು ಕೊಡುವ
ಸುಣ್ಗದಪಿನ ಮರಿಗಳೇ’

ಎಂದು ಉದ್ಗಾರ ತೆಗೆದ ಕವಿಯ ಮನಸ್ಸು ‘ಸರಸಿ ಪಡೆದ ಮುಗುಳು ನಗೆಯ ಸುಳಿದಾಡುವ ಮಕ್ಕಳೇ’ ‘ಕೆರೆಯ ಮನಸು ದಡಕೆ ನುಡಿವ ತುಂಬೊಲವಿನ ನುಡಿಗಳೇ’ ಎಂದೂ ಅಲೆಗಳನ್ನು ಕರೆಯುತ್ತದೆ. ಬಾನು ಬಣ್ಣಬಳಿಯೆ ಕುಣಿವ ವಿವಿಧ ನೃತ್ಯಕಾರರಾಗಿಯೂ ಈ ಅಲೆಗಳು ಕಂಡುಬರುತ್ತವೆ. ಈ ಅಲೆಗಳು ಧನ್ಯ. ಏಕೆಂದರೆ ಬೆಳುದಿಂಗಳು ಬಂದು ಕುಣಿಯುತ್ತದೆ. ನಕ್ಷತ್ರ ನೋಡಿ ತಣಿಯುತ್ತದೆ. ಬೀಸುಗಾಳಿ ಹಾಡಿ ನಲಿಯುತ್ತದೆ. ಹೀಗೆ ರಸವ ತುಂಬಿದ ಬಾಳು ಧನ್ಯವಲ್ಲದೆ ವಿಫಲವಾಗುವುದೆ? ಎಂದಿದ್ದಾರೆ ಕವಿಗಳು.

ಸೂರ್ಯೋದಯವನ್ನು ಊರಾಚೆ, ಎತ್ತರದ ಸ್ಥಳದಲ್ಲಿ ಪ್ರಕೃತಿಯ ವಾತಾವರಣದಲ್ಲಿ ನಿಂತು ಕಾಣುವ ತವಕ ಸಾಮಾನ್ಯವಾಗಿ ಎಲ್ಲ ಕವಿಗಳಲ್ಲಿಯೂ ಇದೆ. ಆದರೆ ಈ ಕವಿಗೆ ಸೂರ್ಯೋದಯವನ್ನು ಊರ ನಡುವೆ ನಿಂತು ನೋಡುವ ತವಕ. ಆದುದರಿಂದಲೇ ನಗರ ಮಧ್ಯದಲ್ಲಿ ಹೇಗೆ ಬೆಳಗಾಯಿತೆಂದು ಈ ರೀತಿ ಹೇಳುತ್ತಾರೆ:

ಮನೆಯ ಬದಿಯಲಿ ಕರಿಯ ಹೆಬ್ಬಾವು ಮಲಗಿದೊಲು
ಮಲಗಿದ ಟಾರ್ ಬೀದಿಗೆಚ್ಚರವಾಯ್ತು ಮೊದಲು,
ಮೈಮೇಲೆ ಪೆಟ್ರೋಲು ಕಂಪಿನಾ ಹೊಗೆಯುಗುಳಿ
ಕಟುವಿಕಟರವಗೈದು ಓಡಿದಾ ಹಳೆಯ ಮೋ
ಟಾರು ಕಾರಿಂದ! ಗಸ್ತು ಹಾಕುತ ಬೀದಿಯಲಿ
ನಿಂತು ತೂಕಡಿಸೆ ಹೊಗೆ ಮಂಜಿನಾ ಭೂತ ಮೋ
ಹರ ಬೆದರಿ ಮೋಟಾರು ಕಾರಿನಾ ಧೂಮಕ್ಕೆ
ಮೈ ಮುದುರಿ ಓಡಿತ್ತು ಸಂದಿಗೊಂದಿಗಳೆಡೆಗೆ
ಹೋಟಲಿನ ಕಾಫಿಯ ಕಂಪು ಮನೆಯ ಕಿಟಕಿಯಲಿ
ಒಳನುಗ್ಗಿ, ರಗ್ಗಿನಲಿ ಹೆಗ್ಗನಸುಗಳನುಣುವ
ಸಗ್ಗಿಗರ ನೆಬ್ಬಿಸಿತು ರೇಡಿಯೋ ದನಿಯಲ್ಲಿ!
ಸೂರ್ಯೋದಯುವ ಕಂಡು ಪುಲಕಿಸಿತು ನಿಂದಿರುವ
ಹಿಮಗಿರಿ! ಮಲಗಿಯೆ ಇತ್ತಿನ್ನು ಮನುನಗರಿ!
ಕನಸುಗಳ ಚಿಂದಿಯಲಿ ತನ್ನ ಕೊಳೆ ಮೈ ಮುದುರಿ.

ಇಲ್ಲಿ ನಗರ ಮಧ್ಯದಲ್ಲಿ ಆಗುವ ಬೆಳಗು ಎಷ್ಟು ಕೃತಕ ಎಂಬುದನ್ನು 'ಹೋಟಲಿನ ಕಾಫಿಯ ಕಂಪು!' 'ರೇಡಿಯೋದನಿ' ಎಂಬ ಮಾತುಗಳಲ್ಲಿ ಸೂಚಿಸಿದ್ದಾರೆ. ಸೂರ್ಯೋದಯದೊಡನೆ ಮೊದಲು ಎಚ್ಚರವಾಗುವುದು ಕರಿಯ ಹೆಬ್ಬಾವಿನಂತೆ ಮಲಗಿರುವ ಟಾರ್ ಬೀದಿಗೆ. ಮನುನಗರಿಗಲ್ಲ. ಮೊದಲು ಕಿವಿಗೆ ಬೀಳುವುದು ಹಕ್ಕಿಗಳ ಕಲಕಲರವವಲ್ಲ. ರೇಡಿಯೋದನಿ. 'ರಗ್ಗಿನಲಿ ಹೆಗ್ಗನಸುಗಳನುಣುವ ಸಗ್ಗಿಗರು' 'ರೇಡಿಯೋದನಿ' 'ಹೋಟಲಿನ ಕಾಫಿಯ ಕಂಪು' ಅತ್ಯಂತ ಪರಿಣಾಮಕಾರಿ ಪ್ರಯೋಗಗಳಾಗಿವೆ. ಹೀಗೆ ಸೂರ್ಯೋದಯವನ್ನು ಊರ ಒಳಗೆ ನಿಂತು ಕಂಡ ಕವಿಗಳು ವಿರಳ. (ಬಹುಶಃ ಇವರೇ ಮೊದಲಿಗರು.) ಈ ರೀತಿ ನಗರ ಮಧ್ಯದಲ್ಲಿ ಸೂರ್ಯೋದಯವನ್ನು ಕಂಡ ಕವಿಗೆ ತೃಪ್ತಿಯಿಲ್ಲ. ಏಕೆಂದರೆ ಊರ ಹೊರಗೆ ಕಾಣುವ ಸೂರ್ಯೋದಯದ ರಮ್ಯತೆ ಇಲ್ಲಿಲ್ಲ. ಪ್ರಕೃತಿಗೆ ಪ್ರಕೃತಿ ಪಡಿನುಡಿಯುವಂತೆ ನಗರದ ಕೃತಕತೆ ನುಡಿಯಲಾರದು. ಆದ್ದರಿಂದ ಊರ ಹೊರಗೆ ನಿಂತು ಈ ಕವಿ ಬೆಳಗನ್ನು ಕುರಿತು—

'ಉದಯಗಿರಿ ಶಿವಕರುಣೆ ಮೋಡಗಳ ಕೊತ್ತಳಕೆ
ಮೊದಲ ಬೆಳಕಿನ ಚೆಲುವ ಧ್ವಜವ ನಟ್ಟು
ಗಿರಿಶಿರದ ಮರಮರದ ತಳಿರ ತುಟಿಯೊಳು ತನ್ನ
ಅನುರಾಗವಿಟ್ಟು
ಬರುತಿಹುದು ನೋಡದೋ ಕೊಳೆ ಚರಂಡಿಯ ಜಲಕು
ಬಂಗಾರಗಳ ಬದುಕು ದಾನಕೊಟ್ಟು'

ಮಂದಾನಿಲನ ಮೃದುಬೆರಳು, ಕಾತರದಿಂದ ಕಾಯುತ್ತಿರುವ ತರುಲತೆಯ ತಲೆನವಿರನ್ನು ತುಂಬುನಲ್ಮೆಯಿಂದ ನೇವರಿಸುವುದು ಮರಮರದ ಎದೆಯೂ ಭಾವಪೂರಿತ ಕವಿಯ ಮನಸಿನಂತೆ ಹಕ್ಕಿ ಚಿಲಿಪಿಲಿ ಧ್ವನಿಯಿಂದ ತುಂಬುವುದು. ಆಗ—

ನೂರು ಬೆಳಕಿನ ಹೆಜ್ಜೆ ಹಕ್ಕಿಗೊರಳಿನ ಗೆಜ್ಜೆ—
ಯನು ಕಾಲ್ಗೆ ಕಟ್ಟಿ
ಹೂಹೂವಿನಂಗಡಿಯ ಕಂಪು ಮಳಿಗೆಯ ತಟ್ಟಿ
ಸಂಚಾರ ಹೊರಟವೋ ಕೈಕೈಯೊಳು ಹಿಡಿದು
ಚೆಲುವುಗಳ ಬುಟ್ಟಿ !
ಹಕ್ಕಿದೋಣಿಯ ರೆಕ್ಕೆವುಟ್ಟಿನ ಸುಯ್ಲು
ಗಾಳಿ ಕೊಳದಲಿ ತೆರೆಯನೇಳಿಸಿರಲು,
ಹುಲ್ಲು ಹೂವಿನ ಕೊರಳು ಕೊರಳಿನ ಸುತ್ತ
ರತ್ನಕಂಠೀಹಾರ ರಾಜಿಸಿರಲು—

ನೇಸರಿನ ತೇರು ಏರಿಬರುವುದಂತೆ. ಹೀಗೆ ತೀರ ನವಿರಾದ, ತೀರ ಸೂಕ್ಷ್ಮವಾದ ಚಿತ್ರಗಳಿಂದ ಸೂರ್ಯೋದಯದ ವರ್ಣನೆ ಮಾಡಬಲ್ಲರು ಕವಿ. 'ಬೆಳಕಿನ ಹೆಜ್ಜೆ', 'ಹಕ್ಕಿಗೊರಳಿನ ಗೆಜ್ಜೆ' 'ಹಕ್ಕಿದೋಣಿ', 'ರೆಕ್ಕೆವುಟ್ಟಸುಯ್ಲು' ಈ ಮಾತುಗಳು ಕವನದ ಸೌಂದರ್ಯವನ್ನು ಹೆಚ್ಚಿಸುವುದಲ್ಲದೆ ಭಾವತೀವ್ರತೆಯನ್ನೂ ತಂದುಕೊಟ್ಟಿವೆ.

ಸೂರ್ಯೋದಯದೊಡನೆ ಜಗದ ವ್ಯಾಪಾರ ಹೇಗೆ ಪ್ರಾರಂಭವಾಗುವುದೆಂಬುದನ್ನು 'ಬಂತು ಬೆಳಕು' ಕವನದಲ್ಲಿ ಸೊಗಸಾಗಿ ಚಿತ್ರಿಸಿದ್ದಾರೆ. ಈ ಬೆಳಕು 'ಬಂಗಾರದ ನಗೆ' ಇದು ಬಂದೊಡನೆಯೆ, ಮರಮರದಲಿ ಹಕ್ಕಿಗೆಜ್ಜೆಗಿಲಕಿ, ಗಿರಣಿ, ಸಭೆ, ಹೀಗೆ ಎಲ್ಲಾ ಕಾರ್ಯಕಲಾಪಗಳಿಗೂ ಆರಂಭ. ಹೀಗೆ ದಿನದಿನವೂ ಬೆಳಗಾದರು, 'ಬಂತು ಬಿಡುಗಡೆ ಬಂತು ಬಿಡುಗಡೆ ಭುವನಕೆ. ಕಾಳರಾತ್ರಿಯು ಕರಗಿಹೋಯಿತು, ಬಂತು ಬೆಳಗಿನ ಚೆಲ್ವಿಕೆ' ಎಂದು ಹಕ್ಕಿ ಹಾಡಿದರೂ, ಒಳಗಡೆ ಇನ್ನೂ ಕತ್ತಲೆ. ಜಡತನ ಎಂದೂ ನಿಟ್ಟುಸಿರುಗರೆದಿದ್ದಾರೆ. ಬೆಳಗಾದಾಗ

"ಕಾಂಚನ ತೊರೆ
ಹರಿಯಿತು ನೆರೆ
ಮೂಡಣ ದಿಕ್ತಟದಲ್ಲಿ
ಕೆಂದೆರೆಗಳ
ಹೊಂದೆರೆಗಳ
ಸಂಗಮವಾಗುವುದಲ್ಲಿ
ಅದೋ ಮೂಡಿತ್ತು ಹೊತ್ತು,
ಚೈತನ್ಯದ ಬಿತ್ತು
ನವ ಜೀವನ ಜ್ಯೋತಿಯ ಹೊತ್ತು"

ಮೂಡಿಬರುವನು ಉದಯರವಿ. ಇವನು ಚೈತನ್ಯದ ಮೂಲ. ಜಡವಾಗಿ ನಿದ್ದೆಯೊಳಡಗಿದ ಜಗಕೆ ಚೇತನವನೂಡುವ ಮಹಾ ಚೈತನ್ಯನಾಗಿದ್ದಾನೆ ಈ ಸೂರ್ಯ ಎಂದು ಹಾಡಿದ್ದಾರೆ.

ಸೂರ್ಯೋದಯವನ್ನು ದರ್ಶಿಸಿದ ಕವಿ ಸಂಜೆಯನ್ನು ಕುರಿತು ಕೆಲವು ಕವನಗಳನ್ನು ರಚಿಸಿದ್ದಾರೆ. ಅಲ್ಲಿಯೂ ವಿಸ್ಮಯ ವ್ಯಕ್ತವಾಗಿದೆ.

'ನರಲೋಕದ ನಾನಾ ದೃಶ್ಯವ ನೋಡಿ
ಕೊಳೆಯಾಗಿರುವೀ ಕಣ್ಗಳ ಜೋಡಿ
ನಿರ್ಮಲವಾಗಲಿ, ತೊಳೆಯಿಲ್ಲಿ
ಸುಂದರ ಮಂಗಳ ರಾಗದಲಿ'

ಎಂದು, ಸಂಧ್ಯಾರಾಗ ಸುಂದರವೂ ಪವಿತ್ರವೂ ಆದುದೆಂಬ ಭಾವವನ್ನು ವ್ಯಕ್ತಗೊಳಿಸಿದ್ದಾರೆ. ಅದು ನಮ್ಮ ದೃಷ್ಟಿಯನ್ನೂ ಶುದ್ಧಗೊಳಿಸುವ ಶಕ್ತಿವುಳ್ಳದು. ಮಂಗಳಕರವಾದ ಸ್ತೋತ್ರ ಎಂದು ಸಹಜ, ಸರಳ, ಸುಂದರವಾದ ರೀತಿಯಲ್ಲಿ ವರ್ಣಿಸಿದ್ದಾರೆ. ಇನ್ನೊಮ್ಮೆ ಈ ಸಂಜೆಗೆಂಪು–'ಹಗಲ ಬೆಳಕಿನ ಗಡಿಗೆಯೊಡೆದು' ; 'ರಸ ದಿಕ್ಕು ದಿಕ್ಕಿಗೆ ಹರಿದು' ; ಬಾನ್ನೀರೆಯನ್ನು ಚೆಪ್ಪಾಗಿಸುವಂತೆ ಪಸರಿಸುವುದೆಂದು ವರ್ಣಿಸಿದ್ದಾರೆ. ಮೌನ ಆವರಿಸುವ, ಜೀರುಂಡೆ ಜೀಗುಟ್ಟುವ, ತಂಗಾಳಿ ತೀಡುವ, ಚಿಕ್ಕೆಗಳು ಮಿನುಗುವ ಕ್ರಿಯೆ ನಡೆಯುವ ಸುಂದರ ಚಿತ್ರ ಇಲ್ಲಿದೆ. ಸಂಜೆಯಾಯಿತೆಂದರೆ ಹಗಲಿನ ತೇಜ ತೆಂಗುದೋಂಟದ ಹಸುರಿನ ಶಯ್ಯೆಯಲ್ಲಿ ಮಲಗುವುದು. ಮೌನಕಾಂತಿಯು ಮೃದುಲ ತೆಕ್ಕೆಯಲ್ಲಿ ವಿಶ್ವ ಸೆರೆಯಾಗಿ ಬಿದ್ದಿರುವುದು. ಸಂಜೆಗಣ್ಣಿನಿಂದ ಇಳಿದ ಕರುಣಾರಸದ ಮಡುವಿನಂತೆ ಕಿರಿಯ ತೆರೆ ಮಿನುಗುವುದು. ಹಗಲೆಲ್ಲ ರವಿ ಬಿತ್ತಿದಂಥ ಬೀಜಗಳು ಮೊಳೆತ ಹಾಗೆ ಚಿಕ್ಕೆಗಳು ಮಿನುಗುವುವು. ಈ ಎಲ್ಲ ಚೋದ್ಯ ಮನಸ್ಸನ್ನು ಬೆರಗುಗೊಳಿಸುವುದೆಂದು ಹೇಳಿದ್ದಾರೆ. ಸಂಜೆ ಎಂದರೆ ಮೌನಸಾಮ್ರಾಜ್ಯ ಎಂಬ ಭಾವ ಇನ್ನೊಂದು ಕವನದಲ್ಲಿ ವ್ಯಕ್ತವಾಗಿದೆ. ಮೌನವಿರುವಾಗಲೇ—

"ಬಾನ ಮೌನದ ಗೆಜ್ಜೆ ಝಲ್ಲೆಂದು ಜಾರಿದೊಲು
ಅಲ್ಲೊಂದು ಇಲ್ಲೊಂದು ಹಕ್ಕಿ ನಿನದ !
ಬುವಿಯು ಎದೆ ಹಿಗ್ಗಿದ್ದು ಬುಗ್ಗೆಯಾದೊಲು, ಎಲ್ಲೊ
ನವಿಲ ಕೇಕೆಯ ಸದ್ದು......"

ಎಂದು, ಮೌನ–ನಾದಗಳ ದ್ವಂದ್ವಲೀಲೆಯನ್ನು ಕಂಡು ಮನವು ಮುಗ್ಧವಾಗಿದೆ ಬೆರಗಿನಲ್ಲಿ. ನೂರು ಬಗೆ ನಾದದಲಿ ಈ ಮೌನ ಹೊಮ್ಮದಿರೆ ಜಗದ ಚೆಲುವಿಗೆ ಬೇರೆ ವಾಣಿಯೆಲ್ಲಿ ? ಎಂದು ಈ ದ್ವಂದ್ವಲೀಲೆಯನ್ನು ವರ್ಣಿಸಿದ್ದಾರೆ. ಈ ಸಂಜೆ ಮುಪ್ಪಿನ ಸಂಕೇತವಾಗಿಯೂ ಬಂದಿದೆ 'ಸಂಜೆದಾರಿ' ಕವನದಲ್ಲಿ.

ಸಂಜೆಯನಂತರ ಇರುಳು. ಇರುಳಿನ ಚಿತ್ರ ಕೊಡುವಾಗಲೂ ಕವಿಗೆ ವಿಸ್ಮಯಭಾವ ಕೈ ತಪ್ಪಿಲ್ಲ. ರಾತ್ರಿ ವಿಶ್ರಾಂತಿಗಾಗಿ, ಮೌನವನು ತೊಟ್ಟಿಲಿನಲಿಟ್ಟು ತೂಗಿದಾಗ ಯಾವುದೋ ಭಾವ ರೂಪಕೊಡು ಎಂದು ಕಾಡುತ್ತದೆ. ಸೃಷ್ಟಿಯೇ ತಪಸ್ಯೆಯಲನುವಲ್ಲಿ ನೂರಾರು ಕಡೆಯಿಂದ ಭಾವಗಳು ಬಂದು ಬಂದು, ನಿಂದು, ರೂಪಕೊಡು ಎಂದು ಪೀಡಿಸುವುದು, ಈ ರಾತ್ರಿ ನಕ್ಷತ್ರಲೋಕ. ಬಾನ್‌ಗುಡಿಯು ಲಕ್ಷದೀಪ ಬೆಳಗುವ ಕಲ್ಪ. ಹೀಗೆ ಇರುಳು ವಿಶ್ರಾಂತಿಗಾಗಿಯಾದರೂ, ಅಲ್ಲಿ ನಕ್ಷತ್ರಗಳ ಲಕ್ಷದೀಪ ಬೆಳಗುವ, ಮೂಲೆ ಮೂಲೆಯಿಂದ ಭಾವಗಳು ಬಂದು ಗೊಂದಲ ಮಾಡುವ ಚಿತ್ರವನ್ನು ಸಹಜರೂಪಿನಲ್ಲಿ ಕೊಡುತ್ತಾರೆ.

'ಇದು ಚೆಲುವೀ ರಾತ್ರಿ
ಮೌನದೊಳಿದೆ ಧಾತ್ರಿ'

ಇಂತಹ ಸಂದರ್ಭದಲ್ಲಿಯೂ ಬೆಳಕಿನ ಕಣ್ಣರಳಿಸಿ ನೋಡುವ ದೀಪಮಾಲೆಯ ಸಿಂಗಾರ, ಇರುಳಿನ ಕೊರಳೊಳಗಿನ ತಾರಾಹಾರ, ಕತ್ತಲೆಗೂ ಬೆಳಕಿಗೂ ಏನೋ ವ್ಯವಹಾರ! ಈ ಇರುಳಿನ ಎಡೆಯಲ್ಲಿ ಲಕ್ಷಾಂತರ ನೆರಳು, ಮೌನ, ಹಾಗೂ ಚಲನೆ. ಅಂತೂ ಮಬ್ಬಿನಿರುಳು ಕಾಲ ನೂಕುತ್ತಿದೆ. ಇರುಳಿನಲ್ಲಿ ಅಲ್ಲೂ ಇಲ್ಲೂ ಎಲ್ಲೂ ಮೌನ ಬಲೆಯಾಗಿದೆ. ಆದರೂ ಆಗೊಮ್ಮೆ ಈಗೊಮ್ಮೆ ಸದ್ದಿನ ಜೇಡ ಈ ಬಲೆಯೊಳಗೆ ಚಲಿಸುತ್ತದೆ. ತಾರೆಗಳೆಲ್ಲ ಈ ಮೌನ ಶಾಶ್ವತವೆಂಬಂತೆ ಚಿಂತಾಗಾಢವಾಗಿವೆ. ಇರುಳಿನ ರಾಜ ಗೂಬೆ! ಇದರ ದನಿ ಇರುಳಿಗೆ ಸವಿ, ಚೆಲುವು. ಇರುಳಿನ ಭಯಭೀತಿಯ ಕವನ. ಕತ್ತಲ ವ್ಯಾಖ್ಯಾನ. ಹೀಗೆ ಇರುಳಿನ ಚಿತ್ರವನ್ನು ಕೊಡುವಲ್ಲಿ ಅದರ ಮೌನ, ಅಂಧಕಾರಗಳನ್ನು ಕೊಟ್ಟು, ಬೆಳದಿಂಗಳು, ಚಂದ್ರನನ್ನೂ ಕುರಿತು ಹಾಡಿದ್ದಾರೆ.

ಚಂದಿರನಿಗೊಂದು ಹೊಸ ಹೆಸರನ್ನು ಈ ಕವಿ ಇತ್ತಿದ್ದಾರೆ. ಅದು 'ಬಂಗಾರದ ಮೆಡಲು' ಹಾಗೂ ಅವನನ್ನು 'ಮುರುಕುಸೋಪಿ'ಗೂ ಹೋಲಿಸಿದ್ದಾರೆ.

"ಯಾರು ಕೊಟ್ಟರೋ ಬಾನಿಗೊಂದು ಬಂಗಾರದ ಮೆಡಲು!
ಸಂಜೆ ಬೆಳಕಿನಲ್ಲಿ ಸಾಲುಗುಡ್ಡಗಳು
ಅನಂತತೆಯ ತೊದಲು!
ತೆಂಗು ಅಡಕೆಗಳು ಜಿರಾಫೆ ಕೊರಳನು
ಮೇಲಕೆತ್ತಿನಿಲಲು,
ಪುಟ್ಟ ಕೈಗಳನು ನಭಕೆ ಚಾಚಿ ಮಗು
ಚಿಕ್ಕೆಗಣ್ಣ ತೆರೆದು
'ಚಂದುಮಾಮ ಬಾ' ಎನ್ನುತ್ತಿಹುದದೋ
ತನ್ನ ತಾನೆ ಮರೆದು"

ಇಲ್ಲಿ ಚಂದಿರನನ್ನೂ 'ಬಂಗಾರದ ಮೆಡಲು' ಎಂದು ಕರೆದಿರುವುದು ನವ್ಯೋನವ್ಯ. ನಮ್ಮ ಹಿಂದಿನ ಕವಿಗಳೆಲ್ಲರ ಹೋಲಿಕೆಗಳು ಈ ಸಹಜ ಸುಂದರ ರೂಪಕದ ಮುಂದೆ ತಣ್ಣಗಾಗುವುವು. 'ಅನಂತತೆಯ ತೊದಲು' ; 'ಜಿರಾಫೆ ಕೊರಳು' ; 'ಚಿಕ್ಕೆಗಣ್ಣು' ಎಂಬ ಶಬ್ದಗಳಲ್ಲಿ ಅನಂತವಾದ ಧ್ವನಿ ಪ್ರಪಂಚವನ್ನು ಸೃಷ್ಟಿಸಿದ್ದಾರೆ. ಬಂಗಾರದ ಮೆಡಲಿನಂತೆ ಕಂಡು ಕೋರೈಸುವ ಚಂದಿರ ಒಮ್ಮೊಮ್ಮೆ ಅಂದರೆ ಮಬ್ಬಿನಿರುಳಿನಲ್ಲಿ "ಬಾನಬಟ್ಟೆಗುಜ್ಜಿ ಉಜ್ಜಿ ಸವೆದ ಮುರುಕು ಸೋಪಿನಂತೆ' ತೆಳ್ಳಗಾಗಿ ಕಾಣುತ್ತಾನೆ. ಇಲ್ಲಿ ಇವನ ಆಟ ನಡೆಯದು. ಮುಂಪರ ಕವಿದ ಹಾಗೆ ಮೈಲಿಗೆಯೊಳು ತೇಲುವನು. ಎಂತಹ ಸಹಜ ಉಪಮೆ ಇದು.

ಬೆಳುದಿಂಗಳನ್ನು ಈ ಕವಿ ಕಂಡಿರುವ ವಿಧಾನ ಔಚಿತ್ಯಪೂರ್ಣ. 'ಜೊನ್ನಗಂಗೆ ತನ್ನ ಲೀಲೆಗಾಗಿ ತಾನೆ' ಹರಿದು ಬಂದಿದೆಯಂತೆ. ಹೇಗೆಂದರೆ—

'ತಾರೆಯೂರ ನಾಕದಿಂದ
ಮರ್ತ್ಯದೂರ ಮನೆಯಮೇಲೆ
ಅಮೃತಭವ್ಯ ಹರಕೆಯಂತೆ
ಹರಿದು ಬಂದಿದೆ;
ವ್ಯೋಮ ತಪೋರೂಪದಂತೆ
ಹರಹಿ ನಿಂದಿದೆ.'

ತನ್ನ ಲೀಲೆ ತನಗೆ ಪ್ರೀತಿ ಎನ್ನುವಂತೆ ಸ್ವೇಚ್ಛಾಚಿ ತನ್ನ ತಾನೆ ಸೃಜಿಸಿಕೊಂಡಿದೆ. ಮೌನದೆದೆಯ ಮೌನದೊಳಗೆ ಜೊನ್ನ ಇಳಿದಿದೆ.

'ಬಾರಯ್ಯ ಬೆಳುದಿಂಗಳೇ
ನಮ್ಮೂರ ಹಾಲಿನಂಥ ಬೆಳುದಿಂಗಳೇ'

ಎಂಬ ಜಾನಪದ ಕವಿಯು ಬೆಳುದಿಂಗಳನ್ನು ಕುರಿತಾದ ಹಾಡಿನ ಪಲ್ಲವಿಯನ್ನು ಈ ಕವಿ ವಿಡಂಬಿಸಿದ್ದಾರೆ. ಆದರೆ ಅದು ಸತ್ಯ. ಈಗಿನ ಹಾಲಿಗೂ ಆ ಕಾಲದ ಹಾಲಿಗೂ ಅಜಗಜಾಂತರ ವ್ಯತ್ಯಾಸ. ಆಗ್ಗೆ ಅದು ಸರಿ. ಈಗ್ಗೆ ಇದು ಸರಿ.

'ಬೆಳಗಾಗ ನಲ್ಲಿ ನೀರಿನ ಸಹಾನುಭೂತಿಯನು ಹೊತ್ತು
ತುಂಬಿ ತುಳುಕುವುದು ಹಾಲಿನ ಪಾತ್ರೆ'

ಇಂತಹ ಹಾಲಿಗೆ ಬೆಳುದಿಂಗಳನ್ನು ಹೋಲಿಸುವುದು ಯಾವ ನ್ಯಾಯ. ಇನ್ನೊಂದು ದೃಷ್ಟಿಯಿಂದ ನೋಡಿದಾಗ ಈ ಕಾಲದ ಬೆಳುದಿಂಗಳು, ಈ ಕಾಲದ ಹಾಲು ಇವೆರಡರ ನಡುವಣ ಹೋಲಿಕೆ ಸರಿ. ಏಕೆಂದರೆ—

"ಈಗಲೋ ವಿದ್ಯುದ್ದೀಪಗಳ ನೀರು ಬೆರೆತ ಬೆಳುದಿಂಗಳು
ನಮ್ಮೂರಿನ ಮೇಲೆ

ಆದುದರಿಂದ ಈ ಬೆಳುದಿಂಗಳಿಗೆ ಈಗ ದೊರೆವ ಹಾಲು ಉಚಿತ ಹೋಲಿಕೆ. ನಲ್ಲಿ ನೀರು ಬೆರೆತ ಹಾಲು, ವಿದ್ಯುದ್ದೀಪಗಳ ನೀರು ಬೆರೆತ ಬೆಳುದಿಂಗಳು. ಎಂತಹ ಕಾಕತಾಳ ನ್ಯಾಯ. ಆದುದರಿಂದ

'ಬಾರಯ್ಯ ಬೆಳದಿಂಗಳೇ
ನಮ್ಮೂರ ಹಾಲಂಥ ಬೆಳದಿಂಗಳೇ'

ಎಂಬ ಪಲ್ಲವಿ ಈಗಲೂ ಸರಿ.

ಮಾಗಿಕಾಲದ ಮಂಜಿನ ಚಿತ್ರ ಸೊಗಸಾಗಿ 'ಮಂಜಿನ ಲೀಲೆ' ಕವನದಲ್ಲಿ ಮೂಡಿ ಬಂದಿದೆ.

"ಮುಂಜಾವಿನ ಮಂಜಿನ ಸರಿ
ಇಳೆಗಿಳಿದಿತ್ತು
ಭೂವ್ಯೋಮದ ಅಂತರವನು
ಅಳಿಸುತಲಿತ್ತು
ಸುರಲೋಕದ ಅಮೃತರಸ
ಬುವಿ ಜಡತೆಯನೆಲ್ಲ

ತೊಳೆ ತೊಳೆಯುತ ಕಣ್ ಬಿಡಿಸಲು
ಅವತರಿಸಿತ್ತೋ"

ಎಂಬಂತೆ ಕಣ್‌ಕಟ್ಟಿನ ಮಾಟವಾಗಿತ್ತು ಆ ಮಂಜಿನ ಲೀಲೆ. ತೊಟ್ಟಿಕ್ಕುವ ಮಂಜು ತರುನಾರಿಯಾ ಕರತಲದಾಮಣಿ ಸೇಸೆಗಳಂತೆ ತೊಟ್ಟಿಕ್ಕಿದೆ, ತಿರಿವೆಣ್ಣಿಗೆ ಸಂಸೇಚನೆಯಂತೆ. ಇದು ಸೃಷ್ಟಿಯ ತಪಕೆ ಹೊದಿಕೆಯೂ ಹೌದು. ನವಸೃಷ್ಟಿಯ ಧ್ಯಾನಕೆ ತೆರೆಯೂ ಹೌದು.

ಮಳೆಯನ್ನು 'ಆಕಾಶದ ಅತಿಥಿಗಳು' ಎಂದಿದ್ದಾರೆ ಕವಿ. ಭಾದ್ರಪದ ಮಾಸದಲ್ಲಿ ಈ ಮಳೆ ಆರಂಭ. ಗಗನ ಮನದ ಶುಭ್ರ ಚಿಂತೆ ಸುರಿವ ಜಲದ ಅಲರಿನಂತೆ ಹನಿ ಹನಿಯಾಗಿ ಬೀಳುವುದು ಈ ಮಳೆ. ಇದು ಸಸ್ಯರಾಶಿಯ ಜೀವನಾಡಿ. ಹಸುರು ಸೊರಗಿ ಸೊಪ್ಪಾಗಿದೆ. ಆದುದರಿಂದ ಮಳೆ ಬೇಕು ಎಂಬ ಆಶೆ. ಬರುವುದೆಂಬ ಭರವಸೆ ಮನುಷ್ಯನಿಗೆ. ಆದರೆ ಮಳೆ ಬರದು. ಇದು ಕಾಣದೆ? ಎಂದು ಮಳೆಯ ಮೋಡವನ್ನೂ ಪ್ರಶ್ನಿಸಿದ್ದಾರೆ ಕವಿ. ಮಿಂಚು, ಮೊಳಗು ಮಳೆ ಬರುವ ಸೂಚನೆ. ಆದರೆ ಅದು ಬರಿಯ ಆರ್ಭಟವಾಗಿದೆ. ಅದಕ್ಕೆಂದೇ ಕವಿಯು ಮನ ಮರುಗಿ ಮಳೆಯನ್ನು ಈ ಕಾಠಿಣ್ಯ ಬೇಡವೆಂದು ಆರ್ತವಾಗಿ ಹೇಳುತ್ತದೆ. ಕಡೆಗೆ ಮಾತಿಗೆ ತಿವಿದು ಹೇಳಲೂ ಸಿದ್ಧವಾಗುತ್ತದೆ. ಮಳೆ ಬಂದಿತೆನ್ನಿ. ಆಗ ಕವಿ ಮಳೆಯನ್ನು ಆಕಾಶದ ಅತಿಥಿಗಳು ಎಂದು ಆಹ್ವಾನಿಸುವರು. ಆಷಾಢ ಮಾಸದಲ್ಲಿ ಈ ಮೋಡಗಳು ರಾಶಿರಾಶಿಯಾಗಿ ಗಗನದಲ್ಲಿ ತೇಲಾಡುವುವು. ಅದನ್ನು ಕಂಡ ಕವಿ 'ಲಗ್ಗೆ ನುಗ್ಗುವ ಸೇನೆಯೊಲು ಮೋಡಗಳ ಸಾಲು' ಸಾಗುತಿವೆ ಎಂದು ಹಾಡಿದ್ದಾರೆ.

ಡಾ|| ಜಿ.ಎಸ್.ಎಸ್. ಅವರ ಪ್ರಕೃತಿ ಕವನಗಳಲ್ಲಿ ಪ್ರಕೃತಿ ಸೌಂದರ್ಯದ ಶಾಶ್ವತ ನೆನಪನ್ನು ಉಳಿಸುವ ಕವನ "ಚೈತ್ರ."

"ಸುಗ್ಗಿ ಬಂದಿತು ಹಿಗ್ಗು ಹೊಮ್ಮಿತು ಮರದ ಹರೆಹರೆಯೊಳಗಡೆ
ಚಿಗುರು ಹೂವಿನ ಕಾಯಿಹಣ್ಣಿನ ಬಯಕೆಗಾಗಿದೆ ಬಿಡುಗಡೆ!
ಎಂಥ ಬಡಕಲು ಗಿಡವು ಕೂಡಾ ಚೆಲುವಿಗಾಗಿದೆ ನಿಲುಗಡೆ!
ನೂರು ವರ್ಣದ ನೂರುರಾಗದ ಚಿಲುಮೆ ಚಿಮ್ಮಿದೆ ಎಲ್ಲೆಡೆ!"

ಮಾಘ ಮಾಸದ ಕೊರೆವ ಶೀತದ ಶಾಪದಿಂದ ಬಿಡುಗಡೆಯನ್ನಿತ್ತು, ಬಡಕಲು ಗಿಡದಲ್ಲೂ ಚೆಲುವನ್ನು ಮೂಡಿಸುವಂತಹ ಕರುಣೆ ವಸಂತನದು. ಕಣ್ಣು ತುಂಬುವ ರೂಪಕ್ಕೆ ಯೌವನೋದಯವಾದಂತೆ ಚೆಲುವು ಮರಗಳಲ್ಲಿ ಮೈತಳೆದು ನಿಲ್ಲುವುದು. ಇವು ಚೈತ್ರ ಜಾತ್ರೆಗೆ ಬಂದು ನಿಂತ ಚೆಲುವಿನ ರಥಗಳಂತೆ ಕಾಣುವುವು. 'ಅಪ್ರುತ ವರ್ಣಗಾನ', 'ಚೆಲುವಿನ ರಥಗಳು', 'ರಾಸಲೀಲಾ ವಿಲಾಸಪಥಗಳು' ಇಂತಹ ಮಾತುಗಳಲ್ಲಿ ಪರಿಚಿತ ವಸ್ತುಗಳಿಗೆ ನೂತನ ಭಾವ ಕೋಶವನ್ನು ಸೃಷ್ಟಿಸುತ್ತಾರೆ ಕವಿಗಳು. ಈ ವಸಂತೋದಯವು ಜನ್ಮಾಂತರದ ಸಾಧನೆ ಮುಕ್ತಿ ಪಡೆದ ಹಾಗೆ. ಯಾವುದೋ ಜನ್ಮದ ಒಲವು ಎದೆಯೊಳಗೆ ತುಳುಕಿ ಮೌನವಾಂತು ನಿಂತಂತೆ, ಒಲವಿನ ಚಿಲುಮೆ ಚಿಮ್ಮುವ ಜೀವ

ರಾಶಿಗಳಾಗಿ ಮರಗಳು ಕಂಡುಬರುತ್ತವೆ. ಹೀಗೆ ಚೈತ್ರದಲ್ಲಿ ಹೊಸ ಹೊಸ ಭಾವಗಳು ಹೊಸ ಚಿತ್ರಗಳು ವಸಂತೋದಯವನ್ನು ಶಾಶ್ವತಗೊಳಿಸಿವೆ.

ಗಗನದಲ್ಲಿ ಮೂಡುವ ಕಾಮನ ಬಿಲ್ಲು ಕವಿಯ ಕಣ್ಣಿಗೆ—

'ಆ ದಿಕ್ತಟದಿಂ
ಈ ದಿಕ್ತಟಕೆ
ಸುರ ಸಂಕ್ರಮಣಕೆ ನಿರ್ಮಿಸಿದ
ಬಣ್ಣಗಳೇಳರ
ಸೇತುವೆಯಂತೆ'

'ಆಕಾಶವೆಣ್ಣಿನ ಕೊರಳಿನ ಹಾರದಂತೆ' ಕಂಡುಬಂದಿದೆ. ಬಾನಂಗಳದಲ್ಲಿ ಸುರಸೌಂದರ್ಯದ ಲಾಸ್ಯ ವಿಲಾಸದ ಪರಿಯಾಗಿ ಬಾಳಿನ ಲೀಲೆ ಎಂಬಂತೆ ಈ ಕಾಮನ ಬಿಲ್ಲು ಮೂಡಿದೆ.

'ವಿಶ್ವಮಯೂರಂ
ಗರಿಗಳ ಬಿಚ್ಚಿ
ಮಾಯಾಲಾಸ್ಯವನಾಡುತಿರೆ;
ಗರಿಗಳ ಜೋಡಿ
ಮುಗಿಲಲಿ ಮೂಡಿ
ಬಣ್ಣದ ಬಿಲ್ಲನು ರಚಿಸಿಹುದೋ?'

ಎಂಬಷ್ಟು ಚೆಲುವು ಈ ಕಾಮನ ಬಿಲ್ಲಿಗೆ.

ಕೋಗಿಲೆಯ ಬಗೆಗೆ ಅನೇಕ ಕವಿಗಳು ಅನೇಕ ರೀತಿಯ ಭಾವಗಳನ್ನು ವ್ಯಕ್ತಗೊಳಿಸಿದ್ದಾರೆ. ಈ ಕವಿ ಕೋಗಿಲೆಗೆ ಉಪದೇಶ ನೀಡಿದ್ದಾರೆ. 'ಕೋಗಿಲೆಗೆ ಉಪದೇಶ' ಕವನದಲ್ಲಿ—

ಹಳಗಾಲದ ವಸ್ತು ನೀನು,
ನೀನು ಹೇಗೆ ಕೂಗಲೇನು?
ನಿನ್ನ ದನಿಯೊ ಅದೇ ರಾಗ,
ವ್ಯತ್ಯಾಸವೆ ಇಲ್ಲವಲ್ಲೊ!
ಹೊಸ ಕಾಲಕೆ ತಕ್ಕ ಹಾಗೆ
ರೈಲು-ಕಾರು-ಮಿಲ್ಲು ಹೀಗೆ
ಕೂಗುವುದನು ಕಲಿಯಲಿಲ್ಲ
ಹೊಸಕವಿಗಳ ಸೆಳೆಯಲಿಲ್ಲ
ತಡವಾದರು ಚಿಂತೆಯಿಲ್ಲ
ಈಗಾದರು ನೋಡಿ ಕಲಿ
ಏನಾದರು ಆಗಲಿ"

ರೈಲು, ಕಾರು, ಮಿಲ್ಲುಗಳ ಅರಚಾಟಗಳು ಕಿವಿಗಳಲ್ಲಿ ಗಡಚಿಕ್ಕಿವೆ. ಆದುದರಿಂದ ಕೋಗಿಲೆಯ ಗಾನ ಯಾರ ಕಿವಿಗೂ ಬೀಳದು. ಈ ಕೋಗಿಲೆ ಹೊಸ ವಿಧಾನವನ್ನು ಕಲಿಯಲಿಲ್ಲ. (ಪೌರ್ವಾತ್ಯ ಶಾಸ್ತ್ರೀಯ ಸಂಗೀತವನ್ನು ಬಿಟ್ಟು ಪಾಶ್ಚಾತ್ಯ ಸಂಗೀತಕ್ಕೆ

ಮನಸೋತಂತೆ.) ಈ ಹಳೆಯ ಅಜ್ಜಿ ಕಾಲದ ಕುಹೂ ಕುಹೂ ಧ್ವನಿ ಈಗ ಯಾರಿಗೆ ಬೇಕಿದೆ. ಅಲ್ಲದೆ ಈಗಲೋ ಚುನಾವಣೆಯ, ತನ್ಮೂಲಕ ಬಹುಮತಗಳ ಲೆಕ್ಕ. ಆದುದರಿಂದ ಈ ಕೋಗಿಲೆಯೂ ಕೂಡ ಮೆಂಬರಾಗಿ ಏನಾದರೂ ಜಾಗ ಹಿಡಿಯಬೇಕು. ಹೊಂದಿ ನಡೆವ ಬಾಳನ್ನು ಕಲಿಯಬೇಕು. (ಈ ಮೂಲಕ ಸಮಾಜವನ್ನು ವಿಡಂಬಿಸಿರುವ ಮಾತು ಬೇರೆ.) ಕವಿಗಳು ಈ ಕೋಗಿಲೆಯನ್ನು ಈ ರೀತಿ ಉಪದೇಶ ನೀಡಿದರೂ ತಿದ್ದಿಕೊಳ್ಳದಿದ್ದಾಗ ರಿಪೇರಿ ಮಾಡಲು ಮುಂದಾಗಿದ್ದಾರೆ. ಪಂಪನಿಂದ ಕುವೆಂಪುವರೆಗೆ ಅದೆ ವಂದಿ ಮಾಗಧ ವೃಂದ. ಈಗ ಅದು ಬದಲಾಗಬೇಕು. ಯೋಜನೆಗಳನ್ನು ತಯಾರಿಸುವ ಜಾಣಜನರಿಗೆ ಈ ಕೋಗಿಲೆಯ ಕೊರಳನ್ನು ರಿಪೇರಿ ಮಾಡುವ ಚಿಂತೆ ಹೊಳೆಯಲಿಲ್ಲವೇಕೋ! ಎಂದುಕೊಂಡ ಕವಿ ಕೋಗಿಲೆಗೆ ಸಂಗೀತದ ಮೇಷ್ಟ್ರಿಗೆ ಹೇಳಿ 'ಸಾಪಾಸಾ' ಪಾಠ ಹೇಳಿಸಬೇಕೆಂದುಕೊಂಡಿದ್ದಾರೆ. ಆಗಲಾದರೂ ಶಾಸ್ತ್ರೀಯ ಸಂಗೀತ ಈ ಕೊರಳಲ್ಲಿ ರೆಕಾರ್ಡಾಗಿ ಉಳಿದೀತು ಎಂಬ ಬಯಕೆ ಕವಿಗಳಿಗೆ. ಇಷ್ಟಾದರೂ ಕವಿ ಕೋಗಿಲೆಯ ದನಿ ಬಗ್ಗೆ 'ಬೋಳು ಬಾಳಿಗೂ ಚೆಲುವಿನಾ ವಾಹನ' ಎಂದಿದ್ದಾರೆ.

ಕಡಲನ್ನು ಪ್ರಾಚೀನ, ಅರ್ವಾಚೀನ ಕವಿಗಳು ನಾನಾರೀತಿಯಲ್ಲಿ ವರ್ಣಿಸಿದ್ದಾರೆ. ವಿಶಿಷ್ಟವಾದ. ಗಂಭೀರವಾದ ಸಂಸ್ಕೃತ ಭೂಯಿಷ್ಠ ಶೈಲಿಯಲ್ಲಿ ವರ್ಣಿಸಿರುವುದುಂಟು. ಹಾಗೆಯೆ ಸರಳವಾಗಿ ಹೊಸ ಕಲ್ಪನೆಗಳನ್ನು ಕೊಟ್ಟು ವರ್ಣಿಸಿರುವುದೂ ಉಂಟು. ಈ ಮಾರ್ಗದಲ್ಲಿ ಜಿ.ಎಸ್.ಎಸ್. ಅವರ 'ಕಡಲನ್ನು ಕಂಡಾಗ' ಕವನ ಒಂದು ಸಾರ್ಥಕ ಪ್ರಯತ್ನ.

> ಎತ್ತ ನೋಡಿದರು ನೀಲ ನೀಲ ಜಲ ಕಲ್ಲೋಲರುಂದ್ರಮಾಲೆ
> ಕೆಳಗೆ ನೀಲ ಜಲ ಮೇಲೆ ನೀಲ ತಲ ದಿಟ್ಟಿ ಸೋಲುವೋಲೆ.
> ಎಲ್ಲೆಲ್ಲು ನೀಲ; ಭೂಮಾತೆಯ ಕುರುಹು ಬರಿಯ ನೀಲಿಯಂತೆ
> ನೀನೆ ತೋರುತಿಹೆ ನನ್ನ ಕಂಗಳಿಗೆ ನೀಲ ಬೊಮ್ಮನಂತೆ!

ಕಡಲ ಮೊರೆವ ರಾಗ ರುದ್ರವೀಣೆಗಳ ತುಮುಲನಾದ. ಪ್ರಳಯ ಭೈರವನು ಲೋಕ ಲೋಕಗಳ ತಟ್ಟಿ ಕುಣಿಯುವಾಗ ಇದರ ತೆರೆಗಳು ತಾಂಡವಕ್ಕೆ ಹಾಕುವ ತಾಳ. ಇದರ ವೇದಘೋಷನಾದ ಬ್ರಹ್ಮದ ವ್ಯಕ್ತರೂಪ. ವಿಶ್ವಕವಿ ತಾಕಟ್ಟಿ ಹಾಡುತಿಹ ಚೈತನ್ಯ ಕವನದಂತೆ ಇದರ ಘೋಷ! ಈ ಘೋಷ, ಸೃಷ್ಟಿಕರ್ತನನ್ನು ಕುರಿತ ಪ್ರಾರ್ಥನೆಯೂ ಹೌದು. ತೆರೆಗಳು ಬಂದು ದಡಕೆ ಬಡಿಯುವ ಚಿತ್ರವನ್ನು 'ಬುವಿಯ ಹೆಣ್ಣಿಗೂ ಕಡಲ ಗಂಡಿಗೂ ತೀರದಿರುವ ಬೇಟದಾಟ' ಎಂಬಂತೆ ಹೊಸ ರೀತಿಯಲ್ಲಿ ವರ್ಣಿಸುತ್ತಾರೆ. ಆ ತೆರೆಗಳ ಘೋಷ–ವಾದ್ಯಘೋಷ. ತೆರೆಗಳು ಚಮರಗಳು. ಅಂತೆಯೆ ಕಡಲಿನದು ರಾಜ ಗಾಂಭೀರ್ಯ. ಈ ರಾಜ ವೈಭವ, ರಾಜತನ, ಇದಕ್ಕೇ ಮೀಸಲು. ಹೀಗೆ ವಿಶಿಷ್ಟ ಶೈಲಿಯಲ್ಲಿ ಕಡಲ ಸೌಂದರ್ಯವನ್ನು ಕವಿ ಚಿತ್ರಿಸಿದ್ದಾರೆ.

ಪ್ರಕೃತಿ ವರ್ಣನೆಯಲ್ಲಿ ಎರಡು ವಿಧ. 'ದರ್ಶನಾನುಭೂತಿ ಮತ್ತು ಕಲ್ಪನಾನುಭೂತಿ.' ಕವಿ ಪ್ರಕೃತಿಯನ್ನು ನೇರವಾಗಿ ಕಂಡು ಆ ದರ್ಶನವನ್ನು ಒಂದು ಭಾವಗೀತೆ

ಯಲ್ಲಿ ವರ್ಣಿಸುವುದು ದರ್ಶನಾನುಭೂತಿ. ಕಥೆ ಅಥವಾ ನಾಟಕಗಳಲ್ಲಿ ಯಾವುದೋ
ವಾತಾವರಣ ಅಥವಾ ಸಂದರ್ಭಗಳನ್ನು ಚಿತ್ರಿಸುವುದಕ್ಕಾಗಿ ಪ್ರಕೃತಿಯನ್ನು ಉಪ
ಯೋಗಿಸಿಕೊಳ್ಳುವುದು ಕಲ್ಪನಾನುಭೂತಿ. ಇದುವರೆಗೆ ನಾವು ಗಮನಿಸಿದ ಡಾ||
ಜಿ.ಎಸ್.ಎಸ್. ಅವರ ಕವನಗಳಲ್ಲಿ ದರ್ಶನಾನುಭೂತಿ ವರ್ಣನೆ ಇರುವುದು ಸ್ಪಷ್ಟ
ಮತ್ತು ಪ್ರಕೃತಿ ವರ್ಣನೆ ಮಾಡುವಾಗ ಅಥವಾ ಪ್ರಕೃತಿಯ ಅಂಶವನ್ನು ಕುರಿತು
ಹೇಳುವಾಗ ಈ ಕವಿಯಲ್ಲಿ 'ವಿಸ್ಮಯ' ಸ್ಥಾಯೀಭಾವ ಎಂಬುದೂ ಸ್ಪಷ್ಟ. ಪ್ರಕೃತಿಯ
ಉಪಾಸನೆಯ ಅವಶ್ಯಕತೆಯನ್ನು ಅರಿತು ಆಚರಿಸಿ ಸಾರ್ಥಕತೆಯನ್ನು ಈ ಕವಿ ಪಡೆದಿ
ದ್ದಾರೆ. ಪ್ರಕೃತಿಯ ಬಗೆಗೆ ತಮ್ಮದೇ ಆದ ನಿಲವು, ಭಾವನೆಗಳನ್ನು ತಳೆದ ಈ ಕವಿ
ಈ ತಲೆಮಾರಿನ ಕವಿಗಳಿಂದ ಪ್ರಕೃತಿ ವರ್ಣನೆಯಲ್ಲಿ ಭಿನ್ನವಾಗಿದ್ದಾರೆ. ಸಾಮಗಾನ
ದಲ್ಲಿ ಕುವೆಂಪು ಪ್ರಭಾವ ಇವರ ಮೇಲೆ ಆಗಿರುವುದು ಸ್ಪಷ್ಟವಾದರೂ ಮುಂದಿನ
ಸಂಕಲನಗಳಲ್ಲಿ ತನ್ನತನವನ್ನು ಬೆಳಸಿ ಬೆಳಗಿರುವ ಅಂಶವೂ ಸ್ಪಷ್ಟ. ಪ್ರಕೃತಿಯನ್ನು
ಕಾಣುವ ಕಣ್ಣಿಗೆ ಹೊಸ ತಿರುವನ್ನು ಈ ಕವಿ ಕೊಟ್ಟಿದ್ದಾರೆ.

ಸಿ. ಯು. ಮಂಜುನಾಥ್

# ಜಿ.ಎಸ್.ಎಸ್. ಅವರ ಕವಿತೆಗಳಲ್ಲಿ ಸಮಾಜ

ಕವಿ ಸಮಾಜದ ಒಂದು ಘಟಕವಾಗಿರುವುದರಿಂದ ಕವಿ ಮತ್ತು ಸಮಾಜಕ್ಕೆ ಅನಿವಾರ್ಯವಾದ ಸಂಬಂಧವಿದೆ. ಕವಿಯೂ ಇತರೆ ಸಮಾಜ ಜೀವಿಗಳಂತೆ ಸಮಾಜದ ಒಂದು ಭಾಗ. ಸಮಾಜ ವ್ಯಕ್ತಿ-ವ್ಯಕ್ತಿಗಳ ಜಟಿಲ ಸಂಬಂಧದ ಆವರಣ. ಈ ಆವರಣದಲ್ಲಿ ಜೀವಿಸುವ ಪ್ರತಿಯೊಬ್ಬ ವ್ಯಕ್ತಿಯೂ ಅದರೊಂದಿಗೆ ಸಂಬಂಧವನ್ನು ಇಟ್ಟುಕೊಳ್ಳಬೇಕಾಗುತ್ತದೆ. ಸಮಾಜ ವ್ಯಕ್ತಿಗಳಲ್ಲಿ ಒಬ್ಬನಾದ ಕವಿಯ ಮೇಲೆ ಪ್ರಭಾವವನ್ನು ಬೀರಿ ಅವನನ್ನು ರೂಪಿಸುತ್ತದೆ. ಅನಂತರ ಕವಿ ತನ್ನ ಕೃತಿಯಲ್ಲಿ ಸಮಾಜವನ್ನು ಕುರಿತು ಬರೆಯುತ್ತಾನೆ. ಈ ದೃಷ್ಟಿಯಿಂದ ಗಮನಿಸಿದಾಗ ಕವಿ ಸಮಾಜದ ಶಿಶುವೂ ಹೌದು ಮತ್ತು ಸಮಾಜ ರೂಪಕನೂ ಹೌದು. (A child and a creator of society) ಕವಿಗೆ ಸಮಾಜದ ವಿಷಯದಲ್ಲಿ ತನ್ನದೇ ಜವಾಬ್ದಾರಿ ಮತ್ತು ಬದ್ಧತೆಗಳಿರುವುದರಿಂದ ಅವನು ಕೆಲವು ಮೌಲ್ಯಗಳನ್ನು ಇಟ್ಟುಕೊಳ್ಳುವುದು ಅನಿವಾರ್ಯವಾಗುತ್ತದೆ. ಮತ್ತು ಕಾವ್ಯಕ್ಕೆ ಚ್ಯುತಿ ಬರದಂತೆ ಆ ಮೌಲ್ಯಗಳನ್ನು ಕಾವ್ಯಮಾಧ್ಯಮದಲ್ಲಿ ಪ್ರಚುರಗೊಳಿಸುತ್ತಾನೆ. ಆದ್ದರಿಂದಲೇ ಯಾವುದೇ ಉತ್ತಮ ಸಾಹಿತ್ಯಕೃತಿ ಜೀವನ ಮೌಲ್ಯ ಮತ್ತು ಸಾಮಾಜಿಕ ಮೌಲ್ಯಗಳನ್ನು ಅಂತರ್ಗತವಾಗಿ ಉಳ್ಳದ್ದಾಗಿರುತ್ತದೆ. ಕವಿಯ ಮನೋಭಾವದ ಮೇಲೆ ಸಾಮಾಜಿಕ ಅನುಭವಗಳ ಒತ್ತಡ ಉಂಟಾಗಿ ಅವನ ಜೀವನ ಮೌಲ್ಯ ರಚನೆಗೆ ಕಾರಣವಾಗುತ್ತದೆ. ಅನುಭವದಿಂದ ಪರಿಪಾಕಗೊಂಡ ಕವಿಮನಸ್ಸು ಸಮಾಜವನ್ನು ತನ್ನ ಕೃತಿಯ ವಸ್ತುವಾಗಿಸಿಕೊಳ್ಳುತ್ತದೆ.

ಸಮಾಜ ಕವಿಯ ಕಣ್ಣಿಗೆ ವಿಚಿತ್ರ ಹಾಗೂ ವಿರುದ್ಧ ಅಂಶಗಳ ಆಗರವಾಗಿ ಕಾಣಬಹುದು. ಕವಿ ತನ್ನ ಆದರ್ಶದ ಅಥವಾ ರೂಪಿತ ಮೌಲ್ಯದ ಹತ್ತಿರಕ್ಕೆ ಅದು ಬಾರದೇ ಇದ್ದಾಗ ನೋವಾಗಬಹುದು. ಸಮಾಜದಲ್ಲಿ ಉತ್ತಮಾಂಶಗಳು ಗೋಚರಿಸಿದಾಗ ಸಂತೋಷದಿಂದ ಒಪ್ಪಿ ಹೊಗಳಬಹುದು. ಕೆಲವು ಸಾರಿ ಸಮಾಜ ಅನೀತಿ ಅನ್ಯಾಯಗಳ ಆಗರವಾದಾಗ ಕಂಡು ಸಿಡಿದೆದ್ದು ಅವನ್ನು ತೀವ್ರವಾಗಿ ಖಂಡಿಸಬಹುದು. ಸಮಾಜದ ಉದ್ಧಾರ ಸಾಧ್ಯವೇ ಇಲ್ಲವೆನಿಸಿದಾಗ ನಿರಾಶೆಯಾಗಬಹುದು. ಆ ಎಲ್ಲ ನಿರಾಶೆಯ ಅಂಶದಿಂದ ನೊಂದು ಆವೇಶ ಮೂಡಿ ಸಮಾಜದ ವ್ಯಕ್ತಿಗಳ ಕುಹಕವನ್ನು ಸಣ್ಣತನವನ್ನು ನಾಲ್ಕು ಜನರೆದುರು ಧ್ವನಿಯೆತ್ತಿ ಹೇಳಿ ಮುಖಕ್ಕೆ ಕನ್ನಡಿ ಹಿಡಿಯುವ ಕಾರ್ಯವನ್ನು ಮಾಡಬಹುದು. ಕೆಲವು ಸಂದರ್ಭಗಳಲ್ಲಿ ತನ್ನ ಧ್ವನಿ ತನ್ನಲ್ಲಿಯೇ ಅಡಗುತ್ತ

ಜನರನ್ನು ತಲುಪಲಾರದು ಎಂದೆನಿಸಿದಾಗ ತೀವ್ರ ನಿರಾಶೆಯು, ಅಂತರ್ಮುಖಿಯಾಗುವ ಪ್ರವೃತ್ತಿ ಕಂಡುಬರಬಹುದು. ಇನ್ನೂ ಕೆಲವು ಸಾರಿ ಸಮಾಜದ ಸಮಗ್ರ ಅನುಭವದಿಂದ ಆಳವಾದ ಚಿಂತನೆಯಿಂದ ಯಶಸ್ವೀ ಕಲಾತ್ಮಕ ಕವನಗಳು ಸೃಷ್ಟಿಯಾಗಬಹುದು. ಒಟ್ಟಿನಲ್ಲಿ ಈ ಎಲ್ಲ ದೃಷ್ಟಿಗಳು ಒಗ್ಗೂಡುವುದರಿಂದ ಮತ್ತು ಕವಿ ಜೀವಂತ ಬದುಕಿಗೆ ಪಡಿಮಿಡಿಯುವುದರಿಂದ ಸಮಾಜದ ಬಗ್ಗೆ ಬರೆಯುವುದು ಅನಿವಾರ್ಯವಾಗುತ್ತದೆ. ಒಂದು ದೃಷ್ಟಿಯಿಂದ ನೋಡಿದರೆ ಕವಿಯ ಸಮಸ್ತ ಸೃಷ್ಟಿಯಲ್ಲಿ ಸಾಮಾಜಿಕ ಅಂಶ ಅಂತರ್ಗತವಾಗಿರುತ್ತದೆಂದು ಹೇಳಬಹುದು. ಆದರೆ ಇದು ಸಮಾಜದ ಪ್ರಭಾವದಿಂದ ಸೃಷ್ಟಿಯಾದದ್ದು ಅಥವಾ ಇದು ಸಮಾಜ ಎಂದು ಎಷ್ಟೋ ಸಾರಿ ಬೆರಳಿಟ್ಟು ತೋರಿಸಲು ಸಾಧ್ಯವಾಗದೇ ಇದ್ದರೂ ಸಮಕಾಲೀನ ಸಮಾಜದ ಸಾವಿರ ಪ್ರಭಾವ ಮುದ್ರೆ ಕವಿಕೃತಿಯಲ್ಲಿ ಮೂಡಿರುತ್ತದೆ.

ಜಿ.ಎಸ್.ಎಸ್ ಅವರ ಆರಂಭದ ಹೆಚ್ಚು ಕವಿತೆಗಳು ನಿಸರ್ಗ ಮತ್ತು ಸಾಂಸಾರಿಕವೆನ್ನಬಹುದಾದ ವಸ್ತುವನ್ನು ಒಳಗೊಂಡವು. ಕ್ರಮೇಣ ಅನುಭವ ಪ್ರಪಂಚ ವೈಶಾಲ್ಯ ಹೊಂದುತ್ತಾ, ಹೊಸ ಸಾಧ್ಯತೆಗಳನ್ನು ತೆರೆಯುತ್ತಾ ಕಾವ್ಯದಿಗಂತ ವಿಸ್ತಾರವಾಗುತ್ತಾ ಸಾಗಿರುವುದು ಕಂಡುಬರುತ್ತದೆ. ಈ ಬೆಳವಣಿಗೆಯನ್ನು 'ದೀಪದ ಹೆಜ್ಜೆ'ಯಿಂದ 'ಗೋಡೆ'ಯವರೆಗಿನ ಸಂಕಲನಗಳಲ್ಲಿ ಸ್ಪಷ್ಟವಾಗಿ ಗುರುತಿಸಬಹುದು. ಕನ್ನಡ ಕಾವ್ಯ ಸಂದರ್ಭದಲ್ಲಿ ತಮ್ಮ ವಿಶಿಷ್ಟಧ್ವನಿಯಿಂದ ವಸ್ತುವೈವಿಧ್ಯದಿಂದ ಮತ್ತು ವಿಶೇಷ ಕಾಳಜಿಗಳಿಂದ ರೂಪುಗೊಂಡಿರುವ ಜಿ.ಎಸ್.ಎಸ್‌ರವರ ಕಾವ್ಯ ಗಮನಾರ್ಹವಾದುದಾಗಿದೆ. ಪ್ರಸ್ತುತ ಲೇಖನದಲ್ಲಿ ಅವರ ಕವಿತೆಗಳಲ್ಲಿ ಮೂಡಿರುವ ಸಮಾಜದ ಚಿತ್ರಣವನ್ನು ಗುರುತಿಸುವುದು ಪ್ರಮುಖ ಉದ್ದೇಶವಾಗಿದೆ. ಅವರ ಕವಿತೆಗಳಲ್ಲಿ ಪ್ರಮುಖವಾಗಿ ಚಿತ್ರಣಗೊಂಡಿರುವುದು ನಗರ ಸಮಾಜ. (ಕೆಲವೇ ಕೆಲವು ಕವಿತೆಗಳಲ್ಲಿ ಮಾತ್ರ ಗ್ರಾಮೀಣ ಸಮಾಜದ ಚಿತ್ರಣವನ್ನು ಮಾಡಿದ್ದಾರೆ.) ನಗರ ಸಮಾಜದಲ್ಲಿ ದಾರಿ ತಪ್ಪಿಸುವ ವ್ಯಕ್ತಿಗಳ ನಡೆನಳಿಕೆ, ಗೊಂದಲ, ಸಣ್ಣತನ, ಆತ್ಮೀಯರಾಹಿತ್ಯ ನಡೆವಳಿಕೆ. ಕೃತಕತೆ, ಪರಕೀಯತೆ ಮತ್ತು ಏಕಾಕಿತನ ಇವುಗಳು ಸೂಕ್ಷ್ಮಹಂತದಲ್ಲಿ ಪ್ರಧಾನವಾಗಿ ಚಿತ್ರಣ ಹೊಂದಿವೆ. ಅಂದರೆ ಕವಿ ಈ ವಿಷಯಗಳನ್ನು ಮಾತ್ರ ಗಮನಿಸಿದ್ದಾರೆಂದು ಅರ್ಥವಲ್ಲ. ಸಮಾಜದಲ್ಲಿರುವ ಇತರೆ ಮುಖಗಳೂ ಸಾಕಷ್ಟು ಚಿತ್ರಣಗೊಂಡಿವೆ. ಹಿಂದೆ ಹೇಳಿದ ವಿಷಯಗಳು ಸಂಕೀರ್ಣ ನಗರ ಸಮಾಜದಲ್ಲಿ ಇರುವುದಾದರೂ ಅವು ಕೇವಲ 'ವ್ಯಂಗ್ಯ' ಮತ್ತು 'ಕಟಕಿ'ಗಳಾಗದೇ ಸಮತೂಕದ ವಸ್ತುನಿಷ್ಠ ಆರೋಗ್ಯಕರ ಮನಸ್ಸಿನ ಸೃಷ್ಟಿಗಳಾಗಿರುವುದು ಗಮನಾರ್ಹವಾಗಿದೆ. ಆ ಎಲ್ಲ ಕವಿತೆಗಳ ಹಿಂದೆ ನಿಲ್ಲುವ ಸೂಕ್ಷ್ಮ ಪ್ರಾಮಾಣಿಕ ಅಂತರಂಗದ ಮಿಡಿತ ಓದುಗರ ಮನಸ್ಸನ್ನು ತಟ್ಟುತ್ತದೆ. ಸಮಾಜದ ಒಳಿತು ಕೆಡುಕನ್ನು ಗಮನಿಸುತ್ತಾ ಅದರೊಂದಿಗೆ ಸಂಘರ್ಷಬಾಳ್ವೆಯ ಅನಿವಾರ್ಯತೆಯನ್ನು ಒಪ್ಪಿಕೊಂಡು ಬಾಳು ಉತ್ತಮವಾಗಲಿ ಎಂಬ ಆಶಯವನ್ನು ಹೊಂದಿದ ಸೂಕ್ಷ್ಮ ಮನಸ್ಸಿನ ಸ್ಪಂದನಗಳು ಕವಿತೆಗಳಲ್ಲಿ ಮೂಡಿವೆ.

ಕವಿ ಸುತ್ತಮುತ್ತಲಿನ ಸಮಾಜವನ್ನು ನೋಡಿದಾಗ ಅವನ ಮನಸ್ಸಿನಲ್ಲಿ ಅನೇಕ ಭಾವನೆಗಳು ಮೂಡುತ್ತವೆ. ಸಮಾಜದ ವ್ಯವಸ್ಥೆಯಲ್ಲಿ ವ್ಯಕ್ತಿಗಳ ಮೌಲ್ಯಗಳ ವಿಷಯಗಳಲ್ಲಿ ಆದ ಮಾರ್ಪಾಟುಗಳು ಎಷ್ಟೋ ಸಾರಿ ಕವಿಯ ಹಾಸ್ಯಕ್ಕೆ ಅಥವಾ ವಿಡಂಬನೆಗೆ ಗುರಿಯಾಗಿವೆ. 'ಬದ್ಧಜಯಂತಿ' ಎಂಬ ಒಂದು ಕವಿತೆಯಲ್ಲಿ ಬುದ್ಧನಂತಹ ವ್ಯಕ್ತಿ ಅಪರೂಪವಿರಬಹುದು. ಎಲ್ಲ ವಿಷಯಗಳಿಗೂ ಬದ್ಧರಾದ ಜನರು ಎಲ್ಲ ಕಾಲದಲ್ಲಿಯೂ ಉಳಿದು ಬಂದಿದ್ದಾರೆ. ತಮ್ಮ ಕೈಗೆಟುಕದ ಆದರ್ಶಕ್ಕಾಗಿ ವ್ಯಥೆಪಡವೆ ಅದು ಪ್ರಯೋಜನವಿಲ್ಲವೆಂದು ಸಾರುತ್ತಾ ತಮ್ಮ ಮೂಗಿನ ನೇರಕ್ಕೆ ಅನುಕೂಲಸಿದ್ಧಾಂತ ರೂಪಿಸಿಕೊಳ್ಳುವ ಜನರನ್ನು ಹೀಗೆ ಚಿತ್ರಿಸಿದ್ದಾರೆ.

ಯುಗಯುಗಕೊಮ್ಮೆಗೆ ಚರಿತ್ರಕಾರ
ನಮ್ಮನು ಕುರಿತೊಂದಿಷ್ಟು ಮಸಿಯನು
ವ್ಯಯ ಮಾಡದೆಯೇ ಇದ್ದರು ಕೂಡ
ಇದ್ದೀ ಇರುವೆವು ನಾವು !
. . . . . .
. . . . . .
ನಾವು,
ಬೆಪ್ಪರಂತೆ ಮನೆಮಂದಿಯ ಬಿಟ್ಟು
ರಾತ್ರಿಯೊಳೋಡಿದ ಹೇಡಿಗಳಲ್ಲ.
ಮಾರನಿಗೆಂದೂ ನಮ್ಮನೆದುರಿಸಲು
ಅವಕಾಶವನೇ ಕೊಟ್ಟವರಲ್ಲ !

(ಬದ್ಧಜಯಂತಿ—ಅನಾವರಣ)

ಯಾವ ಆದರ್ಶವನ್ನೂ ಇಟ್ಟುಕೊಳ್ಳದೆ ಸ್ವಾರ್ಥದ ಕೋಣೆಯೊಳಗೆ ಅವಿತ ವ್ಯಕ್ತಿಗಳು ತಮ್ಮದೇ ಹಿರಿಯ ತತ್ವ ಎಂದು ನಂಬುವ ಜನ ತಮಗೆ ತಾವೇ ಜಯಕಾರ ಹಾಕಿಕೊಳ್ಳುವುದನ್ನು ಸಹಜ ಹಾಸ್ಯ ಧ್ವನಿಯೊಂದಿಗೆ ಇಲ್ಲಿ ಚಿತ್ರಿಸಿದ್ದಾರೆ.

ಸಮಾಜದಲ್ಲಿ ಬದುಕುವ ವ್ಯಕ್ತಿ ಅನಿವಾರ್ಯವಾಗಿ ಅದರೊಂದಿಗೆ ಹೊಂದಾಣಿಕೆ ಮಾಡಿಕೊಳ್ಳಬೇಕಾಗುತ್ತದೆ. ನಿರಂತರವಾಗಿ ವ್ಯಕ್ತಿ ಬದಲಾದ ಪರಿಸರಕ್ಕೆ ತನ್ನ ಮನೋಭಾವವನ್ನೂ ಕೆಲವು ಮಟ್ಟಿಗೆ ಹೊಂದಾಣಿಕೆ ಮಾಡಿಕೊಳ್ಳಬೇಕಾಗುತ್ತದೆ. ಊರ ಬೀದಿಬೆಳಕಿನ ಮಧ್ಯೆ ಕಾಣುವ ಬೆಳದಿಂಗಳು ವ್ಯಕ್ತಿ ಹಿಂದೆ ಕಂಡ ನೈಜ ಬೆಳದಿಂಗಳ ಚೆಲುವನ್ನು ನೆನಪಿಗೆ ತರುತ್ತದೆ. ಕಾಲಕ್ಕೆ ತಕ್ಕಂತೆ ವ್ಯತ್ಯಾಸಗಳು ನಡೆಯುತ್ತಿವೆಯೇನೊ ಎಂಬಂತೆ ಭಾಸವಾಗುತ್ತದೆ. ಹಿಂದಿನ ಕಾಲದ ಹಾಲಿನಂತೆ ಆ ಕಾಲದ ಬೆಳುದಿಂಗಳೂ ಇತ್ತು. ಈ ಕಾಲದ ಬೆಳದಿಂಗಳು ಈಗಿನ ಕಾಲದ ಹಾಲಿನಂತಿದೆ ಎಂದು ಮೃದು ವಿಡಂಬನ ಶೈಲಿಯಲ್ಲಿ ಹೇಳಿದ್ದಾರೆ.

ನಮ್ಮೂರ ಹಾಲನ್ನು ಅವನು ಕಂಡಿರಲಿಲ್ಲ
ಕಂಡಿದ್ದರೀ ರೀತಿ ಹಾಡುತ್ತಲೇ ಇರಲಿಲ್ಲ

ಪಾಪ, ಆ ಅವನು ಕಂಡದ್ದು ಕುಡಿದದ್ದು
ನಿಜವಾದ ಹಾಲು !
. . . . . . . . .
ಬೆಳಗಾಗ ನಲ್ಲಿ ನೀರಿನ ಸಹಾನುಭೂತಿಯಾನು ಹೊತ್ತು
ತುಂಬಿ ತುಳುಕುವುದು ಹಾಲಿನ ಪಾತ್ರೆ.
. . . . . . . . .
ಅವತ್ತಿನ ಹಾಲೂ ಇಲ್ಲ, ಅವತ್ತಿನ ಬೆಳ್ದಿಂಗಳೂ ಇಲ್ಲ,
ಉಪಮಾನ ಉಪಮೇಯವೆರಡಕ್ಕೂ ಏನಂಥ ದುಃಸ್ಥಿತಿ !
ಈಗಲೋ ವಿದ್ಯುದ್ದೀಪಗಳ ನೀರು ಬೆರೆತ ಬೆಳ್ದಿಂಗಳು
ನಮ್ಮೂರಿನ ಮೇಲೆ !

(ಬಾರಯ್ಯ ಬೆಳುದಿಂಗಳೇ—ಅನಾವರಣ)

ಹಾಸ್ಯದ ಹಾದಿಯಿಂದ ಕವಿ ಎಷ್ಟೋ ಸಾರಿ ಜನರನ್ನು ಮುಟ್ಟುವುದು ಸಾಧ್ಯವಾಗಲಾರದು. ಆಗೆಲ್ಲ ಕವಿ ಸಮಾಜವನ್ನು ಹಾಸ್ಯಲೇಪಿತ ವ್ಯಂಗ್ಯದಿಂದ ಮುಟ್ಟಲು ಯತ್ನಿಸಬೇಕಾಗುತ್ತದೆ. ಸಹಜವಾಗಿ ಈ ರೀತಿ ಹೇಳುವಾಗ ಭಾಷೆ ಚುರುಕಾಗಿಯೂ ಹರಿತವಾಗಿಯೂ ಇರಬೇಕಾಗುತ್ತದೆ. ಸಾಮಾನ್ಯವಾಗಿ ನಡೆಯುವ ಗಾಂಧೀಜಿಯವರ ಭಾವಚಿತ್ರದ ಅನಾವರಣದಂತಹ ವಿಷಯಗಳು ಅರ್ಥರಹಿತವಾಗಿ ಭಾಸವಾಗುತ್ತವೆ. ಆವರಣವೇ ಇರದ ವ್ಯಕ್ತಿಗೆ ಇಲ್ಲದೆ ಇರುವ ತೆರೆಯನ್ನು ಹಾಕಿ ಮತ್ತೆ ತೆರೆ ತೆರೆಯುವಾಟ ಹಾಸ್ಯಾಸ್ಪದವಾಗಿ ಕಾಣುತ್ತದೆ.

ಅನಾವರಣವಾಯಿತಂತೆ ಗಾಂಧೀಜಿ ಚಿತ್ರಕೆ
ಸತ್ತ ಗಾಂಧಿ ಅತ್ತನೇನೊ ನಡೆದ ಈ ವಿಚಿತ್ರಕೆ !
ಅನಾವರಣವಾಗಬೇಕು ಮೊದಲು ನಮ್ಮ ಹೃದಯಕೆ
ಅನಾವರಣವಾದ ಮೇಲೆ ಸಿದ್ಧವಾಗು ಶಿಕ್ಷೆಗೆ

(ಅನಾವರಣವಾಯಿತಂತೆ—ಅನಾವರಣ)

ಲೋಕದಲ್ಲಿ ಆದರ್ಶ, ಪ್ರಾಮಾಣಿಕತೆಗಳೆಂದು ಏನೇನೊ ಹೇಳುತ್ತಾರೆ. ಅವೆಲ್ಲವನ್ನು ಗಮನಿಸದೆ ಮುಂದಾಗುವುದನ್ನು ಕಲಿ ಎಂದು ವ್ಯಂಗ್ಯದಿಂದ ಒಂದು ಕವಿತೆಯಲ್ಲಿ ಹೇಳಿದ್ದಾರೆ. ಪರಸ್ಪರ ಲಾಭಾವಲಂಬಿಗಳ ನಡೆವಳಿಕೆ ಹೇಗಿರುತ್ತದೆಂದು ಪದ್ಯದ ಕೊನೆಯು

ಆದರ್ಶ_ಗೀದರ್ಶ
ಬರಿ ಬಣಗು ಕಂಥೆ
ಪುಸ್ತಕದ ಬದನೆ ಕಾಯ್
ತಿನುವುದಕೆ ಬಂತೆ ?
. . . . . .
ಹೊಗಳಿ ಹೊಗಳಿಸಿಕೊಳುವ
ಚಿಂತೆಯೇ ಚಿಂತೆ

ಒಂಟಿ ಮದುವೆಗೆ ಕತ್ತೆ
ಪದ ಹೇಳಿದಂತೆ

(ಇದು ಲೋಕವಂತೆ—ದೇವಶಿಲ್ಪ)

ಸಾಲುಗಳಲ್ಲಿ ಹರಿತವಾಗಿ ಸೂಚಿಸಿದ್ದಾರೆ.

ಶೋಷಿಸುವ ಜನ ಎಲ್ಲ ಕಾಲದಲ್ಲೂ ಇದ್ದಾರೆ. ಅವರಿಗೆ ಶೋಷಿಸುವ ನೂರು ದಾರಿಗಳಿವೆ. ಹೊಸ ನೂರಾರು ಮಾರ್ಗಗಳನ್ನು ನಿರ್ಮಿಸಲು ಸಮರ್ಥರಾಗಿದ್ದಾರೆ. ಇಂತಹ ಜನ ನಮ್ಮ ಮಧ್ಯವೇ ಇದ್ದಾರೆ. ರಾಮ, ಕೃಷ್ಣ, ಬುದ್ಧ, ಬಸವ ಹೇಗೆ ನಮ್ಮವರೋ ಹಾಗೆಯೇ ಶೋಷಿಸುವ ಜನರೂ ಕೂಡ 'ನಮ್ಮವರೇ.' ಎಷ್ಟೇ ಅವತಾರಗಳು ಬಂದರೂ ಅವರ ನಿರ್ಮೂಲನ ಅಸಾಧ್ಯವಾಗಿದೆ. ಆದ್ದರಿಂದ ಜನರೆನ್ನುವಂತೆ ಅವತಾರ ಪುರುಷ 'ಕೃಪಾಳುವೇ' ಇರಬೇಕು. ಅಂತಹ ಶೋಷಿಸುವ ಜನರನ್ನು ಏನೂ ಮಾಡಲಾರದ ಅವತಾರ ಪುರುಷನ ಅವತಾರಗಳು ಒಂದು ರೀತಿಯಲ್ಲಿ ವ್ಯರ್ಥವೇ. ಶೋಷಿಸುವ ಜನರ ಸ್ವರೂಪವನ್ನು ಕವಿ ಹೀಗೆ ಕೊಡುತ್ತಾರೆ.

ನೂರಾರು ರೀತಿಯಲಿ ಅಡ್ಡಹಾದಿಯ ಕಡಿದು
ಗುಡ್ಡವ ದಾಟಿ ಚಿನ್ನಕ್ಕೆ ಕನ್ನ ಕೊರೆಯುವ ಜನರು
ಬೆವರಿಲ್ಲದೆಯೆ ಬಳಿಗೆ ಬಂದುವ ತುಡುಕಿ, ಅಡಕಿ
ಬ್ಯಾಂಕಿನಲಿ ಬೆಳೆವ ಬಡ್ಡಿಗೆ ತುಡಿವ ತಾಪಸಿಗಳು

(ನಮ್ಮವರೆ ಇವರೆಲ್ಲರೂ—ಅನಾವರಣ)

ಕೊನೆಯ ಸಾಲಿನಲ್ಲಿ ಬರುವ ಅವತಾರ ಪುರುಷನ ವಿಷಯದಲ್ಲಿ 'ಅವನಿಗೊಂದಿಷ್ಟಾದರೂ ರಜಾ ದೊರೆಯಲೆಂದು ಆಶೀರ್ವದಿಸು' ಎಂಬ ಭಾಗ ಇಂತಹ ವಿಷಯದಲ್ಲಿ ದೇವರನ್ನು ನಂಬದೆ ಮಾನವಪ್ರಯತ್ನ ಸರಿ ಎಂಬುದನ್ನು ಸೂಚ್ಯವಾಗಿ ಧ್ವನಿಸುತ್ತದೆ.

'ಜಾತ್ರೆ' ಎಂಬ ಕವಿತೆ ಮುಗ್ಧಜನರನ್ನು ಶೋಷಿಸುವ ಪೂಜಾರಿ ಶತಮಾನಗಳಿಂದಲೂ ಜನರ ಮೌಢ್ಯವನ್ನೇ ಮೂಲಧನವನ್ನಾಗಿಸಿಕೊಂಡು ನಡೆಸುವ ವ್ಯವಹಾರವನ್ನು ಚಿತ್ರಿಸುತ್ತದೆ. ಜಾತ್ರೆಯಂತಹ ಹಬ್ಬಗಳನ್ನು ಮುಂದಿಟ್ಟುಕೊಂಡು ತೀರದ ದಾಹದ ಪೂಜಾರಿಯ ಸ್ವಾರ್ಥಪರ ವ್ಯವಹಾರವನ್ನು ನೇರವಾಗಿ ಖಂಡಿಸಲಾಗಿದೆ.

ನಿನಗೋ ಮಡಿ, ಪುರಾತನ ಮಂತ್ರ ತಂತ್ರದ ಗರುಡಿ
ಯಲ್ಲಿ ಸರಿತನ ನೀನು ನಿನಗೆ ಬೇಕಾದದ
ಬರೀ ದಕ್ಷಿಣೆ ಗೊತ್ತು, ನೀನೆ ರಚಿಸಿದ್ದು ಈ
ನಂಬಿಕೆಯ ವ್ಯೂಹ, ನಿನಗೊ ತೀರದ ದಾಹ.

(ಜಾತ್ರೆ—ಅನಾವರಣ)

ಈ ಕವಿತೆಯೊಂದಿಗೆ ಶ್ರೀ ಕುವೆಂಪು ಅವರ 'ದೇವರು–ಪೂಜಾರಿ' ಕವಿತೆಯನ್ನು ಹೋಲಿಸಿದರೆ, ಕುವೆಂಪು ಅವರ ಕವಿತೆ ಹೆಚ್ಚು ಪ್ರಭಾವ ಪೂರ್ಣವಾಗಿ ಶೋಷಿಸುವ ಪೂಜಾರಿಯ ಚಿತ್ರವನ್ನು ಕೊಡುವುದು ಕಂಡುಬರುತ್ತದೆ.

'ಶನಿದೇವರ ವಿಗ್ರಹ' ಎಂಬ ಕವಿತೆಯಲ್ಲಿ 'ಶನಿಗು ಕೂಡ ಶನಿಕಾಟ'ವೆಂಬಂತೆ ದೇವರ ವಿಗ್ರಹವನ್ನು ಮುಂದಿಟ್ಟುಕೊಂಡು ನಡೆಸುವ ಶೋಷಣೆ ಕವಿಗೆಆಶ್ಚರ್ಯವನ್ನು ತರುತ್ತದೆ. ದರ್ಪದ ದೇವರಾದ 'ಶನಿದೇವರು' ಭಿಕ್ಷುಕರ ಸಾಲಿನಲ್ಲಿ ನಿಲ್ಲುವ ಸ್ಥಿತಿ ಬಂದಿರುವುದು ಕವಿಯನ್ನು ವಿಸ್ಮಯದಲ್ಲಿ ನಿಲ್ಲಿಸುತ್ತದೆ.

ವ್ಯಕ್ತಿ ತನ್ನ ಪಾಡಿಗೆ ತಾನು ಇತರರಿಗೆ ತೊಂದರೆಯಾಗದಂತೆ ಬದುಕಿದರೂ ಸುತ್ತ ಇರುವ ಸಮಾಜದ ಜನ ತಮ್ಮ ಸಣ್ಣತನ ತೋರಿಸದೆ ಬಿಡುವುದಿಲ್ಲ. ಅಂಥವರು ತಾವು ಹಾಳಾಗುವುದಿರಲಿ ಇತರರಿಗೂ ತೊಂದರೆ ಕೊಡುತ್ತಾರೆ. ಆದರೂ ಅವರು 'ನಮ್ಮವರು' ಅವರು ಆಡುವ 'ಆಟಗಳು' ಕಾಡುವ 'ಕಾಟಗಳು' ಒಂದೇ ಎರಡೇ? ನೇರವಾಗಿ ಬಂದು ಎದುರಿಸಿದರೆ ಎಂತಹ ವ್ಯಕ್ತಿಯನ್ನಾದರೂ ಎದುರಿಸಬಹುದು. ಆದರೆ ತಾವು ನೇರವಾಗಿ ರಂಗದ ಮೇಲೆ ಬರದೆ 'ಬೆನ್ನಿನಲ್ಲಿ ಇರಿಯುವ' ವಂಚಕರು ಧೈರ್ಯವಿಲ್ಲದೆ ತಮ್ಮ 'ಚಂಚಾ'ಗಳನ್ನು ಇರಿಯುವ ಕಾರ್ಯಕ್ಕೆ ಬಳಸಿಕೊಳ್ಳುತ್ತಾರೆ.

ಪೀಚುಗಳ ಕೈಯಲ್ಲಿ ಪೀಪಿ ಊದಿಸಿ
ಚಪ್ಪಾಳೆ ತಟ್ಟುತ್ತಾರೆ

(ನಮ್ಮವರು—ಗೋಡೆ)

ತಮ್ಮಿಂದಲೇ ಸರ್ವಸ್ವವೂ ನಡೆಯುವುದೆಂಬ ಅಹಂಭಾವ ತುಂಬಿ ತುಳುಕುತ್ತದೆ. ಅಂತಹ ವ್ಯಕ್ತಿಗಳ ತೊಳಲಾಟ ಹೀಗೆ ಚಿತ್ರಣಗೊಂಡಿದೆ.

ತಮ್ಮ ಸ್ವಿಚ್ಚಿಂದಲೇ ಎಲ್ಲಾ ಬಲ್ಬುಗಳೂ ಹತ್ತುತ್ತವೆಂದು
ಕಗತ್ತಲಲ್ಲೇ ತಡಕಾಡುತ್ತ
ನಟ್ಟನಡುರಾತ್ರಿ ಮೆಟ್ಟಿಲು ಹತ್ತಿ
ಮನೆಯ ಬಾಗಿಲು ಬಡಿದು
ನಿದ್ದೆ ಕೆಡಿಸುತ್ತಾರೆ

(ಅದೇ)

ಸಮಾಜದಲ್ಲಿ ಕೈಗೆ ಸಿಗುವ ವಂಚಕರು ಇದ್ದಂತೆ ಕೈಗೆ ಸಿಗಲಾರದ ವಂಚಕರೂ ಇರುತ್ತಾರೆ. ಅಂತಹ ಶತ್ರುಗಳನ್ನು ಎದುರಿಸಲು ಆಶ್ವೀಜಮಾಸ ಯೋಗ್ಯ ಎಂಬ ಪ್ರಸ್ತಾಪ ಬಂದು ಯಾರ ಮೇಲೆ, ಏಕೆ? ಮತ್ತು ಅದಕ್ಕೆ ಬೇಕಾದ ತಾಕತ್ತು ಈ ಎಲ್ಲ ವಿಷಯಗಳು 'ಒರೆಗಲ್ಲು' ಕವಿತೆಯಲ್ಲಿ ಸ್ಪಷ್ಟವಾಗಿ ಮೂಡಿವೆ. ಸಮಾಜದಲ್ಲಿ ಇರುವ ವಂಚಕ ಮಹಾಶಯರ ಚಿತ್ರ ಉಜ್ವಲವಾಗಿ ಮೂಡಿರುವುದನ್ನು ಈ ಕವಿತೆಯಲ್ಲಿ ಗಮನಿಸಬಹುದು.

ನೂರಾರು ಹಾಲುಬಿಳಿ ಕೊರಳಿನ ಸುತ್ತ ಕಂಸನ ಬೆರಳ-
ನೊತ್ತುಗಳ ತೋರಿಸಲೆ?
ನಕಲಿ ಪಾರ್ಥರಿಗಾಗಿ ಏಸೋ ಜನ ಏಕಲವ್ಯರ ಬೆರಳ
ಕತ್ತರಿಸುವಾಚಾರ್ಯತಂತ್ರಗಳ ಗರುಡಿಗಳ ತೋರಿಸಲೆ?

ಕೆಂಪುಟೇಪಿನ ಕೋಟೆಯಲಿ ಸೆರೆಯಾಗಿ ಬಿದ್ದಿರುವ
ನೂರಾರು ಮುಗ್ಧರದೃಷ್ಟಗಳ ತೋರಿಸಲೆ?
ಕ್ಷಣಮಾತ್ರದಲ್ಲಿ ಸ್ಮಾರಕ ನಿಧಿಗೆ ಗೋರಿಕಟ್ಟುವ
ಕುಶಲ ರೂವಾರಿಗಳ ತೋರಿಸಲೆ!
'ಕ್ರೂರನಕ್ರಾಕುಲದೊಳಿಡಿದಿರ್ದ ಪೆರ್ಮಡು ಗಭೀರ ನಿರ್ಮಲ ಜಲದ
ಗೊತ್ತುಗಳ ತೋರಿಸಲೆ?
ಇದ್ದ ಬೆಳಕನ್ನೆಲ್ಲ ಬಚ್ಚಿಟ್ಟು, ಸುತ್ತ ಮಂಡಲ ಹಾಕಿ
ಮಲಗಿರುವ ಫಣಿಪತಿಯ ಹುತ್ತಗಳ ತೋರಿಸಲೆ?
ಹುಲ್ಲು ತುರುಕಿದ ಕರುವಿನಾಕಾರಗಳ ತೋರಿ ಕೆಚ್ಚಲ ಕರೆವ
ನಿಪುಣರನು ತೋರಿಸಲೆ?

(ಒರೆಗಲ್ಲು—ಅನಾವರಣ)

ಈ ಎಲ್ಲವನ್ನು ಎದುರಿಸಲು ನಿಯತ್ತು ಮತ್ತು ತಾಕತ್ತುಗಳ ಅವಶ್ಯಕತೆ ಇದೆಯೆಂಬುದನ್ನು ಹೇಳಲಾಗಿದೆ.

ಸಮಾಜ ತನ್ನ ಆದರ್ಶದ ಹತ್ತಿರ ಬರದಿದ್ದಾಗ ಮತ್ತು ತನ್ನ ಮಾತಿಗೆ ಜನತೆ ನಿರೀಕ್ಷಿತ ಪ್ರತಿಕ್ರಿಯೆ ಕೊಡುತ್ತಿಲ್ಲವೆಂದೆನಿಸಿದಾಗ ನಿರಾಶೆ ಕವಿಯುತ್ತದೆ. ಇಂತಹ ಸನ್ನಿವೇಶಗಳಲ್ಲಿ ಲೋಕದ ವಿಕೃತ ನಡೆವಳಿಕೆಗಳು ಸರಿಹೋಗಲಾರವೇನೊ ಎಂಬ ಸಂಶಯ ಮನಸ್ಸನ್ನು ಕೊರೆಯುತ್ತದೆ. ಅಷ್ಟಗ್ರಹಕೂಟವಾಗಿ ಸರ್ವನಾಶವಾಗುತ್ತದೆಂದು ನಂಬಿದ ಜನ ಎಂದೂ ಇಲ್ಲದ ಭಜನೆ, ಪ್ರಾರ್ಥನೆ, ಕೀರ್ತನೆಯಲ್ಲಿ ತೊಡಗಿದ್ದವರು ತೊಂದರೆಯ ಗಡು ಮುಗಿದ ನಂತರ ಮೊದಲಿನಂತೆ ತಮ್ಮ ದುರ್ವ್ಯವಹಾರ ಮೊದಲು ಮಾಡುತ್ತಾರೆ. ಇಂತಹ ಜನರ ದೇವತಾರಾಧನೆಯೂ ಕೂಡ ತೋರಿಕೆ ಮತ್ತು ಸ್ವಾರ್ಥಪರವಾದದ್ದು ಅವರ ಸ್ವಭಾವ.

ಇವರ ಭಕ್ತಿಯ ರೀತಿ,
ದಬ್ಬೆ ಬಿಚ್ಚಿದ ಬಾಲ!
ನಾಳೆಯ ದಿವಸ ಕಾಲಡಿಯ ನೆಲ ಭದ್ರವೆಂದರಿತಾಗ,
ಇನ್ನೊಂದು ಸಲ ಅಷ್ಟಗ್ರಹ ಕೂಟವಾಗುವತನಕ
ಇವರನ್ನು ಹಿಡಿಯುವರು ಯಾರು?

(ಅಷ್ಟಗ್ರಹಕೂಟದ ಇರುಳು—ಅನಾವರಣ)

ಒಂದು ವರ್ಗದ ಜನ ಸಮಾಜದಲ್ಲಿ ಸದಾ ಕೊಳಕನ್ನೇ ಕಾಣುತ್ತ ಸುಂದರ ವಸ್ತುಗಳ ಕಡೆ ದೃಷ್ಟಿ ಹೊರಳಿಸಿರುವುದಿಲ್ಲ. ಅಂತಹ ವ್ಯಕ್ತಿಗಳು ಕೇವಲ ಅಸುಂದರ ವಿಷಯಗಳನ್ನು ಮಾತ್ರ ಗಮನಿಸುತ್ತಾರೆ. ಸಮಾಜದಲ್ಲಿ ಕೇವಲ ಬಡತನ, ಕತ್ತಲು, ವಿಫಲತೆ ಇವನ್ನೇ ಕಾಣುವ ಇವರಿಗೆ ಅವಕ್ಕೆ ವಿರುದ್ಧವಾದ ವಸ್ತುಸ್ಥಿತಿಯ ಇರುವಿಕೆಯನ್ನು ತೋರಿಸಿಕೊಡುವ ಭಾವ 'ಜನರು' ಎಂಬ ಕವಿತೆಯಲ್ಲಿ ಮೂಡಿದೆ.

ಎಂಥ ಹುಚ್ಚು ಜನರು ಇವರು
ಕೊಚ್ಚೆಯನೇ ಕಾಂಬರು!

ಕೊಚ್ಚೆಯುಂಡು ದಡದಿ ಬೆಳೆದ
ಹಚ್ಚ ಹಸುರ ಕಾಣರು !

(ಜನರು—ದೀಪದ ಹೆಜ್ಜೆ)

ಮಾನವನ ಎಲ್ಲ ನೋವನ್ನು, ಅಳಲನ್ನು ನುಂಗಿ ನಗು ತರುವ ಶಕ್ತಿ ಬಂದು ರಕ್ಷಿಸುವ ವರೆಗೂ ಅಸಹ್ಯವಾದ ಈ ಬಾಳನ್ನು 'ರೌರವ'ವಾದರೂ ಸಹಿಸಿಕೊಳ್ಳುವ ತಾಳ್ಮೆ ಇರ ಬೇಕು. ಹಾಗೆ ರಕ್ಷಿಸ ಬರುವ ಶಕ್ತಿಯ ಸ್ವರೂಪವನ್ನು ಹೀಗೆ ಕೊಡುತ್ತಾರೆ.

ಅಡಿನೆಲದಲ್ಲಿ ಕಣ್ ಮುಗಿಲಲಿ ರೆಕ್ಕೆಯೊಳಗೆ ವಿಶ್ವವ
ತಬ್ಬುವಂಥ ಗರುಡ ಶಕ್ತಿ ಬರುವವರೆಗು ರೌರವ !

(ಅದೇ)

ಆಧುನಿಕ ಪರಿಸರದಲ್ಲಿ ವ್ಯಕ್ತಿ ವ್ಯಕ್ತಿಗಳ ನಡುವೆ ಅನೇಕ ಕಾರಣಗಳಿಂದ ಕಂದರ ಗಳು ಏರ್ಪಟ್ಟು ಸಂಪರ್ಕ ಕಡಿದು ಆಗುವ ಅನಾಹುತವನ್ನು ಧ್ವನಿಪೂರ್ಣವಾಗಿ ಅಭಿ ವ್ಯಕ್ತಿಗೆ ಒಳಗು ಮಾಡಿದ್ದಾರೆ. ಇಬ್ಬರ ನಡುವಿನ ಸಂಪರ್ಕ ಮಾಧ್ಯಮಗಳಾದ ತಂತಿ- ಗಳುರುಳಿ ಸೇತುವೆ ನಾಶವಾಗಿ ಸಂಪರ್ಕ ಸೇತು ಕಡಿದ ಚಿತ್ರ ಹೀಗೆ ಮೂಡಿದೆ.

'ನಮ್ಮ ಮಧ್ಯೆ ಸದಾ ಗಾಳಿ, ಮಳೆ, ಕೆಸರು ;
ತಂತಿ ಕಂಬಗಳುರುಳಿ
ಇದ್ದ ಸೇತುವೆ ಮುರಿದು
ಅಲ್ಲಿನ ಗಾಡಿ ಅಲ್ಲೇ
ಇಲ್ಲಿನ ಗಾಡಿ ಇಲ್ಲೇ ?'

(ವ್ಯರ್ಥ—ಗೋಡೆ)

ಈ ಸಾಲುಗಳು ವ್ಯಕ್ತಿಗಳ ಪರಸ್ಪರ ಸಂಪರ್ಕರಾಹಿತ್ಯವನ್ನು ಸಮರ್ಥವಾಗಿ ಧ್ವನಿಸು ತ್ತವೆ. ಇಂತಹ ಸ್ಥಿತಿಯಲ್ಲೂ ಸಂಪರ್ಕಕ್ಕೆ ಅವಕಾಶವಿದ್ದೂ ಕಿಟಕಿ ಮುಚ್ಚಿ ಕೂತ ಮನಸ್ಸು ಎಲ್ಲ ಬೆಳಕಿಗೆ ಬಾಗಿಲನ್ನು ಹಾಕುತ್ತದೆ. ವ್ಯಕ್ತಿ ವ್ಯಕ್ತಿ ಸಂಬಂಧದ ಫಲವಾಗಿ ಅರಳಿದ್ದ ಸುಂದರ ಮೊಗ್ಗುಗಳನ್ನು ಬಡಿದು, ಒಡೆದ ಕನ್ನಡಿಯಲ್ಲಿ ಮುಖನೋಡುವ, 'ತಲೆಯನ್ನು ಗಾಳಿ ಊಳಿಡುವ ಪಾಳು ಗುಡಿಮಾಡಿ', ಇದ್ದ ಬೆಳಕನ್ನೆಲ್ಲ ನಂದಿಸುತ್ತ ಕತ್ತಲಲ್ಲಿ ತೊಳಲುವ ಪರಿಸ್ಥಿತಿಯ ಚಿತ್ರಗಳು ಸಂಬಂಧ ರಾಹಿತ್ಯದಿಂದ ಮೂಡುವ ಮನಸ್ಸಿನ ವಿಕಾರಗಳನ್ನು ಸಮರ್ಥವಾಗಿ ಪ್ರತಿಮಿಸುತ್ತವೆ. ಅದಕ್ಕೆ ಕಳಶಪ್ರಾಯ ವೆಂಬಂತೆ ಕವಿತೆಯ ಕೊನೆಯ ಸಾಲುಗಳು ನಗರದ ಬದುಕಿನ ತೀರಾ ಪರಿಚಿತ ಸಂಪರ್ಕ ಮಾಧ್ಯಮದ ಚಿತ್ರ ಕೊಟ್ಟೂಕೂಡ ಅನುಭವಕ್ಕೆ ತಕ್ಕ ವಸ್ತು ಪ್ರತಿರೂಪವನ್ನು ತಟ್ಟನೆ ಹಿಡಿದುಕೊಡುತ್ತವೆ. ಕವಿತೆಯ ಆರಂಭದಿಂದಲೇ ಬೆಳೆದು ಬಂದು ತಟ್ಟನೆ ಗೋಚರಿಸಿ ಅರ್ಥವಲಯವನ್ನು ತೆರೆಯುತ್ತದೆ.

'ರಾಂಗ್ ನಂಬರಿಗೆ ಟೆಲಿಫೋನು ಮಾಡಿ
ಉತ್ತರಕ್ಕೆ ಕಾಯುತ್ತ ಕೂರುತ್ತೇವೆ.'

(ಅದೇ)

ಇನ್ನೊಂದು ಕವನದಲ್ಲಿ ವ್ಯಕ್ತಿ ವ್ಯಕ್ತಿಗಳ ಮಧ್ಯೆ ಆಗಾಗ್ಗೆ ಅನೇಕ ಕಾರಣಗಳಿಂದ ಏಳುವ ಅನೇಕ ವಿಧದ ಗೋಡೆಗಳು ಹೇಗೆ ವ್ಯಕ್ತಿಯ ಬದುಕಿನಲ್ಲಿ ಅಸಹನೀಯನೋವನ್ನು ನಿರ್ಮಿಸಬಲ್ಲವು ಎಂಬುದು ಅಭಿವ್ಯಕ್ತಿ ಪಡೆದಿದೆ. ವಾಸ್ತವವಾಗಿ ವ್ಯಕ್ತಿಗಳ ಮಧ್ಯೆ ಬೆಳೆದಿರುವ ಗೋಡೆ ಇಬ್ಬರಿಗೂ ಅನಪೇಕ್ಷಿತವೇ ಇರಬಹುದು. ಆದರೆ ಒಮ್ಮೆ ಅದು ಯಾವುದೇ ಕಾರಣದಿಂದ ಎದ್ದಿತೆಂದರೆ ಅದುವರೆಗಿನ ವ್ಯಕ್ತಿ, ವ್ಯಕ್ತಿ ಸಂಬಂಧಕ್ಕೆ ಬೆಲೆಯೇ ಇಲ್ಲವೇನೊ ಎಂಬಂತೆ ಅದುವರೆಗಿನ ಪ್ರೀತಿ, ವಿಶ್ವಾಸದಂತಹ ಮಾನವೀಯ ಮೌಲ್ಯಗಳು ಹೊಳೆಯಲ್ಲಿ ಹುಳಿ ಕಿವಿಚಿದಂತಾಗುತ್ತವೆ. ಅನೇಕ ಸಂಕುಚಿತ ಗೋಡೆಗಳನ್ನು ಕಟ್ಟಿಕೊಂಡು ವ್ಯಕ್ತಿ ವ್ಯಕ್ತಿಗಳ ಮಧ್ಯೆ ಮಾಡಿಕೊಳ್ಳುವ 'ಅಸುಖದ ಉಪದ್ರ'ದ ಯಾತನೆಯ ಅನುಭವ 'ಗೋಡೆ' ಕವನದಲ್ಲಿ ಮೂಡಿ ಬಂದಿದೆ. ಗೋಡೆ ನಿರ್ಮಿತಿಯ ಪರಿಣಾಮವಾಗಿ ಉಂಟಾದ ಸ್ಥಿತಿಯನ್ನು ಹೀಗೆ ಹೇಳಲಾಗಿದೆ.

'ನಾನೂ ನೀನೂ ಬಹು ಕಾಲದಿಂದ ನೀರೆರೆದು ಬೆಳೆಸಿದ
ಹೂವಿನ ತೋಟ ಸೀದು ಹೊಗೆಯಾಡುತ್ತದೆ.
ಹೊಗೆಯಲ್ಲಿ ಉಸಿರು ಕಟ್ಟಿಕೊಂಡು
ನಾನು ಮತ್ತು ನೀನು
ಗೋಡೆಯೆರಡೂ ಬದಿಗೆ
ನರಳಿ ಹೊರಳುತ್ತೇವೆ
ಭೋರೆಂಬ ಗಾಳಿ ಮನೆ ಸುತ್ತ ಊಳಿಡುತ್ತದೆ.'

(ಗೋಡೆ—ಗೋಡೆ)

ಒಮ್ಮೆ ಎದ್ದು ನಿಂತ ಗೋಡೆ ಸುಲಭವಾಗಿ ಅಳಿಯುವುದಿಲ್ಲ. ಗೋಡೆ ಎದ್ದು ನಿಲ್ಲಲು ವ್ಯಕ್ತಿಗಳು ಕಾರಣರಾದರೂ ಎದ್ದು ನಿಂತ ಗೋಡೆ ವ್ಯಕ್ತಿಗಳ ಶಕ್ತಿಯನ್ನು ಮೀರಿ ನಿಲ್ಲುತ್ತದೆ. ಆಗ ಗೋಡೆ ಕರಗುವ ಸ್ಥಿತಿಗಾಗಿ ಕಾಯುತ್ತಾ ಕೂರಬೇಕಾಗುತ್ತದೆ.

ಪ್ರತಿಕ್ಷಣವೂ ಪರಿವರ್ತನೆಯ ಕಡೆ ಹೊರಳುವ ಬದುಕಿನ ತುಡಿತವನ್ನು ಜಿ.ಎಸ್.ಎಸ್. ರವರು ಚೆನ್ನಾಗಿ ಅರಿತಿದ್ದಾರೆ. ಬದಲಾದ ಬದುಕು. ಬದಲಾದ ಮೌಲ್ಯ ಇವುಗಳು ಸಮರ್ಥವಾಗಿ ಪ್ರತಿಮಾವರಣದಲ್ಲಿ ರೂಪುಗೊಂಡಿರುವುದನ್ನು 'ಮುಂಬೈ ಜಾತಕ' ದಂತಹ ಕವಿತೆಯಲ್ಲಿ ಗಮನಿಸಬಹುದು. ನೈಜ ಬದುಕಿನ ಗಟ್ಟಿ ನೆಲೆಯಿಂದ ದೂರವಾಗಿ ಮನುಷ್ಯ ಬದುಕುತ್ತಿರುವ ಪರಿಸರ ಆ ನೆಲೆಯಲ್ಲಿ ಚಿಗುರುವ, ಬೆಳೆಯುವ, ಅರಳುವ ಸ್ಥಿತಿ ಆಧುನಿಕ ಯಾಂತ್ರಿಕ ನಗರದ ಬದುಕಿಗೆ ಹಿಡಿದ ಕನ್ನಡಿಯಾಗಿ ಕವಿತೆ ವಿವಿಧ ಮಟ್ಟದಲ್ಲಿ ತನ್ನ ಸ್ವಾರಸ್ಯವನ್ನೂ ಧ್ವನಿ ಸಾಮರ್ಥ್ಯವನ್ನೂ ತೆರೆಯುತ್ತಾ ಹೋಗುತ್ತದೆ. ಕವಿತೆಯ ಆರಂಭದಿಂದ ಅಂತ್ಯದವರೆಗೆ ಬರುವ ಒಂದೊಂದು ನುಡಿ ಚಿತ್ರದಲ್ಲಿಯೂ ತುಳುಕುವ ಹಾಸ್ಯ-ವ್ಯಂಗ್ಯ-ಕರುಣೆಗಳು ಮುಕ್ಕೂಟಗೊಂಡೂ ಕೂಡ ಕವಿ ಸಾಧಿಸಿರುವ 'ಭಾವತಾಟಸ್ಥ್ಯ' ಅದ್ಭುತವಾದುದಾಗಿದೆ.

'ಹುಟ್ಟಿದ್ದು : ಆಸ್ಪತ್ರೆಯಲ್ಲಿ ;
ಬೆಳೆದದ್ದು : ಬಸ್ಸು ಟ್ರಾಂ ಕಾರು ಟ್ಯಾಕ್ಸಿ ಎಲೆಕ್ಟ್ರಿಕ್ ಟ್ರೇನುಗಳಲ್ಲಿ.
ಕುಡಿದದ್ದು : ಕಾಣದೆಮ್ಮೆಯ ಕೆಚ್ಚಲು ಕರೆದು ಕಳುಹಿಸಿದ
ಬಾಟ್ಲಿಯ ಹಾಲು, ಗ್ರೈಪ್‌ಸಿರಪ್ ಹಾರ್ಲಿಕ್ಸ್ ಇತ್ಯಾದಿ

. . . . . . . .

ತಂದೆ : ಬೆಳಗಿಂದ ಸಂಜೆಯತನಕ ಕಣ್ಮರೆಯಾಗಿ
ಒಮ್ಮೊಮ್ಮೆ ರಜಾ ದಿನದಲ್ಲಿ ಕಣ್ಣಿಗೆ ಕಂಡು
ಕುಳಿತು ಕೆಮ್ಮುವ ಪ್ರಾಣಿ.' (ಮುಂಬೈಜಾತಕ—ತೆರೆದ ದಾರಿ)

ಈ ಎಲ್ಲ ಸಾಲುಗಳು ನಿಸರ್ಗ ದೂರದ ಬದುಕನ್ನು ತನ್ಮೂಲಕ ಮಾನವೀಯ ಸಂಬಂಧದ ಅರ್ಥರಾಹಿತ್ಯವನ್ನೂ, ಪರಕೀಯ ಸ್ಥಿತಿಯನ್ನೂ ಸಮರ್ಥವಾಗಿ ಕಟ್ಟಿಕೊಡುತ್ತವೆ. ಕವಿತೆಯಲ್ಲಿ ಬರುವ ಹುಟ್ಟಿದ್ದು, ಬೆಳೆದದ್ದು, ಕುಡಿದದ್ದು, ಕಂಡದ್ದು, ಕಲಿತದ್ದು, ತಾಯಿ, ತಂದೆ, ವಿದ್ಯೆ, ಮತ್ತು ಜೀವನ ಈ ವಿವಿಧ ಹಂತದ ವಿಷಯಗಳು ಆಧುನಿಕ ಜೀವನದಲ್ಲಿ ಆಗಿರುವ ಬದಲಾವಣೆಗಳನ್ನು ಕ್ರಮವಾಗಿ ಕೊಟ್ಟು ಕವನಕ್ಕೆ ಸಾವಯವ ಬಂಧವನ್ನು ಒದಗಿಸಿವೆ. 'ಇಷ್ಟಾಗಿ ಕವಿ ಈ ಜಾತಕದಂಥ ರಚನೆಯಿಂದ ಹೇಳುವಾಗಿನ ವ್ಯಂಗ್ಯತಾಟಸ್ಥ್ಯ ಗಮನಾರ್ಹವಾದುದು. ಅದು ಜಾತಕದಂಥ ರಚನೆಯಿಂದ ಸಾಧ್ಯವಾಗ ಬಹುದಾದರೂ ಅದರ ಮೂಲಕ ಇಷ್ಟೊಂದು ಸಂಕೀರ್ಣವಾದ ಅನುಭವವನ್ನು ಧ್ವನಿಸುವಂತೆ ದುಡಿಸಿಕೊಂಡದ್ದು ಈ ಕವಿತೆಯ ಹೆಚ್ಚುಗಾರಿಕೆ. ಮೊದಲಿನ ಭಾಗಗಳಲ್ಲಿ ಬರುವ ಕಂಡದ್ದು ಎಂಬ ಭಾಗದಲ್ಲಿ ಬರುವ 'ಅವಸರದ ಹೆಜ್ಜೆಯ ಮೇಲೆ ಸರಿವ ಸಾವಿರ ಕೊರಳು' ಎಂಬ ಕವಿತೆಯ ಕೊನೆ ಮುಟ್ಟಿದಾಗ ಬದುಕಿನ ದರ್ಶನವಾಗಿ ಪರಿವರ್ತನಗೊಳ್ಳುವುದನ್ನು ಗಮನಿಸಬೇಕು. (ಸಮನ್ವಯ, ಸಂ. ೩ ಸಂ. ೧) ನಗರ ಜೀವನದ ಬದುಕು ತನ್ನೆಲ್ಲ ಸಂಕೀರ್ಣತೆಗಳನ್ನು ಒಳಗೊಂಡು 'ಮುಂಬೈಜಾತಕ'ದಲ್ಲಿ ಆವಿರ್ಭವಿಸಿದೆ. ಕವಿಗಳ ನಿಕಟ ಜೀವನ ಸಾನ್ನಿಧ್ಯ ಮತ್ತು ಭಾವತಾಟಸ್ಥ್ಯದಿಂದ ಮೂಡಿದ ಉತ್ತಮ ಕವಿತೆಗಳಲ್ಲಿ ಅದು ಒಂದಾಗಿದೆ.

ಜಿ.ಎಸ್.ಎಸ್.ರವರ ಕವಿತೆಗಳಲ್ಲಿ ಹೆಚ್ಚು ಮೂಡಿರುವುದು ಗ್ರಾಮೇತರ ಮತ್ತು ನಗರ ಸಮಾಜದ ಚಿತ್ರಣಗಳಾದರೂ ಕೆಲವು ಕವಿತೆಗಳಲ್ಲಿ ಅಪವಾದವೆಂಬಂತೆ ಗ್ರಾಮೀಣ ಸಮಾಜದ ಚಿತ್ರಣಗಳೂ ಮೂಡಿಬಂದಿರುವುದುಂಟು. 'ಬೀಳ್ಕೊಡಿಗೆ' ಕವಿಗಳ ಅಪ ರೂಪದ ದೀರ್ಘಕವನ. ಹೆಣ್ಣುಮಗಳ ಬದುಕಿನಲ್ಲಿ ಬರುವ ಬೀಳ್ಕೊಡಿಗೆ ಸಂದರ್ಭದ ಹಿನ್ನೆಲೆಯಲ್ಲಿ ಬರುವ ತೌರೂರನ್ನು ಬಿಟ್ಟು ಕೈಹಿಡಿದ ಗಂಡನೊಡನೆ ಕಾಣದೂರಿಗೆ ಹೊರಟ ಹಳ್ಳಿಯ ಮುಗ್ಧ ಹೆಣ್ಣುಮಗಳ ಮನಸ್ಥಿತಿ ಮತ್ತು ಆ ಗ್ರಾಮೀಣ ಸಮಾಜ ಅವಳ ಬದುಕಿನಲ್ಲಿ ಮೂಡಿಸಿದ ಸ್ಮೃತಿ ಕವನದಲ್ಲಿ ವಿಲಂಬಗತಿಯಲ್ಲಿ ಅಭಿವ್ಯಕ್ತಿ ಪಡೆದಿದೆ. ಆ ಮುಗ್ಧೆ ತಾಯಿಯನ್ನು ಕಳೆದುಕೊಂಡ ಹೆಣ್ಣಾದರೂ ಅವಳನ್ನು ಮಗಳಾಗಿ ಕಂಡ ಊರಿನವರ ವಿಶಾಲ ಹೃದಯವಂತಿಕೆ, ಆತ್ಮೀಯತೆ ಮತ್ತು ವಿಶ್ವಾಸದ ಪರಿಸರದ ವರ್ಣನೆ ಮುಗ್ಧಮನೋಭಾವದ ಭಾವಕೋಮಲ ವರ್ಣನೆಗಳಾಗಿ ಮೂಡಿವೆ.

'ನಾನು ಹುಟ್ಟಿದ ಹಳ್ಳಿ ಸಗ್ಗಕ್ಕಿಂತಲು ಮಿಗಿಲು,
ಅದಕಿಂತಲೂ ಮಿಗಿಲು ನನ್ನ ನಲ್ಲ
ಇನಿತು ದಿನ ಉಸಿರಿತ್ತ ನಮ್ಮೂರ ಶಕ್ತಿಗಳೆ
ನಗು ನಗುತ ಹರಸಿ ಬಿಡಿ ನೀವುಗಳೆಲ್ಲ
ಅದೊ ಅಲ್ಲಿ ದೂರದಲಿ ನಮ್ಮೂರು ನೋಡುತಿದೆ
ಹಸುರು ಮರಗಳ ಮುಸುಕಿನಿಂದ ಇಣುಕಿ !
ಮಗಳ ಬೀಳ್ಕೊಡುತಿರುವ ತಾಯ ಮುಖಬಿಂಬದೊಲು
ತೋರುತಿದೆ, ನನ್ನೆದೆಯನೆಲ್ಲ ಕಲಕಿ

. . . . . . . . .

ಗುಡ್ಡ ಗುಡ್ಡದ ಮೊಲೆಗೆ ಒಂಟಿ ಮೋಡದ ಹಸುಳೆ
ಬಾಯಿಟ್ಟು ಮಲಗಿರಲು ಕನಸಿನಂತೆ,
ಆ ಅದನು ಬೆರಗಾಗಿ ನೋಡಿ ನಿಡುಸುಯ್ಯುವೆನು
ಮನಕೆ ಮರಳಲು ತಾಯ ಚಿಂತೆ !

. . . . . . .

ಅತ್ತಿತ್ತ ಹೊಲದಲ್ಲಿ ಉಳುವ ಅಣ್ಣಗಳೆನ್ನ
ನೋಡಿ ಅಣಕಿಸುತಿರಲು, ನಾಚಿ ಕೆಂಪೇರಿ
ಬರುತಿರಲು ದಾರಿಯಲಿ ಹೆಂಗಸರು ಕೇಳುವರು
"ಮದುವೆ ಎಂದೇ ಗೌರಿ ನಿಮ್ಮೂರಿನಲ್ಲಿ ?"
ಹೊಲಗದ್ದೆ ಬನ ಬಾನು ಮೌನಸ್ಥವಾಗಿರಲು
ನಮ್ಮೂರು ಹಸುಳೆಯೊಲು ಮಲಗಿರುವುದು
ಹುಟ್ಟ ಕಂದರನಿಟ್ಟ ತೊಟ್ಟಿಲನು ತೂಗುವುವು
ನೂರು ತಾಯಿಯ ಕೊರಳ ಜೋಗುಳಗಳು !'

(ಬೀಳ್ಕೊಡಿಗೆ—ದೇವಶಿಲ್ಪ)

ಇಲ್ಲಿ ಬರುವ ಚಿತ್ರಗಳು ಗ್ರಾಮೀಣ ಬದುಕನ್ನು ಮುಗ್ಧ ದೃಷ್ಟಿಕೋನದಿಂದ ಗಮನಿಸಿದವುಗಳಾಗಿವೆ. ಮುಗ್ಧ ಹೆಣ್ಣಿನ ಕೋಮಲ ಭಾವವನ್ನೂ ಬೀಳ್ಕೊಡಿಗೆಯ ನೋವನ್ನೂ, ಅದರಲ್ಲಿರುವ ನಲಿವನ್ನೂ ಮತ್ತು ಹಳ್ಳಿಯ ಮುಗ್ಧ ಜನತೆಯನ್ನೂ ಸುಂದರವಾಗಿ ಸೆರೆಹಿಡಿಯಲಾಗಿದೆ. ಮುಗ್ಧ ಹೆಣ್ಣಿನ ದೃಷ್ಟಿಕೋನದಿಂದ ನೋಡಿರುವುದರಿಂದ ಗ್ರಾಮೀಣ ಬದುಕಿನ ಒಂದು ಬದಿಯ ದರ್ಶನ ಮಾತ್ರ ಇಲ್ಲಿ ನಮಗಾಗುತ್ತದೆ.

ನಗರ ಜೀವನವನ್ನು ಬಿಡಿಯಾಗಿ ಕೊಡುವ ಕವಿತೆಗಳಲ್ಲಿ 'ಇದು ನಗರ', 'ಹೋಟಲಿನಲ್ಲಿ' ಮತ್ತು 'ಕೋಳಿಕೂಗಿತು' ಪ್ರಮುಖವಾದವು. ನಗರಜೀವನದ ಸಂಕೀರ್ಣ ಸ್ವರೂಪವನ್ನೂ, ಯಾಂತ್ರಿಕತೆಯನ್ನೂ ಅಲ್ಲಿಯೂ ತುಡಿಯುವ ಆತ್ಮೀಯ ಕಾತರದ ಆತ್ಮವನ್ನೂ, ಹೇಳಲಾಗಿದೆ. ನಗರದಲ್ಲಿದ್ದ ಮೇಲೆ ನೂರಾರು ನಗರ ನಿಯಮಗಳಿಗೆ ಬದ್ಧನಾಗಿರಬೇಕು. ಹಾಗಿದ್ದರೇ ಕ್ಷೇಮ.

ಇದು ನಗರ ; ಸಾವಿರ ದಾರಿ ಸಾವಿರ ಬೆಳಕು
ತೊಡರುವುದು ಕಾಲಿಗೆ

ನೂರಾರು ವಾಹನದ ಹೆಜ್ಜೆ ಸದ್ದಿನ ಜೊತೆಗೆ
ನೀ ಬರುವೆ ಮನೆಗೆ,
ಅಲ್ಲಿತನಕ ಕಾತರವೆ ನನಗೆ.'

(ಇದು ನಗರ—ಅನಾವರಣ)

'ಹೋಟಲಿನಲ್ಲಿ' ಎಂಬ ಕವಿತೆ ಹೋಟಲಿನಲ್ಲಿ ಕಾಣಬರುವ ತಿನ್ನುವ ಜನರನ್ನೂ, ನೂಕು ನುಗ್ಗುಲನ್ನೂ ಮತ್ತು ಜನರ ಯಾಂತ್ರಿಕ ನಡೆವಳಿಕೆಯನ್ನೂ ಚುರುಕಾಗಿ ವರ್ಣ ಕುಂಚದಲ್ಲಿ ಬಿಡಿಸುತ್ತಾ ಹೋಗುತ್ತದೆ. ತಿಂದು ಬಿಟ್ಟ ಪ್ಲೇಟು-ಕಪ್ಪುಗಳು ಉತ್ತಮ ವಾಗಿ ಮೂಡಿದೆ.

'ಚೆದುರಿ ಬಿದ್ದಿದೆ ಮುಂದೆ ಮೇಜಿನ ಮೇಲೆ
ಗೆದ್ದ ರಾಜ್ಯದ ನಕ್ಷೆ'

(ಹೋಟಲಿನಲ್ಲಿ—ಅನಾವರಣ)

ಅವಸರದಲ್ಲಿ ತಿಂದು-ಕುಡಿದು ಮುಗಿಸಬೇಕು. ಇಲ್ಲದಿದ್ದರೆ ಕಾದ ಜನ 'ಹೊಡೆದೆಬ್ಬಿಸುವ ಚಾಟಿಯಿದೆ ಅವರ ಕಣ್ಣಲ್ಲಿ.' ಆಧುನಿಕ ವ್ಯಕ್ತಿ ಈ ಎಲ್ಲ ಗೊಂದಲದಲ್ಲಿ ತನ್ನನ್ನು ತಾನೇ ಮರೆಯುವ ಸ್ಥಿತಿ ಕವನದ ಅಂತ್ಯಭಾಗದಲ್ಲಿ ಹೀಗೆ ಮೂಡಿದೆ.

'ಏನು, ಹೆಸರೇನು ನಿನ್ನದು
ಜೇಬಿನಲ್ಲಿರಬೇಕು ನಿನ್ನ ವಿಸಿಟಿಂಗ್ ಕಾರ್ಡು
ಅಥವಾ ನೆನೆಸಿಕೋ ನಿನ್ನ ಮನೆಯ ಮುಂದಿನ ಬೋರ್ಡು.'

(ಅದೆ)

'ಕೋಳಿ ಕೂಗಿತು' ಎಂಬ ಕವಿತೆಯಲ್ಲಿ ಗ್ರಾಮೀಣ ಮತ್ತು ನಗರ ಈ ಎರಡು ಪರಿ ಸರದಲ್ಲಿ ಬೆಳಗಿನ ವೈದೃಶ್ಯವನ್ನು ಕಾಣುವ ಪ್ರಯತ್ನವಿದೆ. ಮೊದಲ ಪರಿಸರ ಹಳ್ಳಿ. ಅಲ್ಲಿ ಕೋಳಿ ಕೂಗುವುದು ಬೆಳಗಾಯಿತೆಂದು ಜನತೆಗೆ ಎಚ್ಚರಿಸುವಂತೆ ಕಂಡುಬರುತ್ತದೆ. ತಕ್ಷಣ 'ಜನ ದಡಬಡನೆದ್ದು' ತಮ್ಮ ತಮ್ಮ ಕೆಲಸ ಕಾರ್ಯಗಳಿಗೆ ಮುನ್ನುಗ್ಗುತ್ತಾರೆ. ನಗರ ಬದುಕಿಗೆ ಅಂಟಿದ ವ್ಯಕ್ತಿ ಹಳ್ಳಿಯ ಪರಿಸರಕ್ಕೆ ಹೋದಾಗ ಅಲ್ಲಿಯೂ ತನ್ನ ಕಲ್ಪನೆಗಳೇ ಬರುತ್ತವೆ.

'ನನಗೋ ನಿದ್ದೆ
ಈ ಹಾಳು ಕೋಳಿ ಕೂಗಿದುದೇಕೆ ?
ಯಾರು ಕೀ ಕೊಟ್ಟು ಹೀಗೆ ದಿನವೂ ಇಡುತ್ತಾರೆ
ಈ ಎಲ್ಲ ಅಲಾರಂ ಟೈಂಪೀಸಿಗೆ ?'

(ಕೋಳಿಕೂಗಿತು—ಅನಾವರಣ)

ಹಳ್ಳಿಯ ಹಿಂದಿನ ಪರಿಸರದ ಆಲೋಚನೆಯಿಂದ ನಗರ ಪರಿಸರದ ಕೋಳಿಗಳ ಸ್ಥಿತಿ-ಅನಂತರ ನಗರದ ಬೆಳಗಿನ ಚಿತ್ರದ ಕಡೆ ಕವನದ ನಡಿಗೆ ಇದೆ. ಈ ಸಾಲುಗಳಲ್ಲಿ

'ಈ ನಮ್ಮ ನಗರದಲಿ ಕೋಳಿ
ಎಲ್ಲೊ ಏನೊ !

ಅದರ ಸೊಲ್ಲೇ ಇಲ್ಲ!
ಮಾರ್ಕೆಟ್ಟಿನಲಿ ಮಾತ್ರ ಬುಟ್ಟಿಯ ತುಂಬ ಕೋಳಿಯ ಮೊಟ್ಟೆ.'

(ಅದೇ)

ಕುತೂಹಲಜನ್ಯ ವಿಸ್ಮಯ ಹೀಗೆ ಮೂಡಿದೆ. ಮುಂಪೆ ಮೊಟ್ಟೆಗಳು ಲಭ್ಯವಿರುವುದರಿಂದ ನಿಜವಾದ ಕೋಳಿಗಳಿರಬೇಕೆಂಬ ನಗರತರ್ಕಕ್ಕೆ ಸಹಜವಾಗಿ ಬರಲಾಗಿದೆ. ನಗರದಲ್ಲಿ ಹಳ್ಳಿಗಳಲ್ಲಿರುವಂತೆ ಸ್ವಚ್ಛಂದ ಬದುಕು ಸಾಧ್ಯವಿಲ್ಲ. ಕೋಳಿಗಳಿಗೂ ಕೂಡ ಸಿಕ್ಕಾಬಟ್ಟೆ ಕೂಗಿ ಗಲಾಟೆ ಎಬ್ಬಿಸದಂತೆ ಶಿಸ್ತನ್ನೂ ಕಲಿಸಿರಬೇಕು ಮತ್ತು ಎಂದೆಂದಿಗೂ ಸದ್ದುಮಾಡದಂತೆ ಕತ್ತನ್ನು ಹಿಸುಕಿ ಬುಟ್ಟಿಯಲ್ಲಿ ತುಂಬಿಬಿಟ್ಟಿದ್ದಾರೆ.

'ಯಾವುದೋ ಸದ್ದಿರದ ಮೂಲೆಯಲಿ
ಕೊರಳನು ಹಿಸುಕಿ, ಬರಿ ಮೊಟ್ಟೆಯಿಡುವುದ ಮಾತ್ರ
ಕಲಿಸಿದಂತಿದೆ ಅವಕೆ.
ಪಾಪ, ಮಾರ್ಕೆಟ್ಟಿನಲಿ ಬುಟ್ಟಿಯ ತುಂಬ
ಅವುಗಳ ಕರುಳು ಸದ್ದಿರದೆ ಬಿದ್ದಿವೆ.
ಒಂದೊಂದು ಮೊಟ್ಟೆಯ ಒಳಗೂ ಮಲಗಿವೆ ನೋಡು
ಎಂದೆಂದಿಗೂ ತಲೆಯೆತ್ತಿ ಕೂಗದ ಕೊರಳು.' (ಅದೇ)

ನಗರದಲ್ಲಿ ಕೋಳಿಗಳ ಸ್ಥಾನವನ್ನು, ಗೌಳಿಗಿತ್ತಿಯ ಕೂಗು, ವಾಹನಗಳ ಶಬ್ದ, ಮಿಲ್ಲುಗಳ ಕೂಗು ಇವನ್ನು ಹೇಳಿ ಮನುಷ್ಯ ನಿಸರ್ಗದಿಂದ ದೂರ ಸರಿಯುತ್ತಾ ನಗರ ಜೀವನಕ್ಕೆ ಅಂಟುತ್ತಾ ಸ್ವಹಿತ ದೃಷ್ಟಿಗೆ ಅಂಟುತ್ತಿರುವ ಭಾವದೊಂದಿಗೆ ಕವಿತೆ ಮುಗಿಯುತ್ತದೆ. ಇಲ್ಲೆಲ್ಲ ಕವಿ ಅತಿರೇಕದ ಅಂಚಿಗೆ ಸರಿಯದೆ ಸ್ವಂತ ನಿಲುವಿನಿಂದ ವಿಷಯಗಳನ್ನು ಗ್ರಹಿಸುವ, ಚಿಂತಿಸುವ ಮತ್ತು ತನ್ನದೇ ಆದ ಮಾರ್ಗ ರಚನೆಯ ಕಡೆ ಸಾಕಷ್ಟು ದೂರ ಸಾಗಿ ಬಂದಿರುವುದನ್ನು ಗುರುತಿಸಬಹುದು.

ಸಮಾಜದ ಒಂದು ವರ್ಗವಾದ 'ಮೇಷ್ಟ್ರು'ವಿನ ಸ್ಥಿತಿಯನ್ನು ಲಘುಹಾಸ್ಯ ಧ್ವನಿಯೊಂದಿಗೆ ಚಿತ್ರಿಸುತ್ತಾರೆ. ಬಡಮಾಸ್ತರನ ವ್ಯಕ್ತಿತ್ವ ಕುಗ್ಗದ ರೀತಿ, ಬರೀ ಬಡತನದಲ್ಲಿ ಬದುಕುವ ಆ ಜೀವಿಗೆ ಬಿಡುಗಡೆಯ ಗಂಟೆ ಎಂದು ಎಂಬ ಗಂಭೀರ ಪ್ರಶ್ನೆಯೊಂದಿಗೆ ಅಂತ್ಯಗೊಳ್ಳುವ ಕವಿತೆ ಉತ್ತಮವಾಗಿದೆ. ಲಘು ಹಾಸ್ಯ ಧ್ವನಿಯೊಂದಿಗೆ ಕವಿತೆ ಆರಂಭವಾದರೂ ಅದು ಬೆಳೆಯುತ್ತಾ ಗಂಭೀರ ಹಂತಗಳಿಗೆ ಏರುತ್ತಾ ಮೇಲ್ಮಟ್ಟದ ಚಿಂತನೆಯಲ್ಲಿ ಪರ್ಯವಸಾನವಾಗುವ ರೀತಿ ಆಕರ್ಷಕವಾಗಿದೆ. (ಕೆಲವು ಮಟ್ಟಿಗೆ ಆಕಾರದ ದೃಷ್ಟಿಯಿಂದ ಜಡೆ ಕವಿತೆಯನ್ನು ನೆನಪಿಗೆ ತರುತ್ತದೆ.) ಕವಿ 'ಮೇಷ್ಟ್ರು'ವಿನ ಚಿತ್ರವನ್ನು ಆರಂಭದಿಂದಲೇ ಸಜೀವವಾಗಿ ಕಟ್ಟಿಕೊಡುತ್ತಾರೆ. ಇಂಥ ಜೀವಿಯ ಮನಸ್ಥಿತಿ ಕಾರ್ಯಗಳನ್ನು ವರ್ಣಿಸುತ್ತಾ

'ಸುತ್ತ ನಾಲ್ಕರ ಮಗ್ಗಿ ಒಟಗುಡುವ ಕಪ್ಪೆ;
ಬೇಸರದ ಮುಖ ಮುಂಡಿಸಿದೆ ಕುರ್ಚಿಯಲಿ
ಕೆಸರ ಕುಪ್ಪೆ!

ಯಾವ ಮಾತಾಡಿದರು ಉಸಿರಿರದ ಕುಸಿದ ದನಿ
ಸಪ್ಪೆ ಸಪ್ಪೆ.
ನೂರಾರು ತೆರೆ ಬಂದು ರಪ್ಪನಪ್ಪಳಿಸಿರಲು
ಕುಸಿವ ದಡದಂತಿರುವ ಮುರುಕು ಒಡಲು
ಜನ್ಮ ಜನ್ಮಾಂತರದ ಕರ್ಮವಂಟಿದ ಹಾಗೆ
ವಿಶ್ವ ಭೂಪಟದಂಥ ಹಳೆಯ ಕೋಟು !
ಈ ಮುರುಕು ಕಟ್ಟಡಕೆ ಹರುಕು ಗೋಪುರದಂತೆ
ನಿಂತ ಪೇಟ.' (ಮೇಷ್ಟ್ರು—ದೀಪದಹೆಜ್ಜೆ)

ಎಂದು ಅಂತ್ಯದಲ್ಲಿ 'ಹೊಡೆಯದೇ ಇನ್ನಾದರೂ ಕಡೆಯ ಒಡುಗಡೆಯ ಗಂಟೆ? ಎಂಬಲ್ಲಿ ಕವಿತೆ ಸಂಪೂರ್ಣವಾಗಿ ಹೊಸ ತಿರುವನ್ನು ಪಡೆದು ಅರ್ಥ ಸಾರ್ಥಕ್ಯದ ಕಡೆ ಸಾಗುತ್ತದೆ.

ಮದುವೆ, ದಾಂಪತ್ಯಸುಖವನ್ನು ಕಾಣದ ಹೆಣ್ಣುಮಕ್ಕಳ ಮೂಕ ವ್ಯಥೆಯನ್ನು 'ಹೂವುಗಳ ನಿಟ್ಟುಸಿರು' ಕವಿತೆಯಲ್ಲಿ ಕವಿ ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ. ಕವಿತೆಗೆ ಕೊಟ್ಟಿರುವ ಹೆಸರೂ ಕೂಡ ಕವಿತೆಯ ಭಾವವನ್ನು ಧ್ವನಿಪೂರ್ಣವಾಗಿ ಅರಳಿಸುತ್ತದೆ. ತಮ್ಮ ಕಣ್ಣೆದುರೇ ಮದುವೆಯಾದ ಹೊಸಜೋಡಿ ಸಾಗಿದಾಗ ತಮ್ಮ ಆ ಅನುಭವದ ಸರದಿ ಎಂದೋ ಎಂದು ಚಿಂತನೆಗೆ ಮನಸ್ಸು ಒಳಗಾಗುತ್ತದೆ. ತನ್ನನ್ನು ಕೊಂಡೊಯ್ಯುವ ರಾಜಕುಮಾರ ಬರುವವರೆಗೂ ತಾನು ಕಾಯುವಿಕೆಯ ಅಂಕೆಯ ಬೇಲಿಯ ಒಳಗೇ ಮಿಡುಕಬೇಕು.

'ಇದ್ದಕ್ಕಿದ್ದಂತೆಯೇ ಬಂದಾನೇನು, ಆ ದೊರೆಗುವರ
ಕುದುರೆ ಹತ್ತಿ—
ಕತ್ತಿ ಝಳಪಿಸಿ, ಅರಿಗಳನು ಸದೆ ಬಡಿದು ಒಯ್ದಾನೇನು
ತನ್ನನೆತ್ತಿ ?' (ಹೂವುಗಳ ನಿಟ್ಟುಸಿರು—ದೀಪದ ಹೆಜ್ಜೆ)

ಕವಿತೆಯ ಅಂತ್ಯದ ಸಾಲುಗಳಲ್ಲಿ ಬರುವ ಪಾರ್ವತಿಯ ತಪಸ್ಸಿನ ಸೂಚನೆ ಕವಿತೆಯ ಅರ್ಥವನ್ನು ಹೊಸ ನಿಲುವಿಗೆ ಮತ್ತು ಹೊಸ ದಿಗಂತಗಳಿಗೆ ವಿಸ್ತರಿಸುತ್ತದೆ.

'ಬಿರಿದ ಹೂವಿನ ಸುಯ್ಯಲಿಡುತಿದೆ ಇಗೋ
ಹಸುರು ಬೇಲಿಯ ಒಳಗೆ
ಇದು ಕೇಳಬಹುದೇ ಹೇಗೆ
ಹೇಮಕೂಟಾಚಲದಿ ತಪಗೈವ ಶಿವಗೆ ?' (ಅದೇ)

ಬದುಕಿನಲ್ಲಿ ಹುಸಿಮೌಲ್ಯಗಳನ್ನು ತಮ್ಮದಾಗಿಸಿಕೊಂಡು ಬದುಕುವ, ಹಾಗೆ ಬದುಕಿದ ನಂತರ ಸಂಧ್ಯಾಕಾಲದಲ್ಲಿ ತನ್ನ ಬದುಕು ವಿಫಲವೆಂದು ಭಾವಿಸುವ, ವ್ಯರ್ಥವಾಯಿತಲ್ಲಾ ಎಂದು ವ್ಯಥೆ ಪಡುವ ವ್ಯಕ್ತಿಯ ಚಿತ್ರ 'ಸಂಜೆದಾರಿ' ಎಂಬ ಕವನದಲ್ಲಿ ಧ್ವನಿಪೂರ್ಣವಾಗಿ ಬಂದಿದೆ. ಕವನದಲ್ಲಿ ಬರುವ 'ಕೈಹಿಡಿದ ಸರಪಳಿಯ ಜಗ್ಗುತಿದೆ ಕಂನಾಯಿ' ಸಾಂಕೇತಿಕ ಅರ್ಥದಲ್ಲಿ ದುಡಿದು ಕವಿತೆಗೆ ಉನ್ನತನುಟ್ಟದ ಅರ್ಥವನ್ನು ಮತ್ತು ಆವರಣವನ್ನು ದೊರಕಿಸಿಕೊಡುತ್ತದೆ.

ಕೆಲವು ಸಾರಿ ವ್ಯಕ್ತಿ ವ್ಯಕ್ತಿಗಳ ಕಾಡಿನಲ್ಲಿ ಏಕಾಂಗಿಯಾಗಿ ಸಿಕ್ಕು ತೊಳಲಾಡುವ ದುಃಸ್ಥಿತಿ ಒದಗುತ್ತದೆ. ವ್ಯಕ್ತಿಯಾದವನು ತನ್ನ ಸುತ್ತಲಿನ ಜನರ ಬಗ್ಗೆ ವ್ಯವಹರಿಸುವಾಗ ಅತ್ಯಂತ ಎಚ್ಚರಿಕೆಯಿಂದ ವರ್ತಿಸಬೇಕಾಗುತ್ತದೆ. ಎಷ್ಟೇ ಎಚ್ಚರಿಕೆಯಿಂದ ಇದ್ದರೂ ತಮ್ಮ ವಿಷ ವರ್ತುಲದಲ್ಲಿ ಸಿಕ್ಕಿಸಿಕೊಂಡು ನರಳಿಸುತ್ತಾರೆ. 'ನನ್ನ ಸುತ್ತ' ಎಂಬ ಕವಿತೆ ಆಧುನಿಕ ಜಗತ್ತಿನಲ್ಲಿ ವ್ಯಕ್ತಿ ದುಷ್ಟಜನರ ಮಧ್ಯೆ ಸಿಕ್ಕು ನರಳುವ, ಮೋಸ ಹೋಗುವ ಸ್ಥಿತಿ ಮತ್ತು ರೀತಿಯನ್ನು ಹಿಡಿದುಕೊಟ್ಟಿದೆ. ವ್ಯಕ್ತಿ ಸಿಕ್ಕುಬಿದ್ದಿರುವುದು ಈ ದುಷ್ಟ ಪ್ರಾಣಿಗಳ ಮಧ್ಯೆ.

'ಸಿಕ್ಕಿಕೊಂಡಿದ್ದೇನೆ ನಾನೂ
ಕೊಳಕು ಮಂಡಲದ ನಡುವೆ
ಕೊಂಕುನಗೆ, ನರಿಮಾತು, ಕಪಿಮುಷ್ಟಿ,
ವೃಕೋದರಗಳ ಮಧ್ಯೆ.' (ನನ್ನ ಸುತ್ತ—ಗೋಡೆ)

ನೈಜ ವ್ಯಕ್ತಿತ್ವದೊಂದಿಗೆ ಪ್ರಾಮಾಣಿಕ ನಡವಳಿಕೆಯಿಲ್ಲದ ಇಂಥ ವ್ಯಕ್ತಿಗಳು ಸೂಕ್ಷ್ಮ, ಮೃದು ವ್ಯಕ್ತಿತ್ವದ ಮನಸ್ಸಿಗೆ ಯಾತನೆ ಕೊಡುತ್ತಾ ಒಳಗೇ ಕೊರಗಿಸುತ್ತಾರೆ. ಎಷ್ಟೇ ಎಚ್ಚರಿಕೆಯಿಂದ ದೂರವಿದ್ದರೂ ಆ ವ್ಯಕ್ತಿಗಳ ವಿಷಜಾಲ ಸಮೀಪಿಸುತ್ತದೆ.

'ಮೊದಮೊದಲು ನಯವಾದ ಜೇಡನ ಜಾಲ
ಆನಂತರ ರೇಸಿಮೆಯ ನೂಲಿನ ಕುಣಿಕೆ;
ಬರಬರುತ್ತಾ ಬೆಸ್ತಬಲೆ, ಗಾಳ ಬೀಸುವ ಗತ್ತು
ನನ್ನ ಸುತ್ತೂ
......................
ನೀನೆ ಭೂಪತಿ ಎಂದು ಉಬ್ಬಿಸಿ
ಸುತ್ತ ಮೆತ್ತಗೆ ಸೌದೆಯೊಟ್ಟುತ್ತಾರೆ.
ಯಾವಾಗ ಕಡ್ಡಿ ಗೀಚುತ್ತಾರೋ ಏನೋ'

ಬಯಸದೇ ಇದ್ದರೂ ಅವರೇ ಬಂದು ಪಾದಚಾರಿಯಾದ ವ್ಯಕ್ತಿಯನ್ನು ಕರೆದು ಕಾರಲ್ಲಿ ಕೂರಿಸಿಕೊಂಡು ಬೆಳಕಲ್ಲಿ ನಡೆಸಿ ಕತ್ತಲಲ್ಲಿ ಕೈಕೊಟ್ಟು ಹೋಗುತ್ತಾರೆ. ಹಾಗಾದಾಗ ವ್ಯಕ್ತಿಗೆ ಒದಗುವ ಗೊಂದಲದ ಏಕಾಕಿತನದ ಭಾವ ಹೀಗೆ ಮೂಡಿದೆ.

'ನಟ್ಟ ನಡುರಾತ್ರಿ ಅಪರಿಚಿತ ಸಂದಿಗೊಂದಿಯ ನಡುವೆ
ಒಬ್ಬನೇ ತೊಳಲಿ ಬಳಲುತ್ತೇನೆ.' (ಅದೇ)

ಆಧುನಿಕ ಜಗತ್ತಿನಲ್ಲಿ ಮನುಷ್ಯ ಸಮಾಜದಲ್ಲಿದ್ದೂ ಕೂಡ ಅನುಭವಿಸುವ ಒಂಟಿತನ, ಎಷ್ಟೇ ಹುಷಾರಾಗಿದ್ದರೂ ಅವನನ್ನು ಸ್ವಾರ್ಥಕ್ಕಾಗಿ ಬಳಸಿಕೊಂಡು ಮೂಲೆ ಸೇರಿಸುವ ಜನರ ಪ್ರವೃತ್ತಿಯನ್ನು ಆ ಮೂಲಕ ವ್ಯಕ್ತಿಗೆ ಉಂಟಾಗುವ ಏಕಾಂಗಿತನದ ಯಾತನೆಯನ್ನು ಪರಕೀಯತೆಯ ವ್ಯಥೆಯನ್ನು ಆ ಕವನ ಸಮರ್ಥವಾಗಿ ಕಟ್ಟಿಕೊಡುತ್ತದೆ.

'ನನ್ನ ನಿನ್ನ ನಡುವೆ' ಎಂಬ ಕವನ ವ್ಯಕ್ತಿ ವ್ಯಕ್ತಿಗಳ ಹೊಂದಾಣಿಕೆಯ ಬದುಕಿಗೆ

ಅಡ್ಡಿ ಬರುವ ಸಮಾಜವನ್ನು ವಿರೋಧಿಸಬೇಕು—ಇಲ್ಲವೇ ಅಂತಹ ಕಡೆಯಿಂದ ದೂರ ಸರಿದು ಸ್ವತಂತ್ರವಾಗಿ ತಲೆಯೆತ್ತಿ ಬದುಕಬೇಕು ಎಂಬ ನಿಲುವಿಗೆ ತೆರುತ್ತದೆ. ಲೋಕದ ಜನರ ಸ್ವಭಾವವೇ ಹಾಗೆ. ವ್ಯಕ್ತಿ ವ್ಯಕ್ತಿಗಳ ಅನ್ಯೋನ್ಯ ಬದುಕಿಗೆ ಅವಕಾಶ ಮಾಡಿ ಅವರ ಪಾಡಿಗೆ ಅವರನ್ನು ಬಿಡದೆ ಹಿಂಬಾಲಿಸಿ, ಬೇಟೆನಾಯಿಯಂತೆ ಬೊಗಳುವ, ಹೊಂಚುಹಾಕಿ ಹುಡುಕಿ ಕುತಂತ್ರ ಹೂಡುವ ಜನ ಬದುಕಲು ಬಿಡದೆ ಜೀವಸಹಿತ ಈ ಬಾಳಿಗೆ ಬೆಂಕಿ ಇಟ್ಟು ಸುಡುತ್ತಾರೆ. ಲೋಕದ ನಡೆವಳಿಕೆಯನ್ನು, 'ಎದ್ದರೆ ಕಾಲಿಗೆ ಬೀಳುತ್ತದೆ, ಬಿದ್ದರೆ ಕಚಪಿಚ ತುಳಿಯುತ್ತದೆ' ಎಂದು ಹೇಳಿದ್ದಾರೆ. ಕುತಂತ್ರದ, 'ಕಾಲಿಗೆ ಬಿದ್ದಲ್ಲದೆ ಕರುಣಿಸದ ಕೃಪಾನಂದರ' ತಂತ್ರಕ್ಕೆ ಬೀಳದೆ ತಲೆಬಾಗದೆ ದೂರಕ್ಕೆ ಹೋಗಿ 'ಉರಿದೂ ಕಿಡಿಗಣ್ಣಿಲ್ಲದ ದೀಪಾವಳಿಯ ತೀರಕ್ಕೆ' ಹೋಗಿ ಬಾಳುವ ಸ್ಥೈರ್ಯ ವನ್ನು ಹೇಳಲಾಗಿದೆ.

ಉನ್ನತವಾಗಿ ಬೆಳೆದು ನಿಂತ ವ್ಯಕ್ತಿಗೆ ಪರಿಮಿತ ಆವರಣದ ಬೇಲಿಯನ್ನು ಹಾಕಿ ಸ್ವಾರ್ಥಕ್ಕಾಗಿ ಬಳಸಿಕೊಳ್ಳುವ ಜನರನ್ನು ಮರ–ಬೇಲಿ ಕವಿತೆಯಲ್ಲಿ ಚಿತ್ರಿಸಲಾಗಿದೆ. ಗಿಡವಾಗಿದ್ದಾಗಲೇ ಇಲ್ಲದ ಬೇಲಿಯ ಹಂಗು ಮರವಾಗಿ ಬೆಳೆದು ನಿಂತ ಮೇಲೇಕೆ ಬೇಕು. ಆದರೂ ಸ್ವಾರ್ಥಪರವಾದ ಜನ ಬೇಲಿಕಟ್ಟಿ 'ಸ್ತುತಿಪಾಠ'ದ ಪೂಜಾರಿಗಳಾ ಗಿರುತ್ತಾರೆ. 'ಸದಾ ಮೇಲೆದ್ದ' ಮರಕ್ಕೆ ತನ್ನ ಸುತ್ತ ಏನೋ ನಡೆದಿದೆಯೆಂಬ ಅನು ಮಾನ ಬರುತ್ತದೆ. ಅಂತಹ ಸಮಯದಲ್ಲಿ ಅದು ಮೈಕೊಡವಿದಾಗ ಬೇಲಿಗೂ ಆಗುವ ಸ್ಥಿತಿ ಕವಿತೆಯ ಕೊನೆಯ ಸಾಲುಗಳಲ್ಲಿ ಸಮರ್ಥವಾಗಿ ಧ್ವನಿತವಾಗುವುದನ್ನು ಗಮ ನಿಸಬಹುದು.

'ಒಂದು ಸಲ ಎಚ್ಚೆತ್ತು ಮೈ ಕೊಡವಿತೋ
ಉದುರಿ ಬೀಳುವುದು ಖಂಡಿತ ಈ ಬೇಲಿ ಗೆದ್ದಲ ಹುತ್ತ !
(ಮರಬೇಲಿ—ಅನಾವರಣ)

ಇಲ್ಲಿ ಬರುವ ಪ್ರತಿಮೆ ಅದ್ಭುತ ರೀತಿಯಲ್ಲಿ ಅನುಭವದ ಅಭಿವ್ಯಕ್ತಿಗೆ ಸಾರ್ಥಕ ರೀತಿ ಯಲ್ಲಿ ಬಳಕೆಯಾಗಿದೆ.

ಆಧುನಿಕ ಜೀವನದಲ್ಲಿ ವ್ಯಕ್ತಿ ಕೆಲವು ಸಾರಿ ಸ್ವಸಾಮರ್ಥ್ಯವಿದ್ದು ಕೂಡ ತನ್ನ ಸುತ್ತ ನಡೆಯುವ ಅನ್ಯಾಯ ಅನೀತಿಗಳಿಗೆ ತಲೆಬಾಗಿದವನಂತೆ ಸಹಿಸಬೇಕಾಗುತ್ತದೆ. ಸಕಾಲ ಬರುವವರೆಗೂ ಅದಕ್ಕೆ ತಕ್ಕ ಪ್ರತೀಕಾರ ತೆಗೆದುಕೊಳ್ಳಲು ಅವಕಾಶಕ್ಕಾಗಿ ಕಾಯಬೇಕಾಗುತ್ತದೆ. ಪಾಂಡವರು ತಮ್ಮ ಸಂಕಟವನ್ನು ಅವಮಾನವನ್ನು ನಾರು ವೇಷದಲ್ಲಿ ಸಹಿಸಿ ಕೌರವರ ಮೇಲೆ ಪ್ರತೀಕಾರ ತೆಗೆದುಕೊಂಡ ಭಾವವನ್ನೂ, ಭೀಮ ನಂತಹ ಪರಾಕ್ರಮಿ, ಮುಂಗೋಪಿಯ ಒಳಗುದಿತ, ಇಕ್ಕಟ್ಟಿನ ಪರಿಸ್ಥಿತಿಯನ್ನು 'ಭೀಮಾಲಾಪ' ಕವನ ಸಮರ್ಥವಾಗಿ ಧ್ವನಿಸುತ್ತದೆ. ಮಹಾಭಾರತದ ಪುರಾಣ ಪ್ರತಿಮೆಯಲ್ಲಿ ಅಡಗಿರುವ ಅರ್ಥಬಾಹುಳ್ಯವನ್ನು ಸಮರ್ಥವಾಗಿ ತುಂಬಿಕೊಡುವ ಈ ಕವನ ಆಧುನಿಕ ಕಾಲದ ವ್ಯಕ್ತಿಯ ಒಳಗುದಿತಕ್ಕೆ ಅನುಭವದ ಅಭಿವ್ಯಕ್ತಿಗೆ ಸಮರ್ಥ

ವಸ್ತು ಪ್ರತಿರೂಪವಾಗಿದೆ. ಕವನದ ಆರಂಭದ ಸಾಲುಗಳು ಕವನದ ಒರಟು ಮತ್ತು ಖಚಿತ ಧ್ವನಿಗೆ ಉತ್ತಮ ರೀತಿಯಲ್ಲಿ ಅಡಿಪಾಯ ಒದಗಿಸುತ್ತವೆ.

ಸೀರೆ ಉಟ್ಟು ಬಳೆ ತೊಟ್ಟು, ಕಾಲಿಗೆ
ಗೆಜ್ಜೆ ಕಟ್ಟಿದ್ದಾನೆ ಒಬ್ಬ ;
ಇನ್ನೊಬ್ಬ ಕಾವಿ ಉಟ್ಟು ಮೂಲೆಗೆ ಕೂತಿದ್ದಾನೆ.
ದನದ ಕೊಟ್ಟಿಗೆಯಲ್ಲಿ ಒಬ್ಬ, ಕುದುರೆ ಲಾಯದಲ್ಲಿ
ಮತ್ತೊಬ್ಬ.
ಇದ್ದಾಳೆ ಇವಳು ಅವರಿವರ ತಲೆಯ
ಹೇನು ಹೆಕ್ಕುತ್ತಾ
ಆಗಾಗ ನಮ್ಮನ್ನೂ ಕುಕ್ಕುತ್ತಾ.' (ಭೀಮಾಲಾಪ—ಗೋಡೆ)

ಇಂಥ ಸ್ಥಿತಿಯಲ್ಲಿ ಭೀಮನೂ ಅಡಿಗೆ ಮನೆಯಲ್ಲಿ ಉರಿವ ಸೌದೆಗಳ ಜೊತೆ ಹಳೆಯ ನೆನಪನ್ನು ರುಬ್ಬುತ್ತಾ, ಕುದಿಯುತ್ತಾ ಇದ್ದಾನೆ. ಲೋಕದಲ್ಲೇ ಅಸಾಮಾನ್ಯ ಪೌರುಷವಂತನಾದರೂ, ಸದ್ಯಕ್ಕೆ ಅದು ಯಾವುದೂ ಪ್ರಯೋಜನಕ್ಕೆ ಬರುವಂತಿಲ್ಲ.

'ಅಲ್ಲಿ ಊರಾಚೆ ಮಸಣದಲ್ಲಿ
ಇದ್ದ ಪೌರುಷವನ್ನು ದುಂಡಗೆ ಸುತ್ತಿ
ಹೆಣವಾಗಿ ಮಲಗಿಸಿದ್ದೇವೆ, ಮರದ
ಕೊಂಬೆಯ ಮೇಲೆ.' (ಅದೇ)

ಸಕಾಲ ಮತ್ತು ಸದವಕಾಶಕ್ಕಾಗಿ ಕಾಯುವ ಹೊತ್ತಿನಲ್ಲಿ ಈ ಎಲ್ಲವನ್ನೂ ಸಹಿಸಬೇಕಾಗಿದೆ.

'ನೋಡುತ್ತಿದ್ದೇನೆ, ಸುತ್ತಲೂ ಎಂತೆಂಥವೋ
ವಿಜೃಂಭಿಸಿ ಮೀಸೆ ತಿರುವುತ್ತವೆ.
ಏರಬಾರದ ಕಡೆಗೆ ಏರಿ, ಇಳಿಯಬಾರದ ಕಡೆಗೆ
ಇಳಿದು ಕೆಡಿಸಿ ಹೊಲಸೆಬ್ಬಿಸಿವೆ.' (ಅದೇ)

ಆದರೂ ಸಕಾಲಕ್ಕೆ ಕಾಯಬೇಕು.

'ಗೆರೆ ದಾಟಬಾರದ ನಾನು ಕಾಯುತ್ತಿದ್ದೇನೆ
ಉರಿವ ಸೌದೆಗಳ ಜೊತೆಗೆ
ಪಾತ್ರೆಗಳಲ್ಲಿ ಕೊತ ಕೊತ ಕುದಿದು
ಕಾಯುತ್ತಿದ್ದೇನೆ.' (ಅದೇ)

ಸಮಾಜದ ನೂರು ಪ್ರಭಾವಗಳಿಂದ ತನ್ನ ಸ್ವಂತ ವ್ಯಕ್ತಿತ್ವ ಮತ್ತು ವಿಚಾರವನ್ನು ಉಳಿಸಿಕೊಳ್ಳುವುದು ಕಷ್ಟಸಾಧ್ಯ. ಸ್ವಂತಿಕೆ ಉಳಿಸಿಕೊಳ್ಳಲು ಅಚಲವಾದ ನಿರ್ಧಾರ ಬೇಕು. ಅನುಕೂಲಕ್ಕೆ ತಕ್ಕಂತೆ ತಮ್ಮನ್ನು ತಮ್ಮ ವಿಚಾರಗಳನ್ನು ಬದಲಾಯಿಸಿಕೊಳ್ಳುವ ಜನರನ್ನು ಹೀಗೆ ಚಿತ್ರಿಸಿದ್ದಾರೆ.

'ತೂಗಾಡುವ ಕಿರೀಟಗಳಿಗೆ ತಕ್ಕಂತೆ
ತಲೆಯ ಆಕಾರಗಳನ್ನು ಬದಲಾಯಿಸುತ್ತ
ಪರದಾಡುವುದು ನನಗೆ ಅಭ್ಯಾಸವಿಲ್ಲ. (ನಿಲುವು—ಗೋಡೆ)

ಸಮಾಜದ ಅನ್ಯಾಯ ಅನೀತಿಗಳನ್ನು ಸಹಿಸದ ವ್ಯಕ್ತಿ ಎಲ್ಲ ಅನ್ಯಾಯ ಅನೀತಿಗಳಿಗೂ ಕೊನೆ ತರಲು ಪ್ರಯತ್ನಿಸುತ್ತಾನೆ. ಬಹಳ ಚತುರನಾದ ದುಷ್ಟನನ್ನು ಹಿಡಿದು ಶಿಕ್ಷಿಸಲು ಸಾಮಾನ್ಯರಿಂದ, ಸಾಮಾನ್ಯ ಉಪಾಯದಿಂದ ಅಸಾಧ್ಯವಾದ್ದರಿಂದ ವಿಶೇಷ ವ್ಯಕ್ತಿಗಳಿಗಾಗಿ ಜಾಹಿರಾತು ಮಾಡುವ ದಾಟಿಯಲ್ಲಿ ಕವನದ ಸ್ವರೂಪವಿದೆ. ಕ್ರಮವಾಗಿ ಲಂಗು ಲಗಾಮಿಲ್ಲದೆ ತೊಂಡು ಮೇಯುವ ಕುದುರೆಗಳನ್ನು ಹಿಡಿದು ಪಳಗಿಸಬಲ್ಲ ಅಶ್ವಾರೋಹಿ, ಸದಾ ಬಣ್ಣ ಬದಲಾಯಿಸುವ ಗೋಸುಂಬೆಗೆ ಬಣ್ಣ ಬದಲಾಗದಂತೆ ಇಂಜೆಕ್ಷನ್ ಚುಚ್ಚಬಲ್ಲ ವೈದ್ಯ, ಪರರ ಶ್ರಮದ ಸೊತ್ತನ್ನು ಸದಾ ಹೀರುವ ಇಲಿಹೆಗ್ಗಣಗಳನ್ನು ಹಿಡಿಯಲು ಬೋನು ಮಾಡುವ ಕುಶಲಿ, ಬಂದಳಿಕೆ ಸಸ್ಯ ಕತ್ತರಿಸಿ, ಈ ನೆಲದಲ್ಲೇ ಬೇರೂರಿಸಿ ಕಸಿಮಾಡಬಲ್ಲ ತೋಟಿಗ, ಕದೀಮ ಪುಡಾರಿಗಳನ್ನು ಹಿಡಿಯುವ ಗೂಢಚಾರ ಈ ಎಲ್ಲರು ಬೇಕಾಗಿದ್ದಾರೆ. ಚತುರ ದುಷ್ಟರನ್ನು ಬಂಧಿಸಿ ಶಿಕ್ಷಿಸಲು ಆಯಾ ವಿಭಾಗಗಳಲ್ಲಿ ವಿಶೇಷವಾಗಿ ಪರಿಣತಿ ಹೊಂದಿರುವ ವ್ಯಕ್ತಿಗಳ ಅವಶ್ಯಕತೆ ಇದೆ. ಎಲ್ಲ ಹುದ್ದೆಗಳಿಗೆ

'ನಿಮಿಷಕ್ಕೊಮ್ಮೆ ಬಣ್ಣ ಬದಲಾಯಿಸುವ ಈ
ಗೋಸುಂಬೆಗಳನೆಲ್ಲ ಹಿಡಿದು,
ಎಂದೂ ಬದಲಾಗದಂಥ ಬಣ್ಣ ಬರುವಂಥ
ಇಂಜಕ್ಷನ್ ಚುಚ್ಚುವ
ವೈದ್ಯ ಮಹನೀಯನೊಬ್ಬ
ಅರ್ಜೆಂಟಾಗಿ ಬೇಕಾಗಿದೆ— (ಬೇಕಾಗಿದೆ—ಗೋಡೆ)

ಇರುವ ವಿಶೇಷ ಅವಶ್ಯಕತೆ,

'ಹಾಕಿರಿ ಅರ್ಜಿ ; ಬೇಕಾದದ್ದು
ನಿಯತ್ತು ಮತ್ತು
ತಾಕತ್ತು—' (ಅದೇ)

ಸಮಾಜದ ವೈವಿಧ್ಯಮಯವಾದ ಸಮೃದ್ಧವಾದ ಚಿತ್ರಣ ಜಿ.ಎಸ್.ಎಸ್. ಅವರ ಕವನಗಳಲ್ಲಿ ಕಂಡುಬರುತ್ತದೆ. ಸಮಾಜವನ್ನು ಇಡಿಯಾಗಿ ನೋಡುವ ಮತ್ತು ಬಿಡಿಯಾಗಿ ನೋಡುವ ಎರಡೂ ರೀತಿಯ ದೃಷ್ಟಿಗಳೂ ಅವರ ಕವಿತೆಗಳಲ್ಲಿ ಸ್ಪಷ್ಟವಾಗಿ ಕಂಡುಬರುತ್ತವೆ. ಕೆಲವು ಕವನಗಳಲ್ಲಿ ಸಮಾಜವನ್ನು ಕುರಿತು ವ್ಯಂಗ್ಯ ದೃಷ್ಟಿಯೇ ಪ್ರಧಾನವಾಯಿತೇನೋ ಎಂದು ಕೆಲವರಿಗೆ ಭಾಸವಾಗಬಹುದು. ಆದರೆ ಹೆಚ್ಚಿನ ಕವನಗಳೆಲ್ಲವೂ ವ್ಯಂಗ್ಯದ ಆವರಣದಲ್ಲೇ ನಿಲ್ಲದೆ ಕವಿ ಆ ಆವರಣದಿಂದ ಹೊರಬಂದು ಸಮಾಜದ ವಾಸ್ತವ ಚಿತ್ರವನ್ನು ಮತ್ತು ಅನುಭವಗಳನ್ನು ಕೊಡುವ ಕಲಾತ್ಮಕ

ದಾಖಲೆಗಳಾಗಿವೆ. ಕೆಲವು ಕವನದ ವಸ್ತುಗಳು ಸಾಮಾನ್ಯವಾಗಿ ವ್ಯಂಗ್ಯವೋ ಕಟಕಿಯೋ ಆಗಬಹುದಾದವು ಕವಿಗಳ ಶುದ್ಧ ಮನಸ್ಥಿತಿಯಿಂದ ವಸ್ತುಸ್ಥಿತಿ ನಿರೂಪಣೆಯ ಕಲಾತ್ಮಕ ಸೃಷ್ಟಿಗಳಾಗಿವೆ. ನಾಗರಿಕ ಬದುಕಿನಲ್ಲಿ ವ್ಯಕ್ತಿ ತನ್ನ ನೈಜ ಭಾವನೆಗಳನ್ನು, ವ್ಯಕ್ತಿತ್ವವನ್ನು ಉಳಿಸಿಕೊಳ್ಳಲಾಗದೆ ಬೇರೆಬೇರೆಯ ಮುಖವಾಡ ಧರಿಸಿ, ಬೇರೆಬೇರೆ ಕೊರಳುಗಳಲ್ಲಿ ನರಳುವ ದುರಂತವೂ, ಅನೇಕ ಪ್ರಭಾವ, ಪ್ರವಾಹಗಳ ಮಧ್ಯೆ ಗಟ್ಟಿ ನಿಲುವಿನಲ್ಲಿ ಬದುಕಲಾರದ ವ್ಯಕ್ತಿಗಳ ಅನಾಥ ಏಕಾಕಿತನ ಇವುಗಳಿಂದ ಉಂಟಾಗುವ ಉರಿಯುವ ಜುಗುಪ್ಸೆ ಪರಕೀಯತೆಗಳೂ ಅನೇಕ ಕವನಗಳ ವಸ್ತುವಾಗಿರುವುದು ಕಂಡು ಬರುತ್ತದೆ. ಬದಲಾದ ಬದುಕಿಗೆ ಬೆನ್ನಾಗದೆ ಎರಡನ್ನೂ ಸಮತೂಕದಿಂದ ನೋಡಬಲ್ಲ ಹಿರಿಯ ವ್ಯಕ್ತಿತ್ವವನ್ನು ಅನೇಕ ಕವನಗಳ ಹಿಂದೆ ಗುರುತಿಸಬಹುದು. ಸಮಕಾಲೀನ ಸಮಾಜದ ತುಡಿತವನ್ನು, ಗೊಂದಲವನ್ನು, ಸಂಕೀರ್ಣತೆಯನ್ನು ಅವುಗಳ ಸೂಕ್ಷ್ಮತೆಯನ್ನು ಸರಳಗೊಳಿಸದೆ ಅಭಿವ್ಯಕ್ತಿಗೆ ಒಳಗು ಮಾಡಿರುವುದನ್ನು ನಾವು ಕಾಣಬಹುದು. 'ದೀಪದ ಹೆಜ್ಜೆ'ಯಿಂದ ಮುಂದಿನ ಕವನ ಸಂಕಲನಗಳಲ್ಲಿ ಕವಿ ತಮ್ಮ ಸುತ್ತಲಿನ ಪರಿಸರವನ್ನು ಬಹು ಸೂಕ್ಷ್ಮವಾಗಿ ಪರಿಶೀಲಿಸಿ ಕಾವ್ಯಾಭಿವ್ಯಕ್ತಿ ಕೊಡುತ್ತಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಒಟ್ಟಿನಲ್ಲಿ ಜಿ.ಎಸ್.ಎಸ್. ಅವರ ಕವಿತೆಗಳಲ್ಲಿ ಮೂಡಿರುವ ಸಮಾಜವು ವಾಸ್ತವವೂ, ವಸ್ತುನಿಷ್ಠವೂ ಆಗಿದೆ. ಮತ್ತು ಚಿಕಿತ್ಸಕ ದೃಷ್ಟಿಯಿಂದ ಕೂಡಿದ ಕಲಾತ್ಮಕ ಸೃಷ್ಟಿಯೂ ಆಗಿದೆ.

## ಕಾಳೇಗೌಡ ನಾಗವಾರ

# ವಿಡಂಬನೆ

೧

ಕವಿಯ ಅಭಿವ್ಯಕ್ತಿಯಲ್ಲಿ ವಿಡಂಬನೆಯ ಸ್ಥಾನವನ್ನು ಕುರಿತು ನನಗಂತೂ ಮೊದಲಿನಿಂದಲೂ ಕುತೂಹಲ. ಏಕೆಂದರೆ, ವಿಡಂಬನೆಯು ಕವಿ ಮತ್ತು ಸಮಾಜದ ನಡುವಿನ ಸಂಬಂಧದ ವಿನ್ಯಾಸವನ್ನು ಪ್ರಕಟಿಸುತ್ತದೆ. ಕಾವ್ಯದಲ್ಲಿ ಅಭಿವ್ಯಕ್ತವಾಗುವ ವಿಡಂಬನೆಯ ಹಿಂದಿನ ಮೂಲಪ್ರೇರಣೆ ಮತ್ತು ಪರಿಣಾಮಗಳು ಕವಿಯ ತಾತ್ವಿಕ ನೆಲೆಯನ್ನು ಸ್ಪರ್ಶಿಸುವಲ್ಲಿ ತುಂಬಾ ಸಹಾಯಕವಾಗುತ್ತವೆ. ಏಕೆಂದರೆ ಎಲ್ಲ ವಸ್ತುವಿನ ಮೇಲೂ, ಕವಿ ಕಾವ್ಯ ರಚಿಸಲು ಸಾಧ್ಯವಿಲ್ಲ. ತನಗೆ ಗಾಢವಾಗಿ ಅನ್ನಿಸಿದ್ದನ್ನು, ಕೆರಳಿಸಿದ್ದನ್ನು ಕುರಿತು ಮಾತ್ರ ಆತ ಹಾಡುತ್ತಾನೆ. ವಿಡಂಬನೆಯ ಹಿಂದೆ ಇರುವುದು ಸೂಕ್ಷ್ಮ ಕೆರಳಿಕೆ. ಈ ಸೂಕ್ಷ್ಮ ಕೆರಳಿಕೆಯ ಕಾರಣಗಳನ್ನು ವಿಡಂಬಿಸುವಾಗ ಕವಿ ಒಂದು ನಿರ್ದಿಷ್ಟ ತಾತ್ವಿಕನೆಲೆಯಲ್ಲಿ ನಿಂತಿರುತ್ತಾನೆ. ಹೆಚ್ಚು ಆಳವಾದ ಮಾನವೀಯ ವಿಡಂಬನೆಯ ಹಿಂದೆ ದಟ್ಟವಿಷಾದ ಕೂಡಾ ಇರುತ್ತದೆ. ಇಲ್ಲದಿದ್ದರೆ ಜಗತ್ತಿಗೆ ಹೊಂದಿಕೊಳ್ಳಲಾಗದ ಸಿನಿಕನೊಬ್ಬನ ಉರಿಕಾರುವಿಕೆಯನ್ನು ಕೂಡಾ ವಿಡಂಬನೆಯೆಂದು ಒಪ್ಪಿಕೊಳ್ಳಬೇಕಾಗಿ ಬರುತ್ತದೆ; ಆದರೆ ಅದು ವಾಸ್ತವವಾಗಿ ದ್ವೇಷ. ಈ ಮೇಲೆ ಹೇಳಿದ ಕೆಲವು ಅಂಶಗಳ ಹಿನ್ನೆಲೆಯಲ್ಲಿ ಜಿ. ಎಸ್. ಶಿವರುದ್ರಪ್ಪನವರ ಕಾವ್ಯದ ವಿಡಂಬನೆಯನ್ನು ವಿವರಿಸುವುದು ಈ ಕಿರುಲೇಖನದ ಉದ್ದೇಶ. ಇದರ ಜೊತೆಯಲ್ಲಿಯೇ ಅದರ ಹಿಂದಿನ ಪ್ರೇರಣೆ, ಪರಿಣಾಮಗಳನ್ನು ಕುರಿತು ಸೂಚ್ಯವಾಗಿ ಹೇಳಲು ಪ್ರಯತ್ನಿಸಿದ್ದೇನೆ.

೨

ಜಿ.ಎಸ್.ಎಸ್ ತಮ್ಮ ಕಾವ್ಯಜೀವನ ಪ್ರಾರಂಭಿಸಿದ್ದು ರೊಮ್ಯಾಂಟಿಕ್ ಮಾರ್ಗದಲ್ಲಿ; ಅದೂ ಸಹ ಕುವೆಂಪುರವರ ಸರ್ವತೋಮುಖ ಪ್ರಭಾವದಲ್ಲಿ ಹುಟ್ಟಿದ ಕಾವ್ಯ. ಈ ಸಂದರ್ಭದಲ್ಲಿ ಇನ್ನೂ ಒಂದು ಗಮನಿಸಬೇಕಾದ ಮುಖ್ಯ ಅಂಶ ಇದೆ. ಕುವೆಂಪು ಕಾವ್ಯದಲ್ಲಿ ವಿಡಂಬನೆಗಿಂತ ಸಿಟ್ಟು ಜಾಸ್ತಿ. ಉಕ್ಕುವ ಜೀವನೋತ್ಸಾಹದ, ಬೆರಗುಗಣ್ಣಿನ ಕವಿಗೆ ಅಂಥ ತೀವ್ರವಾದ ವಿಡಂಬನೆ ಸಾಧ್ಯವಿಲ್ಲ. ಆದಕ್ಕಾಗಿಯೇ ಕುವೆಂಪು

ಸುತ್ತಲಿನ ಕರಾಳತೆಯ ವಿರುದ್ಧ ಸಿಟ್ಟಿಗೆದ್ದರು; ಎದೆಯಾಳದಿಂದ ಹುಟ್ಟಿದ ರೋಷದಿಂದ ಅದನ್ನು ಕೊಚ್ಚಿದರು :

ಹರಕೆ ಯಾರದೊ? ಹಬ್ಬವಾರಿಗೊ? ಅದಾವಗಂ
ಸಾಮ್ರಾಜ್ಯಕಾಳಿಗಾನಲ್ತೆ ಕುರಿ ಕೊಲೆಗೆ?
ಕುಂಯ್ಯುಗ್ಗರಿಯನೆಂತಂತೆ ಸಾವು ಬದುಕಿನ ನಡುವೆ
ಕರುಣೆ ಗರಗಸದಿಂದ ಸೀಳುವರು ಬೆಲೆಗೆ.

('ರೈತನ ದೃಷ್ಟಿ')

ಶಾಸ್ತ್ರದ ಆಚಾರದ ಧರ್ಮದ ಕಬ್ಬಿಣನೇಣು,
ಸಿಲುಕಿಹುದದರಲಿ ಮಾನವನಮೃತಾತ್ಮದ ಗೋಣು!

('ದೇವರು-ಪೂಜಾರಿ')

ಬಡಬಗ್ಗರ ಗುಡಿಸಲುಗಳ ಮುರಿದು
ಗುಡಿಗಳ ಕಟ್ಟುವರೆನಗಾಗಿ!

('ಅವತಾರ')

ಕೂಳನು ಹೆಮ್ಮೆಗೆ ಬಿಸುಡುವರಲ್ಲಿ,
ಹೊಟ್ಟೆಗೆ ಇಲ್ಲದೆ ಕೊರಗುವರಿಲ್ಲಿ!

('ಕಲ್ಕಿ')

ಸೆರೆಯನು ತಪ್ಪಿಸಿಕೊಳ್ಳದ ತೆರದಲಿ
ಅರ್ಚಕ ರಕ್ಷೆಯಿದೆ;
ತೆಂಗಿನ ಕಾಯೊಳೆ ತಲೆಯನು ಬಡಿಯುವ
ಪೂಜೆಯ ಶಿಕ್ಷೆಯಿದೆ!

('ದೇವರು ಸೆರೆಯಾಳ್')

ನೂರು ದೇವರನೆಲ್ಲ ನೂಕಾಚೆ ದೂರ
ಭಾರತಾಂಬೆಯೆ ದೇವಿ ನಮಗಿಂದು ಪೂಜಿಸುವ ಬಾರ!

ಗುಡಿಯೊಳಗೆ ಕಣ್ಮುಚ್ಚಿ ಬೆಚ್ಚಗಿರುವರನೆಲ್ಲ
ಭಕ್ತರಕ್ತವ ಹೀರಿ ಕೊಬ್ಬಿಹರನೆಲ್ಲ,
ಗಂಟೆ ಜಾಗಟೆಗಳಿಂ ಬಡಿದು, ಕುತ್ತಿಗೆ ಹಿಡಿದು
ಕಡಲಡಿಗೆ ತಳ್ಳಿರೈ ಶಂಖದಿಂ ನುಡಿದು!

ಸತ್ತ ಕಲ್ಗಳ ಮುಂದೆ ಅತ್ತು ಕರೆದುದು ಸಾಕು
ಜೀವದಾತೆಯನಿಂದು ಕೂಗಬೇಕು!
ಶಿಲೆಯ ಮೂರ್ತಿಗೆ ನೆಯ್ದ ಕಲೆಯ ಹೊದಿಕೆಯನೊಯ್ದು
ಚಳಿಯ ಮಳೆಯಲಿ ನವೆವ ತಾಯ್ಗೆ ಹಾಕು!

('ಇಂದಿನ ದೇವರು')

ಈ ಬಗೆಯ ಅನೇಕ ಪದ್ಯಗಳು ಕುವೆಂಪುರವರ ಮೌಢ್ಯವಿರೋಧಿಯಾದ ಧೋರಣೆಗೆ ಸಾಕ್ಷಿಯಾಗಿವೆ. ಆದರೆ ಅವರ ಕಾವ್ಯದ ಮುಖ್ಯ ನೆಲೆ ಬೇರೆ. ಕುವೆಂಪು ವಿಡಂಬನೆಯ

ಹಂತವನ್ನು ದಾಟಿದ ನೆಲೆಯನ್ನೂ ಮುಟ್ಟುವ ಗುರಿಯ ಸಮರ್ಥರು. ಮೊದಲೇ ಹೇಳಿದಂತೆ ಕುವೆಂಪುರವರ ಸರ್ವತೋಮುಖ ಪ್ರಭಾವ ಜಿ.ಎಸ್.ಎಸ್. ಅವರ ಮೊದಲಿನ ಕವನಗಳಲ್ಲಿ ಕಾಣಿಸುತ್ತದೆ. ಅದಕ್ಕಾಗಿಯೇ ಅವರ ಮೊದಲ ಸಂಕಲನವಾದ 'ಸಾಮಗಾನ'ದಲ್ಲಿ ಯಾವ ಹಂತದಲ್ಲೂ ವಿಡಂಬನೆಯ ಸುಳಿವೇ ಇಲ್ಲ; ಎಷ್ಟೇ ಆಗಲಿ ಅದು ರಸಪರವಾದ ಧೋರಣೆಯಿಂದ ಹುಟ್ಟಿದ ಕಾವ್ಯ. ವಿಡಂಬನೆಯ ಮೂಲಹುಟ್ಟು ಇರುವುದೇ ಅಸಂಗತತೆಯಲ್ಲಿ, ಅಸ್ತವ್ಯಸ್ತತೆಯಲ್ಲಿ ರಸಪರವಾದ, ಆನಂದಪರವಾದ ಧೋರಣೆ ಇಂಥ ಅಸ್ತವ್ಯಸ್ತತೆಯನ್ನು ಕಾಣುವುದೇ ಇಲ್ಲ. ಕಂಡರೂ ಇದಕ್ಕೆ ಮಹತ್ವಕೊಡದೆ ತಳ್ಳಿಹಾಕುತ್ತದೆ. 'ಸಾಮಗಾನ'ದಲ್ಲಿ ಚೆಲುವಿನ ಉಪಾಸಕನೊಬ್ಬನ ಮುಗ್ಧೋತ್ಸಾಹದ ಅಭಿವ್ಯಕ್ತಿಯನ್ನು ಕಾಣುತ್ತೇವೆ. ಜೊತೆಗೆ ಒಪ್ಪಿದ ಮೌಲ್ಯಗಳನ್ನು ಯಾವುದೇ ಅಗ್ನಿಪರೀಕ್ಷೆಗೆ ಒಡ್ಡದೇ ಇದ್ದ ಸ್ಥಿತಿ, ಅದು. ಆದ್ದರಿಂದ ಅಲ್ಲಿ ವಿಡಂಬನೆಗೆ ಬೇಕಾದ ಮನೋಭೂಮಿಕೆಯೇ ಕಾಣುವುದಿಲ್ಲ. ತುಂಬಾ ಕುತೂಹಲದ ಸಂಗತಿಯೆಂದರೆ, ಇಂಥ ಒಂದು ಉತ್ಸಾಹದ ಸ್ಥಿತಿಯ ನಿರರ್ಥಕತೆಯ ಭಯ ಮತ್ತು ಅರ್ಥವಂತಿಕೆಯನ್ನು ಕಾಪಾಡಿಕೊಳ್ಳುವ ಛಲವೇ ಮುಂದಿನ ಕಾವ್ಯದಲ್ಲಿ ವಿಡಂಬನೆಯ ಮೂಲಧಾತುವಾಗಿ ಪರಿಣಮಿಸಿತು.

೩

ಬರುಬರುತ್ತಾ ಜಿ.ಎಸ್.ಎಸ್ ಕಾವ್ಯದಲ್ಲಿ ಮೊದಲಿನ ಹಾಡುಗಾರನೊಬ್ಬನ ಖುಷಿ ಮಾಯವಾಗಿ ವಿಡಂಬನೆಯೇ ಒಂದು ವಿಶಿಷ್ಟ ದೃಷ್ಟಿಕೋನವಾಗಿ ಪ್ರಕಟವಾಗುತ್ತದೆ. ಜೀವನದ ಹಲವು ಹತ್ತು ದಿಕ್ಕಿನ ಶಕ್ತಿಗಳ ಸೆಳೆತದ ಪರಿಚಯ ಆಗತೊಡಗಿದೆ. ಇದೆಲ್ಲದರ ಸೆಳೆತದಿಂದ ಅಂತರಂಗ ಅವ್ಯವಸ್ಥೆಗೆ ಒಳಗಾಗಿದೆ. ಕೆಲವು ಶಕ್ತಿಗಳು ಜೀವನದ ಪೂರ್ಣತೆಯ ಆಕಾಂಕ್ಷೆಯನ್ನು ಕತ್ತರಿಸಿಹಾಕುತ್ತವೆ. "ಯಾವ ಬೆಳಕಿನ ಪಾತಾಳ ಗರುಡವು ಬಂದು....ಎಂದು ಒಯ್ಯುವುದೊ ಕಾಣೆ ಬಿತ್ತರದ ಬಾನ್ಗೆ?" ಎಂಬ ನಿರೀಕ್ಷೆಯ ಸ್ಥಿತಿಯೇ ಈ ಕಾವ್ಯದ ಹಿಂದಿನ ಪ್ರಮುಖ ಒತ್ತಡ. ಈ ನಿರೀಕ್ಷೆ ಮತ್ತು ವಾಸ್ತವಗಳ ನಡುವೆ ಇರುವ ವ್ಯಕ್ತಿಯ ಬದುಕನ್ನು ಕುರಿತು ಹೇಳಬೇಕಾದ ಕವಿ ಅನಿವಾರ್ಯವಾಗಿ ವಿಡಂಬನೆಗೆ ಮರೆಹೋಗುತ್ತಾರೆ. ಇಲ್ಲಿಯ ವಿಡಂಬನೆ ಲಘುವಾದುದ್ದಲ್ಲ; ಬದಲಾಗಿ ಮೊದಲೇ ಹೇಳಿದ ಹಾಗೆ ಒಂದು ದೃಷ್ಟಿಕೋನವಾಗಿ ಪ್ರಕಟವಾಗುತ್ತದೆ. ಪ್ರಕಟಿಸಿಕೊಳ್ಳುತ್ತಿರುವ ಗಾಂಭೀರ್ಯ ಮತ್ತು ಅದರ ಹಿಂದಿನ ವಿಷಾದಗಳಿಂದಾಗಿ ವಿಡಂಬನೆ ಒಟ್ಟು ಜೀವನದ ಮೇಲೆಯೇ ಮಾಡಿದ ಅರ್ಥಪೂರ್ಣ ವ್ಯಾಖ್ಯಾನವಾಗುತ್ತದೆ. ಅಂತಹ ಕೆಲವು ಸಾಲುಗಳನ್ನು ಗಮನಿಸಿ:

ಬ್ಯಾಂಕಿನೆಡೆ ಬಂದು ಕಂಡೆನು ನಾನು
ಕೈಯೊಳಿದೆ ರುಜುವಿರದ ಚೆಕ್ಕು.
ಹಣವಿದೆ ಅಲ್ಲಿ; ಅದರಿದಕಿನ್ನಾರು ಹಣ ಕೊಟ್ಟಾರು

ಯಾರಿಗಿದೆ ಕೊಡುವ ಹಕ್ಕು ?
ಕೊಟ್ಟವನು ಇದಕೆ ರುಜುಹಾಕಿದರೆ ತಾನೆ
ಕೈಗೆ ರೂಪಾಯಿ ಝಣಕು ಝಣಕು ?
ಅವನು ಎಲ್ಲಿದ್ದಾನೋ ಹುಡುಕಬೇಕು.

('ಅರೆಮುಗಿದ ಕವನ')

ಮೇಲಿನ ಸಾಲುಗಳಲ್ಲಿ ಪ್ರಕಟವಾಗುವ ಸನ್ನಿವೇಶದಲ್ಲಿ ವಿಡಂಬನೆ ಪ್ರಮುಖ ಕಾವ್ಯ ಗುಣವಾದ ಐರನಿಯ ಅಂಶಗಳನ್ನು ಸಾಧಿಸುತ್ತದೆ. ಬ್ಯಾಂಕಿನಲ್ಲಿ ಹಣವಿದೆ. ಕೈಯಲ್ಲಿ ಚೆಕ್ಕೂ ಇದೆ, ನಿಜ. ಆದರೆ ಅದಕ್ಕೆ ರುಜುಮಾತ್ರ ಇಲ್ಲ. ಬದುಕಿನಲ್ಲಿ ಸಾಧ್ಯವಿದ್ದೂ ದಕ್ಕಿಸಿಕೊಳ್ಳಲಾಗದ ಸ್ಥಿತಿಯ ಮೇಲಿನ ವ್ಯಾಖ್ಯಾನ ಇದು. ಇಂಥ ಕಡೆಗಳಲ್ಲಿ ವಿಡಂಬನೆ ಒಂದು ಜೀವನದೃಷ್ಟಿಯ ಸಮಗ್ರತೆಯ ಅಂಗವಾಗಿ, ಆರೋಗ್ಯಕರ ಸ್ಥಿತಿಯನ್ನು ಕಾಪಾಡುವ ಚಿಕಿತ್ಸಕನಾಗಿ ಪ್ರಕಟವಾಗುತ್ತದೆ.

ಕನ್ನಡಿಯೆದುರು ಒಂದೊಂದೆ ಬೆಳ್ನವಿರ
ಹಿಡಿದು ಕೀಳುವ ಚಪಲ ;
ಇಲ್ಲ, ಅಂಗಡಿಯಿಂದ ಕಪ್ಪು ಬಣ್ಣವ ತಂದು
ಬಳಿದು ಕಪ್ಪಗೆ ಮಾಡಿ, ಬೈತಲೆ ತೆಗೆದು
ಹಳೆಯ ಸೂಟನು ಮತ್ತೆ ಇಸ್ತ್ರಿ ಮಾಡಿ
ತೊಟ್ಟು ಪೇಟೆಯ ತುಂಬ ಅಲೆವ ಬಯಕೆ.
ನಡುಮನೆಯಿಂದ ರೇಡಿಯೋ ದನಿ ಕೇಳಿಸಿತು :
'ಭಜಗೋವಿಂದಂ ಭಜಗೋವಿಂದಂ
ಭಜಗೋವಿಂದಂ ಮೂಢಮತೇ...
ಕುಸಿದು ಕುಳಿತೆನು ಕುರ್ಚಿಯಲಿ ಚಿಂತಾಕ್ರಾಂತ,
ಗಡಿಯಾರಗಳ ದನಿಗೆ ಕಿವಿಯ ಮುಚ್ಚಿ

('ಗಡಿಯಾರದಡಿಯಲ್ಲಿ')

ಇದು ಕಾಲವನ್ನು ಗೆಲ್ಲಬಯಸುವ ಆಧುನಿಕ ಯಯಾತಿಯ ಬದುಕಿನ ಚಿತ್ರ. ಕವಿಯ ಪ್ರಕಾರವೇ ಇದು ಭಯಮೂಲವಾದ ಪ್ರಯತ್ನ. ಅನಂತಕಾಲವನ್ನು ಗೆಲ್ಲಲು ವ್ಯಕ್ತಿ ಬಳಸುವ ಸಾಧನಗಳೋ ತನ್ನ ಪರಿಸರದ ಲಘುಸಾಮಗ್ರಿಗಳು ; ಅದೂ ದೇಹಕ್ಕೆ ಸಂಬಂಧಪಟ್ಟದ್ದು. ಅಂಥ ವ್ಯರ್ಥಪ್ರಯತ್ನದ ವಿಡಂಬನೆ ಇಲ್ಲಿ ಒಮ್ಮೆಗೇ ಗಾಢವಾದ ಮತ್ತು ಸೂಕ್ಷ್ಮವಾದ ರೀತಿಯಲ್ಲಿ ಮುಂದೆ ಬರುವ

ಮನೆಯೊಳಗಿಂದ ಪುಟ್ಟ ಮೊಮ್ಮಗು ಬಂದು
ಸಕ್ಕರೆಯ ತೊದಲಿಂದ 'ಅಜ್ಜ' ಎಂದಿತು ಒಮ್ಮೆ.
ಮುಂಬೆಳಗಿನೆಳೆಬಿಸಿಲು ಸಂಜೆ ಬಾನಿಗೆ ಬಿತ್ತು !

ಎಂಬ ನಂಬುಗೆಯ ಸಾಲುಗಳಿಗೆ ಮೇಲೆ ಹೇಳಿದ ಸಾಲುಗಳು ನೆಲೆಗಟ್ಟನ್ನು ಒದಗಿಸುತ್ತವೆ. ಜಿ.ಎಸ್.ಎಸ್.ರವರ ಯಶಸ್ವೀ ಕವನಗಳಾದ 'ಮುಂಬೈ ಜಾತಕ', 'ಮಬ್ಬಿನಿಂದ

ಮಬ್ಬಿಗೆ', 'ವಿಫಲ'—ಕವನಗಳಲ್ಲಿ ಕೂಡ ವಿಡಂಬನೆ ಆ ಕವನಗಳ ತಾತ್ವಿಕ ಸಮಗ್ರತೆಯ ಒಂದಂಗವಾಗಿಯೇ ಪ್ರಕಟವಾಗುತ್ತದೆ. ವಾಸ್ತವವನ್ನು ಕುರಿತು ಹೇಳುವಾಗ ವಿಡಂಬನೆ ಪ್ರಕಟವಾದರೂ ಅದು ನಿಂತಿರುವ ನೆಲೆ ಆದರ್ಶವನ್ನು ಆಧರಿಸಿದ ಧೈರ್ಯ ವಂತಿಕೆ. ಆದ್ದರಿಂದ ಇಂತಹ ಕವನಗಳಲ್ಲಿ ವಿಡಂಬನೆ ಜೀವನಕ್ಕೆ ಸಂಬಂಧಿಸಿದಂತೆ ಧನ್ಯತೆಯ ತೋರುಬೆರಳಾಗುತ್ತದೆ. ಅಂದರೆ ಬದುಕಿನ ವಿಫಲತೆಯ ದಿಕ್ಕನ್ನು ತೋರಿಸುತ್ತಲೇ ಸಫಲತೆಯ ಮಾರ್ಗವನ್ನು ಕಂಡುಕೊಳ್ಳುತ್ತದೆ. ವ್ಯಕ್ತಿಸಾರ್ಥಕ್ಯವನ್ನು ಕುರಿತ ಮೇಲಿನ ಕವನಗಳಲ್ಲಿ ಮಾತ್ರ ವಿಡಂಬನೆಯು ಐರನಿಯ ಹಂತಕ್ಕೆ ಏರುತ್ತದೆ. ಸಮಗ್ರ ತಾತ್ವಿಕ ನೆಲೆಯಲ್ಲಿ ಬೆರೆಯುತ್ತದೆ.

೪

(i) ರಾಷ್ಟ್ರಜೀವನದ ಗೊಂದಲ.
(ii) ರಾಜಕೀಯ ಗೋಸುಂಬೆತನ.
(iii) ಸುತ್ತಲಿನ ವ್ಯಕ್ತಿಗಳ ಪೊಳ್ಳುತನ.
(iv) ಉಸಿರುಗಟ್ಟಿಸುವ ನಗರಜೀವನ.

—ಈ ಮೇಲಿನ ನಾಲ್ಕು ವಸ್ತು-ಚೌಕಟ್ಟುಗಳಿಗೆ ಸಂಬಂಧಿಸಿದ ಹಾಗೆ ವಿಡಂಬನೆ ಜಿ.ಎಸ್.ಎಸ್ ಕವನಗಳಲ್ಲಿ ಪೂರ್ಣತಾತ್ವಿಕ ನೆಲೆಯಾಗಿ ಪ್ರಕಟವಾಗುತ್ತದೆ.

ಒಂದು ಕಾಲಕ್ಕೆ ದೇಶದ ಗೊಂದಲ, ರಾಜಕೀಯ ಗೋಸುಂಬೆತನ ಎಲ್ಲ ಕವಿಗಳನ್ನೂ ಆಳವಾಗಿ ಕಲಕಿದ್ದ ಸಮಸ್ಯೆ. ಅದರ ವಿರುದ್ಧ ಇವರು ಸಿಟ್ಟಿನಿಂದೇನೂ ಕೂಗಾಡುವುದಿಲ್ಲ. ಸಿಟ್ಟು ವ್ಯರ್ಥವೆಂದೂ ಇವರಿಗೆ ಗೊತ್ತು. ದೇಶದ ಭವಿಷ್ಯದ ನಾಯಕರಾದ ವಿದ್ಯಾರ್ಥಿಗಳ ಸ್ಥಿತಿಯನ್ನು ಕುರಿತು ಕವಿ ವಿಡಂಬಿಸುತ್ತಾರೆ:

ನಮ್ಮೀ ಜನಗಣಮನ ಅಧಿನಾಯಕ
ಎಲ್ಲಿದ್ದಾನೆ ?
ಇದ್ದಾನೆ ; ಇಲ್ಲೆ ಇದ್ದಾನೆ:
ಕೈಯಲಿ ಕಲ್ಲನು ಹಿಡಿದಿದ್ದಾನೆ
ಬೀದಿ ದೀಪಗಳ ಕಿಟಕಿಗಾಜುಗಳ
ಒಡೆದಿದ್ದಾನೆ
ಬಸ್ಸಿಗೆ ಬೆಂಕಿ ಹಚ್ಚಿದ್ದಾನೆ
ಪುಸ್ತಕಗಳ ಎಸೆದಿದ್ದಾನೆ
ಮರಗಳ ಮುರಿದಿದ್ದಾನೆ
ಹೂಗಳ ಹೊಸಕಿದ್ದಾನೆ
ವರುಷಕ್ಕೊಂದೆರಡಾದರೂ ಲಂಕಾದಹನದ
ನಾಟಕ ಆಡುತ್ತಾನೆ.
ಸದಾ ಎಚ್ಚರವಾಗಿದ್ದಾನೆ.

ಇದೇ ಪದ್ಯದ ಮುಂದಿನ ಭಾಗದಲ್ಲಿ ಇನ್ನೊಂದು ವರ್ಗದ ಜನರನ್ನು ಕವಿ ಪರಿಚಯ ಮಾಡಿಕೊಡುತ್ತಾರೆ. ಈ ಜನಗಳೋ ಮೈಯೆಲ್ಲಾ ಹಬ್ಬಿರುವ ರೋಗದ ಹಾಗೆ, ದೇಶದ ಎಲ್ಲಾ ಕಡೆ ಇದ್ದಾರೆ:

ಎಲ್ಲೆಲ್ಲೂ ಇದ್ದಾನೆ.
ನಂಬದೆ ಕರೆದರು, ಕರೆಯದೆ ಇದ್ದರು
ಕಂಬ ಕಂಬದಲಿ ಕೂತಿದ್ದಾನೆ
ಕೊಂಬೆ ಕೊಂಬೆಗೂ ನೆಗೆಯುತ್ತಾನೆ
ಗೋಸುಂಬೆಯ ಕೋಟನು ತೊಟ್ಟಿದ್ದಾನೆ
ಮುಖಕ್ಕೆ ಮೈಕನು ಕಟ್ಟಿದ್ದಾನೆ.
ಮೇಲ್ಮನೆಯಲ್ಲೂ, ಕೆಳಮನೆಯಲ್ಲೂ
ಒಳಮನೆಯಲ್ಲೂ
ಆ ಅವನೇ ತುಂಬಿದ್ದಾನೆ.

('ಜನಗಣಮನ ಅಧಿನಾಯಕ')

ಸ್ವಾತಂತ್ರ್ಯಪೂರ್ವದ ಆದರ್ಶಗಳ ಪೈಕಿ ಗಾಂಧಿಯೇ ಅತ್ಯಂತ ದೊಡ್ಡ ಆದರ್ಶ; ಆತನನ್ನೂ ಬಲಿಕೊಟ್ಟ ದೇಶದ ಬಗ್ಗೆ ಕವಿಗೆ ಅಪಾರ ತಳಮಳವಿದೆ. ಮುಡಿಯಲ್ಲಿ ಬೆಳಕು ಹೊತ್ತು ನಿಂತ ಆತನ ಕಡಗೆ ನೋಡುತ್ತಾ ಈ ಹೊತ್ತಿನ ಸ್ಥಿತಿಯನ್ನು ಕವಿ ತೀಕ್ಷ್ಣವಾಗಿ ಚಿತ್ರಿಸಿದ್ದಾರೆ. ಅಂಥ ವ್ಯಕ್ತಿಯನ್ನು ನಮ್ಮ ಬದುಕಿನ ಶಾಶ್ವತಸತ್ಯವಾಗಿ ಒಪ್ಪಿಕೊಳ್ಳದ ಜನ ನಾವು; ನಮ್ಮ ಸ್ಥಿತಿ ಇದು:

ನಾವೂ ಇದ್ದೇವೆ—
ಗದ್ದುಗೆಯ ಮೇಲೆ ವಿರಾಜಿಸುವ ಪದ್ದನಗ್ನ ಮೃಗರಾಜನೆದುರು
ಪಂಚತಂತ್ರ ಪ್ರತಿಭೆಯಲ್ಲಿ ಬಾಲವಲ್ಲಾಡಿಸುತ್ತಾ,
ಗುಂಪಿನಲ್ಲಿ ಗೋವಿಂದವಾಗುತ್ತಾ,
ಬೇಯುವಲ್ಲೆಲ್ಲಾ ನುಗ್ಗಿ, ಕೈಗೆ ಸಿಕ್ಕಷ್ಟು ಲಪಟಾಯಿಸುತ್ತಾ,
ಬೀದಿಧೂಳುಗಳ, ಗಲ್ಲಿಗಳ, ಕೊಳಕುಗಳ,
ಕಿರುಚುಗಳ, ಬಣ್ಣಗಳ, ಕಣ್ಣುಗಳ ನಡೂಮಧ್ಯೆ...
ನಾವು ಅಂಗಾತ ಬಿದ್ದ ಜಿರಲೆಗಳು ಚಡಪಡಿಸಿ, ಹೇಗೋ ಎದ್ದು
ಬಿಚ್ಚಿಟ್ಟ ಬಟ್ಟೆಗಳಿಗಾಗಿ ತಡವರಿಸುತ್ತ
ಕೈಗೆ ಸಿಕ್ಕಿದ ಚಿಂದಿಯಲ್ಲೇ ಮೈಮುಚ್ಚಿ
ಮೂಲೆಗೆ ಸರಿದು, ಮುದುರಿ ನಿಲ್ಲುತ್ತೇವೆ.
ಸದ್ಯ ಈ ಕಾಡುವ ನೆರಳು ತೊಲಗಿದರೆ ಸಾಕಪ್ಪ,
ಎಂದು ಹಾರೈಸುತ್ತೇವೆ.
ಇದರಿಂದ ತಪ್ಪಿಸಿಕೊಂಡು ಉಸಿರಾಡಲೆಂದು ಆ ಅವನನ್ನು
ಹಾಡಿ ಹೊಗಳುತ್ತೇವೆ.

('ಗಾಂಧೀ ಶತಮಾನೋತ್ಸವ')

ಇಂಥ ನೈತಿಕಕೊಳಕಿನ ಸ್ಥಿತಿಯ ವಿರುದ್ಧ ಕವಿಯ ಪ್ರತಿಭಟನೆ ತೀವ್ರವಾದುದ್ದು; ಈಗ ತುಂಬಾ ತುರ್ತಾಗಿ ಆಗಬೇಕಾಗಿರುವುದು ಗಾಂಧಿಯ ಭಾವಚಿತ್ರದ ಅನಾವರಣ ವಲ್ಲ; ಬದಲಾಗಿ

ಅನಾವರಣವಾಗಬೇಕು ಮೊದಲು ನಮ್ಮ ಹೃದಯಕೆ
ಅನಾವರಣವಾದಮೇಲೆ ಸಿದ್ಧವಾಗು ಶಿಕ್ಷೆಗೆ.

('ಅನಾವರಣ')

ದೇಶದ ಜೀವನವೇ ಹೀಗಿರುವಾಗ ವ್ಯಕ್ತಿಯ ಮೇಲೆ ಇದರ ಪ್ರಭಾವ ಆಗದಿರುತ್ತ ದೆಯೇ? 'ಹಳೆಯ ಹೊಲಸು ಕಸವನು' ತೊಡೆಯಲು ಅಪಾರ ಧೈರ್ಯ, ನೈತಿಕ ತಾಕತ್ತು ಬೇಕು. ಕವಿಯ ಪ್ರಕಾರ ಅಂಥ ಕೆಲಸಗಳೆಲ್ಲ ಖಾಲಿ ಇವೆ. ಅದಕ್ಕೆ ಬೇಕಾದ ಅರ್ಹತೆಗಳು—'ನಿಯತ್ತು ಮತ್ತು ತಾಕತ್ತು.' ಇಂಥ ವಿಡಂಬನೆಯ ಹಿಂದೆ ರಾಷ್ಟ್ರ ಜೀವನ ಸ್ವಚ್ಛವಾಗಬೇಕೆಂಬ ಹಠ ಇದೆ. 'ಒರೆಗಲ್ಲು', 'ಅನಾವರಣ'—ಮುಂತಾದವು ಗಳು ಈ ಬಗೆಯ ಹಂಬಲವನ್ನು ಹೊತ್ತ ಪದ್ಯಗಳಾಗಿವೆ.

ಇಂಥದೆಲ್ಲದರ ನಡುವೆ ಬದುಕುತ್ತಿರುವವನಿಗೆ ತನ್ನ ಸಾತ್ವಿಕತೆಯನ್ನು ಕಾಪಾಡಿ ಕೊಳ್ಳುವುದೇ ಒಂದು ಹಿರಿಯ ಜವಾಬ್ದಾರಿ. ತನ್ನ ಸುತ್ತಲಿನ ಪರಿಸ್ಥಿತಿಯನ್ನು ಜನ ಗಳನ್ನು ವಿಡಂಬಿಸುವುದರ ಮೂಲಕ ತಾನು ಸ್ವಚ್ಛವಾಗಿ ಉಳಿಯಲು ಕವಿ ನಡೆಸುವ ಹೋರಾಟದ ಜಟಿಲತೆಯನ್ನು ಕೆಲವು ಕವನಗಳಲ್ಲಿ ಕಾಣಬಹುದು. ಈ ಬಗೆಯ ಪರಿಸ್ಥಿತಿ ಮತ್ತು ಜನಗಳನ್ನು ಅರಿತುಕೊಳ್ಳಲು ದಿವ್ಯ ಚಕ್ಷುಸ್ಸಿನ ಅಗತ್ಯವೇನೂ ಇಲ್ಲ:

ನೂರಾರು ಹಾಲುಬಿಳಿಕೊರಳಿನ ಸುತ್ತ ಕಂಸನ ಬೆರಳ–
ನೊತ್ತುಗಳ ತೋರಿಸಲೆ?
ನಕಲಿ ಪಾರ್ಥರಿಗಾಗಿ ನಿಸೊ ಜನ ಏಕಲವ್ಯರ ಬೆರಳ
ಕತ್ತರಿಸುವಾಚಾರ್ಯತಂತ್ರಗಳ ಗರಡಿಗಳ ತೋರಿಸಲೆ?
ಕೆಂಪುಟೇಪಿನ ಕೋಟೆಯಲಿ ಸೆರೆಯಾಗಿ ಬಿದ್ದಿರುವ
ನೂರಾರು ಮುಗ್ಧರದೃಷ್ಟಗಳ ತೋರಿಸಲೆ?
ಇದ್ದ ಬೆಳಕನ್ನೆಲ್ಲ ಬಚ್ಚಿಟ್ಟು, ಸುತ್ತ ಮಂಡಲಹಾಕಿ
ಮಲಗಿರುವ ಫಣಿಪತಿಯ ಹುತ್ತಗಳ ತೋರಿಸಲೆ?

('ಒರೆಗಲ್ಲು')

ಇಂಥ ಕೊಳೆತ ಸ್ಥಿತಿಯ ವಿರುದ್ಧ ಪ್ರತಿಭಟನೆ ಏಕಿಲ್ಲ? ಸ್ವಾಭಿಮಾನವನ್ನು ಮಾರಿ ಕೊಂಡಿರುವ ಜನಗೆ ಪುನರುತ್ಥಾನವಾದರೂ ಏಕೆ ಬೇಕು? ಅಂತಹವರನ್ನು ನೆನೆಸಿ ಕೊಂಡಾಗ ಕವಿ ಮತ್ತಷ್ಟು ಕಟುವಾಗುತ್ತಾರೆ:

ಶತಮಾನಗಳ ಕಾಲ ಕೊರಳ ಪಟ್ಟಿಯಲ್ಲೇ
ಬೆಳೆದ ನಾಯಿಗಳು ನಾವು

('ಗುಲಾಮರು')

ನಮ್ಮ ನಗರಗಳ ಜೀವನಕ್ರಮ ಕೂಡಾ ಅಸ್ತವ್ಯಸ್ತವಾದದ್ದು; ಯಾಂತ್ರಿಕ ವಾದದ್ದು. ಮನುಷ್ಯ ಮನುಷ್ಯರ ನಡುವೆ ಅರ್ಥಪೂರ್ಣ ಸಂಬಂಧವೇ ಇಲ್ಲವಾಗಿದೆ. ಗೊಂದಲ, ಗಜಿಬಿಜಿಗಳು ವ್ಯಕ್ತಿಯ ಮನಸ್ಸಿನ ಹಸುರನ್ನು ನಾಶ ಮಾಡುತ್ತವೆ:

ಬಿರುಬಿಸಿಲಲ್ಲೆ ಮಿರಿಮಿರೀ ಕರಿರಸ್ತೆ
ಸುಟ್ಟವಾಸನೆ ಹೊಡೆದು
ಉಜ್ಜಿ ನಡೆಯುವ ರಬ್ಬರಿನ ಗಾಲಿ ಧೂಳಿನ ಜೊತೆಗೆ
ಪೆಟ್ರೋಲುವಾಸನೆ ಬೆರೆತು
ವಿಲಕ್ಷಣ ಪಾಕ—
ಕೆಳಗೆಲ್ಲ ಹಾಳು ಸುರಿಯುವ ಹಗಲು, ಮೇಲೆ
ಬರಿ ತರಲೆ ಆಕಾಶ; ಮಳೆ ಬರುವುದೇ ಇಲ್ಲ,
ಹಾಳು ಶಿಖೆ—

('ಮಾರ್ಕೆಟ್ಟಿನಲ್ಲಿ ಬೇಸಿಗೆ')

ನಿಸರ್ಗದ ಸಹಜ ಸೌಂದರ್ಯ ಕೂಡಾ ದಕ್ಕದಾಗಿದೆ. ಅಂಥ ಬದುಕನ್ನು ಕುರಿತು ಕವಿ ಜನಪದಗೀತೆಯ ಸಾಲನ್ನೆತ್ತಿಕೊಂಡು, ಬೇರೆಯೇ ಅರ್ಥದಲ್ಲಿ ಹೇಳುತ್ತಾರೆ; ನಗರಗಳ ಬದುಕಿಗೆ ರೋಸಿಹೋದ ಅಭಿವ್ಯಕ್ತಿ ಇದು:

'ಬಾರಯ್ಯ ಬೆಳುದಿಂಗಳೇ
ನಮ್ಮೂರ ಹಾಲಿನಂಥ ಬೆಳುದಿಂಗಳೆ'
ಅವತ್ತಿನ ಹಾಲೂ ಇಲ್ಲ, ಅವತ್ತಿನ ಬೆಳ್ದಿಂಗಳೂ ಇಲ್ಲ,
ಉಪಮಾನ ಉಪಮೇಯುವೆರಡಕ್ಕೂ ಏನೆಂಥ ದುಸ್ಥಿತಿ!
ಈಗಲೋ ವಿದ್ಯುದ್ದೀಪಗಳ ನೀರು ಬೆರೆತ ಬೆಳ್ದಿಂಗಳು
ನಮ್ಮೂರಿನ ಮೇಲೆ!

('ಬಾರಯ್ಯ ಬೆಳುದಿಂಗಳೇ')

ಇಂಥ ಹಲವು ಹತ್ತು ವಿಷಮಂಡಲಗಳಿಂದ ಪಾರಾಗುವ ಹಂಬಲವೇ ಜಿ.ಎಸ್.ಎಸ್ ಅವರ ಕಾವ್ಯದ ವಿಡಂಬನೆಯ ಚೈತನ್ಯ. ಕಾವ್ಯಜೀವನದ ಮುಗ್ಧೋತ್ಸಾಹವನ್ನು ಉಳಿಸಿಕೊಳ್ಳುವುದು ಸಾಧ್ಯವಿಲ್ಲವಾದರೂ ಸಾತ್ವಿಕಶಕ್ತಿಯನ್ನಾದರೂ ಉಳಿಸಿಕೊಳ್ಳುವುದೇ ಆ ವಿಡಂಬನೆಯ ಪ್ರಮುಖ ಪರಿಣಾಮಗಳಲ್ಲೊಂದು. ಸುತ್ತಲ ಪರಿಸರದ ವಸ್ತುಗಳ ಬಗ್ಗೆ ವಿಡಂಬಿಸುವಾಗ ಕವಿ ಒಮ್ಮೊಮ್ಮೆ ಟೀಕಾಕಾರನಂತೆ ಕಾಣುತ್ತಾರೆ. ಆಗ ಬಳಸುವ ರೂಪಕಗಳು, ಪ್ರತಿಮೆಗಳು ವಿಷಾದದ ಆಳದಿಂದ ಬಂದುದಲ್ಲ. ಆದರೆ ಆ ವಿಡಂಬನೆಯ ಹಿಂದೆ ಹರಿಯುತ್ತಿರುವುದು ಶುದ್ಧಮಾನವೀಯ ಸೆಲೆ. ಭ್ರಷ್ಟತೆಯ ನಡುವೆ ಸ್ವಚ್ಛತೆಯನ್ನು ಉಳಿಸಿಕೊಳ್ಳಲು ಹೋರಾಡುವ ಮುಖ್ಯ ಕವಿಯೊಬ್ಬನಿಗೆ ವಿಡಂಬನೆ ಕೂಡ ಇಲ್ಲಿ ಅನಿವಾರ್ಯವಾಗಿ ಒಂದು ಕವಚವಾಗುತ್ತದೆ; ಹಲವು ಸಲ ಪೂರ್ಣಪ್ರಮಾಣದ ತಾತ್ವಿಕ ನೆಲೆಯಾಗುತ್ತದೆ. ಇದೆಲ್ಲದರ ಮೂಲಕಾರಣವಾದ ಸಮಾಜದ ಅನೇಕ ಒಳಸುಳಿಗಳ ಕರಾಳತೆಯ ಪರಿಚಯ ಇದರಿಂದ ಆಗುತ್ತದೆ; ಜೊತೆಗೆ ಅವನ್ನೆಲ್ಲಾ ದಾಟಿ ಹೋಗಬೇಕಾದುದ್ದು ಜೀವನವನ್ನು ಪ್ರೀತಿಸುವವರೆಲ್ಲರ ಜವಾಬ್ದಾರಿ ಎಂದು ಕೂಡಾ ಹೇಳುತ್ತದೆ.

# ಕೃಷ್ಣ ಪರಮೇಶ್ವರ ಭಟ್ಟ

# ಕಾವ್ಯ ಮತ್ತು ಭಾಷೆ

೧

1.0 ಕವನವನ್ನು ಮುಖ್ಯವಾಗಿ ಒಂದು ಕಲಾಕೃತಿ (ಅಥವಾ ಕೊನೆಯಪಕ್ಷ, ಅದು ಕಲಾಕೃತಿಯೂ ಹೌದು) ಎಂದು ಭಾವಿಸುವ ಕವಿ ಕಾವ್ಯದ ಭಾಷೆಗೆ ಸಂಬಂಧಪಟ್ಟಂತೆ ಕೆಲವು ಸಂಗತಿಗಳನ್ನು ಗಮನಿಸಬೇಕಾಗುತ್ತದೆ: ೧) ನಿತ್ಯದ ಭಾಷೆಯಲ್ಲಿ ಅರ್ಥದ ಸಂವಹನಕ್ಕೆ ಮಾಧ್ಯಮವಾಗಿ ಮಾತ್ರ ದುಡಿಯುವ ಭಾಷೆ ಕವನದಲ್ಲಿ ಅರ್ಥದಿಂದ ಪ್ರತ್ಯೇಕವಾಗಿ ಉಳಿಯುವುದಿಲ್ಲ. ಆದ್ದರಿಂದ ಕವನದ ಮೂಲಕ ಕವಿ ವ್ಯಕ್ತಪಡಿಸ ಬಯಸುವ ಅರ್ಥಗಳೆಲ್ಲ ಅದರ ಭಾಷೆಯ ಸಂದರ್ಭದೊಳಗೇ ಪ್ರಕಟವಾಗುವಂತಿರಬೇಕು. ಉದಾಹರಣೆಗೆ, 'ನಮ್ಮ ಮಂತ್ರಿಗಳು ತುಂಬ ಪ್ರಾಮಾಣಿಕರು!' ಎಂಬ ಒಂದು ಸಾಲು ಸಾಮಾಜಿಕ ಸಂದರ್ಭವೊಂದರಲ್ಲಿ ತನಗೆ ತಾನೇ ವ್ಯಂಗ್ಯಾರ್ಥವೊಂದನ್ನು ಹೇಳಬಹುದು. ಆದರೆ ಕವನದಲ್ಲಿ (ಸಾಮಾಜಿಕ ಸಂದರ್ಭ ನಿರಪೇಕ್ಷಿತವಾದ್ದರಿಂದ) ಈ ವ್ಯಂಗ್ಯಾರ್ಥವನ್ನೂ ಅದರ ತೀವ್ರತೆಯನ್ನೂ ಧ್ವನಿಸಲು ಬೇಕಾದ ಎಲ್ಲ ವಿವರಗಳೂ ದೊರೆಯಬೇಕು. ೨) ಕವನ ಅದರ ಭಾಷೆಯ ಮೂಲಕ ಒಂದು ನಿರ್ದಿಷ್ಟ ಬೆಳವಣಿಗೆಯನ್ನು ಪಡೆದಿರಬೇಕು. ೩) ಕವಿ ಕೊಡುವ ಹೇಳಿಕೆ (statement) ಅಥವಾ ತಳೆಯುವ ನಿಲುವು ಕಾವ್ಯ ಭಾಷೆಯ ಸಂದರ್ಭದೊಳಗೇ ಸಿದ್ಧವಾಗಬೇಕು. ಈ ಕೊನೆಯ ಎರಡು ಅಂಶಗಳ ಸ್ಪಷ್ಟನೆಗಾಗಿ ಮುಂದಿನ ಉದಾಹರಣೆಯನ್ನು ಪರಿಶೀಲಿಸಬಹುದು: "ಹೂವು ಕಾಂತಿಯುಕ್ತವಾಗಿದೆ। ಹೂವು ಪರಿಮಳದಿಂದ ಕೂಡಿದೆ। ಹೂವು ಸುಂದರವಾಗಿದೆ। ಇದು ದೇವರ ಕೃಪೆ।" ಈ ಪುಟ್ಟ ಕವನದಲ್ಲಿ (ಹಾಗೆಂದುಕೊಳ್ಳೋಣ) ಎರಡು ಕಾವ್ಯಘಟಕಗಳಿವೆ. ಮೊದಲ ಮೂರು ಸಾಲುಗಳು ಒಂದು ಘಟಕಕ್ಕೂ ಕೊನೆಯ ಸಾಲು ಇನ್ನೊಂದು ಘಟಕಕ್ಕೂ ಸೇರುತ್ತವೆ. ಈ ಕವನದ ಉದ್ದೇಶ ಅಥವಾ ಮುಖ್ಯಾರ್ಥ ಕೊನೆಯ ಸಾಲಿನಲ್ಲಿ ಕೇಂದ್ರೀಕೃತವಾಗಿದೆ. ಆದ್ದರಿಂದ ಉಳಿದ ಸಾಲುಗಳು ಇದನ್ನು ಪೋಷಿಸಬೇಕು. ಆದರೆ ಇಲ್ಲಿ ಹಾಗಾಗಿಲ್ಲ. ಮೊದಲ ಎರಡು ಸಾಲುಗಳು ಮೂರನೆಯ ಸಾಲಿನಲ್ಲಿಯ 'ಸುಂದರ' ಕಲ್ಪನೆಯನ್ನು ಮೂರ್ತಗೊಳಿಸಲು ನೆರವಾಗುತ್ತವೆಯೆಂಬುದು ನಿಜ. ಆದರೆ ಮುಂದೆ 'ಸುಂದರ' ಹಾಗೂ 'ದೇವರ ಕೃಪೆ' ಎಂಬ ಪದಗಳಿಗೆ ಯಾವ ಸಂಬಂಧವೂ ಇಲ್ಲದ್ದರಿಂದ ಕೊನೆಯ ಹೇಳಿಕೆ ಅದರ ಹಿಂದಿನ ಸಾಲುಗಳಿಂದ ಸಿದ್ಧವಾಗದೆ ಪ್ರತ್ಯೇಕ

ವಾಗಿ ಉಳಿಯುತ್ತದೆ. ಆದ್ದರಿಂದ ಕಾವ್ಯಭಾಷೆಯನ್ನು ಆಧರಿಸುವ ರೂಪವಿಮರ್ಶೆಗೆ ಇಲ್ಲಿಯ ಮೊದಲ ಘಟಕ ಮಾತ್ರ ಪ್ರಕೃತವಾಗುತ್ತದೆ. (ಹೀಗೆಂದರೆ ಇದು ರೂಪ ವಿಮರ್ಶೆಯ ಅಸಾಧ್ಯತೆಯನ್ನು ಹೇಳುವುದಿಲ್ಲ; ಕಾವ್ಯಭಾಷೆ ತನ್ನ ಅರ್ಥಪ್ರಕಟಣೆ ಮಾಡುವಲ್ಲಿ ಸೋತಿದೆ ಎಂಬುದನ್ನು ಹೇಳುತ್ತದೆ.) ಇಲ್ಲಿಯೆ ಇನ್ನೊಂದು ಅಂಶವನ್ನು ಗಮನಿಸಬೇಕು: ಕವನದ ಸಾಲುಗಳು ಅದರ ಮುಖ್ಯಾರ್ಥಕ್ಕೆ ಪೋಷಕವಾಗಿ ಬರದೆ ವಾಚ್ಯಾರ್ಥ ಹೇಳುವುದರಲ್ಲಿಯೆ ಅವುಗಳ ಕಾರ್ಯ ಮುಗಿದಾಗ ಕವನ ಪದ್ಯವಾಗು ತ್ತದೆ; ಗೇಯಾಂಶವಷ್ಟೇ (ಇದ್ದರೆ) ಅದರ ವಿಶೇಷತೆಯಾಗುತ್ತದೆ. ಈ ಸಂದರ್ಭದಲ್ಲಿ ಭಾಷೆಯನ್ನು ಗೇಯಾಂಶದಿಂದ ಪ್ರತ್ಯೇಕಿಸಿ ಆಡುಮಾತಿಗೆ ಹತ್ತಿರ ತಂದಾಗಲೂ ಅದಕ್ಕೆ ಹೆಚ್ಚಿನ ಕಾವ್ಯತ್ವವೇನೂ ಪ್ರಾಪ್ತವಾಗುವುದಿಲ್ಲ. ಆದ್ದರಿಂದ ಆಡುಮಾತಿನ ಬಳಕೆ ಕವನಕ್ಕೆ ಯಾವಾಗಲೂ ಹೆಚ್ಚಿನ ಗುಣವನ್ನೊದಗಿಸುವುದಿಲ್ಲ. ಇದೇ ಉದಾಹರಣೆಯಲ್ಲಿ ಇನ್ನೂ ಒಂದು ಸಂಗತಿಯನ್ನು ಗಮನಿಸಬಹುದು: "ಹೂವು ಕಾಂತಿಯುಕ್ತವಾಗಿದೆ" ಹಾಗೂ "ಹೂವು ಪರಿಮಳದಿಂದ ಕೂಡಿದೆ" ಎಂಬ ವಾಕ್ಯಗಳು "ಸುಂದರ" ಎಂಬ ಕಲ್ಪನೆಯನ್ನು ಮೂರ್ತಗೊಳಿಸಲು ಬರುತ್ತವೆ. ಇವುಗಳ ಜೊತೆಗೆ ಹೂವಿನ ಸೌಂದರ್ಯ ವನ್ನು ಎತ್ತಿತೋರಿಸುವ ಇನ್ನೂ ಅನೇಕ ಗುಣಗಳನ್ನು ಪಟ್ಟಿಮಾಡುತ್ತ ಹೋಗಬಹುದು, ಹಾಗೂ ಈ ಗುಣಗಳ ತೀವ್ರತೆಯನ್ನು ತೋರಿಸಲು ಹೂವನ್ನು ಇದೇ ಗುಣಗಳಿರುವ ಇತರ ವಸ್ತುಗಳ ಜೊತೆಗೆ ಹೋಲಿಸುತ್ತ ಹೋಗಬಹುದು. ಉದಾಹರಣೆಗೆ, 'ಹೂವಿನಲ್ಲಿ ಮುಗ್ಧತೆ ಮೈವೆತ್ತಿದೆ' ಎಂದು ಹೇಳಿ ಅದರ ಇನ್ನೊಂದು ಗುಣವನ್ನು ವ್ಯಕ್ತಪಡಿಸುವು ದಲ್ಲದೆ, ಅದನ್ನು ಮಗುವಿಗೆ ಹೋಲಿಸಿ 'ಮುಗ್ಧತೆ'ಯ ತೀವ್ರತೆಯನ್ನು ಹೆಚ್ಚಿಸಬಹುದು. ಹೀಗೆಯೇ ಅನೇಕ ಸಾಲುಗಳನ್ನು ಸೇರಿಸಲು ಸಾಧ್ಯವಾಗುವುದರಿಂದ ಈ ಮೊದಲ ಘಟಕ ಒಂದು ತೆರೆದ ವರ್ಗ (open class)ವಾಗುತ್ತದೆ. ಅಲ್ಲದೆ ಇಲ್ಲಿಯ ಸಾಲುಗಳು ಯಾವುದೇ ಒಂದು ಕ್ರಮದಲ್ಲಿ ಬರಬೇಕಾಗಿಯೂ ಇಲ್ಲ. ಹೀಗಾದಾಗ ಕವನದ ಶಿಲ್ಪ ಸಡಿಲವಾಗು ತ್ತದೆ ಹಾಗೂ ಅಲ್ಲಿ ಯಾವುದೇ ನಿರ್ದಿಷ್ಟ ಬೆಳವಣಿಗೆ ಇರುವುದಿಲ್ಲವೆಂಬುದು ಈ ಮಾತು ಗಳ ತಾತ್ಪರ್ಯ.

೨

2.1 ಜಿ.ಎಸ್.ಎಸ್. ಅವರ ಮೊದಲ ಕವನಸಂಕಲನಗಳಲ್ಲಿಯ ('ಸಾಮಗಾನ', 'ದೇವಶಿಲ್ಪ', 'ಚೆಲುವು-ಒಲವು') ಕವನಗಳಲ್ಲಿ ಗೇಯಾಂಶದ ಕಡೆಗೆ ಗಮನ ಹರಿದಂತೆ ಭಾಷೆಯ ಕಡೆಗೆ ಹರಿದಿಲ್ಲ. ನವೋದಯ ಕವಿಗಳು ಆಗಲೇ ರೂಪಿಸಿಕೊಂಡ ಚೌಕಟ್ಟಿ ನೊಳಗೆ ಕವಿ ತನ್ನ ಶಬ್ದಗಳನ್ನು ತುಂಬುತ್ತಾನೆ. ಅವರ 'ಸಾಮಗಾನ' ಕವನ ಸಂಗ್ರಹಕ್ಕೆ ಕುವೆಂಪು ಬರೆದ ಮುನ್ನುಡಿಯಲ್ಲಿಯ ಈ ಮಾತುಗಳು ಇಲ್ಲಿ ಗಮನಾರ್ಹವಾಗುತ್ತವೆ: "ಈ ಕವನಗಳು ಸುಮಾರು ಮೂವತ್ತು ವರ್ಷಗಳ ಹಿಂದೆ ಅಚ್ಚಾಗಿದ್ದಿದ್ದರೆ ಈ ಕವಿ ಒಡನೆಯೆ ನಾಡಿನ ಮೆಚ್ಚುಗೆಗೆ ಪಾತ್ರನಾಗಿ ಪ್ರಸಿದ್ಧನಾಗುತ್ತಿದ್ದ. ಆದರೆ ಈಗ

ಹಾಗಾಗದಿರಬಹುದು....ಯಾವ ಭಾಷೆ, ಯಾವ ಶೈಲಿ, ಯಾವ ಛಂದಸ್ಸು, ಯಾವ ಕಲ್ಪನಾವಿಲಾಸ, ಯಾವ ಪದಸಂಘಟನಾ ಅಪೂರ್ವತೆ ಇವುಗಳನ್ನು ಕಷ್ಟದಿಂದ ಹಿರಿಯ ಕವಿಗಳು ತಮ್ಮ ಬದುಕಿನ ಮೂಸೆಯಲ್ಲಿ ಕಾಯಿಸಿ, ಕರಗಿಸಿ, ಎರಕಹೊಯ್ದರೋ ಆ ಪದ ಪುಂಜಾಯುಧ ಪಂಕ್ತಿ ಈಗಿನ ಕವಿಯೋಧರಿಗೆ ಸುಲಭ ಸರಬರಾಜಿನ ವಸ್ತುಗಳಾಗಿವೆ." ಕಾವ್ಯ ಹೇಗೆ type ಆಗುತ್ತ ನಡೆದಿದೆ ಎಂಬುದು ಈ ಮಾತುಗಳಿಂದ ವ್ಯಕ್ತವಾಗುತ್ತದೆ. ಕವನದಲ್ಲಿ ಗೇಯಾಂಶದ ಕಡೆಗೆ ಲಕ್ಷ್ಯವಿರುವುದರಿಂದ ಪ್ರಾಸಬದ್ಧ ರಚನೆ, ಮಾತ್ರಾಗಣ ಅನುಸಾರವಾದ ಕವನದ ಸಾಲುಗಳ ವಿಭಜನೆ ಇಲ್ಲಿ ಮುಖ್ಯವಾಗುತ್ತದೆ. ಕವನ ನಿಲುವೊಂದನ್ನು ವ್ಯಕ್ತಪಡಿಸಬೇಕಾದಾಗ ಅದನ್ನು ಕವನದ ಕೊನೆಯಲ್ಲಿಯೊ ಅಥವಾ ಚರಣಗಳ ಕೊನೆಯಲ್ಲಿಯೊ ತಂದು ಅದರ ಕಡೆಗೆ ಪ್ರತ್ಯೇಕವಾಗಿ ಗಮನ ಸೆಳೆಯಲಾಗುತ್ತದೆ. ಇದನ್ನು ಪ್ರಾಸಜೋಡಣೆ ಹಾಗೂ ಉಳಿದ ಭಾಗಗಳಲ್ಲಿಯ ಗಣವಿಭಜನೆಗಿಂತ ಬೇರೆ ರೀತಿಯಾದ ಗಣವಿಭಜನೆಯ ಮೂಲಕ ಸಾಧಿಸಲಾಗುತ್ತದೆ. (ಆಡು ಭಾಷೆಯಲ್ಲಿ ಕಾಕು (intonation)ವಿನ ಮೂಲಕ ಲಯದ ಏಕತಾನತೆಯನ್ನೊ ಭಿನ್ನತೆಯನ್ನೊ ತರುವಂತೆ ಕವನದಲ್ಲಿ ಪ್ರಾಸ, ಗಣವಿಭಜನೆಯ ಮೂಲಕ ಅದನ್ನು ಸಾಧ್ಯವಾಗಿಸುತ್ತಾನೆ. ಕೊನೆಯ ಸಾಲುಗಳಲ್ಲಿ ಪ್ರತ್ಯೇಕ ಲಯವನ್ನು ತಂದು ಅದನ್ನು ಉಳಿದ ಸಾಲುಗಳಲ್ಲಿ ನಿರ್ಮಿಸಿಕೊಂಡ ವ್ಯವಸ್ಥೆ (pattern)ಯಿಂದ ಪ್ರತ್ಯೇಕಿಸಿ ಅದರ ಕಡೆಗೆ ಗಮನ ಸೆಳೆಯುತ್ತಾನೆ.) ಈ ಮಾತುಗಳಿಗೆ ಉದಾಹರಣೆಯಾಗಿ 'ಹೂಮಳೆ' ಹಾಗೂ 'ಮನಸು ಶೂನ್ಯವಾಗಿದೆ' ಎಂಬ ಕವನಗಳಿಂದ ಕೆಲವು ಸಾಲುಗಳನ್ನು ನೋಡಬಹುದು :

(೧) "ದೃಶ್ಯವಹ ಮೋಡಗಳ
ಸುಳಿವಿಲ್ಲ ಬಾನಿನಲಿ
ರವಿಬಿಂಬ ರಾಜಿಸಿದೆ
ಬಾನನೀಲಿಮೆಯಲ್ಲಿ
..................
ಶಿವನ ಕೃಪೆಯನುಂಡೆನು
ಶಿವನ ಸೊಬಗ ಕಂಡೆನು !"

('ಸಾಮಗಾನ' ಪು. ೯)

(೨) "ಕಿರುವಕ್ಕಳು ಧೂಳಿನಾಟ
ದಲ್ಲಿ ತೊಡಗಿ ನಲಿದಿರೆ
ಇದನು ಕಂಡು ಮೇಲೆ ನೋಡ
ಮುಗುಳು ನಗೆಯ ನಕ್ಕರೂ
ಮನಸು ಶೂನ್ಯವಾಗಿದೆ
ಮುಗುಳು ಮಲರದಂತಿದೆ"

('ಸಾಮಗಾನ' ಪು. ೧೨)

ಎರಡೂ ಉದಾಹರಣೆಗಳಲ್ಲಿಯೂ ಕೊನೆಯ ಎರಡು ಸಾಲುಗಳಿಗೆ ಪ್ರತ್ಯೇಕ ಪ್ರಾಸ ಜೋಡಣೆಯಿದೆ. (೧)ರಲ್ಲಿ ಪ್ರತಿಸಾಲು ಹತ್ತು ಮಾತ್ರೆಗಳಿಂದ ಕೂಡಿದ್ದರೂ ಕೊನೆಯ

ಎರಡು ಸಾಲುಗಳು ಗಣವಿಭಜನೆಯಲ್ಲಿ ಬೇರೆಯಾಗಿ ನಿಲ್ಲುತ್ತವೆ. ಮೊದಲು 5+5 ರೀತಿಯಲ್ಲಿ ಬರುವ ಮಾತ್ರೆಗಳು ಕೊನೆಯ ಎರಡು ಸಾಲುಗಳಲ್ಲಿ 3+3+4—ಈ ರೀತಿಯಲ್ಲಿ ಬರುತ್ತವೆ. (2)ರಲ್ಲಿಯೂ ಕೊನೆಯ ಎರಡು ಸಾಲುಗಳು ಹೀಗೆಯೇ ಪ್ರತ್ಯೇಕಗೊಳ್ಳುತ್ತವೆ. ಇಲ್ಲಿಯ 'ನಲಿದಿರೆ' ಹಾಗೂ 'ನಕ್ಕರೂ' ಎಂಬ ಪದಗಳು ಅದೇ ಕಾಲವಿನಲ್ಲಿ ಬರುವ ಇತರ ಪದಗಳ ಸಂಸರ್ಗದಿಂದ ('ಧೂಳಿನಾಟ' ಮತ್ತು 'ಮೇಲೆ ನೋಡ') ಆರು ಮಾತ್ರೆಗಳ ಕಾಲ ಉಚ್ಚಾರಣೆಗೊಳ್ಳುತ್ತವೆ. ಈ ರೀತಿ ಪ್ರತ್ಯೇಕ ಅಂಶದ(ಗಳ) ಮೇಲೆ ಒತ್ತುಕೊಡುವುದಕ್ಕೆ ಸಾನೆಟ್ಟೋ (sonnet) ಅಥವಾ ಈ ವ್ಯವಸ್ಥೆಯುಳ್ಳ ಇತರ ರೂಪಗಳೋ (ಉದಾಹರಣೆಗೆ, ರಗಳೆಯ ಕೊನೆಗೆ ಪ್ರತ್ಯೇಕ ಲಯವುಳ್ಳ ಎರಡು ಸಾಲುಗಳು) ವಿಶೇಷವಾಗಿ ನೆರವಾಗುತ್ತವೆ. ಆದ್ದರಿಂದ ಜಿ.ಎಸ್.ಎಸ್. ಅವರ ಮೊದಲ ಮೂರು ಸಂಕಲನಗಳಲ್ಲಿ ಈ ರೂಪಗಳಿಗೆ ಭಾಷೆಯನ್ನು ಒಗ್ಗಿಸುವ ಪ್ರಯತ್ನ ವಿಶೇಷವಾಗಿ ಕಂಡುಬರುತ್ತದೆ. ಹಾಗೂ ಇದನ್ನು ಅನುಕೂಲಿಸಲು ಭಾಷೆಯ ಹಳೆಯ ರೂಪಗಳ (ಉದಾ: 'ಮೇಣ್', 'ಹೋಹನ್ನೆಗಂ', 'ಕಿರುವಕ್ಕಳು', 'ಜೊನ್ನ' 'ಇರೆ', 'ಪೋಲ್' ಇತ್ಯಾದಿ) ಬಳಕೆಯೂ ವಿಶೇಷವಾಗಿದೆ. (ನವೋದಯ ಕವಿಗಳು ಅಂತೆಯೆ ಮೊದಲಿನ ಜಿ.ಎಸ್.ಎಸ್. ಸಾನೆಟ್ ರೂಪಗಳನ್ನು ವಿಶೇಷವಾಗಿ ಬಳಸುವುದಕ್ಕೆ ಇಂಗ್ಲೀಷಿನಲ್ಲಿಯ ಈ ರೂಪವನ್ನು ಕನ್ನಡಕ್ಕೆ ಬರಮಾಡಿಕೊಳ್ಳುವ ಉತ್ಸಾಹದ ಜೊತೆಗೆ ಇದೂ ಒಂದು ಮುಖ್ಯಕಾರಣ.)

ಹೀಗೆ ಪ್ರತ್ಯೇಕ ಭಾಗವೊಂದರ ಮೇಲೆ ಒತ್ತುಕೊಟ್ಟು ಅದರ ಕಡೆಗೆ ಗಮನ ಸೆಳೆಯುವ ರೀತಿ–ಅದನ್ನು ಸರಿಯಾಗಿ ಉಪಯೋಗಿಸಿಕೊಂಡಲ್ಲಿ ಲಾಭದಾಯಕವಾದದ್ದೆ. ಆದರೆ ಮೇಲಿನ ಉದಾಹರಣೆಯಲ್ಲಾಗಲೀ ಜಿ.ಎಸ್.ಎಸ್. ಅವರ ಮೊದಲಿನ ಬಹುಪಾಲು ಕವನಗಳಲ್ಲಿಯಾಗಲೀ ಇಂತಹ ಲಾಭದಾಯಕ ಅಂಶವೇನೂ ಕಂಡುಬರುವುದಿಲ್ಲ. ಕಾರಣ ಭಾಗ-೧ರಲ್ಲಿ ಹೇಳಿದಂತೆ ಈ ಕವನಗಳು ಎರಡು ಕಾವ್ಯಘಟಕಗಳಿಂದ ಕೂಡಿದ್ದು (ಕವನದ ರಚನೆ: ವರ್ಣನೆ+ಹೇಳಿಕೆ) ಮೊದಲ ಘಟಕದಿಂದ ಎರಡನೆಯದು ಸಿದ್ಧವಾಗದೆ ಹಾಗೆಯೆ ಪ್ರತ್ಯೇಕವಾಗಿ ಉಳಿಯುತ್ತದೆ. ಮೇಲಿನ ಉದಾಹರಣೆ (1) ರಿಂದ ಇದು ಸ್ಪಷ್ಟ. ಉದಾಹರಣೆ (2)ರಲ್ಲಿ, ಕೊನೆಯಲ್ಲಿಯ ಹೇಳಿಕೆ ಮೊದಲಭಾಗದಲ್ಲಿ ಬರುವ ವಿವರಗಳ ಪರಿಣಾಮ (=ಸಂತೋಷ)ವನ್ನು ಅಲ್ಲಗಳೆಯುತ್ತದೆ; ಅದಕ್ಕೆ ಕಾರಣವನ್ನು ಹೇಳುವುದಿಲ್ಲ. ಹೀಗೆ ಪರಸ್ಪರ ವಿರೋಧವುಳ್ಳ ಸಂಗತಿಗಳನ್ನು ತರುವುದೂ ಕೆಲವೊಮ್ಮೆ ಪ್ರಯೋಜನ ನೀಡುತ್ತದೆ—ಈ ವಿರೋಧಕ್ಕಿರುವ ಕಾರಣವೇ ಕವನ ಪ್ರಕಟಿಸಬೇಕಾದ ಮುಖ್ಯಾರ್ಥವಾಗಿದ್ದು, ಅದು ಕವನದಲ್ಲಿ ಧ್ವನಿತವಾಗಿದ್ದರೆ. (ಹೀಗಾಗಿರುವುದನ್ನು ಮುಂದೆ ತೋರಿಸುವುದಾಗುತ್ತದೆ.)

**2.2** ಉದಾಹರಣೆ (1)ರಲ್ಲಿ ಕಂಡುಬರುವಂತಹ ವಾಕ್ಯಗಳ ಕೃತ್ರಿಮವಾದ, ಅರ್ಥಾನುಸಾರಿಯಲ್ಲದ ವಿಭಜನೆ ಮೊದಲ ಮೂರು ಸಂಕಲನಗಳಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಪದಗಳ ಬಳಕೆಯಲ್ಲಿಯೂ 'ಬಾನಿನಲಿ', 'ನಲಿದರೆ', 'ಕಂಡೆನು' ಮುಂತಾದ

ಆಡುಮಾತಿನ ರೂಪಗಳಿಗಿಂತ ಭಿನ್ನವಾದ ರೂಪಗಳು ಬಳಕೆಯಾಗುತ್ತವೆ. ಈಗ ಉದಾಹರಣೆ(1)ನ್ನು ಆಡುಮಾತು ಹಾಗೂ ಅರ್ಥ–ಇವುಗಳಿಗೆ ಅನುಸಾರವಾಗಿ ಮಾರ್ಪಡಿಸಿ ಹೆಚ್ಚಿನ ಪರಿಣಾಮವೇನಾದರೂ ಸಾಧ್ಯವಾಗುತ್ತದೆಯೇ ಎಂಬುದನ್ನು ನೋಡೋಣ:

“ನೀಲಿಯಾಕಾಶದೊಳಗೆ,
ಮೋಡಗಳ ಸುಳಿವಿಲ್ಲ
ರವಿಬಿಂಬ ರಾಜಿಸಿದೆ
..................
ಶಿವನ ಕೃಪೆಯನ್ನು ಸವಿದೆ
ಶಿವನ ಸೊಬಗನ್ನು ಸವಿದೆ”

ಇಲ್ಲಿ ಉಂಟಾದ ಬದಲಾವಣೆಗಳು: (1) ಆಡುಮಾತಿಗೆ ಹೆಚ್ಚು ಸಮೀಪವಾಗಿ ಭಾಷೆ ಬಂದದ್ದು; ಇದರಿಂದ ಕೆಲವು ಪದಗಳು ಕೈಬಿಟ್ಟುಹೋದದ್ದು ಹಾಗೂ ಕೆಲವು ಹೊಸರೂಪಗಳ (‘ನೀಲಿಯಾಕಾಶದೊಳಗೆ’, ‘ಕೃಪೆಯನ್ನು’ ‘ಸವಿದೆ’) ಬಳಕೆಯಾದದ್ದು; 2) ಗೇಯಾಂಶ ಕಡಿಮೆಯಾದದ್ದು; 3) ಪದವೋ ಒಂದೊಂದು ಸಾಲಿನಲ್ಲಿ ವಾಕ್ಯವೋ ಬಂದು ವಿಭಜನೆ ಅರ್ಥದ ದೃಷ್ಟಿಯಿಂದ ಹೆಚ್ಚು ಸಹಜವಾಗುತ್ತದೆ ಹಾಗೂ ‘ನೀಲಿಯಾಕಾಶದೊಳಗೆ’ ಎಂಬುದು ಮುಂದಿನ ಎರಡೂ ವಾಕ್ಯಗಳಿಗೆ ಅನ್ವಯಿಸುತ್ತದೆ; 4) ‘ಸುಳಿವಿಲ್ಲ’ ‘ರಾಜಿಸಿದೆ’ ಎಂಬ ಕ್ರಿಯಾಪದಗಳು ಹೆಚ್ಚು ಹತ್ತಿರ ಬಂದಿವೆ. ಇವುಗಳಲ್ಲಿ ಮೊದಲ ಮೂರು ಬದಲಾವಣೆಗಳಿಂದ ಕವನದ ಉದ್ದೇಶಕ್ಕೆ ಹೆಚ್ಚಿನ ಸಹಾಯವೇನೂ ಒದಗುವುದಿಲ್ಲ. ನಾಲ್ಕನೆಯ ರೀತಿಯಲ್ಲಿ ಕವನದ ಉಳಿದ ಕ್ರಿಯಾಪದಗಳನ್ನೂ ಹತ್ತಿರ ತಂದು ಅವುಗಳ ಮೇಲೆ ಒತ್ತುಬೀಳುವಂತೆ ಮಾಡಬಹುದು. ಇದು ಪ್ರಕೃತಿಯಲ್ಲಾದ ವ್ಯತ್ಯಾಸದ ವೇಗವನ್ನು ಸೂಚಿಸಲು ನೆರವಾಗುತ್ತದೆ. ಈ ಕವನದ ಮೊದಲ ಘಟಕದ ಉದ್ದೇಶವೂ ಅದೇ. ಇದನ್ನು ವ್ಯಕ್ತಪಡಿಸುವ “ಬಾನಿನಕ್ಕಿ ಹರ್ಷವಿಂದು । ಅವತರಿಸಿದವೋಲಿದೆ” ಎಂಬ ಸಾಲುಗಳು ಮುಂದೆ ಬರುತ್ತವೆ. (ಇಲ್ಲಿ “ಹರ್ಷ” ಮತ್ತು “ಅವತರಿಸು” ಎಂಬ ಪದಗಳು ಕ್ರಮವಾಗಿ ಪ್ರಕೃತಿಯಲ್ಲಾದ ವ್ಯತ್ಯಾಸದ ಗುಣ ಮತ್ತು ವೇಗವನ್ನು ಹೇಳುತ್ತವೆ.) ಇಲ್ಲಿಯ ವಾಕ್ಯಗಳು ಚಿಕ್ಕದಾಗಿರುವುದೂ (ನಾಮಪದ+ಕ್ರಿಯಾಪದ) ವೇಗವನ್ನು ಸೂಚಿಸಲು ನೆರವಾಗುತ್ತದೆ. ಆದರೆ ಈ ಎಲ್ಲ ಬದಲಾವಣೆಗಳಿಂದ ಆದ ಪ್ರಯೋಜನವಾದರೂ ಏನು? – ಸೊನ್ನೆ. ಕಾರಣ ಕವನದ ಆಶಯದ (ಧನ್ಯತೆಯ ಸೂಚನೆ) ದೃಷ್ಟಿಯಿಂದ ಮುಖ್ಯವಾದ ಎರಡನೆಯ ಘಟಕ ಮೊದಲನೆಯವರ ಜೊತೆಗೆ ಹೆಚ್ಚಿನ ಸಂಬಂಧವನ್ನೇನೂ ಪಡೆಯದೆ ಹಾಗೆಯೇ ಪ್ರತ್ಯೇಕವಾಗಿ ಉಳಿಯಿತು. ಆದ್ದರಿಂದ ಈ ಕವನದ ಯೋಗ್ಯತೆಯೆ ಇಷ್ಟು ಎಂದು ಬಿಟ್ಟುಬಿಡೋಣ. ಮೇಲಿನ ಎಲ್ಲ ವಿವರಣೆಗಳಿಂದ ಗಮನಿಸಬೇಕಾದ ಸಂಗತಿಯಿಷ್ಟೆ: ಕವನದ ಶಿಲ್ಪ (Strcuture)ಕ್ಕೂ ಭಾಷೆಗೂ ನೇರವಾದ ಸಂಬಂಧವಿದೆ; ಶಿಲ್ಪದಲ್ಲಿ ಅಚ್ಚುಕಟ್ಟುತನ (harmony) ವಿಲ್ಲದೆ ಭಾಷೆಯಲ್ಲಿ ಉಂಟುಮಾಡುವ ಬದಲಾವಣೆಗಳು ಕವನಕ್ಕೆ ಹೆಚ್ಚಿನ ಸಹಾಯವನ್ನೇನೂ ಮಾಡುವು

ದಿಲ್ಲ. (ಈ ಸಂಗತಿಯ ಕಡೆಗೆ ಗಮನವಿಲ್ಲದ್ದರಿಂದ ಮುಂದಿನ ಸಂಕಲನಗಳಲ್ಲಿಯ ಅನೇಕ ಕವನಗಳು ಭಾಷೆಯಲ್ಲಿ ಸಾಕಷ್ಟು ಬದಲಾವಣೆಯನ್ನು ತಂದುಕೊಂಡರೂ ಹೆಚ್ಚಿನ ಯಶಸ್ಸನ್ನೇನೂ ಸಾಧಿಸುವುದಿಲ್ಲ.)

2.3 ಮುಂದಿನ ಮೂರು ಸಂಕಲನಗಳಲ್ಲಿ ಭಾಷೆ ಬದಲಾವಣೆ ಪಡೆಯುತ್ತ ಹೋಗುತ್ತವೆ. ('ಸಂಜೆದಾರಿ', 'ದೀಪದ ಹೆಜ್ಜೆ' ಹಾಗೂ 'ಕಾರ್ತೀಕ') ಕವನದ ಸಾಲುಗಳನ್ನು ಮಾತ್ರಾನುಸಾರವಾಗಿ ವಿಂಗಡಿಸದೆ ಅರ್ಥವನ್ನು ಆಧರಿಸಿ ಪದಪುಂಜ (phrase) ಗಳಾಗಿ, ಉಪವಾಕ್ಯ (clause) ಗಳಾಗಿ ಅಥವಾ ವಾಕ್ಯಗಳಾಗಿ ವಿಂಗಡಿಸುವ ಪದ್ಧತಿ ಹೆಚ್ಚಾಗುತ್ತದೆ. (ಭಾಷೆಯ ಪ್ರಯೋಗದ ದೃಷ್ಟಿಯಿಂದ ಮೊದಲ ಮೂರು ಸಂಕಲನಗಳು ಹಾಗೂ ಈ ಮೂರು ಸಂಕಲನಗಳನ್ನು ಬೇರೆಯಾಗಿ ವಿಂಗಡಿಸಿದ್ದರೂ ಅದು ಸ್ಪಷ್ಟವಲ್ಲ ಎಂಬುದನ್ನು ಗಮನಿಸಬೇಕು.) 'ಹುಟ್ಟಿದ ಹಬ್ಬ' ಹಾಗೂ 'ಸಂಜೆದಾರಿ' ಕವನದ ಕೆಲವು ಸಾಲುಗಳನ್ನು ಇಲ್ಲಿ ಉದಾಹರಣೆಯಾಗಿ ಗಮನಿಸಬಹುದು :

(3) "ನಾ ಬಂದೆ—
ಮೊದಲ ಸ್ಪಂದನದಿಂದೆ,
ಅಂದಿನಿಂದಿಂದಿಗೂ ಸಾಕ್ಷಿಯೊಲು ನಿಂದೆ (ದೀಪದ ಹೆಜ್ಜೆ)

(4) "ಕೈ ಹಿಡಿದ ಸರಪಳಿಯ ಜಗ್ಗುತಿದೆ ಕರಿನಾಯಿ
ಹೊಳೆ ಹೊಳೆವ ಕೆಂಗಣ್ಣು ಜೋಲ್ವನಾಲಿಗೆ ಬಾಯಿ
ಸಂಜೆ ಮುಗಿಲಿನ ಕೆಳಗೆ
ದೂರ ದೂರದವರೆಗೆ
ಮುಗಿವಿರದ ಪ್ರಶ್ನೆಯೊಲು ಹಾಸಿರಲು ಟಾರ್‌ಬೀದಿ
ಕೈ ಹಿಡಿದ ಸರಪಳಿಯ ಜಗ್ಗುತಿದೆ ಕರಿನಾಯಿ ಮುಂದೆ ಮುಂದೆ
ಹಿಡಿದ ಕೈ ಸಾಗುತಿದೆ ಹಿಂದೆ ಹಿಂದೆ !" ('ದೀಪದ ಹೆಜ್ಜೆ', ಪು. ೩೫)

ಉದಾ (3) ರಲ್ಲಿಯ 'ನಾ ಬಂದೆ'—ಎಂಬ ವಾಕ್ಯದ ಅರ್ಥ ಅಲ್ಲಿಗೇ ಮುಗಿಯದೆ ಮುಂದಿನ ಭಾಗದ ಅರ್ಥಗಳಿಗೆ ಕೊಂಡಿಯಾಗಿದೆ. 'ನಾ' ಎಂಬುದು ಭೂತ ಮತ್ತು ವರ್ತಮಾನದ ಘಟನೆಗಳೊಡನೆ ('ಅಂದಿನಿಂದ ಇಂದಿಗೂ') ನೇರ ಸಂಬಂಧ ಪಡೆಯುತ್ತದೆ. ಅಷ್ಟೇ ಅಲ್ಲ, ಇಲ್ಲಿ ವಿವಕ್ಷೆಯಲ್ಲಿರುವ ಭೂತಕಾಲ ಈ ಕಾಲಮಾನದ ಪ್ರಾರಂಭದಿಂದಲೇ ('ಮೊದಲ ಸ್ಪಂದನದಿಂದ') ಮೊದಲಾಗುತ್ತದೆ. ಇಲ್ಲಿಯ 'ಅಂದು' 'ಇಂದು'–ಗಳು ಮುಂದೆ ಕವನದಲ್ಲಿ ಪ್ರಯೋಗವಾದ ಭೂತ ಮತ್ತು ವರ್ತಮಾನಕಾಲದ ಕ್ರಿಯಾರೂಪಗಳೊಡನೆ ಸಂಬಂಧಪಡೆಯುವುದರ ಮೂಲಕ ಅಲ್ಲಿಯ ಘಟನೆಗಳಿಗೂ ಮತ್ತು 'ನಾ'ಕ್ಕೂ ಸಂಬಂಧ ಕಲ್ಪಿಸುತ್ತವೆ. ಹೀಗೆ 'ನಾ' ಎಂಬುದು ಕವನದ ಉಳಿದ ಭಾಗಗಳೊಡನೆ ಗಟ್ಟಿಯಾದ ಸಂಬಂಧ ಕಲ್ಪಿಸಿಕೊಳ್ಳುತ್ತದೆ.

ಉದಾ (4)ರಲ್ಲಿ, 'ಕೈ' 'ನಾಯಿ'ಯ ಜೊತೆ ಸಂಬಂಧ ಪಡೆಯುತ್ತದೆ. ('ಹಿಡಿದ' 'ಸರಪಳಿ' ಪದಗಳು ಇಲ್ಲಿ ನೆರವಾಗುತ್ತವೆ.) 'ಕರಿ (ಬಣ್ಣ)' 'ಜೋಲ್ವನಾಲಗೆ'–ಗಳು 'ಭಯ, ಅಸ್ಪಷ್ಟ, ನೈರಾಶ್ಯ'–ಈ ಭಾವಗಳನ್ನು ವ್ಯಕ್ತಪಡಿಸುತ್ತವೆ. ಮುಂದೆ ಬರುವ

'ಪ್ರಶ್ನೆ' 'ಸಂಜೆ'–ಇವು ಅಸ್ಪಷ್ಟತೆ ವ್ಯಕ್ತವಾಗುವುದನ್ನು ಖಚಿತಗೊಳಿಸುತ್ತವೆ. ಹೀಗೆ 'ಕಠಿನಾಯಿ' ಅಸ್ಪಷ್ಟವಾದ, ಭಯಾನಕವಾದ, ಕೊನೆಯಿಲ್ಲದ ('ಮುಗಿವಿರದ' 'ದೂರ ದೂರದ' ಪದಗಳನ್ನುಗಮನಿಸಿ) ಲೋಕವನ್ನು ಸಾಂಕೇತಿಸುತ್ತದೆ. ಕೈ(ಅಂದರೆ ಅದನ್ನುಳ್ಳ ಮನುಷ್ಯ) ಈ ಲೋಕದ ಕಡೆಗೆ ಅನಿವಾರ್ಯವಾಗಿ ಸಾಗಲೇಬೇಕಾಗಿದೆ ಎಂಬುದು 'ಜಗ್ಗುತಿದೆ', 'ಸಾಗುತಿದೆ' ಎಂಬ ಪದಗಳಿಂದ (ಈ ಪದಗಳ ಅರ್ಥಗಳಲ್ಲಿಯ ಅಂತರವನ್ನು ಗಮನಿಸಿ) ವ್ಯಕ್ತವಾಗುತ್ತದೆ.

ಹೀಗೆ ಭಾಷೆ ಹೆಚ್ಚು ಗಟ್ಟಿಮುಟ್ಟಾಗಿ ನಡೆದಿದ್ದರೂ ಅದು ಕೆಲವು ಕವನಗಳಲ್ಲಿ ಮಾತ್ರ. ಹೆಚ್ಚಿನ ಕವನಗಳಲ್ಲಿ ಭಾಷೆ ಹಿಂದಿನ ಸಂಕಲನಗಳಲ್ಲಿ ಪಡೆಯುತ್ತಿದ್ದ ಕೃತ್ರಿಮ ವಿಭಜನೆ ಹಾಗೂ ಗೇಯಾಂಶ–ಇವುಗಳನ್ನು ತ್ಯಜಿಸುವುದಕ್ಕಿಂತ ಹೆಚ್ಚಿನದನ್ನೇನೂ ಸಾಧಿಸುವುದಿಲ್ಲ. 'ಸ್ಪೂಟ್ನಿಕ್-ವಿನೋಬಾ' 'ಕಂಡದ್ದು ನೂರು ಸಲ' 'ಈಗೀಗ ಮನೆ ತುಂಬ' 'ಚೈತ್ರಮುಖ' 'ಸರಸ್ವತಿಗೆ' 'ದೋಷೋದ್ಧಾರಕ' ಇತ್ಯಾದಿ ಕವನಗಳನ್ನು ಉದಾಹರಣೆಯಾಗಿ ನೋಡಬಹುದು. ಧ್ವನಿ (ರಚನೆ) ಸಾಮ್ಯವಿರುವ ಪದಗುಂಫನವನ್ನು ಪ್ರತ್ಯೇಕವಾಗಿಡುವ ಪ್ರವೃತ್ತಿ ಮತ್ತೆ ಅಲ್ಲಲ್ಲಿ ಕಾಣಿಸಿಕೊಳ್ಳುತ್ತದೆ. ಉದಾಹರಣೆಗೆ, 'ಹುಟ್ಟಿದ ಹಬ್ಬ' ಕವನದ ಈ ಸಾಲುಗಳನ್ನು ನೋಡಬಹುದು :

(5) "ಕಾಲಲಬ್ಧಿಗೆ ಕಾದು ಬಿಡುಗಡೆಯ ಬಯಸಿತ್ತು
ಪ್ರಾಣಭ್ರೂಣ !
..........................
ನಕ್ಕು ತಲೆದೂಗಿದವು ಖಗ ಮಿಗ ಹಸಿರು ಹೂ ಹಣ್ಣು
ಗುಡ್ಡ ಬೆಟ್ಟ,
ಬೆಳೆದು ನಿಂತವು ಎಲ್ಲ ಒಂದೊಂದು ಮಟ್ಟ" ('ದೀಪದ ಹೆಜ್ಜೆ', ಪು. ೨)

ಇಲ್ಲಿ 'ಗುಡ್ಡ ಬೆಟ್ಟ' ಪದಗಳು ಧ್ವನಿ (ರಚನೆ) ಯಲ್ಲಿ ಸಾಮ್ಯತೆ ಪಡೆದಿರುವುದರಿಂದ ಹಾಗೂ ಮೇಲಿನ ಸಾಲಿನ 'ಖಗ ಮಿಗ....' ಪದಗಳೊಡನೆ ಹೊಂದಿಕೊಳ್ಳದ್ದರಿಂದ ಪ್ರತ್ಯೇಕವಾಗಿಸಿದೆ. ಆದರೆ ಅರ್ಥದ ದೃಷ್ಟಿಯಿಂದಾಗಲೀ ಮೇಲಿನ ವಾಕ್ಯದ ಹೋಲಿಕೆಯಿಂದಾಗಲೀ ಕೆಳಗಿನ ಎರಡೂ ವಾಕ್ಯಗಳ ರಚನೆ ಹೀಗಿರಬೇಕು :

"ನಕ್ಕು ತಲೆದೂಗಿದವು
ಖಗ ಮಿಗ ಹಸಿರು ಹೂ ಹಣ್ಣು ಗುಡ್ಡ ಬೆಟ್ಟ,
ಬೆಳೆದು ನಿಂತವು
ಎಲ್ಲ ಒಂದೊಂದು ಮಟ್ಟ"

2.4 'ಅನಾವರಣ' ಸಂಕಲನದಲ್ಲಿಯ ಬಹುತೇಕ ಕವನಗಳು ವಿಡಂಬನಾತ್ಮಕವಾಗಿವೆ. ಈ ಗುಣದಿಂದ ಇಲ್ಲಿಯ ಕವನಗಳು ತಟ್ಟನೆ ಮನವನ್ನಾಕರ್ಷಿಸುತ್ತವೆ. ಆದರೆ (ಹೆಚ್ಚಿನ ಕವನಗಳಲ್ಲಿ) ಈ ವಿಡಂಬನೆ ಅಲ್ಲಿಯ ಭಾಷೆಯೊಳಗಿಂದ ಸಿದ್ಧವಾಗುವುದಿಲ್ಲ. 'ಸಮಕಾಲೀನ ಸಾಮಾಜಿಕ ಸಂದರ್ಭಗಳಿಗೊ ವ್ಯಕ್ತಿಗಳಿಗೊ ಕುಕ್ಕು ಕೊಡುವುದರ ಮೂಲಕ

ಇದು ಸಾಧ್ಯವಾಗುತ್ತದೆ. (ಮುಂದಿನ ಎರಡು ಸಂಕಲನಗಳಾದ 'ತೆರೆದ ಬಾಗಿಲು' ಹಾಗೂ 'ಗೋಡೆ'ಯಲ್ಲಿಯ ಇಂತಹ ಕವನಗಳಿಗೂ ಈ ಮಾತು ಅನ್ವಯಿಸುತ್ತದೆ. ಉದಾ: 'ಜನಗಣಮನ ಅಧಿನಾಯಕ' 'ಕನ್ನಡ ಕುಲಬಾಂಧವರ ಸ್ವಾಗತಗೀತೆ'). ಉದಾಹರಣೆಗೆ 'ಅನಾವರಣವಾಯಿತಂತೆ' 'ರಾಷ್ಟ್ರಪಕ್ಷಿ' ಮುಂತಾದ-ವಿಡಂಬನೆಯ ಗುಣವನ್ನು ತೀವ್ರ ವಾಗಿಸಿದ ಕವನಗಳನ್ನು ನೋಡಬಹುದು. 'ಅನಾವರಣವಾಯಿತಂತೆ' ಕವನದ ಪರಿ ಣಾಮ ಮುಖ್ಯವಾಗಿ ಎರಡು ಸಂಗತಿಗಳನ್ನು ಅವಲಂಬಿಸಿದೆ: ಒಂದು, ಗಾಂಧೀತತ್ವಕ್ಕೆ ಬೆಲೆಕೊಡದೆ ಅವರನ್ನು ಪೂಜಿಸುತ್ತಿರುವುದು; ಎರಡು, ಈ ಕೆಲಸ ಮಂತ್ರಿಗಳಿಂದಲೇ ಆಗುತ್ತಿರುವುದು. ಇವುಗಳಲ್ಲಿ ಮೊದಲನೆಯದನ್ನು "ಆವರಣವೆ ಇಲ್ಲದವಗೆನಾವರಣ-ವೆಂಥದೊ!" ಎಂದು ಹೇಳಲಾಗಿದೆ. ಎರಡನೆಯದನ್ನು ಕುರಿತು "ಮಂತ್ರಿವರ್ಯ-ರಮೃತಹಸ್ತ ನಡೆಸಿತಂತೆ ಇಷ್ಟನೂ!" ಎಂದು ಹೇಳಲಾಗಿದೆ. ಇಲ್ಲಿ '!' ಚಿಹ್ನೆಯನ್ನು ಬಳಸುವುದರ ಮೂಲಕ ಈ ವಾಕ್ಯದ ಉಚ್ಚಾರಣೆಯಲ್ಲಿಯ ಕಾಕು(Intonation)ವನ್ನು ಹೇಳಿ 'ಹೀಗಾಗಬಾರದಾಗಿತ್ತು'ಎಂಬರ್ಥದ ವ್ಯಂಗ್ಯವನ್ನು ಸಾಧಿಸಲು ಪ್ರಯತ್ನಿಸಲಾಗಿದೆ. ಆದರೆ ಈ ವಾಕ್ಯವ್ಯಂಗ್ಯಾರ್ಥವನ್ನು ಸೂಚಿಸುವುದು ಮಂತ್ರಿವರ್ಯರ ನಡವಳಿಕೆಗಳನ್ನು ಅವಲಂಬಿಸಿದೆ. ('ಮಂತ್ರಿವರ್ಯರು' ಎಂಬುದು ಯಾವಾಗಲೂ ಎಲ್ಲ ಸಮಾಜದಲ್ಲಿಯೂ ಅಪ್ರಾಮಾಣಿಕರು ಆಗಿರಬೇಕಾದ್ದಿಲ್ಲವಲ್ಲವೇ ?) ಇದನ್ನು ಸೂಚಿಸುವ ವಿವರಗಳು ಕವನ ದಲ್ಲಿ ಬರುವುದಿಲ್ಲ. ಆದ್ದರಿಂದ ಈ ಸಾಲು ವ್ಯಕ್ತಪಡಿಸುವ ವ್ಯಂಗ್ಯಾರ್ಥ ನಿರ್ದಿಷ್ಟಕಾಲದ, ನಿರ್ದಿಷ್ಟ ಸಾಮಾಜಿಕ ಪರಿಸರದ ಚೌಕಟ್ಟಿನೊಳಗೆ ಮಾತ್ರ ಸಾಧ್ಯ. 'ರಾಷ್ಟ್ರಪಕ್ಷಿ' ಕವನದ "ಕರೆದಲ್ಲಿ ಬಂದು ಭಾಷಣಬಿಗಿವ ನಾಯಕರಿಲ್ಲವೇ! ಅವರೇ ಸಾಕು, ಇನ್ನಾರಿ ಗಿದೆ ಈ ಒಂದು ದಕ್ಷತೆ!" ಎಂಬ ಸಾಲುಗಳೂ ಕವನದ ಸಂದರ್ಭದಲ್ಲಿ ವ್ಯಂಗ್ಯವನ್ನು ಹೇಳುವುದಿಲ್ಲ. (ಇನ್ನಿತರ ವಿಷಯಗಳ ಜೊತೆಗೆ ಕವನ ಒಂದು ಕಲಾಕೃತಿಯೂ ಆಗ ಬೇಕು-ಎಂಬ ಮಾತನ್ನು ಒಪ್ಪಿದಾಗ ಮೇಲೆ ಹೇಳಿದ ಮಾತುಗಳು ಮಹತ್ವದವಾಗು ತ್ತವೆ.) ಇಲ್ಲಿ ಇದೇ ಸಂಕಲನದಲ್ಲಿಯ 'ಕುಲುಮೆಯ ಒಳಗೆ ಕಿಡಿಯಿಲ್ಲ' ಎಂಬ ಕವನ ವನ್ನು ಜೊತೆಗಿಟ್ಟು ಹೋಲಿಸಿದಾಗ ಈ ಕವನ (ಉತ್ತಮವಾಗಿದ್ದರೂ) ಮಾಡದ ತಕ್ಷಣ-ಪರಿಣಾಮವನ್ನು ಉಳಿದ ವಿಡಂಬನಾತ್ಮಕ ಕವನಗಳು ಹೇಗೆ ಮಾಡುತ್ತವೆಂಬುದು ಅರಿವಾಗುತ್ತದೆ. 'ಕುಲುಮೆಯ ಒಳಗೆ ಕಿಡಿಯಿಲ್ಲ' ಕವನದಲ್ಲಿ ವಿಡಂಬಿಸುವ ಪ್ರವೃತ್ತಿ (ಅಷ್ಟಾಗಿ) ಇಲ್ಲ. ಇಲ್ಲಿ ಯಾವುದೇ ಸಾಮಾಜಿಕ ಸಂದರ್ಭ, ವ್ಯಕ್ತಿಗಳನ್ನು ತಂದು ಜೋಡಿಸುವ ಕೆಲಸವೂ ನಡೆದಿಲ್ಲ. ಕವನ ಹೇಳಬೇಕಾದ ಅರ್ಥವನ್ನು ಭಾಷೆ, ಚಿತ್ರಗಳ ಮೂಲಕ ಸೂಚ್ಯವಾಗಿ ತಿಳಿಸುತ್ತ ಹೋಗುತ್ತದೆ.

2.5 ಹಿಂದೆ (2.1)ರಲ್ಲಿ ಹೇಳಿದ ಸಂಗತಿಯೊಂದನ್ನು 'ಅನಾವರಣ' ಸಂಕಲನದ ಸಂದರ್ಭದಲ್ಲಿ ಮತ್ತೊಮ್ಮೆ ನೋಡೋಣ. ಕವನ ತನ್ನ ಉದ್ದಕ್ಕೂ ನಿರ್ಮಿಸುವ ಲಯದ ವ್ಯವಸ್ಥೆ (pattern)ಯನ್ನು ಮುರಿಯುವುದರ ಮೂಲಕ ಕೆಲವು ಸಾಲುಗಳ ಮೇಲೆ ಗಮನ ಸೆಳೆಯುವ ತಂತ್ರವನ್ನು ಬಳಸಿಕೊಂಡರೂ ಅದನ್ನು ಜಿ.ಎಸ್.ಎಸ್. ಲಾಭ

ದಾಯಕವಾಗಿ ಬಳಸಿಕೊಂಡಿಲ್ಲವೆಂದು ಹಿಂದೆ ಹೇಳಿದೆ. ಈ ಸಂಕಲನದಲ್ಲಿ ಅದನ್ನು ಹೆಚ್ಚು ಅರ್ಥಪೂರ್ಣವಾಗಿ ಬಳಸಿಕೊಳ್ಳುವುದನ್ನು ನೋಡಬಹುದು. 'ಹಳೇ ಪೇಪರ್ ಖಾಲಿ ಶೀಶೆ' ಕವನದ ಈ ಸಾಲುಗಳನ್ನು ಗಮನಿಸಿ :

(6) "ಕಾಲಿಟ್ಟೆಡೆ ಖಾಲಿಶೀಶೆ
ಮೂಲೆತುಂಬ ಹಳೆಪೇಪರ್
ಇದನು ಗುಡಿಸಿ ಇದನು ತೊಳೆದು
ಕೊಟ್ಟಾದರೂ ತೊಳೆಯಬೇಕು
ಹಳೆಯ ಹೊಲಸು ಕಸವನು" ('ಅನಾವರಣ', ಪು. ೫)

ಇಲ್ಲಿ 'ಹಳೆಯ ಹೊಲಸು' ಎಂಬ ಪದಗಳು ಇವುಗಳ ಮೇಲಿರುವ 'ಮೂಲೆ ತುಂಬ' ಇತ್ಯಾದಿ ಪದಗಳು ಉಚ್ಚಾರಣೆಗೊಳ್ಳುವಂತೆ ಆರು ಮಾತ್ರೆಗಳ ಗಣವಾಗಿ ಒಮ್ಮೆಲೆ ಉಚ್ಚಾರಣೆಗೊಳ್ಳಬೇಕಿತ್ತು. ಆದರೆ ಮುಂದಿರುವ 'ಕಸವನು' ನಾಲ್ಕೇ ಮಾತ್ರೆಯನ್ನುಳ್ಳ ಪದವಾಗಿದ್ದರಿಂದ ಅದರ ಉಚ್ಚಾರಣೆಯ ಜೊತೆ ಹೊಂದಿಕೊಳ್ಳಲು 'ಹಳೆಯ ಹೊಲಸು' ಎಂಬ ಭಾಗ ಎರಡು ಭಾಗವಾಗಿ ಒಡೆದುಕೊಂಡು ಉಚ್ಚಾರಣೆಗೊಳ್ಳುತ್ತದೆ. ಅಷ್ಟೇ ಅಲ್ಲ, 'ಹಳೆಯ' 'ಹೊಲಸು'ಗಳಲ್ಲಿಯ ಪ್ರತಿ ಅಕ್ಷರವೂ (letter), ಒಂದು ಮಾತ್ರೆಯ ಕಾಲ ಉಚ್ಚಾರವಾಗಬೇಕಿದ್ದರೂ, ಅದಕ್ಕಿಂತಲೂ ಸ್ವಲ್ಪ ದೀರ್ಘಕಾಲ ಉಚ್ಚಾರಗೊಂಡು ಪ್ರತಿಪದದ ಉಚ್ಚಾರಣೆ ಒಟ್ಟನಲ್ಲಿ ಸುಮಾರು ನಾಲ್ಕು ಮಾತ್ರೆಗಳಷ್ಟಾಗುತ್ತದೆ. (ಇದಕ್ಕೆ ಕಾರಣ ಮುಂದಿನ 'ಕಸವನು' ಎಂಬ ಪದ ನಾಲ್ಕು ಮಾತ್ರೆಯದಾಗಿರುವುದೇ.) ಆದ್ದರಿಂದ ಈ ಸಾಲುಗಳಲ್ಲಿಯ ಮಾತ್ರಾಗಣಗಳನ್ನು ಹೀಗೆ ಸೂಚಿಸಬಹುದು :

6 : 6
6 : 6
3(+1) : 3(+1) : 4.

ಇದರಿಂದ ಕೊನೆಯ ಸಾಲಿನಲ್ಲಿಯ ಮೂರೂ ಪದಗಳ ಮೇಲೆ ಒತ್ತು ಬೀಳುತ್ತದೆ. ಹಾಗೂ ಇದು ಉಳಿದ ಸಾಲುಗಳಿಂದ ಪ್ರತ್ಯೇಕಗೊಳ್ಳುತ್ತದೆ. 'ಕಸವನು' ಎಂಬ ಪದ ಸೂಚಿಸುವ ಸಂಕೇತಾರ್ಥ (=ದುಷ್ಟತನ ಅಥವಾ ಹೀನಪ್ರವೃತ್ತಿ)ವನ್ನು 'ಹಳೆಯ' 'ಹೊಲಸು' ಪದಗಳು ಹೊಗಳುತ್ತವೆ. "ಹಳೆಯ ಹೊಲಸು ಕಸವನು" ಎಂಬುದಕ್ಕೂ ಕವನದ ಶೀರ್ಷಿಕೆಯಾದ 'ಹಳೇ ಪೇಪರ್ ಖಾಲಿ ಶೀಶೆ' ಎಂಬುದಕ್ಕೂ ಸಮಾಂತರ ಅರ್ಥಗಳಿದ್ದು (parallel meanings)ದರಿಂದ ಈ ಸಾಲಿನ ಅರ್ಥ ಕವನದ ಕೇಂದ್ರಾರ್ಥವಿರಬಹುದೆಂಬ ಸೂಚನೆ ದೊರೆಯುತ್ತದೆ. 'ಕಸವನು' ಪದಾರ್ಥದ ಆಳ–ಅಗಲಗಳನ್ನು ಇದೇ ಕವನದಲ್ಲಿ ಬರುವ 'ಪುರಾತನ' 'ಎಷ್ಟೊಂದಿವೆ' ಎಂಬ ಪದಗಳೂ, ಈ ಅರ್ಥದ ತೀವ್ರತೆಯನ್ನು

"ಕತ್ತು ಹಿಡಿದು ದಬ್ಬಬೇಕು
ಶಿಲುಬೆಗಿಟ್ಟು ಬಡಿಯಬೇಕು
ಹಿಡಿಗುಂಡಿಗೆ ಒಡ್ಡಬೇಕು"

ಎಂಬ ಸಾಲುಗಳೂ ಹೇಳುತ್ತವೆ. ಹೀಗೆ 'ಹಳೆಯ ಹೊಲಸು ಕಸವನು" ಎಂಬ ಸಾಲು ಕವನದಿಂದ ಪ್ರತ್ಯೇಕವಾಗಿ ಉಳಿಯದೆ ಉಳಿದ ಭಾಗದೊಡನೆ ಸಾವಯವ ಸಂಬಂಧ ಪಡೆಯುತ್ತದೆ.

2.6 ಇದೇ ಕವನದಲ್ಲಿ ಜಿ.ಎಸ್.ಎಸ್. ಭಾಷಾಪ್ರಯೋಗದಲ್ಲಿ ಇನ್ನೂ ಒಂದು ಹೆಚ್ಚಳವನ್ನು ಸಾಧಿಸುವುದನ್ನು ನೋಡುತ್ತೇವೆ. ಉದಾ (6)ರಲ್ಲಿಯ ಕೊನೆಯ ಎರಡು ಸಾಲುಗಳನ್ನು ಇದೇ ಕವನದ ಕೊನೆಯ ಈ ಸಾಲುಗಳ ಜೊತೆಗಿಟ್ಟು ಹೋಲಿಸಬೇಕು :

(7) "[ಸದ್ಯ, ತೊಲಗಿ ಹೋದನಲ್ಲ
ಆಚೆ ಕಡೆಯ ಬೀದಿಗೆ
ಮತ್ತೆ ಬಂದರೇನು ಗತಿ
ಈಚೆ ಕಡೆಯ ಬೀದಿಗೆ]"

('ಅನಾವರಣ', ಪು. ೭)

ಉದಾ (6)ರಲ್ಲಿಯ 'ಗುಡಿಸಿ' 'ಬಳಿದು' 'ತೊಳೆಯಬೇಕು' (ಕಸವನು) ಎಂಬ ಪದಗಳಲ್ಲಿ ಕಂಡುಬರುವ ಆಶಯವನ್ನು ಉದಾ (7)ರಲ್ಲಿ ಬರುವ ವಾಕ್ಯಗಳು ಅಲ್ಲಗಳೆಯುತ್ತವೆ. ಇದರಿಂದ 'ತೊಳೆಯಬೇಕು' ಎಂಬುದು 'ತೊಳೆಯುವ ಇಚ್ಛೆಯಿಲ್ಲ' ಎಂಬ ನಿಷೇಧಾರ್ಥವನ್ನು ಹೇಳುವುದರ ಮೂಲಕ ವ್ಯಂಗ್ಯಾರ್ಥವನ್ನು ಸಾಧಿಸುತ್ತದೆ. ಇಲ್ಲಿ ಬಳಕೆಯಾದ ಆವರಣ ಚಿಹ್ನೆ ಈ ನಿಷೇಧಾರ್ಥವಿರುವುದು ಮಾತಿನಲ್ಲಲ್ಲ, ಮನಸ್ಸಿನಲ್ಲಿ ಎಂದು ಅರ್ಥಕೊಟ್ಟು ವ್ಯಕ್ತಿಯ ಬಾಹ್ಯ ಮತ್ತು ಆಂತರ್ಯಗಳಲ್ಲಿಯ ವ್ಯತ್ಯಾಸವನ್ನು ಸೂಚಿಸಿ ಕವನಕ್ಕೆ ನಾಟಕೀಯತೆಯನ್ನು ತರುತ್ತದೆ.

ಈ ರೀತಿಯಲ್ಲಿ ಭಾಷೆಯ ಮೂಲಕವೇ ವ್ಯಂಗ್ಯಾರ್ಥ ತಂದು ಸಮಾಜ, ವ್ಯಕ್ತಿಗಳನ್ನು ವಿಡಂಬಿಸುವ ಸಾಮರ್ಥ್ಯ 'ಅನಾವರಣ'ದ ಇತರ ಕವನಗಳಲ್ಲಿ ಅಷ್ಟಾಗಿ ಕಾಣದು. ಇದಕ್ಕೆ ವಿರೋಧವಾಗಿ ಅತಿವಿವರಗಳನ್ನು ನೀಡಿ, ಶಿಲ್ಪವನ್ನು ಸಡಿಲುಗೊಳಿಸಿ ಕವನಗಳನ್ನು ಮತ್ತಷ್ಟು ಸಾಮಾನ್ಯವಾಗಿಸುವ ಪ್ರವೃತ್ತಿ ಅಲ್ಲಲ್ಲಿ ತೋರುತ್ತದೆ. 'ನವಿಲು' 'ರಾಷ್ಟ್ರಪಕ್ಷಿ' ಮುಂತಾದ ಕವನಗಳನ್ನು ಈ ಮಾತಿನ ಹಿನ್ನೆಲೆಯಲ್ಲಿ ನೋಡಬಹುದು.

2.7 'ಅನಾವರಣ'ದವರೆಗೆ ('ತೆರೆದ ದಾರಿ' ಸಂಕಲನವನ್ನೂ ಸ್ಥೂಲವಾಗಿ ಇದರ ಜೊತೆಗೇ ವರ್ಗೀಕರಿಸಬಹುದು. ಆದರೆ ಈ ಲೇಖನದಲ್ಲಿ ಅದನ್ನು ವಿಶದವಾಗಿ ಪರಿಶೀಲಿಸಿಲ್ಲ.) ಭಾಷೆಯಲ್ಲಿ ಬೆಳವಣಿಗೆಯನ್ನು ತೋರುತ್ತ ಬಂದ ಜಿ.ಎಸ್.ಎಸ್. 'ಗೋಡೆ' ಸಂಕಲನದಲ್ಲಿ ಮತ್ತೆ ಹಿಂದಕ್ಕೆ ಹೋಗಿಬಿಟ್ಟಿದ್ದಾರೆ ಎನ್ನಿಸುತ್ತದೆ. 'ಖಾಲಿ ಸೈಟಿನ ಕಡೆಗೆ' 'ಬೆತ್ತಲೆ' ಮುಂತಾದ ಎರಡು ಮೂರು ಕವನಗಳ ಭಾಷೆ ಹಿಂದಿನ ಸಂಕಲನದ ಭಾಷೆಗೆ

ಹತ್ತಿರವಾಗಿದೆ. ಉಳಿದ ಕವನಗಳಲ್ಲಿ 'ಅನಾವರಣ'ದಲ್ಲಿ ತೋರಿದ ಭಾಷೆಯ ಗುಣಗಳಾವುವೂ ಕಂಡುಬರುವುದಿಲ್ಲ. ('ಜನಗಣಮನ ಅಧಿನಾಯಕ' 'ಕನ್ನಡ ಕುಲಬಾಂಧವರ ಸ್ವಾಗತಗೀತೆ' ಮುಂತಾದ ಒಂದೆರಡು ವಿಡಂಬನಾತ್ಮಕ ಕವನಗಳನ್ನು ಈ ಹಿಂದೆಯೇ 'ಅನಾವರಣ'ದ ಕವನಗಳ ಜೊತೆಗಿಟ್ಟು ಅವುಗಳನ್ನು ಕುರಿತು ಹೇಳಿದ್ದೇನೆ) ಹೇಳಬೇಕಾದುದನ್ನು ವಾಚ್ಯವಾಗಿಯೇ ಹೇಳುವ ಪ್ರವೃತ್ತಿ ಮತ್ತೆ ಅಲ್ಲಲ್ಲಿ ಕಾಣಿಸಿಕೊಳ್ಳುವುದರಿಂದ ಭಾಷೆ ಸತ್ವಹೀನವಾದ ಗದ್ಯವೇ ಆಗುತ್ತದೆ. ಉದಾಹರಣೆಗೆ, 'ಚಂದ್ರನಿಗೆ' ಕವನವನ್ನು ನೋಡಬಹುದು. ('ಪ್ರಜ್ಞೆ', 'ಚಂದ್ರಮುಖಿಗೆ' 'ಬ್ರಹ್ಮಗಿರಿಯ ಅಶೋಕನ ಶಾಸನದ ಹತ್ತಿರ'—ಈ ಕವನಗಳೂ ಉತ್ತಮ ಉದಾಹರಣೆಯಾಗುತ್ತವೆ.) ವೈಜ್ಞಾನಿಕ ಶೋಧನಗಳ ಪರಿಣಾಮವಾಗಿ ಚಂದ್ರನ ಬಗೆಗಿದ್ದ ಪೌರಾಣಿಕ ಕಲ್ಪನೆಗಳು ಮಾಯವಾಗಿ ಇತರರಿಗೆ ಚಂದ್ರನ ಬಗೆಗಿದ್ದ ಗೌರವ ಕಡಿಮೆಯಾದರೂ ತನಗೆ ಅದು ಕಡಿಮೆಯಾಗದೆ ಹೆಚ್ಚಾಗಿದೆಯೆಂದು ಹೇಳಿ ಕವಿ ಅದಕ್ಕೆ ಈ ಕಾರಣಗಳನ್ನು ಕೊಡುತ್ತಾನೆ :

(8) "ಒಂದು, ಚೆಂದ ನಮ್ಮೆದೆಗಳಿಗೆ ನೀ ಸುರಿವ ಬೆಳದಿಂಗಳಿನ ಸಂತೋಷಕ್ಕೆ
ಇದೆಲ್ಲದರಿಂದ ಏನೂ ಇಲ್ಲ ಧಕ್ಕೆ,
ಎರಡು, ಏನಾದರೂ ನಿನಗಿಂತ ನಮ್ಮ ಈ ನೆಲವೇ ಚೆಲುವೆಂಬ
ಅನುಭವವನ್ನು ಕೊಟ್ಟಿದ್ದಕ್ಕೆ."

('ಗೋಡೆ', ಪು. ೨೭)

ಪ್ರಾಸಸ್ಥಾನದಲ್ಲಿ 'ಧಕ್ಕೆ'ಯೂ–'ದ್ದಕ್ಕೆ'ಯೂ ಬಂದು ಸುಂದರವಾಗಿವೆ—ಎಂಬುದಕ್ಕಿಂತ ಹೆಚ್ಚಿನದನ್ನೇನೂ ಇಲ್ಲಿ ಹೇಳಲು ಸಾಧ್ಯವಿಲ್ಲವೆಂದು ತೋರುತ್ತದೆ.

೩

3.1 ಸೋಜಿಗದ ವಿಷಯವೆಂದರೆ ಜಿ.ಎಸ್.ಎಸ್. ತಮ್ಮ ಮೊದಲ ಕೆಲವು ಕವನಗಳಲ್ಲಿ ತೋರುವ ಭಾಷೆಯ ಅಚ್ಚುಕಟ್ಟುತನ (Structural harmony)ವನ್ನು ಆನಂತರದ ಕವನಗಳಲ್ಲಿ ತೋರುವುದಿಲ್ಲವೆಂಬುದು. ಉದಾಹರಣೆಗೆ, 'ಆಷಾಢ' ಕವನ ಇವುಗಳಲ್ಲೊಂದು. ಅದರ ಭಾಷೆ–ರಚನೆಗಳನ್ನಿಲ್ಲಿ ನೋಡಬಹುದು :

(9) "ಸಾಗಿಯೇ ಸಾಗುತಿವೆ, ಸಾಗಿಯೇ ಸಾಗುತಿವೆ
ಲಗ್ಗೆ ನುಗ್ಗುವ ಸೇನೆಯೊಲು ಮೋಡಗಳ ಸಾಲು !
ಸುತ್ತ ನೆರಳಿನ ನರಳು
ಜೀವಗಳೊ ಛಾಯೆಗಳೊ
ತಿಳಿಯಲಾರದ ಒಗಟು !
ರವಿಯಿಲ್ಲ ಶಶಿಯಿಲ್ಲ
ಬೆಳಕೂ ಅಲ್ಲ ಕತ್ತಲೂ ಅಲ್ಲ
ಮೋಡಗಳ ಕೆಸರಿನಲಿ ಹೂತುಹೋಗಿದೆ,

ಉದಯಾಸ್ತಗಳ ಪೆಂಪು !
ನೂರು ಕೊರಗಿನ ಜಿನುಗಿನೊಲು
ತಟಪಟನೆ ತಟಪಟನೆ
ಒಂದೆ ಸಮನೆ ಕೊರೆವ ಸೋನೆಯ ಮೇಳ-
ದಲಿ ಜಗಮೂಕ,
ಬೇಸರದ ಗೋರಿಯಾಗಿದೆ ಲೋಕ !
ಗಾಳಿಗಳ ಗೋಳಿನಲಿ ಮೋಡಗಳ ತುಮುಲದಲಿ
ಸೋನೆಗಳ ಮೇಳದಲಿ
ಸಿಕ್ಕಿ ನರಳುವ ಜಗಕೆ ಎಂದು ಬಿಡುಗಡೆಯಹುದೊ
ಶ್ರಾವಣದ ಶ್ರೀಗೌರಿಯವತಾರವೆಂದಹುದೊ
ಎಂದು ಕಾದಿದೆ ಜೀವ ಗೂಡಿನೊಳಗೆ
ಗರಿಮುದುರಿ ಕಣ್ಮುಚ್ಚಿ ಮೌನದೊಳಗೆ !"

('ಚೆಲುವು-ಒಲವು', ಪು. ೪೦)

ಈ ಕವನದ ಕೊನೆಯ ನಾಲ್ಕು ಸಾಲುಗಳು ಕವನದ ಅರ್ಥವನ್ನು ವಾಚ್ಯಗೊಳಿಸಿ ಉಳಿದ ಭಾಗದಲ್ಲಾದ ಪದ-ವಾಕ್ಯಗಳ ಜೋಡಣೆಯ ಮಹತ್ವವನ್ನು ಕಡಿಮೆಯಾಗಿ ಸುತ್ತವೆ. ಈಗ ಕವನದಲ್ಲಿಯ ಪದ, ಪದಪುಂಜ, ವಾಕ್ಯಗಳನ್ನು (ಕೊನೆಯ ನಾಲ್ಕು ಸಾಲುಗಳನ್ನುಳಿದು) ಅರ್ಥಸಂಬಂಧಿಗಳಾಗಿ ವರ್ಗೀಕರಿಸಿಕೊಂಡು ಕವನದ ಅರ್ಥವನ್ನು ಗಮನಿಸಬಹುದು. (ಕವನದ ಸಂಪೂರ್ಣ ವಿಮರ್ಶೆ ಇಲ್ಲಿ ಪ್ರಕೃತವಲ್ಲ. ಭಾಷೆಯ ಪ್ರಯೋಗವನ್ನು ಕುರಿತು ಮಾತ್ರ ಇಲ್ಲಿ ಹೇಳುವುದಾಗುತ್ತದೆ.)

A) ನೆರಳು–ನರಳು
ಜೀವ–ಛಾಯೆ
ಬೆಳಕು–ಕತ್ತಲು
ಉದಯ–ಅಸ್ತ
—ರವಿಯಿಲ್ಲ
—ಶಶಿಯಿಲ್ಲ
ಒಗಟು

B) ಲಗ್ಗೆ, ನುಗ್ಗು,
ಸೇನೆ, ಸಾಲು
ಮೇಳ

C) ಗಾಳಿಗಳ ಗೋಳು
ಮೋಡಗಳ ತುಮುಲ
ಸೋನೆಗಳ ಮೇಳ

D) ಸಾಗುತಿವೆ
ಒಂದೆಸಮನೆ
ಸಾಗಿಯೇ ಸಾಗುತಿದೆ

E) ಹೊತುಹೋಗಿದೆ ಪೆಂಪು
ಗೋರಿಯಾಗಿದೆ ಲೋಕ

F) ನರಳು
ಗೋಳು
ಜಗಮೂಕ

ಇಲ್ಲಿ (A) ಭಾಗದಲ್ಲಿ ಬರುವ ಪದಸಮೂಹಗಳು ಆರೆಗತ್ತಲಿನ, ಏನೂ ತೋಚದ ಸ್ಥಿತಿಯೊದಗಿದುದನ್ನು ಹೇಳುತ್ತವೆ. ಇದು 'ಮೋಡಗಳ ಸಾಲಿ'ನಿಂದಾದುದನ್ನು ಮಧ್ಯೆ ಬರುವ 'ಸುತ್ತ ನೆರಳಿನ ನರಳು' ಎಂಬ ಸಾಲು ತಿಳಿಸುತ್ತದೆ. ಈ ಸ್ಥಿತಿ ಒದಗುತ್ತಿರುವ

ವೇಗ, ತೀವ್ರತೆಗಳನ್ನು (B)ದಲ್ಲಿಯ ಪದಗಳು ಹೇಳುತ್ತವೆ. (C)ದಲ್ಲಿಯ ಪದಗಳು ಈ ಸ್ಥಿತಿಗೆ ಒದಗಿದ ಲೋಕ ('ಜಗ') (ಸಾಂಕೇತಿಕವಾಗಿ ವ್ಯಕ್ತಿಯ ಒಳಲೋಕ) ಹಾಳುಸುರಿಯುತ್ತಿರುವುದರ ಚಿತ್ರವನ್ನು ಕೊಡುತ್ತವೆ. ಈ ಸ್ಥಿತಿ ಮುಂದುವರಿಯುತ್ತಿರುವುದನ್ನು (D)ದಲ್ಲಿಯ ಪದಗಳು ಹೇಳುತ್ತವೆ. ಇದರಿಂದ ಲೋಕ (ಸಾಂಕೇತಿಕವಾಗಿ ವ್ಯಕ್ತಿಯ ಒಳಲೋಕ)ದ ಮೇಲಾದ ಪರಿಣಾಮವನ್ನೂ ಅದು ಅನುಭವಿಸುತ್ತಿರುವ ವೇದನೆಗಳನ್ನೂ ಕ್ರಮವಾಗಿ ಪಟ್ಟಿ (E) ಮತ್ತು ಪಟ್ಟಿ (F)ದಲ್ಲಿಯ ಪದಗಳು ತಿಳಿಸುತ್ತವೆ. ಮುಂದೆ ಇದರ ಬಿಡುಗಡೆ ಕಾದಿದೆ ಎಂಬುದನ್ನು ವಾಚ್ಯವಾಗಿಯೇ ಹೇಳಲಾಗಿದೆ. ಆದರೆ ವಾಚ್ಯವಾಗದ ಒಂದು ಅಂಶ "ಸಾಗಿಯೇ ಸಾಗುತಿದೆ" ಎಂಬ ಸಾಲಿನಲ್ಲಿಯ ಪುನರುಕ್ತಿಯ ಮೂಲಕ ಸಿದ್ಧವಾಗುತ್ತದೆ. ಅದು, ಈ ಅರೆಗತ್ತಲಿನ, (ಸಾಂಕೇತಿಕ ಅರ್ಥವನ್ನು ಗಣನೆಗೆ ತಂದುಕೊಂಡಾಗ) ನಿಷ್ಕ್ರಿಯವಾದ ಅವಸ್ಥೆ ಸಾಗುತ್ತದೆ ಅಥವಾ ಕಳೆಯುತ್ತದೆ ಎಂಬ ಭರವಸೆ. (ಈ ಅರ್ಥ—ವ್ಯಕ್ತಿಯ ಒಳಲೋಕಕ್ಕೆ ಹೊಂದಿಸಿಕೊಂಡ ಅರ್ಥ—ಕವಿ ಇಟ್ಟುಕೊಂಡ ಅರ್ಥವಾಗದೆ, ಕವನ ಹೊರಡಿಸುವ ಅರ್ಥವಾಗಿರಬಹುದು.)

ಈ ಕವನದಲ್ಲಿಯ "ಸುತ್ತ....ಅಲ್ಲ" ಎಂಬ ಭಾಗದಲ್ಲಿ ಬರುವ ಚಿಕ್ಕ ಸಾಲುಗಳು ಅರೆಗತ್ತಲಿನ ಸ್ಥಿತಿ ಉಂಟಾಗುತ್ತಿರುವುದರ ವೇಗವನ್ನು ಸೂಚಿಸಲು ನೆರವಾಗಿ 'ಲಗ್ಗೆ' 'ನುಗ್ಗು' 'ಸಾಗು'—ಈ ಪದಗಳಿಗೆ ಪುಷ್ಟಿಕೊಡುತ್ತವೆ. ನಮ್ಮ ವಿವಕ್ಷೆಯಲ್ಲಿರುವ ಕವನ ಭಾಗದಲ್ಲಿ ಉಪಯೋಗವಾದ ಎರಡು ಉದ್ದ ವಾಕ್ಯಗಳು ಸ್ತಬ್ಧಸ್ಥಿತಿಯನ್ನು ಸೂಚಿಸಲು ನೆರವಾಗುತ್ತವೆ.

೪

ಕಳೆದ ಮೂರು ಭಾಗಗಳಲ್ಲಿ ಬಂದ ತೀರ್ಮಾನಗಳನ್ನು ಈಗ ಸಂಗ್ರಹಿಸಿ ಅವುಗಳನ್ನು ಕುರಿತು ಕೆಲವು ಮಾತುಗಳನ್ನು ಹೇಳಬಹುದು.

1) ಮೊದಲ ಮೂರು ಸಂಕಲನಗಳಲ್ಲಿ ಕವಿ ಆಶಯ ಅಥವಾ ಹೇಳಿಕೆಗಳನ್ನು ಅದನ್ನು ಕವನದ ಭಾಷೆಯೊಳಗಿನಿಂದ ಸಾಧಿಸದೆ ಹೊರಗಿನಿಂದ ತಂದು ಜೋಡಿಸುತ್ತಾನೆ. ಇದರಿಂದ ಭಾಷೆಯ ಉಪಯೋಗ ಸಾಕಷ್ಟು ಆಗುವುದಿಲ್ಲ. ಅಲ್ಲದೆ ವರ್ಣನೆಗಳಲ್ಲಿಯೂ ಪದ, ವಾಕ್ಯಗಳ ಬಳಕೆ ಅತಿಯಾಗುತ್ತದೆ.
2) 'ಸಂಜೆದಾರಿ' 'ದೀಪದ ಹೆಜ್ಜೆ' 'ಕಾರ್ತೀಕ' ಸಂಕಲನಗಳಲ್ಲಿ ಹಿಂದಿನಂತೆ ಗೇಯಾಂಶವನ್ನು ಗಮನದಲ್ಲಿಟ್ಟು ಕವನದ ಸಾಲುಗಳನ್ನು ವಿಭಜಿಸುವುದು ಅಲ್ಲಲ್ಲಿ ನಡೆದರೂ, ಭಾಷೆ ಆಡುಮಾತಿನ ಸಮೀಪ ಬರುವುದಲ್ಲದೆ ಕವನದ ಆಶಯವನ್ನು ವ್ಯಕ್ತಪಡಿಸಲು ಹೆಚ್ಚು ಸಮರ್ಥವಾಗುತ್ತದೆ.
3) 'ಅನಾವರಣ' ('ತೆರೆದ ದಾರಿ')ದಲ್ಲಿಯ ಕವನಗಳು ವಿಡಂಬನೆಯ ಗುಣವನ್ನು ಹೊಂದಿದ್ದರಿಂದ ತಟ್ಟನೆ ಮನಸ್ಸನ್ನಾಕರ್ಷಿಸಿದರೂ ಕವನಗಳ ಅರ್ಥ ಭಾಷೆಯ

ಮೂಲಕವೇ ಸಿದ್ಧವಾಗುವುದು ಕೆಲವೇ ಕವನಗಳಲ್ಲಿ. ಅನಂತರದ 'ಗೋಡೆ' ಯಲ್ಲಿಯ ಭಾಷೆ ಮತ್ತೆ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತದೆ.

4) ಜಿ.ಎಸ್.ಎಸ್. ತಮ್ಮ ಮೊದಲಿನ ಕೆಲವು ಕವನಗಳಲ್ಲಿ ತೋರುವ ಯಶಸ್ಸನ್ನು (ಭಾಷೆಯ ದೃಷ್ಟಿಯಿಂದ) ಅನಂತರದ ಕವನಗಳಲ್ಲಿ ತೋರುವುದಿಲ್ಲ.

ಮೇಲಿನ ಸಂಗತಿಗಳಿಂದ ಇನ್ನು ಕೆಲವು ತೀರ್ಮಾನಗಳಿಗೆ ಬರಬಹುದು. ಜಿ.ಎಸ್.ಎಸ್. ಭಾಷೆಯ ಹಳೆಯ ರೂಪಗಳನ್ನು ಬಳಸುವುದನ್ನು ನಿಲ್ಲಿಸಿ (ಕಡಿಮೆ ಮಾಡಿ) ಹೊಸರೂಪಗಳ ಕಡೆಗೆ ತಿರುಗಿದಾಗ ತಮ್ಮ ಕವನದ ಆಶಯ-ಶಿಲ್ಪ-ಭಾಷೆ ಇವು ಗಳ ಸಂಬಂಧವನ್ನು ತೀವ್ರವಾಗಿ ಗಮನಿಸದೆ, ಹಳೆಯ ರೂಪಗಳ ಬದಲು ಹೊಸ ರೂಪ ಗಳನ್ನಿಡುತ್ತಾ ಬರುತ್ತಾರೆ. ಇದರಿಂದ ಭಾಷೆಯಲ್ಲಿ ಹೊಸತನ ಬಂದಂತಾಯಿತೇ ಹೊರತು ಭಾಷೆಯ ಸಾಮರ್ಥ್ಯದಲ್ಲಿ ಬದಲಾವಣೆಯಾಗಲಿಲ್ಲ. ಕೆಲವು ಕವನಗಳಲ್ಲಿ ಭಾಷೆಯ ಬಳಕೆ ಅತ್ಯುತ್ತಮವಾಗಿ ತೋರಿದರೂ (ಉದಾ : 'ಆಷಾಢ' 'ಹಳೇಪೇಪರ್ ಖಾಲಿ ಶೀಶೆ' 'ಮುಂಬೈ ಜಾತಕ') ಇದು ಪ್ರಜ್ಞಾಪೂರ್ವಕವಾಗಿ ಆದ ವ್ಯತ್ಯಾಸವೇ ಎಂಬ ಅನುಮಾನ ಮೂಡುತ್ತದೆ, ಕಾರಣ ಅನಂತರದ ('ಗೋಡೆ'ಯ) ಭಾಷೆ ಮತ್ತೆ ಶಿಥಿಲವಾಗಿದೆ. ಮೊದಲಿದ್ದ ವಾಚಾಳಿತನ ಮುಂದಿನ 'ಅನಾವರಣ'ದ ಅನೇಕ ಕವನ ಗಳಲ್ಲಿದ್ದರೂ ಅದು ತಟ್ಟನೇ ಅರಿವಾಗುವುದಿಲ್ಲ. ಕಾರಣ ಆಯಾ ಕವನಗಳ ವಿಡಂಬನ ಗುಣ.

[ಈ ಲೇಖನದಲ್ಲಿ ಆಶಯವನ್ನು ಅಷ್ಟಾಗಿ ಗಮನಿಸದೆ ಭಾಷೆಯನ್ನು ಮಾತ್ರ ಮುಖ್ಯವಾಗಿ ಆಧರಿಸಿ ಹೇಳಿಕೆಗಳನ್ನು ನೀಡಲಾಗಿದೆ—'ತೆರೆದ ದಾರಿ' ಕವನ ಸಂಕಲನ ದಲ್ಲಿಯ ಕವನಗಳನ್ನು ಇಲ್ಲಿ ಪರಿಶೀಲಿಸಲಾಗಿಲ್ಲ—ಇಲ್ಲಿ ಹೇಳಿದ ಮಾತುಗಳು ನನ್ನ ಸದ್ಯದ ಅನುಮಾನಗಳಾಗಿದ್ದು ಅದನ್ನು ಮತ್ತೊಮ್ಮೆ ಪರಿಶೀಲಿಸಬೇಕಾದ ಅಗತ್ಯವಿದೆ ಯೆನಿಸುತ್ತದೆ.]

ಡಿ. ಆರ್. ನಾಗರಾಜ್

# ಧೋರಣೆ ಮತ್ತು ಬಂಧ

ಕವಿಯೊಬ್ಬನ ಧೋರಣೆ ಮತ್ತು ಆತನ ಕಾವ್ಯಬಂಧದ ನಡುವಿನ ಸಂಬಂಧ ಅತ್ಯಂತ ನಿಕಟವಾದದ್ದು : ಒಂದು ಧೋರಣೆಯು ತನ್ನ ಜಾಯಮಾನ-ಸ್ವರೂಪ, ಸಾಮರ್ಥ್ಯಗಳಿಗನುಸಾರವಾಗಿ ಆಕೃತಿಯನ್ನು ಸೃಷ್ಟಿಸಿಕೊಳ್ಳುತ್ತದೆ. ಕವಿಯ ಅಭಿವ್ಯಕ್ತಿ ಕ್ರಮದಲ್ಲಿ ಉಂಟಾಗುವ ಬದಲಾವಣೆಗಳಿಗೆ ಆತನ ಧೋರಣೆಯಲ್ಲಾಗುವ ಮಾರ್ಪಾಡುಗಳೇ ಮುಖ್ಯಕಾರಣ. ಇವೆರಡರ ಸಂಬಂಧವನ್ನು ವಿಶ್ಲೇಷಿಸುವುದರ ಮೂಲಕ ತಲುಪುವ ತೀರ್ಮಾನಗಳು ವಿಮರ್ಶೆಯ ಸಮಗ್ರತೆಯ ದೃಷ್ಟಿಯಿಂದ ಅತ್ಯಂತ ಬೆಲೆ ಬಾಳುವಂಥವು. ಹಾಗೆಯೇ ಅವುಗಳು ಕಾವ್ಯದ ಮೂಲ ಭಿತ್ತಿಯಾದ ಸಮಾಜ ಮತ್ತು ಕವಿಯ ನಡುವಿನ ಸಂಬಂಧದ ಅನೇಕ ಮುಖಗಳತ್ತ ಬೆಳಕುಬೀರುತ್ತವೆ. ಆದರೆ ಈವತ್ತಿನ ನಮ್ಮ ಬಹುಪಾಲು ವಿಮರ್ಶೆ ಕೃತಿಯಷ್ಟನ್ನೇ ವಿವರಿಸುವುದರಿಂದ ಕವಿ-ಸಮಾಜ-ಕಾವ್ಯ ಈ ಮೂರರ ನಡುವಿನ ಸಂಬಂಧಗಳ ಜಟಿಲತೆಯನ್ನು ವಿವರಿಸುವ ಜವಾಬ್ದಾರಿಯನ್ನೆ ಅದು ಹೊರುವುದಿಲ್ಲ. ಈ ಥರದ ವಿಮರ್ಶೆಯ ಸೃಷ್ಟಿಯ ಹಿನ್ನೆಲೆಯಲ್ಲಿ ಗಂಭೀರವಾದ ಸಾಮಾಜಿಕ, ಸಾಂಸ್ಕೃತಿಕ ಕಾರಣಗಳೂ ಇವೆ.

ಈ ದೃಷ್ಟಿಯಿಂದ ನವ್ಯಕಾವ್ಯ ಪ್ರಕಟಪಡಿಸುವ ಧೋರಣೆಗಳ ಅಧ್ಯಯನ ಅತ್ಯಂತ ಕುತೂಹಲಕಾರಿಯಾದದ್ದು ; ನವೋದಯದಿಂದ ನವ್ಯಕ್ಕೆ ಧೋರಣೆಗಳ ಮಟ್ಟದಲ್ಲಿ ಉಂಟಾದ ಬದಲಾವಣೆ ಕಾವ್ಯದ ಒಳವಿನ್ಯಾಸ ಹೊರರೂಪ ಇವುಗಳಲ್ಲಿ ಕೂಡಾ ಮಹತ್ವದ ಬದಲಾವಣೆ ಉಂಟುಮಾಡಿತು. ಇದರ ಸೂಕ್ಷ್ಮ ಅಧ್ಯಯನದಿಂದ ಚರಿತ್ರೆಯ ಚಲನೆಯಿಂದ ಸೃಷ್ಟಿಯಾಗುವ ಕೆಲವು ಸಾಂಸ್ಕೃತಿಕ ವೈಶಿಷ್ಟ್ಯಗಳ ವಿಶ್ಲೇಷಣೆ ಕೂಡಾ ಸಾಧ್ಯವಾಗುತ್ತದೆ.

ಅಡಿಗರ ಕಾವ್ಯಸಾಧನೆಗಳನ್ನೇ ಮೂಲಮಾನವಾಗಿಟ್ಟುಕೊಂಡು ನಮ್ಮ ನವ್ಯ ವಿಮರ್ಶೆ ತನಗೆ ತಾನೆ ಅನೇಕ ಮಿತಿಗಳನ್ನು ಹಾಕಿಕೊಂಡಿತು ; ಮಹತ್ವದ ಕವಿ ಬಂದಾಗ ಅವನನ್ನು ಆಧರಿಸಿಯೇ ವಿಮರ್ಶೆಯ ಮಾನದಂಡಗಳು ರೂಪುಗೊಳ್ಳುತ್ತವೆ ಎಂದು ಯಾರಾದರೂ ವಾದ ಹೂಡಬಹುದಾದರೂ ಆಗ ಉಳಿದ ಅನೇಕ ಕವಿಗಳ ಅನೇಕ ಸೂಕ್ಷ್ಮ ವೈಶಿಷ್ಟ್ಯಗಳು ಕಾಣದೇ ಹೋಗುತ್ತವೆ. ಜಿ.ಎಸ್.ಎಸ್.ರವರ ಕಾವ್ಯ ಕೂಡಾ ಇಂತಹದ್ದು. 'ಅಂದಿನಿಂದಿಂದಿಗೂ ಸಾಕ್ಷಿಯೊಲು' ನಿಂದ ಈ ಕಾವ್ಯ ಹೊಸಗನ್ನಡ ಸಾಹಿತ್ಯದ ಕುತೂಹಲಗಳಲ್ಲಿ ಒಂದು.

ಜಿ.ಎಸ್.ಎಸ್.ರವರ ಕಾವ್ಯಮಾರ್ಗವನ್ನು, ಅದರ ಹಿಂದಿರುವ ಧೋರಣೆಗಳ ಸಂಬಂಧದಲ್ಲಿ ಚರ್ಚಿಸುವುದು ಈ ಲೇಖನದ ಉದ್ದೇಶ.

ನವೋದಯ ಕಾವ್ಯ ತನ್ನ ಉತ್ಕರ್ಷ ಸ್ಥಿತಿಯಲ್ಲಿರುವಾಗಲೇ ಜಿ.ಎಸ್.ಎಸ್. ಅವರು ತಮ್ಮ ಕಾವ್ಯಜೀವನ ಪ್ರಾರಂಭಿಸಿದರು ಎನ್ನುವ ಅಂಶವೇ ಅವರ ಮೊದಲಿನ ಕಾವ್ಯದ ಬಹುಪಾಲು ಲಕ್ಷಣಗಳನ್ನು ವಿವರಿಸುತ್ತವೆ. ಕನ್ನಡ ಕಾವ್ಯದ ಪ್ರಮುಖ ಶಕ್ತಿ ಎನಿಸಿದ ಕುವೆಂಪುರವರ ಪ್ರಭಾವವು ಭಾಷೆ ಮತ್ತು ಧೋರಣೆಯ ಮಟ್ಟದಲ್ಲಿ ಜಿ.ಎಸ್.ಎಸ್.ರವರ ಮೊದಲಿನ ಕಾವ್ಯದಲ್ಲಿ ದಟ್ಟವಾಗಿರುವುದನ್ನು ಕಾಣುತ್ತೇವೆ.

ಜಿ.ಎಸ್.ಎಸ್‌ರವರ ಮೊದಲಿನ ಕಾವ್ಯ ('ದೀಪದಹೆಜ್ಜೆ' ಸಂಕಲನದತನಕ) ವಿಸ್ಮಯ ಮೂಲವಾದದ್ದು; "ಸುಂದರವಾದ ಬಹಿರಂಗ ಲೋಕದಲ್ಲಿ ಬೆರಗುಗಣ್ಣುಗಳಲ್ಲಿ ಉತ್ಸಾಹದಿಂದ ವಿಹಾರ ಗೈದ" ಚೇತನ ಕಾವ್ಯ ಅದು, ಸೌಂದರ್ಯೋಪಾಸಕನೊಬ್ಬನ ಹಾಡುಗಳು ಅವು. ನೋಡುವ ಕಣ್ಣು ಇಲ್ಲಿ ಮುಖ್ಯವಾದದ್ದು. ಸುತ್ತಲಿನ ಸುಂದರವಾದ ಪ್ರಕೃತಿಯಲ್ಲಿ ತಾದಾತ್ಮ್ಯದ ವಿವಿಧ ಹಂತಗಳನ್ನು ಪ್ರಕಟಿಸಿ, ಸಾಮರಸ್ಯತೆ ಸಾಧಿಸುವ ಗುಣವೇ ಇಲ್ಲಿ ಪ್ರಧಾನ. ಈ ಕಾವ್ಯದ ಹಿನ್ನೆಲೆಯಲ್ಲಿರುವ ವ್ಯಕ್ತಿತ್ವದ ಪರಿಕಲ್ಪನೆ ಕೂಡಾ ಕಾವ್ಯಶರೀರವನ್ನು ರೂಪಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಈ ವ್ಯಕ್ತಿತ್ವದ ರೂಪುಗೊಳ್ಳುವಿಕೆಯ ಹಿಂದೆ ಇರುವ ಶಕ್ತಿಯು ನಮ್ಮ ಭಾರತೀಯ 'ಪುನರುಜ್ಜೀವನ' (Renaissance) ಕೊಟ್ಟ ಆದರ್ಶಗಳು; ಈ ಆದರ್ಶಗಳೇ ನಮ್ಮ ಸಮಾಜದಲ್ಲಿನ ಮಧ್ಯಮವರ್ಗದ ಸಾಂಸ್ಕೃತಿಕ ಮೌಲ್ಯಶ್ರೇಣಿಯನ್ನು ರೂಪಿಸಿದ್ದು. ಜಿ.ಎಸ್.ಎಸ್‌ರವರ ಮೊದಲಿನ ಕಾವ್ಯ ಕೂಡಾ ಆ ಆದರ್ಶಗಳು ರೂಪಿಸುವ ಬದುಕಿಗೆ ತನ್ನನ್ನು ತಾನು ಸಿದ್ಧಗೊಳಿಸುವ ಕಾವ್ಯ. ಆಧ್ಯಾತ್ಮಿಕ ಎನ್ನಿಸುವ ಒಂದು ಅಮೂರ್ತ ಅನುಭವವನ್ನು ಭೌತಿಕ ಸತ್ಯವಾದ ನಿಸರ್ಗದಲ್ಲಿ ಶೋಧಿಸುವ ನವೋದಯ ಕಾವ್ಯದ ಚೌಕಟ್ಟಿನಲ್ಲಿ 'ಸಾಮಗಾನ', 'ಚೆಲುವು-ಒಲವು', 'ದೇವಶಿಲ್ಪ' ಮುಂತಾದ ಕವನ ಸಂಕಲಗನಳು ಬರುತ್ತವೆ.

ಶಿವ ಮತ್ತು ಸುಂದರ ಪ್ರಧಾನವಾದ ಕಾವ್ಯ ಅದು; ಕುವೆಂಪು ಮತ್ತು ಪುತಿನ ರಿಬ್ಬರ ಅಂಶಗಳನ್ನು ಬೆರಸಿಕೊಂಡ ವ್ಯಕ್ತಿಯೊಬ್ಬ ಇದರ ಹಿಂದೆ ಇಲ್ಲಿ ಕಾಣುತ್ತಾನೆ. ಇಲ್ಲಿಯ ಪ್ರತಿಕ್ರಿಯೆ, ಅನುಭವವನ್ನು ಅರ್ಥೈಸುವ ರೀತಿ ಕೂಡಾ ಸರಳವಾದದ್ದು; ನಂಬಿದ ವಿಚಾರದ ಆದರ್ಶಗಳ ಮಹತ್ವವನ್ನು ಕೊಂಚವೂ ಅನುಮಾನ ಪಡದೆ ಪ್ರಕಟಿಸುವಂಥದು. ಉದಾಹರಣೆಗೆ ಈ ಕೆಲವು ಸಾಲುಗಳನ್ನು ಗಮನಿಸಿ:

ಇರಲಿ ಬಾ ಆ ಜಗದ ಜಂಜಡ
ಬರಿಯ ಮಣ್ಣಿನ ಗಡಿಬಿಡಿ
ಇಲ್ಲಿ ಸುಂದರ ಶಿವನ ದರ್ಶನ
ಭವ್ಯವಾಗಿದೆ ಈ ಗುಡಿ (ಪ್ರಕೃತಿಪೂಜೆ)

ಚೆಲುವು ಬಾಳನು ಹಸನುಗೊಳಿಸುವ
ಅಚ್ಚರಿಯ ಪರಿ ಎಂಥದು (ಮಲ್ಲಿಗೆ)

ಸತ್ಯಶಿವಸುಂದರದ ಮುಕ್ಕೂಟದಲ್ಲಿ ಸತ್ಯ ಯಾವಾಗಲೂ ಸಾಪೇಕ್ಷವಾದದ್ದು ; ಈ ಅರಿವು ಇಲ್ಲೆಲ್ಲಿಯೂ ವ್ಯಕ್ತವಾಗುವುದಿಲ್ಲ. ಅದಕ್ಕೆ ಬದಲಾಗಿ ವೈದಿಕ ಪರಂಪರೆಯ ಮೌಲ್ಯಗಳ ಪುನರುತ್ಥಾನದ ಸಂದರ್ಭದಲ್ಲಿ ಸತ್ಯ ವ್ಯಕ್ತಿನಿಷ್ಠವಾಗಿ ಬಿಟ್ಟಿತ್ತು. ಈ ಕಾರಣಕ್ಕೆಯೇ ಜಿ.ಎಸ್.ಎಸ್‌ರವರ ಮೊದಲಿನ ಕಾವ್ಯ ಸುತ್ತಲ ಪರಿಸರದ ವೈಷಮ್ಯಗಳಿಗೆ, ವಿರೋಧಾಭಾಸಗಳಿಗೆ ಸ್ಪಂದಿಸಲಿಲ್ಲ. ಭಾರತೀಯ ಕಾವ್ಯ ಮೀಮಾಂಸೆಯ ಪರಿಕಲ್ಪನೆಯ ಚೌಕಟ್ಟಿನಲ್ಲಿಯ 'ಸೂಕ್ಷ್ಮ ಸಂವೇದನಾಶೀಲ' ವ್ಯಕ್ತಿಯೊಬ್ಬನ ಅಭಿವ್ಯಕ್ತಿ ಅದು.

ಅದಕ್ಕೇ ಇಲ್ಲಿಯ ಭಾಷಾ ಶರೀರ ಕೂಡಾ ಭಾಷೆಗೆ ಒದಗಬಹುದಾದ ನಯ ಮತ್ತು ಮಾರ್ದವತೆಯನ್ನು ಮಾತ್ರ ಬಳಸಿಕೊಂಡಿರುವಂಥದು. ಈ ಭಾಷೆಯ ಪ್ರಚೋದಕ ಸಾಮರ್ಥ್ಯ ಕೂಡಾ ಮಿತಿಯಾದ ಯಶಸ್ಸಿನದು. ಭಾಷೆಯ ಧ್ವನಿಶಕ್ತಿಯ, ಇದನ್ನೊಳಗೊಂಡು ಉತ್ತಮ ಕಾವ್ಯ ಮುಟ್ಟಬಲ್ಲ ವಸ್ತುನಿಷ್ಠ ನೆಲೆಗೆ ಇಲ್ಲಿಯ ಕವನಗಳು ಮುಟ್ಟುವುದಿಲ್ಲ. ಮೊದಲೇ ಹೇಳಿದ ಹಾಗೆ ಉತ್ಸಾಹದಿಂದ ಚಿಮ್ಮುವ ಕಾವ್ಯಕ್ಕೆ ಮಾತು ಜಾಸ್ತಿ. ಆದರೆ ನೋಡುವ ಬೆರಗಿನ ಕಣ್ಣಿನ ವರ್ಣನೆಗೂ, ಕವಿಯ ತೀರ್ಮಾನ ರೂಪದ ಮಾತುಗಳಿಗೂ ರಕ್ತಮಾಂಸದ ಸಂಬಂಧ ಇಲ್ಲವಾಗಿದೆ.

ಇಷ್ಟೆಲ್ಲಾ ಕೊರತೆಯ ಅಂಶವಿದ್ದರೂ ಕವಿ ಉಕ್ಕುವ ಚೈತನ್ಯವುಳ್ಳ ವ್ಯಕ್ತಿಯೆಂಬುದನ್ನು ಮೊದಲಿನ ಮೂರು ಸಂಕಲನಗಳು ಹೇಳುತ್ತವೆ. ಪ್ರತಿಕ್ರಿಯೆಯಲ್ಲಿನ ಶುಭ್ರತೆ, ವಿನ್ಯಾಸದಲ್ಲಿನ ಸರಳಲಾಲಿತ್ಯ, ಹಿನ್ನೆಲೆಯಲ್ಲಿರುವ ತೆಳುವಾದ ಆಧ್ಯಾತ್ಮಿಕ ಶಿಸ್ತು—ಇವುಗಳಿಂದಾಗಿ ಆ ಕವನಗಳು ಎಷ್ಟೇ ಪೇಲವ ಎನ್ನಿಸಿದರೂ ಪ್ರಿಯವಾಗುವಂತಹ ಅಂಶಗಳನ್ನು ಒಳಗೊಂಡಿವೆ. ಇಲ್ಲಿಯ ಒಟ್ಟು ಧೋರಣೆಯಲ್ಲಿ ಕಂಡುಬರುವ ಬಿರುಕಿಲ್ಲದ ಶ್ರದ್ಧೆ, ಉತ್ಸಾಹ, ರಸಪರವಾದ ನಿಲುವು ಮುಂತಾದ ಗುಣಗಳು ಮುಂದಿನ ಕಾವ್ಯದಲ್ಲಿ ಅಷ್ಟು ಪ್ರಬಲವಾಗಿ ಕಂಡುಬರುವುದಿಲ್ಲ. ಜೀವನ ಧೋರಣೆ ಹೆಚ್ಚು ಪ್ರಬುದ್ಧವಾದ ಹಾಗೆಲ್ಲಾ ಮೇಲಿನ ಅಂಶಗಳು ಕಾಣೇ ಆಗುತ್ತವೆ. ಇನ್ನು ಕೆಲವು ಅಂಶಗಳು ಬೇರೆ ಬೇರೆ ಸ್ವರೂಪ ಪಡೆಯುತ್ತಾ ಹೋಗುತ್ತವೆ. ಬದುಕಿಗೆ ಒರಗಲ್ಲು ಇಲ್ಲದ ಇಂಥ ಒಂದು ಸ್ಥಿತಿಯಿಂದ ಒರೆಗಲ್ಲೊಂದನ್ನು ನಿರ್ಮಾಣಮಾಡಿಕೊಳ್ಳುವ ಸ್ಥಿತಿಯೊಂದರ ಕಡೆಗೆ ನಡೆಯುವುದನ್ನು ಕಾಣುತ್ತೇವೆ. ಕವಿಯ ಜೀವನಕ್ರಮ ಪರಿಸರದ ಸ್ಥಿತ್ಯಂತರಗಳೊಡನೆ ಅದು ಪ್ರತಿಕ್ರಿಯಿಸುವ ರೀತಿ, ಈ ಎರಡೂ ಅಂಶಗಳಿಂದಾಗಿ ಈ ಬದಲಾವಣೆ ಕುತೂಹಲಕಾರಿಯಾದದ್ದು. ಕವಿಯ ಜೀವನ ಧೋರಣೆ ಹಲವು ಹತ್ತು ದಿಕ್ಕುಗಳಿಗೆ ಚಾಚಿದ ಹಾಗೆಲ್ಲಾ ಕಾವ್ಯಬಂಧ ಕೂಡಾ ಇನ್ನಷ್ಟು ಹೊಸ ದಿಕ್ಕುಗಳಿಗೆ ಮೈಗೊಟ್ಟದ್ದನ್ನು ಕಾಣುತ್ತೇವೆ. ಮೊದಲಿನ ಕವನಗಳಲ್ಲಿ ಕಂಡುಬರುವ ಆತ್ಮೀಯತೆ ಮುಂದೆಯೂ ಕೂಡಾ ಒಂದು ಪ್ರಮುಖ ತಾತ್ವಿಕ ನೆಲೆಯಾಗಿ ಪ್ರಕಟವಾಗುತ್ತದೆ.

* * *

ಜಿ.ಎಸ್.ಎಸ್. ಅವರ ಗಾಢವಾದ ಕಾಳಜಿಗಳು ನಿಜವಾದ ಹುಡುಕಾಟದ ಕಾವ್ಯ ಸೃಷ್ಟಿ ಪ್ರಕಟವಾದದ್ದು 'ದೀಪದ ಹೆಜ್ಜೆ' ಸಂಕಲನದಿಂದ. ಜಿ.ಎಸ್.ಎಸ್.ರ ಕಾವ್ಯ ಜೀವನದ ಎರಡನೆಯ ಘಟ್ಟವನ್ನಾಗಿ 'ದೀಪದ ಹೆಜ್ಜೆ'ಯಿಂದ 'ಗೋಡೆ'ಯತನಕ ಗುರುತಿಸಬಹುದು. ಅನೇಕ ವಿಮರ್ಶಕರು ನವ್ಯ ಎಂದು ಕರೆಯುವ ಜಿ.ಎಸ್.ಎಸ್.ರವರ ಪ್ರಾತಿನಿಧಿಕ ಕವನಗಳು ಇರುವುದು ಇಲ್ಲಿಯೇ. ಮೊದಲಿನ ಸಂಕಲನಗಳ ಬೆರಗುಗಣ್ಣಿನ ಅನುಭವರಹಿತ ಉತ್ಸಾಹ ಈಗ ಇಲ್ಲವಾಗಿದೆ. ಆದರೆ ಜೀವನನಿಷ್ಠತೆಯ ಸಂಮೃದ್ಧಿ ಮಾತ್ರ ಕಡಿಮೆಯಾಗಿಲ್ಲ. ಕವಿಯ ತಾತ್ವಿಕ ದೃಷ್ಟಿಕೋನದಲ್ಲಿ ಮಹತ್ವದ ತಿರುವೊಂದನ್ನು ಇಲ್ಲಿ ಕಾಣಬಹುದು. ಏಕೆಂದರೆ ಕಾವ್ಯಸೃಷ್ಟಿಯ ಮೂಲ ಭಿತ್ತಿಯಾದ ಬದುಕಿನ ವಿರೋಧಾಭಾಸಗಳ ವೈಷಮ್ಯಗಳ ಗ್ರಹಿಕೆ ಆರಂಭವಾಗಿದೆ. ಬದುಕಿನ ಅರ್ಥವಂತಿಕೆ ಯನ್ನು ಕಂಡುಕೊಳ್ಳುವುದು ವ್ಯಕ್ತಿಯೊಬ್ಬನ ನೈತಿಕ ಜವಾಬ್ದಾರಿಯೆಂಬ ಅರಿವು ಹುಟ್ಟಿದೆ. ಹಿಂದಿನ ಕವನಗಳಲ್ಲಿ ಇಲ್ಲದ ಒಂದು ಸ್ಥಾಯಿಯನ್ನು ಈ ಸಂಕಲನದಲ್ಲಿ ಕಾಣಬಹುದು. ಕವಿಯ ಮಾತಿನಲ್ಲಿಯೇ ಹೇಳುವುದಾದರೆ 'ಒಂದು ಮಾನವ ಮತ್ತು ಅಂತರಂಗ. ಮತ್ತೊಂದು ಮಾನವ ಮತ್ತು ಕಾಲ.' ಈ ಎರಡು ಸಮಸ್ಯೆಗಳ ಗಂಭೀರ ಚಿಂತನೆಯೇ ಇಲ್ಲಿಯ ಸ್ಥಾಯಿ. ಇದು ಸಂವೇದನಾ ಚೌಕಟ್ಟಿನ ಮಿತಿಗಳನ್ನು ಸೂಚಿ ಸುವುದರ ಜೊತೆಗೆ ಹೊಸ ಅಭಿವ್ಯಕ್ತಿ ಕ್ರಮದ ಅನಿವಾರ್ಯತೆಯನ್ನೂ ಹೇಳುತ್ತದೆ.

ಬದುಕಿನ ಅರ್ಥಶೋಧನೆ ಇಲ್ಲಿಂದಲೇ ಪ್ರಾರಂಭವಾದರೂ ಅದರ ಜೊತೆಗೆ ಬದುಕು ಅರ್ಥರಹಿತ ಪಾತಾಳಕ್ಕೆ ಬೀಳಬಹುದೆಂಬ ಅರಿವೂ ಕೂಡ ಇದೆ. ಈ ದ್ವಂದ್ವದ ಪ್ರಖರತೆಯೆ ಇಲ್ಲಿಯ ಯಶಸ್ವೀ ಕವನಗಳ (ಸಂಜೆದಾರಿ, ಮಬ್ಬಿನಿಂದ ಮಬ್ಬಿಗೆ) ಹಿಂದಿರುವ ಶಕ್ತಿ. ಬದುಕಿನ ವೈಷಮ್ಯಗಳನ್ನು ಗ್ರಹಿಸಲಾಗಿದೆಯಾದರೂ ಮನುಷ್ಯನ ಅಂತರಂಗದ ಕಡೆಗೆ ಹೆಚ್ಚು ಮಹತ್ವ ಕೊಡಲಾಗಿದೆ. ಎಲ್ಲಾ ಅಸ್ತವ್ಯಸ್ತತೆಯ ಮೂಲ ಅಂತರಂಗವೇ ಎಂಬ ನಿಲುವು ಇಲ್ಲಿಯದು. ಬದುಕಿನ ವೈಷಮ್ಯ, ವ್ಯಕ್ತಿಯ ಅಂತರಂಗದ ಮೇಲೆ ಇದರ ಪ್ರಭಾವ—ಈ ಎರಡೂ ಅಂಶಗಳನ್ನು ಅರ್ಥೈಸಲಾಗಿರುವುದು ವ್ಯಕ್ತಿನಿಷ್ಠ ದೃಷ್ಟಿಕೋನದಿಂದಲೇ. ಇಲ್ಲಿ ಮನುಷ್ಯನ ಜೀವನವನ್ನು ನಾಶ ಮಾಡುವ ಕಾಲ ಎನ್ನುವುದೇ ಜೀವನದ ಪ್ರಮುಖ ಒರೆಗಲ್ಲು. ಜೀವನದ ಅರ್ಥವಂತಿಕೆಯನ್ನು ಕಾಲ ಮತ್ತು ವ್ಯಕ್ತಿಯ ಬದುಕಿಗೆ ಹೊಂದಿಸಿಕೊಂಡು ಶೋಧಿಸುವ ಪ್ರಯತ್ನ ಇಲ್ಲಿ ಕಾಣುತ್ತದೆ.

ಜೀವನದಲ್ಲಿನ ವೈಷಮ್ಯಗಳನ್ನು ದಾಟಿ ಬೆಳಕನ್ನು ಸಾಧಿಸಬಹುದೆಂಬ ನಿಲುವು ಇಲ್ಲಿಯ ಪ್ರಮುಖ ಆಶಯ. 'ದೀಪದಹೆಜ್ಜೆ', 'ತೆರೆದದಾರಿ' ಸಂಕಲನಗಳಲ್ಲಿ ಬದುಕಿನ ಅಗತ್ಯ ನಂಬಿಕೆಯ ಆದರ್ಶದ ಸ್ಥಿತಿಯ ಸಂಕೇತವಾಗಿ ಬೆಳಕು ಬಂದರೆ, ಕತ್ತಲು ವ್ಯಕ್ತಿಯ ಬದುಕಿನ ನಿರರ್ಥಕತೆ, ನಿರಾಶೆಯನ್ನು ಸಂಕೇತಿಸುತ್ತದೆ.

'ಬಾಳಬೀದಿಯ ಬೆಳ್ಗೊಳದ ಬೆಟ್ಟದಲಿ ಗೊಮ್ಮಟ'ನ ಕಂಡ ಆದರ್ಶದ ಮೇಲಿನ ನಂಬಿಕೆ, ಅದನ್ನು ಸಾಧಿಸಲಾಗದ ಅಸಹಾಯಕತೆ, ಅಸಮಗ್ರ ಹೋರಾಟ ಇಲ್ಲಿಯ ಕವನಗಳಲ್ಲಿ ಹರಿಯುವ ಮುಖ್ಯಶಕ್ತಿ.

ಬದುಕಿನಲ್ಲಿನ 'ದೀಪದ ಹೆಜ್ಜೆ'ಯ ಮೇಲೆ ಅಪಾರ ಭರವಸೆ ಇದೆ. ಆದರ ಜೊತೆಗೆ ಆ ಹೆಜ್ಜೆಗಳನ್ನು ಮುಚ್ಚಿ ಹಾಕುವ ಕರಾಳ ಶಕ್ತಿಯ ಅಸ್ತಿತ್ವದ ಅರಿವೂ ಇದೆ. ವಾಸ್ತವವಾಗಿ ಜಿ.ಎಸ್.ಎಸ್.ರವರ ಕಾವ್ಯದ ಪ್ರಮುಖ ನೆಲೆ ಇರುವುದು ಆ 'ದೀಪ'ವನ್ನು ನಂಬಿ ಕೂರುವ ಸ್ಥಿತಿಯಲ್ಲಲ್ಲ. ಹಾಗೇ ನಂಬಿದ್ದರೆ ಅವರು ಒಬ್ಬ ಬೋಳೆ ರೊಮ್ಯಾಂಟಿಕ್ ಕವಿಯಾಗುತ್ತಿದ್ದರು. ಆದರ್ಶವನ್ನು ನಂಬಿದ ಮಾತ್ರಕ್ಕೆ ಅದನ್ನು ಸಾಧಿಸಿದ್ದೇನೆ ಎನ್ನುವ ಪೊಳ್ಳು ನಂಬಿಕೆಯೂ ಇಲ್ಲಿ ಇಲ್ಲ.

ಬಂದ ಕರು ಬೆರಗುಗಣ್ಣನು ತೆರೆಯೆ
ಮೇಲಿತ್ತು ಸೊಗದ ನೇಣು
ಎಲ್ಲಿ ಹೋಯಿತೊ ಏನೊ ಮೊಲೆಯುಣಿಸುವೆನೆಂದು
ಕನಸಿನಲಿ ನಚ್ಚಿತ್ತ ಕಾಮಧೇನು
ಎತ್ತ ನೋಡಿದರೂನು ಉರಿಯ ಕರೆಯುವ ಬಾನು
ದಣಿದ ನಾಲಗೆಗಿಲ್ಲ ತೊಟ್ಟು ಜೇನು

(ಹುಟ್ಟಿದ ಹಬ್ಬ)

ಬದುಕಿನ ಅರ್ಥ ಸಮೃದ್ಧತೆಯನ್ನು ನುಂಗಿಹಾಕುವ ಪ್ರಭಾವದ ಸ್ಪಷ್ಟ ಚಿತ್ರ ಇಲ್ಲಿದೆ. ಅದರ ಕಾರಣಗಳನ್ನು ಕವಿ ಹೇಳಹೋಗುವುದಿಲ್ಲ; ಬದಲಾಗಿ ಅದರ ಪರಿಣಾಮಗಳನ್ನು ಚಿತ್ರಮಯ ಭಾಷೆಯಲ್ಲಿ ಮೂಡಿಸಿದ್ದಾರೆ. ಪದ್ಯದ ಕೊನೆ ಮಾತ್ರ ಅತ್ಯಂತ ಕುತೂಹಲಕಾರಿ :

ಚಂದ್ರಹಾಸದ ಮುಂದೆ
ಹಣತೆಯೊಲು ನಿಂದೆ (ಹುಟ್ಟಿದ ಹಬ್ಬ)

ಈ ಸಾಲುಗಳು ಜೀವನ ಸಾರ್ಥಕತೆಯ ಖಚಿತತೆಯನ್ನೇನೂ ಸೂಚಿಸುವುದಿಲ್ಲ. ಬದಲಾಗಿ ಜೀವನ ಸಂಮೃದ್ಧತೆಯ ಮುಂದೆ ತನ್ನ ಮಿತಿಯನ್ನು ಗುರುತಿಸಿಕೊಳ್ಳುವ ವಾಸ್ತವ ನಿಲುವು ಇದು. ಬದುಕಿನಲ್ಲಿನ ದಟ್ಟವಿರೋಧಾಭಾಸದ ಅರಿವು ಕವಿಯನ್ನು ದೊಡ್ಡ ಬೆಲೂನು ಆದರ್ಶಗಳ ಬೆನ್ನುಹತ್ತಿ ಹೋಗದಂತೆ ಮಾಡಿದೆ. ಈ ಸಾಲುಗಳನ್ನು ನೋಡಿ :

ಬೆಳಕ ಮುಡಿಯಲಿ ಹೊತ್ತು ನಿಂತ ಲಾಂದ್ರದ ಹಾಗೆ
ನಿಂತಿರುವನು
ಸುತ್ತ ಅನ್ಯಾಯಗಳ ಸಂತೆ ಸಾಗಿರಲಾಗಿ
ವಿಲಯ ಮೌನದೊಳಿವನು ದಿಟ್ಟಿಸುವನು ! (ಇವನು)

'ಸಂಜೆ ದಾರಿಯಲ್ಲಿ'ಯ ಉದ್ವೇಗವಂತು ಎದೆ ಕಲಕುವಂಥದು. ಕವಿ ನಂಬಿ ಬರೆದುದಕ್ಕಿಂತ ಬೇರೆಯಾದ ಬದುಕಿನ ಶಕ್ತಿಗಳ ನಿರ್ದಯ ನಡಿಗೆಯ ಚಿತ್ರಣ ಇಲ್ಲಿ ಕಾಣುತ್ತೇವೆ. ಕಾಲದಂಥ ವಸ್ತುವೇ ಅಮೂರ್ತವಾದ್ದರಿಂದ ಉದ್ವೇಗ, ಭಯ ಮೂಲ

ವಾದ ಅನುಭೂತಿ ಅಲ್ಲಿ ಮುಖ್ಯ. ನಿರರ್ಥಕತೆಯ ಭಯವನ್ನು ನಂಬಿಕೆಯಿಂದ ಗೆಲ್ಲಲಾಗದ, ಕಾಲದ ಸವಾಲನ್ನು ಆದರ್ಶದ ನೆರವಿನಿಂದ ಗೆದ್ದು ಬದುಕಿನ ಅರ್ಥಪೂರ್ಣತೆಯನ್ನು ಸಾಧಿಸಲಾಗದ ತಳಮಳ ಅದು. ಇಲ್ಲಿನ ಪ್ರತಿಮೆಯ ರೂಪಕಗಳು ವಸ್ತುವಿಗೆ ಹೊಂದಿಕೊಂಡ ಹಾಗೆ ಪ್ರಕಟಿಸುವ ಅನುರಣನ ಸಾಮರ್ಥ್ಯ ಕವನದ ಯಶಸ್ಸಿಗೆ ಮುಖ್ಯ ಕಾರಣ. 'ಮಬ್ಬಿನಿಂದ ಮಬ್ಬಿಗೆ' ಕವನವೂ ಅಷ್ಟೇ. ಈ ಕವನದ ಕೊನೆಯಲ್ಲಿನ ಆಶ್ವಾಸನೆ ಬದುಕಿನ ಎಲ್ಲಾ ಕೆಚ್ಚನ್ನು ಒಂದುಗೂಡಿಸಿ ತಂದದ್ದು.

ಯಾರೊ ಬಡಿಯುತ್ತಿದ್ದಾರೆ ಬಾಗಿಲ ಹೊರಗೆ
ಒಂದೇ ಸಮನೆ—
ಏಳು, ಬಾಗಿಲನು ತೆಗೆ, ಹೆದರದರು ಕೊನೆಗೆ.

(ಮಬ್ಬಿನಿಂದ ಮಬ್ಬಿಗೆ)

ಈ ಕವನ ಶರೀರದಲ್ಲಿನ ವಿಡಂಬನೆ ಮೇಲಿನ ಆಶ್ವಾಸನೆಗೆ ಸಂಬಂಧಿಸಿದ ಹಾಗೆ ಸಾಧಿಸುವ ಇತ್ಯಾತ್ಮಕ ಸಾಮರ್ಥ್ಯವನ್ನು ಈ ಸಾಲುಗಳಲ್ಲಿ ಗಮನಿಸಿ :

ಟೆನ್ನಿಸ್ಸಿನಾಟದಲ್ಲಿ ಏನೊ ಬಳಲಿಕೆ, ಸುಸ್ತು ;
ಮಹಡಿ ಮೆಟ್ಟಿಲನು ಹತ್ತುವಾಗಲು ಕೂಡ ಎಂದಿಲ್ಲದಾಯಾಸ ;
ಜಂತೆಯಲಿ ಗೂಡು ಕಟ್ಟಿದ ಜೇನು ಹಾರಿಹೋಗಿವೆ, ಈಗ
ತೂಗುತ್ತಲಿವೆ ಖಾಲಿ ಗೂಡು. (ಮಬ್ಬಿನಿಂದ ಮಬ್ಬಿಗೆ)

ಈ ಸಾಲುಗಳನ್ನು ಲಘುವಾದ ಅರ್ಥದಲ್ಲಿ ವಿಡಂಬನೆ ಎಂದು ಹೇಳಲಾಗುವುದಿಲ್ಲ. ಬದುಕಿನ ನಿರರ್ಥಕತೆಯನ್ನು ಸೂಚಿಸುತ್ತಲೆ ಅರ್ಥವಂತಿಕೆಯ ಅನಿವಾರ್ಯತೆಯನ್ನು ಒತ್ತಿ ಹೇಳುವ ಉದಾತ್ತ ವಿಡಂಬನೆ ಇದು.

ಈ ಘಟ್ಟದಲ್ಲಿ ಜೀವನ ಸಾರ್ಥ್ಯಕ್ಯದ ಮೇಲಿನ ಅಪಾರ ಹಂಬಲ ಕಾಣುತ್ತೇವೆ. ಜೊತೆಗೆಯೇ ಇದು ಪರಿಸರದ ವಾಸ್ತವಗಳಿಗೆ ಬದ್ಧವಾದದ್ದಲ್ಲ ಎಂಬ ಅನುಮಾನ ಕೂಡ. ಈ ಅಂಶಗಳೇ ಜಿ.ಎಸ್.ಎಸ್. ಕಾವ್ಯದ ಹಿಂದಿರುವ ಪ್ರಮುಖ ದ್ವಂದ್ವ ಎನ್ನಬಹುದು.

ವ್ಯಕ್ತಿಯ ನಂಬಿಕೆಯೇ ಕೊಚ್ಚಿಹೋಗುತ್ತಿರುವ ಸ್ಥಿತಿಯಲ್ಲೂ ಕೂಡ ಕವಿ ಚೀರಾಡುವುದಿಲ್ಲ, ಕೂಗಾಡುವುದಿಲ್ಲ. ಬದಲಾಗಿ ಅಪಾರ ವಿಷಾದ ಬೆರೆತ ಸಂಯಮದಲ್ಲಿಯೇ ಆ ಸ್ಥಿತಿಯನ್ನು ವರ್ಣಿಸುತ್ತಾರೆ.

ಬಿರುಗಾಳಿ–ಮಿಂಚು–ಮೋಡಗಳನ್ನೆ ತಂದು ಜಡಿಮಳೆ ಸುರಿಸಿ
ನಾನಿಂತ ನೆಲೆಯೆಲ್ಲವನು ಕರಗಿಸಿದೆ
ದೇವರ ಕೋಣೆಗೂ ನೀರು ನುಗ್ಗಿಸಿ ನಾನಿದುವರೆಗು ಪೂಜಿಸಿದ
ಪಟವನ್ನೆ ಕೊಚ್ಚಿದೆ.
ಈ ಮುಂಗಾರು ಸಂಜೆಯು ಕೆಳಗೆ ಗಾಯಗೊಂಡುರುಳಿ-
ದಿರುಳಿನ ಮೇಲೆ ಸದ್ದಿರದೆ ಬೆಳುದಿಂಗಳನ್ನೆ ಹೊಚ್ಚಿದೆ. (ಸಂಕ್ರಮಣ)

ನಂಬಿಕೆಯು ಕೊಚ್ಚಿಹೋಗುವ ಸ್ಥಿತಿಯು ವ್ಯಕ್ತಿಯ ಬದುಕಿನಲ್ಲಿ ಅತ್ಯಂತ ಬಿಕ್ಕಟ್ಟಿನ ಕಾಲ. ಆದರೆ ಹಾಗೆಂದು ಸುತ್ತಲ ಬದುಕಿನಲ್ಲಿ ಹಾರಾಡುತ್ತಿರುವ ಬಣ್ಣದ ಬಲೂನು ಆದರ್ಶಗಳ ಮೇಲೆ ನಂಬಿಕೆಯಿಲ್ಲ. ಅಂಥ ಪೊಳ್ಳುಜೊಳ್ಳುಗಳನ್ನು ನಂಬಿ ಬದುಕುವುದಕ್ಕಿಂತ ಕತ್ತಲೆಯ ದಾರಿಯೇ ಲೇಸು ಎನ್ನುವ ಕಠಿಯಾದ ತೀರ್ಮಾನ ಈ ಸಾಲುಗಳಲ್ಲಿದೆ:

ಈಗಿವರು ಕೇಳಿದರೆ
ಕೊಡುವ ಕುರುಡು ದೀಪಕ್ಕಿಂತ ಕತ್ತಲೆಯೆ ವಾಸಿ (ದೀಪವಿಲ್ಲದ ದಾರಿಯಲ್ಲಿ)

ಕತ್ತಲೆಯ ದಾರಿ ಮುಗಿದ ಒಂದಲ್ಲ ಒಂದು ದಿನ 'ಬಾಳಬೀದಿಯ ಬದಿಗೆ ಬೆಳ್ಗೊಳದ ಬೆಟ್ಟದಲಿ ಗೊಮ್ಮಟ'ನನ್ನ ಸೇರಲೇಬೇಕಲ್ಲ. ಅದಕ್ಕಾಗಿ ನಿರೀಕ್ಷೆ, ಆತಂಕ ತಳಮಳ. ಇವೆಲ್ಲವೂ ಸಂವೇದನೆಯ ಅವಿಭಾಜ್ಯ ಅಂಗಗಳಾಗಿ ಪ್ರಕಟವಾಗಿವೆ.

ಯಾವ ಬೆಳಕಿನ ಪಾತಾಳ ಗರುಡವು ಬಂದು
ಮಿಂಚುಕೊಂಡಿಯೊಳಿದನು ಮೇಲಕೆತ್ತಿ,
ಗಡಿಯಾರದೊಳಗಡೆಗೆ ಸುತ್ತಿದಲ್ಲೇ ಸುತ್ತಿ
ನವೆವ ಮುಳ್ಳಿಗಳ ತೆರದ ಬದುಕನೆತ್ತಿ,
ಎಂದು ಒಯ್ಯುವುದೊ ಕಾಣೆ ಬಿತ್ತರದ ಬಾನ್ಗೆ
ಕಾಯಬೇಕೇ ಇನ್ನು ಎಲ್ಲಿವರೆಗೆ? (ಪತಿತ)

ಸುತ್ತಲೂ ಮೆತ್ತಿರುವ ಕತ್ತಲೆಯ ಹುತ್ತ
ತಳಾತಳದಲ್ಲಿ ನಾನಿರುವೆ ಹಗಲೂ
ಇರುಳು ಕಾಯುತ್ತ, ನಿಡುಸುಯ್ಯುತ್ತ. (ವಾಲ್ಮೀಕಿ)

ಇಲ್ಲಿಯ ತನಕ ನೋಡಿದ ಕವನಗಳೆಲ್ಲಾ ಬದುಕಿನ ಸಾರ್ಥಕತೆಯ ವಿವಿಧ ಹಂತದ ಶೋಧನೆಯನ್ನು ಕುರಿತದ್ದು. ವ್ಯಕ್ತಿ ಸಾತ್ವಿಕತೆಯಿಂದ ಹುಟ್ಟಿಬರುವ ನೈತಿಕ ಕೆಚ್ಚು ಇವುಗಳ ಹಿಂದೆ ಇರುವ ಶಕ್ತಿ.

ಕವಿ ತನ್ನ ಸುತ್ತಲ ಬದುಕಿನ ವಿಷಮತೆಗೂ ಪ್ರತಿಸ್ಪಂದಿಸಿರುವ ಕೆಲವು ಕವನಗಳನ್ನು ನೋಡಬಹುದು. ರಾಜಕಾರಣದ ಹೆಸರಿನಲ್ಲಿ ನಡೆದ ಹಗಲು ದರೋಡೆಯ ವಿರುದ್ಧ ತೀವ್ರ ಪ್ರತಿಭಟನೆ ಇಲ್ಲಿದೆ:

ದೇಶಾದ್ಯಂತ ಅಣೆಕಟ್ಟುಗಳ ಕಟ್ಟಿ ನಾವು
ಬೆಳೆದದ್ದೇನು ಬರೀ ಹಸಿವೆ?
ಹೊಲಗದ್ದೆಗಳ ತುಂಬ ತೆನೆಯೆತ್ತಿ ತೂಗುವುದೇನು?
ಹಸಿರೆ ಅಥವಾ ನಿಟ್ಟುಸಿರೆ? (ಸಾಕು ನಿಲ್ಲಿಸು ನಿನ್ನ ಸಾಮಗಾನ)

ರೋಗಗ್ರಸ್ತ ರಾಜಕಾರಣ, ಅನ್ಯಾಯದ ವಿರುದ್ಧ ಜಡವಾಗಿರುವ ಜನತೆ ಇಂಥ ಹಲವು ಹತ್ತು ಅಸಂಗತೆಗಳ ಬಗೆಗೆ ಕವಿಯ ಆತಂಕ ತೀವ್ರವಾದದ್ದು. ಗಾಂಧಿಯ

ಬಗೆಗಿನ ಪದ್ಯಗಳಲ್ಲಿ ಇದು ನಮ್ಮ ನಾಡಿನ ಬದುಕಿನ ಮೇಲೆ ಬರೆದ ವ್ಯಾಖ್ಯಾನದ ರೀತಿಯಲ್ಲಿ ಪ್ರಕಟವಾಗುತ್ತದೆ. ಈ ಥರದ ಕವನಗಳಲೆಲ್ಲಾ ವಿಡಂಬನೆಯೇ ಪೂರ್ಣ ಪ್ರಮಾಣದ ತಾತ್ವಿಕ ನೆಲೆ. ವ್ಯಕ್ತಿಮೂಲವಾದ ಕವನಗಳಿಗೂ ಇದಕ್ಕೂ ಅಂತರ ಸಾಕಷ್ಟಿದೆ. ವ್ಯಕ್ತಿ-ವ್ಯಕ್ತಿಗಳ ನಡುವಿನ ಸಂಬಂಧ ಗೊಂದಲಕ್ಕೆ ಒಳಗಾಗುತ್ತಿರುವ ಪರಿಸ್ಥಿತಿಯ ಬಗೆಗೆ ಕವಿಗೆ ಅಪಾರ ಕಾಳಜಿ. ಅಸೂಯೆ, ಅಹಂಕಾರ, ತಪ್ಪುತಿಳುವಳಿಕೆ, ಜಾತಿಮತ ಪಂಥಗಳ ಗೋಡೆಗಳು ಮನುಷ್ಯರನ್ನು ಬೇರ್ಪಡಿಸುತ್ತಿರುವುದರ ಬಗ್ಗೆ ಅಂತು ಕವಿಗೆ ಅಪಾರ ವಿಷಾದ. ಸುತ್ತಲಿನ ವ್ಯಕ್ತಿಗಳ ಕ್ರೌರ್ಯ, ಗೋಸುಂಬೆತನದ ವಿರುದ್ಧ ತನ್ನ ಸಾತ್ವಿಕತೆ ಕಾಪಾಡಿಕೊಳ್ಳುವುದೊಂದೇ ಹಿರಿಯ ಜವಾಬ್ದಾರಿ.

ಹತ್ತಿದ ಹಣತೆಗಳನ್ನು ನಂದಿಸುತ್ತ
ಕತ್ತಲಲ್ಲೇ ತಡಕಾಡಿಕೊಂಡು ಕೈ ಚಾಚುತ್ತೇನೆ,
ರಾಂಗ್ ನಂಬರಿಗೆ ಟೆಲಿಫೋನ್ ಮಾಡಿ
ಉತ್ತರಕ್ಕೆ ಕಾಯುತ್ತ ಕೂರುತ್ತೇವೆ. (ವ್ಯರ್ಥ)

ವ್ಯಕ್ತಿಗಳ ಸಂಬಂಧದ ಗೊಂದಲದ ಪರಿಣಾಮ ಮೇಲಿನ ಸಾಲುಗಳಲ್ಲಿದೆ. ಇಂಥದೆ ವಸ್ತುವನ್ನುಳ್ಳ ಸಾಕಷ್ಟು ಕವನಗಳನ್ನು ನಾವು ಕಾಣಬಹುದು.

ಈ ಸಂದರ್ಭದಲ್ಲಿ ಇನ್ನೊಂದು ವಿಶಿಷ್ಟ ಅಂಶವನ್ನು ಗಮನಿಸಬೇಕಾದದ್ದು ಅಗತ್ಯ. ಇಂಥ ಕವನಗಳಲ್ಲಿ ವ್ಯಕ್ತಿಯ ಬದುಕು ಮತ್ತು ಪರಿಸರದ ವಿರೋಧಾಭಾಸಗಳ ನಡುವೆ ಇರಬಹುದಾದ ಸಂಬಂಧಗಳ ಒಂದು ಸಮಗ್ರ ಗ್ರಹಿಕೆ ಕಾಣುವುದಿಲ್ಲ. ಪರಿಣಾಮಗಳ ಮಟ್ಟದಲ್ಲಿ ಮಾತ್ರ ಎಲ್ಲಾ ವಿರೋಧಾಭಾಸಗಳನ್ನು ಗುರ್ತಿಸುತ್ತಾರೆ. ಆದ್ದರಿಂದಲೇ ಕವಿಗೆ ಒಂದು ನಿರಂತರ ಶೋಧನೆ ಇದ್ದರೂ ಧೋರಣೆಗಳ ಮಟ್ಟದಲ್ಲಿ ವಿವಿಧ ಪದರಗಳುಂಟಾಗುತ್ತವೆ. ಬಹುಶಃ ಇವರ ಕಾವ್ಯ ಬಂಧದ ಮುಖ್ಯ ಗುಣವಾದ Flexibility ಗೆ ಇದೇ ಮುಖ್ಯ ಕಾರಣ. ಕವಿಯ ಮಾತಿನಲ್ಲಿಯೇ ಹೇಳಬೇಕೆಂದರೆ :

'ದಾರಿ ನೂರಾರಿವೆ ಬೆಳಕಿನರಮನೆಗೆ' (ಹಿನ್ನುಡಿ)

ಜೀವನದ ಉದಾರವಾದಿ ಧೋರಣೆಯ ಕಾವ್ಯ ಸಿದ್ಧಾಂತ ಈ ಸಾಲಿನಲ್ಲಿದೆ. ಆಳದಲ್ಲಿ ಅತ್ಯಂತ ನಿಷ್ಠುರ ಸಂಪ್ರದಾಯವಾದಿಯಾದ ಅಡಿಗರ ಕಾವ್ಯಬಂಧದ ಬಿಗಿಗೂ, ಉದಾರವಾದಿ ಧೋರಣೆಯ ಜಿ.ಎಸ್.ಎಸ್. ಕಾವ್ಯಬಂಧದ ಉದಾರತೆಗೂ ಇವರುಗಳ ಧೋರಣೆಯ ಮಟ್ಟದಲ್ಲಿಯೇ ವಿಶ್ಲೇಷಿಸಲು ಸಾಧ್ಯ. ಅಡಿಗರ ಕಾವ್ಯ ಕಾಳಜಿ ಒಂದೇ. ಒಂದೇ ಪದ್ಯದಲ್ಲಿ ವೈಯಕ್ತಿಕ, ಸಾಮಾಜಿಕ ಹೀಗೆ ವಿವಿಧ ಅನುಭವಗಳನ್ನು ಒಂದೇ ನಾಡಿಯ ಮಿಡಿತದಲ್ಲಿ ಕಾಣಬಹುದು. ಆದರೆ ಜಿ.ಎಸ್.ಎಸ್. ಅವರದು ಹಾಗಲ್ಲ.

'ಸಾಮಗಾನ'ದ ಕವನಗಳಿಗೂ ನಂತರದ ಕವನಗಳಿಗೂ 'ಗೋಡೆ'ಯ ಕವನಗಳ ಭಾಷೆಗೂ ಇರುವ ಸ್ಥಿತ್ಯಂತರ ಅತ್ಯಂತ ಮಹತ್ವದ್ದು. ಆಡುನುಡಿಯ ಸಾಮರ್ಥ್ಯ

ವನ್ನು ಮೈಗೂಡಿಸಿಕೊಂಡು ಅನುಭವಕ್ಕೆ ತಕ್ಕಂತೆ ಸಾಲುಗಳ ವಿನ್ಯಾಸವನ್ನು ಸಾಧಿಸ ಬಲ್ಲ ಕಲೆ ಸಿದ್ಧಿಸಿದೆ. ಹೇಳುವುದಾದರೆ 'ದೀಪದ ಹೆಜ್ಜೆ'ಯಿಂದ 'ಗೋಡೆ'ಯ ತನಕದ ಎರಡನೆಯ ಘಟ್ಟದ ಪ್ರಮುಖ ಕಾಳಜಿಯನ್ನು ಈ ಸಾಲುಗಳು ಹೇಳುತ್ತವೆ:

ಕಂಡದ್ದು ಕಾಣದಂತಾಗಿ
ಕಾಣದ್ದು ಕಂಡಂತಾಗಿ
ಬರೀ ಕಣ್ಣು ಮುಚ್ಚಾಲೆ
ಬೆಳಕು ಕತ್ತಲೆ ನಡುವೆ ಒಂದೇ ಸಮನೆ
ಗಡಿಯಾರದುಯ್ಯಾಲೆ (ವ್ಯಕ್ತಿತ್ವ)

'ಗೋಡೆ'ಯ ಅನೇಕ ಕವನಗಳು ದಣಿದ ಕಾವ್ಯಶಕ್ತಿಯ ಪ್ರಕಟಣೆಯಂತೆ ಕಾಣು ತ್ತವೆ. ಆದರೆ ಆಶ್ಚರ್ಯಕರ ಸಾಧನೆಯೆನ್ನುವಂತೆ ನಂತರ ಬಂದ 'ದುಸ್ವಪ್ನ' ಕವನ ಜಿ.ಎಸ್.ಎಸ್. ಕವಿಯಾಗಿ ಹೊಸ ದಿಕ್ಕೊಂದನ್ನು ತಲುಪುವ ಸ್ಪಷ್ಟ ಸೂಚನೆಯನ್ನು ತೋರಿಸುತ್ತದೆ.

'ದುಸ್ವಪ್ನ' ಭಾರತದ ಈ ೩೮ ವರ್ಷಗಳ ಚರಿತ್ರೆಯನ್ನು ನಮ್ಮ ಮುಂದೆ ಇಡು ತ್ತದೆ; ಬರೀ ಮಂತ್ರಿಪೀಠಗಳು ಬದಲಾದ್ದರ ದಾಖಲೆಯಲ್ಲ ಇದು. ಬಾಡಿಹೋದ ಕನಸುಗಳು, ಕರಾಳಶಕ್ತಿಯ ಆರ್ಭಟಗಳು, ನೈತಿಕ ಅದಃಪತನದ ವಿವಿಧ ಚಿತ್ರಗಳು ಇವೆಲ್ಲ ನಮ್ಮ ಬದುಕಿನ ಸ್ಥಿತಿಯನ್ನು ಹೇಳುತ್ತವೆ. ಆದರೆ ಇಲ್ಲಿ ಮಹತ್ವವಿರುವುದು ಕವಿಯ ಧೋರಣೆಗೆ ಸಂಬಂಧಪಟ್ಟಂತೆ ಆಗಿರುವ ಬದಲಾವಣೆಯ ಸೂಚನೆಯಲ್ಲಿ. ಗ್ರಹಿಕೆ ಮತ್ತು ಆಲೋಚನೆಗಳು ಹೊಸಾ ದಿಕ್ಕಿನಲ್ಲಿ ಹೋಗುತ್ತಿವೆ. ವ್ಯಕ್ತಿಗೂ ಪರಿ ಸರಕ್ಕೂ ನಡುವಿನ ಸಂಬಂಧವನ್ನು ಅರ್ಥಮಾಡಿಕೊಂಡ ದೃಷ್ಟಿಯ ಅಭಿವ್ಯಕ್ತಿ ಈ ಸಾಲುಗಳಲ್ಲಿದೆ.

ಕಂಡು, ಎಚ್ಚರಗೊಂಡೆ
ಎಚ್ಚರವೆಲ್ಲ ನಿಗಿನಿಗಿ ಉರಿವ ಕೆಂಡದ ಉಂಡೆ (ದುಸ್ವಪ್ನ)

ಈ ಪದ್ಯದ ಹಿನ್ನೆಲೆಯಲ್ಲಿಯ ಗಾಢವಾದ ವಿಷಾದ ಆತ್ಮೀಯತೆ ಇವುಗಳ ಶಕ್ತಿ ಯಿಂದಾಗಿ ಅವರ ಶ್ರೇಷ್ಠ ಕವನಗಳಲ್ಲಿ ಒಂದು. ನವೋದಯ–ನವ್ಯಗಳ ಅನೇಕ ಮಿತಿ ಯನ್ನು ದಾಟುವ ಸೂಚನೆಗಳು ಈ ಪದ್ಯದಲ್ಲಿ ಕಾಣುತ್ತಿವೆ. ನಂತರ ಬಂದ ಒಂದೆರಡು ಪದ್ಯಗಳು ಇದನ್ನು ಸಮರ್ಥಿಸುತ್ತವೆ. ಜಿ.ಎಸ್.ಎಸ್.ರ ಕಾವ್ಯಜೀವನದ ಮೂರನೇ ಘಟ್ಟದ ಪ್ರಾರಂಭ ಇಲ್ಲಿಂದ ಶುರುವಾಗಿದೆ ಎನ್ನಬಹುದು.

ಬದುಕಿನ ಬಗ್ಗೆ ಅಪಾರ ಪ್ರೀತಿ ಇರುವ ಈ ಕವಿಯ ಮುಂದಿನ ದಾರಿ ಕುತೂಹಲ ಕಾರಿಯಾಗಿದೆ.

ಬರಗೂರು ರಾಮಚಂದ್ರಪ್ಪ

# ಜಿ.ಎಸ್.ಎಸ್. ಕವನಗಳಲ್ಲಿ ಗಾಂಧಿ

ಗಾಂಧಿಯವರು ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಕಾಣಿಸಿಕೊಂಡ ಒಂದು ಪ್ರಾತಿನಿಧಿಕಶಕ್ತಿ; ಸುಧಾರಣಾಶೀಲ ಉತ್ಕಟ ವಿಚಾರಗಳನ್ನು ಪ್ರಚುರಪಡಿಸಿ ಆಪತ್ತಿನ ದಿನಗಳಲ್ಲಿ ದಟ್ಟಪ್ರಭಾವ, ಪರಿಣಾಮಗಳನ್ನುಂಟುಮಾಡಿದವರು; ಆ ಪ್ರಭಾವವಲಯ ದೊಡ್ಡದು; ಇಂಥ ವ್ಯಕ್ತಿ ಮೂಲಭೂತವಾಗಿ ಪರಂಪರೆಯನ್ನು ಪ್ರಶ್ನಿಸದವರೇನೂ ಅಲ್ಲ. ಕೆಲವು ಸಿದ್ಧಮೌಲ್ಯಗಳನ್ನು ಸ್ವೀಕರಿಸಿ, ಸಾಂದರ್ಭಿಕ ಸುಧಾರಣೆಗೆ ಮನಸ್ಸುಮಾಡಿ, ಒಂದು ಕಾಲದ ಒಂದು ಅಗತ್ಯವನ್ನು ಪೂರೈಸಲು ಬದ್ಧರಾದ ಇವರು ದೇಶದೊಂದಿಗೆ ಬೆರೆತ-ವರೆಂಬ ಭಾವನೆ ಬಲವಾಗಿದೆ. ನಾಡಿನ ವಿಚಾರವಂತರೂ, ಕವಿಗಳೂ ಗಾಂಧೀಜಿಯವರನ್ನು ಕುರಿತು ಬಹಳಷ್ಟು ಬರೆದಿದ್ದಾರೆ. ಇಲ್ಲಿ ಜಿ.ಎಸ್.ಎಸ್. ಅವರು ಬರೆದ ಗಾಂಧೀ ಕುರಿತ ಕವನಗಳನ್ನು ವ್ಯಾಖ್ಯಾನಿಸಲಿದ್ದೇನೆ.

೧೯೫೪ರಲ್ಲಿ ಪ್ರಕಟವಾದ 'ದೀಪದ ಹೆಜ್ಜೆ' ಸಂಕಲನದಲ್ಲಿ 'ಕಂಡದ್ದು ಮೂರು ಸಲ' ಎಂಬ ಕವನವಿದೆ. ಇಲ್ಲಿ ಜಿ.ಎಸ್.ಎಸ್. ಅವರು ಗಾಂಧೀಜಿಯವರ ಬದುಕಿನ ಮೂರು ಮುಖ್ಯ ಸನ್ನಿವೇಶಗಳ ಮೂಲಕ ವ್ಯಕ್ತಿತ್ವದ ಅರ್ಥ ಕಂಡುಕೊಂಡಿದ್ದಾರೆ; ಕಂಡರಿಸುವುದರ ಮುಖೇನ ಸಹೃದಯರಿಗೆ ಕಾಣಿಸಿದ್ದಾರೆ. ಆ ಮೂರು ಸನ್ನಿವೇಶಗಳು ಹೀಗಿವೆ: 'ಒಂದು, ತನ್ನ ತಂದೆ ರುಗ್ಣಶಯ್ಯೆಯಲ್ಲಿರುವಾಗ ಬಾಲಕ ಗಾಂಧಿ ತನ್ನ ತಪ್ಪುಗಳನ್ನೆಲ್ಲ ಕಾಗದವೊಂದರಲ್ಲಿ ಬರೆದು ತಂದೆಯ ಕೈಗೆ ಕೊಟ್ಟ ಸನ್ನಿವೇಶ; ಎರಡು, ದಕ್ಷಿಣ ಆಫ್ರಿಕದಲ್ಲಿ ಬಿಳಿಯನೊಬ್ಬನಿಂದ ರೈಲಿನಿಂದಾಚೆ ದಬ್ಬಲ್ಪಟ್ಟ ಸಂದರ್ಭದಲ್ಲಿ ಅವರಲ್ಲಿ ಉದಿಸಿದ ವ್ಯಕ್ತಿ ಸ್ವಾತಂತ್ರ್ಯದ ಹಂಬಲ; ಮೂರು, ಪ್ರಾರ್ಥನಾ ಸಭೆಯಲ್ಲಿ ಹಂತಕನ ಸಿಡಿಗುಂಡಿಗೆ ಎದೆಯೊಡ್ಡಿದ ಸನ್ನಿವೇಶ.'

ಕವನದ ಎರಡನೇ ಸಾಲಿನಲ್ಲೇ ಇರುವ 'ನಿನ್ನ ಆ ಮೇರು ಸಮಧೀರ ವ್ಯಕ್ತಿತ್ವವನು' ಎಂಬ ಮಾತು ಗಾಂಧಿ ಬಗ್ಗೆ ಕವಿಗಿರುವ ಅಪಾರ ಗೌರವದ ಸೂಚಿ. ಇದೇ ಮುಂದಿನ ಭಾಗದ ಸೂಚಿಯೂ ಹೌದು. ಕವನ ಮುಂದೆ ಈ 'ಮೇರುಸಮಧೀರ ವ್ಯಕ್ತಿತ್ವ'ವನ್ನು ಸಿದ್ಧಮಾಡಿ ತೋರಿಸುವುದರಲ್ಲಿ ತನ್ಮಯವಾಗಿದೆ; ಈ ತನ್ಮಯತೆ ಗಾಂಧೀಜಿಯ ದಟ್ಟ ಪ್ರಭಾವದ ಫಲ ಎಂದು ಬೇರೆ ಹೇಳಬೇಕಾಗಿಲ್ಲ. ಒಟ್ಟು ಈ ಕವನದ ವರ್ಣನಾ ವಿನ್ಯಾಸವನ್ನು ಗಮನಿಸಿದಾಗ ಅಲ್ಲಲ್ಲೆ ಎದ್ದು ಕಾಣುವ ಕೆಲವು ಶಬ್ದಗಳು, ಕವಿಯು

ಗಾಂಧಿಯನ್ನು ಪರಂಪರಾಗತ ನೆಲೆಯಲ್ಲಿ ಸಿಲ್ಲಿಸುತ್ತಾರೆಂದು ಭಾವಿಸಲು ಪೂರಕವಾಗಿದೆ; ಕವಿಯೂ ಅದೇ ನೆಲೆಯಿಂದ ಗಾಂಧಿಯನ್ನು ಕಂಡುಕೊಂಡಿರುವುದೂ ಇದರಿಂದ ವ್ಯಕ್ತವಾಗುತ್ತದೆ.

'ಹಿಮಶೈಲ ಶಾಂತಿಯಲಿ ಜ್ವಲಿಸುತಿವೆ ಇದೋ
ಎದೆಯ ದೇಗುಲದಲ್ಲಿ ನಿತ್ಯ ನಂದಾದೀಪ
ನಿನ್ನ ರೂಪ'

'ಹೊಯ್ದಾಡಿತು ಕಣ್ಣಿನ ಹಣತೆ'

'ಕಂಡಿತಾ ಕಂಬನಿಯ ಬೆಳಕಿನಲಿ ನಿನ್ನ ಜೀವನ ಮಂತ್ರ
ಎದೆಯಕೊಳೆ ತೊಳೆದು ನೀನಿಂತೆ ನಿರ್ಮಲನಾಗಿ
ಯಜ್ಞ ದೀಕ್ಷಿತನಾಗಿ'

'ಹುತ್ತ ಬೆಳೆಯಿತು ಪೂರ'

'ಏರಿದುವು ಹಾರಿದುವು ಬಣಗು ತೃಣಕಣವೆಲ್ಲ
ಬ್ರಹ್ಮಾಸ್ತ್ರವಾಗಿ'

'ಗುಡಿಗುಡಿಯ ಘಂಟೆಯಲಿ ಹೊಮ್ಮಿತ್ತು ಜಯಘೋಷ
ಇರುಳ ಹೊಂಗನಸೆಲ್ಲ ನನಸಾಗಿ
ಜನತೆಯ ತೇರು ಸಿಂಗರವಾಗಿ
ಮೊದಲಾಯ್ತು ಹೊಸಯುಗದ ಜಾತ್ರೆ.'

—ಮೇಲೆ ಉಲ್ಲೇಖಿಸಿದ ಸಾಲುಗಳಲ್ಲಿರುವ—ಎದೆಯದೇಗುಲ, ನಂದಾದೀಪ, ಹಣತೆ, ಜೀವನ 'ಮಂತ್ರ', ಯಜ್ಞದೀಕ್ಷಿತ, ಬ್ರಹ್ಮಾಸ್ತ್ರ, ಹುತ್ತ ಬೆಳೆಯಿತು, ಗುಡಿಗುಡಿಯ ಗಂಟೆ, ತೇರು—ಈ ಎಲ್ಲ ಮಾತುಗಳು ಪರಂಪರೆಯ ಹಿನ್ನೆಲೆಯಲ್ಲಿ ಸಮಕಾಲೀನ ವ್ಯಕ್ತಿತ್ವವೊಂದನ್ನು ಕಂಡುಕೊಳ್ಳುವ ರೀತಿಗೆ ನಿದರ್ಶನ. ತೇರು, ಜಾತ್ರೆ—ಈ ಶಬ್ದಗಳು ಜನಜೀವನದ ಸಾಂಸ್ಕೃತಿಕ ಕ್ಷೇತ್ರದೊಳಗೆ ಬರುವುದರಿಂದ, ಸ್ವಾತಂತ್ರ್ಯ ಸಂದ ಸಂದರ್ಭವನ್ನು ಸಾಂಸ್ಕೃತಿಕ ಮಹತ್ವವುಳ್ಳದ್ದೆಂದು ಹೇಳುವ ಪ್ರಯತ್ನ ಕಾಣುತ್ತದೆ. ಇನ್ನೊಂದು ಮಾತಿಲ್ಲಿ ಮುಖ್ಯ: ಪರಂಪರೆ—ಪೂಜ್ಯತೆಗಳು ಅವಿಭಾಜ್ಯವೆಂಬ ಭಾವದ ಬೇರು ಬಲವಾಗಿರುವ ಸಂದರ್ಭದಲ್ಲಿ ಸಮುದಾಯ ಒಪ್ಪಿದ (ಅಥವಾ ಕೆಲವರು ಒಪ್ಪುವಂತೆ ಮಾಡಿದ) ನಂಬಿಕೆ, ಮೌಲ್ಯಗಳ ಕಣ್ಣಿನ ಮೂಲಕ ಯಾರನ್ನು ಅಥವಾ ಯಾವುದನ್ನು ಕಂಡು ಕಂಡರಿಸಿದರೂ, ಅವರು ಅಥವಾ ಅದು ವಿಮರ್ಶಾತೀತ ಪೂಜ್ಯಸ್ಥಾನಗಳಿಸುವ ಸಂಭವ ಹೆಚ್ಚು; ಇಲ್ಲಿ ಜಿ.ಎಸ್.ಎಸ್. ಅವರು ಪರಂಪರಾಗತ ನೆಲೆಯಲ್ಲಿ ನೋಡಿದರೂ, ಅವರು ಆಯ್ಕೆಮಾಡಿಕೊಂಡ ಗಾಂಧೀ ಬದುಕಿನ ಮೂರು ಮುಖ್ಯ ಘಟ್ಟಗಳು ನಿದರ್ಶನ ಸಮೇತ ವ್ಯಕ್ತಿತ್ವವೊಂದರ ಶ್ರೇಷ್ಠತೆಯ ಸ್ಥಾಪನೆಗೆ ನೆರವಾಗಿರುವುದು ಸಮಾಧಾನಕರ ಅಂಶ; ಕವಿಯ ಉದ್ದೇಶವೂ ಇದೇ ಆಗಿರುವಂತೆ ಕಾಣುವುದರಿಂದ, ಅವರು ಯಶಸ್ವಿಯಾಗಿದ್ದಾರೆಂದು ಹೇಳಬಹುದು. ಈ ಕವನದಲ್ಲಿ ಸಹೃದಯ-

ನಿಗಿರುವ ಒಂದು ಸೌಲಭ್ಯವೆಂದರೆ ಕವಿ ಎಲ್ಲೂ ಬೇಕೆಂದೇ ರೂಪಕ, ಸಂಕೇತ, ಮುಂತಾದವುಗಳನ್ನು ಪೇರಿಸಿ ಕವನದ ಉಸಿರು ಕಟ್ಟಿಸಿಲ್ಲ ಎಂಬುದು :

ಕರಗಿತ್ತು ಕರುಣೆಯ ಮೇಘ ;
ಹನಿಹನಿಯಾಗಿ ಜಿನುಗಿತ್ತು ತಂದೆಯೆದೆ
ಯಿಂದಿಳಿದ ಕಂಬನಿಯ ಹರ್ಷವರ್ಷವನೋಘ !
ಕಂಡಿತಾ ಕಂಬನಿಯ ಬೆಳಕಿನಲಿ ನಿನ್ನ ಜೀವನಮಂತ್ರ
ಎದೆಯಕೊಳೆ ತೊಳೆದು ನೀ ನಿಂತೆ ನಿರ್ಮಲನಾಗಿ
ಯಜ್ಞದೀಕ್ಷಿತನಾಗಿ

ಈ ಭಾಗದಲ್ಲಿ ಬರುವ ಮೇಘ, ಮಳೆ, ಕೊಳೆ ತೊಳೆಯುವಿಕೆ, ನಿರ್ಮಲತೆ ಎಲ್ಲವೂ ಪೂರಕ, ಪರಸ್ಪರ ಸಂಬಂಧವಿರುವ ಒಂದೇ ಕ್ರಿಯಾಮೂಲದ ರೂಪಗಳಾಗಿ ಚೊಕ್ಕ ಚಿತ್ರವನ್ನು ಕಟ್ಟಿಕೊಟ್ಟಿವೆ ; ಇದು ಪ್ರಯತ್ನಪೂರ್ವಕ ಪಟ್ಟಿನ ಫಲವಲ್ಲ ; ಅಯತ್ನ ಪೂರ್ವಕ ಸಹಜವೆನ್ನಿಸುವ ಚಿತ್ರನಿರ್ಮಾಣ.

ಕವಿ, ಆಯ್ಕೆ ಮಾಡಿಕೊಂಡ ಮೂರು ಘಟ್ಟಗಳನ್ನು ಮನ ತಟ್ಟುವಂತೆ ಚಿತ್ರಿಸಿ, ಕವನದ ಕೊನೆಗೆ ಹೀಗೆನ್ನುತ್ತಾರೆ :

ಅಲ್ಲೊಂದು ಇಲ್ಲೊಂದು ನಿಂತಿಹವು ದೀಪಸ್ತಂಭ
ನಿನ್ನ ಬೆಳಕನೆ ಹೊತ್ತು ಮುಡಿಯ ತುಂಬ !
ನಂಬಿರುವೆ : ಮೂಡಿಯೇ ಮೂಡುವುದು ಶಾಂತಿಸರ್ವೋದಯದ
ಚಂದ್ರಬಿಂಬ !

—ಇಲ್ಲಿ ಗಾಂಧೀ ವಿಚಾರಗಳು, ಅವರು ಪುರಸ್ಕರಿಸಿ ಪ್ರತಿಪಾದಿಸಿದ ಮೌಲ್ಯಗಳು ಮುಂದೆಯೂ ನೆಲೆಗೊಳ್ಳುತ್ತವೆಯೆಂಬ ವಿಶ್ವಾಸವಿದೆ; ಈ ವಿಶ್ವಾಸ, ಆಶಾವಾದ ಸ್ವಾತಂತ್ರ್ಯ ಸಂದ ಹತ್ತು ವರ್ಷಗಳ ನಂತರ ರಚಿಸಿದ ಕವನದಲ್ಲಿದ್ದು. ಮತ್ತೆ ಮೂರು ವರ್ಷಗಳು ಕಳೆಯುವ ವೇಳೆಗೆ ಸ್ಥಿತಿ ಬದಲಾವಣೆಯ ಸ್ಪಷ್ಟ ಸೂಚನೆ—'ಅನಾವರಣ ವಾಯಿತಂತೆ' (ಅನಾವರಣ—ಕವನ ಸಂಕಲನ—೧೯೬೩) ಎಂಬ ಪದ್ಯದಲ್ಲಿದೆ. ಇಲ್ಲಿ ಕವಿ, ಗಾಂಧೀಜಿಯ ಭಾವಚಿತ್ರದ ಅನಾವರಣ ಸನ್ನಿವೇಶವೊಂದಕ್ಕೆ ವಿಡಂಬನಾತ್ಮಕ ಶೈಲಿಯಲ್ಲಿ ಪ್ರತಿಕ್ರಿಯಿಸಿದ್ದಾರೆ :

ಅನಾವರಣವಾಯಿತಂತೆ ಗಾಂಧೀಜಿಯ ಚಿತ್ರಕೆ !
ಭಾಷಣಗಳು ನಡೆದುವಂತೆ ಕುಸಿಯಿತೇನೊ ವೇದಿಕೆ
ಹೂಹಾರಗಳುರುಳಿತಂತೆ ಮಾತಾಡಿದ ಕೊರಳಿಗೆ
ಗಾಂಧೀಜಿಯ ಪಟ ಸೇರಿತು ಜೇಡನ ಬಲೆ ನೆರಳಿಗೆ !

—ಈ ಸಾಲುಗಳಲ್ಲಿ ವಾಸ್ತವದ ಅರಿವು ವ್ಯಂಗ್ಯದ ಮೊನೆಯಲ್ಲಿ ಮೂಡಿಬಂದಿದೆ. ಎರಡನೇ ಸಾಲು ಗಾಂಧೀ ಹೆಸರು ಹೇಳುತ್ತ, ಅನುಷ್ಠಾನದಲ್ಲಿ ಗಾವುದ ದೂರವಿರು ವಂಥವರನ್ನು ಗೇಲಿ ಮಾಡಿದರೆ, ನಾಲ್ಕನೇ ಸಾಲಿನಲ್ಲಿ ವ್ಯಂಗ್ಯ, ವ್ಯಥೆ ಎರಡೂ ಒಟ್ಟು ಗೂಡಿದೆ. ಕೆಲವರ ದೊಡ್ಡಸ್ತಿಕೆಗೆ ಗಾಂಧೀಜಿ ಒಂದು ಸಾಧನ ಮಾತ್ರವಾಗುತ್ತಿರುವ

ಸತ್ಯ 'ಅನಾವರಣವಾಯಿತಂತೆ' ಎಂಬ ವಿಡಂಬನಾತ್ಮಕ ಪದ್ಯದಲ್ಲಿ ದರ್ಶಿತವಾಗುತ್ತದೆ. ಇದು ಗಾಂಧಿ ಮತ್ತು ಕವಿ ಬರೆಯುತ್ತಿರುವ ಸಂದರ್ಭದ 'ದೊಡ್ಡ ಜನ'ರ ಸಂಬಂಧದ ಇತಿಮಿತಿಗಳನ್ನು ವ್ಯಾಖ್ಯಾನಿಸುವ ಪ್ರಯತ್ನ.

ಈ ಪ್ರಯತ್ನ 'ಗಾಂಧಿ' ಕವನದಲ್ಲಿ (ಗೋಡೆ—ಕವನ ಸಂಕಲನ—೧೯೭೨) ಇಲ್ಲಿಗಿಂತ ಹೆಚ್ಚು ಶಕ್ತಿಯುತವಾಗಿ ಮೂಡಿ ಬಂದಿದೆ. 'ಕಂಡದ್ದು ಮೂರು ಸಲ' ಕವನ ಗಾಂಧಿಯ 'ಮೇರುಸಮ ಧೀರ ವ್ಯಕ್ತಿತ್ವ'ವನ್ನು ಪರಿಭಾವಿಸಿಕೊಂಡು ಪ್ರಾರಂಭವಾದರೆ, ಈ ಕವನ ಅವರಿಗೆ ಈ ನಾಡಿನಲ್ಲಿ ಅರ್ಥಪೂರ್ಣ ನೆಲೆ ಇಲ್ಲದಿರುವುದನ್ನು ಗಮನಿಸುತ್ತ ಜನರ ಸ್ವಾರ್ಥ, ಅವಜ್ಞೆಗಳನ್ನು ವಿಷಾದ, ವ್ಯಂಗ್ಯಗಳ ಮುಖೇನ ದಾಖಲಿಸುತ್ತದೆ. ಅಲ್ಲಿ ಅವರ ವ್ಯಕ್ತಿತ್ವವನ್ನು 'ಯಜ್ಞದೀಕ್ಷಿತ' ಎಂಬಂಥ ಪದಗಳಲ್ಲಿ ಪರಿಭಾವಿಸಿ ಕವಿಯೂ ಪರಂಪರೆಯ ಅಂಥ ಅಂಶಗಳ ಬಗ್ಗೆ ಒಲವು ವ್ಯಕ್ತಪಡಿಸಿದ್ದರೆ, ಇಲ್ಲಿ ಅವುಗಳಿಂದ ಬಿಡಿಸಿಕೊಂಡ ಸುಧಾರಣಾ ಮನೋಧರ್ಮ ಕಂಡುಬಂದಿರುವುದು ನನ್ನ ದೃಷ್ಟಿಯಲ್ಲಿ ಒಳ್ಳೆಯ ಬೆಳವಣಿಗೆ. ನನ್ನ ಮಾತಿನ ಸಮರ್ಥನೆಗೆ ಈ ಸಾಲುಗಳನ್ನು ಗಮನಿಸಿ :

ಕಾವಿಯುಡಲಿಲ್ಲ, ಹೆಣ್ಣ ಬಿಡಲಿಲ್ಲ
ಎಲ್ಲೋ ಮಠದೊಳಗೆ ಕೂತು ರಹಸ್ಯವಾಗಿ
ಜಪಮಣಿ ಎಣಿಸಿ ಸಮಾಧಿಸ್ಥನಾಗಲಿಲ್ಲ.
......................................
ಪವಾಡಗಳನ್ನು ತೋರಿಸಿ ಯಾರನ್ನೂ ಮರಳು ಮಾಡಲಿಲ್ಲ

ಗಾಂಧಿಯನ್ನು ಪ್ರಶಂಸಿಸುವ ಈ ಮಾತುಗಳಲ್ಲಿ, ಕಾವಿ, ಮಠ, ಜಪಮಣಿ, ಸಮಾಧಿಸ್ಥಿತಿ, ಪವಾಡ—ಇವುಗಳ ಬಗ್ಗೆ ಇರುವ ಅನಾದರ ಎದ್ದು ಕಾಣುತ್ತದೆ. ಇದು ಕಾವಿಯುಟ್ಟು, ಹೆಣ್ಣುಬಿಟ್ಟು (ಅಥವಾ ಬಿಟ್ಟಂತೆ ಮಾಡಿ ?) ಜಪಮಣಿ ಎಣಿಸಿ ಸಮಾಧಿಸ್ಥನಾಗಿ, ಪವಾಡಗಳ ಮೂಲಕ ಮರುಳುಗೊಳಿಸುವ 'ಧರ್ಮಪ್ರಭು'ಗಳ ನಾಡು. ಇಂಥ ಕಡೆ ಅದೇನನ್ನೂ ಮಾಡದೆ, ಅವರಷ್ಟೇ ದಟ್ಟಪ್ರಭಾವ ಬೀರಿದ ವ್ಯಕ್ತಿತ್ವ ಗಾಂಧಿಯದು ಎಂಬ ಭಾವನೆ ಕವಿಗಿದ್ದು, ಈ ಕಣ್ಣಿನಿಂದ ಕಂಡ ಗಾಂಧಿ ಬೇರೊಂದು ಮಾರ್ಗದ ಮೂಲಕ ಮಹತ್ವಪೂರ್ಣವಾದದ್ದು ಗೌರವಾಸ್ಪದವೆನ್ನಿಸಿದೆ. ವರ್ಣನಾ ವಿನ್ಯಾಸವೂ ಕವಿಯ ಧೋರಣೆಯನ್ನನುಸರಿಸಿ ರೂಪುಗೊಳ್ಳುವುದರಿಂದ 'ಕಂಡದ್ದು ಮೂರು ಸಲ' ಮತ್ತು 'ಗಾಂಧಿ' ಕವನಗಳಲ್ಲಿರುವ ವ್ಯತ್ಯಾಸ, ಬದಲಾಗಿರುವ ಕವಿಯ ಮನೋಧರ್ಮದ ಪ್ರತೀಕವೂ ಆಗುತ್ತದೆ.

'ಗಾಂಧಿ' ಕವನ ಇಲ್ಲಿನ 'ದಢೂತಿ ಜನರ' ನಡುವೆ ಗಾಂಧಿಯನ್ನಿಟ್ಟು ನೋಡುತ್ತದೆ ; ಈ ಜನಕ್ಕೆ ಗಾಂಧಿಯೊಂದಿಗಿರುವ ಸಂಬಂಧದ ಪೊಳ್ಳುತನವನ್ನು ಬಯಲಿಗೆಳೆಯಲು ಪ್ರಯತ್ನಿಸಿದೆ ; ಕೆಲವು ಕಡೆ ಹೆಚ್ಚು ವಿವರಣಾತ್ಮಕ ಎನ್ನಿಸಿದರೂ ಕವನದ ಒಂದು ಭಾಗ ಸರಳ ಮಾತುಗಳಲ್ಲೆ ಸಮರ್ಥ ವ್ಯಂಗ್ಯ ಒಗ್ಗಿಸಿಕೊಂಡು ಅರ್ಥಪುಷ್ಟಿಗೆ ಕಾರಣವಾಗಿದೆ. ಅದು ಹೀಗಿದೆ :

ವಾಕಿಂಗ್ ಬಂದ ತರುಣ ದಂಪತಿಗಳು
'ಪಾಪ, ಯಾರದೋ ಮುದುಕನದು ಈ ಪ್ರತಿಮೆ'
ಎಂದುಕೊಳ್ಳುತ್ತಾರೆ.
ಅಜ್ಜ ಹೇಳುತ್ತಾನೆ ಮೊಮ್ಮಗನಿಗೆ :
'ಇದು ಗಾಂಧೀ'
'ಗಾಂಧಿ ! ಹಾಗೆಂದರೇನಜ್ಜ' ಅನ್ನುತ್ತದೆ ಮಗು.
ಅಜ್ಜ ಹೇಳುತ್ತಾನೆ, 'ಅವನೊಬ್ಬ ಹುಚ್ಚ...
ಬ್ರಿಟಿಷರಿದ್ದಾಗಲೇ ಚೆನ್ನಾಗಿತ್ತು' ಎಂದು ಗೊಣಗುತ್ತ
ತನ್ನ ಕಳೆದ ಕಾಲದ ಸಾಹೇಬಗಿರಿಯ ನೆನಪು ಕುಟ್ಟುತ್ತಾ
ಮುಂದೆ ಹೋಗುತ್ತಾನೆ.

—ಇಲ್ಲಿ ಮೂರು ತಲೆಮಾರಿನವರು ಬಂದಿದ್ದಾರೆ; ತರುಣ ದಂಪತಿಗಳು ಇಂದಿನ ಪೀಳಿಗೆಗೆ ಇರುವ ಗಾಂಧೀ ಕುರಿತ ಅಜ್ಞಾನವನ್ನು ಪ್ರತಿನಿಧಿಸುತ್ತಾರೆ; ಮಗು ಮುಂದಿನ ಪೀಳಿಗೆಯದು; ಅದಕ್ಕೆ ಗಾಂಧೀ ಹೆಸರೇ ಒಂದು ಆಶ್ಚರ್ಯ. ಈ ಆಶ್ಚರ್ಯದಲ್ಲಿ ಅಡಗೂಲಜ್ಜಿಯ ಕತೆ ಕೇಳುವ ಮುಗ್ಧತೆ ಇದೆ; ಕುತೂಹಲವಿದೆ. ಈ ಮುಂದಿನ ಪೀಳಿಗೆಯ ಕುತೂಹಲಾಶ್ಚರ್ಯಗಳನ್ನು ತಣಿಸಹೊರಡುವ ಹಿಂದಿನ ಪೀಳಿಗೆಯ 'ಮುದುಕ' ಕೊಡುವ ಉತ್ತರ—'ಅವನೊಬ್ಬ ಹುಚ್ಚ' ಎಂಬುದು. ಬ್ರಿಟಿಷರ ಕಾಲವೇ ಚನ್ನಾಗಿತ್ತೆಂದು ಅಭಿಪ್ರಾಯಪಡುವ ಮುದುಕ ಇಡೀ ಹಿಂದಿನ ಪೀಳಿಗೆಯ ಪ್ರತಿನಿಧಿಯಲ್ಲ. ಹಳ್ಳಿಯ ವೃದ್ಧ ರೈತ ಹೀಗೆನ್ನುವುದಕ್ಕೂ ಈ ಕವನದ ಮುದುಕನ ಭಾವನೆಗೂ ಮಾತು ಒಂದೇ ಆದರೂ ಅರ್ಥದ ಆಳ ಬೇರೆ. ವೃದ್ಧ ರೈತ ಹಾಗೆಂದರೆ ಆ ಮಾತಿನಲ್ಲಿ ಜನಸಮುದಾಯಕ್ಕೆ ತಲುಪದ ಯೋಜನೆಗಳ ವೈಫಲ್ಯ ಇರುತ್ತದೆ; ಇಲ್ಲಿ ಹೀಗೆನ್ನುವ ಮುದುಕ 'ಸಾಹೇಬಗಿರಿಯ ನೆನಪು ಕುಟ್ಟುತ್ತಾ' ಹೋಗುವವನು; ಆದ್ದರಿಂದ ಈತ ಹಳೆಯ, ಜಡ್ಡುಗಟ್ಟಿದ ನೌಕರಷಾಹಿಯ ಪ್ರತಿನಿಧಿ. ಇವತ್ತಿನ ಯೋಜನಾವೈಫಲ್ಯಗಳಲ್ಲಿ ನೌಕರಷಾಹಿಯ ಪಾಲು ಕಡೆಗಣಿಸುವಂಥದಲ್ಲ; ಅಷ್ಟೇ ಅಲ್ಲ ಅದು ಜನತೆ ಮತ್ತು ಜನತಾ ಪ್ರತಿನಿಧಿಗಳ ನಡುವೆ ಇರುವ ವ್ಯವಸ್ಥೆಯಾಗಿ ಉಪಕಾರ–ಅಪಕಾರ ಎರಡಕ್ಕೂ ಕಾರಣವಾಗಬಹುದು. ಪ್ರಸ್ತುತ ಕವನದಲ್ಲಿ ಸ್ವತಂತ್ರ ರಾಷ್ಟ್ರದಲ್ಲಿ ಇರುವ (ಬಹುಶಃ) ನಿವೃತ್ತ ನೌಕರನೊಬ್ಬ ಆಡುವ ಮಾತುಗಳು ನೌಕರಷಾಹಿಯ ದೌಲತ್ತು ಜಬರ್ದಸ್ತುಗಳಿಗೆ ಬಿದ್ದ ಕಡಿವಾಣದ ಫಲ ಎನ್ನಿಸುತ್ತದೆ; ಇದರರ್ಥ ಈಗ ನೌಕರಷಾಹಿ ಸರಿಯಾಗಿದೆ ಎಂದಲ್ಲ. ಸ್ವತಂತ್ರಭಾರತದಲ್ಲಿ ಸ್ಥಾನಪಡೆದ ನೌಕರರು ಇವತ್ತಿನ ಸ್ಥಿತಿಗನುಗುಣವಾಗಿ ತಮ್ಮ ಮೂಲಸ್ವಭಾವವನ್ನು ಹೊಂದಿಸಿಕೊಂಡು ಬೆಳೆಸುತ್ತ ಬಂದಿದ್ದಾರೆ; ಇವತ್ತಿನ ನೌಕರಷಾಹಿಯ ಮೂಲಸ್ವರೂಪವು ಬ್ರಿಟಿಷರ ಕಾಲದಲ್ಲಿ ಬೇರು ಬಿಟ್ಟದ್ದು ಎಂಬುದನ್ನು ಗಮನಿಸಬೇಕು; ಅದೇನೆ ಇರಲಿ, ಕವನದಲ್ಲಿ ಬರುವ ಮುದುಕ ತನ್ನ ವರ್ಗಕ್ಕೆ ಸ್ವತಂತ್ರ ಭಾರತದಲ್ಲಿ ಆಗಿರಬಹುದಾದ 'ಧಕ್ಕೆ'ಯಿಂದ ವ್ಯಥೆ ತೋಡಿಕೊಳ್ಳುತ್ತಾನೆ; ಈತ ಸಾಮಾನ್ಯನ ಸ್ಥಾನದಲ್ಲಿ ನಿಂತು ಗಾಂಧಿ, ಸ್ವಾತಂತ್ರ್ಯಪೂರ್ವ ಭಾರತ

ಮತ್ತು ಸ್ವಾತಂತ್ರ್ಯೋತ್ತರ ಭಾರತಗಳನ್ನು ನೋಡುವುದಿಲ್ಲ; 'ಸಾಹೇಬಗಿರಿಯ ನೆನಪು ಕುಟ್ಟುತ್ತ' ನೋಡಿ ಪ್ರತಿಕ್ರಿಯಿಸುತ್ತಾನೆಂಬುದು ಮುಖ್ಯ.

ಈ ಕವನದ ಕೊನೆಯ ಸಾಲುಗಳು ಹೀಗಿವೆ:

ಭದ್ರವಿರದ ಈ ಮನೆಯ ಕಿಟಕಿ ಕದಗಳು
ಗಾಳಿಗೆ ಹೊಯ್ದಾಡುತ್ತವೆ.
ನಿನ್ನ ನೆನಪನ್ನೆ ಹೊದ್ದು ನಿಟ್ಟುಸಿರು ಬಿಡುತ್ತಾ
ಎಂದಾದರೂ ನೀನುತ್ತು ಬಿತ್ತಿದ ಬೀಜ
ಮೊಳೆತಾವೇ ಎಂದು ಕೊರಗುತ್ತೇನೆ.

ಮೊದಲ ಎರಡು ಸಾಲುಗಳು ದೇಶದ ಅಭದ್ರ ಸ್ಥಿತಿಯನ್ನು ಪ್ರತಿಮಿಸುತ್ತವೆ; ಮುಂದಿನ ಮೂರು ಸಾಲುಗಳಲ್ಲಿ ವ್ಯಕ್ತವಾಗಿರುವ ಭಾವನೆಗೂ 'ಕಂಡದ್ದು ಮೂರು ಸಲ' ಕವನದ ಕೊನೆಯಲ್ಲಿರುವ ಭಾವನೆಗೂ ವ್ಯತ್ಯಾಸವಿರುವುದನ್ನು ನೋಡಬಹುದು. ಅಲ್ಲಿ 'ನಂಬಿರುವೆ: ಮೂಡಿಯೇ ಮೂಡುವುದು ಶಾಂತಿ ಸರ್ವೋದಯದ ಚಂದ್ರಬಿಂಬ' ಎಂಬ ಖಚಿತ ವಿಶ್ವಾಸವಿದೆ. 'ಮೂಡಿಯೇ ಮೂಡುವುದು' ಎಂಬ ಅಪಾರ ವಿಶ್ವಾಸ 'ಅನಾವರಣವಾಯಿತಂತೆ' ಕವನ ಬರೆದಾಗ ಸಡಿಲವಾಗಿರಬಹುದು; ಕವಿ ನೇರ ಪ್ರವೇಶದಿಂದ ಏನನ್ನೂ ಹೇಳದಿದ್ದರೂ ಒಂದು ಸ್ಥಿತಿಯನ್ನು ವಿಡಂಬಿಸುವಲ್ಲಿ ಈ ಮಾತಿಗೆ ನೆಲೆ ಸಿಕ್ಕುತ್ತದೆ. ಇಲ್ಲಿ—'ಗಾಂಧಿ' ಕವನದ ಕೊನೆಯಲ್ಲಿ ಕವಿ ನಿರೂಪಕ ಸ್ಥಾನದಿಂದ 'ಎಂದಾದರೂ....ಮೊಳೆತಾವೇ ...' ಎಂದು ಸಂಶಯಿಸುತ್ತಾರೆ; ಹಿಂದಿನ ವಿಶ್ವಾಸ ಕಳೆದುಕೊಳ್ಳುತ್ತಿರುವ ಕವಿಗೆ ಇಲ್ಲಿ 'ಕೊರಗು....'

ಈಗಾಗಲೇ ವ್ಯಾಖ್ಯಾನಿಸಿರುವ ಕವನಗಳಿಗಿಂತ ಹೆಚ್ಚು ಬಿಗಿಯಾದ ಕವನ—'ಗಾಂಧಿ ಶತಮಾನೋತ್ಸವ.' ಇದರ ಮೊದಲ ಸಾಲುಗಳೇ ಸಮರ್ಥ ಪ್ರತಿಮೆಯಾಗಿ ದೇಶದ ದುಸ್ಥಿತಿಯನ್ನು ಕಣ್ಣಿಗೆ ಕಟ್ಟಿಕೊಡುತ್ತವೆ:

ಹಾದಿಯುದ್ದಕ್ಕೂ ಹಾಳುಬಿದ್ದಿರುವ ಹೂವಿನ ತೋಟ
ಇನ್ನೂ ಹೊಗೆಯಾಡುತ್ತಿರುವ ಬೆಂಕಿ,
ಕಾಲಿನ ಕೆಳಗೆ ರಕ್ತದ ಕೆಸರು,
ಕೋಟೆ ಬಿರುಕುಗಳಲ್ಲಿ ಯಾರದೋ ನಿಟ್ಟುಸಿರು,
ಗೆದ್ದಲಡರುತ್ತಿರುವ ಕಂಬಗಳ ಮುರುಕು ಮಹಲು
ಹೊಸದಾಗಿ ರಿಪೇರಿ ಮಾಡಿರುವ ರಸ್ತೆಗಳ ಮೇಲೆ
ನಾಯಿಗಳ ಕಚ್ಚಾಟ,
ಈ ಎಲ್ಲದರ ನಡುವೆ ಕೇಳುತ್ತಲಿದೆ
ಹಬ್ಬಿರುವ ಮುಬ್ಬಿನೊಳಗೊಬ್ಬನೇ ಮುದುಕ
ಕೋಲೂರಿ ನಡೆಯುವ ಸದ್ದು

ಇಲ್ಲಿ ಹೂವಿನ ತೋಟ, ಬೆಂಕಿ, ರಕ್ತದ ಕೆಸರು, ಕೋಟೆ ಬಿರುಕು.....ನಿಟ್ಟುಸಿರು—ಈ ಎಲ್ಲ ಮಾತುಗಳು ಅರ್ಥವತ್ತಾಗಿ ಬೆಸೆದುಕೊಂಡು ಒಟ್ಟು ಧೋರಣೆಗೆ ಬದ್ಧವಾಗಿ

ದುಡಿದಿವೆ. ಈ ಒಟ್ಟು ಪ್ರತಿಮೆಯಲ್ಲಿ ಒಂದು ಮಾತು ಹೆಚ್ಚು ಎಂದು ಹೇಳುವಂತಿಲ್ಲ. ಅದೇ ಸಂದರ್ಭದಲ್ಲಿ ಮಾತು ಕಡಮೆ ಮಾಡಲು ಹಟ ತೊಟ್ಟು ಶಬ್ದಗಳ ಸರ್ಕಸ್ಸು ನಡೆದಿಲ್ಲ; ಬೇಕೆಂದೇ ಕ್ಲಿಷ್ಟತೆ ತಂದಿಲ್ಲ. ಸಹಜವೆಂಬಂತೆ ಬೆಳೆಯುತ್ತಾ ಹೋಗುವ ಪ್ರತಿಮೆ ಕಾವ್ಯದ ಸಾಮಾನ್ಯ ಓದುಗನನ್ನು ತಲುಪಲು ಅಷ್ಟು ಕಷ್ಟವಾಗುವುದಿಲ್ಲ ಎಂಬುದು ಮುಖ್ಯ; ಕೊನೇ ಮೂರು ಸಾಲುಗಳು ಈ ಸ್ಮಶಾನ ಸದೃಶ ವಾತಾವರಣದ ನಡುವೆ ಅನಾಥಸ್ಥಿತಿಯಲ್ಲಿರುವ ಗಾಂಧಿಯನ್ನು ಸೂಚಿಸುವ ಬರವಣಿಗೆಯ ಗತಿ ಸಾರ್ಥಕವಾಗಿದೆ.

ಮುಂದೆ, ಕವನ ಗಾಂಧಿಯನ್ನು ಮರೆತು, ಪ್ರಾಮಾಣಿಕತೆಯಿಂದ ದೂರ ಸರಿದು ನೈತಿಕ ಮೌಲ್ಯಗಳಿಗೆ ನಮಸ್ಕಾರ ಹಾಕಿದ ಜನರ ಚಿತ್ರ ಕೊಡುತ್ತದೆ. 'ಪಂಚತಂತ್ರ ಪ್ರತಿಭೆಯಲ್ಲಿ ಬಾಲವಲ್ಲಾಡಿಸುತ್ತ, ಗುಂಪಿನಲ್ಲಿ ಗೋವಿಂದವಾಗುತ್ತ, ಬೇಯುವಲ್ಲೆಲ್ಲಾ ನುಗ್ಗಿ, ಕೈಗೆ ಸಿಕ್ಕಷ್ಟು ಲಪಟಾಯಿಸುತ್ತಾ' ಇರುವ ಈ ಜನರಿಗೂ ಕೆಲವೊಮ್ಮೆ ಗಾಂಧಿಸ್ಮೃತಿಯುಂಟಾಗುತ್ತದೆ.

'ಟಾರ್ಚ್ ಹಾಕಿ ಝಗ್ಗೆಂದು ಬಯಲಿಗೆಳೆದಂತೆ ಭಯವಾಗುತ್ತದೆ
ಎಲ್ಲಿ ಲೆಕ್ಕದ ಬುಕ್ಕು ಎಂದು ತನಿಖೆ ಮಾಡುವ ಹಾಗೆ ತೋರುತ್ತದೆ'

ಅಲ್ಲದೆ ಗಾಂಧಿ 'ಕಾಡುವ ನೆರಳಾಗಿ' ಕಾಣುತ್ತಾರೆ. ಈ ಮುಖಾಮುಖಿ ಎರಡು ಕಡೆಯವರ ಪರೀಕ್ಷೆಯ ಸಂದರ್ಭ. ಒಂದು ಕಡೆ ಗಾಂಧಿ; ಇನ್ನೊಂದು ಕಡೆ ಈ ಜನ. ಇವರಿಗೆ ಗಾಂಧಿಯನ್ನು ಎದುರಿಸಿ ಬದುಕುವುದು ಅಸಾಧ್ಯ. ಆದ್ದರಿಂದ ಪ್ರಶಂಸೆ ಪ್ರಾರಂಭವಾಗುತ್ತದೆ. ಈ ಸಂದರ್ಭದಲ್ಲಿ ಬರವಣಿಗೆಗೆ ನಾಟಕೀಯ ಗುಣ ಬಂದು ಲವಲವಿಕೆ ಮೂಡಿದೆ. ಹೆಚ್ಚು ಪ್ರಯಾಸವಿಲ್ಲದೆ ಕವನ ಒಳಗುಮಾಡಿಕೊಳ್ಳಲು ಶಕ್ತವಾಗಿದೆ; ಗಾಂಧೀಜಿ ಸತ್ಯಶೋಧಕ ಶಕ್ತಿಯಾಗಿ ಪ್ರಾಮಾಣಿಕತೆಯ ಪ್ರತೀಕವಾಗಿ ಕಂಡುಬರುತ್ತಾರೆ.' ಅಪ್ರಾಮಾಣಿಕರ ಅಳುಕಿನ ಸ್ಥಿತಿ ಚೆನ್ನಾಗಿ ವಿಡಂಬಿತವಾಗಿದೆ.

'ಮುಂದೆಲ್ಲೋ, ಯಾವ್ಯಾವ ಕತ್ತಲು ಕವಿದ ಭೂಗೋಲಗಳ ಮೇಲೂ
ಈ ನೆರಳಿನ ಬೆಳಕು ಬೀಳುತ್ತದೆ'

—ಎಂಬ ಮಾತುಗಳು ಗಾಂಧೀ ವಿಚಾರಗಳು ಆಫ್ರಿಕ ಮುಂತಾದ ದೇಶಗಳ ಮೇಲೆ ಮಾಡಿದ ಪ್ರಭಾವವನ್ನು ಕುರಿತು ಬಂದಿವೆ. ಇಲ್ಲಿನವರಿಗೆ ಗಾಂಧೀಯ ನೆರಳು ಕಾಡಿದರೆ ಅಲ್ಲಿನವರಿಗೆ ಈ ನೆರಳು ಬೆಳಕಾಗಿ ಕಂಡಿದೆ.

ಒಂದು ವಾತಾವರಣದ ನಿರ್ಮಾಣ ಮಾಡುತ್ತ ಆ ಮೂಲಕ ಧೋರಣೆಯ ಅಭಿವ್ಯಕ್ತಿಯಾಗಿರುವ 'ಗಾಂಧಿ ಶತಮಾನೋತ್ಸವ' ಕವನದ ಕೊನೇ ಸಾಲುಗಳು ಹೀಗಿವೆ:

ನಟ್ಟನಡುರಾತ್ರಿ ಬೆಂಕಿಗಣ್ಣನು ಬಿಟ್ಟು ಧಡ ಧಡ ನುಗ್ಗಿದ ರೈಲು
ಭೋರೆನ್ನುತ್ತ ಮೊರೆ ಮೊರೆದು ಕಡೆಗೆ ಕತ್ತಲಲ್ಲೇ ಕರಗಿ ಹೋದಂತೆ
ಸದ್ದು ನಿಲ್ಲುತ್ತದೆ.
ಇದು ತೊಲಗಿತಲ್ಲಾ ಎಂಬ ಸಮಾಧಾನದಲ್ಲಿ
ಮತ್ತೆ ಮೋಂಬತ್ತಿ ಹತ್ತಿ, ನಿಲ್ಲಿಸಿದ ಆಟ ಮುಂದುವರಿಯುತ್ತದೆ.

ಮೊದಲು 'ಕೋಲು ಕುಟ್ಟುವ ಸದ್ದು' ಎಂದ ಕವಿ ಇಲ್ಲಿ 'ಧಡ ಧಡ ರೈಲಿನ ಸದ್ದು' ಎಂದಿದ್ದಾರೆ. ಸ್ಮಶಾನ ಸದೃಶ ಸ್ಥಿತಿಯಲ್ಲಿ ಕೋಲು ಕುಟ್ಟುವ ಸದ್ದಿನ ಕಲ್ಪನೆ ಕೊಡುವಾಗ ಕವಿಯು ತಮಗೆ ತಾವೇ ಅಥವಾ ಓದುಗರೊಂದಿಗೆ ಮಾತನಾಡುತ್ತಾರೆ. ಆಗ ಅದು ಸಹಜವಾದ ಕೋಲು ಕುಟ್ಟುವ ಸದ್ದು ; ಧಡಧಡ ರೈಲಿನ ಸದ್ದು ಆಗುವುದು ಅಪ್ರಾಮಾಣಿಕರಿಗೆ ಎಂಬುದನ್ನು ಗಮನಿಸಬೇಕು. ಮೊದಲು ಯಾರೋ 'ಸಣ್ಣಗೆ ಕಣ್ ತೆರೆದು' ಒಳಗಿಗೆ ಟಾರ್ಚು ಹಾಕಿದ ಭಯವಾದರೆ, ಇಲ್ಲಿ ಅದು 'ಬೆಂಕಿಗಣ್ಣು'. ಈ ಬೆಳವಣಿಗೆ ಆ ಜನರ ಮಾನಸಿಕ ಸ್ಥಿತಿಯ ವ್ಯತ್ಯಾಸವನ್ನು ಧ್ವನಿಸುತ್ತದೆ; ಜೊತೆಗೆ ಗಾಂಧೀ ಶಕ್ತಿಯ ಸಿಟ್ಟಿನ ಪ್ರತೀಕವೂ ಆಗಬಹುದು. ಇನ್ನು, ಕಡೆಯಲ್ಲಿ 'ಮತ್ತೆ ಮೋಂಬತ್ತಿ ಹತ್ತಿ, ನಿಲ್ಲಿಸಿದ ಆಟ ಮುಂದುವರಿಯುತ್ತದೆ' ಎಂದಿರುವಲ್ಲಿ ಹಿಂದಿನ ಕವನಗಳಲ್ಲಿ ವ್ಯಕ್ತವಾದ ಭಾವನೆಗಿಂತ ಭಿನ್ನ ನಿಲವು ಇದೆ. 'ಕಂಡದ್ದು ಮೂರು ಸಲ'ದಲ್ಲಿ 'ಶಾಂತಿ ಸರ್ವೋದಯದ ಚಂದ್ರಬಿಂಬ' ಮೂಡುವ ನಂಬಿಕೆಯಿದೆ; 'ಗಾಂಧಿ'ಯಲ್ಲಿ 'ಬಿತ್ತಿದ ಬೀಜ ಮೊಳೆತಾವೇ' ಎಂಬ ಸಂಶಯವಿದೆ; 'ಗಾಂಧಿ ಶತಮಾನೋತ್ಸವ' ಕವನದ ಮೊದಲೇ ಭಗ್ನ, ಅಶಾಂತ ಸ್ಥಿತಿಯ ಚಿತ್ರಣವಿತ್ತು ಕಡೆಯಲ್ಲಿ ಹಿಂದೆ ಇದ್ದ ವಿಶ್ವಾಸ ಮಣ್ಣುಗೂಡಿ, ಗಾಂಧೀ ವಿಸ್ಮೃತಿಯ ತಕ್ಷಣ ನಿಲ್ಲಿಸಿದ ಆಟ ಮುಂದುವರೆಯುತ್ತದೆ ಎಂಬ ವಾಸ್ತವ ಸ್ಥಿತಿಯ ಅರಿವಿದೆ. 'ಮೇರು ಸಮಧೀರ ವ್ಯಕ್ತಿತ್ವ'ವುಳ್ಳವರೆಂದು ಕವಿ ಭಾವಿಸಿರುವ ಗಾಂಧಿಯನ್ನು ಗಮನದಲ್ಲಿಟ್ಟುಕೊಂಡು ಸಮಕಾಲೀನ ಸಂದರ್ಭವನ್ನು ವಿಶ್ಲೇಷಿಸುವಾಗ ಕೊನೆಯ ಸಾಲು ಧ್ವನಿಪೂರ್ಣವಾಗಿ ಮುಕ್ತಾಯವಾಗಿದೆ.

ಕವನಗಳ ವ್ಯಾಖ್ಯಾನಾನಂತರ ಒಂದು ಮಾತು ಹೇಳಬೇಕು: ಜಿ ಎಸ್.ಎಸ್. ಅವರು ತಮ್ಮ ಕವನಗಳಲ್ಲಿ ಸಮಕಾಲೀನ ಸಂದರ್ಭವನ್ನು ಗಾಂಧೀವ್ಯಕ್ತಿತ್ವದಲ್ಲಿಟ್ಟು ಪರೀಕ್ಷಿಸಿದ್ದಾರೆ; ಹೀಗೆ ಮಾಡುವಾಗ ಗಾಂಧಿ ಎಲ್ಲೂ ಯಾವ ಕಾರಣಕ್ಕೂ ಪ್ರಶ್ನಾರ್ಹರಾಗುವುದಿಲ್ಲ. ಪ್ರಶ್ನೆಗಾಗಿ ಪ್ರಶ್ನಿಸಬೇಕೆಂದು ನನ್ನ ಅಭಿಪ್ರಾಯವಲ್ಲ; ಸಮಕಾಲೀನ ಸ್ಥಿತಿಯನ್ನು ಅವರ ವ್ಯಕ್ತಿತ್ವದ ನಡುವೆ ಪರೀಕ್ಷಿಸಿದಂತೆ, ಆ ವ್ಯಕ್ತಿತ್ವ;—ವಿಚಾರಗಳ ಮೊತ್ತವನ್ನು ಸಮಕಾಲೀನ ಸಮಾಜಕ್ಕೆ ಸೂಕ್ತವೆನ್ನಿಸಬಹುದಾದ ತಾತ್ತ್ವಿಕ ಧೋರಣೆಗೆ ಉಜ್ಜಿ ನೋಡುವುದು ಇವತ್ತು ಹೆಚ್ಚು ಲಾಭಪ್ರದವಾದುದು; ಇಂಥ ಕಡೆ ವ್ಯಕ್ತಿತ್ವದ ವೈಭವೀಕರಣ ಮಾತ್ರವಾಗದೆ ವಿಚಾರಗಳ ಘರ್ಷಣೆಗೆ ಅವಕಾಶವಿದ್ದು ವ್ಯಾಪ್ತಿ ದೊಡ್ಡದಾಗುತ್ತದೆ: ಇದು ಅಗತ್ಯವೂ ಹೌದು.

## ಜಿ. ಎಚ್. ನಾಯಕ್

# ಮಬ್ಬಿನಿಂದ ಮಬ್ಬಿಗೆ

ಕವಿ ತಿಳಿಸಿರುವಂತೆ 'ಮಾನವ' ಮತ್ತು ಆತನ ಅಂತರಂಗ ಹಾಗೂ 'ಮಾನವ' ಮತ್ತು ಕಾಲ—ಬದುಕಿನ ಸಮಸ್ಯೆಯ ಈ ಎರಡು ಮುಖಗಳ ವಿವೇಚನೆ 'ದೀಪದ ಹೆಜ್ಜೆ'ಯ ವಸ್ತು. 'ಮಬ್ಬಿನಿಂದ ಮಬ್ಬಿಗೆ', ಮುಖ್ಯವಾಗಿ ಎರಡನೆಯ ಗುಂಪಿಗೆ ಸೇರಿಸಬಹುದಾದ ಕವನ. ಮುಂಜಾವಿನ ಆರು ಘಂಟೆಯಿಂದ ಸಂಜೆ ಏಳು ಘಂಟೆಯ ವರೆಗೆ ನಡೆದ ದಿನಮಾನ, ಚೈತ್ರ, ಆಷಾಢ, ಶ್ರಾವಣ, ಮಾಗಿ ಮೊದಲಾದವುಗಳಿಂದ ಧ್ವನಿತವಾಗುವ ಋತುಮಾನ ಇವು ಕಾಲದ ಹಿನ್ನೆಲೆಯನ್ನು ಸೃಷ್ಟಿಸುವ ಪ್ರತಿಮೆಗಳಾಗಿವೆ.

ಕಾಲಕಾಲಕ್ಕನುಗುಣವಾಗಿ ಬದುಕು ಮಜಲು ಮಜಲುಗಳನ್ನು ಏರಿ ಮಜಲು ಮಜಲುಗಳನ್ನು ಇಳಿದುಬರುತ್ತದೆ. ಕಾಲಗತಿಯ ತಾಳಕ್ಕನುಗುಣವಾಗಿ ಈ ಬದುಕಿನ ಗತಿ ಬದಲಾಗುತ್ತದೆ. ಒಮ್ಮೊಮ್ಮೆ ತನ್ನತನದ ಅರಿವಿನಿಂದ ಕಾಲವನ್ನು ಹಿಂದಕ್ಕೆ ತಿರುಗಿಸಲು ಒದ್ದಾಡುತ್ತದೆ. ಆದರೆ ಸಾಧ್ಯವಾಗದೆ ತನ್ನ ಅಸಹಾಯಕತೆಯ ಅರಿವಾಗಿ ಅದರ ನಿಯತಿಗೆ ತಲೆಬಾಗುತ್ತದೆ. 'ಕತ್ತಲೆಯ ಬಸಿರು ಬೆಸಲಾದ ಬಂಗಾರ ಮೋರೆಯ ಕುವರ'ನ ಕಣ್ಣುಗಳು ಕೊನೆಯಲ್ಲಿ 'ಮನೆಯಂಗಳದ ಮಬ್ಬು ಬೆಳಕಿನ ನಡುವೆ' ತಡವರಿಸುವುದನ್ನು ಕಾಣುತ್ತೇವೆ. ಮೊದಲೂ ಮಬ್ಬು: ಕೊನೆಯೂ ಮಬ್ಬು; ಮಧ್ಯೆ ಬದುಕು. ಈ ಬದುಕು ಮಬ್ಬಿನಿಂದ ಮಬ್ಬಿಗೆ ನಡೆದ ಪಯಣ. "ಹೀಗಾಗಬಾರದು ಬದುಕು, ಅದಕ್ಕೊಂದು ನಂಬುಗೆ ಬೇಕು; ಆ ನಂಬುಗೆಯಲ್ಲಿ ಸತ್ವವಿರಬೇಕು, ಹಾಗಾದರೆ ಬದುಕು ಸಾರ್ಥಕವಾದೀತು"—ಎನ್ನುವುದು ಈ ಕವಿಯ ನಂಬಿಕೆ. ಬದುಕಿಗೊಂದು ಬಲವಾದ ನಂಬಿಕೆ ಇಲ್ಲದ ಸಾಮಾನ್ಯ ಚೇತನದ ಹುಟ್ಟು, ಬೆಳವಣಿಗೆ, ಅಳಿವು—ಈ ಕವನದ ಮೂಲವಸ್ತು.

> ಆರು ಘಂಟೆಯ ಮೊಳಗು;
> ಮೂಡಣದ ಹೆರಿಗೆ ಮನೆಯಲ್ಲಿ ಸಡಗರವೊ ಸಡಗರ
> ಕತ್ತಲಿನ ಬಸಿರು ಬೆಸಲಾದ ಬಂಗಾರ ಮೋರೆಯ ಕುವರ ಬಂದ,
> ಉಲ್ಲಾಸಗಳ ತಂದ

ಸೂರ್ಯೋದಯ ಕವನದ ನಾಯಕನ ಜನನ ಆಗಿರುವುದನ್ನು ಸೂಚಿಸಲಾಗಿದೆ. ಮಗು ಹುಟ್ಟಿದ ಮೇಲೆ

ಜೋಯಿಸರು ಪಂಚಾಂಗವನು ತಿರುವಿ,
ಸಕಲ ಗ್ರಹಬಲಸ್ಥಿತಿಯ ನೋಡಿ, ಕುಂಡಲಿ ಬರೆದು
ಮರಳಿದರು ಮನೆಗೆ.

ಜಾತಕರ್ಮ ಕ್ರಿಯೆಯಾಯಿತು.

ಅಂಬೆಗಾಲಿಟ್ಟು ಹೊಸಿಲು ದಾಟಿತು ಬಿಸಿಲು-
ಬಾಗಿಲಲಿ ಹಾಲ್ ಕರೆವ ಹಸು ಕೊರಳ ಘಂಟೆದನಿ
ತುಂಬು ಕೆಚ್ಚಲಿನಲ್ಲಿ ಮೊಗವಿಟ್ಟ ಮುದ್ದು ಕರು.
'ಕಾ' ಎನ್ನುವ ಕಾಗೆ, ಚಿಲಿಪಿಲಿ ಗುಬ್ಬಿ, ಬಾಲವಾಡಿಸ ನಾಯಿ
ಸೋಜಿಗದ ಹೊನಲು

'ಅಂಬೆಗಾಲಿಟ್ಟು ಹೊಸಿಲು ದಾಟಿತು ಬಿಸಿಲು' ಸೂರ್ಯನ ಬಿಸಿಲು ಕ್ರಮವಾಗಿ ಏರುತ್ತಿರುವುದೂ ಮಗು ಅಂಬೆಗಾಲಿಟ್ಟು ಹೊಸಿಲು ದಾಟುವವರೆಗೆ ಬೆಳೆದಿರುವುದೂ ಸೂಚಿತವಾಗಿವೆ. 'ಬಾಗಿಲಲಿ ಹಾಲ್ ಕರೆವ ಹಸು ಕೊರಳ ಘಂಟೆದನಿ, ತುಂಬು ಕೆಚ್ಚಲಿನಲ್ಲಿ ಮೊಗವಿಟ್ಟ ಮುದ್ದುಕರು. 'ಕಾ' ಎನುವ ಕಾಗೆ, ಚಿಲಿಪಿಲಿ ಗುಬ್ಬಿ, 'ಬಾಲವಾಡಿಸ ನಾಯಿ' ಬಾಹ್ಯ ಪ್ರಪಂಚದ ಎಲ್ಲ ವ್ಯಾಪಾರಗಳೂ ಮಗುವಿಗೆ 'ಸೋಜಿಗದ ಹೊನಲು.' ಪ್ರಾತಃಕಾಲದ ಸಹಜ ವ್ಯಾಪಾರಗಳು ಈ ಮೂಲಕ ಚಿತ್ರಿತವಾಗಿವೆ.

ಏಳು ಗಂಟೆಯ ಮೊಳಗು,
ಏಳರಿಂದ ಎಂಟರ ತನಕ ಸದಾ
ಮಲ್ಲಿಗೆಯ ಮಳೆಗರೆವ ಕಣ್ಣು ಎರಡೇ ಎರಡು
ಮೇಲ್ ಮುಗಿಲಲ್ಲಿ
ಕೆಳಗೆ ಹಸರು ಸೀರೆಯ ಮೆತ್ತೆ.
ಈ ನಡುವೆ ಬಾಯಿಟ್ಟು ಸೀಪಿದಾಗೆಲ್ಲ ಹಾಲಸು ಸುರಿಸ
ಚಂದ್ರ ಕುಂಭಗಳೆರಡು,
ಎಂದು ಯಾವಾಗಲೂ ಗಕ್ಕನೆಯ ನಿಂತು ಕೈಕೊಡದ ಸಲ್ಲಿ
ತುಟಿಯ ಬಟ್ಟಲಿನಲ್ಲಿ !

ಮಗು ತಾಯ ಮೊಲೆಹಾಲನ್ನು ಕುಡಿಯುತ್ತಿರುವ ಚಿತ್ರ 'ಮೇಲ್ ಮುಗಿಲಲ್ಲಿ' 'ಕೆಳಗೆ ಹಸರು ಸೆರಗಿನ ಮೆತ್ತೆ'—ಇವುಗಳ ಮೂಲಕ ಮೇಲಿನ ಮುಗಿಲು ಮತ್ತು ನೆಲದ ಹಸಿರ ಸಿರಿ ಇವನ್ನು ಸೂಚಿಸುವುದರ ಜೊತೆಗೆ ಸೂರ್ಯನ ಪರವಾದ ಇನ್ನೊಂದು ಅರ್ಥವನ್ನು ಧ್ವನಿಸಲು ಪ್ರಯತ್ನಿಸಿದಂತಿದೆ. ಆದರೆ ಅದು ಎಷ್ಟರಮಟ್ಟಿಗೆ ಸಾರ್ಥಕವಾಗಿದೆ, ಎನ್ನುವುದು ಪ್ರಶ್ನೆ. 'ಚಂದ್ರ ಕುಂಭಗಳೆರಡು' ತಾಯಿಪೆಯನ್ನೂ ಅದರ ತಣ್ಪನ್ನೂ ಧ್ವನಿಸುವಾಗ, ಚಂದ್ರ ಎಷ್ಟರಮಟ್ಟಿಗೆ ಸಾರ್ಥಕವಾದೀತು ಎನ್ನುವುದು ಇನ್ನೊಂದು ಪ್ರಶ್ನೆ. ಇಲ್ಲಿ ತಾಯ ದೃಷ್ಟಿಯ ಕೋಮಲತೆ, ವೈಶಾಲ್ಯ, ಆಕೆಯ ಹಸಿರು ಸೀರೆಯ ಸೆರಗು, ಎಂದೂ ಕೈಕೊಡದೆ ತಾಯೆದೆಯ ನಿರಂತರ ಧಾರೆಯಾಗಿ ಹರಿವ ಒಲವು—ಇಂಥ ನವುರಾದ ಭಾವನೆಗಳನ್ನು ಧ್ವನಿಸುವ ಪ್ರಯತ್ನವಿದೆ.

ಎಂಟು ಘಂಟೆ ಅದಿಗೊ ಉಗುರು ಬೆಚ್ಚಗೆ ಬಿಸಿಲು
ಸುತ್ತ ಗಿಡಮರಗಳಲಿ ಲಾಲಿ ಹಾಡುವ ಹಕ್ಕಿ.
ಮರದ ಬೊಂಬೆಗೂ ಜೀವ ಬಂದಿದೆ, ಕಲ್ಲು ಹರಳುಗಳಲ್ಲಿ
ಚಿನ್ನ-ರನ್ನ !
ಅ, ಅಗೋ ; ಕರೆಯುತಿದೆ ಪಾಠಶಾಲೆಯ ಘಂಟೆ
ಸ್ಲೇಟು ಪುಸ್ತಕವನ್ನು ಹೆಗಲಿಗೇರಿಸು ಹೊರಡು ;
ಅಲ್ಲಿ ಕಾದಿದ್ದಾರೆ 'ಮೇಷ್ಟ್ರು'
ತಿದ್ದು 'ಅ, ಆ, ಇ, ಈ' ಮಗ್ಗಿಯೊಪ್ಪಿಸು 'ಆಟ, ಊಟ, ಓಟ'
ಮೆಲ್ಲನೆಯೆ ಜಾರುತಿದೆ ಬೆಳಗು ಬಿತ್ತಿದ ಮಾಟ.

'ಎಂಟು ಗಂಟೆಗೆ ಅದಿಗೊ ಉಗುರು ಬೆಚ್ಚಗೆ ಬಿಸಿಲು' ಬಿಸಿಲು ಇನ್ನೂ ಮೇಲೇರಿರುವುದರ ಜೊತೆಗೆ ಮಗುವೂ ಬೆಳೆದಿರುವುದನ್ನು ಸೂಚಿಸುತ್ತದೆ. ಈಗ ಮಗು ಪ್ರಕೃತಿಯ ವಸ್ತುಗಳೊಂದಿಗೆ ತಾದಾತ್ಮ್ಯ ಹೊಂದುತ್ತದೆ. 'ಮರದ ಬೊಂಬೆಗೂ ಜೀವ ಬಂದಿದೆ, ಕಲ್ಲು ಹರಳುಗಳಲ್ಲಿ ಚಿನ್ನ-ರನ್ನ' ಅಚೇತನವಾದ ಮರದ ಬೊಂಬೆಯೂ ಅದಕ್ಕೆ ಸಚೇತನ ವಸ್ತುವಿನಷ್ಟು ಸತ್ಯ. ದೊಡ್ಡವರಾದ ನಮ್ಮ ದೃಷ್ಟಿಯಲ್ಲಿ ಚಿನ್ನ-ರನ್ನಗಳು ಕಲ್ಲಿಗಿಂತ ಹೆಚ್ಚು ಬೆಲೆಯುಳ್ಳವುಗಳಾದರೂ ಮಗುವಿಗೆ ಅದರಲ್ಲಿ ಭೇದವಿಲ್ಲ ಎಂಬ ಒಂದು ಅರ್ಥದ ಜೊತೆಗೆ 'ಚಿನ್ನ-ರನ್ನ' ಎಂಬ ಶಬ್ದಗಳು ಅವು ಪ್ರೀತಿಪಾತ್ರವಾದ ಜೀವಂತ ವಸ್ತುಗಳು ಎನ್ನುವ ಅರ್ಥವನ್ನೂ ಧ್ವನಿಸುತ್ತದೆ. 'ಅ, ಅಗೊ....ಮೇಷ್ಟ್ರು'—ಮಗುವಿಗೆ ಈಗ ಪಾಠಶಾಲೆಗೆ ಹೋಗುವ ವಯಸ್ಸು ಎನ್ನುವುದನ್ನು ಸೂಚಿಸುವುದರ ಜೊತೆಗೆ ಮಗುವಿಗೆ 'ಶಿಕ್ಷಣ' ಪ್ರಾರಂಭವಾಗುತ್ತದೆ ಎನ್ನುವುದು ಧ್ವನಿತವಾಗಿದೆ. 'ತಿದ್ದು ಅ, ಆ, ಇ, ಈ, ಮಗ್ಗಿಯೊಪ್ಪಿಸು, ಆಟ, ಊಟ, ಓಟ'—ಅದರ ಶಾಲೆಯ ಪ್ರಾಥಮಿಕ ಪಠ್ಯಕ್ರಮದ ಜೊತೆಗೆ ಅದಕ್ಕೆ ಬದುಕಿನ ಶಿಕ್ಷಣ ಕ್ರಮ ಪ್ರಾರಂಭವಾಗಿದೆ. ಹಿರಿಯರು ತಮ್ಮ ತಿಳುವಳಿಕೆಯನ್ನು, ನಂಬಿಕೆಯನ್ನು ಹೇರುವುದರಿಂದಾಗಿ ಮಗುವಿಗೆ 'ಮೆಲ್ಲನೆಯೆ ಜಾರುತಿದೆ ಬೆಳಗು ಬಿತ್ತಿದ ಮಾಟ' ಬಾಲ್ಯದ ಮುಗ್ಧತೆಯ 'ಮಾಟ'ದ ತೆರೆ ಸರಿಯುತ್ತಿದೆ. ಇಲ್ಲಿ 'ಸುತ್ತ ಮರಗಿಡಗಳಲಿ ಲಾಲಿ ಹಾಡುವ ಹಕ್ಕಿ' ಎಂಬ ಪಾದದ ಸಾರ್ಥಕತೆ ಏನು ಎನ್ನುವುದು ಪ್ರಶ್ನೆ.

ಹನ್ನೊಂದರಿಂದ ಹನ್ನೆರಡು
ಜಂತೆ ಜಂತೆಯ ತುಂಬ ಜೇನುಗೂಡು !
ಕಂಡ ಕಂಡುದನೆಲ್ಲ ಗುದ್ದುತಿದೆ ಮರಿಗೂಳಿ
ಹಗಲಿರುಳು ಮಗ್ನದಲಿ ಜೊನ್ನಗನಸಿನ ಲಾಳಿ
ಕದಡು ನೀರಿನ ಕೊಳದಿ ಮುಖದ ನೆರಳನು ನೋಡಿ
ಕ್ರಾಪು ತಿದ್ದುವ ಚಾಳಿ.
ಎದೆ ತುಂಬ ಮೊರೆಯುತಿದೆ ಹತ್ತು ದಿಕ್ಕಿನ ಗಾಳಿ !

—ಈಗ ಯೌವನ ಪ್ರಾಪ್ತವಾಗಿದೆ. 'ಜೇನುಗೂಡು' ಮಧುರ ಆದರ್ಶಗಳ ಸಂಕೇತವೂ ಆಗಿದೆ. 'ಮರಿಗೂಳಿ' ವಿಚಾರಶೂನ್ಯವಾದ ಕೇವಲ ದುಡುಕು, ಆವೇಶ ಮದಗಳ

ಸಂಕೇತ. ಮೊದಲ ಭಾಗ (ಪಾದ–೧೧) 'ತುಂಬು ಕೆಚ್ಚಲಿನಲ್ಲಿ ಮೊಗವಿಟ್ಟ ಮುದ್ದು ಕರು' ಈಗ ಕಂಡ ಕಂಡುದನೆಲ್ಲ ಗುದ್ದುವ ಮರಿಗೂಳಿ ಆಗಿದೆ. 'ಹಗಲಿರುಳು ಮುಗ್ಧದಲಿ ಜೊನ್ನಗನಸಿನ ಲಾಳಿ'—ಅನವರತ ಒಂದಾದ ಮೇಲೊಂದರಂತೆ ಮಧುರ ಸ್ವಪ್ನಗಳನ್ನು ಹೆಣೆಯುತ್ತಿರುವುದನ್ನು ಸೂಚಿಸುತ್ತದೆ. ಹಿಂದೆ ಹೇಳಿದ 'ಚಂದ್ರ'ನಂತೆ ಇಲ್ಲಿ 'ಹಗಲಿರುಳು' ಎಷ್ಟರಮಟ್ಟಿಗೆ ಸಾರ್ಥಕವಾಗಿದೆ ಎನ್ನುವುದು ಪ್ರಶ್ನೆ. ಮೊದಲ ಭಾಗದ ಸೋಜಿಗ ಹೋಗಿ ಈಗ ಕನಸು ಹೆಣೆಯುವುದು ಪ್ರಾರಂಭವಾಗಿದೆ. 'ಕದಡು ನೀರಿನ ಕೊಳದಿ ಮುಖದ ನೆರಳನು ನೋಡಿ ಕ್ರಾಪು ತಿದ್ದುವ ಚಾಳಿ'—ಯೌವನ ಸಹಜವಾದ narsistic sense ಹಾಗೂ ಸ್ಥಿಮಿತದಲ್ಲಿರದ ಮನಸ್ಸನ್ನು ನೇರಗೊಳಿಸುವ ಪ್ರಯತ್ನ ಇವುಗಳ ಸಂಕೇತ. 'ಚಾಳಿ' ಎನ್ನುವ ಪದಪ್ರಯೋಗ ಗಮನಾರ್ಹ. 'ಎದೆ ತುಂಬ ಮೊರೆಯುತಿವೆ ಹತ್ತು ದಿಕ್ಕಿನ ಗಾಳಿ'—ಎದೆಯಲ್ಲಿ ಗೊಂದಲದ ಆವರ್ತ (cyclones) ನಡೆದಿರುವ ಸಂಕೇತ

ತುಂಬಿದೂರಿನ ನಡುವೆ ಗೋಪುರದ ಗಡಿಯಾರ
ಕಾದ ಬಿಸಿಲಿನ ಎದೆಗೆ ಒಂದು ಗಂಟೆಯ ಬಡಿತ
ದೂರದಲಿ ಹಸಿರು ಚಪ್ಪರದೊಳಗೆ ಮದುವೆ ಬ್ಯಾಂಡಿನ ಮೋಡಿ
ಮೈ ತುಂಬ ಹೂ ಮುಡಿದು ಹುಚ್ಚಾದ ಮರ. ಚೈತ್ರದಲಿ
ಮೆರವಣಿಗೆ ಹೊರಟು ನಿಂತಿವೆ ನೋಡಿ.
ಚಿಕ್ಕೆ ಚಿಕ್ಕೆಗೆ ಒಂದು ಉಯ್ಯಾಲೆಯನು ತೂಗಿ
ದಿಗ್ದಿಗಂತದ ನೀಲ ಗಾಜು ಗೋಡೆಗೆ ತಾಗಿ
ಜೋಕಾಲಿಯಾಡುವ ಬಯಕೆ –
'ನಾ ನಿನಗೆ ನೀ ನನಗೆ ಜೇನಾಗುವಾ
ರಸದೇವ ಗಂಗೆಯಲಿ ಮೀನಾಗುವಾ.'

'ಹಸಿರು ಚಪ್ಪರದೊಳಗೆ ಮದುವೆ ಬ್ಯಾಂಡಿನ ಮೋಡಿ', 'ಮದುವೆ', ಗಮನಿಸಬೇಕು. ಹಿಂದೆ ಬಾಲ್ಯದ 'ಮಾಟ' ಸರಿದಿತ್ತು. ಆದರೆ ಈಗ ಯೌವನದ 'ಮೋಡಿ' ಇದೆ. ಜೀವಕ್ಕೆ ಕಟು ಸತ್ಯದ ಅರಿವು ಇನ್ನೂ ಆಗುವುದಿಲ್ಲ. 'ಮೈ ತುಂಬ ಹೂ ಮುಡಿದು ಹುಚ್ಚಾದ ಮರ ಚೈತ್ರದಲಿ ಮೆರವಣಿಗೆ ಹೊರಟು ನಿಂತಿವೆ ನೋಡಿ'—ಮದುವೆಯ ಮೆರವಣಿಗೆ ವೈಭವ ಇವೆಲ್ಲವನ್ನೂ ಧ್ವನಿಸುತ್ತವೆ. 'ಚೈತ್ರ' ಋತುಸೂಚಿಯಾಗಿದೆ. 'ಚಿಕ್ಕೆ ಚಿಕ್ಕೆಗೆ ಒಂದು ಉಯ್ಯಾಲೆಯನು ತೂಗಿ ದಿಗ್ದಿಗಂತದ ನೀಲ ಗಾಜುಗೋಡೆಗೆ ತಾಗಿ ಜೋಕಾಲಿ ಯಾಡುವ ಬಯಕೆ'—ಅನಂತವಾದ ಸುಖವನ್ನು ಪಡೆಯಬೇಕೆಂಬ ಬಯಕೆಯ ಸಂಕೇತ-ವಾಗಿದೆ. ಮುಂದಿನ 'ನಾ ನಿನಗೆ....ಮೀನಾಗುವಾ' ಕುವೆಂಪು ಅವರ 'ಜೇನಾಗುವಾ' ಕವನದ ಎರಡು ಸಾಲುಗಳು.

ಒಂದು, ಎರಡು, ಮೂರು –
ಬಾರಿಸಿತು ಗಡಿಯಾರ ತನ್ನ ಪಾಡಿಗೆ ತಾನು
ಅಯ್ಯೊ, ಯಾವಾಗ ಈ ಮುಳ್ಳು ಒಂದು ಎರಡನು ದಾಟಿ ಮೂರಕ್ಕೆ ಬಂದಿತೋ
ಹಿಡಿದುಕೊ ಅಲ್ಲೆ ಆ ಗಡಿಯಾರಗಳ ಮುಳ್ಳು ಭದ್ರ ;

ಬಿಡಬೇಡ ಮುಂದಕ್ಕೆ ಕೊಂಚಕಾಲ
ಗಡಿಯಾರ ನಕ್ಕಿತ್ತು 'ಎಂಥ ಚಪಲ !'

—ಹರೆಯದ ಸುಖದ ಸಂಭ್ರಮದಲ್ಲಿ ಕಾಲ ಗತಿಸಿದ್ದೂ ಗಮನಕ್ಕೆ ಬರದಷ್ಟು ಮೈ ಮರೆತಿತ್ತು. ಒಂದು, ಎರಡು ಮೀರಿದ್ದು ಗೊತ್ತಾಗಲೇ ಇಲ್ಲ. ಕಾಲ ಮೀರಿದ್ದು ಗೊತ್ತಾದಾಗ, ತಾನು ಮುದುಕನಾಗುತ್ತಿರುವೆನೆಂಬ ನಿಷ್ಠುರ ಸತ್ಯದ ಅರಿವಾದಾಗ ಆಗುವ ಯಾತನೆ 'ಅಯ್ಯೋ' ಪದದಿಂದ ಧ್ವನಿತವಾಗಿದೆ. ಕಾಲವನ್ನು ಹಿಂದಕ್ಕೆ ತಿರುಗಿಸಲು ಸಾಧ್ಯವಾಗದಿದ್ದರೆ ಕೊನೆಗೆ ಕೊಂಚಕಾಲವಾದರೂ ತಡೆಹಿಡಿಯಬೇಕೆಂಬಾಸೆ. ಆದರೆ 'ಗಡಿಯಾರ ನಕ್ಕಿತ್ತು ಎಂಥ ಚಪಲ!' ಕಾಲವನ್ನು ತಡೆಹಿಡಿಯಲು ಅವನು ಪ್ರಯತ್ನಿಸುತ್ತಿದ್ದರೆ ಸಮರ್ಥವಾದ ಕಾಲ ಅವನ ವ್ಯರ್ಥ ಚಾಪಲ್ಯಕ್ಕೆ ನಕ್ಕು ಮುಂದೆ ಸಾಗುತ್ತದೆ. 'ಅಯ್ಯೋ....ಬಂದಿತು' ಈ ಉದ್ದವಾದ ಪಾದದಲ್ಲಿ ವೇಗ, ಯಾತನೆ ಪ್ರಕಟವಾಗಿದೆ. ಜೊತೆಗೆ ನಿಡಿದಾದ ಉಸಿರನ್ನು ಹಿಡಿದು ಓದಬೇಕಾಗುತ್ತದೆ. 'ಬಂದಿತೋ' 'ಹಿಡಿದುಕೋ' ಪದಗಳ ಮೂಲಕ ದೈನ್ಯ ಧ್ವನಿತವಾಗಿದೆ.

ಆಷಾಢದಾಗಸದ ಗಾಳಿಪಟಗಳ ಮೇಲೆ ವಿರಹಿ ಯಕ್ಷನ ಸುಯ್ಲು
ಶ್ರಾವಣದ ಮಳೆ ಬಿಸಿಲು

'ಮೇಘದೂತ'ದ ಯಕ್ಷನ ಅಸಹಾಯಕತೆಯ ನಿಟ್ಟುಸಿರಿನ ನೆನಪನ್ನು ತಂದುಕೊಡುವುದರ ಜೊತೆಗೆ ಯೌವನ ಸುಖದ ವಿರಹವನ್ನನುಭವಿಸುತ್ತಿರುವ ಈ ಕವನದ ನಾಯಕನ ನಿಟ್ಟುಸಿರಿನ ವ್ಯರ್ಥತೆಯನ್ನೂ, ಅದರ ಹಿನ್ನೆಲೆಯ ದಾರುಣ ಯಾತನೆಯನ್ನೂ, ಧ್ವನಿಸುತ್ತದೆ. ಇಲ್ಲಿ ಕಾಲದ ನಿಯತಿಯನ್ನು ಮೀರಲಾರದೆ ತನ್ನ ಸುಖದಿಂದ ವಂಚಿತವಾದ ಇವನ ಅಸಹಾಯಕತೆಯ ಚಿತ್ರವಿದೆ. 'ಶ್ರಾವಣ', 'ಆಷಾಢ' ಋತುಮಾನ ಸೂಚಿಯಾಗಿವೆ. 'ಶ್ರಾವಣದ ಮಳೆಬಿಸಿಲು' ಸಂಸಾರದ ಕಷ್ಟಸುಖಗಳನ್ನು ಸೂಚಿಸುತ್ತವೆಯೆ? ಒಟ್ಟಿನಲ್ಲಿ ಇಲ್ಲಿ ಬಾಲ್ಯದ ಸೋಜಿಗ, ಯೌವನದ ಕನಸು ಹೆಣೆಯುವುದು, ಇಳಿ ವಯಸ್ಸಿನ ಅಸಹಾಯಕತೆ ಪ್ರಾಪ್ತವಾಗಿವೆ.

ಗದ್ದೆಯಲಿ ತೆನೆದೂಗುತಿವೆ ಪೈರು :
ನೀಲಿಯಂಗಳದಲ್ಲಿ ಮೋದ ಮಕ್ಕಳ ಕೇಕೆ
ಬಿಳಲು ಬಿಡುತಿವೆ ವೃಕ್ಷ ಟೊಂಗೆ ಟೊಂಗೆಯ ತುಂಬ
ಹಕ್ಕಿ ತೊಟ್ಟಿಲ ಕಟ್ಟಿ ಜೋಗುಳವ ಹಾಡುತಿವೆ
ಮೈಗೆ ಹೆಣೆದಿವೆ ಬಳ್ಳಿ ಅಲ್ಲಿಂದ ಇಲ್ಲಿಂದ
ಆಗಾಗ ಒಮ್ಮೊಮ್ಮೆ ಬಂದು ಕಾಡಿದೆ ಪ್ರಶ್ನೆ ;
ನಾ ಬಂದುದೆಲ್ಲಿಂದ ?

"ಗದ್ದೆಯಲಿ ತೆನೆದೂಗುತಿವೆ ಪೈರು" ಸಂತತಿಯ ಸಂಕೇತ. ಈ ಪಾದವೇ ವಿವಕ್ಷಿತಾರ್ಥವನ್ನು ಧ್ವನಿಸುವುದರಿಂದ ಮುಂದಿನ ಪಾದಗಳ ಸಾರ್ಥಕತೆಯೇನು ಎನ್ನುವುದು ಯೋಚನೆ ಮಾಡಬೇಕಾದ ಅಂಶ. ಅಂಗಳದಲ್ಲಿ ಮಕ್ಕಳ ಕೇಕೆಯನ್ನೂ, ನೀಲಿಯಂಗಳ

ದಲ್ಲಿ ನೋಡಗಳ ಕೇಕೆಯನ್ನೂ ಧ್ವನಿಸುವ ಹವಣಿಕೆಯಿದೆ. ಅದಾದಮೇಲೆ ಒಂದು ವೃಕ್ಷದ ಪ್ರತಿಮೆಯ ಮೂಲಕ ಸಂಸಾರದ ವ್ಯಾಪ್ತಿಯನ್ನು ಸೂಚಿಸ ಹೊರಟಿದ್ದಾರೆ. 'ತೊಟ್ಟಿಲು' 'ಜೋಗುಳ' ಪದಗಳೂ ಸಂತತಿಯನ್ನು ಧ್ವನಿಸುವ ಸಂಕೇತಗಳೇ ಆಗಿವೆ. 'ವೃಕ್ಷ' ಮತ್ತು 'ಹಕ್ಕಿ'—ಇವುಗಳ ಸಾರ್ಥಕತೆಯೇನು? ಎನ್ನುವುದು ಪ್ರಶ್ನೆ. ('ಸುತ್ತ ಗಿಡಮರಗಳಲಿ ಲಾಲಿ ಹಾಡುವ ಹಕ್ಕಿ') 'ಬಳ್ಳಿ ಅಲ್ಲಿಂದ ಇಲ್ಲಿಂದ'—ಬಳ್ಳಿ ಪರಪುಷ್ಟದ (parasite) ಸಂಕೇತವಾದಂತೆ ಬಂಧನದ ಸಂಕೇತವೂ ಆಗಿದೆ. 'ಆಗಾಗ ....ಎಲ್ಲಿಂದ?'—ಸಂಸಾರದ ಬಂಧನದಲ್ಲಿದ್ದಾಗ 'ನಾ ಬಂದುದೆಲ್ಲಿಂದ' ಎಂಬ ಪಾರಮಾರ್ಥಿಕ ಪ್ರಶ್ನೆ ಆ ಜೀವಕ್ಕೆ ಬಂದು ಕಾಡುತ್ತದೆಯೆ ಹೊರತು ಅನವರತವೂ ಕಾಡದು ಎನ್ನುವುದು ವಿವಕ್ಷಿತಾರ್ಥ.

ಗಂಟೆ ಹೊಡೆಯಿತು ನಾಲ್ಕು
ಟೆನ್ನಿಸ್ಸಿನಾಟದಲಿ ಏನೊ ಬಳಲಿಕೆ ಸುಸ್ತು ;
ಮಹಡಿ ಮೆಟ್ಟಲನು ಹತ್ತುವಾಗಲೂ ಕೂಡ ಎಂದಿಲ್ಲದಾಯಾಸ
ಜಂತೆಯಲಿ ಗೂಡು ಕಟ್ಟಿದ ಜೇನು ಹಾರಿ ಹೋಗಿವೆ, ಈಗ
ತೂಗುತ್ತಲಿದೆ ಖಾಲಿ ಗೂಡು.
ಅಲ್ಲಲ್ಲಿ ಜೇಡಬಲೆಗಳ ಜಾಲ, ಸುಣ್ಣ ಬಣ್ಣವ ಬಳಿದ ಗೋಡೆಯಲ್ಲೂ ಕೂಡ
ಸುಕ್ಕು, ತರಕಲು, ಬಿರುಕು ;
ಛಾವಣಿಯ ಹೆಂಚು ಮಳೆ ಬಿಸಿಲು ಗಾಳಿಯಲಿ ಉದುರಿ
ಈಗೀಗ ಜಿನುಗುತಿದೆ ವಾಗಿ ಮಂಜಿನ ಸೋನೆ
ಆಗಾಗ ಸುಣ್ಣ ಬಣ್ಣವ ಹೊಡೆದು ರಿಪೇರಿ ಮಾಡಿದರೆ
ಇನ್ನರ್ಧ ಶತಮಾನ ಗ್ಯಾರಂಟಿ.

—ಕಾಲ ಕ್ರಮಿಸುತ್ತಿದೆ, ನಾಲ್ಕು ಗಂಟೆ ಹೊಡೆಯಿತು. ಈಗ ಪ್ರತಿಯೊಂದು ಕೆಲಸದಲ್ಲಿಯೂ ಆಯಾಸ ಕಂಡುಬರುತ್ತಲಿದೆ. ಎರಡನೆಯ ಭಾಗದಲ್ಲಿನ 'ಕಂಡ ಕಂಡದುನೆಲ್ಲ ಗುದ್ದುವ' ಮರಿಗೂಳಿಗೆ ಈಗ ಎಂದಿಲ್ಲದ ಆಯಾಸವಾಗುತ್ತಿದೆ. 'ಜಂತೆಯಲಿ ಗೂಡು ಕಟ್ಟಿದ ಜೇನು ಹಾರಿ ಹೋಗಿವೆ' ತಲೆಯಲ್ಲಿ ತುಂಬಿದ್ದ ಮಧುರ ಆದರ್ಶಗಳೊಂದೂ ಈಗ ಇಲ್ಲ ('ಜಂತೆ ಜಂತೆಯ ತುಂಬ ಜೇನುಗೂಡು!' ನೆನಪು ಮಾಡಿಕೊಳ್ಳಬೇಕು) ಎನ್ನುವುದರ ಜೊತೆಗೆ ದೇಹದ ಶಕ್ತಿ ಕುಗ್ಗುತ್ತ ಬರುತ್ತಿರುವುದನ್ನೂ ಧ್ವನಿಸುತ್ತಿದೆ. 'ಅಲ್ಲಲ್ಲಿ ಜೇಡಬಲೆಗಳ ಜಾಲ'....ಮಂಜಿನ ಸೋನೆ—ಹಳೆಯ ಮನೆಯ ಚಿತ್ರ. ತಾನೇ ತನ್ನ ಬದುಕಿನಲ್ಲಿ ಮಾಡಿಕೊಂಡ ಯೋಚನೆ, ಅನುಭವಗಳ ಅವಶೇಷ ಕಾಣುತ್ತಿದೆ. 'ಸುಣ್ಣ ಬಣ್ಣವ ಬಳಿದ ಗೋಡೆಯಲ್ಲೂ ಕೂಡ ಸುಕ್ಕು, ತರಕಲು ಬಿರುಕು'—ಇದ್ದುದನ್ನೇ ಹೇಗೋ ಸರಿಪಡಿಸಿಕೊಳ್ಳಬೇಕೆಂಬ ಹಂಬಲ. ಈ ಪದಗಳ ಜೊತೆಗೆ 'ಗಡಿಯಾರದಡಿಯಲ್ಲಿ' ಕವನದ

ಕನ್ನಡಿಯೆದುರು ಒಂದೊಂದೆ ಬೆಳ್ನವಿರ
ಹಿಡಿದು ಕೀಳುವ ಚಪಲ ;

ಇಲ್ಲ ಅಂಗಡಿಯಿಂದ ಕಪ್ಪು ಬಣ್ಣವ ತಂದು
ಬಳಿದು ಕರ್‍ರಗೆ ಮಾಡಿ, ಬೈತಲೆ ತೆಗೆದು
ಹಳೆಯ ಸೂಟನು ಮತ್ತೆ ಇಸ್ತ್ರಿಮಾಡಿ
ತೊಟ್ಟು ಪೇಟೆಯ ತುಂಬ ಅಲೆವ ಬಯಕೆ.

ಎಂಬ ಸಾಲುಗಳಿಗೆ ಹೋಲಿಸಿ ನೋಡಬಹುದು. ಆದರೂ ಸುಕ್ಕು, ತರಕಲು, ಬಿರುಕು ಕಾಣಿಸಿಕೊಳ್ಳದೆ ಇರುವುದಿಲ್ಲ. ಇದೇ ಅರ್ಥವನ್ನು ಮುಂದಿನ ಪಾದಗಳೂ ಧ್ವನಿಸುತ್ತವೆ. ಜೀವನದ ಕಷ್ಟಕಾರ್ಪಣ್ಯಗಳ ಹೊಡೆತದಿಂದ, ಅನಿವಾರ್ಯವಾದ ಕಾಲಗತಿಯಿಂದ ಬದುಕು ಕುಸಿದಿದೆ. 'ಈಗೀಗ ಜಿನುಗುತಿದೆ ಮಾಗಿ ಮಂಜಿನ ಸೋನೆ.' 'ಮಾಗಿ' ಋತುಮಾನ ಸೂಚಿಯಾಗಿರುವಂತೆ ಕಾವು ಇಳಿದ ಬದುಕಿನ ಸಂಕೇತವೂ ಹೌದು. ಇನ್ನೂ ಮೇಲಿಂದ ಮೇಲೆ ಹಾಗೂ, ಹೀಗೂ ದೇಹ-ಮನಸ್ಸುಗಳನ್ನು ಕೊಂಚ ಕೊಂಚ ರಿಪೇರಿ ಮಾಡುತ್ತ-ಲಿದ್ದರೆ 'ಇನ್ನರ್ಧ ಶತಮಾನ ಗ್ಯಾರಂಟಿ'—ಈಗ ಬದುಕಿನ ಯಾತ್ರೆ ಅರ್ಧಶತಮಾನ ನಡೆದಿದೆ.

(ಈ ಸಾಲುಗಳನ್ನು 'ಗಡಿಯಾರದಡಿಯಲ್ಲಿ' ಕವನದ 'ತಲೆ ತುಂಬ ಮಾಗಿಯ ಮುದ್ರೆ', ಕಮರಿದ ಕೆನ್ನೆ, ಮಾಸಿದ ಕಣ್ಣು—ಇವುಗಳೊಡನೆ ಹೋಲಿಸಿ ನೋಡಿ) ಕೊನೆಯದಾಗಿ 'ತೂಬನೆತ್ತಿದರೇನಂತೆ ಬಿಡು, ಆ ನೀರಗಂಟಿ'—ಈ ಪಾದದ ಸಾರ್ಥಕತೆ ಯೇನು, ಎನ್ನುವುದು ಪ್ರಶ್ನೆ.

ನಿಷ್ಕರುಣ ಗಡಿಯಾರ—
ಮುಳ್ಳು ನಾಲ್ಕನು ದಾಟಿ ಐದನು ಮುಟ್ಟಿ ಮುಂದೆ ಸಾಗುತ್ತಲಿದೆ
ಸೂರ್ಯನ ಶಾಖ ಕಡಿಮೆಯಾಗುತ್ತಲಿದೆ ದಿನದಿನಕೆ;
ಬಾನ ನೀಲಿಗೆ ಹೊಳಪು ಸಾಲದು; ನೀರಿನಲಿ ರುಚಿಯಿಲ್ಲ
ಏನು ಕಾಲವೊ ಏನೊ.
ಸಂಜೆ ಬಾನಿನ ತುಂಬ ಹಗಲ ನೆನಪಿನ ಚಿತ್ರ
ಮನೆಯಂಗಳದ ಮಬ್ಬು ಬೆಳಕಿನ ನಡುವೆ ತಡವರಿಸುತಿವೆ ಕತ್ತು
ಮಹಡಿ ಮೆಟ್ಟಿಲ ಮೇಲೆ ಯಾರ್‍ಯಾರದೋ ಹೆಜ್ಜೆ.
ಗೋಡೆ ಗಡಿಯಾರದಲಿ ಗಂಟೆ ಹೊಡೆದಿದೆ ಏಳು
ಅದೋ ಕೇಳು,
ಯಾರೋ ಬಡಿಯುತ್ತಿದ್ದಾರೆ ಬಾಗಿಲ ಹೊರಗೆ
ಒಂದೇ ಸಮನೆ
ಏಳು, ಬಾಗಿಲನು ತೆಗೆ, ಹೆದರದಿರು ಕೊನೆಗೆ.

—ಕಾಲಕ್ಕೆ ಕರುಣೆಯಿಲ್ಲ. ಗಡಿಯಾರದ ಮುಳ್ಳು ನಾಲ್ಕನ್ನು ದಾಟಿ ಐದನ್ನು ಮುಟ್ಟಿ ಮುಂದೆ ಸಾಗುತ್ತಲಿದೆ. 'ಸೂರ್ಯನ ಶಾಖ ಕಡಿಮೆಯಾಗುತ್ತಲಿದೆ ದಿನದಿನಕೆ'—ಬಿಸಿಲಿನ ಹಾಗೂ ದೇಹದ ಕಾವು ಕಡಿಮೆಯಾಗುತ್ತಲಿದೆ. ಇಲ್ಲಿ 'ದಿನದಿನಕೆ' ಪದಪ್ರಯೋಗ ಸಾರ್ಥಕವಾಗಿದೆಯೆ? ಎನ್ನುವುದು ಪ್ರಶ್ನೆ [ಕವಿ 'ದೀಪದ ಹೆಜ್ಜೆ' ಮುನ್ನುಡಿಯಲ್ಲಿ 'ಕ್ಷಣ

ಕ್ಷಣವೂ' (ಪುಟ ೪ : ಸಾಲು-೩) ಎನ್ನುವ ಪದವನ್ನು ಬಳಸಿರುವುದನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬಹುದಾಗಿದೆ.]

'ಬಾನ ನೀಲಿಗೆ ಹೊಳಪು ಸಾಲದು ನೀರಿನಲಿ ರುಚಿಯಿಲ್ಲ; ಏನು ಕಾಲವೊ ಏನೊ!' ಮುದಿ ಕಣ್ಣಿಗೆ ಯಾವ ಹೊಳಪೂ ಕಾಣಿಸುವುದಿಲ್ಲ. ನಾಲಗೆ ಎಲ್ಲದರಲ್ಲಿಯೂ ರುಚಿಯನ್ನು ಕಳೆದುಕೊಳ್ಳುತ್ತದೆ. ತನ್ನ ಹಿಂದಿನ ದಿನಗಳ ವೈಭವದ ನೆನಪಿನ ನಿಕಷದಿಂದ ವರ್ತಮಾನವನ್ನು ಒರೆಹಚ್ಚಿ ನೋಡುತ್ತವೆ. ಆಗ ಆ ಜೀವಕ್ಕೆ ಅತೃಪ್ತಿ ಕಾಣುತ್ತದೆ. ಆಗ 'ಏನು ಕಾಲವೊ ಏನೊ' ಎಂಬ ಉದ್ಗಾರ ಸಹಜವಾಗಿ ಹೊರಡುತ್ತದೆ. ತಾನು ಬದಲಾಗಿರುವೆನೆಂಬ ಅರಿವಿಗಿಂತ ಹೆಚ್ಚಾಗಿ ಕಾಲವೇ ಬದಲಾಗಿದೆಯೆಂಬ ಭಾವನೆ ಬಲಗೊಳ್ಳುತ್ತದೆ.

'ಸಂಜೆ ಬಾನಿನ ತುಂಬ ಹಗಲ ನೆನಪಿನ ಚಿತ್ರ'—ಈ ಬಾಳಿಗೆ ಹಿಂದಿನ ನೆನಪೇ ಇಂದು ಊರುಗೋಲು. ಇಂದು ಅಂಥದೇನೂ ನಡೆಯುವಂತಿಲ್ಲ. ಇವೇ ಭಾವವನ್ನು ಧ್ವನಿಸುವ ಪಾದಗಳು 'ಗಡಿಯಾರದಡಿಯಲ್ಲಿ' ಕವನದಲ್ಲಿಯೂ ಬರುತ್ತವೆ.

> ಗೋಡೆಯ ಮೇಲೆ ತೂಗುತಿದೆ ಹರಯಗಳ ಹೊಂಬಿಸಿಲು
> ಹಿಡಿದು ತೆಗೆಸಿದ ಫೋಟೊ
> ಅದರ ಮೇಲೆ ತೂಗುತಿದೆ ಈ ದೊಡ್ಡ ಗಡಿಯಾರ
> ಟಿಕ್, ಟಿಕ್, ಟಿಕ್.

ಈಗ ಮಬ್ಬು ಪ್ರಾರಂಭವಾಗಿದೆ. ಮುದಿಗಣ್ಣಿಗೆ ಬೆಳಕು ಸಾಲದೆ ಅದು ತಡವರಿಸುವುದನ್ನು ಸೂಚಿಸುವುದರ ಜೊತೆಗೆ ಮೃತ್ಯುವಿನ ಕರಾಳ ರಾತ್ರಿಗೆ ಪೂರ್ವಭಾವಿಯಾದ ಮುಪ್ಪಿನ ಮಬ್ಬನ್ನೂ ಅದರ ಅರಿವಿನಿಂದ ಉಂಟಾಗುವ ಮಾನಸಿಕ ನಿರಾಸೆ, ಕಳವಳ ಇವುಗಳನ್ನೂ ಧ್ವನಿಸಲಾಗಿದೆ. 'ಮಹಡಿ ಮೆಟ್ಟಲ ಮೇಲೆ ಯಾರ್ಯಾರದೋ ಹೆಜ್ಜೆ'—ಹಿಂದಿನ 'ಮಹಡಿ ಮೆಟ್ಟಲನು ಹತ್ತುವಾಗಲೂ ಕೂಡ ಎಂದಿಲ್ಲದಾಯಾಸ'—ಈ ಪಾದವನ್ನು ನೆನಪಿಟ್ಟು ಕೊಂಡು ಇದನ್ನು ಅರ್ಥೈಸಬೇಕು. ಮಹಡಿ ಮೆಟ್ಟಲುಗಳನ್ನು ಹತ್ತುತ್ತಿರುವಾಗ ಅವನಿಗೆ ಮೃತ್ಯುವಶರಾದವರ ಹೆಜ್ಜೆ ಕಾಣಿಸುತ್ತದೆ. 'ಯಾರ್ಯಾರದೋ ಹೆಜ್ಜೆ' ಎನ್ನುವಲ್ಲಿನ ಅಸ್ಪಸ್ತತೆ ಗಮನಿಸಬೇಕಾದದ್ದು. ಇಂಥವರದೇ ಎಂದು ಹೇಳುವಹಾಗಿಲ್ಲ. ಆ ಬದುಕು ಗಳು 'ದೀಪದ ಹೆಜ್ಜೆ'ಯನ್ನು ಮೂಡಿಸದೆ ಹೋಗಿವೆ. ಇವುಗಳ ದಾರಿಯಲ್ಲಿಯೇ, ಅದೇ ರೀತಿಯಲ್ಲಿಯೇ ಇವನೂ ಸಾಗುತ್ತಿದ್ದಾನೆ. ಇನ್ನು ಮುಂದೆ ಇವನ ಹೆಜ್ಜೆಯೂ 'ಯಾರ್ಯಾರದೋ ಹೆಜ್ಜೆ'ಯಲ್ಲಿಯೇ ಸೇರಿಹೋಗುತ್ತದೆ ಎನ್ನುವ ಧ್ವನಿ ಇದೆ. ('ದೀಪದ ಹೆಜ್ಜೆ'ಯ ಮುನ್ನುಡಿ (ಪುಟ ೪)ಯಲ್ಲಿ "ವಯಸ್ಸಾದಂತೆ ಒಂದೊಂದೇ ಮೈಲಿಗಲ್ಲುಗಳನ್ನು ಎಣಿಸುತ್ತ ನಡೆಯುವ ಇವನಿಗೆ ಮಹಡಿ ಮೆಟ್ಟಲ ಮೇಲೆ ಯಾರ್ಯಾರದೋ ಹೆಜ್ಜೆಯ 'ಸದ್ದು' ಕೇಳಿಸುತ್ತದೆ" ಎಂದು ಬರೆದಿದ್ದಾರೆ. ಆದರೆ ಸದ್ದು ಎಂದಷ್ಟೇ ಅರ್ಥೈಸಬೇಕೆ? ಹಾಗೆ ಅರ್ಥೈಸಿದರೆ ಅನುಭವದ ಸಾಂದ್ರತೆ ಕಡಮೆಯಾದಂತೆನಿಸುವುದಿಲ್ಲವೆ? ಇದು ಯೋಚಿಸಬೇಕಾದ ಅಂಶ.)

'ಗೋಡೆ ಗಡಿಯಾರದಲಿ ಗಂಟೆ ಹೊಡೆದಿದೆ ಏಳು'—ಇನನ ಆಯುಷ್ಯದ ಕೊನೆಯ ಘಂಟೆ ಬಾರಿಸಿತು. (ಹಿಂದೆ ತುಂಬಿದೂರಿನ ನಡುವೆ ಗೋಪುರದ ಗಡಿಯಾರ ಬಡಿದರೆ ಈಗ ಗೋಡೆ ಗಡಿಯಾರ ಹೊಡೆದಿದೆ. ಮೊದಲಲ್ಲಿ ಮನೆಯ ಗಡಿಯಾರ, ಮಧ್ಯೆ ಗೋಪುರದ ಗಡಿಯಾರ, ಕೊನೆಯಲ್ಲಿ ಮತ್ತೆ ಮನೆಯ ಗಡಿಯಾರ. ಮಧ್ಯದ ಗೋಪುರ ವಿಶೇಷಾರ್ಥವನ್ನು ಧ್ವನಿಸುವ ಶಕ್ತಿ ಇದೆಯೆ ಯೋಚಿಸಬೇಕು). ಯಾರೋ ಹೊರಗೆ ನಿಂತು ಬಾಗಿಲನ್ನು ಬಡಿಯುತ್ತಿದ್ದಾರೆ. ಮೃತ್ಯು ಕರೆಯುತ್ತಿದೆ. 'ಏಳು ಬಾಗಿಲನು ತೆಗೆ' ಅದರಲ್ಲೂ ಸಾವಿನ ಹೆದರಿಕೆ ಈ ಜೀವಕ್ಕೆ ಅನಿವಾರ್ಯ ಅಂಗವಲ್ಲವೆ? 'ಅಯ್ಯೋ, ಯಾವಾಗ ಈ ಮುಳ್ಳು ಎರಡನು ದಾಟ ಮೂರಕ್ಕೆ ಬಂದಿತೋ, ಹಿಡಿದುಕೋ ಗಡಿಯಾರಗಳ ಮುಳ್ಳು ಭದ್ರ' ಎಂದು ಹಲುಬುವ ಚಪಲ ಅದಕ್ಕೆ ಸಹಜ. ಆದುದರಿಂದ ಈ ಕೊನೆಯ ಪಾದದ ಸಾರ್ಥಕತೆಯೇನು ಎನ್ನುವುದು ಒಂದು ಪ್ರಶ್ನೆ. ಮಬ್ಬಿನಿಂದ ಬಾಗಿಲನು ತೆರೆದು ಬಂದವನು ತಿರುಗಿ ಮಬ್ಬಿಗೆ ಹೊರಡಲು ಬಾಗಿಲು ತೆರೆಯುತ್ತಲಿದ್ದಾನೆ. ಹೀಗೆ, ಈ ಬದುಕಿನ ಯಾತ್ರೆ 'ಮಬ್ಬಿನಿಂದ ಮಬ್ಬಿಗೆ.'

'ಮಬ್ಬಿನಿಂದ ಮಬ್ಬಿಗೆ' ಕವಿ ಶಿವರುದ್ರಪ್ಪನವರ ಇದುವರೆಗಿನ (೧೯೬೪) ಕಾವ್ಯ ಪ್ರಯೋಗ ಮತ್ತು ಸಿದ್ಧಿಯ ಪ್ರಾತಿನಿಧಿಕ ಕವನವೆಂದು ನನ್ನ ಅಭಿಮತ. ಇಲ್ಲಿ ಅನುಭವದ ಸಾಂದ್ರತೆ, ಪ್ರತಿಮೆಗಳು ಬೆಳೆದುಬಂದಿರುವ ಬಗೆ ಇತ್ಯಾದಿ ಅಂಶಗಳನ್ನು ಪ್ರತ್ಯೇಕವಾಗಿ ವಿವೇಚಿಸಿಲ್ಲ. ಸೂಕ್ಷ್ಮವಾಗಿ ಈ ಲೇಖನವನ್ನು ಗಮನಿಸಿದವರಿಗೆ ಆ ವಿಷಯವಾಗಿ ಅಲ್ಲಲ್ಲಿ ಸೂಚನೆ ಸಿಗಬಹುದಾಗಿದೆ. ಒಟ್ಟಿನಲ್ಲಿ, ಈ ಕವನವನ್ನು ಅಭ್ಯಸಿಸುವವರಿಗೆ ಇದು ಸಹಾಯಕವಾಗಬಹುದೆಂದು ತೋರುತ್ತದೆ.

# ಮಬ್ಬಿನಿಂದ ಮಬ್ಬಿಗೆ

ಆರುಗಂಟೆಯ ವೊಳಗು ;
ಮೂಡಣದ ಹೆರಿಗೆಮನೆಯಲ್ಲಿ ಸಡಗರವೋ ಸಡಗರ ;
ಕತ್ತಲಿನ ಬಸಿರು ಬೆಸಲಾದ ಬಂಗಾರ ಮೋರೆಯ ಕುವರ
ಬಂದ,
ಉಲ್ಲಾಸಗಳ ತಂದ.
ಜೋಯಿಸರು ಪಂಚಾಂಗವನು ತಿರುವಿ,
ಸಕಲ ಗ್ರಹಬಲಸ್ಥಿತಿಯ ನೋಡಿ, ಕುಂಡಲಿ ಬರೆದು
ಮರಳಿದರು ಮನೆಗೆ.
ಅಂಬೆಗಾಲಿಟ್ಟು ಹೊಸಿಲು ದಾಟಿತು ಬಿಸಿಲು—
ಬಾಗಿಲಲಿ ಹಾಲ್ ಕರೆವ ಹಸುಕೊರಳ ಗಂಟೆದನಿ,
ತುಂಬು ಕೆಚ್ಚಲಿನಲ್ಲಿ ಮೊಗವಿಟ್ಟ ಮುದ್ದು ಕರು,
'ಕಾ' ಎನ್ನುವ ಕಾಗೆ, ಚಿಲಿಪಿಲಿ ಗುಬ್ಬಿ, ಬಾಲವಾಡಿಪ ನಾಯಿ ;
ಸೋಜಿಗದ ಹೊನಲು.
ಏಳುಗಂಟೆಯ ವೊಳಗು :
ಏಳರಿಂದ ಎಂಟರತನಕ ಸದಾ
ಮಲ್ಲಿಗೆಯ ಮಳೆಗರೆವ ಕಣ್ಣು ಎರಡೇ ಎರಡು
ಮೇಲ್ ಮುಗಿಲಲ್ಲಿ,
ಕೆಳಗೆ ಹಸುರು ಸೆರಗಿನ ಮೆತ್ತೆ ;
ಈ ನಡುವೆ ಬಾಯಿಟ್ಟು ಚೀಪಿದಾಗೆಲ್ಲ ಹಾಲನು ಸುರಿವ
ಚಂದ್ರಕುಂಭಗಳೆರಡು,
ಎಂದು ಯಾವಾಗಲೂ ಗಕ್ಕನೆಯೆ ನಿಂತು ಕೈಕೊಡದ ನಲ್ಲಿ
ತುಟಿಯ ಬಟ್ಟಲಿನಲ್ಲಿ !
ಎಂಟು ಗಂಟೆಗೆ ಅದಿಗೊ ಉಗುರು ಬೆಚ್ಚಗೆ ಬಿಸಿಲು—
ಸುತ್ತ ಮರಗಿಡಗಳಲಿ ಲಾಲಿ ಹಾಡುವ ಹಕ್ಕಿ.
ಮರದ ಕೊಂಬೆಗೂ ಜೀವ ಬಂದಿದೆ ; ಕಲ್ಲು ಹರಳುಗಳೆಲ್ಲ

ಚಿನ್ನ–ರನ್ನ!
ಆ, ಅಗೊ, ಕರೆಯುತಿದೆ ಪಾಠಶಾಲೆಯ ಗಂಟೆ,
ಸ್ಲೇಟು ಪುಸ್ತಕವನ್ನು ಹೆಗಲಿಗೇರಿಸು, ಹೊರಡು;
ಅಲ್ಲಿ ಕಾದಿದ್ದಾರೆ 'ಮೇಷ್ಟ್ರು.'
ತಿದ್ದು 'ಅ ಆ ಇ ಈ', ಮಗ್ಗಿಯೊಪ್ಪಿಸು; 'ಆಟ ಊಟ ಓಟ.'
ಮೆಲ್ಲನೆಯೆ ಜಾರುತಿದೆ ಬೆಳಗು ಬಿತ್ತಿದ ಮಾಟ.
ಹನ್ನೊಂದರಿಂದ ಹನ್ನೆರಡು:
ಜಂತೆ ಜಂತೆಯ ತುಂಬ ಜೇನುಗೂಡು!
ಕಂಡ ಕಂಡುದನೆಲ್ಲ ಗುದ್ದುತಿದೆ ಮರಿಗೂಳಿ
ಹಗಲಿರುಳ ಮಗ್ಗದಲಿ ಜೊನ್ನಗನಸಿನ ಲಾಳಿ
ಕದಡು ನೀರಿನ ಕೊಳದಿ ಮುಖದ ನೆರಳನು ನೋಡಿ
ಕ್ರಾಪು ತಿದ್ದುವ ಚಾಳಿ
ಎದೆ ತುಂಬ ಮೊರೆಯುತಿವೆ ಹತ್ತು ದಿಕ್ಕಿನ ಗಾಳಿ!
ತುಂಬಿದೂರಿನ ನಡುವೆ ಗೋಪುರದ ಗಡಿಯಾರ—
ಕಾದ ಬಿಸಿಲಿನ ಎದೆಗೆ ಒಂದು ಗಂಟೆಯ ಬಡಿತ.
ದೂರದಲಿ ಹಸಿರು ಚಪ್ಪರದೊಳಗೆ ಮದುವೆ ಬ್ಯಾಂಡಿನ ಮೋಡಿ,
ಮೈತುಂಬ ಹೂ ಮುಡಿದು ಹುಚ್ಚಾದ ಮರ ಚೈತ್ರದಲಿ
ಮೆರವಣಿಗೆ ಹೊರಟು ನಿಂತಿವೆ ನೋಡಿ.
ಚಿಕ್ಕೆ ಚಿಕ್ಕೆಗೆ ಒಂದು ಉಯ್ಯಾಲೆಯನು ತೂಗಿ
ದಿಗ್ದಿಗಂತದ ನೀಲ ಗಾಜುಗೋಡೆಗೆ ತಾಗಿ
ಜೋಕಾಲಿಯಾಡುವ ಬಯಕೆ—
'ನಾ ನಿನಗೆ ನೀನೆನಗೆ ಜೇನಾಗುವಾ
ರಸ ದೇವ ಗಂಗೆಯಲಿ ಮೀನಾಗುವಾ.'
ಒಂದು, ಎರಡು, ಮೂರು—
ಬಾರಿಸಿತು ಗಡಿಯಾರ ತನ್ನ ಪಾಡಿಗೆ ತಾನು.
ಅಯ್ಯೊ, ಯಾವಾಗ ಈ ಮುಳ್ಳು ಒಂದು ಎರಡನು ದಾಟಿ ಮೂರಕ್ಕೆ
ಬಂದಿತೋ,

ಹಿಡಿದುಕೋ, ಅಲ್ಲೆ ಆ ಗಡಿಯಾರಗಳ ಮುಳ್ಳು, ಭದ್ರ;
ಬಿಡಬೇಡ ಮುಂದಕ್ಕೆ ಕೊಂಚ ಕಾಲ.
ಗಡಿಯಾರ ನಕ್ಕಿತು 'ಎಂಥ ಚಪಲ!'
ಆಷಾಢದಾಗಸದ ಗಾಳಿ ಪಟಗಳ ಮೇಲೆ ವಿರಹಿ ಯಕ್ಷನ ಸುಯ್ಲು;
ಶ್ರಾವಣದ ಮಳೆ ಬಿಸಿಲು; ಗದ್ದೆಯಲಿ ತೆನೆದೂಗುತಿವೆ ಪೈರು;

ನೀಲಿಯಂಗಳದಲ್ಲಿ ಮೋಡಮಕ್ಕಳ ಕೇಕೆ.
ಬಿಳಲು ಬಿಡುತಿದೆ ವೃಕ್ಷ, ಟೊಂಗೆ ಟೊಂಗೆಯ ತುಂಬ
ಹಕ್ಕಿ ತೊಟ್ಟಿಲ ಕಟ್ಟಿ ಜೋಗುಳವ ಹಾಡುತಿವೆ;
ಮೈಗೆ ಹೆಣೆದಿವೆ ಬಳ್ಳಿ ಅಲ್ಲಿಂದ ಇಲ್ಲಿಂದ;
ಆಗಾಗ ಒಮ್ಮೊಮ್ಮೆ ಬಂದು ಕಾಡಿದೆ ಪ್ರಶ್ನೆ:
'ನಾ ಬಂದುದೆಲ್ಲಿಂದ?'
ಗಂಟೆ ಹೊಡೆಯಿತು ನಾಲ್ಕು:
ಟೆನ್ನಿಸ್ಸಿನಾಟದಲಿ ಏನೊ ಬಳಲಿಕೆ, ಸುಸ್ತು;
ಮಹಡಿ ಮೆಟ್ಟಿಲನು ಹತ್ತುವಾಗಲು ಕೂಡ ಎಂದಿಲ್ಲದಾಯಾಸ;
ಜಂತೆಯಲಿ ಗೂಡು ಕಟ್ಟಿದ ಜೇನು ಹಾರಿಹೋಗಿವೆ, ಈಗ
ತೂಗುತ್ತಲಿವೆ ಖಾಲಿ ಗೂಡು.
ಅಲ್ಲಲ್ಲಿ ಜೇಡಬಲೆಗಳ ಜಾಲ, ಸುಣ್ಣ ಬಳಿದ ಬಣ್ಣದ ಗೋಡೆಯಲ್ಲೂ ಕೂಡ
ಸುಕ್ಕು, ತರಕಲು, ಬಿರುಕು;
ಛಾವಣಿಯ ಹೆಂಚು ಮಳೆ ಬಿಸಿಲು ಗಾಳಿಯಲಿ ಉದುರಿ
ಈಗೀಗ ಜಿನುಗುತಿದೆ ಮಾಗಿ ಮಂಜಿನ ಸೋನೆ.
ಆಗಾಗ ಸುಣ್ಣ ಬಣ್ಣವ ಹೊಡೆದು ರಿಪೇರಿ ಮಾಡಿಸಿದರೆ
ಇನ್ನರ್ಧ ಶತಮಾನ ಗ್ಯಾರಂಟಿ.
ತೂಬನೆತ್ತಿದರೇನಂತೆ ಬಿಡು, ಆ ನೀರಗಂಟಿ.
ನಿಷ್ಕರುಣ ಗಡಿಯಾರ—
ಮುಳ್ಳು ನಾಲ್ಕನು ದಾಟಿ ಐದನೂ ಮುಟ್ಟಿ ಮುಂದೆ ಸಾಗುತ್ತಲಿದೆ.
ಸೂರ್ಯನ ಶಾಖ ಕಡಿಮೆಯಾಗುತ್ತಲಿದೆ ದಿನದಿನಕೆ:
ಬಾನ ನೀಲಿಗೆ ಹೊಳಪು ಸಾಲದು: ನೀರಿನಲಿ ರುಚಿಯಿಲ್ಲ:
ಏನು ಕಾಲವೊ ಏನೊ.
ಸಂಜೆ ಬಾನಿನ ತುಂಬ ಹಗಲ ನೆನಪಿನ ಚಿತ್ರ.
ಮನೆಯಂಗಳದ ಮಬ್ಬು ಬೆಳಕಿನ ನಡುವೆ ತಡವರಿಸುತಿವೆ ಕಣ್ಣು.
ಮಹಡಿ ಮೆಟ್ಟಿಲ ಮೇಲೆ ಯಾರ್‍ಯಾರದೋ ಹೆಜ್ಜೆ
ಗೋಡೆ ಗಡಿಯಾರದಲಿ ಗಂಟೆ ಹೊಡೆದಿದೆ ಏಳು—
ಅದೊ ಕೇಳು,
ಯಾರೊ ಬಡಿಯುತ್ತಿದ್ದಾರೆ ಬಾಗಿಲ ಹೊರಗೆ
ಒಂದೇ ಸಮನೆ—
ಏಳು, ಬಾಗಿಲನು ತೆಗೆ, ಹೆದರದಿರು ಕೊನೆಗೆ.

## ಅ. ರಾ. ಮಿತ್ರ

# 'ಮಬ್ಬಿನಿಂದ ಮಬ್ಬಿಗೆ'

ಶ್ರೀ ಜಿ. ಎಸ್. ಶಿವರುದ್ರಪ್ಪನವರ 'ಮಬ್ಬಿನಿಂದ ಮಬ್ಬಿಗೆ' ಕವಿತೆಯನ್ನು ಪದವಿ ತರಗತಿಯ ವಿದ್ಯಾರ್ಥಿಗಳಿಗೆ ಬೋಧಿಸುವಾಗ ನನಗೆ ಅನ್ನಿಸಿದ ಭಾವನೆಗಳನ್ನು ಈ ಪರಿಚಯ ಲೇಖನದಲ್ಲಿ ಇಡಲು ಪ್ರಯತ್ನಿಸಿದ್ದೇನೆ. ಸಾಧ್ಯವಾದಷ್ಟು ಕವಿಯ ಸಾಲುಗಳ ಜತೆಗೇ ಸಾಗುವ ಪ್ರಯತ್ನ ಇಲ್ಲಿಯದು.

ಜಿ.ಎಸ್.ಎಸ್. ಕುವೆಂಪು, ಬೇಂದ್ರೆ ಇವರ ಪ್ರಭಾವವಲಯಕ್ಕೆ ಸೇರಿದ್ದವರು. ಹಳಗನ್ನಡ ಗ್ರಂಥ ವ್ಯಾಸಂಗ, ನವೋದಯದ ಕಾವ್ಯಪರಿಶೀಲನೆ, ಆಧುನಿಕ ಆಂಗ್ಲ ಕಾವ್ಯಪದ್ಧತಿಯ ಅಭ್ಯಾಸಗಳಿಂದ ಪುಷ್ಟಿಪಡೆದವರು. 'ಚೆಲುವು-ಒಲವು'ನಲ್ಲಿ ಈ ಅಂಶ ತಟಕ್ಕನೆ ತೋರುವಂಥದಾಗಿದೆ. ಆದರೆ ಮುಂದೆ ಕನ್ನಡದಲ್ಲಿ ನಡೆಯುತ್ತಿದ್ದ ನವ್ಯಚಿಂತನ ಪದ್ಧತಿಯ ಕಡೆಗೆ ತುಂಬ ಎಚ್ಚರಿಕೆಯಿಂದ ಕಣ್ಣು ಹಾಯಿಸಿದ್ದಾರೆ. ಇದರ ಫಲವಾಗಿ ಜಿ.ಎಸ್.ಎಸ್ ಅವರ ಕವಿತ್ವ ಒಂದು ವಿಶಿಷ್ಟ ಮಿಶ್ರಣವನ್ನು ಪಡೆದಿದೆ. ರಮ್ಯ-ನವ್ಯ ಪದ್ಧತಿಗಳೆರಡರ ಎಳೆಗಳನ್ನು ಮೈಗೂಡಿಸಿಕೊಂಡ ಬಗೆಯನ್ನಿಲ್ಲಿ ಕಾಣಬಹುದು. ಮೋಹಕ ವಾದ ಪದರಚನೆ ಮೊದಲ ಎರಡು ಪ್ರಭಾವಗಳಿಂದ ಸಿದ್ಧಿಸಿದ್ದರೆ, ಇತರ ವಲಯಗಳ ಅನುಭವದಿಂದ ಹೊಮ್ಮಿದ ಪ್ರತಿಮೆಗಳ ಮೂಲಕ ಕವನಶರೀರವನ್ನು ಕಾಣಿಸುವುದು ನವ್ಯಕಾವ್ಯದ ಪ್ರಭಾವದಿಂದ ಬಂದ ಗುಣವಾಗಿದೆ.

ಈ ಕವಿತೆಯ ವಸ್ತುವಾದ ಕಾಲದ ವಿಚಾರವನ್ನಷ್ಟೇ ತೆಗೆದುಕೊಂಡರೂ ಈ ತಲೆಮಾರಿನ ಎಲ್ಲ ಪ್ರಮುಖ ಕವಿಗಳೂ ಇಂಥದೊಂದು ವಿಚಾರವನ್ನು ಮುಂದಿಡಲು ಪ್ರಯತ್ನಿಸಿರುವುದನ್ನು ಕಾಣಬಹುದು. ಈ ತಲೆಮಾರಿನ ಕವಿಗಳೆಲ್ಲ ಮೇಲ್ಮಧ್ಯಮ ವರ್ಗದವರು, ಶಿಕ್ಷಿತರು, ಬಹುಪಾಲು ಶಿಕ್ಷಕರು, ಒಬ್ಬರನ್ನೊಬ್ಬರು ಓದಿಕೊಂಡವರು, ಪರಸ್ಪರ ಚರ್ಚಿಸಿದವರು, ಹೋಲಿಸಿಕೊಂಡವರು. ಒಂದು ಸಾಮಾನ್ಯ ಕಾವ್ಯ ಸೂತ್ರದ ಉಗಮವನ್ನೇ ಬೆಂಬಲಿಸಿದವರು, ಇಂದಿನ ಅವಶ್ಯಕತೆಗಳಿಗೆ ಒಗ್ಗುವಂತೆ ಕಾವ್ಯಭಾಷೆ-ಯನ್ನು ಬಗ್ಗಿಸಿಕೊಂಡವರು. ಆದ್ದರಿಂದ ಇವರಲ್ಲಿ ಎಲ್ಲರೂ ಒಂದೇ ಮೂಲಾನುಭವದ ಬಗೆಗೆ ಚಿಂತನೆ ನಡೆಸಿರುವುದನ್ನು ಕಾಣಬಹುದು. ಭಾಷೆಯ ಬಳಕೆಯಲ್ಲಿ, ಪ್ರತಿಮಾ ತಂತ್ರದಲ್ಲಿ, ಕಾವ್ಯದ ಒಳಶಿಲ್ಪದಲ್ಲಿ ಇವರೆಲ್ಲ ತಮ್ಮ ತಮ್ಮ ವಿಶಿಷ್ಟತೆಯನ್ನು ಕಾಯ್ದು-ಕೊಂಡೂ ಒಂದು ಸಾರ್ವತ್ರಿಕ ಕಾವ್ಯಪದ್ಧತಿಯ ಪ್ರಸಾರ ಕೇಂದ್ರವಾಗಿ ಉಳಿದಿದ್ದಾರೆ,

ಬರಿಯ ಹೇಳಿಕೆಗಳಲ್ಲಿ ತೃಪ್ತರಾಗದೆ ವಾಸ್ತವಿಕತೆಯೊಂದಿಗೆ ತಾದಾತ್ಮ್ಯ ಪಡೆದ ಒಂದು ಮನಃಸ್ಥಿತಿಯನ್ನು ವಿವರಿಸಲು ಪ್ರಾಮಾಣಿಕವಾಗಿ ಪ್ರಯತ್ನಿಸಿದ್ದಾರೆ.

ಗಡಿಯಾರದ ಮುಳ್ಳುಗಳನ್ನು ಅನುಸರಿಸುತ್ತ ಸಾಗುವ ಚಿಂತನಕ್ರಮ ಇಲ್ಲಿಯದು. ಈ ಖಚಿತ 'ಮಾನ' ಕ್ರಮ ಪದ್ಧತಿಯ ಅನುಸರಣೆಯಿಂದ ಬಂದದ್ದು. ಉದಯಾಸ್ತ-ಗಳು ನಮ್ಮ ಬದುಕಿನ ಹಂತಗಳನ್ನು ಪ್ರತಿನಿಧಿಸುತ್ತದೆನ್ನುವ ಚಿಂತನಪದ್ಧತಿ ನಮ್ಮಲ್ಲಿ ತುಂಬ ಹಳೆಯದು. 'ಮಬ್ಬಿನಿಂದ ಮಬ್ಬಿಗೆ' ಕವಿತೆ ಮನುಷ್ಯನ ಬದುಕನ್ನು ದೈನಂದಿನ ಪ್ರಾಕೃತಿಕ ಋತುಗತಿಯೊಂದಿಗೆ ಹೊಂದಿಸಿ ಉದ್ದಕ್ಕೂ ಸಾಗುತ್ತದೆ. ಕಾಲಾನುಭವದ ಸ್ವರೂಪವನ್ನು ಕುರಿತ ವ್ಯಾಖ್ಯಾನ ಇಲ್ಲಿದೆ. ವಿವರಣ ಪರವಾದ ಸಂಕೇತ ಮಾಲೆಗಳು ಖಚಿತ ಚರಣಗಳಿಂದ ಶಿಸ್ತಿನ ಕವಾಯತು ಮಾಡುತ್ತ ಮುನ್ನಡೆಯುತ್ತವೆ. ಒಂದೊಂದು ವಯೋಮಾನಕ್ಕೆ ತಕ್ಕ ಅನುಭವ ಪರಂಪರೆಯನ್ನು ಅಲ್ಲಲ್ಲಿಯ ವರ್ಣಚಿತ್ರಗಳು ನಿರೂಪಿ-ಸುತ್ತ ಸೂಕ್ಷ್ಮ ನೆಲೆಯನ್ನು ತಲಪುವ ರೀತಿಯಲ್ಲಿ ಕವಿತೆಯ ಶಿಲ್ಪ ವಿನ್ಯಾಸವಿದೆ. ಕಾಲದ ನಡಿಗೆ ಅವ್ಯಾಹತವಾದದ್ದು ಎಂಬ ಸೂಚನೆಯೂ ವ್ಯಕ್ತಿ ತನ್ನ ಗಡಿಮಿತಿಯನ್ನರಿತಿದ್ದು ಅದರ ವಿರುದ್ಧ ಹೋರಾಟಕ್ಕೆ ಅಣಿಯಾಗುವ ಸೂಚನೆಯೂ ಒಮ್ಮೆಗೇ ಕಂಡುಬರುತ್ತದೆ. ವಿಕಾಸಪೂರ್ಣತೆ ಪ್ರಕೃತಿಯ ಕಾಲವ್ಯವಸ್ಥೆಯ ಒಂದು ಅನಿವಾರ್ಯ ಭಾಗ. ಇದು ನಮ್ಮನ್ನು ರೂಪಿಸುತ್ತ ವಿರೂಪಿಸುತ್ತ ಸಾಗುತ್ತದೆಂಬ ಭಾವ ಇಲ್ಲಿ ವ್ಯಕ್ತಗೊಂಡಿದೆ. ಈ ಕವಿತೆಯ ಚರಣಗಳು ಗಡಿಯಾರದ ಹುಲಿಯಂಕಿಗಳಂತೆ ಬಿಡಿ ಬಿಡಿ ಘಟಕಗಳಾಗಿ ಮೂಡಿಬಂದಿದೆ. ಹೀಗೆ ಹೊರಮೈ ವಿಭಾಗಿತವಾಗಿರುವುದೂ, ಗಡಿಯಾರದ ಬದುಕಿಗೆ ಬಗ್ಗಿಸಿದ ಜೀವನ ಪದ್ಧತಿ ಕಂಡುಬಂದಿರುವುದೂ ಶಿಲ್ಪದ ದೃಷ್ಟಿಯಿಂದ ಗಮನಿಸಬೇಕಾದ ವಿಷಯವಾಗಿದೆ.

'ಮಬ್ಬಿನಿಂದ ಮಬ್ಬಿಗೆ' ಎಂಬ ಶೀರ್ಷಿಕೆ ಎರಡು ಜಗತ್ತುಗಳ ನಡುವಣ ತಟಸ್ಥ ಪ್ರದೇಶದ ಮೂಲಕ ಎಲ್ಲ ಜೀವಗಳೂ ಪ್ರಯಾಣ ಮಾಡಬೇಕಾದ ಅನಿವಾರ್ಯತೆಯನ್ನು ಸೂಚಿಸುತ್ತದೆ. ಕಾಲದ ಗತಿಗಳನ್ನು ಲಕ್ಷಿಸುತ್ತ ಶೋಧನೆಯ ಹಾದಿಯಲ್ಲಿ ಸಾಗುವ ಅಂಥ ಒಂದು ಜೀವನವನ್ನು ಕೇಂದ್ರವಾಗಿಟ್ಟುಕೊಂಡು ಆ ಜೀವದ ನಡಿಗೆಯ ಬಗೆಗಳನ್ನೂ, ಈ ವರ್ತನೆಯಲ್ಲಿ ಆಗುವ ದೈಹಿಕ-ಮಾನಸಿಕ ಬೆಳವಣಿಗೆಗಳನ್ನೂ ಗುರುತಿಸುವ ಪ್ರಯತ್ನ ಕವಿಯದು. ಮನುಷ್ಯ, ಪ್ರಕೃತಿಯ ಒಂದು ಅಂಗ. ಆದ್ದರಿಂದ ಅದರ ನಿಯಮಗಳಿಗೆ ಬದ್ಧ. ಈ ಕಾವ್ಯಪ್ರತಿಮೆಯನ್ನು ಸ್ಥಾಪಿಸಲು ಕವಿ ವಯೋಮಾನಗಳ ಬದಲಿಗೆ ತಂತ್ರವನ್ನನುಸರಿಸಿದ್ದಾನೆ.

ಕಾಲದ ತತ್ವವನ್ನು ಕುರಿತು ಹಲವಾರು ಕವಿಗಳು ಮತ್ತು ತತ್ವಾಭ್ಯಾಸಿಗಳು ಅನೇಕ ತಂತ್ರಗಳನ್ನೂ ಪ್ರತಿಮೆಗಳನ್ನೂ ಬಳಸಿದ್ದಾರೆ. 'ಬೆಳಕಿನ ವೃತ್ತ', 'ಹರಿವ ನೀರು' 'ಕುಮರಿ' 'ಗಡಿಯಾರ' 'ಚಕ್ರ' ಯೇಟ್ಸ್ ಬಳಸುವ 'domes' ಮತ್ತಿತರ ಪ್ರತಿಮೆಗಳು, ಎಲಿಯಟ್ Four quartetsನಲ್ಲಿ ಬಳಸಿರುವ 'Vase' 'dance' ಮೊದಲಾದ ವೃತ್ತಭಾವಗಳು, ಡನ್ ಕವಿ Experiments with Timeನಲ್ಲಿ ಬಳಸಿರುವ ಚಲನಶೀಲ ಅನಂತತೆ

(Kinetic eternity)ಯ ವ್ಯಕ್ತರೂಪಗಳು ಇವೆಲ್ಲ ಕೆಲವು ಮಾದರಿಗಳು. ಇವುಗಳಲ್ಲಿ ಆವರ್ತಕ ರೂಪದ ಮಾಧ್ಯಮವೇ ಹೆಚ್ಚು ಕವಿಗಳ ಗಮನವನ್ನು ಸೆಳೆದಿದೆ. ತತ್ತ್ವಾಭ್ಯಾಸಿಗಳಲ್ಲಿ ನೀಟ್ಸೆ ಹೇಳುವ ‹Doctrine of eternal occurrence' ಮತ್ತು 'ring of eternity', ಹೆರಾಕ್ಲಿಟಸನ You cannot stept wice into the same stream ಎಂಬ ಕಾಲಸಿದ್ಧಾಂತ ಮತ್ತು 'Changes in the desires and needs of an organism result in adaptive modifications of its structure while the world moves in appetency, on its metalled ways of time past and time future' ಎಂಬ ಲಿಮಾರ್ಕಿಯನ್ ಸಿದ್ಧಾಂತ ಇವು ಆಧುನಿಕರ ಮೇಲೆ ತುಂಬ ಪ್ರಭಾವ ಬೀರಿವೆ.

ಜಿ.ಎಸ್.ಎಸ್. ಅವರ 'ಮಬ್ಬಿನಿಂದ ಮಬ್ಬಿಗೆ' ಕವಿತೆ ಇಂಥದೊಂದು ವಿಚಾರವಾಗಿ ಕವಿಯ ಅನಿಸಿಕೆಗಳನ್ನು ತಿಳಿಯಲು ಸಹಾಯಕವಾಗಿದೆ. 'ಬಾಳನ್ನು ನಿಷ್ಠುರವಾಗಿ ಕೊನೆಗಾಣಿಸುವ ಕಾಲದ ಲೀಲೆ'ಯನ್ನು ಕಂಡು ಕವಿ ಬೆರಗಾಗಿದ್ದಾರೆ. (ದೀಪದ ಹೆಜ್ಜೆ : ಮುನ್ನುಡಿ) ನಮ್ಮನ್ನು ಹಳಬರನ್ನಾಗಿ ಮಾಡುತ್ತ ಗೋರಿಯ ದಾರಿಯಲ್ಲಿ ಎಳೆದೊಯ್ಯುವ ಈ ನಿಷ್ಕರುಣ ಕಾಲವು ಬಾಳಿನ ನೂಲನ್ನು ಕ್ಷಣಕ್ಷಣದಲ್ಲೂ ಕತ್ತರಿಸುತ್ತ ಹೋಗುತ್ತದೆಂಬ ಭಾವ ಅವರ 'ಗಡಿಯಾರದಡಿಯಲ್ಲಿ' ಎಂಬ ಕವನದಲ್ಲಿ ವ್ಯಕ್ತವಾಗಿದೆ. 'ಸಂಜೆದಾರಿ' 'ಮಾಘಜಿನ' 'ಶಾರದೆ' ಮೊದಲಾದ ಕೆಲವು ಕವಿತೆಗಳು ಕಾಲದ ವಿವಿಧ ಮುಖಗಳನ್ನು ಕಾಣುವ ಒಂದು ಪ್ರಯತ್ನದ ಫಲವೇ ಎನ್ನಬಹುದು.

* * *

ಗುರುತಿಸಬಹುದಾದಷ್ಟು ಅಂತರ ಕೊಡುತ್ತ ಕವಿತೆಯ ಮುಳ್ಳು ಸಾಗುತ್ತದೆ. ಮೊದಲ ಕೆಲವು ಚರಣಗಳು ಬೇಗ ಬೇಗ ಉರುಳುತ್ತವೆ. ಮುಂದೆ ಪ್ರಯಾಣ ದೀರ್ಘವಾಗುತ್ತ ಸಾಗುತ್ತದೆ.

ಆರು ಗಂಟೆಯ ಮೊಳಗು
ಮೂಡಣದ ಹೆರಿಗೆ ಮನೆಯಲ್ಲಿ ಸಡಗರವೊ ಸಡಗರ;
ಕತ್ತಲಿನ ಬಸಿರು ಬೆಸಲಾದ ಬಂಗಾರ ಮೋರೆಯ ಕುವರ
ಬಂದ,
ಉಲ್ಲಾಸಗಳ ತಂದ.

ಕತ್ತಲಿನ ಬಸಿರು ಬೆಸಲಾಗಿ ಬಂಗಾರ ಮೋರೆಯ ಕುವರ ಬರುತ್ತಾನೆ. ಜೀವದ ಉದಯವನ್ನೂ ಅದು ಪ್ರಕೃತಿಯಲ್ಲಿ ಸದಾಕಾಲ ನಡೆಯುವ ಕ್ರಿಯೆ ಎಂಬುದನ್ನೂ ಗಡಿಯಾರ–ಕತ್ತಲೆಗಳು ಸೂಚಿಸುತ್ತವೆ. 'ಸಡಗರವೊ ಸಡಗರ'—ಈ ದ್ವಿರುಕ್ತಿ ಒಂದು ಉತ್ಸಾಹದ ಆವರಣವನ್ನು ಬಿಂಬಿಸುವುದರಲ್ಲಿ ಯಶಸ್ವಿಯಾಗಿದೆ. 'ಬಂಗಾರ ಮೋರೆಯ ಕುವರ ಬಂದ....ತಂದ' ಎಂಬ ಪ್ರಾಸಗಳಲ್ಲಿ ಕಾಣಿಸಿಕೊಳ್ಳುವ 'rhythm of successions', 'ಬಸಿರು ಬೆಸಲಾದ ಬಂಗಾರ ಮೋರೆ' ಎಂಬಲ್ಲಿ ಬರುವ ನುಡಿಗುಣಿತಗಳು

ಗಮನಿಸಬೇಕಾದ ಅಂಶಗಳು. ಮೂಡಣದ ಎಂಬ ಶಬ್ದ ದಿಗ್ವಾಚಿ ಮಾತ್ರವಾಗಿರದೆ ವಿಶಿಷ್ಟ ಅರ್ಥದಲ್ಲಿಯೂ ಬಳಕೆಯಾಗಿದೆ. 'ಬಂಗಾರ ಮೋರೆ' ಇಂಥ ಸಡಗರದ ದೃಶ್ಯಕ್ಕೆ ಹೊಳಪು ಕೊಡುವ ದೃಷ್ಟಿಯಿಂದಲೂ ಸಾರ್ಥಕವಾಗಿದೆ.

ಜೋಯಿಸರು ಪಂಚಾಂಗವನು ತಿರುವಿ
ಸಕಲ ಗ್ರಹಬಲಸ್ಥಿತಿಯ ನೋಡಿ, ಕುಂಡಲಿ ಬರೆದು
ಮರಳಿದರು ಮನೆಗೆ.

ಚರಣದ ಈ ಭಾಗವು ಹುಟ್ಟಿದ ಜೀವಕ್ಕೆ ಸಲ್ಲಬೇಕಾದ ಸಂಪ್ರದಾಯದ ಕರ್ಮಗಳ ವಿಷಯವನ್ನು ಚಿತ್ರಿಸುತ್ತದೆ. ಈ ಮಾತು ಮಗು ಹುಟ್ಟಿದುದನ್ನು ಒಂದು ರೀತಿಯಲ್ಲಿ ದಾಖಲುಪಡಿಸುವ ಕ್ರಮವಾಗಿ ಬಂದಿದೆ ಅಷ್ಟೆ. 'ತಿರುವಿ' ಮತ್ತು 'ಮರಳಿದರು ಮನೆಗೆ' ಎಂಬ ಮಾತುಗಳು ತುಸು ಲಘುಧೋರಣೆಯ ಧಾಟಿಯಲ್ಲಿದ್ದು ಬರಿಯ ಹೇಳಿಕೆಯಾಗುವುದನ್ನು ತಪ್ಪಿಸುವ ಪ್ರಯತ್ನ ಮಾಡಿವೆ ಎನ್ನಬಹುದಾದರೂ ಕವನದ ಶಾರೀರಕ ಬೆಳವಣಿಗೆಯನ್ನು ಬಿಟ್ಟು ಮತ್ತಾವ ಬೆಳವಣಿಗೆಗೂ ಸಹಾಯಕವಾಗುವುದಿಲ್ಲ ಎನ್ನಬಹುದು.

ಅಂಬೆಗಾಲಿಟ್ಟು ಹೊಸಿಲು ದಾಟಿತು ಬಿಸಿಲು—
ಬಾಗಿಲಲಿ ಹಾಲ್ ಕರೆವ ಹಸುಕೊರಳ ಗಂಟೆದನಿ,
ತುಂಬುಕೆಚ್ಚಲಿನಲ್ಲಿ ಮೊಗವಿಟ್ಟ ಮುದ್ದು ಕರು,
'ಕಾ' ಎನುವ ಕಾಗೆ, ಚಿಲಿಪಿಲಿ ಗುಬ್ಬಿ, ಬಾಲವಾಡಿಪ ನಾಯಿ;
ಸೋಜಿಗದ ಹೊಸಲು.

ಈ ಚರಣಭಾಗದ ತುಂಬ ವಾಸ್ತವ ಜಗತ್ತಿನ ದೃಶ್ಯಚಿತ್ರಗಳಿವೆ. ಅಂಬೆಗಾಲಿಡುತ್ತ ಬಿಸಿಲು ಹೊಸಿಲು ದಾಟಿ ಮನೆಯೊಳಗೆ ನುಗ್ಗುವ ಚಿತ್ರ ಚರಣದ ಹಿಂದಿನ ಭಾಗದ ತಟಸ್ಥತೆಯಿಂದ ಪಾರಾಗಿ ಜೀವಂತವಾಗಿ ಸಾಗುತ್ತದೆ. ಬಿಸಿಲು ಸೋಜಿಗದ ಹೊನಲಾಗುವುದು ವ್ಯಾವಹಾರಿಕ ದೃಶ್ಯಸಮುದಾಯದಿಂದ. ಬೆಳಗಿನ ಹೊತ್ತಿನಲ್ಲಿ ಮನೆಯ ಮುಂದೆ ಹಾಲು ಕರೆಯಲು ತಂದ ಹಸು, ಅದರ ಕೊರಳ ಗಂಟೆಯ ನಾದ, ಆ ಹಸುವಿನ ತುಂಬು ಕೆಚ್ಚಲಿನಲ್ಲಿ ಮುಖವಿಟ್ಟ ಮುದ್ದುಕರು, ಕಾಗೆ, ಗುಬ್ಬಿ, ನಾಯಿ—ಇವೆಲ್ಲ ಮಗು ಜೀವದ ಎದುರಿಗೆ ಸೋಜಿಗದ ಹೊನಲಾಗಿ ಹರಿದು ಕಣ್ಣು ಕಿವಿಗಳಿಗೆ ಸಂಭ್ರಮಕಾರಿಯಾಗುತ್ತವೆ. ದೃಶ್ಯಸಂಸ್ಕಾರ, ಶ್ರಾವಣ ಸಂಸ್ಕಾರಗಳು ಜೀವಿಗೆ ಆಗಿರುವುದನ್ನು ಸೂಚಿಸುತ್ತವೆ. ಅಲ್ಲದೆ ವಾತ್ಸಲ್ಯಭಾವವೇ ಪ್ರಧಾನವಾದ ಆ ವಯಸ್ಸಿನ ಪ್ರಮುಖ ಲಕ್ಷಣವನ್ನು ಇಲ್ಲಿಯ ಚಿತ್ರಮಾಲೆ ವಿವರಿಸುತ್ತದೆ. 'ಹೊಸಿಲು ದಾಟಿತು' ಎಂಬ ಮಾತು ರೂಢಿಯ ಅರ್ಥಕ್ಕಿಂತ ಭಿನ್ನವಾಗಿ 'ಒಳಪ್ರವೇಶ ಮಾಡಿದ' ಎಂಬರ್ಥದಲ್ಲಿ ಬಳಕೆಗೊಂಡಿರುವುದನ್ನು ಗಮನಿಸಬೇಕು.

ಏಳುಗಂಟೆಯ ಮೊಳಗು:
ಏಳರಿಂದ ಎಂಟರತನಕ ಸದಾ

ಮಲ್ಲಿಗೆಯ ಮಳೆಗರೆವ ಕಣ್ಣು ಎರಡೇ ಎರಡು
ಮೇಲ್ ಮುಗಿಲಲ್ಲಿ,
ಕೆಳಗೆ ಹಸಿರು ಸೆರಗಿನ ಮೆತ್ತೆ;
ಈ ನಡುವೆ ಬಾಯಿಟ್ಟು ಸೀಪಿದಾಗೆಲ್ಲ ಹಾಲನು ಸುರಿವ
ಚಂದ್ರ ಕುಂಭಗಳೆರಡು,
ಎಂದು ಯಾವಾಗಲೂ ಗಕ್ಕನೆಯೆ ನಿಂತು ಕೈಕೊಡದ ನಲ್ಲಿ
ತುಟಿಯ ಬಟ್ಟಲಿನಲ್ಲಿ !

ಮೊದಲ ಚರಣದಲ್ಲಿ ಬರುವ ಆರುಗಂಟೆಯ ಮೊಳಗು, ಇಲ್ಲಿಯ ಏಳುಗಂಟೆಯ ಮೊಳಗು ಈ ಎರಡು ಕಡೆಗಳಲ್ಲೂ ಮೊಳಗು ಶಬ್ದ ಪುನರುಕ್ತಗೊಂಡು ಕಾಲದ ಚಲನೆಯನ್ನು ಘೋಷಿಸುವ ಸಾಧನಗಳಾಗುತ್ತವೆ. ಮೊಳಗು ಎಂಬ ಶಬ್ದಕ್ಕೆ ಭೇರಿ ಎಂಬರ್ಥವೂ ಇಲ್ಲಿ ಘಟಿಸಿ ಕಾಲರಾಯನ ವಿಜಯ ಯಾತ್ರೆಯ ಆರಂಭದ ಹೆಜ್ಜೆಗಳನ್ನು ಗುರುತಿಸು-ವಲ್ಲಿ ಸಹಾಯಕವಾಗಿದೆ. ಮುಂದೆ ಪ್ರಕೃತಿಯ ಮೈಗೆ ಅಂಟಿಕೊಂಡಂತೆಯೇ ಜೀವ-ಗ್ರಹವೂ ವೃತ್ತಪಥದಲ್ಲಿ ಚಲಿಸುವ ಪರಿಯನ್ನು ಚಿತ್ರಿಸುವ ಉದ್ದೇಶ ಕವಿಯದು.

ಮಲಗಿದ ಭಂಗಿಯಲ್ಲಿರುವ ಹಸುಳೆಗೆ 'ಕೆಳಗೆ ಹಸುರಿನ ಮೆತ್ತೆ' 'ಮೇಲೆ ಮಲ್ಲಿಗೆಯ ಮಳೆಗರೆವ ಕಣ್ಣು ಎರಡೇ ಎರಡು'. ಹಸಿರು ಸೆರಗಿನ ಮೆತ್ತೆ ತಾಯ ತೊಡೆಯ ಆಶ್ರಯದ ಭದ್ರತಾ ಭಾವವನ್ನೂ ಹಿತವನ್ನೂ ಸೂಚಿಸಿದರೆ ಮಲ್ಲಿಗೆಯ ಮಳೆಗರೆವ ಕಣ್ಣು ತಾಯ ವಾತ್ಸಲ್ಯದ ವಿಪುಲತೆಯನ್ನು ಬಿಂಬಿಸುತ್ತದೆ. ಹಸಿರುಡೆಯ ಭೂಮಿ ಮಲ್ಲಿಗೆಯಂಥ ಮುಗಿಲುಗಳು ಜೀವನ ಮೈ ಮನಸ್ಸುಗಳಿಗೆ ಕೊಡುವ ಹಿತವೂ ಇಲ್ಲಿ ಸೂಚಿತವಾಗಿದೆ. ಮುಂದೆ ಜೀವಪೋಷಣೆಗೆ ನೆರವಾಗುವ ತಾಯಿಯ ಎದೆಹಾಲಿನ ಸಮೃದ್ಧಿಯನ್ನು ಶಬ್ದ ಸಮೃದ್ಧಿಯಿಂದಲೂ ಬಿಂಬಿಸುವ ಪ್ರಯತ್ನ ಕವಿಯದಾಗಿದೆ. 'ಬಾಯಿಟ್ಟು ಸೀಪಿದಾಗೆಲ್ಲ ಹಾಲನು ಕರೆವ ಚಂದ್ರಕುಂಭಗಳೆರಡು' ಎಂಬ ಮಾತಿನಲ್ಲಿ ಶಬ್ದಗಳು ರಮ್ಯತೆಯ ಅಂಚಿ-ನಲ್ಲಿ ಸುಳಿಯುತ್ತಿವೆ ಎನ್ನಿಸಿದಾಗ ಕವಿ ತಟಕ್ಕನೆ ಅದಕ್ಕೆ ಒತ್ತುಕೊಡುವ ಹಾಗೆ 'ಎಂದು ಯಾವಾಗಲೂ ಗಕ್ಕನೆಯೆ ನಿಂತು ಕೈಕೊಡದ ನಲ್ಲಿ ತುಟಿಯ ಬಟ್ಟಲಿನಲ್ಲಿ' ಎಂದು ಹೇಳಿ ನೀರಿಗೆ ಬರವುಳ್ಳ ನಗರ ಸಮಸ್ಯೆಯ ವ್ಯಾಪಹಾರಿಕ ಮುಖದ ಹಿನ್ನೆಲೆಯಲ್ಲಿ ಈ ತಾಯ ಸಮೃದ್ಧಿಯನ್ನು ಮನಗಾಣಿಸುವ ಹಾಸ್ಯ ಪ್ರಸಂಗವೊಂದನ್ನು ಸೃಷ್ಟಿಸಿದ್ದಾನೆ. ರಮ್ಯಾತಿ-ರೇಕದಿಂದ ಬಿಡುಗಡೆ ಪಡೆಯುವುದೇ ಕವಿಯ ಉದ್ದೇಶ ಎಂಬ ಮಾತನ್ನು ಒಪ್ಪದಿದ್ದರೆ ಇಲ್ಲಿ ತುಂಬ ವಾಚ್ಯವಾಗಿ ಪುನರುಕ್ತವಾಗಿರುವ, 'butter cup Lyricism' ಎನ್ನ-ಬಹುದಾದ ಸಾಲುಗಳನ್ನು ಮೆಚ್ಚುವುದು ಕಷ್ಟವಾಗುತ್ತದೆ.

ಎಂಟು ಗಂಟೆಗೆ ಅದಿಗೊ ಉಗುರು ಬೆಚ್ಚಗೆ ಬಿಸಿಲು—
ಸುತ್ತ ಮರಗಿಡಗಳಲಿ ಲಾಲಿ ಹಾಡುವ ಹಕ್ಕಿ
ಮರದ ಬೊಂಬೆಗೂ ಜೀವ ಬಂದಿದೆ; ಕಲ್ಲು ಹರಳುಗಳೆಲ್ಲ
ಚಿನ್ನ-ರನ್ನ !

ಇದು ಒಂದು 'age of innocence' ಅನ್ನು ಪರಿಚಯಿಸಿಕೊಡುವ ಚರಣಖಂಡ.

ಉಗುರು ಬೆಚ್ಚಗಿನ ಬಿಸಿಲು ಬೆಳಗಿನ ಒಂದು ನೋಟವೇ ಸರಿ. ಇದರ ಹಿತವಾದ ಆವರಣ ದಲ್ಲಿ ಹಕ್ಕಿಗಳು ಲಾಲಿ ಹಾಡುತ್ತವೆ. ಅಂದರೆ ಮಗು ತೊದಲು ಮಾತಿನಿಂದ ಕ್ರಮೇಣ ಮಾತಿನ ವಲಯಕ್ಕೆ ಪದಾರ್ಪಣ ಮಾಡುತ್ತದೆ. ಸಿಕ್ಕಿದುದನ್ನು ಮಾತನಾಡಿಸುವ ಉತ್ಸಾಹದಿಂದ ಹೊರಡುತ್ತದೆ. ಅದರ ಮನೋವಲಯದಲ್ಲಿ ಮರದ ಬೊಂಬೆಗೂ ಜೀವ ಸಂಚಾರವಾಗುತ್ತದೆ. ಅದರ ಕ್ರೀಡೋತ್ಸಾಹದಲ್ಲಿ ಕಲ್ಲು ಹರಳುಗಳೆಲ್ಲ ಚಿನ್ನ-ರನ್ನಗಳ ಬೆಲೆ ಪಡೆಯುತ್ತವೆ.

ಅ, ಅಗೊ, ಕರೆಯುತಿದೆ ಪಾಠಶಾಲೆಯ ಗಂಟೆ
ಸ್ಲೇಟು ಪುಸ್ತಕವನ್ನು ಹೆಗಲಿಗೇರಿಸು, ಹೊರಡು;
ಅಲ್ಲಿ ಕಾದಿದ್ದಾರೆ 'ಮೇಸ್ಟ್ರು'.
ತಿದ್ದು 'ಅ ಆ ಇ ಈ'; ಮಗ್ಗಿಯೊಪ್ಪಿಸು; 'ಆಟ, ಊಟ, ಓಟ.'
ಮೆಲ್ಲನೆಯೆ ಜಾರುತಿದೆ ಬೆಳಗು ಬಿತ್ತಿದ ನೋಟ.

ಶೇಕ್ಸ್‌ಪಿಯರನ All the world's a stageನಲ್ಲಿ ಬರುವ ಶಾಲೆಯ ಬಾಲಕನ ನೆನಪು ತಂದುಕೊಡುವ ರೀತಿಯಲ್ಲಿ ಬಾಲಕ ಇಲ್ಲಿ ಚಿತ್ರಿತನಾಗಿದ್ದಾನೆ.

Then the whining school boy, with his satchel
And shining morning face, creeping like snail
unwillingly to school. . .

ಹುಡುಗ ಸ್ಲೇಟು ಪುಸ್ತಕವನ್ನು ಹೆಗಲಿಗೇರಿಸಿ ಹೊರಡಬೇಕು. ಶಾಲೆಯ ಆವರಣ ಒಂದು ಬಗೆಯ ಬಂಧನ ಎನ್ನುವ ಅಂಶವನ್ನು ಕಾದು ನಿಂತಿರುವ 'ಮೇಸ್ಟ್ರು', ಒಪ್ಪಿಸಬೇಕಾದ ಮಗ್ಗಿ, ತಿದ್ದಬೇಕಾದ ಅ ಆ ಇ ಈ ಇವೆಲ್ಲ ಸೂಚಿಸುತ್ತವೆ. ಜೀವಕ್ಕೆ ತುಂಬ ಒಗ್ಗುವ ಆಟಗಳಲ್ಲಿ ಮಗ್ನನಾಗಿರುವ, ಪ್ರಕೃತಿಯ ಒಡನಾಟದಲ್ಲಿ ಸ್ವೈರವಿಹರಿಸುವ ಹುಡುಗ ಹೇಗೆ ಒಗ್ಗದ ಕೆಲಸಗಳಲ್ಲೂ ತನ್ನನ್ನು ಒಂದು ಬಗೆಯ ಶಿಸ್ತಿಗೆ ಒಳಪಡಿಸಿಕೊಳ್ಳಬೇಕಾಗುತ್ತ-ದೆಂಬುದನ್ನು ಈ ಸಾಲುಗಳು ವಿವರಿಸುತ್ತವೆ. 'ಪಾಠಶಾಲೆಯ ಗಂಟೆ' ಎಂಬ ಮಾತೇ ಹಿಂದಿನ ಆರುಗಂಟೆಯ ಮೊಳಗು, ಏಳುಗಂಟೆಯ ಮೊಳಗು, ಎಂಟುಗಂಟೆ ಎಂಬ ತಟಸ್ಥ ಪ್ರಾಕೃತಿಕ ಸಮಯ ಸೂಚನೆಗಳಿಗಿಂತ ಭಿನ್ನವಾಗಿದ್ದು ಹೊರಗಿನ ಗಂಟೆಗಳ ಆವರಣಕ್ಕೆ ಜೀವವನ್ನು ತಳ್ಳುತ್ತದೆ. 'ಮೆಲ್ಲನೆಯೆ ಜಾರುತಿದೆ ಬೆಳಗು ಬಿತ್ತಿದ ನೋಟ' ಎಂಬ ಮಾತು ಈ ಹಿನ್ನೆಲೆಯಲ್ಲಿ ಅರ್ಥಪೂರ್ಣವಾಗುತ್ತದೆ. ಅಲ್ಲದೆ ಕವಿ ಇಲ್ಲಿ ಒಂದು ಬಗೆಯ ವಿಷಾದ ಛಾಯೆಯನ್ನು ಹರಡಿರುವಂತೆ ಕಾಣುತ್ತದೆ. ಮಕ್ಕಳದೊಂದು ಭ್ರಮಾಲೋಕವನ್ನು ಸೃಷ್ಟಿಸಿದ್ದ ಬೆಳಗು ಅಂಥ ಪರೆಯನ್ನು ತಾನೇ ಕಿತ್ತುಹಾಕಿ ಹೋಗುತ್ತಿದೆ. ಕಾಲ ಸ್ವಭಾವತಃ ಒರಟಾದದ್ದು, ಮಾರ್ದವತೆ ಅದರ ಪೂರ್ವಮುಖ ಮಾತ್ರ ಎಂಬ ಭಾವವೂ ಇಲ್ಲಿ ವ್ಯಕ್ತಗೊಂಡಿದೆ.

ಹನ್ನೊಂದರಿಂದ ಹನ್ನೆರಡು:
ಜಂತೆ ಜಂತೆಯ ತುಂಬ ಜೇನುಗೂಡು!

ಕಂಡುಕಂಡುದನೆಲ್ಲ ಗುದ್ದು ತಿದೆ ಮರಿಗೂಳಿ
ಹಗಲಿರುಳು ಮುಗ್ಗದಲಿ ಜೊನ್ನಗನಸಿನ ಲಾಳಿ
ಕದಡು ನೀರಿನ ಕೊಳದಿ ಮುಖದ ನೆರಳನು ನೋಡಿ
ಕ್ರಾಪು ತಿದ್ದುವ ಚಾಳಿ
ಎದೆ ತುಂಬ ಮೊರೆಯುತಿದೆ ಹತ್ತು ದಿಕ್ಕಿನ ಗಾಳಿ !

ಕವನದ ಎರಡನೆಯ ಭಾಗವ ಆರಂಭವಲ್ಲಿ ಪಡ್ಡೆ ಪ್ರಾಯದ ಹುಡುಗನ ಮೈಮನಸ್ಸುಗಳ ತುರಿಕೆಯ ಚಿತ್ರವಿದೆ. ಯೌವನದ ವಿಜೃಂಭಣೆಯನ್ನು ನಾಲ್ಕಾರು ರೂಪಕಗಳಲ್ಲಿ ಹೇಳಲು ಪ್ರಯತ್ನಿಸಿರುವುದು ಕಂಡುಬರುತ್ತದೆ. ಜಂತೆ ಜಂತೆಯಲ್ಲಿ ತುಂಬಿರುವ ಜೇನು, ಕಂಡದ್ದನ್ನು ಗುದ್ದುವ ಮರಿಗೂಳಿ, ಜೊನ್ನಗನಸಿನ ಲಾಳಿ, ಕದಡು ನೀರಿನಲ್ಲಿ ಕ್ರಾಪು ತಿದ್ದುವ ಚಾಳಿ, ಎದೆಯಲ್ಲಿ ಮೊರೆಯುವ ಹತ್ತು ದಿಕ್ಕಿನ ಗಾಳಿ–ಈ ರೂಪಕಗಳು ಪ್ರಾಯದ ಪ್ರವಾಹಕ್ಕೆ ಸಿಕ್ಕು ತತ್ತರಿಸಿ ಗೊಂದಲಕ್ಕೀಡಾಗುವ ತರುಣನ ಚಿತ್ತವೃತ್ತಿಗಳನ್ನು ರೇಖಿಸಲು ಪ್ರಯತ್ನಿಸಿವೆ. ಜಂತೆ ಜಂತೆ, ಕಂಡುಕಂಡ ವಸ್ತು, ಜೊನ್ನಗನಸು, ಕದಡು ನೀರಿನ ಕೊಳ, ಹತ್ತು ದಿಕ್ಕಿನ ಗಾಳಿ ಇವೆಲ್ಲ ಚಿತ್ರಗಳು ಬೇರೆ ಬೇರೆಯಾಗಿ ಮತ್ತು ಇಡಿಯಾಗಿ ತಾರುಣ್ಯದ ಆಕ್ರಮಣದ ರಭಸ, ವೈಖರಿ, ಬಾಹುಳ್ಯ, ಬಹುರೂಪತೆಗಳನ್ನು ಚಿತ್ರಿಸುವುದರಲ್ಲಿ ಯಶಸ್ವಿಯಾಗಿವೆ. ಅಲ್ಲದೆ ಈ ಎಲ್ಲ ಬಗೆಯ ಚೇಷ್ಟೆಗಳೂ ಖಚಿತ ನೆಲೆಯನ್ನಿನ್ನೂ ಮುಟ್ಟದ ಅಪ್ರಬುದ್ಧಾವಸ್ಥೆಯ ಮನೋವಿಕಾರಗಳೆಂಬ ಸಂಗತಿಯನ್ನೂ ಈ ರೂಪಕಮಾಲೆ ಸಿದ್ಧಪಡಿಸುತ್ತದೆ. ಅಂತ್ಯಪ್ರಾಸದ ನಿಯಮವನ್ನು ಕಟ್ಟುನಿಟ್ಟಾಗಿ ಪಾಲಿಸಿರುವ ಇಲ್ಲಿನ ಎಲ್ಲ ಸಾಲುಗಳೂ ವ್ಯವಸ್ಥಿತವಾಗಿ ದಾಳಿ ನಡೆಸುವ ಹರಯದ ತಂತ್ರಸಾಮರ್ಥ್ಯದತ್ತ ಬೊಟ್ಟುಮಾಡಿ ತೋರುವಂತಿವೆ. ಜೇನುಗೂಡು ಎಂಬ ಸಂಕೇತ ಮುಂದಿನ ಘಟ್ಟಗಳಲ್ಲಿ ಕವನದ ಅರ್ಥವನ್ನು ವಿಸ್ತರಿಸುವುದಕ್ಕೆ ತಕ್ಕ ಸಿದ್ಧತೆಯನ್ನು ಇಲ್ಲೇ ಪಡೆದುಕೊಂಡಿದೆ.

ತುಂಬಿದೂರಿನ ನಡುವೆ ಗೋಪುರದ ಗಡಿಯಾರ—
ಕಾದ ಬಿಸಿಲಿನ ಎದೆಗೆ ಒಂದು ಗಂಟೆಯ ಬಡಿತ.
ದೂರದಲಿ ಹಸಿರು ಚಪ್ಪರದೊಳಗೆ ಮದುವೆ ಬ್ಯಾಂಡಿನ ಮೋಡಿ.
ಮೈತುಂಬ ಹೂ ಮುಡಿದು ಹುಚ್ಚಾದ ಮರ ಚೈತ್ರದಲಿ
ಮೆರವಣಿಗೆ ಹೊರಟು ನಿಂತಿದೆ ನೋಡಿ.
ಚಿಕ್ಕೆ ಚಿಕ್ಕೆಗೆ ಒಂದು ಉಯ್ಯಾಲೆಯನು ತೂಗಿ
ದಿಗ್ದಿಗಂತದ ನೀಲ ಗಾಜುಗೋಡೆಗೆ ತಾಗಿ
ಜೋಕಾಲಿಯಾಡುವ ಬಯಕೆ—
'ನಾ ನಿನಗೆ ನೀನೆನಗೆ ಜೇನಾಗುವಾ
ರಸದೇವಗಂಗೆಯಲಿ ಮೀನಾಗುವಾ.'

ಈ ಚರಣದಲ್ಲಿ ಉದ್ದಾಮ ಯೌವನದ ಆರ್ಭಟವನ್ನು ಶಾಬ್ದಿಕವಾಗಿಯೂ ಸೆರೆಹಿಡಿಯುವ ಪ್ರಯತ್ನ ನಡೆದಿರುವುದನ್ನು ಗಮನಿಸಬಹುದು. 'ಮೋಡಿ....ನೋಡಿ' ಇಂಥ ದೂರ

ಪ್ರಾಸಗಳ ರಚನೆ, ‘ಹೂ ಮುಡಿದು ಹುಚ್ಚಾದ ಮರ’ ‘ಗಾಜು ಗೋಡೆಗೆ ತಾಗಿ’ ಜೋಕಾಲಿ....ಬಯಕೆ ಇಂಥ ಶಬ್ದ ಪರಿವೃತ್ತಿ, ಕೊನೆಯಲ್ಲಿ ಕುವೆಂಪು ಅವರ ಪ್ರೇಮ ಗೀತೆಯ ಪಲ್ಲವಿಯ ನೆರವು.

‘ತುಂಬಿದ ಊರಿನ ನಡುವೆ ಗೋಪುರದ ಗಡಿಯಾರ’ ಎಂಬ ಪ್ರತಿಮೆ ನಾನಾ ನೆಲೆಗಳಲ್ಲಿ ತಾರುಣ್ಯದ ಸ್ವರೂಪವನ್ನು ವಿವರಿಸುವ ಪ್ರಯತ್ನ ಮಾಡುತ್ತದೆ. ಸಾರ್ವತ್ರಿಕವಾದ ಕಾಲದ ಚಲನೆಯಲ್ಲಿ ತಾರುಣ್ಯ ಎದ್ದುಕಾಣುವಂಥದ್ದು ಎಂಬುದನ್ನೂ ಆ ಗಳಿಗೆಯಲ್ಲಿ ಭೂತ-ಭವಿಷ್ಯತ್ತುಗಳ ಗೊಡವೆ ಅದಕ್ಕೆ ಅಂಟುವುದಿಲ್ಲವೆಂಬುದನ್ನೂ ಬರಿಯ ವರ್ತಮಾನವೇ ಪ್ರಖರವಾಗಿ ನಿಲ್ಲುವುದನ್ನೂ ಈ ಪ್ರತಿಮೆ ಸೂಚಿಸುತ್ತದೆ. ‘ತುಂಬಿದ ಊರು’ ವ್ಯಾವಹಾರಿಕ ಗದ್ದಲದ ಚಿತ್ರವನ್ನು ಮೂಡಿಸಿ ಆ ಗದ್ದಲದಲ್ಲೂ ಸ್ವಚಿಂತೆಯಲ್ಲಿ ಉಳಿದುವನ್ನೆಲ್ಲ ಮರೆತು ಮೈಮರೆಯುವ ಗೋಪುರದ ಗಡಿಯಾರದ ಕಡೆಗೆ ಬೊಟ್ಟು ಮಾಡಿ ತಾನು ಹಿಂದೆ ನಿಂತುಬಿಡುತ್ತದೆ. ಗೋಪುರದ ಗಡಿಯಾರ ತನ್ನ ಸ್ಥಾನ ವೈಶಿಷ್ಟ್ಯದಿಂದಾಗಿ ಹೇಗೆ' ತುಂಬಿದೂರಿನ ನಡುವೆಯೂ ತನ್ನ ಕಡೆಗೆ ಎಲ್ಲರ ಗಮನವನ್ನು ಸೆಳೆದುಕೊಳ್ಳುತ್ತದೆಯೋ ಹಾಗೆಯೇ ಪ್ರಾಯಕ್ಕೂ ಒಂದು ವಿಶಿಷ್ಟ ಸ್ಥಾನಮಾನವಿದೆ—ಎಂಬ ಭಾವ ಇಲ್ಲಿ ಸೂಚಿತವಾಗಿದೆ.

‘ಕಾದ ಬಿಸಿಲಿನ ಎದೆ’ ಇಲ್ಲಿ ‘ಕಾದ’ ಎಂಬ ಮಾತು ಹಿಂದಿನ ಚರಣದ ಸಮಸ್ತ ಭಾವವನ್ನೂ ಹೊತ್ತು ತರುವ ವಿಶೇಷಣವಾಗಿ ಬಳಕೆಯಾಗಿದೆ. ಹತ್ತು ದಿಕ್ಕಿನ ಗಾಳಿ ಎದೆ ತುಂಬ ಮೊರೆಯುವ ಅನಿಶ್ಚಿತ ಸ್ಥಿತಿಯಿಂದ ವ್ಯಕ್ತಿ ಒಂದು ಖಚಿತ ಸ್ಥಿತಿಗೆ ತಲಪಿದ್ದಾನೆ ಎಂಬುದನ್ನು ‘ಒಂದು ಗಂಟೆಯ ಬಡಿತ’ ಪರೋಕ್ಷವಾಗಿ ಸೂಚಿಸುತ್ತದೆ. ವೈವಾಹಿಕ ಜೀವನಕ್ಕೆ ವ್ಯಕ್ತಿ ಪ್ರವೇಶಮಾಡುವುದನ್ನು ಇಲ್ಲಿಯ ವಾಚ್ಯ ಸಂಕೇತಗಳೇ ತಿಳಿಸುತ್ತವೆ. ಹಸಿರು ಚಪ್ಪರ, ಬ್ಯಾಂಡು, ಮೆರವಣಿಗೆ ಇವು ಒಂದು ಸಾಮಾಜಿಕ ವ್ಯವಸ್ಥೆಯ ಚೌಕಟ್ಟಿಗೆ ವ್ಯಕ್ತಿಯನ್ನು ಸಿಲುಕಿಸಿರುವ ಸಂಗತಿಯನ್ನು ಸ್ಪಷ್ಟಪಡಿಸುತ್ತವೆ. ಮುಂದಿನ ಸಾಲುಗಳು ಮೊದಲಿಗನ ಉತ್ಸಾಹಾವೇಶಗಳನ್ನೂ ಅವನು ಸೃಷ್ಟಿಸಿಕೊಳ್ಳುವ ಅ-ವಾಸ್ತವ ಕಲ್ಪನೆಗಳನ್ನೂ, ಮನಸ್ಸು ಗರಿಕೆದರಿಕೊಳ್ಳುವ ಬಗೆಗಳನ್ನೂ ವಿವರಿಸುತ್ತವೆ. ‘ಗಾಜು ಗೋಡೆ’ ‘ಬಯಕೆ’ ಈ ಶಬ್ದಗಳು ಅವನ ಕನಸಿನ ಗುಳ್ಳೆಗಳನ್ನು ಒಡೆಯುವ ಸೂಜಿಯ ಕೆಲಸವನ್ನು ಸಮರ್ಪಕವಾಗಿ ನಿರ್ವಹಿಸಿವೆ. ಜೋಕಾಲಿ ಎಂಬ ಶಬ್ದ ಆ ಆಟದಲ್ಲಿ ಇರುವ ರಭಸ, ಸಾಹಸ, ಆನಂದ ನಿರೀಕ್ಷೆಗಳನ್ನು ಸಮರ್ಥವಾಗಿ ನಿರ್ಣಯಿಸುತ್ತದೆ. ಈ ಚರಣದಲ್ಲಿನ ಲಯ ಒಂದು ರೀತಿಯ ಉಸಿರುಕಟ್ಟಿಸುವ ಕಾತರಗತಿಯಲ್ಲಿ ಧಾವಿಸುತ್ತ ಜೋಕಾಲಿಯಲ್ಲಿ ಸಮಾವೇಶವಾಗುತ್ತದೆ. ಸ್ವಚ್ಛಂದತೆಯೊಂದಿಗೆ ನೈರ್ಮಲ್ಯ ಮತ್ತು ಪಾವಿತ್ರ್ಯಗಳ ಹೊಸದೊಂದು ಆಯಾಮವನ್ನು ಕೊಡುವುದಕ್ಕಾಗಿ ಕುವೆಂಪು ಅವರ ಎರಡು ಸಾಲು ಉದ್ಧೃತವಾಗಿವೆ.

ಒಂದು, ಎರಡು, ಮೂರು—
ಬಾರಿಸಿತು ಗಡಿಯಾರ ತನ್ನ ಪಾಲಿಗೆ ತಾನು.

ಅಯ್ಯೊ, ಯಾವಾಗ ಈ ಮುಳ್ಳು ಒಂದು ಎರಡನು ದಾಟಿ ಮೂರಕ್ಕೆ
ಬಂದಿತೋ,
ಹಿಡಿದುಕೋ, ಅಲ್ಲೆ ಆ ಗಡಿಯಾರಗಳ ಮುಳ್ಳು, ಭದ್ರ ;
ಬಿಡಬೇಡ ಮುಂದಕ್ಕೆ ಕೊಂಚಕಾಲ.
ಗಡಿಯಾರ ನಕ್ಕಿತ್ತು 'ಎಂಥ ಚಪಲ !'

ಗಡಿಯಾರದ ಕಡೆಗೆ ವಸ್ತುನಿಷ್ಠವಾಗಿ ನೋಡುವ ಪ್ರಯತ್ನವಿದೆ ಇಲ್ಲಿ. ಹರಯದ ನಡು ಬಾಗಿಲಿಗೆ ಬಂದಾಗ ಜೀವಕ್ಕೆ ಗಡಿಯಾರ ಎದೆಯ ಮೇಲೆ ಭಾರವಾಗಿ ಕುಳಿತಂತೆ ಭಾಸವಾಗುತ್ತದೆ. ತಟಕ್ಕನೆ ಚಲನೆಯ ಮಹತ್ವವನ್ನೂ ಕ್ರೌರ್ಯವನ್ನೂ ಅರ್ಥವಿಸಿಕೊಳ್ಳುವ ಆರಂಭಗಾರನ ಪ್ರಯತ್ನ ನಡೆಸುತ್ತವೆ ಜೀವ. ಸಂಪ್ರದಾಯಸ್ಥವಾದ, ಸುಖಾಪೇಕ್ಷಿಯಾದ ಮನಸ್ಸು ತನ್ನ ಸುಖಕ್ಕಾಗಿ ಚಲನೆಗೇ ತೊಡರುಗಾಲು ಹಾಕಲು ಪ್ರಯತ್ನಿಸುತ್ತದೆ. ಪಶ್ಚಾತ್ತಾಪ, ನಿರ್ಧಾರ ಎರಡು ಭಾವಗಳೂ ವ್ಯಕ್ತಿಯ ಮನಸ್ಸಿನಲ್ಲಿ ಮೂಡುತ್ತವೆ.

ಹಿಡಿದುಕೋ ಅಲ್ಲೆ ಗಡಿಯಾರಗಳ ಮುಳ್ಳು ಭದ್ರ

ಈ ಸಾಲನ್ನು Harold Manroನ

O Pendulum, move slowly !

ಎಂಬ ಸಾಲಿನೊಂದಿಗೆ ಹೋಲಿಸಿ. ಗಡಿಯಾರ ವ್ಯಕ್ತಿಯ ಭ್ರಮೆಯನ್ನು ಕಂಡು 'ಎಂಥ ಚಪಲ' ಎಂದು ಆಡಿಕೊಳ್ಳುತ್ತದೆ. ಕಾಲ-ವ್ಯಕ್ತಿಗಳ ನಡುವಣ ಸಂಘರ್ಷ ಇಲ್ಲಿಂದ ಆರಂಭವಾಗುತ್ತದೆ. ಗಡಿಯಾರದ ಜತೆಗೆ ಸ್ಪರ್ಧೆಗಿಳಿಯಲಿಷ್ಟಪಡದೆ, ಬದುಕನ್ನು ಕ್ರೀಡೋತ್ಸಾಹಿಯಂತೆ ಎದುರಿಸಲಾರದೆ, ನುಣಿಚಿಕೊಳ್ಳುವ ಪ್ರಯತ್ನ ಮಾಡುವ ವ್ಯಕ್ತಿಯ ದೌರ್ಬಲ್ಯ ಇಲ್ಲಿ ನೇರವಾದ ಮಾತಿನಲ್ಲಿ ಸೂಚಿತವಾಗಿದೆ. ಪ್ರಕೃತಿಯ ಉದಾಸೀನತೆ, ಜೀವಿಯ ಕಳಕಳಿ ಎರಡೂ ಈ ಭಾಗದಲ್ಲಿ ಚಿತ್ರಣಗೊಂಡಿವೆ.

ಆಷಾಢದಾಗಸದ ಗಾಳಿಪಟಗಳ ಮೇಲೆ ವಿರಹಿ ಯಕ್ಷನ ಸುಯ್ಲು ;
ಶ್ರಾವಣದ ಮಳೆ ಬಿಸಿಲು ; ಗದ್ದೆಯಲಿ ತೆನೆದೂಗುತಿವೆ ಪೈರು ;
ನೀಲಿಯಂಗಳದಲ್ಲಿ ಮೋಡಮಕ್ಕಳ ಕೇಕೆ.
ಬಿಳಲು ಬಿಡುತಿದೆ ವೃಕ್ಷ. ಟೊಂಗೆ ಟೊಂಗೆಯ ತುಂಬ
ಹಕ್ಕಿ ತೊಟ್ಟಿಲಕಟ್ಟಿ ಜೋಗುಳವ ಹಾಡುತಿವೆ ;
ಮೈಗೆ ಹೆಣೆದಿವೆ ಬಳ್ಳಿ ಅಲ್ಲಿಂದ ಇಲ್ಲಿಂದ ;
ಆಗಾಗ ಒಮ್ಮೊಮ್ಮೆ ಬಂದು ಕಾಡಿದೆ ಪ್ರಶ್ನೆ :
ನಾ ಬಂದುದೆಲ್ಲಿಂದ ?

ಈ ಚರಣ ಮಧ್ಯವಯಸ್ಸಿನ ಜೀವಿಯು ಬದುಕಿನ ಅನುಭವಗಳನ್ನು ಮೈಗೂಡಿಸಿಕೊಳ್ಳುವ ದಿಕ್ಕಿನಲ್ಲಿ ಮಾಡುವ ಪ್ರಯತ್ನಗಳನ್ನು ವಿವರಿಸುತ್ತದೆ. ಪ್ರಕೃತಿ ಸದಾ ಕಾರ್ಯೋನ್ಮುಖಿಯಾಗಿದ್ದು ಕರಗುತ್ತಿರುವುದನ್ನು ಪುನಃ ತನ್ನ ಸೃಷ್ಟಿಗೆ ಬಳಸಿಕೊಳ್ಳುತ್ತ, ತನ್ನ ರಾಜ್ಯದಲ್ಲಿ ನಡೆಯುವ ಎಲ್ಲ ನಾಶಕಾರ್ಯಕ್ಕೆ ತಾನೇ ಸಹಿ ಹಾಕುತ್ತ ತಿರುಗುತ್ತಿರುತ್ತದೆ. ಅಮರ್ತ್ಯತೆಯ ಸಂಗಡ ನಾವು ಮಾಡುವ ಹೋರಾಟದಲ್ಲಿ ನಮ್ಮ ದೇಹರೂಪ

ವನ್ನು ಒಂದಲ್ಲ ಒಂದು ವಿಧದಲ್ಲಿ ಉಳಿಸಿಕೊಳ್ಳುವ ಪ್ರಬಲ ಪ್ರಯತ್ನವೂ ಒಂದಾಗಿದೆ. ಸಂತಾನಪ್ರಾಪ್ತಿ ಜೈವಿಕ ನೆಲೆಯಲ್ಲಿ ಸಾವಿಗೆ ನಾವು ಕೊಡಬಹುದಾದ ಒಂದು ಸಮರ್ಪಕ ಉತ್ತರ.

ಗಾಳಿಪಟಗಳ ಹಾರಾಟದ ಚಿತ್ರ ಆಷಾಢಮಾಸವನ್ನೂ ವಿರಹಿಗಳ ಸುಯ್ಲನ್ನೂ ಬೆರಸಿ ಕೊಂಡು ಸಾಗುತ್ತದೆ. ಶ್ರಾವಣದ ಮಳೆ-ಬಿಸಿಲು ಎಂಬ ಮಾತು ಬದುಕಿನ ಸವಾಲಿಗೆ ಮೈಗೊಟ್ಟ ವ್ಯಕ್ತಿಯ ಸುಖಾನುಭವ ಮತ್ತು ಸಂಕಟದ ಅನುಭವಗಳನ್ನೆಲ್ಲ ಕೂಡಿಯೇ ವಿವರಿಸುತ್ತದೆ. ಆದರೆ ಮುಂದೆ ಮಳೆಗಿಂತ ಬಿಸಿಲಿನಂಶವೇ ಹೆಚ್ಚಾಗಿ ಮೂಡಿರುವಂತೆ ಕಾಣುತ್ತದೆ. ಗದ್ದೆಯಲ್ಲಿ ತೆನೆದೂಗುವ ಪೈರು, ನೀಲಿ ಅಂಗಳದಲ್ಲಿ ಮೋಡಮಕ್ಕಳ ಕೇಕೆ, ಬಿಳಲು ಬಿಡುವ ವೃಕ್ಷ, ಟೊಂಗೆಯ ತುಂಬ ತೊಟ್ಟಿಲು ಕಟ್ಟಿರುವ ಹಕ್ಕಿ, ಮೈಗೆ ಹೆಣೆದಿರುವ ಬಳ್ಳಿಗಳು—ಈ ಎಲ್ಲ ಸಂಕೇತಗಳೂ ಹೆಚ್ಚುಕಡಿಮೆ ಸಮಾನ ಧೋರಣೆಯನ್ನು ವ್ಯಕ್ತಪಡಿಸುವಂಥವಾಗಿದ್ದು ವಂಶಾಭಿವೃದ್ಧಿಯ ಸಂದೇಶಗಳನ್ನೇ ಕೊಡುತ್ತವೆ. ಪೈರು, ಮೋಡಮಕ್ಕಳು, ಬಿಳಲು, ಜೋಗುಳ, ಬಳ್ಳಿ ಇವೆಲ್ಲ ಹೇಳುವುದೂ ಅದನ್ನೇ. ಒಂದೇ ಸಂಗತಿಯನ್ನು ಒಂದೇ ದಿಕ್ಕಿನಲ್ಲಿ ವರ್ಣಿಸುವುದಕ್ಕೆ ಇಷ್ಟೆಲ್ಲ ವಿವರಣಪರವಾದ ಸಂಕೇತಗಳನ್ನು ಧಾರಾಳವಾಗಿ ಬಳಸಿದ್ದು ಉಚಿತವೆ ಎಂಬ ಸಂದೇಹ ಏಳುತ್ತದೆ. ಅಲ್ಲದೆ ಮೊದಲ ಮೂರು ಪ್ರತಿಮೆಗಳ ತೀವ್ರತೆ, ಸಾರ್ಥಕತೆ ಉಳಿದವಕ್ಕೆ ಬಂದಿಲ್ಲ.

'ಆಗಾಗ ಒಮ್ಮೊಮ್ಮೆ ಬಂದು ಕಾಡಿದೆ ಪ್ರಶ್ನೆ ; ನಾ ಬಂದುದೆಲ್ಲಿಂದ'

ಆಗಾಗ, ಒಮ್ಮೊಮ್ಮೆ ಎಂಬ ಮಾತುಗಳಲ್ಲಿರುವ ಪರಸ್ಪರ ವಿಮುಖಭಾವವನ್ನು ಗಮನಿಸಿ. ಅದಿರಲಿ. ಆಗಾಗ ಎಂಬ ಮಾತು ಕವಿಯ ಹೇಳಿಕೆಯಾಗಿದೆಯೇ ಹೊರತು ಕವನದ ಧ್ವನಿಯಲ್ಲಿ ಬಿಂಬಿತವಾಗಿಲ್ಲ. ಒಮ್ಮೆ ಮಾತ್ರ ಕಾಡಿ ಮುಂದೆ ತೊಂದರೆಯನ್ನೇ ಕೊಡದೆ ಈ ಪ್ರಶ್ನೆಯ ಮಗು ಹಾಗೆಯೇ ಉಳಿದುಬಿಡುತ್ತದೆ. ಇಲ್ಲಿ ಕವಿ ತಾನು ಅಂದು ಕೊಂಡದ್ದಕ್ಕಿಂತ ಹೆಚ್ಚು ಹೇಳುವ ಪ್ರಯತ್ನ ಮಾಡುತ್ತಿರಬಹುದೆಂಬ ಅನುಮಾನ ಬರಲು ಆಸ್ಪದವಿದೆ. ಅಥವಾ ರೂಢಿಯನ್ನು ಮೀರಿದ, ತರ್ಕಕ್ಕೆ ಬಗ್ಗದ ವೈಭವದಲ್ಲಿ ಮೈಮರೆತಿದ್ದಾರೋ ಎನ್ನಿಸುತ್ತದೆ.

ಗಂಟೆ ಹೊಡೆಯಿತು ನಾಲ್ಕು :
ಟೆನ್ನಿಸ್ಸಿನಾಟದಲಿ ಏನೊ ಬಳಲಿಕೆ ಸುಸ್ತು;
ಮಹಡಿಮೆಟ್ಟಲನು ಏರುವಾಗಲು ಕೂಡ ಎಂದಿಲ್ಲದಾಯಾಸ ;
ಜಂತೆಯಲಿ ಗೂಡು ಕಟ್ಟಿದ ಜೇನು ಹಾರಿಹೋಗಿವೆ ಈಗ
ತೂಗುತ್ತಲಿವೆ ಖಾಲಿ ಗೂಡು.
ಅಲ್ಲಲ್ಲಿ ಜೇಡಬಲೆಗಳ ಜಾಲ, ಸುಣ್ಣ ಬಣ್ಣವ ಬಳಿದ ಗೋಡೆಯಲ್ಲೂ ಕೂಡ
ಸುಕ್ಕು, ತರಕಲು, ಬಿರುಕು ;
ಛಾವಣಿಯ ಹೆಂಚು ಮಳೆ ಬಿಸಿಲು ಗಾಳಿಯಲಿ ಉದುರಿ
ಈಗೀಗ ಜಿನುಗುತಿದೆ ಮಾಗಿ ಮಂಜಿನ ಸೋನೆ.
ಆಗಾಗ ಸುಣ್ಣ ಬಣ್ಣವ ಹೊಡೆದು ರಿಪೇರಿ ಮಾಡಿದರೆ

ಇನ್ನರ್ಧ ಶತಮಾನ ಗ್ಯಾರಂಟಿ.
ತೂಬನೆತ್ತಿದರೇನಂತೆ ಬಿಡು, ಆ ನೀರಗಂಟಿ.

'ಟೆನ್ನಿಸ್ಸಿ'ನಾಟ, ಸುಸ್ತು ಇಲ್ಲಿ ಒತ್ತಕ್ಷರಗಳು ದಣಿದ ಲಯವನ್ನು ಸೂಚಿಸುತ್ತವೆ. ಹಿಂದಿನ ಸಾಲುಗಳ 'ಓಟ'ದೊಂದಿಗೆ ಇಲ್ಲಿನ 'ನಡಿಗೆ'ಯನ್ನು ಹೋಲಿಸಿ. ಟೆನಿಸ್ ಆಟದ ಮೂಲಕ ಮೂಲ ಸಂಬಂಧವಿಲ್ಲದ ಅನುಭವಗಳನ್ನು ಬೆರೆಸುವ ಕ್ರಿಯೆ ಸಫಲವಾಗಿ ವ್ಯಕ್ತಗೊಂಡಿದೆ. ರಾಣಿಜೇನು ತಪ್ಪಿಸಿಕೊಂಡಾಗ, ಅಂದರೆ ತಾರುಣ್ಯದ ಸರಕು ತೀರುತ್ತ ಬಂದಿದೆ ಎನ್ನಿಸಿದಾಗ ಜೇನು ಹಾರಿ ಹೋಗಿ ಬರಿಯ ಗೂಡು ಉಳಿಯುವುದು ಸ್ವಾಭಾವಿಕ. ಆಕಾರದಲ್ಲಿ ಮಾತ್ರ ಮೊದಲಿನ ರೂಪ ಉಳಿದುಕೊಂಡು ಸತ್ವದಲ್ಲಿ ಬದಲಾವಣೆಯಾಗಿದೆ ಎಂಬುದನ್ನು 'ಖಾಲಿ ಗೂಡು' ಸಮರ್ಥವಾಗಿ ಧ್ವನಿಸುತ್ತದೆ. ಹಿಂದಿನ ತಾರುಣ್ಯಕ್ಕೆ ಅನ್ವಯವಾಗಿದ್ದ ಜೇನುಗೂಡಿನ ಸಂಕೇತ ಬೆಳೆದು ಅದರ ಇನ್ನೊಂದು ಮಗ್ಗುಲನ್ನು ಕಾಣಿಸಿರುವುದು ಇಲ್ಲಿಯ ವೈಶಿಷ್ಟ್ಯ. ಆದರೆ ಮಹಡಿಮೆಟ್ಟಿಲನ್ನು ಹತ್ತುವ ಸಂಕೇತ ಮುಂದೆ ಕಾಣಿಸಿಕೊಂಡರು ಕೊನೆಯ ಚರಣದಲ್ಲಿ ಅದು ಮುಗ್ಗರಿಸಿರುವುದನ್ನು ಮುಂದೆ ನೋಡೋಣ. ಸದ್ಯಕ್ಕೇನೋ ಅದು ಬರಲಿರುವ ದಿನಗಳ ಕ್ಲಿಷ್ಟತೆಯನ್ನು ನೆನಪಿಗೆ ತರುವುದರಲ್ಲಿ ಸಮರ್ಥವಾಗಿದೆ. ಸಂಜೆಯ ಟೆನಿಸ್ ಆಟವ ನಂತರ ಬರುವ ಸಂಕೇತಗಳೆಲ್ಲ ಒಂದು ಮನೆಯ ಶಿಲ್ಪವನ್ನು ಆಧರಿಸಿ ಬಂದಂಥವು. ಆಯಾಸದಿಂದ ಮೆಟ್ಟಿಲು ಏರಿದರೆ, ಗೂಡು ಕಟ್ಟಿದ್ದ ಜೇನು ಹಾರಿ ಹೋಗಿ ಬರಿಯ ಜೇನು ಗೂಡಷ್ಟೆ ಮನೆಯ ಒಂದು ಭಾಗದಲ್ಲಿ ತೂಗಾಡುತ್ತದೆ. 'ಜೇಡಬಲೆಗಳ ಜಾಡು' ಎಂಬ ಚಿತ್ರ ಮನೆಯ ಗಟ್ಟಿತನ ಕುಸಿಯುತ್ತಿರುವ ರೀತಿಯನ್ನು, ಅವ್ಯವಸ್ಥೆ ತಲೆಹಾಕಿರುವುದನ್ನು ಸೂಚಿಸುತ್ತದೆ. ಅಲ್ಲದೆ ಹೊಂಚುಹಾಕುವ ಜೇಡದ ಬಲೆಯ ಸಾಂಪ್ರದಾಯಕ ಚಿತ್ರ ಮುಂದೆ ಬರಲಿರುವ ಕೊನೆಗಾಲದ ನೆನಪನ್ನು ಸ್ವಾಭಾವಿಕವಾಗಿಯೇ ತರುತ್ತದೆ. ರಿಪೇರಿಗಾಗಿ ಮನುಷ್ಯ ನಡೆಸುವ ಪ್ರಯತ್ನವೆಲ್ಲ ವ್ಯರ್ಥ ಎಂಬ ಧ್ವನಿ ಮುಂದಿನ ಸಾಲಿನಲ್ಲಿದೆ. ಛಾವಣಿಯ ಹೆಂಚು ಉದುರಿ ಮಾಗಿ ಮಂಜಿನ ಸೋನೆ ಜಿನುಗುತ್ತಿರುವುದು ಪ್ರಾಕೃತಿಕ ಶಕ್ತಿಗಳು ಜೀವದ ಕೈಬಿಡುತ್ತಿರುವುದರ ಮಸಕು ನೆನಪನ್ನು ತರುತ್ತವೆ. ನೀರಗಂಟಿ ಆಗಲೇ ತೂಬನ್ನು ಎತ್ತಿದ್ದಾನೆ ಎಂಬ ಚಿತ್ರ ಮುನ್ಸೂಚನೆಯನ್ನು ಕೊಡುವುದರಲ್ಲಿ ಯಶಸ್ವಿಯಾಗಿದೆ. ಆಗಾಗ ಸುಣ್ಣ ಬಣ್ಣವ ಹೊಡೆದು ರಿಪೇರಿ ಮಾಡಿದರೆ ಇನ್ನರ್ಧ ಶತಮಾನ ಗ್ಯಾರಂಟಿ ಎಂಬ ಮಾತಿನಲ್ಲಿ ಭರವಸೆಯ ಜತೆಗೆ ಹೋರಾಟದ ಮನೋಭಾವವೂ ವ್ಯಕ್ತಗೊಂಡಿದೆ. 'Old men ought to be explorers' ಅಲ್ಲವೆ? ಎಲಿಯಟ್ ಹೇಳುವಂತೆ 'We fight to keep something alive rather than in expectation that anything will triumph.' ಸುಣ್ಣ ಬಣ್ಣ ತಳೆದ ಗೋಡೆಯುಲ್ಲೂ ಕೂಡ ಸುಕ್ಕು ತರಕಲು, ಮತ್ತು ಆಗಾಗ ಸುಣ್ಣಬಣ್ಣವ ಹೊಡೆದು ರಿಪೇರಿ ಮಾಡುವುದು ಇವು ಕ್ರಮವಾಗಿ ಪ್ರಕೃತಿ ಮಾನವನ ಮೇಲೆ ನಡೆಸುವ ದಾಳಿ, ಮನುಷ್ಯ ಅದನ್ನು ಎದುರಿಸುವ ಕ್ರಮ ಇವೆರಡರ ಒಳ ತುಯ್ತಗಳನ್ನು ಚಿತ್ರಿಸುತ್ತವೆ.

ನಿಷ್ಕರುಣ ಗಡಿಯಾರ—
ಮುಳ್ಳು ನಾಲ್ಕನು ದಾಟಿ ಐದನೂ ಮುಟ್ಟಿ ಮುಂದೆ ಸಾಗುತ್ತಲಿದೆ.
ಸೂರ್ಯನ ಶಾಖ ಕಡಿಮೆಯಾಗುತ್ತಲಿದೆ ದಿನದಿನಕೆ;
ಬಾನ ನೀಲಿಗೆ ಹೊಳಪು ಸಾಲದು; ನೀರಿನಲಿ ರುಚಿಯಿಲ್ಲ;
ಏನು ಕಾಲವೊ ಏನೊ.

ನಿಷ್ಕರುಣ ಗಡಿಯಾರ ಎಂಬ ಮಾತು Time knows only the price we have to pay ಎಂಬ ಕ್ರೂರ ಸತ್ಯವನ್ನು ನೆನಪಿಗೆ ತರುತ್ತದೆ. ಕಾಲದ ತುಳಿತಕ್ಕೆ ಸಿಕ್ಕಿದ ವ್ಯಕ್ತಿ ಮೆದುವಾಗುತ್ತ ಹೋಗುತ್ತಿದ್ದರೂ ತನ್ನ ಕೊನೆಯ ಅಸ್ತ್ರವಾದ ಗೊಣಗಾಟವನ್ನು ಹಿಡಿದು ನಿಲ್ಲುತ್ತಾನೆ. ಸೂರ್ಯನ ಶಾಖ, ಬಾನ ನೀಲಿ, ನೀರಿನ ರುಚಿ ಎಲ್ಲದರಲ್ಲೂ ಒಂದು ಬಗೆಯ ಕೊರತೆ ವ್ಯಕ್ತಿಯ ಅನುಭವಕ್ಕೆ ಬರುತ್ತದೆ. ಆದರೆ ಅದು ತನ್ನ ವಯೋ-ಧರ್ಮದಿಂದ ಬಂದದ್ದೇ ಹೊರತು ನಿಜವಲ್ಲ ಎಂಬುದು ಹೊಳೆಯುವುದಿಲ್ಲ. ಏನು ಕಾಲವೊ ಏನೊ ಎಂಬ ಮಾತು ಈ ಗೊಣಗಾಟದ ವೈಖರಿಯನ್ನು ಚಿತ್ರಿಸುವುದರ ಜತೆಗೆ ಕಾಲದ ನೆಲೆಯನ್ನು ಅರ್ಥಮಾಡಿಕೊಳ್ಳಲಾಗದ ಕಳಕಳಿಯನ್ನೂ ಚಿತ್ರಿಸುತ್ತದೆ. ತಮ್ಮ ಕಾಲವೇ ಚೆನ್ನಾಗಿತ್ತು ಎಂದುಕೊಳ್ಳುತ್ತ, ಚೆನ್ನಾಗಿದ್ದ ಕಾಲಕ್ಕಷ್ಟೆ ತಮ್ಮ ಸದ್ಭಾವನೆಗಳನ್ನು ಮಿಸಲಾಗಿರಿಸಿ ಆ ವಲಯದಿಂದ ಆಚೀಚೆ ಅಲುಗಾಡಲಾಗದೆ ಕೊನೆಗೆ ಕಾಲವನ್ನೇ ನಿಂದಿಸತೊಡಗುವ ಮುದಿಚಾಳಿ ಈ ಗೊಣಗುಮಾತುಗಳಲ್ಲಿ ಸರಿಯಾಗಿ ವ್ಯಕ್ತವಾಗಿದೆ. ಅರಗಿಸಿಕೊಳ್ಳಲಾಗದಿದ್ದಾಗ ಆಕ್ಷೇಪಣೆ ಮಾಡುವ ಜನರ ಬುದ್ಧಿಯನ್ನು ಕವಿ ಇಲ್ಲಿ ವಿಡಂಬಿಸಿದ್ದಾನೆ:

ಸಂಜೆ ಬಾನಿನ ತುಂಬ ಹಗಲ ನೆನಪಿನ ಚಿತ್ರ
ಮನೆಯಂಗಳದ ಮಬ್ಬು ಬೆಳಕಿನ ನಡುವೆ ತಡವರಿಸುತಿದೆ ಕಣ್ಣು
ಮಹಡಿಮೆಟ್ಟಿಲ ಮೇಲೆ ಯಾರ್‍ಯಾರದೋ ಹೆಜ್ಜೆ
ಗೋಡೆಗಡಿಯಾರದಲಿ ಗಂಟೆ ಹೊಡೆದಿದೆ ಏಳು—
ಅದೊ ಕೇಳು,
ಯಾರೊ ಬಡಿಯುತ್ತಿದ್ದಾರೆ ಬಾಗಿಲ ಹೊರಗೆ
ಒಂದೇ ಸಮನೆ—
ಏಳು, ಬಾಗಿಲನು ತೆಗೆ, ಹೆದರದಿರು ಕೊನೆಗೆ.

ಈ ಕೊನೆಯ ಪಾದದಲ್ಲಿ ಹಿಂದಿನ ಅನೇಕ ಸಂಕೇತಗಳು ಮತ್ತೆ ಬೆಳೆದು ಕವಿತೆಯನ್ನು ಸಂಕೀರ್ಣಗೊಳಿಸಿವೆ. 'ಸಂಜೆ ಬಾನಿನ ತುಂಬ ಹಗಲ ನೆನಪಿನ ಚಿತ್ರ' ಸಾರ್ಥಕವಾದ ಒಂದು ಚಿತ್ರವಾಗಿದೆ. ಭೂತ ವರ್ತಮಾನಗಳನ್ನು ಹೀಗೆ ಹಿಂದು ಮುಂದು ಮಾಡುವುದರ ಮೂಲಕ ವರ್ತಮಾನದ ತಾತ್ಕಾಲಿಕ ಗುಣಗಳನ್ನು ಕಾಣಿಸುವುದು ಕವಿಯ ಪದ್ಧತಿ. 'You will have to live with these memories and make them into something new. Only by acceptance of the past will you alter its meaning' ಎಂಬ ಎಲಿಯಟ್‌ನ ಹೇಳಿಕೆ ಈ ಅನುಭವಕ್ಕೆ ಪೂರಕ

ವಾಗಿದೆ. ಕುಶಲ ಚಿತ್ರಗಾರನಂತೆ ವೃದ್ಧಾಪ್ಯದಲ್ಲಿ ಬಾಲ್ಯ ತಾರುಣ್ಯಗಳ ದೃಶ್ಯಾವಳಿಗಳನ್ನು ಮನಸ್ಸಿನಲ್ಲಿ ತುಂಬಿಕೊಳ್ಳುತ್ತ 'ಜ್ಞಾಪಕ ಚಿತ್ರಶಾಲೆ'ಯನ್ನು ಎಲ್ಲರಿಗೂ ವಿವರಿಸುತ್ತ ಹೋಗಬೇಕಾಗಿದೆ. ಎಲ್ಲ ಜೀವಿಗಳಿಗೂ ಸಾವಿನ ಅನಿವಾರ್ಯತೆಯ ಅರಿವಿರುತ್ತದೆ. ತನ್ನ 'ಭೂತ'ದ ನೆನಪುಗಳನ್ನು ರದ್ದಿಯಂತೆ ತಿಪ್ಪೆಗೆ ಎಸೆಯಲು ಮನಸ್ಸಾಗುವುದಿಲ್ಲ. ಎಲಿಯಟ್ ಹೇಳುವಂತೆ :

. . . . I am the old house
with the noxious smell and the sorrow before morning,
In which all past is present.

ಈ ಮನಃಸ್ಥಿತಿಯಲ್ಲಿ 'ಮನೆಯಂಗಳದ ಮಬ್ಬು ಬೆಳಕಿನ ನಡುವೆ ತಡವರಿಸುವ ಕಣ್ಣಿನ ಚಿತ್ರ' ಬಂದಿದೆ. ಮೊದಲ ಮಬ್ಬಿನಿಂದ ಕೊನೆಯ ಮಬ್ಬಿನ ವರೆಗಿನ ಆವರ್ತನ ಮುಗಿಯುತ್ತ ಬಂದಿರುವುದನ್ನೂ ಜೀವದ ಅರಸುವ ಪ್ರಯತ್ನವನ್ನೂ ಈ ಮಾತುಗಳು ವಿವರಿಸುತ್ತವೆ. ಮಹಡಿಮೆಟ್ಟಿಲ ಮೇಲೆ ಯಾರ್ಯಾರದೋ ಹೆಜ್ಜೆಯ ಶಬ್ದಗಳು ಕಿವಿಯಲ್ಲಿ ಗುಂಯ್‌ಗುಡುತ್ತವೆ. ಯಾರೋ ಹೊರಗಿನಿಂದಲೂ ಬಾಗಿಲು ಬಡಿಯುತ್ತಾರೆ. ಕವಿಯ ಚಿಂತನೆ ಇಲ್ಲಿ ಧಾರ್ಮಿಕ ನೆಲೆಗಟ್ಟಿನ ಕಡೆಗೆ ಹೋಗುತ್ತದೆ. ಮೊದಮೊದಲು ಅಸ್ಪಷ್ಟವಾಗುತ್ತ ಕೊನೆಗೆ ಖಚಿತವಾಗುತ್ತ ಹೋಗುವ ರೀತಿಯಲ್ಲಿ ಪಾದಗಳ ವಿನ್ಯಾಸವನ್ನೂ ರೂಪಿಸಲಾಗಿದೆ. ಬದುಕಿನ ಅಂತಿಮಯಾತ್ರೆಯ ನೆರಳು ಕವನದ ಕಡೆಯ ಚರಣಗಳಲ್ಲಿ ದಟ್ಟವಾಗುತ್ತ ಬರುತ್ತದೆ. ಮಂಡನೆ ಪುನರ್ಮಂಡನೆಗಳ ತಂತ್ರವನ್ನು ಹೊಂದಿಸಿ ಜೀವನವ ಕಾತರವನ್ನು ವರ್ಣಿಸುವ ಪ್ರಯತ್ನ ಸಫಲವಾಗಿದೆ. ಬಾಗಿಲ ಬಡಿತ ಸಹಜವಾದದ್ದು. ಇದಕ್ಕೆ ಹೆದರಬೇಕಾಗಿಲ್ಲ ಎಂಬ ಆಶ್ವಾಸನೆಯೂ 'ಹೆದರದಿರು' ಎಂಬ ಧೈರ್ಯೋಕ್ತಿಯಲ್ಲಿ ದೊರೆಯುತ್ತದೆ. ಎಲಿಯಟ್ ಕವಿಯ

A voice not looked for
But heard, half heard in the stillness
Between two waves of sea

ಎಂಬ ಹೇಳಿಕೆಯನ್ನು ಹಿನ್ನೆಲೆಯಲ್ಲಿ ಗಮನಿಸಬಹುದು.

'ಮಹಡಿಮೆಟ್ಟಿಲ ಮೇಲೆ ಯಾರ್ಯಾರದೋ ಹೆಜ್ಜೆ' ಇಲ್ಲಿ ಮತ್ತು ಮುಂದಿನ ಸಾಲುಗಳಲ್ಲಿ ಲಾರೆನ್ಸ್ ಮತ್ತು ಎಲಿಯಟ್ಟರ ಪ್ರಭಾವ ದಟ್ಟವಾಗಿದೆ. ಎಲಿಯಟ್‌ನ 'Mariana' ದಲ್ಲಿ ಬರುವ

Old foot steps trod the upper floors . . . . ಎಂಬ ಮಾತು ಈ ಸಾಲಿಗೆ ಪ್ರೇರಕವೆಂಬುದು ಸ್ಪಷ್ಟ. ಆದರೆ ಇದರ ಕನ್ನಡ ಅವತರಣದಲ್ಲಿ upper floors ಎಂಬುದು ಮಹಡಿಮೆಟ್ಟಿಲಾಗಿ ತುಂಬ ಕಷ್ಟಕ್ಕೆ ಸಿಕ್ಕಿಸುತ್ತದೆ. ಹಿಂದಿನ ಚರಣವೊಂದರಲ್ಲಿ ಬರುವ 'ಮಹಡಿಮೆಟ್ಟಿಲನು ಹತ್ತುವಾಗಲು ಕೂಡ ಎಂದಿಲ್ಲದಾಯಾಸ' ಎಂಬ ಉಕ್ತಿ ಖಚಿತವಾಗಿ ಏರುತ್ತಿರುವ ವ್ಯಕ್ತಿಚಿತ್ರವನ್ನು ಕೊಟ್ಟಿರುವುದರಿಂದ ಇಲ್ಲಿ

ಬರುವ 'ಮಹಡಿಮೆಟ್ಟಿಲ ಮೇಲೆ ಯಾರ್‍ಯಾರದೋ ಹೆಜ್ಜೆ' ಎಂಬ ಮಾತು 'ಸ್ವೋಕ್ತಿ ವಿರೋಧ'ದ ಗೊಂದಲವನ್ನು ತಂದೊಡ್ಡುತ್ತದೆ. ಇಲ್ಲಿಯೂ ಮೆಟ್ಟಿಲ ಬದಲು ಎಲಿಯಟ್ಟನಲ್ಲಿಯಂತೆಯೇ upper floors ಆಗಿದ್ದಿದ್ದರೆ ಸಂಕೇತದ ಬೆಳವಣಿಗೆಯೂ ಕ್ರಮ ಪೂರ್ಣವಾಗಿರುತ್ತಿತ್ತು. ಇಂಥ ತಾಂತ್ರಿಕ ಅನವಧಾನಗಳು ವಿಚಾರದ ದಿಕ್ಕನ್ನು ಬದಲಿಸಿ ಕಸಿವಿಸಿಗೊಳಿಸುತ್ತವೆ.

'ಯಾರ್‍ಯಾರದೋ ಹೆಜ್ಜೆ' ಎಂಬಲ್ಲಿ ಹೆಜ್ಜೆಯ ತುಳಿತ ಒಂದು ವಿಶಿಷ್ಟ ಸಂಕೇತವಾಗಿ ಬೆಳೆದು ಕವಿತೆಯನ್ನು ಗೂಢತೆಯ, ವಿಸ್ಮಯದ ನೆಲೆಗೆ ಕೊಂಡೊಯ್ಯುತ್ತದೆ. ಇಂಥ ಹೆಜ್ಜೆಗಳ ಧ್ವನಿಯನ್ನು ತಿಳಿಯಬಲ್ಲ ಪೂರ್ವಸಿದ್ಧತೆ ಆ ವೇಳೆಗಾಗಲೇ ವ್ಯಕ್ತಿಗೆ ಬಂದಿರುತ್ತದೆ. ಆ ಜೀವ ಥಾಮಸ್ ಬೆಕೆಟ್‌ನಂತೆ:

> All my life they have been coming, these feet, All my life
> I have waited ....
> I have only to make perfect my will

ಎಂದು ಸಂಕಲ್ಪಿಸಿರುತ್ತದೆ.

ಗೋಡೆ ಗಡಿಯಾರ ಖಚಿತವಾಗಿ ಏಳು ಹೊಡೆಯುತ್ತದೆ. ಗಂಟೆ ಹೊಡೆದಿದೆ ಏಳು ಅದೊ ಕೇಳು ಎಂಬಲ್ಲಿ ಏಳು ಕೇಳುಗಳು ಕರಾರುವಾಕ್ಕಾಗಿ ಮುನ್ಸೂಚನೆ ನೀಡುತ್ತವೆ. ಏಳು ಎಂಬ ಶಬ್ದದ ದ್ವಂದ್ವಾರ್ಥ ಗಮನಿಸಬೇಕಾದದ್ದು.

> ಯಾರೊ ಬಡಿಯುತ್ತಿದ್ದಾರೆ ಬಾಗಿಲ ಹೊರಗೆ
> ಒಂದೇ ಸಮನೆ
> ಏಳು ಬಾಗಿಲನು ತೆಗೆ, ಹೆದರದಿರು ಕೊನೆಗೆ.

ಈ ಸಾಲುಗಳು ಡಿ. ಎಚ್. ಲಾರೆನ್ಸನ

> What is the knocking?
> What is the knocking at the door in the night?
> ........................
> ........................
> Admit them, admit them
> ('Song of a man who has come through')

ಎಂಬ ಸಾಲುಗಳಿಂದ ಪ್ರೇರಣೆ ಪಡೆದಿರಬಹುದಾದ ಸಾಧ್ಯತೆಯಿದೆ.

ಬದುಕಿನ ಕೊನೆಯ ಚರಣಕ್ಕೆ ಅಗತ್ಯವಾದ ಧೈರ್ಯವನ್ನು ತುಂಬಿಕೊಡುವುದಕ್ಕೆ ಯತ್ನಿಸುವ 'ಏಳು, ಬಾಗಿಲನು ತೆಗೆ, ಹೆದರದಿರು ಕೊನೆಗೆ' ಎಂಬ ಸಾಲು ಎಲಿಯಟ್‌ನ

> But resign this land at the end, resign it
> To its true owner, the tough one, the sea gull

ಎಂಬ ಉಕ್ತಿಯಂತೆ ಸಾಂತ್ವನ ಸಮರ್ಥವಾಗಿದೆ.

ಹೀಗೆ ಈ ಕವಿತೆ ಕಾಲದಂಥ ಸಾರ್ವತ್ರಿಕ ಅನುಭವವನ್ನು ಆಪ್ತ ಮಾನಸಿಕ ಅನುಭವದ ಸಹಾಯದಿಂದ ಅರ್ಥವಿಸಿಕೊಳ್ಳುವ ಪ್ರಾಮಾಣಿಕ ಪ್ರಯತ್ನವಾಗಿದೆ.

ರಾಮದಾಸ್

# ಮಬ್ಬಿನಿಂದ ಮಬ್ಬಿಗೆ

ರಮ್ಯ, ನವ್ಯ ಮುಂತಾದ ವರ್ಗೀಕರಣಗಳ ಗೋಜಿಗೆ ಹೋಗದೆ ಕವನದ ಕಾವ್ಯತ್ವ-ವನ್ನು ಮಾತ್ರ ದೃಷ್ಟಿಯಲ್ಲಿಟ್ಟುಕೊಂಡು ಯಾವುದೇ ಕವನದ ಪ್ರಾಯೋಗಿಕ ವಿಮರ್ಶೆ ಮಾಡಬೇಕಾದ್ದು ಅಗತ್ಯ. ಈ ದೃಷ್ಟಿಯಿಂದ ನೋಡಿದಾಗ, ಡಾ. ಜಿ. ಎಸ್. ಶಿವರುದ್ರಪ್ಪನವರು ಹಲವಾರು ಅತ್ಯುತ್ತಮ ಕವನಗಳನ್ನು ಬರೆದಿದ್ದಾರೆಂಬುದು ಖಚಿತ. 'ಮಬ್ಬಿನಿಂದ ಮಬ್ಬಿಗೆ' ಅವರ ಉತ್ತಮವಾದ ಕವನಗಳ ಸಾಲಿನಲ್ಲಿ ಸೇರುವುದಿಲ್ಲ. ಆದರೂ ಈ ಕವನ ಹಲವಾರು ಸಾವಿರ ವಿದ್ಯಾರ್ಥಿಗಳು ಓದಿ ಅಭ್ಯಾಸ ಮಾಡಿದ ಕವನವಾದ್ದರಿಂದ; ಕನ್ನಡ ಅಧ್ಯಾಪಕನಾದ ನಾನಿದನ್ನು ಪಾಠ ಹೇಳಬೇಕಾಗಿ ಬಂದಾಗ ಇದರಲ್ಲಿ ಕಂಡ ಕೆಲವು ಉತ್ತಮ ಅಂಶಗಳು ನನಗೆ ಮೆಚ್ಚುಗೆಯಾದ್ದರಿಂದ ಇದನ್ನು ನಾನು ವಿಮರ್ಶೆಗಾಗಿ ಆರಿಸಿಕೊಂಡಿದ್ದೇನೆ.

ಪ್ರಕೃತಿ ವ್ಯಾಪಾರದಲ್ಲಿ ಕಂಡುಬರುವ ಸಾಮ್ಯಗಳು, ಸಮಾನ ಧರ್ಮಗಳು ಹಲವಾರು. ವಿವಿಧ ವಸ್ತು ವಿಷಯ ಸಮಯ ಸಂದರ್ಭಗಳಲ್ಲಿ ಕಂಡುಬರುವ ಸಾಮ್ಯ, ಸಮಾನ ಧರ್ಮಗಳನ್ನು ಕವಿಯಾದವನು ಗ್ರಹಿಸಿರುತ್ತಾನೆ. ಆ ಗ್ರಹಿಕೆ ಅವನ ಜಾಗೃತ್ ಪ್ರಜ್ಞೆಗಿಂತಲೂ ವಿಶೇಷವಾಗಿ ಸುಪ್ತಪ್ರಜ್ಞೆಯಲ್ಲಿ ಸಂಚಿತವಾಗಿರುತ್ತದೆ. ಕಾವ್ಯ-ಸೃಷ್ಟಿಯ ಸಂದರ್ಭದಲ್ಲಿ ಅವು ಸಂಕೇತಗಳಾಗಿ, ಉಪಮೆ-ರೂಪಕಗಳಾಗಿ, ಪ್ರತಿಮೆಗಳಾಗಿ ಮೈಯಾಂತಳಿಕೊಳ್ಳುತ್ತವೆ. ಕಾವ್ಯವಸ್ತುವಿನ ಚೌಕಟ್ಟಿನಲ್ಲಿ ಅವುಗಳಿಗೆ ಸಾಂಗತ್ಯವಿದ್ದರೆ ಕಾವ್ಯ ಉತ್ತಮವಾಗುತ್ತದೆ. ಹಾಗಿಲ್ಲ; ಕಾವ್ಯದ ಒಪ್ಪ-ಓರಣ, ನಯ-ನಾಜೂಕು ಕೆಡುತ್ತದೆ. ಕಾವ್ಯದ ಒಟ್ಟಂದಕ್ಕೆ ಧಕ್ಕೆ ಒದಗುತ್ತದೆ. ಪ್ರತಿಮಾಬದ್ಧ ಕಾವ್ಯಗಳಲ್ಲಿ ಈ ಅಪಾಯದ ಸಾಧ್ಯತೆ ಹೆಚ್ಚು.

ಸೂರ್ಯೋದಯ, ಸೂರ್ಯಾಸ್ತಮಾನ ಪ್ರತಿದಿನ ನಡೆಯುವ ಪ್ರಕೃತಿ ವ್ಯಾಪಾರ. ಬೆಳಗಿನಿಂದ ಬೈಗಿನವರೆಗೆ ಪ್ರಕೃತಿಯಲ್ಲಿ ನಡೆಯುವ ವಿವಿಧ ವ್ಯಾಪಾರಗಳನ್ನು, ಚಟುವಟಿಕೆಗಳನ್ನು ಗಮನಿಸಿದ ಕವಿ; ಕತ್ತಲಾಗುತ್ತಿದ್ದಂತೆ ಅವೆಲ್ಲವೂ ಸ್ತಬ್ಧವಾಗುವುದನ್ನು ಕಂಡಿದ್ದಾನೆ. ಕತ್ತಲಿನ ಗರ್ಭದಿಂದ ಹುಟ್ಟಿಬಂದ ಸೂರ್ಯ ಮತ್ತೆ ಕತ್ತಲಿನ ಗರ್ಭವನ್ನು ಪ್ರವೇಶಿಸುವ ಕ್ರಿಯೆ ಮನುಷ್ಯ ಜೀವನಕ್ಕೊಂದು ಪ್ರತಿಮೆಯಾಗಬಲ್ಲುದೆಂಬ ಅಂಶ ಅವನಿಗೆ ಹೊಳೆದಿದೆ. ಹಗಲಿನ ವ್ಯಾಪಾರ ಹಾಗೂ ಮನುಷ್ಯನ ಬದುಕಿನಲ್ಲಿರುವ ಸಾಮ್ಯ

ವನ್ನು ಗ್ರಹಿಸಿದ ಕವಿ, ಅದನ್ನೇ ತನ್ನ ಕಾವ್ಯವಸ್ತುವನ್ನಾಗಿ ಮಾಡಿಕೊಂಡಿದ್ದಾನೆ. ಹುಟ್ಟಿದ ಸೂರ್ಯ ಮುಳುಗುವುದೂ ಹುಟ್ಟಿದ ಮನುಷ್ಯ ಸಾಯುವುದೂ ಅನಿವಾರ್ಯ. ಸಾವನ್ನು ವ್ಯಕ್ತಿ ಧೈರ್ಯವಾಗಿ ಎದುರಿಸಬೇಕೆಂಬ ಪಾಠವನ್ನು ಆತ ಕಲಿತಿದ್ದಾನೆ. 'ಅವ್ಯಕ್ತಾದೀನಿ ಭೂತಾನಿ, ವ್ಯಕ್ತ ಮಧ್ಯಾನಿ, ಅವ್ಯಕ್ತ ನಿಧನಾನಿ' ಎಂಬ ವಿಷಯವೂ, 'ಜಾತಸ್ಯ ಧ್ರುವೋ ಮೃತ್ಯುಃ' ಎಂಬುದೂ ಅವನಿಗೆ ಗೊತ್ತಿದೆ.

ಮನುಷ್ಯನ ಬದುಕು ಅವ್ಯಕ್ತದಿಂದ ಅವ್ಯಕ್ತದ ನಡುವಿನದು ಎಂಬುದರಿಂದ ಕಾವ್ಯದ ಶೀರ್ಷಿಕೆ, 'ಮಬ್ಬಿನಿಂದ ಮಬ್ಬಿಗೆ' ಎಂದಾಗಿದೆ. ಸೂರ್ಯನಾದರೂ ಮಬ್ಬಿನಿಂದ ಮಬ್ಬಿಗೆ ಪಯಣಿಸುವ ಯಾತ್ರಿಕ. ಆದರೂ ಸೂರ್ಯ ಮನುಷ್ಯನ ಬದುಕಿಗೆ ಸಂಕೇತನಾಗಿ, ಅವನ ಪ್ರಯಾಣ ವ್ಯಕ್ತಿಯ ಬದುಕಿನ ವಿವಿಧ ಸ್ತರಗಳ ಭಾವಾವೇಶಗಳಿಗೆ ಕಾರಣವಾಗಿ; ಕವನದಲ್ಲಿ ವ್ಯಕ್ತಿಯ ಜೀವನ ಪ್ರಾಮುಖ್ಯ ಪಡೆಯುತ್ತದೆ. ಕವಿಹೃದಯ ವ್ಯಕ್ತಿಯ ಭಾವಾವೇಶಗಳಿಗೆ ಪ್ರತಿಸ್ಪಂದಿಸುತ್ತದೆ. ಆ ಪ್ರತಿಸ್ಪಂದನ ಕವನದುದ್ದಕ್ಕೂ ಬರುವ ಪೋಷಕ ಪ್ರತಿಮೆಗಳಲ್ಲಿ, ರೂಪಕಗಳಲ್ಲಿ, ನಿರೂಪಣೆಗಳಲ್ಲಿ, ಹೇಳಿಕೆಗಳಲ್ಲಿ ಸ್ಪಷ್ಟವಾಗುತ್ತ ಕಡೆಗೆ ಒಂದು ಹಗಲು ವ್ಯಕ್ತಿ ಜೀವನಕ್ಕೊಂದು ಉತ್ತಮ ಪ್ರತಿಮೆಯಾಗಬಲ್ಲುದೆಂಬುದನ್ನು ಸಮರ್ಥಿಸಿಕೊಳ್ಳುತ್ತದೆ. ಆದರೆ ಕವನದಲ್ಲಿ ಬರುವ ಒಂದೆರಡು ಅಂಶಗಳು ಕೇಂದ್ರ ಪ್ರತಿಮೆಯನ್ನು ಪೋಷಿಸಿಕೊಂಡು, ಸುಸಂಗತವಾಗಿ ಹೊಂದಿಕೊಂಡು ಹೋಗಲಾರದೆ ಕಾವ್ಯದ ಬಂಧವನ್ನು ಸಡಿಲಿಸಿ ಕಾವ್ಯಾನುಭವದ ತೀವ್ರತೆಗೆ ಭಂಗ ತರುತ್ತವೆ. ಕಾವ್ಯವಸ್ತುವನ್ನು ಪೋಷಿಸುವುದಕ್ಕೆ ಬೇಕಾದ ಅನುಭವಗಳನ್ನು ಮಾತ್ರ ಕವಿ ಆಯ್ಕೆ ಮಾಡಿ ಮಾತುಗಳಲ್ಲಿ ಮೂಡಿಸದಿದ್ದರೆ ಕಾವ್ಯದ ಸಮಗ್ರಸೌಂದರ್ಯ ಶೋಭಿಸುವುದಿಲ್ಲ.

> ಆರು ಗಂಟೆಯ ಮೊಳಗು :
> ಮೂಡಣದ ಹೆರಿಗೆಮನೆಯಲ್ಲಿ ಸಡಗರವೊ ಸಡಗರ;
> ಕತ್ತಲಿನ ಬಸಿರು ಬೆಸಲಾದ ಬಂಗಾರ ಮೋರೆಯ ಕುವರ
> ಬಂದ,
> ಉಲ್ಲಾಸಗಳ ತಂದ.

—ಕವನದ ಆರಂಭದಲ್ಲಿರುವ ಈ ಚಿತ್ರ, ಕವಿ ಕಂಡುಕೊಂಡ ಸಾಮ್ಯವನ್ನು ಸಮರ್ಥಿಸುವ ಒಂದು ಸುಂದರವಾದ ರೂಪಕ. ಸೂರ್ಯೋದಯವನ್ನು, ಅದರೊಂದಿಗೆ ಪ್ರಕೃತಿಯಲ್ಲಿ ಕಾಣುವ ಸಡಗರವನ್ನು ಚಿತ್ರಿಸುವುದರ ಜತೆಗೆ ಇದು ಕಾವ್ಯ ನಾಯಕನಾದ ವ್ಯಕ್ತಿಯ ಹುಟ್ಟನ್ನೂ ಅವನು ತನ್ನವರಿಗೆ ತಂದ ಉಲ್ಲಾಸಗಳನ್ನೂ ಸ್ಪಷ್ಟಪಡಿಸುತ್ತದೆ. ಕವನದ ಆರಂಭ, ನಾಟಕೀಯವಾಗಿ, ಆರು ಗಂಟೆಯ ಮೊಳಗನ್ನು ಘೋಷಿಸುವುದರ ಮೂಲಕ ತೊಡಗುತ್ತದೆ. ನಾಟಕಗಳಲ್ಲಿ ದೃಶ್ಯಾದಿಗಳ ನಿರೂಪಣೆ ಇರುವಂತೆ ಈ ಕವನದುದ್ದಕ್ಕೂ ಕಾಲದ ನಿರೂಪಣೆ ಹಿನ್ನೆಲೆಯ ಧ್ವನಿಯಾಗಿ ಕೇಳಿಸುತ್ತ, ಕೆಲವೊಮ್ಮೆ ಕವನದೊಡನೆ ಸಾವಯವ ಸಂಬಂಧವನ್ನಿರಿಸಿಕೊಳ್ಳಲಾಗದೆ ಹೊರಗೇ ಉಳಿಯುತ್ತದೆ. ಆರು ಗಂಟೆಯ ಮೊಳಗಿನ ಪೀಠಿಕೆ; ಮುಂದಿನ ನಾಲ್ಕು ಸಾಲುಗಳು ಸಂಕ್ಷಿಪ್ತ

ವಾಗಿ, ಸಮರ್ಥವಾಗಿ, ಸುಂದರವಾಗಿ ಅಭಿವ್ಯಕ್ತಗೊಳಿಸುವ ಅನುಭವಕ್ಕೆ ಅಗತ್ಯವೆನ್ನಿಸುವುದಿಲ್ಲ. ಮೂಡಣದ ಹೆರಿಗೆಮನೆಯಲ್ಲಿ ಕತ್ತಲಿನ ಬಸಿರು ಬೆಸಲಾಗಿ ಬರುವ ಬಂಗಾರದ ಮೋರೆಯ ಕುವರ ಅದೇ ಕೆಲಸವನ್ನು ಕಾವ್ಯಾತ್ಮಕವಾಗಿ ಮಾಡಬಲ್ಲವನಾಗಿದ್ದಾನೆ. ಈ ನಾಲ್ಕು ಸಾಲುಗಳು ಸ್ವಯಂಪೂರ್ಣವಾದ ಪುಟ್ಟ ಕವನದಂತೆ ವರ್ತಿಸಿ ಸೂರ್ಯೋದಯದ ಸೊಗಸನ್ನು ಸುಂದರವಾಗಿ ಹಿಡಿದಿಟ್ಟಿದೆ. ಮುಂದೆ ಬರುವ—

ಜೋಯಿಸರು ಪಂಚಾಂಗವನು ತಿರುವಿ,
ಸಕಲಗ್ರಹಬಲಸ್ಥಿತಿಯ ನೋಡಿ, ಕುಂಡಲಿ ಬರೆದು
ಮರಳಿದರು ಮನೆಗೆ

ಎಂಬ ಸಾಲುಗಳು, ಮೊದಲಿನ ರೂಪಕವನ್ನು ವ್ಯಕ್ತಿಯ ಅಥವಾ ಈ ಕವನದ ನಾಯಕನ ಹುಟ್ಟನ್ನು ಪ್ರತಿಮಿಸಲು ನೆರವಾಗುತ್ತದೆ. ಅಂದರೆ ಆರಂಭದಲ್ಲಿ ರೂಪಕಗಳಿಂದ ತುಂಬಿದ ಸ್ವಯಂಪೂರ್ಣವಾದ ಪುಟ್ಟ ಪದ್ಯ, ಈಗ ಪ್ರತಿಮೆಯಾಗುತ್ತದೆ. ವ್ಯಕ್ತಿಯ ಹುಟ್ಟಿನತ್ತ ಬೆರಳುಮಾಡಿ ತೋರಿಸುವ ಸಂಕೇತವಾಗುತ್ತದೆ. ಇಡೀ ಕವನದ ಅಚ್ಚುಕಟ್ಟಿನಲ್ಲಿ, ಈ ಮೂರು ಸಾಲುಗಳಿಗೆ ಇದರ ಹೊರತು ಬೇರೆ ಯಾವ ಸಾವಯವ ಸಂಬಂಧವೂ ಏರ್ಪಡುವುದಿಲ್ಲ. ವ್ಯಕ್ತೀಕೃತನಾದ ಬೆಳಗಿನ ಸೂರ್ಯ, ಮೂರು ಮತ್ತು ನಾಲ್ಕನೇ ಗುಂಪಿನ ಸಾಲುಗಳಲ್ಲಿ ವ್ಯಕ್ತಿಯ ಶೈಶವವನ್ನು ಪ್ರತಿನಿಧಿಸುವುದು ವ್ಯಕ್ತವಾಗುತ್ತದೆ. ಅಂದಮೇಲೆ ಜೋಯಿಸರು ಬಂದು ಹೋಗುವ ಕ್ರಿಯೆಯ ನಿರೂಪಣೆ ಒಟ್ಟು ಕವನದ ಉದ್ದೇಶಕ್ಕೆ ಅನಿವಾರ್ಯವೆಂದೆನ್ನಿಸುವುದಿಲ್ಲ. ಹಾಗಾಗಿ ಕವನ ಮುಂದುವರಿದಂತೆ, ನಿರುಪಯುಕ್ತವಾಗಿ ಮೂಲೆಗುಂಪಾಗುವ ಈ ಜೋಯಿಸರ ಚಿತ್ರ, ಕೇವಲ ಯಾಂತ್ರಿಕವಾಗಿ ಬಂದು ಹೋಗುತ್ತದೆ. ವ್ಯಕ್ತಿಜೀವನದ ಏರುಪೇರುಗಳಲ್ಲಿ ಯಾವ ಪರಿಣಾಮವನ್ನೂ ಬೀರದೆ, ಅರ್ಥಹೀನವಾಗುವ ಜಾತಕರಚನೆಯ ಧಾರ್ಮಿಕ ಕ್ರಿಯೆಯ ಶಬ್ದಚಿತ್ರ, ತಾತ್ತ್ವಿಕವಾದ ಈ ಕವನದ ಒಂದು ಅವಿಭಾಜ್ಯ ಅಂಗವಾದರೆ ಕವಿಯ ವೈಯಕ್ತಿಕ ಪ್ರತಿಕ್ರಿಯೆಯಾಗಿ, ಒಂದು ವಿಡಂಬನೆಯಾಗಿ ಕವನದಿಂದ ಹೊರಗೇ ನಿಲ್ಲುತ್ತದೆ. ಇದೇ ಕವಿಯ 'ಹಾದಿ ಬದಿಯ ಜೋಯಿಸ' ಕವನ ರಚನೆಗೆ ಪ್ರೇರಕವಾದ ಕವಿಯ ಧೋರಣೆ ಇಲ್ಲಿ ಅತಿಕ್ರಮಪ್ರವೇಶ ಮಾಡಿದಂತಿದೆಯಷ್ಟೆ.

ಕವನ ಮುಂದುವರಿದಂತೆ ವ್ಯಕ್ತಿಯ ಬದುಕಿಗೆ ಪ್ರತಿಮೆಯಾಗಿ ಹುಟ್ಟಿದ ಸೂರ್ಯ, ಹರಡಿದ ಬಿಸಿಲಾಗಿ ಕ್ರಮೇಣ, ವ್ಯಕ್ತಿಯ ಬೆಳವಣಿಗೆಯನ್ನು, ಅವನ ವಯೋಮಾನವನ್ನು ಸೂಚಿಸುವ ಗಡಿಯಾರದ ಮುಳ್ಳಾಗಿಬಿಡುತ್ತಾನೆ. ಹರಡಿದ ಬಿಸಿಲು ಅಂಬೆಗಾಲಿಟ್ಟು ಹೊಸಿಲು ದಾಟುವ ಕ್ರಿಯೆ; ಹುಟ್ಟಿದ ಮಗು ಬೆಳೆಯುತ್ತ ಪಶುಪಕ್ಷಿಗಳಿಂದ, ವಿವಿಧ ಶಬ್ದಗಳಿಂದ ಸೋಜಿಗಪಡುವ ಸನ್ನಿವೇಶವನ್ನು ಸೃಷ್ಟಿಸುತ್ತದೆ. ಹಸುವಿನ ಕೊರಳ ಗಂಟೆದನಿ, ಕಾಗೆಯ ಕಾ, ಗುಬ್ಬಿಯ ಚಿಲಿಪಿಲಿ, ಕೆಚ್ಚಲಿನಲಿ ಮೊಗವಿಟ್ಟ ಮುದ್ದು ಕರು, ಬಾಲವಾಡಿಸ ನಾಯಿ ಮೊದಲಾದ ಚಿತ್ರಗಳು ಮಗುವಿನ ವಿಸ್ಮಯಕ್ಕೆ ಕಾರಣವಾಗು

ತ್ತವೆ. ಆದರೆ ಸೋಜಿಗದ ಹೊನಲಾದ ಅಪ್ರ ಮಗುವಿಗೆ ಅಪ್ತವಾಗುವುದಿಲ್ಲ. ಆ ಸೋಜಿಗವನ್ನೂ ಮೀರಿಸಿ ಹತ್ತಿರವಾಗುವ ಭಾವ ತಾಯಿಯ ಪ್ರೀತಿ ಹಾಗೂ ರಕ್ಷಣೆ.

ಮಲ್ಲಿಗೆಯ ಮಳೆಗರೆವ ಕಣ್ಣು ಎರಡೇ ಎರಡು
ಮೇಲ್ ಮುಗಿಲಲ್ಲಿ,
ಕೆಳಗೆ ಹಸುರು ಸೆರಗಿನ ಮೆತ್ತೆ

—ಎಂಬ ಪ್ರತಿಮೆಯಲ್ಲಿ ಕಂಡುಬರುವ ಮುಗಿಲು, ಬಯಲಿನ ವೈಶಾಲ್ಯ ಮಗುವಿನ ದೃಷ್ಟಿಯಿಂದ ತಾಯಿಯ ಪ್ರೇಮದೃಷ್ಟಿಯ, ಆಕೆಯ ಸೆರಗಿನಾಶ್ರಯದ ಮಹತ್ತ್ವವನ್ನು ಸಮರ್ಥವಾಗಿ ಚಿತ್ರಿಸುತ್ತದೆ. 'ಸೀಪಿದಾಗೆಲ್ಲ ಹಾಲನು ಸುರಿವ ಚಂದ್ರ ಕುಂಭಗಳು', ಮಗು ಪಡೆಯುವ ಖಾತರಿಯಾದ ಪೋಷಣೆಯನ್ನು ಚಿತ್ರಿಸಿದರೆ, ಆ ಪೋಷಣೆ ಅವ್ಯಾಹತವಾದದ್ದೆನ್ನುವುದನ್ನು ಸೂಚಿಸಲು ಬಳಸಿದ ಪ್ರತಿಮೆ—

ಎಂದು ಯಾವಾಗಲೂ ಗಕ್ಕನೆಯೆ ನಿಂತು ಕೈಕೊಡದ ನಲ್ಲಿ
ತುಟಿಯ ಬಟ್ಟಲಿನಲ್ಲಿ !

ಎಂಬುದು. ನೇತ್ಯಾತ್ಮಕವಾದದ್ದು ಇಲ್ಲ ಎನ್ನುವುದರ ಮೂಲಕ ಇತ್ಯಾತ್ಮಕವಾದದ್ದನ್ನು ಸಮರ್ಥಿಸುವ, ಸಾಂಪ್ರದಾಯಿಕ ಅಲಂಕಾರವೊಂದರ ಹೊಸ ರೀತಿಯ ಪ್ರಯೋಗವಾದ ಈ ಪ್ರತಿಮೆ, ಕಾವ್ಯದ ಒಟ್ಟಂದದ ದೃಷ್ಟಿಯಿಂದ ತೀರ ನಿರುಪಯುಕ್ತವಾಗುತ್ತದೆ. ತಾತ್ತ್ವಿಕ ವಸ್ತುವನ್ನುಳ್ಳ, ಚಿಂತನಶೀಲವಾದ ಈ ಕವನದ ಗಾಂಭೀರ್ಯವನ್ನು ಕೆಡಿಸಿ ನಿರರ್ಥಕವಾಗುತ್ತದೆ. ಕವಿ ತನ್ನ ಒಳಗಣ್ಣಿಗೆ ಹೊಳೆಯುವ ಸಾಮ್ಯ ವೈಷಮ್ಯಗಳನ್ನೆಲ್ಲ, ಕಾವ್ಯರಚನೆಯ ಸಂದರ್ಭದಲ್ಲಿ, ಅವೆಷ್ಟೇ ಪ್ರಾಮಾಣಿಕವಾದ ಅನುಭವವಾಗಿದ್ದರೂ, ವ್ಯಾಮೋಹದಿಂದ ಬಳಸಿಕೊಂಡುಬಿಟ್ಟರೆ ಉಂಟಾಗಬಹುದಾದ ಕಾವ್ಯದೋಷಕ್ಕೆ ಇದೊಂದು ಉದಾಹರಣೆ. ಸಮಕಾಲೀನವಾದ ಕಿರಿಕಿರಿಯ ಯಾವುದೇ ಅನುಭವ ಕಾವ್ಯ ವಸ್ತುವಾಗಬಹುದು, ನಿಜ. ಅದು ಕಾವ್ಯ ಆಗಬೇಕೆಂದೇನೂ ಇಲ್ಲ. ಗಕ್ಕನೆಯೆ ನಿಂತು ಕೈಕೊಡುವ ನಲ್ಲಿಯ ಅನುಭವ ವಿಷಮ ಪ್ರತಿಮೆಯಾಗಿ ನಿಂತು ಸೀಪಿದಾಗೆಲ್ಲ ಹಾಲನು ಸುರಿವ ಚಂದ್ರಕುಂಭಗಳ ಮಹತ್ವವನ್ನು ಹೆಚ್ಚಿಸುತ್ತದೆಯೆ, ಎಂದರೆ ಇಲ್ಲ. ಅದಕ್ಕೆ ಬದಲಾಗಿ ಕಾವ್ಯಬಂಧನನ್ನು ಸಡಿಲಿಸಿ, ಓದುಗನ ಮನಸ್ಸನ್ನು ಬೇರೆಡೆಗೆ ತಿರುಗಿಸಿ ಕಾವ್ಯಾನುಭವಕ್ಕೆ ಭಂಗವನ್ನುಂಟುಮಾಡುತ್ತದೆ.

ಮುಂದಿನ ಭಾಗದಲ್ಲಿ, ಮಗುವಿನ ಪಾಲಿಗೆ ಮೊದಲು ಕೇವಲ ಕಿವಿಯ ಸೋಜಿಗವಾಗಿದ್ದ ಹಕ್ಕಿಯ ಕೂಗು ಈಗ ಲಾಲಿಯಾಗುತ್ತದೆ. ಮಗುವಿನ ಕಲ್ಪನಾಶಕ್ತಿ ಮರದ ಬೊಂಬೆಗೂ ಜೀವದಾನ ಮಾಡುತ್ತದೆ. ಅದರ ಪಾಲಿಗೆ ಕಲ್ಲು ಹರಳೆಲ್ಲ ಚಿನ್ನ ರನ್ನವಾಗುತ್ತದೆ.

ಇಲ್ಲಿಯವರೆಗೆ ಮಗುವಿಗೆ ಪ್ರೇಮ, ರಕ್ಷಣೆ, ಪೋಷಣೆಗಳು ದೊರೆಯುತ್ತಿದ್ದು, ಅದರ ಸೋಜಿಗ ಹೊನಲಾಗಿ ಹರಿದು, ಕಲ್ಪಕತೆ ಕುಡಿವರಿದು ಮಗು ಪ್ರಕೃತಿಯ ಒಂದು ಭಾಗವಾಗಿ ಹೋಗುತ್ತದೆ. ಮುಂದೆ, ಕವಿ ಹೆತ್ತವರೆಲ್ಲರ ವಾಣಿಯಾಗಿ, ಅಧಿಕಾರಿಕವಾಗಿ

ಮಾತನಾಡಿ ಪ್ರಕೃತಿಯೊಂದಿಗೆ ತಾದಾತ್ಮ್ಯ ತಾಳಲಿದ್ದ ಮಗುವನ್ನು ಎಚ್ಚರಿಸಿ ಒಂದು ವ್ಯವಸ್ಥೆಗೆ ಒಳಪಡಿಸುವ, ಶೈಶವದ ಮುಗ್ಧ ಕಲ್ಪನೆಗಳನ್ನು ಬರಿದಾಗಿಸುವ ಕ್ರಿಯೆಯನ್ನು ಮಾಡುತ್ತಾನೆ:

> ಆ, ಅಗೊ ಕರೆಯುತಿದೆ ಪಾಠಶಾಲೆಯ ಗಂಟೆ,
> ಸ್ಲೇಟುಪುಸ್ತಕವನ್ನು ಹೆಗಲಿಗೇರಿಸು, ಹೊರಡು ;
> ಅಲ್ಲಿ ಕಾದಿದ್ದಾನೆ ‘ಮೇಸ್ಟ್ರು’
> ತಿದ್ದು ‘ಅ ಆ ಇಈ’ ; ಮಗ್ಗಿಯೊಪ್ಪಿಸು, ‘ಆಟ ಊಟ ಓಟ’

—ಹುಟ್ಟು, ಸಾವು ತಾವಾಗಿಯೇ ಘಟಿಸುವಂಥವು. ಆದರೆ ಅವೆರಡರ ನಡುವಣ ಬದುಕು ಮನುಷ್ಯಪ್ರಯತ್ನದಿಂದ ವ್ಯವಸ್ಥಿತವಾಗುವಂಥದು. ಈ ಸಾಲುಗಳು ಆ ವ್ಯವಸ್ಥೆಯ ಹೇರಿಕೆಯನ್ನು ಸೂಚಿಸುತ್ತವೆ. ಈ ಸಂದರ್ಭದಲ್ಲಿ **‘ಆಟ ಊಟ ಓಟ’** ಎಂಬ ಮೊದಲ ಪಾಠ ತುಂಬ ಅರ್ಥಪೂರ್ಣವಾಗಿ **‘ಆಟ’** ಬಾಲ್ಯದ ಉತ್ಸಾಹ ವಿನೋದಗಳನ್ನೂ, **‘ಊಟ’** ಯೌವನದ ಹೊಟ್ಟೆಪಾಡಿನ ವ್ಯಾವಹಾರಿಕ ಜೀವನವನ್ನೂ, **‘ಓಟ’** ವ್ಯಕ್ತಿ ಇದ್ದಕ್ಕಿದ್ದಂತೆ ಒಂದು ದಿನ ಹೇಳದೆ ಕೇಳದೆ ಈ ಲೋಕದಿಂದ ಮರೆಯಾಗಿ ಹೋಗುವುದನ್ನೂ ಪ್ರತಿನಿಧಿಸಬಹುದು. ಆಮೇಲೆ ಬರುವ ಈ ಭಾಗದ ಕಡೆಯ—ಸಾಲು **‘ಮೆಲ್ಲನೆಯೆ ಜಾರುತಿದೆ ಬೆಳಗು ಬಿತ್ತಿದ ನೋಟ’**, ಎಂಬುದು ಹಿಂದೆ ಬಂದ ವಿಧ್ಯರ್ಥಕ ಶೈಲಿಯಿಂದ ನಿರೂಪಣೆಗೆ ಬದಲಾಗಿದೆ. ಸಮಾಜದ ಸಂಪ್ರದಾಯಬದ್ಧ ನಿಯಮಗಳಿಗೆ ವ್ಯಕ್ತಿ ಒಗ್ಗಿಕೊಳ್ಳಬೇಕಾದ ಅನಿವಾರ್ಯತೆಯನ್ನು ಸೂಚಿಸಿದ ಮೇಲೆ ಬರುವ ಈ ಸಾಲು ಎಳೆಯ ಮನಸ್ಸಿನ ಸ್ವತಂತ್ರವಾದ ಕಲ್ಪನಾಪ್ರಪಂಚ ಮಸುಕಾಗುತ್ತ ಹೋಗುವುದನ್ನು ಸೂಚಿಸುತ್ತದೆ. ವ್ಯವಸ್ಥಿತ ಶಿಕ್ಷಣಕ್ಕೊಳಪಟ್ಟು ಬೆಳೆದ ಹದಿವಯಸ್ಸಿನ ಹರೆಯದ ಹುಡುಗನ ಮನಃಸ್ಥಿತಿಯನ್ನು—

> ಹನ್ನೊಂದರಿಂದ ಹನ್ನೆರಡು :
> ಜಂತೆ ಜಂತೆಯ ತುಂಬ ಜೇನುಗೂಡು !

ಎಂಬ ಪ್ರತಿಮೆ ಮುಂದಿಡುತ್ತದೆ. ಹದಿ ವಯಸ್ಸಿನ ಅನುಭವಗಳಲ್ಲಿ ಮಧುರವಾಗಿಸುವ ಅವ್ಯಕ್ತ ಪ್ರಕೃತಿ ವ್ಯಾಪಾರದ ಕ್ರಿಯೆಗೆ ಈ ಪ್ರತಿಮೆ ಪ್ರತಿನಿಧಿಯಾಗಬಹುದು. ಜ್ಞಾನ ಮಧುಸಂಚಯವನ್ನೂ ಸೂಚಿಸಬಹುದು. ಅಥವಾ, ವ್ಯಕ್ತಿಯ ಭವಿಷ್ಯಜೀವನದ ಹತ್ತು ಹಲವು ಮಧುರ ಕಲ್ಪನೆಗಳತ್ತ ಬೆರಳು ಮಾಡಬಹುದು. (ಹಲವು ಅರ್ಥದ ಪದರುಗಳನ್ನು ಸೃಷ್ಟಿಸಬಲ್ಲ ಈ ಪ್ರತಿಮೆ ಕಾವ್ಯದ ಐಕ್ಯಕ್ಕೆ ಸಾಧಕವೆಂಬುದಕ್ಕೆ ಮುಂದೆ ವಿವರಣೆ ಇದೆ.) ದಿನ ಕಳೆದಂತೆ ಆ ಮಧುರ ಕಲ್ಪನೆಗಳು ದೃಢವಾಗುತ್ತ ಹೋಗುವುದನ್ನು, **‘ಹಗಲಿರುಳು ಮಗ್ಗದಲಿ ಜೊನ್ನಗನಸಿನ ಲಾಳಿ’**, ಎಂಬ ಸಹಾಯಕ ಪ್ರತಿಮೆ ಚೆನ್ನಾಗಿ ಸಮರ್ಥಿಸುತ್ತದೆ.

ಏರುಂಜವ್ವನದ ಆ ಕಾಲ, ಕೇವಲ ಕಲ್ಪನೆಗಳಿಗೇ ಸೀಮಿತವಲ್ಲ. ಆ ವಯಸ್ಸಿನ ವ್ಯಕ್ತಿಯ ಮನಸ್ಸಿನಲ್ಲಿ ಮೂಡುವ ಹಲವಾರು ವಿಚಾರಗಳ ಸಂಘರ್ಷ, ಆಲೋಚನೆಗಳ

ಶಾಕಲಾಟವನ್ನೂ, **‘ಎದೆ ತುಂಬ ನೊರೆಯುತಿವೆ ಹತ್ತು ಗಾಳಿ!’** ಎಂಬ ಪ್ರತಿಮೆಯೂ ; ಅವನ ಅನುಭವದ ವ್ಯಾಪ್ತಿಗೆ ಬಂದದ್ದನ್ನೆಲ್ಲ ಆಕ್ರಮಣಕಾರಿಯಂತೆ ಅನುಭವಿಸುವ ಅವನ ಧೋರಣೆಯನ್ನು, **‘ಕಂಡ ಕಂಡುದನ್ನೆಲ್ಲ ಗುದ್ದುತಿದೆ ಮರಿಗೂಳಿ’** ಎಂಬ ಪ್ರತಿಮೆಯೂ ಕಾವ್ಯಾತ್ಮಕವಾಗಿ ಪ್ರತಿಪಾದಿಸುತ್ತವೆ. ಮರಿಗೂಳಿಯ ಪ್ರತಿಮೆಯಾದ ನಂತರ ಬರುವ—

ಕದಡು ನೀರಿನ ಕೊಳದಿ ಮುಖದ ನೆರಳನು ನೋಡಿ
ಕ್ರಾಪು ತಿದ್ದುವ ಚಾಳಿ

ಎಂಬ ಚಿತ್ರ ಆ ವಯಸ್ಸಿನಲ್ಲಿ ವ್ಯಕ್ತಿಯ ಮನಸ್ಸನ್ನು ಆಕ್ರಮಿಸುವ ಆತ್ಮರತಿಯನ್ನೂ (ನಾರ್ಸಿಸಸ್ ಭಾವ), ಕಾಮಭಾವವನ್ನೂ ಸಮರ್ಥವಾಗಿ ಧ್ವನಿಸುತ್ತದೆ. ಈ ಭಾಗದಲ್ಲಿ ಬರುವ ಪ್ರತಿಮೆಗಳೂ, ಶಬ್ದಚಿತ್ರಗಳೂ ಸುಸಂಗತವಾಗಿ, ವ್ಯವಸ್ಥಿತವಾಗಿದ್ದು ಕಾವ್ಯಾನುಭವವನ್ನು ದಟ್ಟವಾಗಿಸುತ್ತ ಹೋಗುವುದು ಪ್ರತಿಮಾ ಸಂಯೋಜನೆಯ ಬಗ್ಗೆ ಕವಿಗಿರುವ ಪ್ರಭುತ್ವಕ್ಕೆ ಸಾಕ್ಷಿಯಾಗಿವೆ. ಈ ಐದು ಸಾಲುಗಳಲ್ಲಿ ಕಂಡುಬರುವ ಹದಿಹರೆಯದ ಚಂಚಲ ಮನಸ್ಸಿನ ಚಿತ್ರಕ್ಕೆ ವಿರುದ್ಧವಾದ ಪ್ರತಿಮೆಯೊಂದರಿಂದ ಕವನದ ಮುಂದಿನ ಭಾಗ ಆರಂಭವಾಗುತ್ತದೆ :

ತುಂಬಿದೂರಿನ ನಡುವೆ ಗೋಪುರದ ಗಡಿಯಾರ—

ಈ ಪ್ರತಿಮೆ ಹದಿಹರೆಯದ ನಾಯಕ ಯುವಕನಾದದ್ದನ್ನೂ, ಯುವಕನ ದಿಟ್ಟತನವನ್ನೂ ದೃಢತೆಯನ್ನೂ ಸೂಚಿಸುತ್ತದೆಯಲ್ಲದೆ ಆತ, ತನ್ನ ಸುತ್ತಣ ಪರಿಸರದಲ್ಲಿ (**ತುಂಬಿದೂರು**) ಸ್ಥಾಪಿತವಾಗುವುದನ್ನೂ (**ಗೋಪುರದ ಗಡಿಯಾರ**) ತನ್ನ ಕಡೆಗೆ ಇತರರನ್ನು ಆಕರ್ಷಿಸುವುದನ್ನೂ ಧ್ವನಿಸುತ್ತದೆ. (**ಕಾದ ಬಿಸಿಲಿನ ಎದೆ**)—ಯೌವನದ ತಪ್ತ ಹೃದಯ. **ಒಂದು ಗಂಟೆಯು ಬಡಿತ—ಎದೆ ತುಂಬ ನೊರೆವ ಹತ್ತು ಗಾಳಿಗಳಲ್ಲೊಂದು** ತೀವ್ರವಾಗುವ ಸೂಚನೆ—ಗೃಹಸ್ಥಾಶ್ರಮದ ಕರೆಗಂಟೆ. ಕಾವ್ಯನಾಯಕ ಅದಕ್ಕೆ ಒಲಿದುದರ ನಿರೂಪಣೆಯೂ ಕಾವ್ಯಾತ್ಮಕ. ಆತ ಹಾಡಿಕೊಳ್ಳುವ ಹಾಡು :

ನಾ ನಿನಗೆ ನೀನೆನಗೆ ಜೇನಾಗುವಾ
ರಸದೇವ ಗಂಗೆಯಲಿ ಮೀನಾಗುವಾ

ಇಲ್ಲಿ ಕವಿ, ಅನ್ಯಕವಿಸೂಕ್ತಿಯನ್ನು ಬಳಸಿರುವುದೂ ಔಚಿತ್ಯಪೂರ್ಣ. ಅದು ಬಳಸಿದ ಬಳಕೆ! ದಾಂಪತ್ಯ ಜೀವನದ ಕರೆ **‘ಗಡಿಯಾರ’**ದಿಂದ ಯಾಂತ್ರಿಕತೆಯನ್ನು ಸೂಚಿಸುವಂತೆಯೇ ಇಲ್ಲಿಯ ಅನ್ಯಕವಿಸೂಕ್ತಿ, ವಿವಾಹಬದ್ಧತೆಯ ರಮ್ಯಾನುಭವದ ಸಾಂಪ್ರದಾಯಿಕತೆಯನ್ನು ಸೂಚಿಸುತ್ತದೆ. ಆದರೆ ಈ ಅನುಭವ ಶಾಶ್ವತವಾದುದ್ದಲ್ಲ. ಕಾಲ ಕಳೆಯುತ್ತದೆ, ದಿವ್ಯ ನಿರ್ಲಕ್ಷ್ಯದಿಂದ! ಗಡಿಯಾರ, ತನ್ನ ಪಾಡಿಗೆ ತಾನು ಗಂಟೆ ಬಾರಿಸುತ್ತ ಹೋಗುತ್ತದೆ. ಸಾಂಸಾರಿಕ ಜೀವನದ ಸೊಗಸನ್ನು ಅನುಭವಿಸುತ್ತಿರುವ ವ್ಯಕ್ತಿಯ ಪಾಲಿಗೆ ಕಣ್ಣೆದುರೇ ಕಳೆದುಹೋಗುತ್ತಿರುವುದನ್ನು ಉಳಿಸಿಕೊಳ್ಳುವ ಬಯಕೆ.

ಈ ಸಂವೇದನೆಯನ್ನು (feeling) ಚಿತ್ರಿಸುವ ಮೂರು ಸಾಲುಗಳು ಓದುಗನಿಗೆ ಅತ್ಯಂತ ಆಪ್ತವಾಗುತ್ತವೆ:

> ಅಯ್ಯೊ, ಯಾವಾಗ ಈ ಮುಳ್ಳು ಒಂದು ಎರಡನು ದಾಟಿ ಮೂರಕ್ಕೆ ಬಂದಿತೋ,
> ಹಿಡಿದುಕೋ, ಅಲ್ಲೆ ಆ ಗಡಿಯಾರಗಳ ಮುಳ್ಳ, ಭದ್ರ;
> ಬಿಡಬೇಡ ಮುಂದಕ್ಕೆ ಕೊಂಚ ಕಾಲ

ಗಡಿಯಾರ ಬಾರಿಸಿದ್ದನ್ನು ಪ್ರಥಮಪುರುಷದಲ್ಲಿ ನಿರೂಪಿಸಿದ ಕವಿ, ಇಲ್ಲಿ ವಿಧ್ಯರ್ಥಕವಾಗಿ ಉತ್ತಮಪುರುಷದಲ್ಲಿ ಮಾತಾಡುತ್ತಾನೆ. ಈ ಮಾತುಗಳ ಭಾವತೀವ್ರತೆ ಕವಿಯನ್ನು ಹಿಂದೆ ತಳ್ಳಿ, ಕಾವ್ಯನಾಯಕನ ಆತ್ಮಗತವೇ ಆಗುತ್ತದೆ. ಅವನಿಗೆ 'ಅಯ್ಯೊ' ಎಂಬಲ್ಲಿ ಹತಾಶೆ; ಕೊಂಚಕಾಲವಾದರೂ ತನ್ನ ಯೌವನ ಮುಂದುವರಿಯಲೆಂಬ ಆಶೆ. ಗಡಿಯಾರ, **'ಗಡಿಯಾರಗಳು'** ಆಗುವಲ್ಲಿ ನಿರ್ಲಿಪ್ತವಾಗಿ ಕಳೆದುಹೋಗುತ್ತಿರುವ ಕಾಲದ ಹಲವಾರು ಮುಖಗಳ ದರ್ಶನ. ಮಧ್ಯವಯಸ್ಸಿನ ಹತಾಶೆಯ ಸಂವೇದನೆಯ ದಟ್ಟವಾದ ಅನುಭವ, ಈ ಸಾಲುಗಳಲ್ಲಿ ಉತ್ತಮವಾದ ಕಾವ್ಯವಾಗಿದೆ. ಇಲ್ಲಿ ಎರಡು ಬಾರಿ ಬಂದಿರುವ **'ಮುಳ್ಳು'** ಎಂಬ ಶಬ್ದವೂ ಗಮನೀಯ. ಹಿಡಿದುಕೊಳ್ಳಬೇಕಾದ್ದು **'ಗಡಿಯಾರಗಳ ಮುಳ್ಳು'** ಎಂಬುದಂತೂ ಅತ್ಯಂತ ಧ್ವನಿಪೂರ್ಣ. ಈ ಸಾಲುಗಳಲ್ಲಿ ವೃದ್ಧಾಪ್ಯದ ಆಕ್ರಮಣದ ಅನಿವಾರ್ಯತೆಯನ್ನೂ, ಅದರ ವಿರುದ್ಧ ವ್ಯಕ್ತಿಯ ಅಸಹಾಯಕತೆಯನ್ನೂ ಆತ್ಮೀಯವಾಗಿ ಚಿತ್ರಿಸಿದ ಕವಿ, ಕಡೆಯ ಸಾಲಿನಲ್ಲಿ ಸ್ಥಿತಪ್ರಜ್ಞನಂತೆ ದೂರವಾಗಿ, ತತ್ತ್ವಜ್ಞಾನಿಯಂತೆ ಮೇಲೆ ಹೋಗಿ, ಸಿನಿಕನಂತೆ ಆಡುವ, **"ಗಡಿಯಾರ ನಕ್ಕಿತ್ತು 'ಎಂಥ ಚಪಲ'"** ಎಂಬ ಮಾತು ಮಾತ್ರ ಇಷ್ಟರವರೆಗಿನ ಕಾವ್ಯಾನುಭವಕ್ಕೆ ಕೊಡಲಿಯೇಟಾಗುತ್ತದೆ. **'ಹಿಡಿದುಕೋ, .....ಕೊಂಚಕಾಲ'** ಎಂಬ ಸಾಲುಗಳು ತಮ್ಮ ಧ್ವನಿಶಕ್ತಿಯಿಂದ ಮಾಡಬಹುದಾದ ಕೆಲಸವನ್ನು ಕವಿಯೇ ವಾಚ್ಯವಾಗಿ ಮಾಡುವುದರ ಮೂಲಕ ಕಾವ್ಯಸೌಂದರ್ಯಕ್ಕೆ ಧಕ್ಕೆಯುಂಟಾಗುತ್ತದೆ. ಕಾವ್ಯಸಂವೇದನೆಯೇ ಚಿಂತನೆಗೆ ದಾರಿ ಮಾಡಿಕೊಡುವ ಧ್ವನಿಶಕ್ತಿಯನ್ನು ಹೊಂದಿರುವಾಗ ಕವಿ, ನೇರವಾದ ವೈಚಾರಿಕ ವ್ಯಾಖ್ಯಾನವನ್ನು, ವಕ್ರೋಕ್ತಿಯಿಂದಲೇ ಆಗಲಿ, ಮಾಡುವ ಅಗತ್ಯ ಇರುವುದಿಲ್ಲ.

ಹೊಸ ಅರ್ಥಪ್ರಪಂಚವನ್ನು ಸೃಷ್ಟಿಸಲು ಸಾಧ್ಯವಾಗುವಂತೆ ಪ್ರಾಚೀನ ಕಾವ್ಯಸಂದರ್ಭವನ್ನು ಬಳಸಿಕೊಳ್ಳುವುದರಲ್ಲಿ ಈ ಕವಿಯು ತೋರಿಸಿರುವ ಕೌಶಲ ವಿಸ್ಮಯಕಾರಿಯಾಗಿದೆ. 'ಕಶ್ಚಿತ್ ಕಾಂತಾ ವಿರಹ ಗುರುಣಾ' ಎಂದು ಆರಂಭವಾಗುವ ಕಾಳಿದಾಸನ ಮೇಘದೂತದ ಕಾವ್ಯ ಸಂಸ್ಕಾರವುಳ್ಳ ಓದುಗನಿಗೆ, **'ಆಷಾಢದಾಗಸದ ಗಾಳಿಪಟಗಳ ಮೇಲೆ ವಿರಹಿ ಯಕ್ಷನ ಸುಯ್ಲು'** ಎಂಬ ಸಾಲು ನೀಡುವ ಅನುಭವ ವಿಶಿಷ್ಟವಾದುದು. ಪ್ರಸ್ತುತ ಕಾವ್ಯಸಂದರ್ಭದಲ್ಲಿ ಈ ಸಾಲು ಹೊರಡಿಸುವ ಅರ್ಥದ ಪದರುಗಳೇ ಬೇರೆ. ಇಲ್ಲಿಯ ನಾಯಕ ಶಾಪಗ್ರಸ್ತನಲ್ಲ. ಪತ್ನೀವಿರಹಕ್ಕೊಳಗಾದವನಲ್ಲ. ಮೋಡಗಳನ್ನುದ್ದೇಶಿಸಿ ಮಾತಾಡುವವನಲ್ಲ. **'ಗಾಳಿಪಟಗಳು'** ಎಂಬ ಶಬ್ದ ಮೋಡಕ್ಕೆ

ಸಂವಾದಿಯೋ ಎಂಬಂತೆ ಕಂಡುಬಂದರೂ ಅದು ಬಾಲ್ಯದ-ಯೌವನದ ಉತ್ಸಾಹ, ವಿನೋದ, ಕಲ್ಪನೆಗಳಿಗೆ ಸಂಕೇತವಾಗಿ ನಿಲ್ಲುತ್ತದೆ. ಮಧ್ಯ ವಯಸ್ಸನ್ನು ಮುಟ್ಟಿದ ನಾಯಕ, ಹಿಂದಿನ ವಿವಿಧ ವಿನೋದಗಳಿಗೆ ಎರವಾಗಿ ವಿರಹಿಯಾಗಿದ್ದಾನೆ. ಮತ್ತೊಮ್ಮೆ ಬಾರದ ಕಳೆದ ದಿನಗಳು ಅವನ ಸುಯ್ಲಿಗೆ ಕಾರಣ. ಆದರೆ ಆ ಸುಯ್ಲು ಅವನನ್ನು ದುಃಖದ ಆಳಕ್ಕಾಗಲೀ, ನಿರಾಶೆಯ ಕೂಪಕ್ಕಾಗಲೀ ತಳ್ಳುವಷ್ಟು ತೀವ್ರವಾಗುವುದಿಲ್ಲ. ಮುಂದಿನ ಐದು ಸಾಲುಗಳಲ್ಲಿ ಬರುವ ಪ್ರತಿಮೆಗಳು ಮನುಷ್ಯನ, ಪ್ರಕೃತಿಯ ಜೀವರಸ ಪ್ರವಾಹವನ್ನೂ ಬದುಕಿನ ಸಾಂತತ್ಯವನ್ನೂ ವ್ಯಕ್ತಿ ಅಥವಾ ಕಾವ್ಯನಾಯಕನ ಸಂಸಾರ ಪ್ರಪಂಚದ ಸಂಬಂಧ–ಬಂಧನಗಳನ್ನೂ ಸಮರ್ಥವಾಗಿ ಚಿತ್ರಿಸಿ ಕಡೆಯ ಎರಡು ಸಾಲುಗಳಲ್ಲಿ ಸಹಜ ಕುತೂಹಲದಿಂದ ಕಾಡುವ ಮೂಲಭೂತವಾದ ತಾತ್ವಿಕ ಪ್ರಶ್ನೆಯಿಂದ ಕೊನೆಗೊಳ್ಳುತ್ತದೆ. ಹಿಂದಿನ ಭಾಗದಲ್ಲಿ ಕಾವ್ಯನಾಯಕನ ವಿಹ್ವಲಭಾವದ ಚಿತ್ರಣ ಸಾರ್ಥಕ ಕಾವ್ಯವಾಗಿರುವಂತೆ ಈ ಭಾಗದ ಬಾಲ್ಯದ ನೆನಪು, ಜೀವ ಸಾಂತತ್ಯ, ಕುಟುಂಬ ಬಂಧನ, ಸಂಬಂಧ—ಅವುಗಳಿಂದ ಅನಿವಾರ್ಯವಾಗಿ ಒಮ್ಮೊಮ್ಮೆ ಬಂದು ಕಾಡುವ ತಾತ್ತ್ವಿಕ ಪ್ರಶ್ನೆ ಅತ್ಯುತ್ತಮವಾಗಿ ಸಂಕ್ಷಿಪ್ತ ಕಾವ್ಯವಾಗಿದೆ. ವಿವರಣೆಯಿಂದ ಬರಡಾಗಬಹುದಾದ ಆ ಭಾಗದ ಕಾವ್ಯ ಸೌಂದರ್ಯದ ಅನುಭವಕ್ಕೆ ಅದೇ ಪ್ರಮಾಣ :

> ಶ್ರಾವಣದ ಮಳೆ ಬಿಸಿಲು ; ಗದ್ದೆಯಲಿ ತೆನೆದೂಗುತಿದೆ ಪೈರು ;
> ನೀಲಿಯಂಗಳದಲ್ಲಿ ಮೋಡಮುಕ್ತಳ ಕೇಕೆ
> ಬಿಳಲು ಬಿಡುತಿದೆ ವೃಕ್ಷ, ಟೊಂಗೆ ಟೊಂಗೆಯು ತುಂಬ
> ಹಕ್ಕಿ ತೊಟ್ಟಿಲ ಕಟ್ಟಿ ಜೋಗುಳವ ಹಾಡುತಿದೆ ;
> ಮೈಗೆ ಹೆಣೆದಿದೆ ಬಳ್ಳಿ ಅಲ್ಲಿಂದ ಇಲ್ಲಿಂದ ;
> ಆಗಾಗ ಒಮ್ಮೊಮ್ಮೆ ಬಂದು ಕಾಡಿದೆ ಪ್ರಶ್ನೆ :
> 'ನಾ ಬಂದುದೆಲ್ಲಿಂದ ?'

ಮುಂದಿನ ಭಾಗದ ಮೊದಲ ಮೂರು ಸಾಲುಗಳ ನಿರೂಪಣೆಯಲ್ಲಿ ಕಾವ್ಯನಾಯಕ ಮಧ್ಯವಯಸ್ಸನ್ನು ಮೀರಿ ದೈಹಿಕವಾಗಿ ದುರ್ಬಲನಾಗಿರುವುದನ್ನು ತಿಳಿಸಿದ ಬಳಿಕ ಬಂದಿರುವ—

> ಜಂತೆಯಲಿ ಗೂಡು ಕಟ್ಟಿದ ಜೇನು ಹಾರಿಹೋಗಿವೆ, ಈಗ
> ತೂಗುತ್ತಲಿವೆ ಖಾಲಿ ಗೂಡು

ಎಂಬ ಪ್ರತಿಮೆ ಹಿಂದೆ ಬಂದಿದ್ದ, **'ಜಂತೆ ಜಂತೆಯು ತುಂಬ ಜೇನುಗೂಡು'** ಎಂಬ ಪ್ರತಿಮೆಯ ವೈಷಮ್ಯದಿಂದ ಕವನದ ಬೆಳವಣಿಗೆಗೊಂದು ಐಕ್ಯವನ್ನು ತಂದುಕೊಡುತ್ತದೆ. ಏರುಂಜವ್ವನದ ಮನಃಸ್ಥಿತಿಗೆ ವಿರುದ್ಧವಾದ, ಇಳಿವಯಸ್ಸಿನ ಮನೋಧರ್ಮವನ್ನು ಈ ಪ್ರತಿಮೆ ಯಶಸ್ವಿಯಾಗಿ ಪ್ರತಿಪಾದಿಸುತ್ತದೆ. ಇದೇ ಗುಂಪಿನ ಮುಂದಿನ ಆರು ಸಾಲುಗಳಲ್ಲಿ ಗಾಳಿ ಮಳೆ ಬಿಸಿಲಿಗೆ ಮೈಯೊಡ್ಡಿ ಜೀರ್ಣವಾದ ಮನೆ, ರಿಪೇರಿಯ ಮೂಲಕ ಅದಿನ್ನೂ ವಾಸಯೋಗ್ಯ ಎನ್ನುವ ನಂಬಿಕೆ—ಕಾವ್ಯನಾಯಕನ ದೈಹಿಕ ಸ್ಥಿತಿಯನ್ನೂ

ಬದುಕಿನ ಬಗೆಗಿನ ಅವನ ಆಸೆಯನ್ನೂ ಚೆನ್ನಾಗಿ ಪ್ರತಿಬಿಂಬಿಸುತ್ತದೆ. **'ತೂಬನೆತ್ತಿದರೇನಂತೆ ಬಿಡು, ಆ ನೀರಗಂಟಿ'** ಎಂದು ಇದ್ದಕ್ಕಿದ್ದಂತೆ ಕಾಣಿಸಿಕೊಳ್ಳುವ ಪ್ರತಿಮೆ, ಆ ವಿಧಿಯಿಂದಾಗಿ ತನ್ನ ಆಯುಃಪ್ರವಾಹ ಸೋರಿ ಹೋಗುತ್ತಿದ್ದರೂ ಕಾವ್ಯನಾಯಕ ಬದುಕಿನ ಮೇಲಿನ ಆಸೆಯನ್ನು ಬಿಡದಿರುವುದನ್ನು ಸೂಚಿಸುತ್ತದೆ. ಆಯುಸ್ಸು ಕಳೆದು ಹೋಗುತ್ತಿದ್ದರೂ ಪ್ರಯತ್ನದಿಂದ ಮತ್ತೂ ಕೆಲವು ಕಾಲ (**ಇನ್ನರ್ಧ ಶತಮಾನ**) ಬದುಕುಳಿಯುತ್ತೇನೆಂಬ ವ್ಯಕ್ತಿಯ ಭರವಸೆ ಈ ಪ್ರತಿಮೆಯಲ್ಲಿ ವ್ಯಕ್ತವಾಗುತ್ತದೆ.

**'ತನ್ನ ಪಾಡಿಗೆ ತಾನು'** ಒಂದೆರಡು ಮೂರನ್ನು ಬಾರಿಸಿದ, **'ನಿಷ್ಕರುಣ ಗಡಿಯಾರ'**ದ **"ಮುಳ್ಳು", "ಐದನೂ ಮುಟ್ಟಿ ಮುಂದೆ ಸಾಗುತ್ತಲಿದೆ."** ಹುಟ್ಟಿದ ಸೂರ್ಯ ಮುಳುಗಲಿದ್ದಾನೆ. ವ್ಯಕ್ತಿಯೊಡನೆ ಭಾವಸಂಬಂಧಗಳಿಲ್ಲದ ಕಾಲ ಕಳೆಯುತ್ತಲಿದೆ ಎಂದು ಸೂಚಿಸಿದ ಕವಿ, ಮುಂದೆ ನೀಡುವ ಅರುಳುಮರುಳಿನ ಮುದಿ ನಾಯಕನ ಪ್ರತಿಕ್ರಿಯೆಯ ಚಿತ್ರ ತುಂಬ ಮಾರ್ಮಿಕವಾಗಿದೆ. ದಿನಗಳೆದಂತೆ ಅವನ ಸತ್ತ್ವ ಕುಂದುತ್ತಿದೆ; ಅದು ಮಾನಸಿಕವೂ ಹೌದು, ದೈಹಿಕವೂ ಹೌದು:

> ಸೂರ್ಯನ ಶಾಖ ಕಡಿಮೆಯಾಗುತ್ತಲಿದೆ ದಿನದಿನಕೆ;
> ಬಾನ ನೀಲಿಗೆ ಹೊಳಪು ಸಾಲದು; ನೀರಿನಲಿ ರುಚಿಯಿಲ್ಲ;
> ಏನು ಕಾಲವೊ ಏನೊ

—ಎಂಬ ಮುದುಕನ ಗೊಣಗಾಟ ಅಥವಾ ಸ್ವಗತ ಓದುಗನ ಮನಸ್ಸನ್ನು ಮಿಡಿದು ಕನಿಕರವನ್ನು ಹುಟ್ಟಿಸುತ್ತದೆ. ಒಂದು ಕ್ಷಣ ಈ ಸಾಲುಗಳ ಭಾವದ ಬಗ್ಗೆ ಚಿಂತಿಸಿದರೆ ಇವು ಕನಿಕರ ಮತ್ತು ಭೀತಿಯನ್ನು (pity and fear) ಹುಟ್ಟಿಸುವಂಥ ಆ ಭಾವಗಳನ್ನು ಶುದ್ಧೀಕರಿಸುವ ಸಾಮರ್ಥ್ಯ ಹೊಂದಿರುವುದು ಮನದಟ್ಟಾಗುತ್ತದೆ.

ಕವನದ ಕಡೆಯ ಭಾಗದಲ್ಲಿ ಕಾವ್ಯನಾಯಕ ವೃದ್ಧನಾಗಿದ್ದಾನೆ. ಮುದಿವಯಸ್ಸಿನವನ ಸ್ಮೃತಿಪಟಲದ ಮೇಲೆ ಹದಿವಯಸ್ಸಿನವನ ಬಹುವರ್ಣರಂಜಿತವಾದ ಬದುಕಿನ ಸರಮಾಲೆ:

> **ಸಂಜೆ ಬಾನಿನ ತುಂಬ ಹಗಲ ನೆನಪಿನ ಚಿತ್ರ.**

—ಎಂಬ ಪ್ರತಿಮೆ ವ್ಯಕ್ತಿಯ ಜೀವನಕ್ಕೆ, ಮಬ್ಬಿನಿಂದ ಮಬ್ಬಿಗೆ ಸಾಗುವ ಅವನ ಪಯಣಕ್ಕೆ ಪ್ರತಿಮೆಯಾದ ಹಗಲಿನ ಅಥವಾ ಸೂರ್ಯ ಪ್ರಯಾಣದ ಕ್ರಿಯೆಗೆ ಸಂಗತವಾಗಿದ್ದು ಕಾವ್ಯದ ಒಟ್ಟಂದದ ಶೋಭೆಯನ್ನು ಹೆಚ್ಚಿಸುತ್ತದೆ. ಹಿಂದಿನ ಭಾಗದಲ್ಲಿದ್ದಂತೆ, **'ನೀರಿನಲಿ ರುಚಿಯಿಲ್ಲ'** ಮುಂತಾದ ಅರ್ಥಹೀನವಾದ ಕಾವ್ಯನಾಯಕನ ಗೊಣಗಾಟ ಇಲ್ಲಿಲ್ಲ. ಅವನೀಗ ಸಾವನ್ನು ಎದುರುನೋಡುವ ಸ್ಥಿತಿಗೆ ಬಂದಿದ್ದಾನೆ. ಅವನ ಇಂದ್ರಿಯಗಳು ದುರ್ಬಲವಾಗಿವೆ. ಸತ್ತವರ ಆತ್ಮ ಊರ್ಧ್ವಗಾಮಿ ಎಂಬುದು, ನಂಬಿಕೆ. ಹುಟ್ಟಿದವರೆಲ್ಲ ಸತ್ತಿದ್ದಾರೆ. **'ಮಹಡಿ ಮೆಟ್ಟಿಲ ಮೇಲೆ ಯಾರ್ಯಾರದೋ ಹೆಜ್ಜೆ'**— ಅದನ್ನು ಪ್ರತಿಪಾದಿಸುತ್ತದೆ. ಕಾವ್ಯನಾಯಕನ ಸಾವೂ ಸನ್ನಿಹಿತವಾಗಿದೆ. ಹಿಂದೆ ಕವಿ, ಕಾವ್ಯನಾಯಕನ ಇಳಿವಯಸ್ಸಿನ ದೇಹವನ್ನು ಶಿಥಿಲವಾದ ಮನೆಗೆ ಹೋಲಿಸಿದ್ದಾನೆ.

ಈಗ ಆ **ಮನೆಯ ಬಾಗಿಲ ಹೊರಗೆ ಒಂದೇ ಸಮನೆ ಯಾರೊ ಬಡಿಯುತ್ತಿದ್ದಾರೆ.** ಅದು ಸಾವಿನ ಕರೆ, ಬದುಕಿನ ಕೊನೆ, ಹೆದರದೆ, ಅನಿವಾರ್ಯವಾದ ಸಾವನ್ನೆದುರುಗೊಳ್ಳಬೇಕೆಂದು ಕವಿ, ಕಾವ್ಯನಾಯಕನಿಗೆ ನೇರವಾಗಿ ಹೇಳುವುದರ ಮೂಲಕ ಕವನ ಮುಕ್ತಾಯವಾಗುತ್ತದೆ. ಏಳು ಗಂಟೆ ಹೊಡೆದು ಸೂರ್ಯನೂ ಮುಳುಗಿರುವುದರ ಸೂಚನೆ ಕವನದ ಕೇಂದ್ರ ಪ್ರತಿಮೆಗೆ ಪೋಷಕವಾಗಿದೆ. **'ಏಳು',** ಗಂಟೆಯಾಗಿ ಸೂರ್ಯಾಸ್ತವನ್ನು ಸೂಚಿಸುತ್ತದೆ; ಕವಿಯ ದ್ವಿಧ್ಯರ್ಥಕವಾಣಿಯಾಗಿ ಅದೇ **"ಏಳು",** ಕಾವ್ಯನಾಯಕನಿಗೆ ಸಾವನ್ನೆದುರಿಸುವ ಧೈರ್ಯ ತುಂಬುವ ಮಾತಾಗುತ್ತದೆ.

ಈ ವಿಮರ್ಶೆಯ ಆರಂಭದಲ್ಲಿ ಈ ಕವನ ಡಾ. ಜಿ. ಎಸ್. ಶಿವರುದ್ರಪ್ಪನವರ ಉತ್ತಮವಾದ ಕವನಗಳ ಸಾಲಿಗೆ ಸೇರುವುದಿಲ್ಲ ಎಂಬ ಮಾತಾಡಿದ್ದೇನೆ. ವಿವೇಚನೆಯ ಉದ್ದಕ್ಕೂ ಕವನದಲ್ಲಿಯ ಗುಣದೋಷಗಳ ಬಗ್ಗೆ ನಾನು ನೀಡಿರುವ ವಿವರಣೆ ನನ್ನ ಮಾತನ್ನು ಸಮರ್ಥಿಸುತ್ತದೆ ಎಂದುಕೊಂಡಿದ್ದೇನೆ. ಈ ಕವನ ಕೇವಲ ಪ್ರತಿಮೆಗಳ ಮೂಲಕವೇ ಮೈ ತಾಳಿದ ಕವನವಲ್ಲ. ಕಾವ್ಯಕ್ಕೊಂದು ಕೇಂದ್ರ ಪ್ರತಿಮೆ ಇರುವುದೂ ಅದಕ್ಕೆ ಪೋಷಕವಾದ ಹಲವಾರು ಸಹಾಯಕ ಪ್ರತಿಮೆಗಳು ಬರುವುದೂ ನಿಜ. ಹೀಗಿದ್ದೂ ಕವಿ, ಪ್ರತಿಮಾ ವಿಧಾನದ ಸಫಲತೆಯ ಬಗ್ಗೆ ಸಂಶಯಗೊಂಡೋ ಏನೊ ಕೆಲವು ಸಂದರ್ಭಗಳಲ್ಲಿ ವಾಚ್ಯವಾಗಿ, ನಿರೂಪಣೆಗಳ ಮೂಲಕ, ರೂಪಕಗಳ ಮೂಲಕ ಕೇಂದ್ರಪ್ರತಿಮೆಯ ಐಕ್ಯಕ್ಕೆ ಭಂಗ ತರುತ್ತಾರೆ. ಸಹಾಯಕ ಪ್ರತಿಮೆಗಳು ಒಮ್ಮೊಮ್ಮೆ ಸಾಂಗತ್ಯವಿಲ್ಲದೆ ಭಗ್ನವಾಗುತ್ತವೆ. ಸಮಕಾಲೀನ ಅನುಭವಗಳು ಅನವಶ್ಯಕವಾಗಿ ದಾಳಿ ಮಾಡಿ **(ಕೈ ಕೊಡದ ನಲ್ಲಿ)** ರಸಭಂಗಕ್ಕೆ ಕಾರಣವಾಗುತ್ತವೆ. ಕವನದ ಶೈಲಿ ಗಂಭೀರವಾದದ್ದಾದರೂ ಒಮ್ಮೊಮ್ಮೆ ತೀರ ತೆಳುವಾಗಿಬಿಡುತ್ತದೆ. ಶೈಲಿಯ ಮತ್ತೊಂದು ನ್ಯೂನತೆಯೆಂದರೆ ಕವಿ, ಅಲ್ಲಲ್ಲಿ ತಲೆ ಹಾಕಿ ಉತ್ತಮ ಪುರುಷದಲ್ಲಿ ಕಾವ್ಯ ನಾಯಕನೊಡನೆ ಮಾತಾಡುವುದು; ಪ್ರಥಮ ಪುರುಷದಲ್ಲಿ ಅವನ ವ್ಯಕ್ತಿತ್ವವನ್ನು ಚಿತ್ರಿಸುತ್ತಿದ್ದು, ಇದ್ದಕ್ಕಿದ್ದಂತೆ ದೂರದಲ್ಲೆಲ್ಲೋ ನಿಂತು ತಾತ್ತ್ವಿಕವಾದ ಟೀಕೆ ಮಾಡುವುದು ಮುಂತಾದುವು.

ಭಗ್ನಪ್ರತಿಮೆಗಳನ್ನುಪಯೋಗಿಸಿಯೂ ಉತ್ತಮವಾದ ಕಾವ್ಯರಚನೆ ಸಾಧ್ಯವೆಂಬುದಕ್ಕೆ ಒಂದಲ್ಲ, ಈ ಕವನದ ಮೂರು ನಾಲ್ಕು ಭಾಗಗಳಲ್ಲಿ ಅತ್ಯುತ್ತಮವಾದ ಉದಾಹರಣೆಗಳು ಇರುವುದು ಮೆಚ್ಚಲೇಬೇಕಾದ ಅಂಶ. ಈ ಕವನದ ಎರಡು ಮತ್ತು ನಾಲ್ಕನೇ ಭಾಗಗಳನ್ನು ಹೊರತುಪಡಿಸಿದರೆ ಮಿಕ್ಕಲ್ಲೆಲ್ಲ ಡಾ. ಜಿ.ಎಸ್.ಎಸ್. ಅವರ ಸೃಷ್ಟಿಶೀಲ ಕಾವ್ಯಪ್ರತಿಭೆಯ ಔನ್ನತ್ಯಕ್ಕೆ, ಪ್ರತಿಮೆಗಳ ಬಳಕೆಯಲ್ಲಿಯ ಅವರ ಔಚಿತ್ಯಜ್ಞಾನಕ್ಕೆ ವಿಪುಲವಾದ ಉದಾಹರಣೆಗಳು ದೊರೆಯುತ್ತವೆ.

ಕ. ವೆಂ. ರಾಜಗೋಪಾಲ್

# 'ಶರತ್-ಶಾರದೆ' (ಒಂದು ವಿವೇಚನೆ)

## ೧

'ಋತು ಸಂಹಾರ'ದ ಕವಿ ಯಾರೆಂಬುದು ಖಚಿತವಾಗದಿದ್ದರೂ ಸರಿಯೆ[1] ಅಂತಹ ಕೃತಿಯನ್ನು ಕಾಲಿದಾಸನ ತಲೆಗೆ ಕಟ್ಟುವುದರಲ್ಲಿ ಔಚಿತ್ಯವಿದೆ.[2] 'ಕನ್ನಡ ಋತುಸಂಹಾರ[3]ದಲ್ಲಿ ಋತುಸಂಹಾರ, ಭರತವರ್ಷದ ಹಿರಿಯಕವಿ ಕಾಳಿದಾಸನ ಮೊದಲ ಕೃತಿ....' ಇತ್ಯಾದಿ (ತಮ್ಮ ಕೃತಿಯು 'ಮೊದಲ ಮಾತಿ'ನಲ್ಲಿ ಹೇಳಲಾಗಿದೆ. ಇದರಲ್ಲಿ ಆರು ಸರ್ಗಗಳಿದ್ದು ನಮ್ಮ ಸಾಂಪ್ರದಾಯಿಕ ಋತುಗಳನ್ನು ಸಂಗ್ರಹವಾಗಿ ಪರಿಶೀಲಿಸಲಾಗಿದೆ. ಗ್ರೀಷ್ಮದಿಂದ ಪ್ರಾರಂಭಿಸಿ ವಸಂತದ ವರ್ಣನೆಯಲ್ಲಿ ಮುಗಿಯುತ್ತದೆ. ಪ್ರಣಯಾಂಕುರಕ್ಕೆ ಗುರಿಯಾದ ಕವಿಯು ಈ ಬಗೆಯಲ್ಲಿ ಒಂದು ಪ್ರಣಯ ಗೀತೆಯನ್ನೇ ಬರೆದಂತಾಗಿದೆ. ಋತುಗಳ ಅನುಭವಕ್ಕೆ ಹೊಂದಿದಂತೆ ಪ್ರಕೃತಿಯ ಬದಲಾವಣೆಗಳನ್ನು ಗಮನಿಸುವಾಗ ಸ್ತ್ರೀಯರನ್ನು ಮುಖ್ಯವಾಗಿ ಗಮನದಲ್ಲಿರಿಸಿಕೊಂಡು ಗಂಡು ಹೆಣ್ಣಿನ ಸಂಬಂಧವನ್ನು ಧ್ವನಿಯೆನ್ನುವಂತೆ ರಚಿಸಿದ್ದಾನೆ. ಋತುಗಳ ವರ್ಣನೆಯಲ್ಲಿ ಈತನು ಸ್ತ್ರೀಯ ಮನೋಧರ್ಮವನ್ನೂ ಬೆರೆಯಿಸಿರುವುದು ಕಂಡುಬರುತ್ತದೆ. 'ಶರತ್' ವರ್ಣನೆಯಲ್ಲಿ 'ಶಿಶಿರ'ದಲ್ಲಿ ಸ್ತ್ರೀಯ ಲಕ್ಷಣಗಳನ್ನು ಕಂಡಂತೆ ಅಭೇದ ಕಲ್ಪಿಸಿದಂತೆ ರಚನೆಯಲ್ಲಿ ತೊಡಗಿದರೂ ತನ್ನ ಪ್ರೇಯಸಿಗೆ ಮನೋಜ್ಞವಾಗುವಂತೆ ತನ್ನ ಪ್ರಣಯವನ್ನು ಸೂಚಿಸುವುದಲ್ಲದೆ ಪ್ರಣಯಿಗಳು ಪ್ರಕೃತಿ ಧರ್ಮಕ್ಕೆ ಅನುಗುಣವಾಗಿ ಸಮಾಗಮವನ್ನು ಬಯಸುತ್ತಾರೆಂಬ ಭಾವನೆಯನ್ನು ಉದ್ದೀಪನಗೊಳಿಸುವಂತೆ 'ಋತುಸಂಹಾರ' ಮಾಡಿದ್ದಾನೆ. ಆದುದರಿಂದ ಇದನ್ನು ಒಂದು

[1] ಕಾಲಿದಾಸನ ವ್ಯಾಖ್ಯಾನಕಾರನಾದ ಮಲ್ಲಿನಾಥನು ಮೂರು ಕಾವ್ಯಗಳನ್ನು ಕಾಲಿದಾಸನವೆಂದು ಹೇಳುವಂತೆ ತೋರುತ್ತದೆ. ರಘುವಂಶದ ವ್ಯಾಖ್ಯಾನದಲ್ಲಿ ಈತನು 'ಮಲ್ಲಿನಾಥಕವಿಃ ಸೋಯಂ ಮಂದಾತ್ಮಾನುಜಿಘೃಕ್ಷಯಾ ॥ ವ್ಯಾಚಷ್ಟೇ ಕಾಲಿದಾಸೀಯಂ ಕಾವ್ಯತ್ರಯ ಮನಾಕುಲಮ್ ॥' ಎಂದಿದ್ದಾನೆ.

[2] ಜರ್ಮನಿಯ ಪಂಡಿತ ವಾಲ್ಟರ್ ರೂಬೆನ್ ಮಹಾಶಯನು ರಚಿಸಿರುವ 'ಕಾಲಿದಾಸ' ಎಂಬ ಪ್ರಸಿದ್ಧ ವಿಮರ್ಶನ ಗ್ರಂಥದಲ್ಲಿ 'ಋತುಸಂಹಾರ'ವನ್ನು ಕಾಲಿದಾಸನ ಕೃತಿಗಳಲ್ಲಿ ಮುಖ್ಯವೆಂದು ಪರಿಗಣಿಸಿರುವುದಿಲ್ಲ. ಮಲ್ಲಿನಾಥನೇ ಇದಕ್ಕೂ ಕಾರಣವಿರಬಹುದಾಗಿದೆ.

[3] ಎಸ್. ವಿ. ಪರಮೇಶ್ವರಭಟ್ಟ, 'ಕನ್ನಡ ಋತುಸಂಹಾರ', (ಕಾವ್ಯಾಲಯ, ಮೈಸೂರು).

ಸುಂದರ ಪ್ರಣಯಗೀತವೆಂದು ಹೇಳಬಹುದಾಗಿದೆ. 'ಈ ಪ್ರಣಯ ಪಂಚಾಂಗದಲ್ಲಿ' ಎಂದು ಎಸ್. ವಿ. ಪರಮೇಶ್ವರಭಟ್ಟರು ಹೇಳುತ್ತಾರೆ. ಋತುಗಳ ಮನೋಧರ್ಮವನ್ನು ಕುರಿತು ಹಾಡುವುದರಲ್ಲಿಯೇ ಕವಿಯು ಋತುಮತಿಯರ ಮನೋಧರ್ಮವನ್ನೂ ಬೆರಸಿ, ತನ್ನ ವಿಶಾಲ ಮನೋಧರ್ಮದಿಂದ ಶೃಂಗಾರರಸವು ಮೊದಲಿಂದ ಕೊನೆಯವರೆಗೂ ಓದುವವರ ಮನಸ್ಸಿನಲ್ಲಿ ಮಿಂಚುವಂತೆ ಮಾಡಲು ಪ್ರಯತ್ನಿಸಿದ್ದಾನೆನ್ನಬಹುದು. ಇಂತಹ ಉದ್ದಿಶ್ಯವು ಸಾಧುವೂ ಗಂಭೀರವೂ ಆದುದೆಂಬುದನ್ನು ಮಾತ್ರ ಇಲ್ಲಿ ಉಲ್ಲೇಖಿಸಬೇಕಾಗಿದೆ. ಈ ತೀರ್ಮಾನಕ್ಕೆ ಕವಿಯ 'ಶರತ್' ವರ್ಣನೆಯ ಕೊನೆಯ ಎರಡು ಪದ್ಯಗಳನ್ನು ಅವಲೋಕನೀಯವಾಗಿ ಉದಾಹರಿಸಬಹುದು.[4]

ಸ್ತ್ರೀಣಾಂ ವಿಹಾಯ ವದನೇಷು ಶಶಾಂಕಲಕ್ಷ್ಮೀಂ
ಕಾಮ್ಯಂ ಚ ಹಂಸವಚನಂ ಮಣಿನೂಪುರೇಷು ।
ಬಂಧೂಕಕಾಂತಿಮಧರೇಷು ಮನೋಹರೇಷು
ಕ್ವಾಪಿ ಪ್ರಯಾತಿ ಸುಭಗಾ ಶರದಾಗಮಶ್ರೀಃ ॥ ೨೫ ॥

[ರಮಣಿಯರ ವದನದಲಿ ಚಂದಿರನ ಕಳೆಯಿರಿಸಿ
ಕಾಲಿನಂದುಗೆಗಳಲಿ ಅಂಚೆಯುಲಿಯಿರಿಸಿ
ಅವರ ಚೆಂದುಟಿಗಳಲಿ ಬಂಧೂಕ ಕಳೆಯಿರಿಸಿ
ಶಾರದ ಶ್ರೀಕಾಂತೆ ನೈಗರೆದಳರಸಿ] ಅನು : ಕನ್ನಡ ಋತುಸಂಹಾರ.

ವಿಕಚಕಮಲವಕ್ತ್ರಾ ಫುಲ್ಲನೀಲೋತ್ಪಲಾಕ್ಷೀ
ವಿಕಸಿತನವಕಾಶ ಶ್ವೇತವಾಸೋ ವಸಾನಾ ।
ಕುಮುದರುಚಿರಕಾಂತಿಃ ಕಾಮಿನೀವೋನ್ಮದೇಯಂ
ಪ್ರತಿದಿಶತು ಶರದ್ವಶ್ಚೇತಸಃ ಪ್ರೀತಿಮುಗ್ರ್ಯಾಮ್ ॥ ೨೬ ॥

[ವಿಕಚಕಮಲ ವಕ್ತ್ರದಿಂ ಪ್ರಫುಲ್ಲ ಉತ್ಪಲಾಕ್ಷಿಯಿಂ
ಪೂರ್ಣಶುಭ್ರಚಂದ್ರನಿಂ ಪ್ರಪೂರ್ಣಮಾಪಕಾಂತಿಯಿಂ
ಬಿರಿದ ಬಿಳಿಯ ಕಾಶದಿಂ ಪ್ರಕಾಶಮಾದ ವಸನದಿಂ
ಮತ್ತಯುವತಿಯಂದದಿಂ ಪ್ರಮೋದಮಾಂತ ಶಾರದಂ
ಹೃದಯದುನ್ನತಾಶೆಯಂ ಪ್ರದಾನಗೈಯಲಾಗವಂ.]
ಅನು : ಕನ್ನಡ ಋತುಸಂಹಾರ.

೨

ಇಂದಿನ ಕವಿಗಳಲ್ಲಿ 'ಶರದ್ ಗೀತೆ'ಯನ್ನು ಆಕಾಶವಾಣಿಗಾಗಿ ಬರೆದು ಪ್ರಸಾರ ಮಾಡಿದವರಲ್ಲಿ ಜಿ. ಎಸ್. ಶಿವರುದ್ರಪ್ಪನವರೂ ಒಬ್ಬರು. ಆ ಕವಿತೆಗಳನ್ನೆಲ್ಲಾ ತುಲನಾತ್ಮಕವಾಗಿ ನೋಡುವುದು ಈ ಲೇಖನದ ಗುರಿಯಲ್ಲ; ಆದರೆ ಈ ಕವಿಯ ಋತು-

[4] Ibid, ಪುಟ ೨೬. ಶರತ್‌ವರ್ಣನೆ, ಮೂಲ : ಸಂಸ್ಕೃತದಲ್ಲಿ ಶಾಸ್ತ್ರಿ ವ್ಯಂಕಟಾಚಾರ್ಯ ಉಪಾಧ್ಯೆ ವ್ಯಾಖ್ಯಾನ.

ಪ್ರಜ್ಞೆಯನ್ನು ಕುರಿತು ವಿಚಾರಮಾಡುವುದಾಗಿದೆ. ಇವರ 'ತೆರೆದ ದಾರಿ' ಸಂಗ್ರಹದಲ್ಲಿ 'ಚೈತ್ರಮುಖ' ಎಂಬ ಒಂದು ಸಾನೆಟ್ ಮತ್ತು 'ಕಾರ್ತಿಕ' ಎಂಬ ಸಂಗ್ರಹದಲ್ಲಿ 'ಶಾರದೆ' ಎಂಬ ನವ್ಯ ಕವನವೂ ಇದೆ. ಇವೆರಡರಲ್ಲಿಯೂ ಕವಿಯು ಸಾಂಪ್ರದಾಯಿಕ ಮನೋಧರ್ಮಿಯಂತೆ ಮೊದಲ ನೋಟಕ್ಕೆ ಕಂಡರೂ ಸೂಕ್ಷ್ಮ ಪರಿಶೀಲನೆಗೆ ನವ್ಯತೆಯನ್ನು ಸೊಗಸಾಗಿ ರೂಢಿಸಿಕೊಂಡಿರುವುದನ್ನು ಕಾಣಬಹುದಾಗಿದೆ. ಇವುಗಳನ್ನು ಶ್ರೇಷ್ಠ ಕೃತಿಗಳೆಂದು ಕರೆದು ಅನುಭವಿಸುವುದರಿಂದ ಯಾವ ಬಗೆಯ ನಷ್ಟವೂ ಆಗಲಾರದು. ಹಾಗೆ ಮಾಡುವುದರಿಂದ ನವ್ಯವೆಂದು ಪ್ರತ್ಯೇಕಿಸಿ ನೋಡಬೇಕಾಗಿಲ್ಲವೆಂಬ ಚಿಕಿತ್ಸಕ ಬುದ್ಧಿಯನ್ನೂ ಮೆಚ್ಚಿಕೊಳ್ಳಬಹುದು.

'ಚೈತ್ರಮುಖ'ದ ವಸ್ತುವೂ ಅಂತೆಯೇ 'ಶಾರದೆ'ಯ ವಸ್ತುವೂ ಕಾಲದಷ್ಟು ಹಳೆಯವು. ಆದರೆ ಕವಿಯು ಕಾಲದ ಪ್ರಜ್ಞೆಯಿಂದ ಭಾರತೀಯ ಸಂಪ್ರದಾಯವನ್ನು ತನ್ನದೆಂಬ ಅಭಿಮಾನದಿಂದ ಬಳಸಿಕೊಳ್ಳುವುದಲ್ಲದೆ ಅನುಭವವೇದ್ಯಗೊಳಿಸುವುದರಲ್ಲಿ ಔಚಿತ್ಯವಿದೆ. ಆದುದರಿಂದ ಈ ಕವನಗಳು ನೀಡುವ ಅನುಭವವೇನೆಂದು ಪರಿಶೀಲಿಸುವುದು ಮುಖ್ಯ.

'ಚೈತ್ರಮುಖ'ವು ಇಂದಿನ ಯಾವುದೇ ಸೂಕ್ಷ್ಮಮತಿಯ ಒಂದು ಬಗೆಯ ಅನುಭವ. ಬೋಳುಮರ, ಮೋಡವಿರದ ಆಕಾಶಕ್ಕೆ ಮೊರೆಯಿಟ್ಟಾಗ ಅದು ನೆಲದ ಹೃದಯಾಂತರಾಳದ ಕರೆ. ಅದರಿಂದ ಮರದ ಟೊಂಗೆ ಟಿಸಿಲುಗಳಲ್ಲಿ ಆನಂದವಿದೆ. ಆದರೆ ನಿರ್ಭಾವ ನೀಲಿಯ ನಡುವೆ ಉರಿಯುವ ಕಣ್ಣು ಸೂರ್ಯ. ಈ ನಡುವೆ ನೆಲಮುಗಿಲುಗಳ ನಡೂ-ಮಧ್ಯೆ ಮರಮರದ ಹಾಸುಗೆಯಲ್ಲಿ ಮಂದಹಾಸದ ನಿದ್ದೆ—ಇಂತಹ ಚಿತ್ರದಲ್ಲಿ ಗಿಡಮರದಲ್ಲಿ ಹಸುಳೆತನದ ಮಂದಹಾಸವು ನಿದ್ರಿಸುವುದನ್ನು ಕವಿಯು ಅರಿತು ಚಿತ್ರಿಸಿದ್ದಾನೆ. ಇದರ ಭಾವುಕ ಶಕ್ತಿಯಲ್ಲಿ ನಿರ್ದಿಷ್ಟವಾದ ಅರ್ಥವಿದ್ದು ಮನಮುಟ್ಟುತ್ತದೆ. ಕಾಲಕ್ಕಿರುವ ಒಂದು ಮುಖ 'ಚೈತ್ರ' ಇಲ್ಲಿ ಸುಂದರವಾಗಿದೆ. ಕವಿತೆಯು ಭಯಂಕರತೆಯನ್ನು ಒಳಗೊಂಡರೂ ಅದರ ಮೇಲೆ ಮಂದಹಾಸದ ಮಸ್ಲಿನ್ ಪರಸೆಯನ್ನು ಎಳೆದು ಬಿಟ್ಟಿರುವುದರಲ್ಲಿ ಗೆಲುವು ಕಂಡುಬರುತ್ತದೆ. ಒಳಗೆ ನಿರಾಶೆಯು ತುಂಬಿದ್ದರೂ ಮುಗುಳುನಗೆಯನ್ನು ಚೆಲ್ಲುವ ಯೌವನದಂತೆ ಈ 'ಚೈತ್ರಮುಖ'ವಿದೆಯೆಂದು ಹೇಳಬಹುದು.

'ಶಾರದೆ' ಕವನವು ಚೈತ್ರಮುಖದಂತೆ ಸರಳವಾದುದಲ್ಲ. ಕಾಲಿದಾಸನ 'ಶಾರದೆ'ಯ ಬೆಳ್ಳಕ್ಕಿಗಳು, ಕ್ರೌಂಚಕ್ವಣಿತ ಮತ್ತು (ಋತು) ಸಂಹಾರ ಮನೋಧರ್ಮವು ಈ ಕವನದಲ್ಲಿ ಕಂಡುಬಂದರೂ ಉದ್ದಿಶ್ಯವು ತೀರ ಭಿನ್ನವಾಗಿದೆ. 'ಋತುಸಂಹಾರ'ದ ಅಂತರ್ಗತ ಪ್ರಣಯವು ಕೂಡ ಇದರಲ್ಲಿರಬಹುದು. ಆದರೆ ನಮ್ಮ ಆರು ಋತುಗಳಲ್ಲಿ ಅತ್ಯಂತ ಮನೋಜ್ಞವಾದುದು ಈ ಶರತ್‌ಕಾಲವೆಂಬುದನ್ನು ಕವಿಯು ನಮ್ಮ ಗಮನಕ್ಕೆ ತರಲು ಯತ್ನಿಸಿರುವುದು ಸ್ಪಷ್ಟವಾಗಿದೆ. ಇಷ್ಟು ಮಾತ್ರವೇ ಆಗಿದ್ದರೆ ಇದೂ ಚೈತ್ರಮುಖದಂತೆ ಸರಳವಾಗುತ್ತಿತ್ತು. ಈ ಶಾರದೆಯು ಬರಿಯ ಋತುವಾಗದೆ ಕಾಲದ ಪ್ರತೀಕವಾಗಿ ಪ್ರೇಯಸಿಯ ಪ್ರತಿಮೆಯಾಗಿ ಧ್ವನಿಸುತ್ತದೆ.

೩

ಶಾರದೆಯು ಬರಿಯ ಋತುವಲ್ಲ, ಮನೆಯ ಒಡತಿ ಮತ್ತು ಮನಃಪ್ರಿಯೆ. ಇವಳು ಮಾಗಿಮಂಜಿನ ಹಾಲು ತೊಟ್ಟಿಲಲಿ ಕಣ್‌ತೆರೆದು ಬೆಳೆದ ಚೆಲುವೆ. ಚೈತ್ರಮಾಸದ ಹೂವುಗಳ ತೇರಿನಲ್ಲಿ ಇವಳ ಮೆರವಣಿಗೆ! ಇವಳ ಪಟ್ಟೆಸೀರೆ, ಲಕ್ಷಪಕ್ಷಿಗಳ ಕೊರಳಿನುಯ್ಯಾಲೆ ....ಇತ್ಯಾದಿಯಲ್ಲದೆ ಇವಳ ಕಣ್‌ಬೆಳಕು ಮನೆಯನ್ನು ತುಂಬಿಬಿಡುತ್ತದೆ. ಅಂದೊಮ್ಮೆ ಕಾಳಿ; ಆ ಅನಂತರ ಗೌರಿ; ಈಗಿವಳು ಶಾರದೆ....ಎನ್ನುವುದರಲ್ಲಿ ಕಾಲದ (ಒಂದು ವರ್ಷದ ಪರಿಮಿತಿಯ) ಮುಖಗಳನ್ನು (ಮೂರು : ಭಯಂಕರ, ಮಂಗಳ ಮತ್ತು ಶರತ್ತಿನದು) ಕಾಣಬಹುದಾಗಿದೆ. ಇದರಿಂದ ಕವಿತೆ (ಬೇರೆಯ ಋತುಗಳ ಮುಖಗಳನ್ನು ನೆನಪಿಗೆ ತರುವುದಲ್ಲದೆ) ಕಾಲದ ಸಂಕೀರ್ಣತೆಯನ್ನೂ ಪ್ರತಿಮಿಸುತ್ತದೆ.

ಶಾರದೆಯು ಮದುಮಗಳಾಗಿ ಬಂದವಳು ತಾಯಿಯಾಗಿ ಬದುಕಿನ ರಕ್ಷಕಿಯಾದ ಳೆಂಬುದನ್ನು ಕವಿಯು ಧ್ವನಿಯಲ್ಲಿ ಸಾಧಿಸಿದಂತಾಗಿದೆ. ಹೀಗೆ ಪ್ರೇಯಸಿಯ ನೆಪದಲ್ಲಿ ಕವಿಯು ಪ್ರಕೃತಿಯಲ್ಲಿ ಶಾರದೆಯ ಗುಣಗಳನ್ನು ಅಭೇದ್ಯಗೊಳಿಸಿ ಆಕೆಯನ್ನು ಅಗೋಚರ ಪ್ರೇಯಸಿಯೆನ್ನುವಂತೆ ಲಕ್ಷಣಗಳನ್ನು ಮಿಂಚಿಸಿದಂತಾಗಿದೆ. ಇದೇ ಕವಿತೆಯ ಮುಖ್ಯ ಧ್ವನಿಯೆಂದು ಹೇಳಬಹುದಾಗಿದೆ.

ಮೊದಲಿಗೆ ಈ ಕವಿಯು ಜಡೆಯನ್ನು ಮಾತ್ರ ಕಂಡು ಅದರಾಚೆ ತಿರುಗಿರುವ ಮುಖ ವನ್ನು ಕಾಣಲು ಮಾಡಿದ ಪ್ರಯತ್ನದಲ್ಲಿ 'ಶಾರದೆ'ಯ ಮುಖವನ್ನು ಕಂಡನೆಂದು ಹೇಳ ಬಹುದಾಗಿದೆ. ಕಾಲದ ವ್ಯಕ್ತಿತ್ವವನ್ನು ಋತುಗಳ 'ಸಂಹಾರ'ದಲ್ಲಿ ಋತುಗಳ ಲಕ್ಷಣ ಗಳನ್ನು 'ಋತುಮತಿ'ಯಲ್ಲಿ ಕಾಣುವ ಪ್ರಯತ್ನದಿಂದಲೇ ಈ ಕವಿತೆಯು ಅತ್ಯಾಧುನಿಕ ಸಂಕೀರ್ಣತೆಯನ್ನು ಪಡೆದುಕೊಂಡು ಶೋಭಿಸುತ್ತದೆ. ಶರತ್ ಋತುವಿನಲ್ಲಿ ಸರಸ್ವತಿಯ ಕಲ್ಪನೆಯನ್ನೂ ಕಾಣುವುದರಿಂದ 'ನಮೋಸ್ತುತೇ' ಎಂದು ಧನ್ಯನಾಗುತ್ತಾನೆ.

ಇಂತಹ ಅರ್ಥವ್ಯಾಪಕತೆಯಲ್ಲಿ ಕಾಲಿದಾಸನ 'ಋತುಸಂಹಾರ'ದ ಉದ್ದಿಶ್ಯಕ್ಕಿಂತ ಭಿನ್ನವಾದ ಪ್ರೌಢ ವಿಚಾರವನ್ನು ಕಾಣುವುದು ಕಠಿಣವಲ್ಲ. ಅದರ ವರ್ಣಕತೆಯಲ್ಲಿ ಕಾಲದ ಮಹಿಮೆಗಿಂತ ಪ್ರಣಯಾಂಕುರವಾದಾಗ ಮೂಡುವ ವಿರಹವೇ ಧ್ವನಿಸುವುದನ್ನು ಗಮನಿಸಿದರೆ ಕವಿ ಜಿ.ಎಸ್. ಶಿವರುದ್ರಪ್ಪನವರ ಕೃತಿಯ ಸಾರ್ಥಕತೆಯನ್ನು ಅರಿಯ ಬಹುದಾಗಿದೆ. ಏಕಕಾಲದಲ್ಲಿ ಕವಿತೆಯು ಶಾರದೆ, ಕಾಲ, ಪ್ರೇಯಸಿ, ಪ್ರೌಢ ಮತ್ತು ಬದುಕಿನ ತಾಯಿಯಾಗಿ ಮೆರೆಯುವುದರಲ್ಲಿ ಈ ಕೃತಿಯ ರಚನಾ ಚಾತುರ್ಯವನ್ನಲ್ಲದೆ ಇದರ ಜನ್ಮದ ವೃತ್ತಾಂತವನ್ನೂ ಕಾಣಬಹುದಾಗಿದೆ.

### ವಿಶೇಷ ಟಿಪ್ಪಣಿ

ಕಾಳಿದಾಸನ 'ಶಾರದೆ'ಯ ಕಲ್ಪನೆಯನ್ನು ಪು.ತಿ.ನ. ಅವರಲ್ಲಿಯೂ ಕಾಣಬಹು ದಾಗಿದೆ. ಅವರ ಶಾರದಯಾಮಿನಿಗೆ ಪ್ರೇರಣೆಯಾಗಿರುವಂತೆಯೂ ತೋರುತ್ತದೆ. ಆದರೆ ಕವಿಯು ಆ ಅನುಭವವು ಪರೋಕ್ಷವಾಗಿರುವಂತೆ ಬಳಸಿಕೊಂಡಿದ್ದಾರೆಯೆನ್ನಬಹುದು.

ಆಧಾರ : ಕಾಲಿದಾಸ— ಋತುಸಂಹಾರ(‘ಋತುಸಂಹಾರ’ದ ಅಭ್ಯಾಸಕ್ಕೆ ಶ್ರೀಯುತ ಬಿ. ಆರ್. ಶೇಷಾದ್ರಿ ಅಯ್ಯಂಗಾರ್ ಅವರ ನೆರವನ್ನು ಪಡೆಯಲಾಗಿದೆ. ಅವರಿಗೆ ಧನ್ಯವಾದಗಳು.)

‘ಚೈತ್ರಮುಖ’ ಮತ್ತು ‘ಶಾರದೆ’ ಕವನಗಳು ಅನುಕ್ರಮವಾಗಿ **ತೆರೆದ ದಾರಿ** ಮತ್ತು **ಕಾರ್ತೀಕ** ಕವನ ಸಂಗ್ರಹಗಳಲ್ಲಿವೆ.

# ಚೈತ್ರಮುಖ

ಯಾತನೆಯ ಮುಖವೆತ್ತಿ ಬೋಳು ಕೊಂಬೆಗಳ ಚಾಚಿ
ಮೊರೆಯಿಟ್ಟದ್ದು ಒಂದಾದರೂ ಮೋಡವಿರದಾಕಾಶಕ್ಕೆ ;
ಕರೆಗೆ ಓಗೊಟ್ಟದ್ದು ಆಳ ನೆಲದಾಳದಿಂದ!
ಬೇರಿನ ಒಳಗೆ ಸರಸರ ಏರಿ, ಕೊಂಬೆ ರೆಂಬೆಯ
ತುಂಬ ಜುಳು ಜುಳು ಹರಿದು, ಟೊಂಗೆ-ಟಿಸಿಲುಗಳಲ್ಲಿ
ಸಣ್ಣಗೆ ಪುಟಿದು ಸೊಂಪಾಗಿ ತೂಗುತಿದೆ ಬಂದ ಆನಂದ.

ಕಣ್ಣುದ್ದಕ್ಕು ಚಾಚಿರುವ ನೆಲದ ಮೈ ಚರ್ಮವೆಲ್ಲಾ ಸುಕ್ಕು ;
ಕೆರೆ ಕಟ್ಟೆಗಳ ಕೆನ್ನೆಯೆಲ್ಲಾ ಬತ್ತಿ, ಅಲ್ಲಲ್ಲಿ ಕದಡು ಹೊಂಡ-
ಗಳ ಕಣ್ಣಲ್ಲಿ ಪರೆಗಟ್ಟನಿಂತ ಪಾಚಿ. ಆಗಾಗ ತರಗೆಲೆ ಚಿಂದಿ-
ಯನ್ನುಟ್ಟು ಬಟ್ಟಬಯಲಲ್ಲಿ ಅಲೆವ ಸುಂಟರಗಾಳಿ. ಧಗೆಯ
ಬಾರುಕೋಲಿನ ಕೆಳಗೆ ದಿನದ ಬಂಡಿಯನೆಳೆದು ಸಾಗಿವೆ
ಹಗಲೂ ರಾತ್ರಿ. ನಿರ್ಭಾವ ನೀಲಿಯ ನಡುವೆ ಉರಿಯುವ
ಕಣ್ಣು. ಈ ಸುಡುವ ನೆಲಮುಗಿಲುಗಳ ನಡೂಮಧ್ಯೆ
ಮರಮರದ ಹಾಸುಗೆಯಲ್ಲಿ ಮಂದಹಾಸದ ನಿದ್ದೆ.

# ಶಾರದೆ

ಓ, ಇವಳು ಶಾರದೆ!
ಬಂದ ಬೆಳ್ಳಕ್ಕಿಗಳ ಕಣ್ಣೊಳಗೆ
ಇವಳ ಕತೆ ಹೀಗೆಂದು ಬರೆದಿದೆ:
ಮಾಗಿ ಮಂಜಿನ ಹಾಲುತೊಟ್ಟಿಲಲಿ ಕಣ್ ತೆರೆದು ಬೆಳೆದ ಚೆಲುವೆ;

ಚೈತ್ರಮಾಸದ ಹೂವುಗಳ ತೇರಿನಲಿ ಇವಳ ಮೆರವಣಿಗೆ!
ರಂಗುರಂಗಿನ ಜರಿಯ ಪಟ್ಟೆಸೀರೆಯನುಟ್ಟು
ದಿಕ್ಕೆಲ್ಲವನು ದಂಗುಬಡಿಸಿದ ಪ್ರಮದೆ!
ಲಕ್ಷ ಪಕ್ಷಿಗಳ ಕೊರಳಿನುಯ್ಯಾಲೆಯಲಿ
ಜೋಕಾಲಿಯಾಡಿದ ಮಗುದೆ.

ಆಗಾಗ, ಮುಗಿಲ ಹಂಡೆಯ ಮೊಗೆದು ಸಾಗಿತ್ತು ಇವಳ ಅಭ್ಯಂಜನ.
ಗುಡುಗು ಮಿಂಚಿನ ತೊಡವು; ಕಡಲ ಕನ್ನಡಿಯಲ್ಲಿ
ತಿಲಕ ತಿದ್ದುವ ಬಯಕೆ.
ಮಾತೆತ್ತಿದರೆ ಬಿರುಗಾಳಿಯುಸಿರು;
ಕಣ್ಣೆತ್ತಿ ನಿಂತು ಮಾತನಾಡಿಸಬಹುದೆ
ಇವಳನ್ನು ಯಾರಾದರೂ!

ಮಾವು ಬೇವುಗಳ ತೇರೇರಿ ಗಂಡನ ಮನೆಗೆ ಬಂದಾಮೇಲೆ
ಮುಖಕ್ಕೆ ಸದಾ ಮಳೆಯ ನೂಲಿನ ಮುಸುಕು.
ಹೊಗೆ ಮೋಡದಡುಗೆಮನೆಯೊಳಗೂ ತಂಪಾಗಿ ಹರಡಿತ್ತು
ಇವಳ ಕಣ್ ಬೆಳಕು!

ಈ ನಡುವೆ ಕೆಲವು ದಿನ ಮೊಗದಲ್ಲಿ ನಗೆಯಿಲ್ಲ;
ನೀರವ ನಿರುತ್ಸಾಹ; ತಲೆ ತುಂಬ ಮೋಡದ ತುಮುಲ.

ಅರ್ಥವಿಲ್ಲದ ಕವಿತೆ; ಕಾಲಿಟ್ಟಲ್ಲಿ ಕೆಸರು.
ಏನೆಂದು ಕೇಳಿದರೆ ತಣ್ಣನೆಯ ನಿಟ್ಟುಸಿರು.

'ಶ್ರಾವಣಾ ಬಂತು ಶ್ರಾವಣಾ'
ಇವಳು ಉಸಿರಾಡಿದರೆ ಹಸಿರು; ಮಾತಾಡಿದರೆ ಜುಳುಜುಳು;
ಹೆಜ್ಜೆ ಇಟ್ಟರೆ ಹೂವು; ತುರುಬಿನ ತುಂಬ ಮಲ್ಲಿಗೆ ನೋಡ!

ಅಂದೊಮ್ಮೆ ಕಾಳಿ; ಆ ಅನಂತರ ಗೌರಿ; ಈಗಿವಳು ಶಾರದೆ.
ಪಟ್ಟೆಸೀರೆಗಳೆಲ್ಲ ಪೆಟ್ಟಿಗೆಯ ಸೇರಿದುವು; ಈಗ
ಇವಳಿಗೆ ಬಿಳಿಯ ಬಟ್ಟೆಗಳಿಷ್ಟ. ಮನವೆಲ್ಲ
ಥಳಥಳ ನೀಲಿ; ಅದರ ತುಂಬಾ ಕೈಲಾಸಗಳ ಕನಸು.
ಹೊಲಗದ್ದೆಯಲಿ ನಿಂತ ತೆನೆಯ ತುಟಿಗಳಿಗಿವಳು
ಮುತ್ತಿಟ್ಟು ಹಾಲೂಡಿಸುವಳು; ಎತ್ತಿ ಆಡಿಸುವಳು.

ಈಗಿವಳು ಶಾರದೆ—ಸದಾ ಶಾಂತೆ, ಶುಚಿಸ್ಮಿತೆ;
ಗಂಭೀರೆ, ತೇಜೋನ್ವಿತೆ, ಕ್ರೌಂಚ ಕ್ವಣಿತೆ;
ನಮೋಸ್ತುತೇ—

## ಡಿ. ರಘುನಾಥರಾವ್

# 'ಗೋಡೆ'

'ಗೋಡೆ'—ಅದೇ ಹೆಸರಿನ ಕವನ ಸಂಕಲನದ ಯಶಸ್ವಿ ಕವನ. ಜೀವಂತವಾದ ಅನುಭವವೊಂದನ್ನು ಶಕ್ತವಾದ ಪ್ರತಿಮೆಯೊಂದರ ಮೂಲಕ ಬಿಚ್ಚುವುದರಲ್ಲಿ ಜಿ.ಎಸ್.ಎಸ್. ಅವರು ಈ ಕವನದಲ್ಲಿ ಯಶಸ್ವಿಯಾಗಿದ್ದಾರೆ. ಪ್ರತಿಮೆಗಳು ; ಅವುಗಳು ಧ್ವನಿಸುವ ಅರ್ಥ ಒಂದಕ್ಕೊಂದು ಬೆಸೆದುಕೊಂಡು ಕವನದುದ್ದಕ್ಕೂ ಬೆಳೆಯುತ್ತಾ ಹೋಗಬೇಕು. ಜಿ.ಎಸ್.ಎಸ್. ಅವರ ಅನೇಕ ಕವನಗಳಲ್ಲಿ ಹೀಗಾಗುವುದಿಲ್ಲ. ಈ ದೃಷ್ಟಿಯಿಂದ ಅವರ ಒಳ್ಳೆಯ ಕವನ 'ತೆಂಗು' ನೋಡಬಹುದು. ಅಲ್ಲಿ, ಅವರು ಕೇವಲ ತೆಂಗಿನ ಮರದ ವರ್ಣನೆಯನ್ನು ಮಾಡುತ್ತಿಲ್ಲ; ಇನ್ನೇನೋ ಒಂದನ್ನು ಸೂಚಿಸುತ್ತಿದ್ದಾರೆ ಎನ್ನುವ ಗುಮಾನಿ ಆಗುತ್ತದೆ. ಆದರೆ, ಕವನದ ಕೊನೆಯಲ್ಲಿ—"ನೆನಪಾಗುವರು ಕ್ರಿಸ್ತ–ಬುದ್ಧ" ಎಂದು ಅವರೇ ಹೇಳಿಬಿಡುವುದರಿಂದ, ಇದು-ಕ್ರಿಸ್ತ ಬುದ್ಧರಂಥವರ ಜೀವನಕ್ಕೆ ಒಡ್ಡಿದ ಪ್ರತಿಮೆ ಎಂದು ಸ್ಪಷ್ಟವಾಗಿಬಿಡುತ್ತದೆ. ತೆಂಗಿನಮರದ ವರ್ಣನೆ ಸಮರ್ಥವಾಗಿದೆ. ಆದರೆ, ತೆಂಗಿನ ಮರದ ವರ್ಣನೆ, ಅದು ಸೂಚಿಸುವ ಅರ್ಥ ಒಂದರೊಳಗೊಂದು ಬೆರೆತುಕೊಂಡು ಬೆಳೆಯದೆ ಬೇರೆ ಬೇರೆಯಾಗಿಯೇ ನಿಂತುಬಿಡುತ್ತವೆ. ತೆಂಗಿನ ಮರದ ಒಟ್ಟು ಚಿತ್ರ ಕ್ರಿಸ್ತ-ಬುದ್ಧರ ಜೀವನಕ್ಕೆ ಸರಿಯಾದ ಪ್ರತಿಮೆಯಾಗಿದ್ದರೂ: ಸೂಚಿತಾರ್ಥಕ್ಕಿಂತ, ವಾಚ್ಯಾರ್ಥವೇ ಎದ್ದು ಕಾಣುತ್ತದೆ. ಅಂದರೆ, ತೆಂಗಿನಮರದ ವರ್ಣನೆಯೇ ನಮ್ಮ ಗಮನವನ್ನು ಸೆಳೆಯುತ್ತದೆ. ಆದರೆ ಕವನದ ಕೊನೆ ಇಡೀ ಕವನಕ್ಕೆ ಬೇರೊಂದು ಅರ್ಥವನ್ನು ಕೊಡಲು ಪ್ರಯತ್ನಿಸುತ್ತದೆ. ಅವರು ತಮ್ಮ ಕವನಗಳಿಗೆ ಕೊನೆಯಲ್ಲಿ ಬೇರೊಂದು ತಿರುವನ್ನು ಕೊಡಲು ಪ್ರಯತ್ನಿಸುತ್ತಾರೆ. ಕೆಲವು ಕವನಗಳಲ್ಲಿ ಅದು ಹೊರಗಿನಿಂದ ತಂದು ಇಟ್ಟಂತೆ ಅನ್ನಿಸಿಬಿಡುತ್ತದೆ. ಕವನದ ದ್ರವ್ಯದಿಂದಲೇ ಚಾಚಿಕೊಳ್ಳುವುದಿಲ್ಲ. ಅನುಭವವನ್ನು ಧ್ವನಿಸುವ ಪ್ರತಿಮೆಗಳು ಕವನದ ಅನುಭವವನ್ನು ಹಂತಹಂತದಲ್ಲಿ ಹಾಸುತ್ತಾ ಬೆಳೆಯಬೇಕಾಗುತ್ತದೆ. ಕವನ ತನಗೆ ಅತ್ಯಂತ ಸಹಜವಾದ ಆಕಾರವನ್ನು ಪಡೆಯುವುದೂ ಅಷ್ಟೇ ಮುಖ್ಯ. ಈ ದೃಷ್ಟಿಯಿಂದ 'ಗೋಡೆ' ತುಂಬ ಯಶಸ್ವಿಯಾಗಿದೆ. ಕವನದ ಅನುಭವದಿಂದ ಬೇರೆಯಾದ ಯಾವ ತಿರುವನ್ನು ಈ ಕವನಕ್ಕೆ ಕವಿ ಕೊಡಲು ಪ್ರಯತ್ನಿಸಿಲ್ಲ. ಮಾತಿನ ಧಾಟಿಯತ್ತ ಅವರ ಕಾವ್ಯ ಹೊರಳುತ್ತಿರುವುದನ್ನು 'ಗೋಡೆ' ಕವನದಲ್ಲಿ ಗುರುತಿಸಬಹುದು.

'ಗೋಡೆ' ಕವನ ಬೆಳೆದಂತೆಲ್ಲ ಅದರ ಅರ್ಥವಲಯವೂ ಹರಡುತ್ತಾ ಹೋಗುತ್ತದೆ. 'ಗೋಡೆ' ಸಂಕಲನದ ಮುನ್ನುಡಿಯಲ್ಲಿ—ಅವರು ಹೀಗೆ ಹೇಳುತ್ತಾರೆ:

"ವ್ಯಕ್ತಿ ವ್ಯಕ್ತಿಯ ನಡುವೆ ಅಸೂಯೆ, ಅಹಂಕಾರ, ಪ್ರತಿಷ್ಠೆಯ, ತಪ್ಪು ತಿಳುವಳಿಕೆಗಳ ಗೋಡೆಗಳು;....ಇದರಿಂದಾಗಿ ಪರಸ್ಪರ ಅವಿಶ್ವಾಸ, ಆತ್ಮೀಯತೆ, ವಿಶಾಲತೆಗೆ ಆತಂಕ. ಸಂಪರ್ಕರಹಿತವಾದ ಆವರಣಗಳ ನಡುವೆ ಸಿಕ್ಕು ನರಳುವುದೇ ನಮ್ಮ ಪಾಡು; ಇದು ಶತಮಾನಗಳ ಪಾಡು."

ಅನಿರೀಕ್ಷಿತವಾಗಿ ವ್ಯಕ್ತಿ ವ್ಯಕ್ತಿಗಳ ನಡುವೆ ಅಸೂಯೆಯ, ತಪ್ಪು ತಿಳುವಳಿಕೆಗಳ ಗೋಡೆಗಳು ಏಳಬಹುದು. ಆಗ, ವ್ಯಕ್ತಿಗಳ ನಡುವಿನ ಮಧುರ ಸಂಬಂಧ ಕಡಿದು ಹೋಗುತ್ತದೆ. ಆ—ನೋವಿನಿಂದ ಇಬ್ಬರೂ ನರಳಬೇಕಾಗುತ್ತದೆ. ಸಂಪರ್ಕವನ್ನು ಕತ್ತರಿಸಿಕೊಂಡ ವ್ಯಕ್ತಿ ಏಕಾಕಿಯಾಗಬೇಕಾಗುತ್ತದೆ. ಕವನದ ನಾಯಕನಿಗೆ ತಮ್ಮ ನಡುವೆ ಗೋಡೆಗಳು ಎದ್ದಿರುವುದರ ಅರಿವಿದೆ. ಆದರೆ, ಅದರಿಂದ ಪಾರಾಗುವ ದಾರಿ ಮಾತ್ರ ಗೊತ್ತಿಲ್ಲ. 'ಗೋಡೆ'ಗಳನ್ನು ಕಟ್ಟಿಕೊಂಡಿರುವವರು ಅವುಗಳು ಕರಗಿ ಹೋಗುವುದನ್ನೇ 'ಕಾಯುತ್ತಾ' ಕುಳಿತುಕೊಳ್ಳಬೇಕಾಗುತ್ತದೆ. ಕವನದ ನಾಯಕ ಈ—ವಾಸ್ತವವನ್ನು ಒಪ್ಪಿಕೊಳ್ಳುತ್ತಾನೆ. ಅಲ್ಲದೆ, ಸಂಕಟಪಡುತ್ತಲೇ ಕಾಯುವುದಕ್ಕೆ ಸಿದ್ಧನಾಗುತ್ತಾನೆ.

ಕವನದ ಮೊದಲ ಭಾಗ, 'ಇದ್ದಕ್ಕಿದ್ದಂತೆ' ವ್ಯಕ್ತಿ ವ್ಯಕ್ತಿಗಳ ನಡುವೆ ಗೋಡೆಗಳು ಏಳುವ ಕ್ರಿಯೆಯನ್ನು ಚೆನ್ನಾಗಿ ಹೇಳಿದೆ.

ಒಂದೊಂದು ಸಲ ನನಗೂ ನಿನಗೂ ನಡುವೆ
ಇದ್ದಕ್ಕಿದಂತೆ ಗೋಡೆ ಏಳುತ್ತದೆ.
ಎಲ್ಲಿಂದಲೋ ಏನೊ ಇಟ್ಟಿಗೆಯ ಮೇಲೆ ಇಟ್ಟಿಗೆ ಬಂದು
ಕೂತು, ಕೂತಲ್ಲಿಯೇ ನಮ್ಮನ್ನು ಹೂತು
ಸುತ್ತಲೂ ಗೋಡೆ ಕಟ್ಟುತ್ತವೆ.

'ಇದ್ದಕ್ಕಿದ್ದಂತೆ'—'ಎಲ್ಲಿಂದಲೋ' ಎನ್ನುವ ಎರಡು ಮೂರನೆಯ ಪಾದದ ಶಬ್ದಗಳು ನಮಗೆ ತಿಳಿಯದಂತೆಯೇ ನಮ್ಮ ನಡುವೆ ಗೋಡೆ ಎದ್ದು ನಿಲ್ಲುತ್ತದೆ ಎನ್ನುವುದನ್ನು ತಿಳಿಸುತ್ತವೆ. ಮೊದಲ ಪಾದದ 'ಒಂದೊಂದು ಸಲ' ಎನ್ನುವುದೂ ಇದಕ್ಕೆ ಪುಷ್ಟಿ ಕೊಡುತ್ತದೆ. 'ಇಟ್ಟಿಗೆಯ ಮೇಲೆ ಇಟ್ಟಿಗೆ ಬಂದು ಕೂತು-ಕೂತಲ್ಲಿಯೇ ನಮ್ಮನ್ನು ಹೂತು'—ಎಂಬಲ್ಲಿನ ಇಟ್ಟಿಗೆಯ ಮೇಲೆ ಇಟ್ಟಿಗೆ, ಕೂತು-ಕೂತಲ್ಲಿಯೇ, ಹೂತು, ಮುಂತಾದ—ಶಬ್ದಗಳು ನಮಗೆ 'ತಿಳಿಯದಂತೆಯೇ ನಮ್ಮ ಸುತ್ತ ಏಳು'ವ ಗೋಡೆಯ ಕ್ಷಿಪ್ರಗತಿಯನ್ನು ಹೇಳುತ್ತವೆ. 'ಕೂತಲ್ಲಿಯೇ ನಮ್ಮನ್ನು ಹೂತು' ನುಡಿಗಟ್ಟಿನ ತೀವ್ರತೆಯನ್ನು ಗಮನಿಸಿ. 'ಬಂದು ಕೂತು' ಗೋಡೆ ನಿರ್ಮಾಣವಾಗುವ ಕ್ರಿಯೆಯನ್ನು ಸೂಚಿಸುತ್ತದೆ. 'ಹೂತು' ಶಬ್ದ ಎಲ್ಲ ಸಂಪರ್ಕಗಳಿಂದ ದೂರಾಗಿರುವ ನಾಯಕನನ್ನು ಸೂಚಿಸುತ್ತದೆ—['ಹೂತು' ಶಬ್ದದ ಧ್ವನಿಯನ್ನು ಗಮನಿಸಿ.] ಮುಂದಿನ ಪಾದದ ಮೊದಲ ಶಬ್ದ 'ಸುತ್ತಲೂ' ಅದನ್ನೇ ಹೇಳುತ್ತದೆ. 'ಸುತ್ತಲೂ ಗೋಡೆ ಕಟ್ಟುತ್ತವೆ' ಎಂಬಲ್ಲಿನ 'ಕಟ್ಟುತ್ತವೆ' ಎನ್ನುವ

ಪ್ರಯೋಗವನ್ನು ಗಮನಿಸಿ. [ಹಾಗೇ 'ಸುತ್ತಲೂ' ಎಂಬಲ್ಲಿನ ದೀರ್ಘಕಾರಕವಾಗಿರುವ್ರು ದನ್ನು ನೋಡಿ.] ಅಹಂಕಾರ, ಅಸೂಯೆ, ದ್ವೇಷ ಮುಂತಾದುವು ವ್ಯಕ್ತಿಗಳ ನಡುವೆ ಗೋಡೆಗಳನ್ನು 'ಕಟ್ಟುತ್ತವೆ'—ಎಂಬುದನ್ನು ತಿಳಿಸುತ್ತದೆ. ಮೊದಲ ಐದು ಪಾದಗಳಲ್ಲಿ ಗೋಡೆಯ ಪ್ರತಿಮೆ ಕವನದ ಅರ್ಥ ಒಟ್ಟೊಟ್ಟಿಗೆ ತಳುಕು ಹಾಕಿಕೊಂಡಿರುವುದು ಸ್ಪಷ್ಟ ವಾಗಿಯೇ ಇದೆ.

ಮೊದಲನೆಯ ಭಾಗದ ಕೊನೆಯ ಮೂರು ಪಾದಗಳು 'ಗೋಡೆ' ಪ್ರತಿಮೆಗೆ ಹೊಸ ಅರ್ಥವನ್ನು ತುಂಬಲು ಪ್ರಯತ್ನಿಸಿವೆ. 'ಗೋಡೆ'ಯ ಪ್ರತಿಮೆಯೇ ಇಲ್ಲಿ ಇನ್ನಷ್ಟು ಬೆಳೆ ಯುತ್ತದೆ :

"ಎದ್ದ ಗೋಡೆಯ ತುಂಬ ಕೆಂಗಣ್ಣು ಕೆಮ್ಮೀಸೆ;
ಮೀಸೆಯ ಕೆಳಗೆ ಸೊಟ್ಟಮೂತಿಯ ಕೆಟ್ಟ ಬಾಯಿ,
ಉಗಿಯುತ್ತದೆ ಬೆಂಕಿ."

'ಗೋಡೆಯ ತುಂಬ'—ಎನ್ನುವ ಪದಗಳು ಗೋಡೆಯೇ ಕೆಂಗಣ್ಣು-ಕೆಮ್ಮೀಸೆಯಾಗಿ ಬಿಡುವುದನ್ನು ಹೇಳುತ್ತವೆ. ಮೀಸೆ-ಮೀಸೆಯ ಕೆಳಗಿನ ಬಾಯಿ ಒಂದಕ್ಕೊಂದು ಸಹಜ ಬೆಳವಣಿಗೆ. 'ಸೊಟ್ಟ ಮೂತಿಯ ಕೆಟ್ಟ ಬಾಯಿ'—ಎಂಬುವುದು ತಾತ್ಸಾರ-ಜುಗುಪ್ಸೆ ಯನ್ನು ಸೂಚಿಸುತ್ತದೆ. [ಸೊಟ್ಟ-ಕೆಟ್ಟ-ಪ್ರಾಸವೂ ಕವನಕ್ಕೆ ಪೂರಕವಾಗಿದೆ.] ಆ ಬಾಯಿ ದ್ವೇಷ, ಅಸೂಯೆ, ಸೇಡಿನ ಬೆಂಕಿಯನ್ನು 'ಉಗಿಯುತ್ತದೆ.' ಮೂರನೆಯ ಪಾದದ ಉಗಿಯುತ್ತದೆ ಎಂಬುದರ ಮೇಲೂ; ಎರಡನೆಯ ಪಾದದ 'ಬಾಯಿ'ಯ ಮೇಲೂ ಒತ್ತು ಬೀಳುವುದನ್ನು ಗಮನಿಸಿ. ಮೇಲಿನ ಮೂರು ಪಾದಗಳಲ್ಲಿ ಬಾಯಿ ಮತ್ತು ಅದು ಉಗಿಯುವ ಬೆಂಕಿಯ ಮೇಲೆ ಒತ್ತು ಬೀಳುವುದು ಕವನದ ಬೆಳವಣಿಗೆಯ ದೃಷ್ಟಿಯಿಂದಲೂ ಮುಖ್ಯವಾಗಿದೆ. ಸಹಕಾರ, ಪ್ರೀತಿ, ವಿಶ್ವಾಸ, ಅರಿವು ಮುಂತಾದುವು ಆ ಬೆಂಕಿಯಲ್ಲಿ ಸುಟ್ಟು ಹೋಗುತ್ತವೆ ಎಂಬುದನ್ನು ಕವನದ ಮುಂದಿನ ಭಾಗ ತಿಳಿಸು ತ್ತದೆ. ಎರಡನೆಯ ಭಾಗ ಮೊದಲ ಭಾಗದಿಂದ ಬೆಳೆಯುತ್ತದೆ :

"ಆಗ,
ನಾನೂ ನೀನೂ ಬಹುಕಾಲದಿಂದ ನೀರೆರೆದು ಬೆಳಸಿದ
ಹೂವಿನ ತೋಟ ಸೀದು ಹೊಗೆಯಾಡುತ್ತದೆ.

"ಹೊಗೆಯಲ್ಲಿ ಉಸಿರು ಕಟ್ಟಿಕೊಂಡು
ನಾನು ಮತ್ತು ನೀನು
ಗೋಡೆಯೆರಡೂ ಬದಿಗೆ
ನರಳಿ ಹೊರಳುತ್ತೇವೆ."

ಮೊದಲ ಭಾಗದ 'ನಾನು' ಮತ್ತು 'ನೀನು' ಇಲ್ಲಿ ಮತ್ತೆ ಬರುತ್ತಾರೆ. 'ಬಹುಕಾಲ ದಿಂದ' ಬೆಳೆಸಿಕೊಂಡು-ಉಳಿಸಿಕೊಂಡು ಬಂದಿರುವ ಸ್ನೇಹ-ಪ್ರೀತಿ ಆ ಬೆಂಕಿಯಲ್ಲಿ ಸುಟ್ಟು ಹೋಗುತ್ತವೆ. 'ಬಹುಕಾಲ' ಮತ್ತು 'ಒಂದೊಂದು ಸಲ' ಇವುಗಳಿಗಿರುವ ಸಂಬಂಧವನ್ನು

ನೋಡಿ. ಕಷ್ಟಪಟ್ಟು ಬೆಳೆಸಿದ್ದನ್ನು ಇದ್ದಕ್ಕಿದ್ದಂತೆ ನಾಶಮಾಡಿಬಿಡುತ್ತದೆಂಬುದನ್ನು ಅದು ಸೂಚಿಸಿದೆ. 'ನೀರೆರೆದು'—ಎನ್ನುವ ಶಬ್ದ ಕಷ್ಟ-ಪ್ರೀತಿಯಿಂದ ಬೆಳೆಸಿದ್ದು ಎಂಬುವುದನ್ನು ಸೂಚಿಸುತ್ತದೆ. [ನಾನೂ-ನೀನೂ ಶಬ್ದಗಳ ದೀರ್ಘವೂ ಅರ್ಥಕ್ಕೆ ಅನುಕೂಲಕಾರಿಯಾಗಿರುವುದನ್ನು ನೋಡಬಹುದು.] 'ಹೂವಿನ ತೋಟ'—ಮೃದುವಾದ ಭಾವನೆಗಳನ್ನೂ ಸೂಚಿಸುತ್ತದೆ. ಹೂವಿನ ತೋಟ ಸುಡುವುದಿಲ್ಲ, ಅದು ಸೀಯುತ್ತದೆ. 'ಸೀದು' ಶಬ್ದ ಎಷ್ಟು ಉಚಿತವಾಗಿದೆ ಎಂಬುದನ್ನು ಮತ್ತು ಅದರ ಅರ್ಥಪೂರ್ಣತೆಯನ್ನು ಗಮನಿಸಿ. ಸೀಯುವುದಕ್ಕೂ ಹೊಗೆಯಾಡುವುದಕ್ಕೂ ಸಹಜ ಸಂಬಂಧವಿದೆ. ಆ ಹೊಗೆ ಗೋಡೆಯ ಆಬದಿ ಮತ್ತು ಈ ಬದಿಯಲ್ಲಿರುವವರಿಗೆ ಉಸಿರು ಕಟ್ಟುವಂತೆ ಮಾಡುತ್ತದೆ. ಹೊಗೆಯಲ್ಲಿ ವ್ಯಕ್ತಿಗಳು 'ನರಳಿ ಹೊರಳುತ್ತಾರೆ.' 'ನರಳು' ಶಬ್ದದ ಮೇಲೆ ಘಾತಬಿದ್ದಿರುವುದನ್ನು ನೋಡಿ. ಹೂವಿನ ತೋಟದ ಸೀಯುವಿಕೆ; ಹೊಗೆಯಾಡುವಿಕೆ; ಅದು ಉಸಿರು ಕಟ್ಟಿಸಿ ವ್ಯಕ್ತಿಗಳನ್ನು ಒದ್ದಾಡಿಸುವಿಕೆ—ಇವು ಒಂದಕ್ಕೊಂದು ಕಚ್ಚಿಕೊಂಡಿರುವುದನ್ನು ಗಮನಿಸಿ. ಮೊದಲ ಭಾಗದಲ್ಲಿ ಗೋಡೆ ಮತ್ತು ಬೆಂಕಿಯ ವಿಷಯ ಬಂದರೆ; ಎರಡನೆಯ ಭಾಗದಲ್ಲಿ ಎದ್ದ ಗೋಡೆಯಿಂದಾಗಿ ದಾರುಣ ಸಂಕಟಕ್ಕೆ ಗುರಿಯಾಗಿರುವ ವ್ಯಕ್ತಿಗಳ ವಿಷಯ ಬಂದಿದೆ. ಆ-ಸಂಕಟದ ಸ್ಥಿತಿಯನ್ನು ಮುಂದಿನ ಮೂರು ಪಾದಗಳು ಚೆನ್ನಾಗಿ ಚಿತ್ರಿಸಿವೆ.

ಭೋರೆಂಬ ಗಾಳಿ ಗಾಳಿ ಮನೆಸುತ್ತ ಊಳಿಡುತ್ತದೆ.
ಕಾರಿರುಳು ಗಪ್ಪನೆ ಕೂತು
ನಕ್ಷತ್ರಗಳ ಹಲ್ ತೆರೆದು ಗರುಗುಟ್ಟುತ್ತದೆ.

'ಸಂಪರ್ಕರಹಿತವಾದ ಆವರಣಗಳ ನಡುವೆ' ಸಿಕ್ಕ ವ್ಯಕ್ತಿಯ ನೋವನ್ನು ಮತ್ತು ಅವನಿಗಾಗುವ ಅನಾಥತೆಯ ಅರಿವನ್ನು ಮೇಲಿನ ಪಾದಗಳು ಧ್ವನಿಸುತ್ತವೆ. ಇಲ್ಲಿನ, 'ಮನೆ ಸುತ್ತ' ಎನ್ನುವುದಕ್ಕೂ ಮೊದಲ ಭಾಗದ 'ಸುತ್ತಲೂ ಗೋಡೆ ಕಟ್ಟುತ್ತವೆ' ಎನ್ನುವುದಕ್ಕೂ ಸಂಬಂಧವಿದೆ. 'ಕಾರಿರುಳು'; 'ಭೋರೆಂಬ' ಗಾಳಿಯ ಊಳಿಡುವಿಕೆ; ನಕ್ಷತ್ರಗಳ ಹಲ್ ತೆರೆದು ಗುರುಗುಟ್ಟುವಿಕೆ-ಇವು ಎದ್ದ ಗೋಡೆಯಿಂದ ಉಂಟಾಗಿರುವ ಸ್ಥಿತಿಯನ್ನು ಸಮರ್ಪಕವಾಗಿ ಧ್ವನಿಸಿವೆ. 'ಗೋಡೆ' 'ಕಾರಿರುಳು' ಒಂದಕ್ಕೊಂದು ಬೆರೆತುಕೊಂಡು ಬೆಳೆದಿವೆ. ಮೊದಲ ಭಾಗದ 'ಇಟ್ಟಿಗೆಯ ಮೇಲೆ ಬಂದು ಕೂತು' ಎಂಬುದಕ್ಕೂ ಇಲ್ಲಿನ 'ಕಾರಿರುಳು ಗಪ್ಪನೆ ಕೂತು'—ಎಂಬುದಕ್ಕೂ ಸಂಬಂಧವಿರುವುದನ್ನು ಗಮನಿಸಿ. 'ಗಪ್ಪನೆ ಕೂತು' ಶಬ್ದಗಳ ತೀವ್ರತೆಯನ್ನು ನೋಡಿ. ನಕ್ಷತ್ರಗಳ ಹಲ್ಲನ್ನು ತೆರೆದು ರಾತ್ರಿ ಗುರುಗುಟ್ಟುತ್ತದೆಂಬುದು ಚೆನ್ನಾಗಿದೆ.

ವ್ಯಕ್ತಿ-ವ್ಯಕ್ತಿಗಳ ನಡುವಿನ ತಪ್ಪು ತಿಳುವಳಿಕೆಯ ಗೋಡೆಯಿಂದುಂಟಾಗಿರುವ ಕತ್ತಲನ್ನು ತಿಳುವಳಿಕೆಯ ಬೆಳಕು ಮಾತ್ರ ನಾಶಮಾಡಬಲ್ಲದು. ಈ ವಿಷಯವನ್ನು ಕವನದ ಕೊನೆಯ ಪಾದಗಳು ಸೂಚಿಸುತ್ತವೆ.

ಕೋಳಿ ಕೂಗುವುದನ್ನು ಕೇಳುತ್ತಾ
ಗೋಡೆಯ ಆಚೆಗೆ ನೀನು

ಈಚೆಗೆ ನಾನು
ಗೋಡೆ ಕರಗುವುದನ್ನೆ ಕಾಯುತ್ತಾ
ಕೂರುತ್ತೇವೆ.

ಇಲ್ಲಿ, 'ಕೋಳಿ' ಬೆಳಕಿಗೆ ಸಂಕೇತವಾಗಿದೆ. [ಹಿಂದಿನ 'ಕಾರಿರುಳಿಗೂ'–ಇಲ್ಲಿನ–ಕೋಳಿಗೂ ಸಂಬಂಧವಿರುವುದನ್ನು ನೋಡಿ.] ವ್ಯಕ್ತಿಗಳು (ನಾಯಕ) ಬೆಳಕು ಮತ್ತು ಗಾಳಿಗಳು ನುಸುಳದಂತಿರುವ ಆವರಣದೊಳಗೆ 'ಹೂತು' ಹೋಗಿರುವುದರಿಂದ, ಬೆಳಗಾದುದು ತಿಳಿಯ ಬೇಕಾದರೆ ಕೋಳಿಯ ಕೂಗನ್ನು 'ಕೇಳುತ್ತಾ'—ಕೂರಬೇಕಾಗುತ್ತದೆ. 'ಕೋಳಿ' ಈ ಎರಡೂ ದೃಷ್ಟಿಯಿಂದಲೂ ಸಾರ್ಥಕವಾಗಿರುವುದನ್ನು ಗಮನಿಸಿ. 'ಕೇಳುತ್ತಾ' ಎನ್ನುವುದು ಅದಕ್ಕೆ ಪುಷ್ಟಿಯನ್ನು ಕೊಡುತ್ತದೆ. ಅವಿಶ್ವಾಸ, ಅಪನಂಬಿಕೆಯ, ತಪ್ಪು ತಿಳುವಳಿಕೆಯ ಗೋಡೆ ಕರಗದೆ ಹೋದರೆ ನೋವಿನಿಂದ ಬಿಡುಗಡೆ ಹೊಂದುವುದು ಸಾಧ್ಯವಿಲ್ಲ ಎಂಬು ದನ್ನು ಕವನ ಸೂಚಿಸಿದೆ. 'ಕರಗುವುದನ್ನೇ ಕಾಯುತ್ತಾ'—ಎನ್ನುವ ಶಬ್ದಗಳು ಇಲ್ಲಿ ಮುಖ್ಯ. ಕರಗುವ ಕ್ರಿಯೆ ತನಗೆ ತಾನೇ ಆಗಬೇಕೆಂಬ ಸೂಚನೆ ಅಲ್ಲಿದೆ. ಬೇರೆ ಯಾವ ದಾರಿಯೂ ಇಲ್ಲ ಎನ್ನುವ ವಿಷಾದದ ದನಿ ಅಲ್ಲಿರುವುದನ್ನು ಗಮನಿಸಿ. 'ಕೇಳುತ್ತಾ' 'ಕಾಯುತ್ತಾ'—ಎನ್ನುವಲ್ಲಿನ ದೀರ್ಘ—ಬಹುಕಾಲ ಕಾಯಬೇಕಾಗಿರುವುದನ್ನು ಸೂಚಿ ಸಿದೆ. ಕವನದ ಕೊನೆಯಲ್ಲಿ ಸಂಶಯದ ನೋವಿನ ದನಿಯ ಜೊತೆಗೇ ಆಸೆಯ ಬೆಳಕಿದೆ. ಆದರೂ, 'ಕಾಯುತ್ತಾ ಕೂರುತ್ತೇವೆ' ಎನ್ನುವ ಮುಕ್ತಾಯ ಅಸಹಾಯಕತೆಯನ್ನು, ನಿಷ್ಕ್ರಿಯತೆಯನ್ನು ಸೂಚಿಸುತ್ತಿರುವುದನ್ನು ಅಲ್ಲಗಳೆಯುವಂತಿಲ್ಲ. ಎದ್ದ ಗೋಡೆ ಯಿಂದಾಗಿ ಉಂಟಾಗಿರುವ ಸ್ಥಿತಿಯನ್ನು ಕವನದ ನಾಯಕ ಒಪ್ಪಿಕೊಳ್ಳುತ್ತಾನೆ. ಆ– ನೋವಿಗೆ ದಿಢೀರ್ ಪರಿಹಾರವಿಲ್ಲವೆಂಬುದರ ಅರಿವೂ ಅವನಿಗಿದೆ. ಆದ್ದರಿಂದಲೇ, ಸಂಕಟ ಪಡುತ್ತಲೆ 'ಕಾಯುತ್ತಾ' ಕೂರುವ ತೀರ್ಮಾನದಲ್ಲಿ ಕವನ ಮುಕ್ತಾಯವಾಗುತ್ತದೆ. ಈ ಮುಕ್ತಾಯ 'ಗೋಡೆ' ಕವನಕ್ಕೆ ಅತ್ಯಂತ ಸಹಜವಾಗಿದೆ. ಗಟ್ಟಿಯಾದ ಅನುಭವ ವೊಂದು ತನಗೆ ಅತ್ಯಂತ ಉಚಿತವಾದ ಅಭಿವ್ಯಕ್ತಿಯನ್ನು ಈ ಕವನದಲ್ಲಿ ಪಡೆದುಕೊಂಡಿದೆ. 'ಗೋಡೆ'ಯ ಪ್ರತಿಮೆ–ಅದು ಸೂಚಿಸುವ ಅರ್ಥ ಒಂದರೊಳಗೊಂದು ಸೇರಿ ಬೆಳೆದಿರುವು ದನ್ನು ಮೇಲಿನ ವಿಶ್ಲೇಷಣೆ ಸಾಬೀತುಪಡಿಸಿದೆಯೆಂದು ತಿಳಿದಿದ್ದೇನೆ. ಈ ದೃಷ್ಟಿಯಿಂದ ಜಿ.ಎಸ್.ಎಸ್. ಅವರ ಕವನಗಳಲ್ಲಿ 'ಗೋಡೆ' ಬಹಳ ಮುಖ್ಯವಾದ ಕವನವಾಗುತ್ತದೆ.

# ಗೋಡೆ

ಒಂದೊಂದು ಸಲ ನನಗೂ ನಿನಗೂ ನಡುವೆ
ಇದ್ದಕ್ಕಿದ್ದಂತೆ ಗೋಡೆ ಏಳುತ್ತದೆ.
ಎಲ್ಲಿಂದಲೋ ಏನೊ ಇಟ್ಟಿಗೆಯ ಮೇಲೆ ಇಟ್ಟಿಗೆ ಬಂದು
ಕೂತು, ಕೂತಲ್ಲಿಯೇ ನಮ್ಮನ್ನು ಹೂತು
ಸುತ್ತಲೂ ಗೋಡೆ ಕಟ್ಟುತ್ತವೆ.
ಎದ್ದ ಗೋಡೆಯ ತುಂಬ ಕೆಂಗಣ್ಣು ಕೆಮ್ಮೀಸೆ;
ಮೀಸೆಯ ಕೆಳಗೆ ಸೊಟ್ಟ ಮೂತಿಯ ಕೆಟ್ಟ ಬಾಯಿ
ಉಗಿಯುತ್ತದೆ ಬೆಂಕಿ.

ಆಗ,
ನಾನೂ ನೀನೂ ಬಹುಕಾಲದಿಂದ ನೀರೆರೆದು ಬೆಳೆಸಿದ
ಹೂವಿನ ತೋಟ ಸೀದು ಹೊಗೆಯಾಡುತ್ತದೆ.
ಹೊಗೆಯಲ್ಲಿ ಉಸಿರು ಕಟ್ಟಿಕೊಂಡು
ನಾನು ಮತ್ತು ನೀನು
ಗೋಡೆಯೆರಡೂಬದಿಗೆ
ನರಳಿ ಹೊರಳುತ್ತೇವೆ
ಭೋರೆಂಬ ಗಾಳಿ ಮನೆಸುತ್ತ ಊಳಿಡುತ್ತದೆ.
ಕಾರಿರುಳು ಗಪ್ಪನೆ ಕೂತು
ನಕ್ಷತ್ರಗಳ ಹಲ್ ತೆರೆದು ಗುರುಗುಟ್ಟುತ್ತದೆ.
ಕೋಳಿ ಕೂಗುವುದನ್ನು ಕೇಳುತ್ತಾ
ಗೋಡೆಯ ಆಚೆಗೆ ನೀನು
ಈಚೆಗೆ ನಾನು
ಗೋಡೆ ಕರಗುವುದನ್ನೆ ಕಾಯುತ್ತಾ
ಕೂರುತ್ತೇವೆ.

## ಸೋಮಶೇಖರ ಇಮ್ರಾಪೂರ

# ನನ್ನ ಹಣತೆ

೧

ಅಡಿಗರ ತಲೆಮಾರಿನಲ್ಲಿ ಮಹತ್ವದ ಕವಿಯೆನಿಸಿದ ಶಿವರುದ್ರಪ್ಪನವರು ನವೋದಯ ಹಾಗೂ ನವ್ಯ ಎರಡೂ ಧೋರಣೆಗಳನ್ನು ಕಾವ್ಯದಲ್ಲಿ ಸಮರ್ಥವಾಗಿ ಕಾಪಾಡಿಕೊಂಡು ಬಂದ ವಿಶಿಷ್ಟ ಕಾವ್ಯಮನೋಧರ್ಮವುಳ್ಳವರು. ತೀರ ಸೋತು ಸ್ಥಿತಪ್ರಜ್ಞಾವಸ್ಥೆಗಿಳಿದ ಇತ್ತೀಚಿನ ಕಾವ್ಯಸಂದರ್ಭದಲ್ಲಂತೂ ಶಿವರುದ್ರಪ್ಪ, ಕಣವಿ ಹಾಗೂ ಕೆ. ಎಸ್. ಎನ್. ಅಂಥವರ ಕಾವ್ಯದ ಮಹತ್ವ ಇನ್ನೂ ಎದ್ದು ಕಾಣುತ್ತದೆ. ಕಾವ್ಯ ಹಾಗೂ ಕಾವ್ಯವಸ್ತುವಿನ ಬಗೆಗೆ ಅವರು ತೋರುವ ತಾದಾತ್ಮ್ಯ ಮತ್ತು ನಿರ್ವೈಯಕ್ತಿಕತೆ, ತಾಳಿದ ಜವಾಬ್ದಾರಿ ಕಾಳಜಿಗಳು ಗುರುತರವೆನಿಸುತ್ತವೆ. ಅಭಿವ್ಯಕ್ತಿಯ ನಾವೀನ್ಯ, ಕಲಾಸೂಕ್ಷ್ಮತೆಯಿಂದ, ಅತಿರೇಕವಲ್ಲದ ಸತ್ವಪೂರ್ಣ ನವಿರಾದ ವಿಡಂಬನೆಗಳಿಂದ ಮತ್ತು ಕಾವ್ಯವಸ್ತುವಿನ ಬಗೆಗೆ ಹೊಂದಿದ ಆಮೂಲಾಗ್ರ ಪರಿವೀಕ್ಷಣೆ, ಚಿಕಿತ್ಸಕ ವಿಶ್ಲೇಷಣೆಗಳಿಂದ ಅವರ ಕಾವ್ಯದ ಮಹತ್ತು ಮಿಗಿಲಾಗಿದೆ. ಕನ್ನಡ ಕಾವ್ಯಪರಂಪರೆಗನುಗುಣವಾಗಿ ಸಾಂಸ್ಕೃತಿಕ ಸತ್ವಲೇಪನವನ್ನೂ ಒಳಗೊಂಡ ಇವರ ಕವಿತೆಗಳು ಈ ಮಣ್ಣಿನ ಗುಣಕ್ಕೆ ತಮ್ಮದೇ ಆದ ಋಣವನ್ನೂ ಸಲ್ಲಿಸಿದ್ದು ತೀರ ಮಹತ್ವದ್ದಾಗಿದೆ. ಹೀಗಿದ್ದೂ ಬಿಸಿಲುಗುದುರೆಯ ಹಿಂದೆ ನಾಗಾಲೋಟ ಹಿಡಿದ ನವ್ಯವಿಮರ್ಶೆಗೆ ಇಂಥವರ ಕಾವ್ಯ ಬಾಹಿರವಾದದ್ದು ದುರದೃಷ್ಟಕರ. ಇತ್ತೀಚಿನ ಇಂಥ ನವ್ಯ ವಿಮರ್ಶಾ ಪದ್ಧತಿಗಳ ಯಾವ ಒದ್ದಾಟಕ್ಕೂ ಲಕ್ಷಿಸದೇ ತಮ್ಮದೇ ಆದ ಕಾವ್ಯಕಲಾವಂತಿಕೆ ಹಾಗೂ ವೈವಿಧ್ಯಮಯ ವಸ್ತುವಿಶೇಷ, ಅಭಿವ್ಯಕ್ತಿಯ ಕ್ರಮಗಳಿಗೆ ವಂಚಿತರಾಗವೇ ಉಳಿದ ಶಿವರುದ್ರಪ್ಪನವರ ಕಾವ್ಯಶ್ರೀಮಂತಿಕೆ ಗಮನಾರ್ಹವಾದದ್ದು.

ನವೋದಯ ಕಾವ್ಯದಿಂದ ಹರಿದುಕೊಳ್ಳಲಾರದ, ಹೊಸ ಕಾವ್ಯ ಧೋರಣೆಗಳನ್ನು ಸ್ವಚ್ಛಂದವಾಗಿ ಆಮೂಲಾಗ್ರ ಒಪ್ಪಿಕೊಳ್ಳಲಾರದ ದ್ವಂದ್ವವೂ ಅವರ ಕಾವ್ಯದಲ್ಲಿ ಕಾಣಿಸಿಕೊಂಡಿದೆ. ನವೋದಯ ಕಾವ್ಯಸಂದರ್ಭಗಳಲ್ಲಿ ನಿಂತು, ನವ್ಯದ ಮಾನದಂಡಗಳಿಗೆ ತಕ್ಕ ಪರಿಸರ ಕಟ್ಟುವ ಚಿಂತನಶೀಲ ಪ್ರಯತ್ನಗಳೂ ಅವರ ಕಾವ್ಯದಲ್ಲಿ ನಡೆದಿವೆ. ನವ್ಯದ ಹೊಸ ಮೌಲ್ಯಗಳ ಪುನರ್‌ನಿರ್ಮಾಣಕ್ಕೆ ಬೇಕಾದ ಕ್ರಿಯಾತ್ಮಕ ಸಾಧ್ಯತೆಗಳನ್ನೂ ಅವರು ಒದಗಿಸಿದ್ದಾರೆಂಬುದನ್ನು ಮರೆಯುವಂತಿಲ್ಲ. ಎಲ್ಲ ಕಾವ್ಯ ಸಂಪ್ರದಾಯಗಳನ್ನು ಅಷ್ಟೇ

ಗೌರವಭಾವನೆಯಿಂದ ಕಾಣುವ ಅವರ ಕಾವ್ಯಧೋರಣೆಯಲ್ಲಿ ನಮ್ಮ ನೆಲಕ್ಕೆ ವ್ಯತಿರಿಕ್ತವಾದ ಪರಕೀಯ ಮೌಲ್ಯಗಳಿಗೆ ಸಿಡಿಮಿಡಿಗೊಂಡ ಸಂಗತಿಗಳೂ ಅವರ ಕಾವ್ಯದಲ್ಲಿ ಗೋಚರಿಸಿವೆ. ಮಣ್ಣವಾಸನೆಗಾಗಿ ಪರಿತಪಿಸುವ ನವ್ಯಕಾವ್ಯದಲ್ಲಿ ಯಾವ ವಾಸನೆಯೂ ಬಾರದ ದುಃಸ್ಥಿತಿಗೆ ಮರುಗಿದ ಶಿವರುದ್ರಪ್ಪನವರಿಗೆ ಅದು "ಬರೀ ಎರವಲು ಥಳಕು." "ಕುಂಡದ ಗಿಡಕ್ಕೇನು ಗೊತ್ತುಂಟೋ ತಾಯ್ನೆಲದ ಜೀವಂತ ಪ್ರಜ್ಞೆ" ಎಂಬುದು ಅವರ ಅಂತಿಮ ತೀರ್ಮಾನ. ಈ ಅವರ ಅನಿಸಿಕೆಯ ಸತ್ಯಾಸತ್ಯತೆಗಳು ನಮಗಿಂದು ಮನದಟ್ಟಾಗಿವೆ.

ಪರಸ್ಪರ ಅರ್ಥೈಸಿಕೊಳ್ಳಬಯಸದ ಕಾವ್ಯಸಂಪ್ರದಾಯಗಳ ಹುರುಳಿಲ್ಲದ ವಾದ ವಿವಾದಗಳಿಗೆ ಅರ್ಥವಿಲ್ಲವೆಂದೇ ಭಾವಿಸಿದ ಶಿವರುದ್ರಪ್ಪನವರಿಗೆ 'ನನ್ನ ಉದ್ಧಾರಕ್ಕೆ ಯಾವ ದೇವರಿಗೂ ಲಂಚ ಕೊಡಬೇಕಾಗಿಲ್ಲ' ಎಂಬ ಸಾಕ್ಷಿಪ್ರಜ್ಞೆ ಮೂಡಿದ್ದು ಅವರ ಮಹತ್ವಾಕಾಂಕ್ಷೆಗೆ ನಿದರ್ಶನವಾಗಿದೆ. ಅತಿರಂಜಿತ ಅವಾಸ್ತವ ಮೌಲ್ಯಗಳಿಗೆ ಅಪ್ಪಿಕೊಂಡು ಸೋತು ನಿಂತ ನವೋದಯ ಕಾವ್ಯ ಒಂದೆಡೆಗಿದ್ದರೆ, ಅದರಲ್ಲಿಯೇ ಆವಿಷ್ಕಾರಗೊಂಡು ಅತಿವಾಸ್ತವತೆಯಲ್ಲಿಯೇ ಕ್ಲಿಷ್ಟ ಹಾಗೂ ಸಂಕೀರ್ಣ ಸಮಸ್ಯೆಗಳ ಸುಂಟರಗಾಳಿಗೆ ಗಾಲು ಮೇಲಾದ ನವ್ಯಕಾವ್ಯ ಮತ್ತೊಂದೆಡೆಗೆ, ಹೀಗೆ ತಿಳುವಳಿಕೆಯಲ್ಲಿಯೇ ತದ್ವಿರುದ್ಧವಾದ ಈ ಸಂಪ್ರದಾಯಗಳ ಗೊಂದಲದಲ್ಲಿ ಸಮತೋಲತ್ವ ಕಾಯ್ದುಕೊಂಡು, ಕಲುಷಿತ ಕಾವ್ಯಪರಿಸರವನ್ನು ತಿಳಿಯಾಗಿಸುವ ಕಾವ್ಯದ ಅವಶ್ಯಕತೆ ಎಂದಿಗಿಂತ ಹೆಚ್ಚಾಗಿದೆ. ನವ್ಯದ ಅಭಿವ್ಯಕ್ತಿಯ ಸಾಧ್ಯತೆಗಳ ಸೀಮೆಯೂ ಇಂದು ಬರಗಾಲ ಘೋಷಿತ ಪ್ರದೇಶವಾದದ್ದು ಸರ್ವವಿದಿತ. ಇಂಥ ವಿಷಮ ಪರಿಸರದಲ್ಲೂ ಒಂದು ಸಂಪ್ರದಾಯದ ಗುಣದೋಷಗಳನ್ನು ಮತ್ತೊಂದಕ್ಕೆ ನೇರವಾಗಿ ರವಾನಿಸುವ ಅಥವಾ ವ್ಯತಿರಿಕ್ತವಾಗಿಸುವ ಇಲ್ಲವೆ ಮತ್ತೊಂದಾಗಿಸುವ ಅಪ್ರಾಮಾಣಿಕ ಕಾವ್ಯದ ಮೊತ್ತ ಜಾಸ್ತಿಯಾದದ್ದು, ಅಂಥ ಕಾವ್ಯದ ಗೊತ್ತುಗುರಿಗಳೇ ನವ್ಯದ ಪ್ರಮಾಣಭೂತ ಕಾವ್ಯಕ್ಕೆ ಮಾದರಿಯಾದದ್ದು ನವ್ಯದ ದುರಂತಕ್ಕೆ ಕಳಸವಿಟ್ಟಿದೆ. ಇಂಥ ಸಂದಿಗ್ಧ ಸ್ಥಿತಿಯಲ್ಲಿ ಸಾರ್ವಕಾಲಿಕವೆನ್ನಬಹುದಾದ ಕಾವ್ಯದ ಮೌಲ್ಯಗಳನ್ನು ಸಮಕಾಲೀನ ಸಂಪ್ರದಾಯಗಳ ಭಟ್ಟಿಯಲ್ಲಿ ಕೆಡದ ಹಾಗೆ, ಅನಾದರಕ್ಕೀಡಾದ ನವ್ಯದ ಆದರ, ಗೌರವಗಳನ್ನು ಜೋಕೆಯಿಂದ ಹೆಚ್ಚಿಸುವ ಹಾಗೆ ಔಚಿತ್ಯಪೂರ್ಣವಾದ ಪ್ರಾಮಾಣಿಕ ಕಾವ್ಯವೂ ಇತ್ತೀಚೆಗೆ ಬಂದಿದೆಯೆಂಬುದು ಗಮನಾರ್ಹ. ಈ ದೃಷ್ಟಿಯಿಂದ ಶಿವರುದ್ರಪ್ಪನವರ ಕಾವ್ಯ ಪ್ರಾಮಾಣಿಕ ಕಾವ್ಯ, ಚಿಂತನೆಯ ಹಲವಾರು ಮುಖ ಪಡೆದ ಚಿಂತನಶೀಲ ಕಾವ್ಯ.

ಹೀಗೆ ಹಳೆ ಹೊಸ ಕಾವ್ಯಸಂಪ್ರದಾಯ ವೈಶಿಷ್ಟ್ಯಗಳ ಮಧ್ಯೆ ಸಮನ್ವಯ ಸಾಧಿಸ ಹೊರಟ ಸಾಧ್ಯತೆಗಳು ಅವರ ಕಾವ್ಯದಲ್ಲಿದ್ದದ್ದು ನಿಜ. ಆದರೆ ಅವರ ಕಾವ್ಯದ ಬೆಳವಣಿಗೆಯೇ ನಿಂತಿತೆಂಬ ಭಾವನೆ ಹುಟ್ಟಿಸುವಂತೆ ಸಮನ್ವಯ ಕಾವ್ಯ; 'ಸೇತುವೆ ಕಾವ್ಯ' ಎಂದೇ ಈವರೆಗೆ ನವ್ಯವಿಮರ್ಶೆಯ ಮಾತುಗಳು ಸವಕಲಾಗುತ್ತ ಬಂದಿರುವುದಕ್ಕೆ ಅರ್ಥವಿಲ್ಲ. ಕಾರಣ ನವ್ಯಸಂಪ್ರದಾಯಕ್ಕೂ ಅಡಿಗರಿಗಿಂತ ಭಿನ್ನವಾದ, ಅವರಷ್ಟೇ ವೈಶಿಷ್ಟ್ಯಪೂರ್ಣವಾದ, ಮಹತ್ವಪೂರ್ಣ ಕಾವ್ಯ ಅವರಿಂದ ಬಂದಿದೆ ಎಂಬುದರಿಂದ. ಅಡಿಗರ

ಕಾವ್ಯದ ಮಾನದಂಡಗಳೇ ಉತ್ಕೃಷ್ಟವೆನ್ನಲಾಗುವ ಕಾವ್ಯದ ಒರೆಗಲ್ಲು ಎಂಬ ನವ್ಯ ವಿಮರ್ಶೆ ನಂಬಿದ ಪೂರ್ವಗ್ರಹ ತಪ್ಪು ತಿಳುವಳಿಕೆಯೇ ಅನೇಕ ಧೀಮಂತ ಕಾವ್ಯಚೇತನಗಳನ್ನು ವಂಚಿಸಿತು. ಅಡಿಗರಿಗಿಂತಲೂ ಮಿಗಿಲಾದ ಕಾವ್ಯಪ್ರತಿಭೆಯುಳ್ಳವರೂ ಕೂಡ, ಮರೆಯಾಗಿ ಹೋದ ಈ ದಶಕದ ಸಾಹಿತ್ಯ ಚರಿತ್ರೆ. 'ಸಾಹಿತ್ಯಿಕ ರಾಜಕೀಯ ಚರಿತ್ರೆ' ಎಂದೇ ಮುಂದೆ ಹೆಸರಿಸಿಕೊಳ್ಳಬಹುದೇನೋ !

ಹೀಗೆ, ಈ 'ಸಮನ್ವಯ ಕವಿ' ಪಟ್ಟದಲ್ಲಿಯೇ ಹುತ್ತ ಕಟ್ಟಿಕೊಂಡ ಶಿವರುದ್ರಪ್ಪನವರ ಎಷ್ಟೋ ಕವಿತೆಗಳಿಗೆ ತಾವೇ ಕಟ್ಟಿದ ಸಮನ್ವಯದ ಪಟ್ಟವನ್ನು ಬಿಡಿಸಿಕೊಂಡು ಹೊಸ ಅರ್ಥ ಹುಡುಕಿ, ವಿಶ್ಲೇಷಿಸಿ ವಿವರಿಸುವ ಗೋಜಿಗೆ ಹೋಗದಿದ್ದುದು ವಿಮರ್ಶೆಯ ಸ್ವರಾಜಕೀಯವಲ್ಲದೇ ಮತ್ತೇನಲ್ಲ. ತಮ್ಮ ಪೂರ್ವಗ್ರಹದಿಂದಾಗಿ ಶ್ರೇಷ್ಠವೆಂದು ನಂಬಿದ ಕಾವ್ಯಕ್ಕೆ ಅತಿ ಕಷ್ಟದಿಂದ ತುಂಬಿದ ಅರ್ಥಸಾಧ್ಯತೆಗಳು, ತಮ್ಮ ಮೆಚ್ಚಿಕೆಯ ಉತ್ಸವ ಮೂರ್ತಿ ಕವಿಯನ್ನು ಮೆಚ್ಚಿಸಲಿಕ್ಕೆ ಸಹಾಯವಾದವೇ ಹೊರತು ನವ್ಯಸಾಹಿತ್ಯ ಪರಂಪರೆಗಳಿಗೇನೂ ಅದರಿಂದ ಉಪಯೋಗವಾಗಲಿಲ್ಲ. ಹೋಗಲಿ, ಅದಕ್ಕೆ ಹೊರತಾಗಿ ನವ್ಯದ ಮೇಲೆ ಪರಿಣಾಮವೂ ವ್ಯತಿರಿಕ್ತವಾದದ್ದು ಸೋಜಿಗವೇನಲ್ಲ. ಅದೂ ಅಲ್ಲದೆ ನವ್ಯವಿಮರ್ಶೆ ಹೇಳಿ ಹೊಗಳಿಸಿಕೊಂಡ ಕವಿಗೆ ತೃಪ್ತಿಕೊಟ್ಟಿತೇ ಹೊರತು, ಚಿಂತನಶೀಲ ಓದುಗನಿಗೆ ಅದಾವುದೂ ಹೊಳೆಯದ ಅಮಾನುಷ ಸಂಗತಿಯಾಯಿತು. ಇದರಿಂದಾಗಿ ಒಟ್ಟಾರೆ ನವ್ಯದ ಪರಿಣಾಮ ಕೊನೆಗೆ ಪೂರ್ಣವಿರಾಮದ ಕಡೆಗೆ ತಿರುಗಿತು.

ಇದರಂತೆಯೇ ಸಾಹಿತ್ಯಿಕ ರಾಜಕೀಯ ಮಾಡಿ 'ರಸಋಷಿ', 'ವರಕವಿ' ಮುಂತಾದ ಪಟ್ಟಕಟ್ಟಿ ಕುಳ್ಳಿರಿಸಿ ಅವರ ಕಾವ್ಯದ ಪೂರ್ಣ ಅಂತಃಸ್ಸತ್ವವನ್ನೇ ಇಂದಿಗೂ ಮರೆಮಾಡಿದ ತೇಲು ವಿಮರ್ಶೆಗಳಿಗೆ, ಶಿವರುದ್ರಪ್ಪ, ಹಾಗೂ ಕಣವಿಯವರ ಕಾವ್ಯದ ಹೊಸ ನವಿರು ನಾಜೂಕು, ಹೊಸ ಜೀವನ ದೃಷ್ಟಿಗಳನ್ನು ಕಾಣದ ಕಣ್ಣು ಮೂಡಿದ್ದೇ ಸೋಜಿಗದಾಗಿದೆ. ಅವರಿಬ್ಬರನ್ನೂ ಸಮನ್ವಯದ ಕವಿಗಳೆಂಬ ಚೌಕಟ್ಟಿಗೆ ಬಡಿದು ಹಳೆಯ ಗೋಡೆಗೆ ನೇತುಹಾಕಿ ಕೈತೊಳೆದುಕೊಂಡದ್ದು ಸತ್ಯಕ್ಕೆ ದೂರವಾದ ಸಂಗತಿ. ನವ್ಯವಿಮರ್ಶಾ ರಾಜಕಾರಣ ಸೂಳೆಗಿರುವ ಕಿಮ್ಮತ್ತು ಬಹುಶಃ ಮನೆಗರತಿಗೆಲ್ಲಿಂದ ಬಂದೀತೆಂಬುದೇ ಸಮಕಾಲೀನ ಸತ್ಯವಾದಂತಿದೆ. ಶಿವರುದ್ರಪ್ಪ ಹಾಗೂ ಕಣವಿಯವರ ಕಾವ್ಯಮನೋಧರ್ಮಗಳಲ್ಲಿ ಹೊಂದಾಣಿಕೆಯಾಗುವ ಸಾಧ್ಯತೆಗಳಿಂದಲೇ, ಅವರಿಬ್ಬರನ್ನೂ ಒಂದೇ ಕಟ್ಟಿನಲ್ಲಿ ಬಂಧಿಸುವ ಅಪಾಯಕಾರಿ ತರಾತುರಿ ವಿಮರ್ಶೆಗಳಿಂದ ಏನು ಸಾಧಿಸಿತೆಂಬುದನ್ನು ಕಾದು ನೋಡುವಂತಾಗಿದೆ.

ಒಂದೇ ಸಂದರ್ಭದಲ್ಲಿ ಬದುಕಿದ ಆಯಾ ಬೇರೆ ಬೇರೆ ಪರಂಪರೆಗಳ ಕವಿ ಮನೋಧರ್ಮಗಳಲ್ಲಿಯೇ ಸಾಕಷ್ಟು ಸೂಕ್ಷ್ಮ ವ್ಯತ್ಯಾಸ, ವೈವಿಧ್ಯತೆಗಳಿರುವುದನ್ನು ಗಮನಿಸಿದರೆ, ಬೇಂದ್ರೆ, ಕುವೆಂಪು, ಪು.ತಿ.ನ ಹೇಗೋ ಹಾಗೆ, ಶಿವರುದ್ರಪ್ಪನವರೂ ಅಡಿಗ, ಕಣವಿ ಮುಂತಾದವರಿಂದ ಬೇರೆಯಾಗಿಯೇ ನಿಲ್ಲುತ್ತಾರೆಂಬುದನ್ನು ಲಕ್ಷಿಸಬೇಕಾದ ಸಂಗತಿ. ಸಕಲು ಪ್ರತೀತಿಗಳನ್ನು ಕಟ್ಟಿಸಿಕೊಂಡ ಈ ಕವಿಗಳು ಉನ್ನತವಾದ ವಿಮರ್ಶಾಪ್ರಜ್ಞೆಗೆ

ನಿಲುಕಲಿಲ್ಲವೆಂಬುವೇ ಅಚ್ಚರಿ. ಹಾಗೆ ನೋಡಿದರೆ ಸಂಪ್ರದಾಯಗಳ ಒಸ್ಸೆಲೆಯಲ್ಲಿ ನಾನು ನೀವು, ಅವನು-ಅವರು ಎಲ್ಲರೂ ಸಮನ್ವಯ ಕವಿಗಳೇ. ಅಡಿಗರೂ ಕೂಡಾ ಒಂದಲ್ಲ ಒಂದು ರೀತಿಯಿಂದ ನವೋದಯದಲ್ಲಿ ಹೆಸರು ಗಳಿಸಿಕೊಂಡೇ, ನವ್ಯದಲ್ಲಿ ಒಂದು ಹಂತದ ಸಿದ್ಧಿ ಪಡೆವಂತೆ, ಶಿವರುದ್ರಪ್ಪನವರೂ ನವೋದಯದಲ್ಲಿ ಗಮನಾರ್ಹರೆನಿಸಿಕೊಂಡು ನವ್ಯಕ್ಕೆ ತಮ್ಮದೇ ಆದ ಮತ್ತೊಂದು ಹಂತದಲ್ಲಿ ಸಿದ್ಧಿ ಪಡೆದರು. ಅಡಿಗರ ಕಾವ್ಯ ಮುಖ್ಯವಾಗಿ ವ್ಯಕ್ತಿಯ ಅಂತರಂಗಪ್ರಜ್ಞೆಯಲ್ಲೇಳುವ ಜ್ವಲಂತ ತುಮುಲವನ್ನೇ ತನ್ನ ಸ್ಥಾಯಿಯಾಗಿರಿಸಿಕೊಂಡರೆ, ಶಿವರುದ್ರಪ್ಪನವರ ಕಾವ್ಯ ಹಲವರಿಗೆ ಅರ್ಥ ಹುಟ್ಟಿಸುತ್ತದೆ. ಈರ್ವರಲ್ಲೂ ಚಿಂತನೆಯ ಮುಖಗಳು ಬೇರೆ ಬೇರೆ. ಅಭಿವ್ಯಕ್ತಿ ಕ್ರಮದಲ್ಲಿ ಒಂದು ತೀರ ತೀಕ್ಷ್ಣ ಹಾಗೂ ಸಂಕೀರ್ಣ, ಇನ್ನೊಂದು ನೇರ ಅಷ್ಟೇ ಸರಳ. ಪರಿಣಾಮದಲ್ಲಿ ಅಡಿಗರ ಕಾವ್ಯ ಕೆಲವರಿಗಾಗಿ ಅರ್ಥ ಕಟ್ಟಿನಿಂತರೆ, ಶಿವರುದ್ರಪ್ಪನವರ ಕಾವ್ಯ ಮುಖ್ಯವಾಗಿ ಸಾಮಾಜಿಕ ಪ್ರಜ್ಞೆ ಹಾಗೂ ಪರಿಸರದ ಅಂತರಂಗ ಅವ್ಯವಸ್ಥೆಗಳ ನಿರೂಪಣೆಯನ್ನೆ ತನ್ನ ಸ್ಥಾಯಿಯನ್ನಾಗಿಸಿಕೊಂಡಿದೆ. ಅಡಿಗರ ಕಾವ್ಯ ನಾಯಕನ ಸ್ಥಾನಮಾನಗಳು ಕಾವ್ಯ ದುದ್ದಕ್ಕೂ ಸುರಕ್ಷಿತವಾಗಿ ಉಳಿಯದ ಅಪಾಯವಿದ್ದರೆ,ಶಿವರುದ್ರಪ್ಪನವರ ಕಾವ್ಯ ನಾಯಕ ನಿಗೆ ಆ ತೊಂದರೆ ಇಲ್ಲ. ಅಡಿಗರ ಕಾವ್ಯನಾಯಕನಲ್ಲಿರುವ ಹೋರಾಟದ ಹವಣಿಕೆ, ಕೆಚ್ಚು, ರೊಚ್ಚುಗಳು ಕೊನೆಗೆ ಅಸಹಾಯಕತೆಗಳಿದ್ದಂತೆ, ಶಿವರುದ್ರಪ್ಪನವರ ಕಾವ್ಯ ನಾಯಕ ನಲ್ಲಿ ಲೋಕನಿರೀಕ್ಷೆ, ಅನುಕಂಪ, ಅಸಹಾಯಕತೆಗಳೇ ಎದ್ದು ಕಾಣುತ್ತವೆ.

ಒಟ್ಟಾರೆ ಈ ಹಲವಾರು ಧೋರಣೆಗಳಿಂದ ಭಿನ್ನವಾದ ಶಿವರುದ್ರಪ್ಪನವರ ಕಾವ್ಯದ ನಿಶ್ಚಿತ ನಿಲುವನ್ನು ನಿಗದಿಗೊಳಿಸುವ ವಿಮರ್ಶೆ ಬರಬೇಕಾಗಿದೆ. ಅವರ ಕಾವ್ಯ ಸಮನ್ವಯದ ಚೌಕಟ್ಟಿನಲ್ಲಿಯೇ ಬಂಧಿತವಾಗುವಂಥದಲ್ಲ. ಅದು ಕುಂಡದ ಸಸಿಯಾಗದೇ, ಹೊಸ ಗಾಳಿ ನೀರು, ಬಿಸಿಲಿಗೆ ಮೈಯೊಡ್ಡಿ, ತನ್ನ ಸ್ವತಂತ್ರವಾದ ತಾಯಿಬೇರಿನಿಂದಲೆ ಹೊಸ ರಕ್ತ ಹೊಂದಿ ಹಸಿರಾಗಿ ಹೊಸ ಲೋಕ ಕಾಣುವ ಕುತೂಹಲವುಳ್ಳದ್ದು.

ಅಂತೂ ಪರಸ್ಪರ ತಿಳುವಳಿಕೆಯಿಲ್ಲದೇ, ವ್ಯಕ್ತಿ ವ್ಯಕ್ತಿಗಳ ಸಂಬಂಧ ಅಳಿಯುತ್ತಿರುವ ಇಂದಿನ ಸಾಹಿತ್ಯ ಪರಂಪರೆಯ ಕಲುಷಿತ ವಾತಾವರಣ, ಕಾವ್ಯಕ್ಕೆ ಕಂಟಕಪ್ರಾಯ ವಾಗಿದೆ. ವ್ಯಕ್ತಿಪ್ರತಿಷ್ಠೆಯ ಹಂಬಲದಲ್ಲಿ ಸಾಮಾಜಿಕ, ಸಾಹಿತ್ಯಿಕ ಧಾರ್ಮಿಕ ಮುಂತಾ ದವುಗಳ ಸ್ವಾಸ್ಥ್ಯವನ್ನೇ ಹಾಳುಗೆಡಹಿದ ಸಂಗತಿಗಳೂ ಅಷ್ಟು ಆರೋಗ್ಯಕರವಾಗಿಲ್ಲ. ಈ ಎಲ್ಲ ಪರಿಸರ ಪ್ರಭಾವಗಳೂ ಶಿವರುದ್ರಪ್ಪನವರ ಇತ್ತೀಚಿನ ಕವನಗಳಲ್ಲಿ ಕಾಣಿಸಿಕೊಂ ಡಿವೆ.* ಅದು ಅವರ ಕಾವ್ಯಮನೋಧರ್ಮವನ್ನು ಬಹುಮಟ್ಟಿಗೆ ಸ್ಪಷ್ಟಪಡಿಸುತ್ತವೆ. ನಿರಾಶೆ, ಕಟಕಿ, ವ್ಯಂಗ್ಯ,ವಿಡಂಬನೆಗಳೇ ಅಲ್ಲಿ ಎದ್ದುತೋರುವ ಮುಖ್ಯಗುಣ. ಅದಲ್ಲದೆ ಅದ್ದೂರಿಯ

---

* "ಗೋಡೆಯ ಆಚೆಗೆ ನೀನು
ಈಚೆಗೆ ನಾನು
ಗೋಡೆ ಕರಗುವುದನ್ನೇ ಕಾಯುತ್ತಾ
ಕೂರುತ್ತೇವೆ"

—(ಗೋಡೆ)

ನವ್ಯದ ಬಗ್ಗೆ ಅವರು ತಾಳಿದ ಅನಾಸ್ಥೆ, ಸಾಮಾಜಿಕ ದುರವಸ್ಥೆಯ ಬಗ್ಗೆ ಕಳಕಳಿ, ನವ್ಯದತಿರೇಕಕ್ಕೆ ಪತನವಾಗುತ್ತಿರುವ ಸಾಂಸ್ಕೃತಿಕ ಶಿಸ್ತಿನ ಬಗೆಗಿನ ಅನುಕಂಪೆ, ಸಾಹಿತ್ಯಿಕ ಕೊಳಕು ರಾಜಕೀಯದಲ್ಲಿ ಪ್ರಾಮಾಣಿಕನಾದವನ ಯಾತನೆಯ ಬಗ್ಗೆ ಸಿಟ್ಟು ರೋಷ ಸಿಡುಕು ಕೊನೆಗೆ ಅಸಹಾಯಕತೆ, ಇವೇ ಮುಂತಾದ ಸಮಸ್ಯೆಗಳು ಅವರನ್ನು ಕದಡಿವೆ. ಅಂತೆಯೇ ಇಂದಿನ ಕರಾಳ ಕತ್ತಲೆಯಲ್ಲಿ ತಮ್ಮದೇ ಆದ ಹಣತೆ ಹಚ್ಚುವ ಹಂಬಲ. ತಮ್ಮ ಆ ಹಣತೆ ಬ್ರಹ್ಮಾಂಡವನ್ನೇ ಬೆಳಗಲೆಂಬ ಯಾವ ಹುಚ್ಚು ಹವ್ಯಾಸಗಳಿಗೂ ಅಲ್ಲಿ ಎಡೆಯಿಲ್ಲ. ಇಂದಿನ ಕಾವ್ಯಪರಿಸರದಲ್ಲಿ ನಡೆಯುತ್ತಿರುವ ಅಸಡ್ಡಾಳ ತನಗಳೂ, ಪರಸ್ಪರ ಅನುಸಂಧಾನವಿಲ್ಲದ ಕಾವ್ಯಪರಂಪರೆಯ ಕತ್ತಲ ಯುಗದಲ್ಲಿ ಖೋಟಾ ನಕ್ಷತ್ರ ಚಂದ್ರಾಮರಾಗಿ ಮೆರೆವವರಿಂದಾಗುವ ಅನಾಹುತಗಳೂ ಅಲ್ಲೆಲ್ಲಾ ಧ್ವನಿತವಾಗಿವೆ. ಇಂಥ ಕೊಳಕು ಮಂಡಲದ ನಡುವೆ ಸಿಕ್ಕಿಕೊಂಡು 'ದಿನದಿಂದ ದಿನಕ್ಕೆ ಸಣ್ಣಗೆ ಸಾಯುತ್ತ'

---

"ಹತ್ತಿರವಿದ್ದೂ ದೂರ ನಿಲ್ಲುವೆವು
ನಮ್ಮ ಅಹಮ್ಮಿನ ಕೋಣೆಯಲಿ
ಎಷ್ಟು ಕಷ್ಟವೋ ಹೊಂದಿಕೆ ಎಂಬುದು
ನಾಲ್ಕು ದಿನದ ಬದುಕಿನಲಿ" —(ಅನ್ವೇಷಣೆ)

"ಸಿಕ್ಕಿಕೊಂಡಿದ್ದೇನೆ ನಾನೂ। ಕೊಳಕು ಮಂಡಲದ ನಡುವೆ।
ಕೊಂಕು ನಗೆ, ನರಿ ಮಾತು, ಕಪಿಮುಷ್ಠಿ । ವೃಕೋದರಗಳ ಮಧ್ಯೆ
ದಿನದಿಂದ ದಿನಕ್ಕೆ ಸಣ್ಣಗೆ ಸಾಯುತ್ತ ಬಿದ್ದಿದ್ದೇನೆ" —(ನನ್ನ ಸುತ್ತು)

"ಇಲ್ಲ ನಾವೂ ನೀವೂ ಸೇರಲೇ ಇಲ್ಲ
ಮುಖಕ್ಕೆ ಮುಖ, ಎದೆಗೆ ಎದೆ ಹತ್ತಿರ ಬಂದು
ಮಾತಾಡಲೇ ಇಲ್ಲ" —(ವ್ಯರ್ಥ)

"ತೂಗಾಡುವ ಕಿರೀಟಗಳಿಗೆ ತಕ್ಕಂತೆ
ತಲೆಯ ಆಕಾರ ಬದಲಾಯಿಸುತ್ತ ಪರದಾಡುವುದು
ನನಗೆ ಅಭ್ಯಾಸವಿಲ್ಲ
ಹೇಗೋ ನನ್ನ ಪಾಡಿಗೆ ನಾನು ಬದುಕುತ್ತೇನೆ" —(ನಿಲುವು)

"ಅಯ್ಯೋ ಮರಿ
ನೀನು ಕುರಿಯಾಗು
ಅಥವಾ ನರಿಯಾಗು" —(ದೊಡ್ಡಪ್ಪ ಹೇಳಿದ್ದು)

"ಸಾಕಪ್ಪ ಸಾಕು ಇವಳ ಸಹವಾಸ
ದಿನದಿಂದ ದಿನಕೆ ಭಾವಗಳ ಬದಲಾವಣೆ
ನಂಬಿದರೆ ಬಂತು ಬವಣೆ" —(ದೀಪಾವಳಿಯ ದಿನದ ಮಳೆ)

"ಇವರದೆ ಮೆರವಣಿಗೆ, ಇವರದೇ ಆರ್ಭಟ ನನ್ನ ನಿನ್ನ ನಡುವೆ
...ಹೋಗುವ ನಡೆ ತಲೆಬಾಗದೆ ನಿಲ್ಲುವ ದೂರಕ್ಕೆ
ತಣ್ಣಗೆ ಉರಿವೂ ಕಿಡಿಕಣ್ಣಿಲ್ಲದ ದೀಪಾವಳಿಯ ತೀರಕ್ಕೆ"
—(ನನ್ನ ನಿನ್ನ ನಡುವೆ)

ಪುಳಕಿಸುವ ಕವಿಗೆ, ಹೊಸದೊಂದು ಸುರಂಗಮಾರ್ಗ ಪತ್ತೆಹಚ್ಚಿ ಪಾರಾಗಿ ಹೋಗುವ ಹಂಬಲವೂ ಹುಟ್ಟಿದ್ದು ಗಮನಾರ್ಹವಾಗಿದೆ.

ಅಡಿಗರಿಗಿಂತ ಭಿನ್ನವಾದ ಸೂಕ್ಷ್ಮ ವಿಡಂಬನಾ ಸಾಮರ್ಥ್ಯವೂ ಶಿವರುದ್ರಪ್ಪನವರ ಕಾವ್ಯಕ್ಕಿದೆ. ಅದು ಹಲವಾರು ಸ್ತರಗಳಲ್ಲಿ ಅರ್ಥ ಪರಿ ಬಿಟ್ಟು ತನ್ನ ಆಯಾಮವನ್ನು ವಿಸ್ತೃತಗೊಳಿಸಿಕೊಳ್ಳುತ್ತದೆ. ಅದರಲ್ಲೂ ಬಹುತೇಕವಾಗಿ ಒಂದು ಕಾವ್ಯಪರಂಪರೆಯ ಗುಣಾವಗುಣಗಳ ಕಡೆಗೆ, ಇನ್ನೊಂದು ಸಾಮಾಜಿಕ, ಸಾಂಸ್ಕೃತಿಕ ಸಮಕಾಲೀನ ಪರಿವೀಕ್ಷಣೆಗಳ ಕಡೆಗೆ, ಮತ್ತೊಂದು ವೈಯಕ್ತಿಕತೆಯ ಕಡೆಗೆ, ಆದರೆ ಒಂದರ ಭಾವನೆ ಮತ್ತೊಂದಕ್ಕೆ ತೊಡಕಾಗದ, ಹೆಚ್ಚು ಸಂಕೀರ್ಣಗೊಂಡ ಸಂಕೇತಗಳ ಗೊಂದಲವಿಲ್ಲದ, ಅರ್ಥ ಜಡತ್ವಕ್ಕೆಳಸದ, ಸಕ್ರಮ ವಿವರಣೆಗಳಿಂದ ಕೂಡಿದ ಅವರ ಕಾವ್ಯದ ಶ್ರೇಷ್ಠ ಗುಣವೇ, ಅಡಿಗರಿಂದ ಭಿನ್ನರಾಗಿ ಅವರಷ್ಟೇ (ನವ್ಯಕ್ಕೆ) ಮಹತ್ವಪೂರ್ಣ ಸಾರ್ಥಕ ಕಾವ್ಯ ಕೊಟ್ಟಿದ್ದಾರೆಂಬುದಕ್ಕೆ ಸಾಕ್ಷಿ ನೀಡುತ್ತದೆ.

---

"...ನಿನ್ನದು ಬರಿ ಎರವಲು ಥಳಕು (ನೀನು)
ಒಂದು ಮಹಾ ಮರುಭೂಮಿ
ನೀನು ಕೊಲೆಪಾತಕಿ । ನಿನಗೆ ನಮಸ್ಕಾರ" —(ಚಂದ್ರಮುಖಿಗೆ)

"ಎಂತೆಂಥ ಹೊಳಪುಳ್ಳ ಕನ್ನಡಿಗಳೇ ಈಗ
ಹೊಗೆ ಹಿಡಿದು ಬಿದ್ದಿವೆಯಲ್ಲೋ ನಿನ್ನ ಬಚ್ಚಲು ಮನೆಯ
ರೊಚ್ಚಿಯಲ್ಲಿ" —(ಹಂಬಲ)

ಯಾರ್‍ಯಾರ ಜೇಬಿಗೋ ಕತ್ತರಿ ಹಾಕಿ
ತಮ್ಮ ಲೆಕ್ಕಕ್ಕೆ ಜಮಾ ಮಾಡಿ
ಸದ್ದಿರದೆ ಸಂದಿಗೊಂದಿಗಳಲ್ಲಿ ಸುತ್ತುತ್ತಾರೆ —(ನಮ್ಮವರು)

"ಲಗಾಮು ಹರಿದು, ಕಂಡಾಪಟ್ಟೆ ಜೊಂಡು ಮೇಯುವ
ಈ ಕುದುರೆಗಳನ್ನೆಲ್ಲ ಹಿಡಿದು ಪಳಗಿಸಿ
ಕಡಿವಾಣ ಹಾಕಿ, ಈ ದೊಡ್ಡ ರಥಕ್ಕೆ ಹೂಡಿ
ಸಲೀಸಾಗಿ ನಡೆಸಬಲ್ಲಂಥ ಅಶ್ವಾರೋಹಿ
ಅಗತ್ಯ ಬೇಕಾಗಿದೆ" —(ಬೇಕಾಗಿದೆ)

"ನಾನೂ ಇದ್ದೇನೆ ಅಡುಗೆ ಮನೆಯಲ್ಲಿ
ಉರಿವ ಸೌದೆಗಳ ಜೊತೆಗೆ
ಪಾತ್ರೆಗಳಲ್ಲಿ ಕೊತ ಕೊತ ಕುದಿದು
ಹಳೆಯ ನೆನಪುಗಳನ್ನು ರುಬ್ಬುತ್ತಾ" —(ಭೀಮಾಲಾಪ)

"ಅವರಿವರ ಬಾಲವನ್ನೇ ನಿನ್ನ ಗದೆಯೆಂದು
ಹೆಗಲಲ್ಲಿ ಹೊತ್ತು ಬಂದಳಿಕೆ ಭೀಮನ ಪಾತ್ರ
ವಹಿಸಬೇಡ" —(ನಾಲ್ಕು ಮಾತು)

"ನನ್ನ ಉದ್ಧಾರಕ್ಕೆ ಯಾವ ದೇವರಿಗೂ ಲಂಚ
ಕೊಡಬೇಕಿಲ್ಲ" —(ಭಾನುವಾರ)

ಈ ಎಲ್ಲ ಹಿನ್ನೆಲೆಯಲ್ಲಿ ಅವರ 'ನನ್ನ ಹಣತೆ' ಸಾರ್ಥಕ ಕವನಗಳಲ್ಲೊಂದು.

'ಹಣತೆ ಹಚ್ಚುತ್ತೇನೆ ನಾನೂ' ಎಂಬ ನಿಶ್ಚಿತ ನಿಲುವಿನಲ್ಲಿ ಕವಿಯ ವೈಯಕ್ತಿಕವಾದ ಅಹಂಭಾವ, ಹಿರಿಮೆಗರಿಮೆಗಳ ಯಾವ ಜಿದ್ದುಗಳೂ ಇಲ್ಲ. ಸಾರ್ವಕಾಲಿಕವಾಗಿ ಬಂದ ಮೌಲಿಕ ತತ್ವಾನ್ವೇಷಣೆಯ ಸತ್ಯವನ್ನೇ ನಂಬಿದ ಕವಿಗೆ ಯುಗಯುಗಗಳಿಂದ ಹೆಪ್ಪುಗೊಂಡ ಕತ್ತಲೆಯ ವಿರಾಟ್‌ರೂಪದ ಮುಂದೆ ಯಾವುದೂ ಈಡಲ್ಲ ಎಂಬ ನಿರ್ಧಾರವೂ ಇದೆ. ಕವಿತೆ, ವೇದಕಾಲದಾವರಣದಿಂದ ಇಂದಿನ ಸಮಕಾಲೀನವಾದ ಕಾಲದವರೆಗೂ ತನ್ನ ಗಡುವನ್ನು ಚಾಚಿಕೊಂಡಿದೆ. ಕತ್ತಲೆಗೆ ಯಾವ ಕಾಲಕ್ಕಾದರೂ ಕೊನೆಯಿರದ ಬಾಯಾರಿಕೆ—

'ಎಷ್ಟೊಂದು ಬೆಳಕನ್ನು ಇದು ಉಟ್ಟರೂ, ತೊಟ್ಟರೂ
ತಿಂದರೂ, ಕುಡಿದರೂ ಇದಕ್ಕೆ ಇನ್ನೂ ಬೇಕು
ಇನ್ನೂ ಬೇಕು ಎನ್ನುವ ಬಯಕೆ'

ಅಂತೆಯೇ ಪ್ರಪಂಚದ ಹುಟ್ಟಿನಿಂದಲೇ ಬೆಳೆದುಬಂದ ಕತ್ತಲೆ-ಬೆಳಕಿನ ಹೋರಾಟಕ್ಕೆ ಕೊನೆಯಿಲ್ಲ. ಹೊರಗೆ-ಒಳಗೆ ಎಲ್ಲೆಲ್ಲೂ ಕತ್ತಲೆಯದೇ ಕೈವಾಡ. ಕೊನೆಗೆ ಅದಕ್ಕೇ ಜಯ ನಿಶ್ಚಿತ. ಆದ್ದರಿಂದಲೇ ಕವಿಯ ಆ ಹಣತೆಗೆ 'ಕತ್ತಲನ್ನು ಗೆದ್ದು ನಿಲ್ಲುತ್ತೇನೆಂಬ ಜಿದ್ದಿಲ್ಲ'ದಿರುವುದು ಅರ್ಥಪೂರ್ಣ. ಅಷ್ಟೇ ಸಹಜ. ಎಲ್ಲರಂತೆ ತಾನೂ ಹಣತೆ ಹಚ್ಚಿದರೂ 'ಈ ಕತ್ತಲಿನಿಂದ ಬೆಳಕಿನ ಕಡೆಗೆ ನಡೆದೇನೆಂಬ ಆಸೆ'ಯೂ ಕವಿಗಿಲ್ಲ. ಕಾರಣ ಶತಶತಮಾನಗಳಿಂದಲೂ ಬೆಳಕಿಗಾಗಿ ಹಂಬಲಿಸಿ ಕೊನೆಗೂ ಕತ್ತಲೆಯಲ್ಲಿಯೇ ತಡಕಾಡುತ್ತ ಅದರಲ್ಲೂ "ಕತ್ತಲಿನಿಂದ ಕತ್ತಲಿಗೇ" ಬಂದ ತಪ್ಪು ಹೆಜ್ಜೆಗಳ ಗುರುತುಗಳನ್ನು ಕವಿ ಕಾಣಬಲ್ಲವನಾಗಿದ್ದಾನೆ, ಕಂಡಿದ್ದಾನೆ.

ಆದರೂ ಕತ್ತಲಲ್ಲಿ ತಡವರಿಸಿ ಜೋಲಿತಪ್ಪಿದ ಲೋಕಕ್ಕೆ ಆಗಾಗ ಹೊಸ ಕಣ್ಣು, ಹೊಸ ದೃಷ್ಟಿ, ಹೊಸ ಬೆಳಕು ಕೊಡಲು ಆಗಾಗ ಕಡ್ಡಿಗೀಚಿದ್ದು ಕವಿಗೆ ಸಾಂತ್ವನ ತಂದಿದೆ. ಆದರೂ ಘರ್ಷಣೆಯಿಲ್ಲದೇ ಕಡ್ಡಿಗೀಚಲಾಗಿಲ್ಲವೆಂಬ ಸೂಕ್ಷ್ಮಧ್ವನಿಯೂ ಅಲ್ಲಿ ಅರ್ಥವತ್ತಾಗಿದೆ. ಅಷ್ಟೇ ಅಲ್ಲ, ಕಡ್ಡಿಗೀಚಿದರೂ ಅದರ ಪರಿಣಾಮ ಮಾತ್ರ ಕೊನೆಗೆ ಬೆಳಕಾಗಲಿಕ್ಕೇ ಎಂಬುದಕ್ಕೆ 'ದೀಪ ಮುಡಿಸಿದ್ದೇವೆ' ಎಂಬ ಮಾತು ಪೋಷಕದ್ರವ್ಯವಾಗಿದೆ. ಅದಲ್ಲದೇ ಆ ಶಬ್ದ ಬಳಕೆಯೂ ನಮ್ಮ ಸಂಸ್ಕೃತಿ ಪರಂಪರೆಗಳಿಗೆ ಸಂಕೇತವಾಗಿದೆ. ಹೀಗೆ ಕಡ್ಡಿಗೀಚುವ ಆಧುನಿಕತೆಗೂ, ದೀಪ ಮುಡಿಸುವ ಪರಂಪರಾಗತ ಸಂಸ್ಕೃತಿಯ ನಾವಿನ್ಯಕ್ಕೂ ಸಾಧಿಸುವ ಸುಂದರ ಸಮನ್ವಯದಲ್ಲಿ ಭಾವಸೌಷ್ಠವವೂ ಹುದುಗಿದ್ದು ಗಮನಾರ್ಹ. ವೇದ, ಶಾಸ್ತ್ರ, ಪುರಾಣ, ಇತಿಹಾಸ, ಕಾವ್ಯ, ವಿಜ್ಞಾನಗಳ ಹೆಸರಿನಲ್ಲಿ ದೀಪ ಮುಡಿಸಿಕೊಂಡ ಆ ದೀಪಗಳೇ ಆಗಾಗ ಬೆಳಕಾಗಿ ಬಂದು ಅಂದಿನ, ಇಂದಿನ, ಮುಂದಿನ ಬದುಕನ್ನು ಕತ್ತಲೆಯಿಂದ ಪಾರುಮಾಡಿದೆ.

ಇಲ್ಲಿ ಕವನದ ಹರವು ಸಹಜವಾಗಿಯೇ ಆದಿಯಿಂದ ಆಧುನಿಕತೆಯವರೆಗೂ ವಿಸ್ತಾರಗೊಂಡದ್ದನ್ನು ಲಕ್ಷಿಸಬಹುದಾಗಿದೆ.

ತಕ್ಷಣವೇ ಬರುವ,

ಮತಾಪು-ಪಟಾಕಿ-ಸುರುಸುರುಬತ್ತಿ, ಹೂಬಾಣ
ಸುಟ್ಟಿದ್ದೇವೆ

ಎಂಬ ಮಾತುಗಳಲ್ಲಿ ಅದೆಲ್ಲವೂ ಕ್ಷಣಿಕವೆಂಬ ಅಂಶವೂ ಧ್ವನಿತವಾಗಿದೆ. ವಿಜ್ಞಾನ ಯುಗದ ಹಲವಾರು ಅವಾಂತರಗಳ ಭಿನ್ನರುಚಿ ಕಂಡ ವ್ಯಕ್ತಿಗೆ ಆ ಅಂಥ ದೀಪಗಳಿಂದೇನೂ ಕತ್ತಲೆಯನ್ನು ಹೋಗಲಾಡಿಸಲು ಸಾಧ್ಯವಿಲ್ಲವೆಂಬ ನಿರ್ಧಾರ ಕವಿಗಿದೆ. ಪಟಾಕಿ, ಸುರುಸುರು ಬತ್ತಿ ಹೂ ಬಾಣಗಳು ಕ್ಷಣದಲ್ಲಿಯೇ ಉರಿದು ಬಣ್ಣಬಣ್ಣ ತಾಳಿ ಕಣ್ಣು ಕೋರೈಸಿ, ಕಿವಿಗಡುಚಿಕ್ಕಿ ಬೂದಿಯಾಗುವುದು ಎಷ್ಟು ಸಹಜವೋ ಹಾಗೆ, ಅಷ್ಟೇ ಕ್ಷಣಿಕ. ಅಂತೆಯೇ ವೇಪೋಕ್ತಮಾತು—ದೀಪವೂ ಆಧುನಿಕ ಧೋರಣೆಯಲ್ಲಿ ಕೇವಲ ಅಸ್ಥಿಪಂಜರ. ಬೆಳಕಿನತ್ತ ಹೊರಟರೂ ಕೊನೆಗೆ ಕಾಣುವುದು ಸುಟ್ಟ ಬೂದಿ ಮಾತ್ರ.

'ತಮಸೋಮಾಜ್ಯೋತಿರ್ಗಮಯಾ' ಎನ್ನುತ್ತ ಬರೀ
ಬೂದಿಯನ್ನೇ ಕೊನೆಗೆ ಕಂಡಿದ್ದೇವೆ

ಎಂಬುದು ಆ ಭಾವನೆಯನ್ನು ಅರ್ಥಪೂರ್ಣಗೊಳಿಸಿದೆ.

ವಸ್ತುಸ್ಥಿತಿ ಹೀಗಿದ್ದರೂ ಕವಿಗೆ ತನ್ನ ಹಣತೆಯ ಬಗ್ಗೆ ಗೌರವ ಭಾವ ತಗ್ಗಿಲ್ಲ. ಅದರ ಅಲ್ಪ ಬೆಳಕಿನ ಬಗ್ಗೆ ಆತನಿಗೆ ನಂಬಿಕೆ ಇದೆ. ತಲೆತಲಾಂತರದಿಂದಲೂ ಕತ್ತಲೆಯೊಂದಿಗೆ ಹೋರಾಡಿ ಕೊನೆಗೂ ಜಯಿಸದೇ ತನ್ನ ಅಸ್ತಿತ್ವವನ್ನೇ ಅಳುಕಿಸಿಕೊಂಡ ದೀಪಗಳ ಸ್ಥಿತಿಯೇ ಹಾಗಾದಾಗ ತನ್ನ ಸಣ್ಣ ಹಣತೆಯ ಪಾಡೇನು? ಎಂಬ ಅರಿವೂ ಅವನಿಗಿದೆ.

ಆದರೂ ಹಣತೆ ಹಚ್ಚುತ್ತೇನೆ ನಾನೂ,
ಕತ್ತಲೆಯನ್ನು ದಾಟುತ್ತೇನೆಂಬ ಭ್ರಮೆಯಿಂದಲ್ಲ

ಎಂಬ ಅಚಲ ನಿಷ್ಠೆ, ಅದರೊಂದಿಗೆ ದೈನ್ಯತಾಭಾವ, ಆತ್ಮತೃಪ್ತಿಗಳೂ ಅವನಲ್ಲಿ ಬೆಳೆದು ನಿಂತಿವೆ. ಒಬ್ಬರ ಮೋರೆಯನ್ನು ಒಬ್ಬರು ನೋಡದ, ಅರ್ಥಮಾಡಿಕೊಳ್ಳದ ಹಾಗೆ ನಡುವೆ ಗೋಡೆಯಂತೆ ಬೆಳೆದು ನಿಂತ ರಾಜಕೀಯ, ಸಾಮಾಜಿಕ, ಸಾಹಿತ್ಯಿಕ ಕತ್ತಲೆಯನ್ನು ಅಲ್ಪಾದರೂ ಓಡಿಸೇನೆಂಬ ಹಂಬಲ ಅವನಲ್ಲಿ ಮೂಡುತ್ತದೆ. ಆ ಎಲ್ಲ ಸಮಕಾಲೀನ ವಿಷಮ ಪರಿಸರದ ತುಮುಲ ಅವನನ್ನು ನಿರಾಶೆಯತ್ತ ತಳ್ಳುತ್ತಿರುವ ಸಂದರ್ಭದಲ್ಲಿ, ತಾನು ಹಣತೆ ಹಚ್ಚುವುದರ ಸಾರ್ಥಕತೆಯೂ ಅವನಿಗೆ ಸ್ಪಷ್ಟವಾಗಿದೆ.

'ಇರುವಷ್ಟು ಹೊತ್ತು ನಿನ್ನ ಮುಖ ನಾನು, ನನ್ನ ಮುಖ ನೀನು
ನೋಡಬಹುದೆಂಬ ಒಂದೇ ಒಂದು ಆಶೆಯಿಂದ'

ಇದು ಕವಿಯ ಹಂಬಲದ ಪರಮ ಘಟ್ಟ. ಕತ್ತಲೆಯನ್ನು ಕಳೆದುಳಿದು ಕ್ಷಣ ಹೊತ್ತಾದರೂ ಪರಸ್ಪರ ಕೂಡಿ ನೆಮ್ಮದಿಯಿಂದ ಒಬ್ಬರ ಮುಖ ಒಬ್ಬರು ನೋಡುವ ಸುವರ್ಣ ಕಾಲಕ್ಕಾಗಿ ಆಶಿಸಿದ್ದಾನೆ. ಆದರೆ ಆ ಒಂದೇ ಒಂದು ಆಶೆಯೂ ಫಲಿಸೀತೆಂಬುದರಲ್ಲಿ ಆತನಿಗೆ ನಂಬಿಕೆ ಇಲ್ಲ.

'ಹಣತೆ ಆರಿದ ಮೇಲೆ ನೀನು ಯಾರೋ ಮತ್ತೆ
ನಾನು ಯಾರೋ'

ಎಂಬ ನಿರಾಶೆಯೂ ಅವನನ್ನು ತಬ್ಬಿ, ದೀಪಗಳಂತೆ ನಾವೂ ಕ್ಷಣಿಕರಾದವರು ಎಂಬ ತಾತ್ವಿಕ ನಿಲುವಿಗೆ ಅವನನ್ನು ಒಯ್ಯುತ್ತದೆ. ಇದ್ದಷ್ಟು ದಿವಸ ಕತ್ತಲೆಯಲ್ಲಿಯೇ ತೆವಳುತ್ತ ಬದುಕಿ, ಅನರ್ಥಕಾರಿ ವಿಷಮತೆಗಳ ಬಲೆಯಲ್ಲಿ ಒದ್ದಾಡುವುದು ಕವಿಗೆ ಬೇಡವಾಗಿದೆ. ಅಲ್ಲದೆ 'ಹಣತೆ ಆರಿದ ಮೇಲೆ' ಎಂಬ ಮಾತಿನ ಧ್ವನಿ 'ಜೀವ ನೀಗಿದಮೇಲೆ' ಎಂಬ ಅರ್ಥಕ್ಕೆ ಸ್ಥಳಾಂತರವಾಗಿ, ಬದುಕಿನ ಅಸ್ಥಿರತೆಯನ್ನು ಮತ್ತೂ ಘನೀಭೂತಗೊಳಿಸುತ್ತದೆ. ಯಾರಿಗೆ ಯಾರೋ ಆಗಿ ಬದುಕುವುದಕ್ಕಿಂತ ಎಲ್ಲರೂ ಒಂದಾಗಿ ಅರಿತುಕೊಂಡು ಬಾಳುವ ಮಾನವತಾಧರ್ಮದ ಸತ್ಯಾಂಶಗಳ ಕಡೆಗೆ ಕವಿತೆ ಓದುಗನನ್ನು ತುಡಿಯುತ್ತದೆ.

ಹೀಗೆ ವರ್ತಮಾನದ ಪರಿಸರಗಳನ್ನು ಸುತ್ತುಹಾಕಿಕೊಂಡೇ ಭೂತಭವಿಷ್ಯದುದ್ದಕೂ ಸಂಬಂಧ ಬೆಳೆಸಿಕೊಂಡು, ಸಾಮಾನ್ಯದಿಂದ ಅಸಾಮಾನ್ಯ ಬದುಕಿನ ಮೌಲ್ಯಗಳತ್ತ ಮೈಚಾಚಿ ಪರಿಪೂರ್ಣಾವಸ್ಥೆಗೇರುವ ಕಾವ್ಯದ ನಿಲುವು ಉನ್ನತ ಮಟ್ಟದ್ದಾಗಿದೆ. ಯಾವುದೇ ರೀತಿಯ ಅರೆಕೊರೆ ವೈಯಕ್ತಿಯ ಅನುಭವಗಳ ಗೊಂದಲವಿಲ್ಲದೆ, ಅನುಭವಸತ್ಯಗಳು ಕೊನೆಗೆ ಅನುಭಾವಸತ್ಯಕ್ಕೆ ಪೂರಕಗೊಳ್ಳುತ್ತಿರುವುದು ಈ ಕಾವ್ಯದ ವೈಶಿಷ್ಟ್ಯವಾಗಿದೆ. ಕಾವ್ಯದಲ್ಲಿ ಧ್ವನಿತವಾದ ಎಲ್ಲ ಸಂಬಂಧಗಳನ್ನೂ ಅರ್ಥಪೂರ್ಣ ಗುರಿಯತ್ತ ತಿರುಗಿಸಿದ್ದುದು ಶಿವರುದ್ರಪ್ಪನವರ ಕಾವ್ಯದ ಮೇಲ್ಮೆಯನ್ನೂ ದೃಢಪಡಿಸುತ್ತದೆ.

# ನನ್ನ ಹಣತೆ

ಹಣತೆ ಹಚ್ಚುತ್ತೇನೆ ನಾನೂ.
ಈ ಕತ್ತಲನು ಗೆದ್ದು ನಿಲ್ಲುತ್ತೇನೆಂಬ ಜಿದ್ದಿನಿಂದಲ್ಲ;
ಲೆಕ್ಕವೇ ಇರದ ದೀಪಾವಳಿಯ ಹಡಗುಗಳೆ
ಇದರಲ್ಲಿ ಮುಳುಗಿ ಕರಗಿರುವಾಗ
ನಾನು ಹಚ್ಚುವ ಹಣತೆ ಶಾಶ್ವತವೆಂಬ ಭ್ರಾಂತಿ ನನಗಿಲ್ಲ.
ಹಣತೆ ಹಚ್ಚುತ್ತೇನೆ ನಾನೂ;
ಈ ಕತ್ತಲಿನಿಂದ ಬೆಳಕಿನ ಕಡೆಗೆ ನಡೆದೇನೆಂಬ
ಆಸೆಯಿಂದಲ್ಲ.
ಕತ್ತಲಿನಿಂದ ಕತ್ತಲಿಗೇ ತಡಕಾಡಿಕೊಂಡು ಬಂದಿವೆ ಹೆಜ್ಜೆ
ಶತಮಾನದಿಂದಲೂ.
ನಡು ನಡುವೆ ಒಂದಷ್ಟು ಬೆಳಕು ಬೇಕೆಂದು
ಆಗಾಗ ಕಡ್ಡಿ ಗೀಚಿದ್ದೇವೆ,
ದೀಪ ಮುಡಿಸಿದ್ದೇವೆ.
ವೇದ, ಶಾಸ್ತ್ರ, ಪುರಾಣ, ಇತಿಹಾಸ, ಕಾವ್ಯ, ವಿಜ್ಞಾನಗಳ
ಮತಾಪು—ಪಟಾಕಿ—ಸುರುಸುರುಬತ್ತಿ—ಹೂಬಾಣ
ಸುಟ್ಟಿದ್ದೇವೆ
'ತಮಸೋಮಾ ಜ್ಯೋತಿರ್ಗಮಯಾ' ಎನ್ನುತ್ತ ಬರೀ
ಬೂದಿಯನ್ನೇ ಕೊನೆಗೆ ಕಂಡಿದ್ದೇವೆ.
ನನಗೂ ಗೊತ್ತು, ಈ ಕತ್ತಲೆಗೆ
ಕೊನೆಯಿರದ ಬಾಯಾರಿಕೆ.
ಎಷ್ಟೊಂದು ಬೆಳಕನ್ನು ಇದು ಉಟ್ಟರೂ, ತೊಟ್ಟರೂ
ತಿಂದರೂ, ಕುಡಿದರೂ ಇದಕ್ಕೆ ಇನ್ನೂ ಬೇಕು
ಇನ್ನೂ ಬೇಕು ಎನ್ನುವ ಬಯಕೆ.
ಆದರೂ ಹಣತೆ ಹಚ್ಚುತ್ತೇನೆ ನಾನೂ;

ಕತ್ತಲೆಯನ್ನು ದಾಟುತ್ತೇನೆಂಬ ಭ್ರಮೆಯಿಂದಲ್ಲ,
ಇರುವಷ್ಟು ಹೊತ್ತು ನಿನ್ನ ಮುಖ ನಾನು, ನನ್ನ ಮುಖ ನೀನು
ನೋಡಬಹುದೆಂಬ ಒಂದೇ ಒಂದು ಆಸೆಯಿಂದ:
ಹಣತೆ ಆರಿದ ಮೇಲೆ, ನೀನು ಯಾರೋ, ಮತ್ತೆ
ನಾನು ಯಾರೋ.

# ಡಿ. ಲಿಂಗಯ್ಯ

# ಸಂಜೆದಾರಿ

ಕವಿ ಜಿ. ಎಸ್. ಶಿವರುದ್ರಪ್ಪನವರ ಶ್ರೇಷ್ಠ ಕವನಗಳಲ್ಲಿ 'ಸಂಜೆದಾರಿ'ಯೂ ಒಂದು. ಈ ಕವಿಯ ಉತ್ತಮ ಕವನಗಳಲ್ಲಿ ಕಂಡುಬರುವ ಹಲವು ಒಳ್ಳೆಯ ಅಂಶಗಳು ಇಲ್ಲಿಯೂ ಕಂಡುಬರುತ್ತವೆ. ಸ್ಥೂಲವಾಗಿ ಹೇಳಬಹುದಾದರೆ ಈ ಕವನ ಸಾರ್ಥಕ ಜೀವನವನ್ನು ಸಾಧಿಸಿ ಕಾಲವನ್ನು ಗೆಲ್ಲಲಾರದೆ ತಳಮಳಿಸುವ ಅತೃಪ್ತ ವ್ಯಕ್ತಿಯ ಮುಗಿವಿರದ ಪ್ರಶ್ನೆಯ ವರ್ಣನೆಯಾಗಿದೆ. "ಬದುಕಿನ ಯಾವ ನಿಜವಾದ ಬೆಲೆಗಳಲ್ಲಿಯೂ ಬೇರೂರದ ವಿಫಲ ವ್ಯಕ್ತಿತ್ವವೊಂದರ ಸಂಜೆದಾರಿಯ ಚಿತ್ರಣ ಇದು." ಒಂದು ದೃಷ್ಟಿಯಿಂದ ನೋಡಿದರೆ ಇದೊಂದು ಪ್ರಕೃತಿಗೀತೆ. ಆದರೆ ಅದಷ್ಟೇ ಆಗಿದ್ದರೆ ಇದೊಂದು ಉತ್ತಮ ಕವನವಾಗುತ್ತಿರಲಿಲ್ಲ. ಪ್ರಕೃತಿಯ ಚಿತ್ರದ ಜೊತೆಗೆ ಮಾನವ ಪ್ರಕೃತಿಯ ಚಿತ್ರವೂ ಮೇಳವಿಸಿ ಈ ಕವನ ಸಾರ್ಥಕವಾಗಿದೆ. 'ಮಬ್ಬಿನಿಂದ ಮಬ್ಬಿಗೆ' ಕವನದಂತೆ ಇಲ್ಲಿಯೂ ಕೂಡ ಬದುಕಿನ ಮುಖ್ಯ ಸಮಸ್ಯೆಯಾದ ಮಾನವ ಮತ್ತು ಕಾಲದ ವಿಶ್ಲೇಷಣೆ ನಡೆದಿದೆ. ಕವನದ ಉದ್ದಕ್ಕೂ ಕವಿ ಅನುಸರಿಸಿರುವ ಅಭಿವ್ಯಕ್ತಿಯ ರೀತಿ ಲವಲವಿಕೆಯಿಂದ ಕೂಡಿದೆ.

ಕವಿಯ ಮಾತುಗಳಲ್ಲಿ ಕವನ ಆರಂಭವಾಗಿದೆ. ಸಂಜೆಯ ಸಮಯ. ನಾನಾ ಕಾರಣಗಳಿಂದ ಬದುಕಿನಲ್ಲಿ ಅತೃಪ್ತನಾಗಿರುವ ನಿವೃತ್ತ ವ್ಯಕ್ತಿ ಅಥವಾ ಕಾವ್ಯನಾಯಕ ಸಂಜೆಯ ಗಾಳಿಸೇವನೆಗೆ ಹೊರಟಿದ್ದಾನೆ. ಅವನ ಕೈಯಲ್ಲೊಂದು ನಾಯಿ ಇದೆ.

> ಕೈ ಹಿಡಿದ ಸರಪಳಿಯ ಜಗ್ಗುತಿದೆ ಕರಿನಾಯಿ,
> ಹೊಳೆ ಹೊಳೆವ ಕೆಂಗಣ್ಣು ಜೋಲ್ವ ನಾಲಗೆ ಬಾಯಿ !

ಕವನದ ಪ್ರಾರಂಭ ಸಹೃದಯನನ್ನು ಅಯಸ್ಕಾಂತದಂತೆ ಸೆಳೆಯುತ್ತದೆ. ಕ್ಷಣದಲ್ಲಿ ನಾವು ಕವನದ ಪರಿಸರಕ್ಕೆ ಒಳಗಾಗುತ್ತೇವೆ. ಸಂಜೆದಾರಿಯಲ್ಲಿ ಹೊರಟಿರುವವನು ಮುದುಕ. ಸಂಜೆ, ಹಗಲಿಗೆ ಮುಪ್ಪಿನ ಸಂಕೇತ. ಮುದುಕತನ, ಬಾಳಿನ ಸಂಜೆಯ (ಕೊನೆಯ) ಸಂಕೇತ. ಇಲ್ಲಿ, ಸಂಜೆಯ ಆಗಮನ ಅಥವಾ ಎಳೆತ ತೀವ್ರವಾಗಿದೆ. ಅದಕ್ಕೆ ತಕ್ಕಂತೆ ಹಗಲು ತನ್ನ ಸತ್ವವನ್ನು ಕಳೆದುಕೊಳ್ಳುತ್ತಿದೆ. ಮುದುಕ ನೆಪಕ್ಕೆ ನಾಯಿಯ ಸರಪಳಿಯನ್ನು ಹಿಡಿದಿದ್ದಾನೆ. ನಾಯಿ ಎಳೆದ ಕಡೆಗೆ ಅವನು ವಿಧಿಯಿಲ್ಲದೆ ಹೆಜ್ಜೆ ಹಾಕಬೇಕಾಗಿದೆ. ಕಾವ್ಯನಾಯಕ ಮುದುಕ, ಅಸಹಾಯಕ ಎಂಬುವನ್ನು ಮೊದಲ ಸಾಲು ಧ್ವನಿಸುತ್ತದೆ. ನಾಯಿ, ಸಾಮಾನ್ಯವಾದುದಲ್ಲ. ನೋಡುವುದಕ್ಕೆ ಸೌಮ್ಯವಾಗಿಯೂ ಇಲ್ಲ. ಅದು

ಕರಿನಾಯಿ. ಅದರವು ಕೆಂಗಣ್ಣು. ಬೆಳವಣಿಗೆ ಪುಷ್ಟವಾಗಿವೆ. ಜೋಲುವ ನಾಲಗೆ ಅದಕ್ಕೆ. ಇಲ್ಲಿ 'ನಾಯಿ'ಯನ್ನು ಕವಿ ಹಲವು ಸಂಕೇತಗಳಲ್ಲಿ ಬಳಸಿರುವಂತೆ ಕಾಣುತ್ತದೆ. ಆ ಸಂಕೇತಾರ್ಥಗಳನ್ನು ಹೀಗೆ ಗುರ್ತಿಸಬಹುದು. (೧) ನಾಯಿ, (೨) ಕತ್ತಲೆ, (೩) ಸಮಯ, (೪) ಮೃತ್ಯು. 'ಕರಿನಾಯಿ' ಎಂದಿರುವುದು ಗಮನಾರ್ಹವಾಗಿದೆ. ಸರಪಳಿ ಹಿಡಿದ ಕೈಯನ್ನು ಜಗ್ಗುತ್ತ ಕಾಲವೆಂಬ ಕರಿನಾಯಿ ಸಾಗಿದೆ. ಅದು ಜಗ್ಗಿದತ್ತ ಹೆಜ್ಜೆ ಹಾಕುವ ವ್ಯಕ್ತಿಗೆ ಸಂಜೆಯದಾರಿ ಮುಗಿವಿರದ ಪ್ರಶ್ನೆಯಾಗಿದೆ:

> ಸಂಜೆ ಮುಗಿಲಿನ ಕೆಳಗೆ
> ದೂರದೂರದವರೆಗೆ
> ಮುಗಿವಿರದ ಪ್ರಶ್ನೆಯೊಲು ಹಾಸಿರಲು ಟಾರ್ ಬೀದಿ...

'ಟಾರ್‌ಬೀದಿ'ಯನ್ನು ಕವಿ ತಮ್ಮ ಇತರ ಕವನಗಳಲ್ಲೂ (ಒಂದಿರುಳು, ನಗರದ ನಡುವೆ ಒಂದು ಬೆಳಗು) ಬಳಸಿದ್ದಾರೆ. ಕವನದ ಪರಿಸರ ನಗರಕ್ಕೆ ಸಂಬಂಧಿಸಿದ್ದು. ಟಾರ್‌ಬೀದಿ ಅಂತ್ಯವಿಲ್ಲದ ಪ್ರಶ್ನೆಯ ಹಾಗೆ ಹಾಸಿದೆ. ಇಂಥ ಬೀದಿಯಲ್ಲಿ,

> ಕೈ ಹಿಡಿದ ಸರಪಳಿಯ ಜಗ್ಗುತಿದೆ ಕರಿನಾಯಿ ಮುಂದೆ ಮುಂದೆ
> ಹಿಡಿದ ಕೈ ಸಾಗುತಿದೆ ಹಿಂದೆ ಹಿಂದೆ !

ನಾಯಿಯ ಚಲನೆಯ ರಭಸ, ಹಿಡಿದ ವ್ಯಕ್ತಿಯ ಅಶಕ್ತತೆ ಇಲ್ಲಿ ಸ್ಪಷ್ಟವಾಗಿವೆ. 'ಹಿಂದೆ ಹಿಂದೆ' ಎಂಬ ಪದಗಳು ವಿಶಿಷ್ಟವಾಗಿ ಬಳಕೆಯಾಗಿವೆ. ನಾಯಿ ಜಗ್ಗಿದಂತೆ ವಿಧಿಯಿಲ್ಲದೆ ಹಿಂದೆ ಹಿಂದೆ ಹೋಗುವುದು ಒಂದರ್ಥ. ಹಿಂದಕ್ಕೆ ಎಳೆದೂ ವಿಫಲವಾಗಿ ನಾಯಿಯನ್ನು ಅನುಸರಿಸುವುದು ಇನ್ನೊಂದರ್ಥ. ಮುಂದೆ ಮುಂದೆ ಸಾಗಿದಷ್ಟೂ ವ್ಯಕ್ತಿಯ ಬಾಳು ಹಿಂದುಳಿಯುತ್ತದೆ, ಅಂತ್ಯ ಸಮೀಪಿಸುತ್ತದೆ.

ಮುಂದಿನ ಸಾಲುಗಳು ಮುಳುಗುತ್ತಿರುವ ಸೂರ್ಯನನ್ನೂ ಪಶ್ಚಿಮ ದಿಗಂತದ ಕ್ರಿಯೆಯನ್ನೂ ವರ್ಣಿಸುತ್ತವೆ:

> ಹಗಲೆಲ್ಲ ಗಾಡಿಯನೆಳೆದು ಸೋತು ಸುಸ್ತಾದ
> ಜಟಕಾ ಕುದುರೆಯಂತೆ,
> ಸೋತ ದಳಪತಿಯಂತೆ,
> ಕೆನ್ನವಿರ ತಲೆಗೆದರಿ ಮುಳುಗುತಿಹನಲ್ಲಿ ಅದೊ
> ಮುದಿಯ ಸೂರ್ಯ,
> ಮುಗಿಲ ಕೊತ್ತಳದಲ್ಲಿ ಮೊಳಗುತಿದೆ ಆಗಲೇ
> ಇರುಳ ತೂರ್ಯ !

ಬದುಕಿನಲ್ಲಿ ಆಯಾಸಗೊಂಡಿರುವ ವ್ಯಕ್ತಿಗೆ, ದಿನವೆಲ್ಲ ನಡೆದು ದಣಿದ ಸೂರ್ಯ ಆಯಾಸ ಗೊಂಡಿರುವಂತೆ ಕಾಣುತ್ತದೆ. ತನ್ನ ಮಟ್ಟದಲ್ಲೇ ಇತರರನ್ನು ಅಳೆಯುವುದು ಮನುಷ್ಯ ಸಹಜ ಗುಣ. 'ಕೆನ್ನವಿರ ತಲೆಗೆದರಿ' ಮಾತುಗಳು ಸೂರ್ಯ ಪ್ರಕಾಶವನ್ನು ಪ್ರಕಟಿಸುತ್ತವೆ. ಆರುವ ಮೊದಲು ದೀಪ, ಮುಳುಗುವ ಮೊದಲು ಸೂರ್ಯ ಹೆಚ್ಚು ಬೆಳಗುವುದುಂಟು. ಸೂರ್ಯನಲ್ಲಿರುವ ಪ್ರಕಾಶ, ನಿವೃತ್ತ ವ್ಯಕ್ತಿಯಲ್ಲಿಲ್ಲದಿದ್ದರೂ ಇಲ್ಲಿ ಮುದಿಯ

ಸೂರ್ಯ ಅವನಿಗೆ ಸಂಕೇತವಾಗಿದೆ. ಸಂಜೆಯಾಯಿತೆಂದು ಹಗಲಿನಲ್ಲಿದ್ದವಂಗೆ ಬೇಸರವಾಗಬಹುದು. ಆದರೆ ಅದು ಪ್ರಕೃತಿ ಧರ್ಮ. ಯಾರ ಒಪ್ಪಿಗೆಗೂ ಕಾಯದೆ ಇರುಳ ತೂರ್ಯ ಸಹಜವಾಗಿಯೇ ಮೊಳಗುತ್ತದೆ.

ಇಲ್ಲಿಯವರೆಗೆ ತಾವೇ ನೇರವಾಗಿ ಮಾತಾಡುತ್ತಿದ್ದ ಕವಿ ತಮ್ಮ ಧಾಟಿಯನ್ನು ಬದಲಾಯಿಸಿ ತಮ್ಮ ದನಿಯ ಜೊತೆಗೆ ಕಾವ್ಯನಾಯಕನ ದನಿಯನ್ನೂ ಒಟ್ಟುಗೂಡಿಸಿ ಕವನವನ್ನು ಮುಂದುವರಿಸಿದ್ದಾರೆ. ಮುಂದಿನ ಸಾಲುಗಳಲ್ಲಿ ಕಾವ್ಯನಾಯಕನ ಹಿಂದಿನ ಬದುಕಿನ ಚಿತ್ರ ನಾಟಕೀಯವಾಗಿ ವರ್ಣನೆಯಾಗಿದೆ. ಸಂಜೆಯ ದಾರಿಯಲ್ಲಿ ನಡೆಯುತ್ತಿರುವ ವ್ಯಕ್ತಿಗೆ ತಾನು ಹಿಂದೆ ದರ್ಬಾರು ನಡೆಸಿದ ಕಟ್ಟಡ ಕಣ್ಣಿಗೆ ಬೀಳುತ್ತದೆ. "ಈಗಲೋ ಆಗಲೋ ನಿದ್ದೆಯಾಳಕೆ ಇಳಿವ ಹಸುಳೆ ಕಣ್‌ಬಿಡುವಂತೆ ಕಿಟಕಿಗಾಜಿನ ಹೊಳಪು, ನೂರಾರು ನೆನಪು"ಗಳ ಸುಳಿಯನ್ನು ಎಬ್ಬಿಸುತ್ತದೆ. ಸೂರ್ಯನ ಬೆಳಕಿಂದ ಉಂಟಾದ ಕಿಟಕಿಯ ಗಾಜಿನ ಹೊಳಪನ್ನು ನಿಪ್ಪೆಗಣ್ಣಿನ ಹಸುಳೆಯ ಕಣ್ಣಿನ ಹೊಳಪಿಗೆ ಹೋಲಿಸಿರುವುದು ಸೊಗಸಾಗಿದೆ. ಮುಪ್ಪಿಗೆ ಸಹಜವೆನ್ನುವಂತೆ ಹಳೆಯ ಘಟನೆಗಳು ನೆನಪಾಗುತ್ತವೆ. ಮಹಡಿಯ ಆಫೀಸು ರೂಮಿನಲ್ಲಿ :

ಚೆಲ್ಲನೊತ್ತಿದರೆ ಸಾಕು, ಬಂದು ನಿಲ್ಲುತಿದ್ದನು ಪ್ಯೂನು,
ಟೇಬಲ್ಲ ಮೇಲೆಯೇ ತಿರುಗುತಿದ್ದಿತು ಫ್ಯಾನು.
ನೂರಾರು ಜನ ಬಂದು ಹೊಡೆಯುತಿರಲು ಸಲಾಮು,
ಜರ್ಬಿತ್ತು, ಅಧಿಕಾರವಿತ್ತು ; ಕೈಕೆಳಗಿನವರನ್ನು
ನಡುಗಿಸುವ ಬಲವಿತ್ತು ;
ಎಲ್ಲವೂ ಇತ್ತು ; ಮೊನ್ನೆದಿನ ತಾನೇ ಇತ್ತು ;
ಈಗಿಲ್ಲ ; ಅದು ಹಳೆಯ ನೆನಪು !

ಈ ಸಾಲುಗಳು ವಾಚ್ಯವಾಗಿದ್ದರೂ ಕವನದ ಒಟ್ಟರ್ಥಕ್ಕೆ ಸರಳವಾಗಿ ಪುಷ್ಟಿಕೊಡುತ್ತವೆ. ಕಾವ್ಯನಾಯಕನ ಅಧಿಕಾರದ ಜೀವನ ಹೇಗಿತ್ತು ಎಂಬುದರ ವಿವರಣೆ ಇಲ್ಲಿದೆ. ಇಂಥ ಜೀವನ ಅಥವಾ ದುಡಿಮೆ ಒಂದೆರಡು ದಿನಗಳದಲ್ಲ : "ಮೂವತ್ತು ವರುಷದ ದುಡಿತ." ಇಷ್ಟೂ ಸಮಯದಲ್ಲಿ ಅವನು ಮಾಡಿದ್ದು ಇಷ್ಟೆ :

ಅಧಿಕಾರಕ್ಕೆ, ದರ್ಪಕ್ಕೆ, ಬಿಂಕಕ್ಕೆ
ಬೆಲೆಗೊಟ್ಟ ಜನದ ತಾಳದ ಬಡಿತ
ಅದರೊಡನೆ ಕುಣಿತ !

ಕವನದ ಮುಂದಿನ ಸಾಲುಗಳು ಕಾವ್ಯನಾಯಕನ ಅಂತರಂಗದ ವಿಶ್ಲೇಷಣೆಯನು ಮತ್ತಷ್ಟು ಸಂಕೀರ್ಣವಾಗಿ ಅಭಿವ್ಯಕ್ತಿಸುತ್ತವೆ. ಮುಪ್ಪು ಪ್ರಕೃತಿ ಸಹಜವಾದುದು. ಬಾಲ್ಯಯೌವನಗಳಿಗೆ ಇದ್ದಷ್ಟೇ ಸ್ಥಾನಮಾನ ಇದಕ್ಕೂ ಇರಬೇಕು. ಸಾರ್ಥಕವಾಗಿ ಬದುಕಿದವನಿಗೆ ಇವುಗಳಲ್ಲಿ ವ್ಯತ್ಯಾಸ ಕಂಡುಬರುವುದಿಲ್ಲ. ಬದುಕಿನ ನಿಜವಾದ ಮೌಲ್ಯಗಳನ್ನು ಕಂಡುಕೊಂಡು, ಅವುಗಳಿಗೆ ಸ್ಪಂದಿಸಿ ಸಾರ್ಥಕವಾಗಿ ಬದುಕದ ವ್ಯಕ್ತಿಗೆ ಮುಪ್ಪು ಅಸಹ್ಯವಾಗುತ್ತದೆ. ಕಾವ್ಯ ನಾಯಕನಿಗೆ ತನ್ನ ಕಳೆದ ಬದುಕಿನ ಬಗೆಗೆ ಬೇಸರ

ಹುಟ್ಟಿರುವುದಕ್ಕೆ ಕಾರಣವಿದೆ. (ಮುಪ್ಪಿನಲ್ಲಾದರೂ ತನ್ನ ಬಾಳಿನ ಮೌಲ್ಯ ವಿವೇಚನೆ ಮಾಡಲುಪ್ರಯತ್ನ ಪಟ್ಟಿರುವುದಷ್ಟೇ ಇದ್ದುದರಲ್ಲಿ ಸಮಾಧಾನದ ಸಂಗತಿಯಾಗಿದೆ.) ಮೂವತ್ತು ವರ್ಷಗಳ ದುಡಿತದಲ್ಲಿ ಅವನು ಸಾಧಿಸಿದ್ದೇನು?

> ಯಾವ ಪುರುಷಾರ್ಥವನು ಪಡೆದುದಾಯಿತು ಜೀವ?
> ಇತ್ತು. ಅವಕಾಶವಿತ್ತು; ತಿಳಿವಿತ್ತು; ಬೆಳಕಿತ್ತು.

ಆದರೆ ಏನು ಪ್ರಯೋಜನ? ಅಧಿಕಾರಕ್ಕೆ ದರ್ಪಕ್ಕೆ ಮರುಳಾದ ಅವನು ಅವುಗಳನ್ನು ಬಳಸಿಕೊಳ್ಳಲಿಲ್ಲ.

> ಎದೆಯ ಹೊಸ್ತಿಲಿನಲ್ಲೆ ಕಾಯುತಿದ್ದನು ದೇವ,
> "ಒಳಗೆ ಬರಲಪ್ಪಣೆಯೆ?" ಎಂಬ ದನಿ ಕೇಳಿದರು
> ಅದು ಬೇಡವಾಗಿತ್ತು.

"ಬೆಲ್ಲನೊತ್ತಿದರೆ ಸಾಕು, ಬಂದು ನಿಲ್ಲುತಿದ್ದನು ಪ್ಯೂನು" ವಾಕ್ಯವನ್ನು ನೆನಸಿಕೊಳ್ಳಬೇಕು. ತಾನಾಗಿ ಬೆಲ್ಲೊತ್ತಿ ಜವಾನನನ್ನು ಕರೆಸಿಕೊಳ್ಳುತ್ತಿದ್ದ. ಆದರೆ ಸರ್ವಜ್ಞನೂ ಸರ್ವಸ್ವವೂ ಆದ ದೇವರ ವಾಣಿ ತಾನಾಗಿ ಕೇಳಿಕೊಂಡರೂ 'ಒಳಗೆ' ಬರಲು 'ಅಪ್ಪಣೆ' ಕೊಡಲಿಲ್ಲ. ಆಫೀಸರನ ರೂಮಿಗೆ ಜವಾನ ಪ್ರವೇಶ ಮಾಡಬಹುದಾಗಿದ್ದರೂ ದೇವರಿಗೆ ಅವಕಾಶವಿರಲಿಲ್ಲ. ಕೇವಲ ರೂಮಿಗೇ ಪ್ರವೇಶವಿಲ್ಲವೆಂದಮೇಲೆ ರೂಮಿನಲ್ಲಿರುವ ವ್ಯಕ್ತಿಯ ಅಂತರಂಗಕ್ಕೆ ಪ್ರವೇಶವುಂಟೆ? 'ಒಳಗೆ' ಪದ 'ಅಂತರಂಗ'ವನ್ನು ಸೂಚಿಸುತ್ತದೆ.

ಮುಂದಿನ ನಾಲ್ಕು ಸಾಲುಗಳು ಉದ್ಧೃತ ವಾಕ್ಯಗಳು. ಕವಿ ಶಿವರುದ್ರಪ್ಪನವರು ತಮ್ಮ ಕವನಗಳಲ್ಲಿ ಅಲ್ಲಲ್ಲಿ ಅರ್ಥಪುಷ್ಟಿಗಾಗಿ ಪ್ರಸಿದ್ಧ ವಾಕ್ಯಗಳನ್ನು ಬಳಸಿಕೊಳ್ಳುವುದು ವಾಡಿಕೆ. ಆ ಅಭ್ಯಾಸ ಇಲ್ಲಿಯೂ ಉಚಿತವಾಗಿ ನಡೆದಿದೆ. ಅಧಿಕಾರವೇ ಸರ್ವಸ್ವವೆಂದು ನಂಬಿ, ಬದುಕಿನ ನಿಜವಾದ ಮೌಲ್ಯಗಳನ್ನು ದೂರದಲ್ಲಿಟ್ಟಿದ್ದ ಕಾವ್ಯನಾಯಕ "ತೊತ್ತುಗೆಲಸವ ಮಾಡು"ವುದರಲ್ಲೇ ತೃಪ್ತನಾಗಿದ್ದ. ಉದ್ಧೃತ ಸಾಲುಗಳಲ್ಲಿ ಬರುವ 'ಹೊತ್ತು' ಶ್ಲೇಷಾರ್ಥದಲ್ಲಿ ಬಳಕೆಯಾಗಿದೆ. ತನ್ನದೇ ರೀತಿಯ ದುಡಿಮೆಗೆ, ಅಂಥ ದುಡಿಮೆಗೆ ಮೀಸಲಿಟ್ಟ ಹೊತ್ತಿಗೆ ದಾಸನಾಗಿದ್ದ ವ್ಯಕ್ತಿಗೆ ಮುಳುಗುತ್ತಿರುವ ಸಂಜೆಯ 'ಹೊತ್ತ'ನ್ನು ಕವಿ ಹೀಗೆ ತೋರಿಸುತ್ತಾರೆ:

> ಅದೋ ಮುಳುಗುತಿದೆ ಹೊತ್ತು; ಈಗ ಅದು ಸೂಡು!
> ಪಡುವಣದ ಚಿತೆಯಲ್ಲಿ ಹಗಲ ಹೆಣ ಉರಿಯುತಿದೆ
> ನೋಡು ನೋಡು!

ಸಂಕೀರ್ಣಾನುಭವವನ್ನು ಧ್ವನಿಸುವ ಶಕ್ತಿಯುತ ಬರವಣಿಗೆಯ ಸಾಲುಗಳು ಇವು. ನಿಜವಾದ ಮೌಲ್ಯಗಳನ್ನರಿತು ಸಾರ್ಥಕವಾಗಿ ಬದುಕು ಸಾಗಿಸಿದ್ದರೆ ಅಂಥ ಬದುಕಿನ ನೆನಪು ಮುಪ್ಪಿನಲ್ಲಿ ಸಂತೋಷಕೊಡುತ್ತದೆ. ಇಲ್ಲದಿದ್ದರೆ ಆ ನೆನಪೇ ನಂಜಾಗುತ್ತದೆ; ಅದು ಬೆಂಕಿಯಂತೆ ಸುಡುತ್ತದೆ; ಅಸಾರ್ಥಕ ಬದುಕೆಂಬ ಹಗಲ ಹೆಣ, ಮುಪ್ಪು

ಎನ್ನುವ ಪಡುವಣದ ಚಿತೆಯಲ್ಲಿ ಉರಿಯುವಂತಾಗುತ್ತದೆ. ಇದು ಸ್ಥೂಲವಾಗಿ, ಸೂರ್ಯ ಮುಳುಗುವಾಗ ಪ್ರಕೃತಿಯಲ್ಲಿ ಕಂಡುಬರುವ ಉಜ್ವಲವಾದ ಹೊಂಬೆಳಕಿನ ವರ್ಣನೆ. ಈ ದೃಶ್ಯ ನೋಡುವ ಕಣ್ಣಿಗೆ, ಅನುಭವಿಸುವ ಮನಸ್ಸಿಗೆ ದಿವ್ಯವಾದ ಶಾಂತಿಯನ್ನು ಅವ್ಯಕ್ತವಾದ ತೃಪ್ತಿಯನ್ನು ನೀಡಬೇಕಾಗಿತ್ತು. ಆದರೆ ಕಾವ್ಯನಾಯಕನ ತಳಮಳ ದಿಂದಾಗಿ ಪ್ರಕೃತಿಯ ಸೊಬಗಿನ ಅನುಭವ ಬೇರೆಯಾಗಿದೆ. ಇಲ್ಲಿಯ ಅಭಿವ್ಯಕ್ತಿ ಕೇವಲ ಪ್ರಕೃತಿಯ ವರ್ಣನೆಯಾಗದೆ ಹೆಚ್ಚಿನ ಅರ್ಥವನ್ನು ಸ್ಫುರಿಸುತ್ತದೆ. ಇಲ್ಲಿಗೆ ಕವಿ ಮತ್ತು ಕಾವ್ಯ ನಾಯಕನ ಜೋಡಿ ಚಿಂತನೆ ಮುಗಿಯುತ್ತದೆ.

೪೭ನೇ ಸಾಲಿನಿಂದ, ಪ್ರಾರಂಭದಂತೆ ಕವಿಯ ಮಾತಿನಲ್ಲಿ ಕವನ ಮುಂದುವರಿಯು ತ್ತದೆ. ಅಸಾರ್ಥಕ ಬದುಕಿನ ವಿಫಲ ವ್ಯಕ್ತಿತ್ವಕ್ಕೆ ಪೂರಕವಾಗುವ ಪ್ರಕೃತಿ ಚಿತ್ರವನ್ನು ಈ ಸಾಲುಗಳಲ್ಲಿ ಕಾಣಬಹುದು :

ಮುಸಿ ನಿರಾಸೆಯ ನಭದ ಮೇಲೆ ಕರಿಗೆರೆಗಳನು
ಬರೆದ ತಂತಿಯ ಕಂಬ ಸಾಲುಸಾಲು ;
ತಲೆಗೆದರಿ ನಿಂತಿರುವ ಈಚಲಿನ ರೂಕ್ಷತೆಗೆ
ಹಿನ್ನೆಲೆಯ ರಚಿಸಿರಲು ಬೋಳು ಬಯಲು,
ದೂರ ದೂರದವರೆಗೆ
ಸಂಜೆ ಬಾನಿನ ಕೆಳಗೆ
ಮುಗಿವಿರದ ಪ್ರಶ್ನೆಯೊಲು ಮಲಗಿರುವ ಟಾರ್ ಬೀದಿಯಲ್ಲಿ
ಕೈ ಹಿಡಿದ ಸರಪಳಿಯ ಜಗ್ಗುತಿದೆ ಕರಿನಾಯಿ ಮುಂದೆ ಮುಂದೆ
ಹಿಡಿದ ಕೈ ಸಾಗುತಿದೆ ಹಿಂದೆ ಹಿಂದೆ !

ಕಾವ್ಯನಾಯಕನ ಸಂಜೆಯ ದಾರಿ ನಿರಾಸೆಯಿಂದ ಕೂಡಿರುವುದಲ್ಲದೆ ರೂಕ್ಷವೂ ಆಗಿದೆ. ಬಯಲು ಬೋಳಾಗಿದೆ. ಈ ಸ್ಥಿತಿಯಲ್ಲಿ ಪ್ರಯಾಣ ಸಾಗಿದೆ. ಕವನದ ಪ್ರಾರಂಭದ "ಸಂಜೆ **ಮುಗಿಲಿನ** ಕೆಳಗೆ", "ಸಂಜೆ **ಬಾನಿನ** ಕೆಳಗೆ" ಎಂದಾಗಿ ಸಂಜೆಯ ಆಧಿಕ್ಯ ವನ್ನು ಆಳವನ್ನು ಹೆಚ್ಚಿಸಿದೆ. "**ಹಾಸಿರುವ** ಟಾರ್‌ಬೀದಿ," "**ಮಲಗಿರುವ** ಟಾರ್ ಬೀದಿ"ಯಾಗಿದೆ. ಮಾತುಗಳ ಈ ಬದಲಾವಣೆ ಕಾವ್ಯಕ್ರಿಯೆಯ ಬೆಳವಣಿಗೆಯನ್ನು ಸೂಚಿಸುತ್ತವೆ. ಎಲ್ಲಿ ಪ್ರಾರಂಭವಾಯಿತೋ ಅಲ್ಲೇ ನಿಂತಂತೆ ಭಾಸವಾದರೂ ಕವನದ ಕ್ರಿಯೆ ನಿಂತಿಲ್ಲ. ಮುಗಿವಿರದ ಪ್ರಶ್ನೆಯ ಪ್ರತೀಕವಾದುದರಿಂದ ಇದು ನಿಲ್ಲುವಂತೆಯೂ ಇಲ್ಲ. ಕೊನೆಯ ಸಾಲುಗಳು ಪಲ್ಲವಿಯಂತೆ ಪುನರುಕ್ತಿಯಾಗಿವೆ. ಕವಿ ಶಿವರುದ್ರಪ್ಪನವರ ಕವನಗಳಲ್ಲಿ ಅಲ್ಲಲ್ಲಿ ಇಂಥ ಪುನರುಕ್ತಿ ಸಾಲುಗಳು ಕಂಡುಬರುತ್ತವೆ. ಇಲ್ಲಿ, ಇವು ನಿಲುಗಡೆಯ ಪಲ್ಲವಿಯ ಸಾಲುಗಳಾಗಿ ಮೂಡಿಲ್ಲ. ಕವನದಲ್ಲಿ, ನಿರಂತರವಾದ ಕ್ರಿಯೆ ಯನ್ನು ಇವು ಧ್ವನಿಸುತ್ತವೆ. ಕಾರಣ : ಈ ಕವನದ ವಸ್ತುವೇ ಅಂಥಾದ್ದು. ಇದು ವಿಫಲ ವ್ಯಕ್ತಿತ್ವದ ಮುಗಿವಿರದ ಪ್ರಶ್ನೆಯ ಸಂಜೆದಾರಿ. ತನ್ನ ಬದುಕನ್ನು ಕಬಳಿಸುವ ಕಾಲದ ಎಳೆತಕ್ಕೆ ಮನುಷ್ಯ ತನಗೆ ಇಷ್ಟವಿರಲಿ ಇಲ್ಲದಿರಲಿ ವಿಧಿಯಿಲ್ಲದೆ ಸಾಗಬೇಕು.

'ಸಂಜೆದಾರಿ' ಕವನ ಗದ್ಯಕ್ಕೆ ತೀರ ಹತ್ತಿರವಾಗಿದ್ದರೂ ಗದ್ಯವಾಗಿಲ್ಲ; ಸರಳ

ವಾಗಿದ್ದರೂ ಸಂಕೀರ್ಣತೆಯನ್ನು ಕಳೆದುಕೊಂಡಿಲ್ಲ. “ಕವಿತೆಯ ಮೊದಲ ಸಾಲಿನಿಂದ ಕೊನೆಯವರೆಗೂ ಅಭಿವ್ಯಕ್ತವಾಗುವ ವರ್ಣಮಯ ವಾತಾವರಣ ಹಾಗೂ ವಿಶಿಷ್ಟವಾದ ಉದ್ವೇಗ ಗಮನಾರ್ಹವಾಗಿದೆ.” ಯಾವ ತಡೆಯೂ ಇಲ್ಲದೆ ಕವನ ನಿರರ್ಗಳವಾಗಿ ಹರಿಯುತ್ತದೆ. ಇಲ್ಲಿ ಬಳಸಿರುವ ಉಪಮೆ ಉಪಮಾನಗಳು, ವರ್ಣಮಯ ಶಬ್ದ ಚಿತ್ರಗಳು ವಾಸ್ತವವಾಗಿವೆ. ವಸ್ತುವಿನ್ಯಾಸದ ನಾವೀನ್ಯತೆಯಿಂದ, ಸಹಜ ಸುಂದರ ಅಭಿವ್ಯಕ್ತಿಯಿಂದ ‘ಸಂಜೆದಾರಿ’ ಉತ್ತಮ ಕವನಗಳ ಗುಂಪಿಗೆ ಸೇರುತ್ತದೆ.

# ಸಂಜೆ ದಾರಿ

ಕೈ ಹಿಡಿದ ಸರಪಳಿಯ ಜಗ್ಗುತಿದೆ ಕರಿನಾಯಿ,
ಹೊಳೆ ಹೊಳೆವ ಕೆಂಗಣ್ಣು ಜೋಲ್ವನಾಲಗೆ ಬಾಯಿ !
ಸಂಜೆ ಮುಗಿಲಿನಕೆಳಗೆ
ದೂರದೂರದವರೆಗೆ
ಮುಗಿವಿರದ ಪ್ರಶ್ನೆಯೊಲು ಹಾಸಿರಲು ಟಾರ್ ಬೀದಿ,
ಕೈ ಹಿಡಿದ ಸರಪಳಿಯ ಜಗ್ಗುತಿಪೆ ಕರಿನಾಯಿ ಮುಂದೆ ಮುಂದೆ
ಹಿಡಿದ ಕೈ ಸಾಗುತಿದೆ ಹಿಂದೆ ಹಿಂದೆ!

ಹಗಲೆಲ್ಲ ಗಾಡಿಯನೆಳೆದು ಸೋತು ಸುಸ್ತಾದ
ಜಟಕಾ ಕುದುರೆಯಂತೆ,
ಸೋತ ದಳಪತಿಯಂತೆ,
ಕೆನ್ನವಿರ ತಲೆಗೆದರಿ ಮುಳುಗುತಿಹನಲ್ಲಿ ಅದೊ
ಮುದಿಯ ಸೂರ್ಯ,
ಮುಗಿಲ ಕೊತ್ತಳದಲ್ಲಿ ವೊಳಗುತಿದೆ ಆಗಲೇ
ಇರುಳ ತೂರ್ಯ !

ಅಳಿದುಳಿದ ಬೆಳಕಿನಲಿ ತಲೆಯನೆತ್ತಿಹುದಲ್ಲಿ
ಆಫೀಸು ಕಟ್ಟಡ ;
ಈಗಲೋ ಆಗಲೋ ನಿದ್ದೆಯಾಳಕೆ ಇಳಿವ
ಹಸುಳೆ ಕಣ್‌ಬಿಡುವಂತೆ, ಕಿಟಕಿ ಗಾಜಿನ ಹೊಳಪು,
ನೂರಾರು ನೆನಪು :
ಓ ಅಲ್ಲೆ, ಆ ಮಹಡಿಯಲ್ಲೆ ಇದೆ
ಆಫೀಸು ರೂಮು.
ಬೆಲ್ಲನೊತ್ತಿದರೆ ಸಾಕು, ಬಂದು ನಿಲ್ಲುತಿದ್ದನು ಪ್ಯೂನು.

ಟೇಬಲ್ಲ ಮೇಲೆಯೇ ತಿರುಗುತಿದ್ದಿತು ಫ್ಯಾನು.
ನೂರಾರು ಜನ ಬಂದು ಹೊಡೆಯುತಿರಲು ಸಲಾಮು,
ಜರ್ಬಿತ್ತು, ಅಧಿಕಾರವಿತ್ತು ; ಕೈಕೆಳಗಿನವರನ್ನು
ನಡುಗಿಸುವ ಬಲವಿತ್ತು ;
ಎಲ್ಲವೂ ಇತ್ತು ; ಮೊನ್ನೆದಿನ ತಾನೇ ಇತ್ತು ;
ಈಗಿಲ್ಲ ; ಅದು ಹಳೆಯ ನೆನಪು !

* * *

ಮೂವತ್ತು ವರುಷದ ದುಡಿತ ;
ಅಧಿಕಾರಕ್ಕೆ, ದರ್ಪಕ್ಕೆ, ಬಿಂಕಕ್ಕೆ
ಬೆಲೆಗೊಟ್ಟ ಜನದ ತಾಳದ ಬಡಿತ
ಅದರೊಡನೆ ಕುಣಿತ !

ಯಾವ ಪುರುಷಾರ್ಥವನು ಪಡೆದುದಾಯಿತು ಜೀವ ?
ಇತ್ತು, ಅವಕಾಶವಿತ್ತು ; ತಿಳಿವಿತ್ತು ; ಬೆಳಕಿತ್ತು.
ಎದೆಯ ಹೊಸ್ತಿಲಿನಲ್ಲೆ ಕಾಯುತ್ತಿದ್ದನು ದೇವ,
"ಒಳಗೆ ಬರಲಪ್ಪಣೆಯೆ ?" ಎಂಬ ದನಿ ಕೇಳಿದರು
ಅದು ಬೇಡವಾಗಿತ್ತು.
"ಹೊತ್ತು ಹೋದಾದಮೇಲೆ ಯಾರು ಬಲ್ಲರೊ ನಿನ್ನ ?
ಹೊತ್ತು ಹೋಗದ ಮುನ್ನ
ಮೃತ್ಯು ಮುಟ್ಟದ ಮುನ್ನ
ತೊತ್ತುಗೆಲಸವ ಮಾಡು...."
ಅದೋ ಮುಳುಗುತಿದೆ ಹೊತ್ತು ; ಈಗ ಅದು ಸೂಡು !
ಪಡುವಣದ ಚಿತೆಯಲ್ಲಿ ಹಗಲ ಹೆಣ ಉರಿಯುತಿದೆ
ನೋಡು ನೋಡು !

* * *

ಮುಸಿ ನಿರಾಸೆಯ ನಭದ ಮೇಲೆ ಕರಿಗೆರೆಗಳನು
ಬರೆದ ತಂತಿಯ ಕಂಬ ಸಾಲು ಸಾಲು ;
ತಲೆಗೆದರಿ ನಿಂತಿರುವ ಈಚಲಿನ ರೂಕ್ಷತೆಗೆ
ಹಿನ್ನೆಲೆಯ ರಚಿಸಿರಲು ಬೋಳು ಬಯಲು,
ದೂರ ದೂರದವರೆಗೆ

ಸಂಜೆ ಬಾನಿನ ಕೆಳಗೆ
ಮುಗಿವಿರದ ಪ್ರಶ್ನೆಯೊಲು ಮಲಗಿರುವ ಟಾರ್ ಬೀದಿಯಲ್ಲಿ
ಕೈ ಹಿಡಿದ ಸರಪಳಿಯ ಜಗ್ಗುತಿದೆ ಕರಿನಾಯಿ ಮುಂದೆ ಮುಂದೆ
ಹಿಡಿದ ಕೈ ಸಾಗುತಿದೆ ಹಿಂದೆ ಹಿಂದೆ!

## ಚಿ. ಶ್ರೀನಿವಾಸರಾಜು

# 'ನಿರ್ಧಾರ'

೧

ಮಾನವನ ಎಲ್ಲ ಚಿಂತನೆಗಳ ಹಿಂದೆ ಇರುವುದು ಎರಡು ಶಕ್ತಿಗಳು. ಒಂದು ಹಸಿವು, ಇನ್ನೊಂದು ಸಾವು. ಇವನ್ನು ತೃಪ್ತಿಪಡಿಸಲು, ಗೆಲ್ಲಲು ನಿರಂತರ ಹೋರಾಟ ನಡೆಸುತ್ತಿದ್ದಾನೆ. ಇದರಿಂದ ಅನೇಕ ವಾದಗಳು, ತತ್ವಗಳು, ಮೌಲ್ಯಗಳು ಹುಟ್ಟಿಕೊಂಡಿವೆ. ಬದಲಾಗುತ್ತಿವೆ.

ಸಾಮಾನ್ಯವಾಗಿ ಎಲ್ಲ ತತ್ವಜ್ಞಾನಿಗಳು ದೇಹ, ಮನಸ್ಸು, ದೇವರು ಮತ್ತು ಆತ್ಮಗಳ ವಿಚಾರವಾಗಿ ಚರ್ಚೆ ಮಾಡಿದ್ದಾರೆ. ದರ್ಶನಗಳನ್ನು ರೂಪಿಸುತ್ತಿದ್ದಾರೆ. ವ್ಯಾಖ್ಯಾನಗಳನ್ನು ಬರೆದಿದ್ದಾರೆ. ಆದರೆ ಜಿಜ್ಞಾಸೆ ಬಗೆಹರಿದಿಲ್ಲ. ಇಂದಿಗೂ ಪರ, ಬ್ರಹ್ಮ, ಮೋಕ್ಷ, ಶೂನ್ಯ ಮುಂತಾದ ಶಬ್ದಗಳ ಅಸ್ಪಷ್ಟ ಲೋಕದಲ್ಲಿ ವಿಹರಿಸುವುದು ಔಚಿತ್ಯಪೂರ್ಣವೇನೂ ಅಲ್ಲ. ನಿಜವಾಗಿ ನೋಡಿದರೆ ಇವು ತಿಳುವಳಿಕೆಗೆ ಮೀರಿದ ಸಂಗತಿಗಳಿಗೆ ಕೊಡುವ ಹೆಸರುಗಳಾಗಿವೆ.

ಮಾನವ ತಾನು ಪ್ರಕೃತಿಯ ಒಂದು ಅಂಶವೆಂಬುದನ್ನು ಮರೆತು ತನ್ನಲ್ಲೇ ದ್ವಂದ್ವಗಳನ್ನು ನಿರ್ಮಿಸಿಕೊಂಡು ಬದುಕುತ್ತಿದ್ದಾನೆ. ವೈಜ್ಞಾನಿಕ ಸಂಶೋಧನೆಗಳು ಮಾನವನ ಸ್ಥಾನವನ್ನು ಈ ಪ್ರಕೃತಿಯಲ್ಲಿ ಹೆಚ್ಚು ಹೆಚ್ಚು ಸ್ಪಷ್ಟಪಡಿಸುತ್ತಿವೆ. ಆದರೆ ಶತಶತಮಾನಗಳಿಂದ ಸತತವಾಗಿ, ಮಾನವನನ್ನು 'ಮುಕ್ತ'ಮಾಡುವ ಸಿದ್ಧಾಂತಗಳು ತಳಹದಿಯಿಲ್ಲದ ತರ್ಕದಲ್ಲಿ ಬೆಳೆದು ಇಂದಿಗೂ ಲಲಿತಕಲೆಗಳಲ್ಲಿ ಪ್ರಭಾವಶಾಲಿಯಾಗಿವೆ.

ಇಂದು ವಿಜ್ಞಾನದಲ್ಲಿ ದೇಹ-ಮನಸ್ಸು; ಚೇತನ (Living)—ಅಚೇತನ (non-Living); ವಸ್ತು (matter)—ಶಕ್ತಿ (Energy)ಯ ಅಂತರಗಳು ಕರಗಿಹೋಗಿವೆ. ಈ ರೀಯ ದ್ವೈತಗಳಿಗೆ ಇಂದು ವಿಜ್ಞಾನದ ಒಪ್ಪಿಗೆಯಿಲ್ಲ. ಪ್ರಕೃತಿಯ ಪ್ರತಿಯೊಂದರ ನಿರ್ಮಾಣದಂತೆ, ಮಾನವನ ದೇಹವೂ ಕೂಡ ಮೂಲಧಾತು (Elements)ಗಳಿಂದ ನಿರ್ಮಾಣವಾಗಿದ್ದು ಎಂಬ ನಿಲುವಿಗೆ ಬಂದಿರುವಾಗ ಹಿಂದಿನ ತಪ್ಪು ತಿಳಿವಳಿಕೆಯನ್ನು ಹೊಸ ಅರಿವು ಮೂಡಿದ ಹಾಗೆ ವಿಮರ್ಶಿಸಬೇಕಾಗುತ್ತದೆ, ತಿದ್ದಿಕೊಳ್ಳಬೇಕಾಗುತ್ತದೆ. ಮೂಲಧಾತುಗಳ ಕ್ರಮಬದ್ಧ ರಾಸಾಯನಿಕ ಸಂಯೋಗದಿಂದ ಜೀವ ಕಾಣಿಸಿಕೊಳ್ಳುತ್ತದೆ. ಜೀವ-ಅಜೀವ ಅವಿಚ್ಛಿನ್ನತೆಗೆ ವೈರಸ್ ಸಂಕೇತವಾಗಿದೆ. ಅಣುಮಟ್ಟದಲ್ಲಿ ಅಜೀವ

ದಿಂದ ಜೀವಕ್ಕೆ ದಾಟಿದ ಹಂತ ಏರ್ಪಟ್ಟಿರುವಾಗ, ಜೀವ-ಅಜೀವಗಳಲ್ಲಿ ಮೂಲಭೂತ ವ್ಯತ್ಯಾಸಗಳಿಲ್ಲವೆಂಬುದು 'ಜೀನಿ' ಸಂಶ್ಲೇಷಣೆಯಿಂದ ಸ್ಪಷ್ಟವಾಗಿರುವಾಗ 'ಐದು ಮಂದಿಯ'* ಲೋಕದಲ್ಲಿರುವುದು ಸರಿಯಲ್ಲ.

ನಮ್ಮಲ್ಲಿ ವೈಜ್ಞಾನಿಕ ತಿಳುವಳಿಕೆ, ಮನೋಧರ್ಮ ಲಲಿತಕಲೆಗಳನ್ನು ಅಭ್ಯಾಸ ಮಾಡಿದವರಿಗೆ ಇರುವುದು ವಿರಳ. ತಮ್ಮ ಮೇಲೆ ಪರೋಕ್ಷವಾಗಿ, ಅನಿವಾರ್ಯವಾಗಿ ಉಂಟಾಗಿರುವ ಪ್ರಭಾವಗಳನ್ನು ಅರಗಿಸಿಕೊಂಡು, ಹೊಸ ಅರಿವಿನಿಂದ ರೂಪಿತವಾದ ಸ್ವಯಾರ್ಜಿತ ನಿಲುವನ್ನು ತಮ್ಮ ಕೃತಿಗಳಲ್ಲಿ ಕಾಣಿಸಿರುವುದು ಅಪರೂಪ. ಇದು ಕಾಣಿಸದ ಕೃತಿಗಳಿಗೆ ಆರೋಗ್ಯ, ಆಯುಷ್ಯ ಕಡಿಮೆ.

೨

ಪ್ರಾ|| ಜಿ. ಎಸ್.ಶಿವರುದ್ರಪ್ಪನವರ 'ನಿರ್ಧಾರ' ಕವನವನ್ನು ಎರಡು ದೃಷ್ಟಿಯಿಂದ ನೋಡಬಹುದು :

(ಅ) ಅಂದಿನ ಅವರ ಜೀವನ ಮನೋಧರ್ಮ
(ಆ) ಅಂದಿನ ಅವರ ಕಾವ್ಯಧೋರಣೆ

ಈ ಕವನದ ಪ್ರಾಯೋಗಿಕ ವಿಮರ್ಶೆ ಕವಿಯ ಅಂದಿನ ಮನಸ್ಥಿತಿಯನ್ನು ವಿಶ್ಲೇಷಿಸು ವುದಕ್ಕೆ ಸೀಮಿತವಾಗಿದೆ. ಈ ಕವನದ ಅನಂತರ ಕವಿಯಲ್ಲಿ ಕಂಡುಬಂದಿರುವ ಬೆಳವಣಿಗೆ, ಈ ಲೇಖನದ ಸರಹದ್ದನ್ನು ಮೀರಿದ್ದು.

'ನಿರ್ಧಾರ' ಕವನದ ಅಧ್ಯಯನದಿಂದ ಕವಿಯ ಮೇಲೆ ಪ್ರಭಾವ ಬೀರಿದ ಶಕ್ತಿಗಳ ಪರಿಚಯದ ಜೊತೆಗೆ, ಕವಿಯ ಮನೋಧರ್ಮದ ರೀತಿಯೂ ಸ್ಪಷ್ಟವಾಗುತ್ತದೆ. ಈ ಕವನ ಬರೆದದ್ದು ಸ್ವಾತಂತ್ರ್ಯದ ಸಂಧಿಕಾಲದಲ್ಲಿ. ಇನ್ನೂ ಆದರ್ಶ, ಹುರುಪು ಕರಗದೆ ಇದ್ದ ಕಾಲದಲ್ಲಿ. ಅದು ಭಾರತದ ರೀತಿ-ನೀತಿಗಳ ಪುನರುಜ್ಜೀವನ ಕಾಲ. ಆಗ ವೈದಿಕ ಧರ್ಮವನ್ನು ಆಧುನೀಕರಣ ಮಾಡುವ ಕೆಲಸ ನಡೆಯುತ್ತಿತ್ತು. ಸಾಮಾನ್ಯವಾಗಿ ದೇಶದ ನಾಯಕರು, ಬುದ್ಧಿಜೀವಿಗಳು ಹೀಗೆ 'ಹೊಸತು' ಮಾಡುವ ವಾತಾವರಣದಲ್ಲಿ ಇದ್ದವರು. ಅಂದು ಕನ್ನಡನಾಡಿನಲ್ಲಿಯೂ ಇದನ್ನು ಕಾಣಬಹುದಿತ್ತು. ಶ್ರೀ ಕುವೆಂಪು ರವರ ಕಾವ್ಯದ ಛಾಯೆ ಅಂದಿನ ಮೈಸೂರು ತರುಣ ಕವಿಗಳನ್ನು ಆವರಿಸಿತ್ತು. ಇಂತಹ ವೈದಿಕ ಪುನರುತ್ಥಾನದ ಪರಿಸರದಲ್ಲಿ ಪ್ರಾ|| ಜಿ. ಎಸ್. ಶಿವರುದ್ರಪ್ಪನವರ ಕಾವ್ಯದ ಉದಯ ಆಗಿದ್ದು, ಈ ನೆಲೆಯಿಂದ ಹಳೆಯದನ್ನು ಪರಿಷ್ಕರಿಸಿ ಹೊಸ ಕಾಲದ ಅಗತ್ಯ ಗಳಿಗೆ ಉಚಿತವಾಗಿ ಪುನರ್ರಚಿಸುವುದು ಜಿ.ಎಸ್.ಎಸ್. ಅವರ ಮನೋಧರ್ಮಗಳಲ್ಲಿ

* (1) ಕಣ್ಣು, ಕಿವಿ, ಮೂಗು, ನಾಲಗೆ ಮತ್ತು ಚರ್ಮ.
(2) ಶಬ್ದ, ಸ್ಪರ್ಶ, ರಸ, ರೂಪ ಮತ್ತು ಗಂಧ.
(3) ಭೂಮಿ, ಆಕಾಶ, ಅಗ್ನಿ, ಜಲ ಮತ್ತು ಗಾಳಿ.

ಒಂದಾಯಿತು. ನವ್ಯಕಾವ್ಯದ ಉತ್ಕರ್ಷ ಇವರ ಕಾವ್ಯದ ಬಹಿರಂಗವನ್ನು ಪರಿವರ್ತಿಸಿದರೂ ಅಂತರಂಗ ಹಾಗೇ ಉಳಿಯಿತು.

ಈ ಕವನದಲ್ಲಿ ಪಂಚಭೂತಗಳು ಮತ್ತು ಪಂಚೇಂದ್ರಿಯಗಳ ಗೆಳೆತನ ಹಗೆತನದ ವಿಶ್ಲೇಷಣೆಯಿದೆ. ಆತ್ಮದ ಅನುರತೆಯನ್ನು ಒತ್ತಿಹೇಳುವ ಧೋರಣೆ, ನಿರ್ಧಾರವಿದೆ. ಪಂಚೇಂದ್ರಿಯಗಳು ನಮ್ಮ ಬದುಕನ್ನು ಅರ್ಥಮಾಡಿಕೊಳ್ಳಲು ಬೇಕಾಗುವ ಮುಖ್ಯ ಸಾಧನಗಳು. ಅವು ವೈರಿಗಳಾಗುವುದು ಸಾಧ್ಯವಿಲ್ಲ. ಅವುಗಳಿಂದ ಬೆಳೆಯುವ ಮನಸ್ಸು, ಬುದ್ಧಿ ಹೇಗೆ ತಾನೆ ವೈರಿಗಳಾದಾವು? ದೇಹದ ಅವಿಚ್ಛಿನ್ನ ಭಾಗವಾಗಿರುವ ಮನಸ್ಸು, ಆತ್ಮ(?)ವನ್ನು ಬೇರ್ಪಡಿಸಿ ನೋಡುವುದೇ ಗೊಂದಲದ ಪ್ರಶ್ನೆ. 'ಮುಕ್ತಿ' ಪಯಣಕ್ಕೆ ಈ 'ಪಂಚ'ಗಳಿಂದ ಅಡ್ಡಿ ಆತಂಕ ಎನ್ನುವುದು ಸರಿಯೆ? ಈ ದೇಹದ ಅಖಂಡತೆಯನ್ನು ಖಂಡವಾಗಿ ನೋಡಿ ಇದು ಬೇರೆ—ಅದು ಬೇರೆ ಎಂಬ ಶತ್ರುತ್ವ ಮಿತ್ರತ್ವ ಭಾವನೆಯಿಂದ ಮಾಡುವ ಕೃತಕ ವಿಂಗಡನೆ ಕಸರತ್ತಿನ ಕೆಲಸ. ನಶ್ವರ ಶರೀರದಲ್ಲಿ ಅವಿನಾಶಿ 'ಆತ್ಮ' ಮರೆಹೋಗಲು ಕಾರಣವೇನು ಎಂಬುದು, ಇಂದಿಗೂ ಯಾವ ತತ್ವಜ್ಞಾನಿಗೂ ಬಿಡಿಸಲಾಗದ ಒಡಪು.

೩

ಈ ಕವನದಲ್ಲಿ ಮುಖ್ಯವಾಗಿ ನಾಲ್ಕು ಹಂತಗಳಿವೆ.

(ಅ) ಐದು ಮಂದಿಯ ಹಾರೈಕೆ
(ಆ) ಅಪನಂಬಿಕೆಯ ಶೃತಿ
(ಇ) ಅವರೊಡನೆ ಸೆಣಸಾಟ
(ಈ) ನಿಜವಾದ ಅರಿವು?

ಅ

ಕಂಡಿಲ್ಲವೇ ನೀವು?
ನಮ್ಮ ಸುತ್ತಲೂ ಸದಾ ಐದು ಮಂದಿಯ ಪಹರೆ—
ಹೋದಲ್ಲಿ, ಬಂದಲ್ಲಿ, ನಿಂತಲ್ಲಿ, ಕುಳಿತಲ್ಲಿ
ನಮ್ಮ ಮೇಲೆ ಇವರ ಹಸಿದ ಕಣ್ಣು!

ಕವನದ ಪ್ರಾರಂಭದಲ್ಲಿಯೇ ಉಪದೇಶದ ಧೋರಣೆಯನ್ನು ಕಾಣಬಹುದು. ತಾನು ಕಂಡದ್ದನ್ನು ಬೇರೆಯವರು ಕಂಡುಕೊಳ್ಳುವಂತೆ ಹೇಳುತ್ತಿದ್ದಾರೆ. ಇಲ್ಲಿ ಐದು ಮಂದಿಯೆಂದರೆ ಪಂಚಭೂತಗಳು ಮತ್ತು ಪಂಚೇಂದ್ರಿಯಗಳು. 'ನಮ್ಮ ಮೇಲೆ ಇವರ ಹಸಿದ ಕಣ್ಣು!' ಎನ್ನುವೆಡೆ ಕವಿಗೆ ಪ್ರಾರಂಭದಲ್ಲಿಯೇ ಇವುಗಳ ಮೇಲೆ ಇರುವ ಅನುಮಾನ, ಮೋಸದ ಅರಿವು ಸ್ಪಷ್ಟವಾಗಿದೆ. ಅಂದರೆ ಕವಿ ಒಂದು ನಿಲುವಿಗೆ ಬಂದು ತನ್ನ 'ನಿರ್ಧಾರ'ದಿಂದಲೇ ಕವಿತೆಯನ್ನು ಪ್ರಾರಂಭಮಾಡಿದ್ದಾರೆ. ಇನ್ನು ಉಳಿದ ಭಾಗವೆಲ್ಲ ಅದನ್ನು ಕುರಿತ ವ್ಯಾಖ್ಯಾನ.

ಹುಟ್ಟಿ ಕಣ್ ಬಿಟ್ಟಂದು ಮೈಗೆ ತೊಟ್ಟಿಲನಿತ್ತು
ತಾಯ ಕೊರಳಲಿ ಕುಳಿತು ಹಾಡಿದವರು.
ನೆಲದ ಹಸುರೊಳು ಮುಗಿಲ ಮಳೆಹನಿಯ ದಾರದಲಿ
ಹೂ ಕಸೂತಿಯ ಹೆಣೆದು ಹಾಸಿದವರು.
ಬೆಳಗಾಗ ಬಾಗಿಲಲಿ ತುಂಬು ಕೆಚ್ಚಲ ಕರೆದು
ತುಟಿಗೆ ಕೊಟ್ಟವರು.
ಹೆಜ್ಜೆ ಹೆಜ್ಜೆಗೂ ನಿಂತು ಕೈಹಿಡಿದು ಮೇಲೆತ್ತಿ
ಚಂದುಮಾಮನ ಕನಸ ಬಿತ್ತಿದವರು.

ಭಾಗದಲ್ಲಿ ಅವುಗಳಿಂದ ಜೀವನಕ್ಕೆ ಬೇಕಾಗುವ ಲಾಲನೆ, ಆಕರ್ಷಣೆ, ಪೋಷಣೆ ಮತ್ತು ರಕ್ಷಣೆ ರೀತಿಯ ನಾಲ್ಕು ಚಿತ್ರಗಳನ್ನು ಕೊಟ್ಟಿದ್ದಾರೆ. 'ತಾಯಿ ಕೊರಳು' 'ಹೂ ಕಸೂತಿ' 'ಮಳೆಹನಿಯ ದಾರ' 'ಚಂದಮಾಮನ ಕನಸು' ಪದಗಳಲ್ಲಿ ಅವುಗಳ ವಿಶ್ವಾಸದ ಮಧುರ ಬಾಂಧವ್ಯದ ಸುಂದರ ಚಿತ್ರವನ್ನು ಬಿಡಿಸಿದ್ದಾರೆ. ಹೀಗೆ ಬಾಳಿಗೊಂದು ಕನಸು ಬಿತ್ತಿ ಬಾಳಿನಲ್ಲಿ ಚೈತನ್ಯ, ಕುತೂಹಲ ತುಂಬಲು ಈ ಐದು ಮಂದಿ ಸಹಾಯಮಾಡಿದ್ದಾರೆ ಎಂಬುದನ್ನು ಒಪ್ಪಿಕೊಂಡಿದ್ದಾರೆ. ಜೀವನದಲ್ಲಿ ಸರಿಯಾಗಿ ಕಾಲೂರುವವರೆಗೆ ಇವರ ನೆರವಿದೆ ಎಂಬುದನ್ನು ಇಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ. 'ಪಂಚ'ರು ಇಡೀ ಪ್ರಕೃತಿಯನ್ನು ಆವರಿಸಿದ್ದಾರೆ. ಅಂತಹ ಪ್ರಕೃತಿಯ ಮಡಿಲಲ್ಲಿ ನಾನು ಬೆಳೆದೆ ಎಂಬ ನಂಬಿಕೆ ಇದೆ.

೨

ನಾನು ನಂಬಿದೆನಿವರ : ಬಣ್ಣದಲಿ ಬೆರಗಿನಲಿ
ಬೆರೆದರಿವರು.

ಇಲ್ಲಿಂದಲೇ ಅಪನಂಬಿಕೆಯ ಶ್ರುತಿ ಪ್ರಾರಂಭವಾಗುತ್ತದೆ.

ಮರ ಮರದ ತುಂಬ ಹಕ್ಕಿಯ ಲಾಲಿ; ತಳಿರಿನ ಜೋಲಿ;
ಹೂವಿನ ಹೋಳಿ–ಬುಗ್ಗೆ ಬುಗ್ಗೆ !
ಕಂಡ ಕಂಡೆಡೆಯಲ್ಲಿ ಕೈಚಾಚಿ ನುಗ್ಗಿದೆನು
ಇವರ ಜೊತೆಗೆ ;
ನೂರು ಕೊಂಬೆಗೆ ನೆಗೆದು, ಗುಡ್ಡಬೆಟ್ಟವನೇರಿ
ಮೋಡವಾಗಲೆದು,
ದೂರ ಕಡಲಿಗೆ ಬೆದರಿ, ಸುಳಿದು ಸುತ್ತಿ,
ಕಡೆಗೆ ಕಾಮನಬಿಲ್ಲ ಜಾರುಗುಪ್ಪೆಯನಾಡಿ
ಬಂಡೆ ಬಂಡೆಯ ಬುಡಕೆ ಬಂದು ನಿಂತೆ,
ಹೆಗಲ ಮೇಲೇರಿತ್ತು ದೊಡ್ಡ ಕಂತೆ.

ಈ ಭಾಗದಲ್ಲಿ ಐದು ಮಂದಿಯ ಮಾಯಾಲೋಕದಲ್ಲಿ ಪ್ರವೇಶಮಾಡಿ, ಕೊನೆಗೆ ಭ್ರಮನಿರಸನಗೊಂಡ ಚಿತ್ರವಿದೆ. ಹರ್ಷ, ಉತ್ಸಾಹ, ಅನ್ವೇಷಣೆ, ಆಸೆಗಳು ಮರೀಚಿಕೆಗಳಾ

ಗುವ ಪರಿಸ್ಥಿತಿ ಬರುತ್ತದೆ. ಕಲ್ಪನೆಗಳ ಕನಸಿನಿಂದ ವಾಸ್ತವಲೋಕಕ್ಕೆ ಇಳಿದಾಗ ನಿರಾಶೆ, ಜಡತೆ ಎದುರಾಯಿತು ಎಂದಿದ್ದಾರೆ. ಅಂದರೆ ಜೀವನದಲ್ಲಿ ಮಧುರತೆಯ ಬದಲು 'ಕಹಿ' ಕಾಣಿಸಿಕೊಂಡಾಗ ಉಂಟಾಗುವ ಮನೋರೂಪ ಪರಿವರ್ತನೆಯನ್ನು ಕಾಣ ಬಹುದು. 'ಹೆಗಲ ಮೇಲೇರಿತ್ತು ದೊಡ್ಡ ಕಂತೆ' ಸಾಲಿನಲ್ಲಿ ಕಳೆದ ಆಯುಷ್ಯವನ್ನು, ಐದು ಮಂದಿಯ ಪೆಸೆಯಿಂದ ಸಂಚಯನಗೊಂಡ ಪಾಪದ ಹೊರೆಯನ್ನು ಸೂಚಿಸುತ್ತಾರೆ. ಅವರ ಜೊತೆಯಲ್ಲಿ ಕಳೆದ ದಿನಗಳು ವ್ಯರ್ಥ, ನಿಷ್ಫಲ ಎಂಬುದನ್ನು ತಿಳಿಸಿದ್ದಾರೆ.

ನಸುನಕ್ಕರೈದು ಜನ-
ತಂತು ಕೃತಿಯಂಥ ನಗು, ನವುರು ನವುರು

ಇಲ್ಲಿ ಸೋಲನ್ನು ಒಪ್ಪಿಕೊಂಡು ಅವರ ಕೊಂಕುನಗೆಯ ರೀತಿಯನ್ನು ಹೇಳಿದ್ದಾರೆ. ಆ ಐದು ಜನ ಉದ್ದೇಶಪೂರ್ವಕವಾಗಿ ಮೋಸಮಾಡಿದರು ಎಂಬ ಧ್ವನಿಯಿದೆ.

ಗೋಡೆಯ ಮೇಲೆ ಹಲ್ಲಿಯ ನೆರಳು ;
ನೆರಳಲ್ಲ, ಗಡಿಗೆ ಕಣ್ಣಿನ ಸರಳು ಸೆಳೆದಿತ್ತು ದೂರ ಹಾರುವ ನೊಣವ
ಅಂಟು ನಾಲಗೆ ಚಾಚಿ !
ಮನೆಯಂಗಳದಿ ಆಗ ತಾನೇ ಅರಳಿ ಮುದ್ದಾದ ಮಲ್ಲಿಗೆಗೆ
ಬಾಯಿ ಹಾಕಿತ್ತೊಂದು ಕಪ್ಪು ಕೋಣ.
ಮುದಿಯ ಮರ ಲಟಕಟಿಸಿ ಉರುಳಿತ್ತು
ಸೆಳೆದಿತ್ತು ಬಿರುಗಾಳಿಯುರುಳು,
ಅಲ್ಲೆಲ್ಲ ಕಾಣಿಸಿತು ಇವರ ನೆರಳು !

ಐದು ಮಂದಿಯಿಂದ ಉಂಟಾಗುವ ಅಪಾಯದ ಸೂಚನೆಯನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ. 'ಹಲ್ಲಿಯ ನೆರಳು' 'ನೊಣದ ಅಂಟುನಾಲಗೆ' 'ಕಪ್ಪು ಕೋಣ' ಎನ್ನುವಲ್ಲಿ ಅಪಶಕುನ, ಬದುಕಿನ ನಶ್ವರತೆ ಮತ್ತು ಸಾವಿನ ಸೂಚನೆಯನ್ನು ನೀಡಿದ್ದಾರೆ. ಸಾವು ಬಂದು ಅಪ್ಪಳಿಸಿದಾಗ ಉಂಟಾಗುವ ದುರಂತ ಚಿತ್ರವಿದೆ. ಹೀಗೆ ಐದು ಮಂದಿಯ ನಿಜರೂಪಿನ ರುದ್ರ ದರ್ಶನವನ್ನು ವಿಸ್ಮಯದಿಂದ ಕಂಡಿದ್ದಾರೆ. ಇವರ ಸೃಷ್ಟಿ, ಸ್ಥಿತಿ, ಲಯದ ವರ್ಣನೆ, ವ್ಯಾಖ್ಯಾನ ಹೀಗೆ ಮುಕ್ತಾಯಗೊಳ್ಳುತ್ತದೆ.

೩

ಬಾಡಿಗೆಯ ಮನೆಯಿಂದ ಬಾಡಿಗೆಯ ಮನೆಗೆ ನಡೆದಿರುವೆ
ಇರುವ ಮನೆಯನು ಮೊದಲು ಸರಿಮಾಡಿಕೋ.
ಕಸಗುಡಿಸು : ದೀಪವ ಹಚ್ಚು : ಈ ಐವರನು ನಂಬದಿರು
ಆದಷ್ಟು ದೂರವಿರಿಸು—

ಇವು ಎಚ್ಚರಿಕೆಯ ಉಪದೇಶದ ಮಾತುಗಳು. ಇಲ್ಲಿ ಕಾಣುವುದು ಪ್ರಭುಸಂಹಿತದ ಆಜ್ಞೆ. 'ಈ ಐವರನು' ಮೀರಿದ ಶಕ್ತಿಯನ್ನು ಸ್ವಾಗತಿಸು, ಆರಾಧಿಸು ಎಂದು ಹೇಳು

ವುದರ ಜೊತೆಗೆ ನಶ್ವರದಲ್ಲಿ ಶಾಶ್ವತವನ್ನು ಅರಸುವ ನಂಬಿಕೆಯಿದೆ. ಈ ಹೇಳಿಕೆಗಳಿಗೆ ಆಕರಗಳನ್ನು ಕವನದ ಮುಂದಿನ ಹಂತದಲ್ಲಿ ಕಾಣಬಹುದು.

ಬಿಡಲಿಲ್ಲ ಇವರೆನ್ನ,
ಸದಾ ಜೊತೆಗೂಡಿ ನನ್ನೊಡನೆ ಜಗ್ಗುವುದೆ ಕೆಲಸ
ದೂರ ಹಾರುವ ಪಟವ ಮತ್ತೆ ಮತ್ತೆ!

ಊರ್ಧ್ವದ ಕಡೆ ಗಮನವಿರುವ ಚೇತನವನ್ನು ಈ ಐದು ಮಂದಿ ಅಧೋಗತಿಗೆ ಪದೇ ಪದೇ ಎಳೆಯುತ್ತಿದ್ದಾರೆ ಎಂಬ ಅಳಲಿದೆ. ಇವರಿಂದ ತಪ್ಪಿಸಿಕೊಳ್ಳುವುದು, ಇವರ ಕಾಟ ವನ್ನು ಸಹಿಸಿಕೊಳ್ಳುವುದು ಕಷ್ಟ. ಪತನದ ಕಡೆಗೆ ಜಗ್ಗುವುದೇ ಇವರ ಕೆಲಸ ಎಂದು ದೂರುವ ಮನೋಭಾವವನ್ನು ಕಾಣಬಹುದು.

ರೇಗಿತು ನನಗೆ—
ಎಳೆಯಂದು ಸಾಕುತಾಯಾದವರು,
ಹರಯದಲಿ ಜೊತೆಗೂಡಿ ನಿಂದವರು,
ಒಳಮನೆಯ ಆಡಳಿತದಲಿ ಆಪ್ತರಾದರಿವರು,
ಸರ್ವದಾ ಚೆನ್ನ ಬಿಡದಂತೆ ನೆರಳಾಗಿ ಸುಳಿಯುವರು,
ಇವರ ಮೇಲೆ ನಾನು ಹೂಡಬೇಕೇ ಯುದ್ಧ
ಹಿಡಿಯಬೇಕೇ ಇನ್ನು ಬಿಲ್ಲುಬಾಣ?

ಇಲ್ಲಿ ಅರ್ಜುನನ ಸಮಸ್ಯೆ ಎದುರಾಗುತ್ತದೆ. ದ್ವಂದ್ವ ಕಾಣಿಸಿಕೊಳ್ಳುತ್ತದೆ. ಐದು ಮಂದಿಯ ಮೇಲೆ ಯುದ್ಧ ಮಾಡಬೇಕೆ? ಬೇಡವೆ? ಎಂಬ ತೊಳಲಾಟ ಕಂಡುಬರು ತ್ತದೆ. 'To be or not to be' ಎನ್ನುವ ಹ್ಯಾಮಲೆಟ್‌ನ ಪರಿಸ್ಥಿತಿ ಬರುತ್ತದೆ. ಚಿಕ್ಕಂದಿನಲ್ಲಿ ಕಾಪಾಡಿದವರು, ಬೆಳೆಸಿದವರು ಈಗ ಶತ್ರುಗಳಾಗಿದ್ದಾರೆ. ತನ್ನನ್ನು ಪೋಷಿಸಲು ಯಾವುದೋ ನಿಗೂಢ ಉದ್ದೇಶವಿರಬೇಕು ಎಂಬ ಅನುಮಾನವನ್ನು ಇಲ್ಲಿ ಕಾಣಬಹುದು.

[1]'ಕ್ಷುದ್ರಂ ಹೃದಯ ದೌರ್ಬಲ್ಯಂ
ತ್ಯಕ್ತ್ವೋತ್ತಿಷ್ಠ ಪರಂತಪ'
ನಾನೇನು ಪಾರ್ಥನೆ? ಆದರೂ ಕಾದಿದೆನು ಹಗಲು ಇರುಳು,
ಚುಚ್ಚಿದವು ಹತ್ತಾರು ಕೆಂಪು ಸರಳು.

ಇಲ್ಲಿಂದ ಹಿಂದಿದ್ದ ಅನುಮಾನ, ದ್ವಂದ್ವ ಬಗೆಹರಿದಿದೆ. ಕೃಷ್ಣ ಹೇಳುವ ಭಗವದ್ಗೀತಾ ಮಾತುಗಳಿಂದ ಇದನ್ನು ಸ್ಪಷ್ಟಪಡಿಸಿದ್ದಾರೆ. 'ನಾನೇನು ಪಾರ್ಥನೆ?' ಎಂಬಲ್ಲಿ,

---

[1] ಕ್ಲೈಬ್ಯಂ ಮಾಸ್ಮಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ,
ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ ॥

—ಭಗವದ್ಗೀತೆ, ಅ–೨ ; ಶ್ಲೋ–೩

ಪಾರ್ಥನ ಹಾಗೆ ಬೇರೆಯವರ ಉಪದೇಶಕ್ಕೆ ಕಾಯಲಿಲ್ಲ. ನಾನೇ ನಿರ್ಧಾರವನ್ನು ತೆಗೆದು ಕೊಂಡೆ ಎಂಬ ನಿಲುವಿದೆ. ಅದಕ್ಕಾಗಿ ಕಷ್ಟನಷ್ಟಗಳನ್ನು ಅನುಭವಿಸಿದೆ ಎಂಬುದನ್ನು ತಿಳಿಸುತ್ತಾರೆ. ದುರ್ಬಲ ಮನಸ್ಸಿನವನಾಗದೆ, ಆತ್ಮವಿದ್ಯೆಯನ್ನು ಸಾಧಿಸಲು ಯೋಧ ನಂತೆ ಹೋರಾಡಿದೆ ಎಂಬ ಚಿತ್ರವಿದೆ. ಆತ್ಮಬಲದ ಶಕ್ತಿಯನ್ನು ಪರೋಕ್ಷವಾಗಿ ತಿಳಿಸಿದ್ದಾರೆ.

ಈ

ಅಲ್ಲಿಂದೀಚೆ, ನಾನು ನಾನೇ ಆದೆ; ನಿಂತೆ.
ಬೆಳ್ಗೊಳದ ಗೊಮ್ಮಟನ ನಗೆಯ ಬೆಳುದಿಂಗಳಡಿ ಕಣ್ಣು ತೆರೆಮು.
ಇವರೆಲ್ಲ ನಮ್ಮವರೆ, ನಿಜ, ನಾನೊ ಆಗಂತುಕನು
ತೀರ್ಥಯಾತ್ರಿ
ಇವರ ಛತ್ರದೊಳಿದ್ದು, ತೆರುವುದನು ತೆತ್ತು ನಡೆಯುವೆನು
ಒಂದು ರಾತ್ರಿ.
ಹಿಡಿಯಲಾರದು ನನ್ನ ಇವರಾವ ಸೂತ್ರವೂ,
ನಾನು ನಿರ್ಲಿಪ್ತ;
[೨]ಬೆಂಕಿಯು ಸುಡದು; ನೀರು ನೆನೆಸದು; ಮಣ್ಣು ಮೆತ್ತದು;
ಗಾಳಿ ಹಾರಿಸದು, ಪಂಚಭೂತದ ಸಂಚು ತಟ್ಟದು ಇನ್ನು,
ನಾ ಸ್ಥಿತಪ್ರಜ್ಞ.

ಈ ಭಾಗದಲ್ಲಿ ಕಾಣುವುದೆಲ್ಲ ಪಲಾಯನ–ದಿಗ್ವಿಜಯದ ಪರಾಕು. ಸಾಧಕ ಸಿದ್ಧನಾದ ಚಿತ್ರ. ಪಂಚಭೂತಗಳನ್ನು ಗೆದ್ದು ಸ್ಥಿತಪ್ರಜ್ಞನಾಗಿ ನಿಂತ ಘೋಷಣೆ ಇಲ್ಲಿದೆ. ಇದನ್ನು ಗೊಮ್ಮಟನ 'ಪ್ರತಿಮೆ'ಯಿಂದ ಸೂಚಿಸಿದ್ದಾರೆ. ದೇಹದ ನಶ್ವರತೆಯನ್ನು ಆತ್ಮದ ಅಮರತೆಯನ್ನು ಎತ್ತಿಹಿಡಿದಿದ್ದಾರೆ. ಶಂಕರಾಚಾರ್ಯರ 'ಜಗತ್ ಮಿಥ್ಯಾ'ವಾದ ಇಲ್ಲಿ ಸ್ಪಷ್ಟವಾಗಿ ಬಂದಿದೆ. ಆತ್ಮದ ಸ್ವರೂಪವನ್ನು ತಿಳಿಸಲು ಭಗವದ್ಗೀತೆಯ ಮಾತುಗಳನ್ನೇ ಬಳಸಿಕೊಂಡಿದ್ದಾರೆ. ಅನುಭವಕ್ಕೆ ತಟ್ಟದ ವಿಷಯವನ್ನು ತಿಳಿಸಲು ಭಗವದ್ಗೀತೆಯ ಮಾತುಗಳನ್ನು ಬಳಸಿಕೊಂಡಿರುವುದರಿಂದ ಪರೋಕ್ಷವಾಗಿ ಸೋಲನ್ನೂ ಒಪ್ಪಿಕೊಂಡಿದ್ದಾರೆ. ಸ್ಥಿತಪ್ರಜ್ಞತ್ವದ ವಿಜಯ ಹೇಳಿಕೆಗಳ ಮಟ್ಟದಲ್ಲಿಯೇ ನಿಂತುಬಿಟ್ಟಿದೆ. ಪಂಚಭೂತಗಳಿಂದ ತಪ್ಪಿಸಿಕೊಂಡೆ ಎಂಬ ಗೆಲುವಿನ ಸೂಚನೆಯಲ್ಲೇ ಸೋಲಿನ ಧ್ವನಿಯಿದೆ.

ನಿರ್ಧಾರವನು ಕೇಳಿ ನಸುನಕ್ಕರೈವರೂ—
'ಪಗೆಗೆ ಪಗೆ ಕೆಳಗೆ ಕೆಳೆ' ನಾವು
ಹಾರೈಸುವೆವು ನೀನಾಗು ಬುದ್ಧ
ನಿನ್ನ ಸೇವೆಗೆ ನಾವು ಎಂದಿಗೂ ಸಿದ್ಧ

ಕವನದ ಕೊನೆಯ ಭಾಗ 'ಐದು ಮಂದಿ' ಶರಣಾಗಿ ಹರಸುವ ಚಿತ್ರವಿದೆ. ಚಕ್ರವರ್ತಿಗೆ

---

೨ ನೈನಂ ಛಿಂದತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ।
ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ ॥
ಭಗವದ್ಗೀತೆ, ಅ. ೨ ; ಶ್ಲೋ–೨೩

ಸಾಮಂತರು ಕಪ್ಪ-ಕಾಣಿಕೆಗಳನ್ನು ಅರ್ಪಿಸುವ ರೀತಿಯಲ್ಲಿ ಕವನ ಮುಕ್ತಾಯವಾಗುತ್ತದೆ. ಮಾರನ ರೀತಿಯಲ್ಲಿದ್ದ ಐದು ಮಂದಿ ಮಿತ್ರರಾಗಿದ್ದಾರೆ. ಸೇವಕರಾಗಿದ್ದಾರೆ. 'ನಿರ್ಧಾರವನು ಕೇಳಿ ನಸುನಕ್ಕರೈವರೂ' ಎನ್ನುವ ಮಾತು ಇಲ್ಲಿ ಧ್ವನಿಪೂರ್ಣವಾಗಿದೆ. ಸ್ಥಿತಪ್ರಜ್ಞ ನಿರ್ಧಾರಕ್ಕೇ 'ತಂತುಕೃತಿ'ಯಂತೆ ಈ ಮಾತು. ಈ ಐದು ಮಂದಿ ನಸುನಗುವುದು ಎರಡು ಬಾರಿ. ಒಮ್ಮೆ ಇವರ ಮೋಸದ ಜಾಲವನ್ನು ಅರಿತಾಗ; ಇನ್ನೊಮ್ಮೆ ಇವರ ಮೋಸದ ಜಾಲವನ್ನು ಗೆದ್ದಾಗ. ಆದರೆ ಎರಡು ಸಂದರ್ಭದ ನಗುವಿಗೂ ಅಂತಹ ಅಂತರವೇನಿಲ್ಲ. ವಾಸ್ತವವನ್ನು ತಿರಸ್ಕರಿಸಿ, ಅನುಮಾನದ ನಿರ್ಧಾರದಿಂದ ಪ್ರಾರಂಭವಾದ ಕವನ ಅಸಂಗತ ನಿರ್ಧಾರದಲ್ಲಿ ಬಂದುನಿಲ್ಲುವುದೇ ವೈಶಿಷ್ಟ್ಯ. ಆತ್ಮವಿದ್ಯೆಯ ವೈಭವವನ್ನು ಹೊಸ ರೀತಿಯಲ್ಲಿ ತಿಳಿಸುವ ಪರಿಷ್ಕಾರ ಮನೋಧರ್ಮದ ಮನಸ್ಥಿತಿಯನ್ನು ಇಲ್ಲಿ ಕಾಣಬಹುದು. ಪ್ರಾ|| ಜಿ. ಎಸ್. ಶಿವರುದ್ರಪ್ಪನವರ ಕಾವ್ಯ ಮನೋಧರ್ಮ ರೂಪುಗೊಳ್ಳುತ್ತಿದ್ದ ಪರಿಸರಕ್ಕೆ; ಸ್ವೀಕರಣ ಮತ್ತು ಸ್ವಯಾರ್ಜಿತ ನಿಲುವುಗಳ ಮಧ್ಯೆ ನಿಂತ ಸಂಕ್ರಮಣ ಮನಸ್ಥಿತಿಯ ಅಭ್ಯಾಸಕ್ಕೆ, ಯೋಗ್ಯವಾದ ಕವನಗಳಲ್ಲಿ ಒಂದು 'ನಿರ್ಧಾರ.'

# ನಿರ್ಧಾರ

ಕಂಡಿಲ್ಲವೇ ನೀವು?
ನಮ್ಮ ಸುತ್ತಲು ಸದಾ ಐದು ಮಂದಿಯ ಪಹರೆ—
ಹೋದಲ್ಲಿ, ಬಂದಲ್ಲಿ, ನಿಂತಲ್ಲಿ, ಕುಳಿತಲ್ಲಿ
ನಮ್ಮ ಮೇಲೇ ಇವರ ಹಸಿದ ಕಣ್ಣು!
ಹುಟ್ಟಿ ಕಣ್‌ಬಿಟ್ಟಂದು ಮೈಗೆ ತೊಟ್ಟಿಲನಿತ್ತು
ತಾಯ ಕೊರಳಲಿ ಕುಳಿತು ಹಾಡಿದವರು.
ನೆಲದ ಹಸುರೊಳು ಮುಗಿಲ ಮಳೆಹನಿಯ ದಾರದಲಿ
ಹೂ ಕಸೂತಿಯ ಹೆಣೆದು ಹಾಸಿದವರು.
ಬೆಳಗಾಗ ಬಾಗಿಲಲಿ ತುಂಬು ಕೆಚ್ಚಲ ಕರೆದು
ತುಟಿಗೆ ಕೊಟ್ಟವರು.
ಹೆಜ್ಜೆ ಹೆಜ್ಜೆಗು ನಿಂತು ಕೈಹಿಡಿದು ಮೇಲೆತ್ತಿ
ಚಂದುಮಾಮನ ಕನಸ ಬಿತ್ತಿದವರು.
ನಾನು ನಂಬಿದೆನಿವರ; ಬಣ್ಣದಲಿ ಬೆರಗಿನಲಿ
ಬೆರೆದರಿವರು.
ಮರ ಮರದ ತುಂಬ ಹಕ್ಕಿಯ ಲಾಲಿ; ತಳಿರಿನ ಜೋಲಿ;
ಹೂವಿನ ಹೋಳಿ—ಬುಗ್ಗೆ ಬುಗ್ಗೆ!
ಕಂಡ ಕಂಡೆಡೆಯಲ್ಲಿ ಕೈಚಾಚಿ ನುಗ್ಗಿದೆನು
ಇವರ ಜೊತೆಗೆ;
ನೂರು ಕೊಂಬೆಗೆ ನೆಗೆದು, ಗುಡ್ಡ ಬೆಟ್ಟವ ಸೇರಿ
ನೋಡವಾಗಲೆದ್ದು,
ದೂರ ಕಡಲಿಗೆ ಬೆದರಿ, ಸುಳಿದು ಸುತ್ತಿ,
ಕಡೆಗೆ ಕಾಮನಬಿಲ್ಲ ಜಾರುಗುಪ್ಪೆಯನಾಡಿ
ಬಂಡೆ ಬಂಡೆಯ ಬುಡಕೆ ಬಂದು ನಿಂತೆ,
ಹೆಗಲ ಮೇಲೇರಿತ್ತು ದೊಡ್ಡ ಕಂತೆ.

ನಸುನಕ್ಕರೈದು ಜನ—
ತಂತುಕೃತಿಯಂಥ ನಗು, ನವುರು ನವುರು.
ಗೋಡೆಯ ಮೇಲೆ ಹಲ್ಲಿಯ ನೆರಳು ;
ನೆರಳಲ್ಲ, ಗಡಿಗೆ ಕಣ್ಣಿನ ಸರಳು ಸೆಳೆದಿತ್ತು ದೂರ ಹಾರುವ ಸೊಣವ
ಅಂಟು ನಾಲಗೆ ಚಾಚಿ !
ಮನೆಯಂಗಳದಿ ಆಗ ತಾನೇ ಅರಳಿ ಮುದ್ದಾದ ಮಲ್ಲಿಗೆಗೆ
ಬಾಯಿ ಹಾಕಿತ್ತೊಂದು ಕಪ್ಪು ಕೋಣ.
ಮುದಿಯ ಮರ ಲಟಕಟಿಸಿ ಉರುಳಿತ್ತು
ಸೆಳೆದಿತ್ತು ಬಿರುಗಾಳಿಯುರುಳು,
ಅಲ್ಲೆಲ್ಲ ಕಾಣಿಸಿತು ಇವರ ನೆರಳು !
ಬಾಡಿಗೆಯ ಮನೆಯಿಂದ ಬಾಡಿಗೆಯ ಮನೆಗೆ ನಡೆದಿರುವೆ,
ಇರುವ ಮನೆಯನು ಮೊದಲು ಸರಿಮಾಡಿಕೋ.
ಕಸ ಗುಡಿಸು ; ದೀಪವ ಹಚ್ಚು ; ಈ ಐವರನು ನಂಬದಿರು
ಆದಷ್ಟು ದೂರವಿರಿಸು—
ಬಿಡಲಿಲ್ಲ ಇವರೆನ್ನ
ಸದಾ ಜೊತೆಗೂಡಿ ನನ್ನೊಡನೆ ಜಗ್ಗುವುದೆ ಕೆಲಸ
ದೂರ ಹಾರುವ ಪಟವ ಮತ್ತೆ ಮತ್ತೆ !
ರೇಗಿತು ನನಗೆ—
ಎಳೆಯಂದು ಸಾಕು ತಾಯಾದವರು,
ಹೆರಯದಲಿ ಜೊತೆಗೂಡಿ ನಿಂದವರು,
ಒಳಮನೆಯ ಆಡಳಿತದಲಿ ಆಪ್ತರಾದವರಿವರು,
ಸರ್ವದಾ ಬೆನ್ನ ಬಿಡದಂತೆ ನೆರಳಾಗಿ ಸುಳಿಯುವರು,
ಇವರ ಮೇಲೇ ನಾನು ಹೂಡಬೇಕೇ ಯುದ್ಧ
ಹಿಡಿಯಬೇಕೆ ಇನ್ನು ಬಿಲ್ಲು ಬಾಣ ?
'ಕ್ಷುದ್ರಂ ಹೃದಯ ದೌರ್ಬಲ್ಯಂ
ತ್ಯಕ್ತ್ವೋತ್ತಿಷ್ಠ ಪರಂತಪ'
ನಾನೇನು ಪಾರ್ಥನೆ ? ಆದರೂ ಕಾದಿದೆನು ಹಗಲು ಇರುಳು,
ಚುಚ್ಚಿದವು ಹತ್ತಾರು ಕೆಂಪು ಸರಳು.
ಅಲ್ಲಿಂದೀಚೆ, ನಾನು ನಾನೇ ಅದೆ ; ನಿಂತೆ
ಬೆಳ್ಗೊಳದ ಗೊಮ್ಮಟನ ನಗೆಯ ಬೆಳುದಿಂಗಳಡಿ ಕಣ್ಣು ತೆರೆದು—
ಇವರೆಲ್ಲ ನಮ್ಮವರೆ, ನಿಜ, ನಾನೊ ಆಗಂತುಕನು
ತೀರ್ಥಯಾತ್ರಿ.

ಇವರ ಛತ್ರದೊಳಿದ್ದು, ತೆರುವುದನು ತೆತ್ತು ನಡೆಯುವೆನು
ಒಂದು ರಾತ್ರಿ.
ಹಿಡಿಯಲಾರದು ನನ್ನ ಇವರಾವ ಸೂತ್ರವೂ,
ನಾನು ನಿರ್ಲಿಪ್ತ;
ಬೆಂಕಿಯು ಸುಡದು ; ನೀರು ನೆನಸದು ; ಮಣ್ಣು ಮೆತ್ತದು ;
ಗಾಳಿ ಹಾರಿಸದು, ಪಂಚಭೂತದ ಸಂಚು ತಟ್ಟದು ಇನ್ನು,
ನಾ ಸ್ಥಿತಪ್ರಜ್ಞ.
ನಿರ್ಧಾರವನು ಕೇಳಿ ನಸುನಕ್ಕರೈವರೂ—
'ಪಗೆಗೆ ಪಗೆ ಕೆಳೆಗೆ ಕೆಳೆ' ನಾವು.
ಹಾರೈಸುವೆವು ನೀನಾನು ಬುದ್ಧ
ನಿನ್ನ ಸೇವೆಗೆ ನಾವು ಎಂದಿಗೂ ಸಿದ್ಧ.

## ಎಚ್. ಎಸ್. ವೆಂಕಟೇಶಮೂರ್ತಿ

# 'ಸಂಜೆದಾರಿ'

ಡಾ. ಜಿ. ಎಸ್. ಶಿವರುದ್ರಪ್ಪನವರ 'ಸಂಜೆದಾರಿ' ಒಂದು ಬಣ್ಣದ ಚಲನಚಿತ್ರ. ಮೌನ ಈ ಕವನದ ಸ್ಥಾಯಿಶ್ರುತಿ. ಕವನದ ನಾಯಕನ ವಿಷಾದ, ನಿರಾಶೆ, ಮುಗಿದ ಕಥೆಗಳಿಗೆ ಈ ಕವನದುದ್ದದ ಮೌನ ಅರ್ಥಪೂರ್ಣವಾದ ಹಿನ್ನೆಲೆಯಾಗಿ ಒದಗುವುದು. ಕವನದ ಮೊದಲಲ್ಲಿ ನಾಯಕನ ಮನದ ದಿಗಿಲು, ನಿರಾಶೆಯ ದೀರ್ಘ ಉಸಿರು, ಕಳವಳಗಳನ್ನು ಸೂಚಿಸಲು ಕವಿ ಕೆಂಪು ಕಪ್ಪುಗಳ ಛಾಯಾದ ಬಣ್ಣವನ್ನು ಬಳಸುತ್ತಾರೆ. ಮೌನವಾಗಿ ನಡೆವ ಈ ಮೆರವಣಿಗೆಯಲ್ಲಿ ಚಲಿಸುವ ಅಂಶಗಳೆಂದರೆ ಹೊಳೆಹೊಳೆವ ಕೆಂಗಣ್ಣು, ಜೋಲ್ವ ನಾಲಗೆ ಬಾಯಿಯ ಕರಿನಾಯಿ, ಅದನ್ನು ಹಿಡಿದ ಕೈ, ಹಾಗೂ ಅವೆರಡನ್ನೂ ಬಂಧಿಸುವ ಸರಪಳಿ. ಈ ಚಲನಾಂಶಗಳಿಗೆ ಹಿನ್ನೆಲೆಯಾಗಿ ಸಂಜೆಮುಗಿಲು ಮತ್ತು ಮುಗಿವಿರದ ಪ್ರಶ್ನೆಯೊಲು ಹಾಸಿರುವ ಟಾರ್‌ಬೀದಿ. ಈ ಚಿತ್ರ ಕೇವಲ ವರ್ಣಚಿತ್ರವಾಗಿರುವುದೂ, ಶಬ್ದರಹಿತವಾಗಿರುವುದೂ ಗಮನಿಸಬೇಕಾದ ಅಂಶ. ಇಲ್ಲಿ ಅಶ್ರುತವಾಗಿ ಕೇಳಿಬರಬಹುದಾದ ಒಂದೇ ನಾದ ಸರಪಳಿಯ ಶೀತಲ ಠಣತ್ಕಾರ. ಕವಿ ಕೊಡುವ ಈ ಮೌನದ ಮೆರವಣಿಗೆ ಪ್ರಕಟವಾದ, ಚಲನಶೀಲವಾದ ಒಂದು ಹೊರಾವರಣವನ್ನು ಚಿತ್ರಿಸಿ, ಕವನದ ಅಂತರ್ಮುಖತೆಗೆ ಇಲ್ಲಿಂದಲೇ ಸಿದ್ಧತೆಗೆ ಶುರುಮಾಡುತ್ತದೆ.

ಎರಡನೇ ಪದ್ಯದಲ್ಲಿ ಇದೇ ಚಿತ್ರಕ್ಕೆ ಕೆಲವು ಹೊಸ ಬಣ್ಣಗಳು ಸೇರ್ಪಡೆಯಾಗುತ್ತವೆ. ಕೆನ್ನವಿರ ತಲೆಗೆದರಿ ಮುಳುಗುತ್ತಿರುವ ಮುದಿಯ ಸೂರ್ಯನ ಚಿತ್ರ ಅದು. ಸೂರ್ಯ ಮುದಿಯನಾಗಿ ತೋರುವುದು ಕವನದ ಸಂವೇದನಾಕೇಂದ್ರದ ಮನಃಸ್ಥಿತಿಯನ್ನೂ, ವಯೋಮಾನವನ್ನೂ ಸೂಚಿಸುವುದು. ಆ ಮುದಿತನದ ಪರಿಣಾಮಗಳನ್ನು ಹಿಂದಿನ ಸಾಲುಗಳಲ್ಲಿ ಎರಡು ಹೋಲಿಕೆಗಳಿಂದ ಮೊದಲೇ ಸ್ಥಾಪಿಸಲಾಗುವುದು.

೧) ಹಗಲೆಲ್ಲಾ ಗಾಡಿಯೆಳೆದು ಸೋತು ಸುಸ್ತಾದ ಜಟಕಾ ಕುದುರೆಯಂತೆ—

೨) ಸೋತ ದಳಪತಿಯಂತೆ—

ಈ ಹೋಲಿಕೆಗಳು ಕವನದ ಹೊರಗಿನಿಂದ ಎರವಲಾಗಿ ಬಂದಿದ್ದು, ತಮ್ಮ ಕೆಲಸದ ನಂತರ ನಿರ್ಗಮಿಸುವ ಆಗಂತುಕ ಹೋಲಿಕೆಗಳು. ಈ ಹೋಲಿಕೆಗಳಿಗೆ ಕನ್ನಡ ಬದುಕಿನಲ್ಲಿ, ಸಾಹಿತ್ಯದಲ್ಲಿ ದುಡಿದ ರೂಢಿ. ಮೊದಲಲ್ಲಿ ಬರುವ ಗಾಡಿ ಸ್ಥೂಲವಾಗಿ ಒಡಲಿಗೆ, ಹೆಚ್ಚು ಅರ್ಥವತ್ತಾಗಿ ಬದುಕಿಗೆ ಅನ್ವಯಿಸುವ ಅಂಶ. ಒಡಲೆಂಬ ಬಂಡಿ ಎಂಬ ಮಾತು ದೇವರ

ದಾಸಿಮಯ್ಯನವರ ವಚನವೊಂದರಲ್ಲಿ ಬರುತ್ತದೆ. ಬದುಕು ಜಟಕಾ ಬಂಡಿ ಎಂಬ ಡಿ.ವಿ.ಜಿ. ಅವರ ಪ್ರಸಿದ್ಧ ಕಗ್ಗದ ಪದ್ಯವಿದೆ. ಅಡಿಗರ ಭೂಮಿಗೀತದಲ್ಲಿಯೂ ಸಹ ಷಃ ಪಸಂದದ ತೊಡವಿನ ಮಾತು ಬರುತ್ತದೆ. ಸಾಹಿತ್ಯದ ಸವಿವರ ಅಧ್ಯಯನದಿಂದ ಶ್ರೀಮಂತವಾದ ಕವಿಯ ಮನಸ್ಸು ಹೋಲಿಕೆಯ ಪದಾಂಶ ಒಂದರ ಸಹಾಯದಿಂದ ಅದರ ಒಟ್ಟು ಅರ್ಥವನ್ನೇ ತನ್ನ ಕವನಕ್ಕೆ ರೂಢಿಸುವುದರಲ್ಲಿ ಯಶಸ್ವಿಯಾಗುವ ರೀತಿಯನ್ನಿಲ್ಲಿ ನೋಡಬಹುದು.

ಎರಡನೆಯ ಹೋಲಿಕೆಯಲ್ಲಿ ಬರುವ ಸೋತ ದಳಪತಿಯಂತೆ ಎಂಬ ಹೋಲಿಕೆಯ ಹಿಂದೆ 'ಜೀವನ ಸಂಗ್ರಾಮ' ಎಂಬ ರೂಢಿಯ ಪದಪುಂಜ ನಿಂತಿರುವಂತೆ ತೋರುವುದು. ತನ್ನ ಕರ್ಮದಲ್ಲಿ ಸೋತ, ಸುಸ್ತಾದ ಸ್ಥಿತಿಯನ್ನು ಈ ಎರಡು ಹೋಲಿಕೆಗಳು ಬಿಡಿಯಾಗಿ ಚಿತ್ರಿಸಿ ಪರಿಣಾಮವನ್ನು ಒಂದಾಗಿ ಜೋಡಿಸುತ್ತವೆ.

ಮುಗಿಲ ಕೊತ್ತಳದಲ್ಲಿ ಮೊಳಗುತಿದೆ ಆಗಲೇ ಇರುಳ ಸೂರ್ಯ—ಎಂಬುದು ಕವಿಯ ವಿಷಯವೆಂಬಂತೆ ತೋರಿಯೂ ಕವಿಯ ವಿಷಯವಾಗಿರದೆ ಕಪ್ಪು ಮುಸುಕುತ್ತಿರುವ ಕಣ್ಣಿನ ವಿಷಯವಾಗಿರುವುದು ಗಮನೀಯ ಅಂಶ.

ಮೂರನೆಯ ಪದ್ಯದಲ್ಲಿ ಚಿತ್ರತವಾಗುವ ಆಫೀಸು ಕಟ್ಟಡ ಕವನದ ಚಲನಾಂಶಗಳ ಗತಿಶೀಲತೆಯನ್ನು ಖಚಿತಪಡಿಸುವ ವಿಷಯ.

ಅಳಿದುಳಿದ ಬೆಳಕಿನಲಿ ತಲೆಯನೆತ್ತಿಹುದಲ್ಲಿ
ಆಫೀಸು ಕಟ್ಟಡ

ಅಳಿದುಳಿದ ಬೆಳಕಿನಿಂದಾಗುವ ಅಸ್ಪಷ್ಟತೆ ವ್ಯಕ್ತಿಯ ಪಾಲಿಗೆ ಆಫೀಸು ಕಟ್ಟಡ ಇಲ್ಲವಾಗುತ್ತಿರುವುದನ್ನು ಕೇವಲ ನೆನಪಾಗಿ ಪರಿಣಮಿಸುತ್ತಿರುವುದನ್ನು ಸೂಚಿಸುವುದು.

ಈಗಲೋ ಆಗಲೋ ನಿದ್ದೆಯಾಳಕೆ ಇಳಿವ
ಹಸುಳೆ ಕಣ್‌ಬಿಡುವಂತೆ ಕಿಟಕಿ ಗಾಜಿನ ಹೊಳಪು

—ತನ್ನಷ್ಟಕ್ಕೇ ತುಂಬಾ ಸೊಗಸಾಗಿರುವ, ಆದರೆ ಕವನದ ಮೈಗೆ ಹೊಂದದೆ ಬೇರೆಯಾಗುಳಿವ ಚಿತ್ರ.

'ನೂರಾರು ನೆನಪು' ಎಂಬ ಸಾಲಿನಿಂದ ಮುಂದೆ ಕವನದ ಹಾದಿ ಹೆಚ್ಚು ಕಡಮೆ ಸ್ವಗತಲಹರಿಯಾಗುವುದು. ನಿವೇದನೆಯ ಹಾದಿಯಿಂದ ಸಂವೇದನೆಯ ಹಾದಿಗೆ ಕವನ ತನ್ನ ಶರೀರವನ್ನು ಹೊರಳಿಸುವ ತಿರುವು ಇದು. ಶಿವರುದ್ರಪ್ಪನವರ ಅನೇಕ ಕವನಗಳಲ್ಲಿ ಈ ತಂತ್ರವನ್ನು ಗಮನಿಸಬಹುದು.

ಮಾತುಗಳಾಗಿ ಸಾಗಿಯೂ ಮುಂದಿನ ಸಾಲುಗಳು ಸ್ವಗತಗಳಾದುದರಿಂದ ಪುನಃ ಮೌನದಲ್ಲಿಯೇ ಕವನ ಮುಂದುವರೆಯುವುದು. 'ಓ ಅಲ್ಲೆ' ಎಂಬ ಉದ್ಗಾರ ನಿರಾಶೆಯ ನಿಟ್ಟುಸಿರನ್ನೂ, ಕಳಕೊಂಡ ಕಳವಳವನ್ನೂ ಸೂಚಿಸಿ, ಅಲ್ಲಿ ಮೆರೆದ ಮನಸ್ಸು ಫ್ಯಾನು, ಫ್ಯಾನು ಎಂದು ಲೌಕಿಕ ಭೋಗಗಳನ್ನು ಚಪ್ಪರಿಸುತ್ತಾ ಅದಕ್ಕಾಗಿ ವಿಷಾದಿಸುತ್ತಾ ಹೋಗುವುದು.

ಮುಂದಿನ ಪದ್ಯದಲ್ಲಿ ಇದೇ ಧಾಟಿಯಲ್ಲಿ ಸಾಗುವ ಚಿಂತನೆ, ಕೊನೆಯ ಮೂರು ಸಾಲುಗಳಲ್ಲಿ ಇದ್ದಕ್ಕಿದ್ದಂತೆ ಲೌಕಿಕ ಭೋಗಗಳ ಕೃತ್ರಿಮತೆಯನ್ನು ಕಂಡುಕೊಂಡು, 'ಕುಣಿತ' ಎಂಬ ಪದದ ವ್ಯಂಗ್ಯದಿಂದ ಆತ್ಮಶೋಧನೆಯಲ್ಲಿ ಪರಿಣಮಿಸುವುದು. ವ್ಯಕ್ತಿಯನ್ನು ಸುತ್ತುವರೆದಿದ್ದ ಜನ ಬೆಲೆಕೊಟ್ಟದ್ದು ವ್ಯಕ್ತಿತ್ವಕ್ಕಲ್ಲ, ಅಧಿಕಾರಕ್ಕೆ, ದರ್ಪಕ್ಕೆ, ಬಿಂಕಕ್ಕೆ ಎಂಬ ಅರಿವು, ಚಿಂತನೆ ಮತ್ತಷ್ಟು ಮತ್ತಷ್ಟು ಅಂತರ್ಮುಖಿಯಾಗಲು ಕಾರಣವಾಗುವುದು.

ಮುಂದೆ ಈ ಸ್ವಗತಲಹರಿ ಹೊಸ ಧಾಟಿಯಲ್ಲಿ ಸಾಗತೊಡಗುವುದು. ಅದು 'ಮಾಡಬೇಕಾದುದನ್ನು, ಮಾಡಬೇಕಾಗಿದ್ದಾಗ ಮಾಡಲಿಲ್ಲವಲ್ಲ' ಎಂಬ ಹತಾಶೆಯ ಧ್ವನಿ. ಅವಕಾಶವನ್ನು ಸರಿಯಾಗಿ ಬಳಸಿಕೊಳ್ಳಲಿಲ್ಲ. ಎಂಬ ತಳ್ಳಂಕ ವ್ಯಕ್ತಿಯನ್ನು ಹಿಂಡುವುದು. ಎಷೆಯ ಹೊಸ್ತಿಲಲ್ಲೇ ಕಾಯುತ್ತಿದ್ದ ದೇವಸದ್ಭಾವನೆ, ಸದ್ವಿವೇಕ, ಸುವಿಚಾರಗಳಿಗೆ ಸಂಕೇತವಾಗಿ ನಿಲ್ಲುವನು. 'ಒಳಗೆ ಬರಲಪ್ಪಣೆಯೆ?' ಎಂಬುದು ಕೆ.ಎಸ್.ನ. ಅವರ ಬಳೆಗಾರನ ಹಾಡಿನಿಂದ ಎತ್ತಿದಾಗಿದ್ದು ಅಲ್ಲಿನ ಅನುಕಂಪ, ವಾತ್ಸಲ್ಯ, ಕ್ಷಮೆಗಳನ್ನು ಒಟ್ಟಾಗಿ ಪ್ರಕೃತ ಸಂದರ್ಭಕ್ಕೆ ದಾಟಿಸುವುದು.

'ಅದು ಬೇಡವಾಗಿತ್ತು' ಎಂಬ ಖಂಡತುಂಡಾದ ಅರಿವಿನೊಂದಿಗೆ ಕಡಿದು ಮುಂದುವರೆಯುವ ಚಿಂತನೆ ವಚನವೊಂದನ್ನು ಒಳಮಾಡಿಕೊಂಡು ಸಾಗುವುದು.

ಹೊತ್ತು ಹೋದಾಮೇಲೆ ಯಾರು ಬಲ್ಲರೊ ನಿನ್ನ?
ಹೊತ್ತು ಹೋಗದ ಮುನ್ನ
ಮೃತ್ಯು ಮುಟ್ಟದ ಮುನ್ನ
ತೊತ್ತುಗೆಲಸವ ಮಾಡು.

—ಒಂದು ರೀತಿಯಲ್ಲಿ ಈ ವಚನವೇ ಕವನದ ಕೇಂದ್ರ ವಿಚಾರ. ಈ ವಿಚಾರವನ್ನೇ ಕವನ ತನ್ನ ಅರ್ಥಪೂರ್ಣ ಚಿತ್ರಗಳಿಂದ ಅಭಿನಯಿಸುತ್ತಾ ಹೋಗುವುದು.

ಯೋಚನೆಯ ಅಂತರ್ಮುಖತೆಯಿಂದಾಗಿ ಬಾಹ್ಯ ಜಗತ್ತಿನ ಚಿತ್ರಗಳಿಂದ ಈವರೆಗೆ ವಿಮುಖವಾಗಿದ್ದ ಕವನ ತಟ್ಟನೆ ಮುಳುಗುವ ಸೂರ್ಯನನ್ನು ಚಿತ್ರಿಸಿ ವಾಸ್ತವದೆಚ್ಚರ ವ್ಯಕ್ತಿಗೆ ಉಂಟಾದ ರೀತಿಯನ್ನು ಆಶ್ಚರ್ಯಕರವಾಗಿ ವ್ಯಕ್ತಪಡಿಸುವುದು.

ಅದೋ ಮುಳುಗುತಿದೆ ಹೊತ್ತು; ಈಗ ಅದು ನೋಡು
ಪಡುವಣದ ಚಿತೆಯಲ್ಲಿ ಹಗಲ ಹೆಣ ಉರಿಯುತಿದೆ
ಕೋಡು ನೋಡು.

—ಈ ನಿರೀಕ್ಷೆ ಕವನದ ಮೊದಲಲ್ಲಿ ಬರುವ ಕೆನ್ನವಿರ ತಲೆಗೆದರಿ ಮುಳುಗುತ್ತಿದ್ದ ಮುದಿಯ ಸೂರ್ಯನ ಪುನರ್ಚಿತ್ರ. ಕೆನ್ನವಿರು ಇಲ್ಲಿ ಚಿತೆಯಾಗಿ ಕಂಡು, ಬಣ್ಣ ಸ್ಪರ್ಶದ ಕಾವನ್ನೂ ಪಡೆದು ತೀವ್ರವಾಗುತ್ತದೆ.

'ಪಡುವಣದ ಚಿತೆಯಲ್ಲಿ ಹಗಲ ಹೆಣ ಉರಿಯುತಿದೆ' ಎಂಬ ಪ್ರತಿಮೆ ಒಂದು ಮನಃಸ್ಥಿತಿಯನ್ನು ಭಾವನೆಯ ಕಾವುಗಳೊಂದಿಗೆ ಅದ್ಭುತವಾಗಿ ಹಿಡಿದಿಡುವ ಪ್ರಯತ್ನ. ಆದರೆ

ಮುಂದೆ ಸೂಡಿಗೆ ಪ್ರಾಸವೆಂಬಂತೆ ಬರುವ ನೋಡು, ನೋಡು ಎಂಬ ದ್ವಿರುಕ್ತಿ ವ್ಯಕ್ತಿಯ ಉದ್ವೇಗವನ್ನು ಸೂಚಿಸಬಹುದಾದರೂ, ವೇದನೆಯಿಂದ ವ್ಯಕ್ತಿಯನ್ನು ಪ್ರತ್ಯೇಕಿಸುವ ಹೇಳಿಕೆಯಾಗುವುದರಿಂದ ಔಚಿತ್ಯವನ್ನು ಸಾಧಿಸುವುದಿಲ್ಲ. ವ್ಯಕ್ತಿಯ ಉದ್ವೇಗವನ್ನು ಪಡುವಣ ಚಿತೆಯೇ ದಟ್ಟವಾಗಿ ಪ್ರತಿಮಿಸಿತ್ತು.

ಕವನದ ಚಲನಾಂಶಗಳು ಮುಂದುವರಿಯುತ್ತವೆ. ಇಷ್ಟೆಲ್ಲಾ ಭಾವತೋಟಿಗಳ ನಡುವೆಯೂ ಯಾಂತ್ರಿಕವಾಗಿ, ಅನಿವಾರ್ಯವೆಂಬಂತೆ, ಅವಿರತವಾಗಿ ಸಾಗುವ ಈ ಸಡಿ ಬದುಕಿನ ಚಲನೆಯ ಅನಿವಾರ್ಯತೆಯನ್ನೂ, ಕಾಲದ ನಿಷ್ಠುರತೆಯನ್ನೂ ಸೂಚಿಸುವುದು. 'ಮುಗಿವಿರದ ಪ್ರಶ್ನೆಯೊಲು ಹಾಸಿರಲು ಟಾರ್‌ಬೀದಿ' ಎಂಬ ಚಿತ್ರ ಇದೇ ಅರ್ಥವನ್ನು ಕವನಕ್ಕೆ ಸ್ಥಾಯಿಯಾಗಿ ಹಾಸುವ ಪ್ರಯತ್ನವೆಂಬಂತೆ ತೋರುವುದು.

ಮುಂದಿನ ಪದ್ಯದ ಎರಡು ಚಿತ್ರಗಳು ಕಪ್ಪು, ನೀಲಿಯ ದಟ್ಟ ಬಣ್ಣಗಳಿಂದ ನಿರಾಶೆ, ಹತಾಶೆ, ಸಾವು, ಅವರ ಭಯಾನಕತೆಯನ್ನು ಬಿಂಬಿಸುತ್ತಾ ಹೋಗುವುವು.

ಮುಸಿ ನಿರಾಸೆಯ ನಭದ ಮೇಲೆ ಕರಿಗೆರೆಗಳನು
ಬರೆದ ತಂತಿಯ ಕಂಬ ಸಾಲು ಸಾಲು

—ಕುವೆಂಪು ಅವರ 'ದೇವರು ರುಜು ಮಾಡಿದನು' ಕವನವನ್ನು ನೆನಪಿಸಿ, ಅಲ್ಲಿಗೆ ತದ್ವಿರುದ್ಧವಾದ ವಿಷಾದ ಭಾವನೆಯನ್ನು ತನ್ನ ಮುಸಿನಿರಾಸೆ, ಮತ್ತು ಕರಿಗೆರೆಗಳಿಂದ ಉದ್ದೀಪಿಸುವುದು.

ಒಂದು ಅಂತಃಕ್ಷೋಭೆಯನ್ನು ಹೊರತೆಗೆದಿಟ್ಟಂತೆ ಕಾಣುವ ಬೋಳು ಬಯಲು ಮತ್ತು ತಲೆಗೆದರಿನಿಂತಿರುವ ಈಚಲಿನ ರೂಕ್ಷತೆಯ ಚಿತ್ರ, ಆವರಿಸುತ್ತಿರುವ ಕತ್ತಲಲ್ಲಿ ಬದುಕಿನ ವಿಷಮತೆ, ಸಾವಿನ ನಿಗೂಢತೆ, ಕರ್ತವ್ಯದ ವೈಫಲ್ಯತೆಗಳನ್ನು ಸಂಕೇತಿಸುತ್ತಿರುವಂತೆಯೇ ಕೊನೆಯತ್ತ ಕವನದ ಚಲನಾಂಶ ಮುಂದುವರಿಯುತ್ತದೆ.

ಮುಗಿವಿರದ ಪ್ರಶ್ನೆಯೊಲು ಮಲಗಿರುವ ಟಾರ್ ಬೀದಿಯಲ್ಲಿ
ಕೈಹಿಡಿದ ಸರಪಳಿಯ ಜಗ್ಗುತಿದೆ ಕರಿನಾಯಿ ಮುಂದೆ ಮುಂದೆ
ಹಿಡಿದ ಕೈ ಸಾಗುತಿದೆ ಹಿಂದೆ ಹಿಂದೆ.

—ಕವನದ ಈ ಕೊನೆಯ ಚಿತ್ರ ಕವನದ ಪ್ರಾರಂಭದ ಚಿತ್ರದ ಪುನರ್ಮುದ್ರಣವಾಗಿದ್ದು, 'ಮುಗಿವಿರದ ಪ್ರಶ್ನೆ'ಯನ್ನು ಅರ್ಥಪೂರ್ಣವಾಗಿ ವ್ಯಂಜಿಸುತ್ತದೆ. ಕವನ ಮುಗಿದು ಅರ್ಥ ಮುಂದುವರೆಯುತ್ತದೆ.

ಮಾತಿನ ಸಂಯಮದಿಂದ, ಚಿತ್ರಗಳ ಪ್ರಖರತೆಯಿಂದ, ಕವನ ತನ್ನುದ್ದಕ್ಕೂ ಪೋಲಾಗದಂತೆ ಕಾಯ್ದಿಟ್ಟುಕೊಳ್ಳುವ ಭಾವತೀಕ್ಷ್ಣತೆಯಿಂದ ಸಂಜೆದಾರಿ ಕನ್ನಡದ ಶ್ರೇಷ್ಠ ಕವನಗಳಲ್ಲೊಂದು. ಈ ಕವನದಲ್ಲಿ ತುಡಿಯುವ ಮನಸ್ಸು ತನ್ನ ವೈಯಕ್ತಿಕ ದೌರ್ಬಲ್ಯಗಳನ್ನು ಅರ್ಥಮಾಡಿಕೊಂಡ, ಅದಕ್ಕಾಗಿ ವಿಷಾದಿಸುವ ಪ್ರಾಮಾಣಿಕ ಮನಸ್ಸು; ಹೀಗಾಗಬಾರದಿತ್ತು, ಹಾಗಾಗಬೇಕಿತ್ತು ಎಂಬ ಒಂದು ಆದರ್ಶಕ್ಕಾಗಿ ಆಳದಲ್ಲಿ ತುಡಿಯುವ ಮನಸ್ಸು. ಈ ಆದರ್ಶದ, ಈ ಸ್ವಪರೀಕ್ಷಣದ ಆಳದ ತುಡಿತವೇ ಕವಿ ಜಿ.ಎಸ್.ಎಸ್. ಅವರನ್ನು ಅವರ ಸಮಕರಿಂದ ಬೇರೆಯಾಗಿಸಿ ನಿಲ್ಲಿಸುವ ವಿಶಿಷ್ಟ ಕಾವ್ಯ ಮನೋಧರ್ಮ.

ಟಿ. ಎಸ್. ದಕ್ಷಿಣಾಮೂರ್ತಿ

# ‘ದುಃಸ್ವಪ್ನ’

ಕವಿ ಶಿವರುದ್ರಪ್ಪನವರು ಪರಂಪರೆಯಲ್ಲಿ ಬೆರೆತು ಪರಿಸರವನ್ನು ಅರಿತು ಎರಡರ ಸಮನ್ವಯವನ್ನು ಸಾರುವ ಪ್ರಯೋಗಶೀಲ ವಿಶಿಷ್ಟ ಕವಿ. ಯಾವೊಂದು ಹೊಸ ನಾಡನ್ನು ಕಟ್ಟಿ ಹಳೆಯದನ್ನು ಕೆಡವಬೇಕೆಂಬ ಚಾಳಿ ಇವರಿಗಿಲ್ಲ. ಅದೂ ಬೇಕು—ಇದೂ ಬೇಕು, ಎಲ್ಲವೂ ಬೇಕು ಎಂದು ಎಲ್ಲರಿಗೂ, ಎಲ್ಲ ಕಾಲಕ್ಕೂ ಬೇಕಾಗುವ ಕವಿತೆಯನ್ನು ರಚಿಸಬೇಕೆಂಬ ಮನೋಧರ್ಮ ಇವರದು. ಇವರು ಯಾವ ಹಣೆಯ ಚೀಟಿ ಅಂಟಿಸಿಕೊಂಡು ಕಾವ್ಯ ಬರೆಯುದಿದ್ದರೂ,‘ಸಮನ್ವಯ ಕವಿ’ಯೆಂದು ; ಇವರದು “ಸೇತುವೆ ಕಾವ್ಯ”ವೆಂಬ ಹೆಸರು ಪಡೆದಿದೆ.

ಇವರ ಸ್ವಭಾವ ಸಾತ್ವಿಕ, ಗಂಭೀರ, ಹಾಸ್ಯ ಕೀಟಲೆ ನಾಟಕೀಯತೆ ಕೊಂಕು-ಬಿಂಕಗಳಿಗೆ ಇವರು ದೂರ. ಆದರೂ ಪರಿಸರದ ಅಕ್ರಮ ಅನ್ಯಾಯಗಳನ್ನು ಕಂಡು ಚೂಪಾದ ಮಾತುಗಳಿಂದ ಎಲ್ಲವನ್ನೂ ಬೆತ್ತಲೆಯನ್ನಾಗಿಸಬೇಕೆಂಬ ಹಠ. ಇಂಥ ಒಂದು ಪ್ರಯತ್ನ ಇವರ ‘**ದುಃಸ್ವಪ್ನ**’ ಕವಿತೆ.

**ದುಃಸ್ವಪ್ನ** ಇಂದಿನ ಮುಖವಾಡದ ಬದುಕನ್ನು ಧ್ವನಿಸುವ ಶ್ರೇಷ್ಠ ಕವಿತೆ. ಶಕ್ತರಾದ ವ್ಯಕ್ತಿಗಳ ಅಸಹಾಯಕತೆ, ಯೋಗ್ಯರಲ್ಲದ ಅಧಿಕಾರಿಗಳ ಅಟ್ಟಹಾಸ, ಈ ಕವಿತೆಯ ಉದ್ದಕ್ಕೂ ಮಾರ್ಮಿಕವಾಗಿ ಬೆಸಲೆಯಾಗಿದೆ.

**ದುಃಸ್ವಪ್ನ** ಕವಿ ಕಂಡ ಕನಸಲ್ಲ; ಕವಿತೆಯ ಹೆಸರು. ಕನಸನ್ನು ವೈಜ್ಞಾನಿಕವಾಗಿ ಪರಿಶೀಲಿಸಿದ ಸಿಗ್ಮಂಡ್ ಫ್ರಾಯ್ಡ್‌ನ ದೃಷ್ಟಿಯಲ್ಲಿ ಈ ಕವಿತೆಯನ್ನ ಹಗಲುಗನಸಿನ ಗುಂಪಿಗೆ ಸೇರಿಸಬಹುದು. ಕವಿಯು ಒರ್ವ ಕನಸುಗಾರನೆ? ಹಗಲುಗನಸುಗಾರ. ಕನಸು—ಮಾನಸಿಕ ಪ್ರತಿಕ್ರಿಯೆ. ಇದು ವ್ಯಕ್ತಿ ನಿದ್ರಿಸುವ ಸಮಯದಲ್ಲಿ ಉಂಟಾಗುತ್ತದೆ. ಹಗಲುಗನಸಿನಲ್ಲಿ ಆಶಾವಾದವೂ, ದೃಢಭಾವನೆಗಳೂ, ಭಗ್ನ ಮನೋರಥಗಳೂ, ನಿರಾಶೆಗಳೂ ಸ್ಪಷ್ಟವಾಗಿ ಕಾಣಿಸುತ್ತವೆ. ಇಂಥ ಒಂದು ಹಗಲುಗನಸಿನ ಮಾದರೀ ಕನಸು **ದುಃಸ್ವಪ್ನ**ವೆಂದು ನನ್ನ ಭಾವನೆ.

**ದುಃಸ್ವಪ್ನ** ಎಂದರೆ ಕೆಟ್ಟ ಕನಸು. ಕವಿ ಕನಸೆಂದು ಹೇಳದೆ ಸ್ವಪ್ನವೆಂಬ ಮಾತನ್ನೇ ಉಪಯೋಗಿಸಿದ್ದಾರೆ. ಕಾರಣ ಸ್ವಪ್ನ (ಸಂ. ಶಬ್ದ) ಎನ್ನುವ ಪದಕ್ಕಿರುವ ಅರ್ಥ ಪರಂಪರೆ; ಗಾಂಭೀರ್ಯ ಬಹುಶಃ ಕನಸಿಗಿಲ್ಲ ಎನಿಸುತ್ತದೆ.

**ಕೆಟ್ಟ ಕನಸು**—ಅಂದರೆ ಕವಿಗೆ ಕಾಣಿಸಿಕೊಂಡ ಕನಸಿನಂಥ ಕೆಟ್ಟ ಘಟನೆಗಳು. ಈ ಘಟನೆಗಳು ವಾಸ್ತವವಾಗಿ ನಡೆದಿದ್ದರೂ ಅವುಗಳನ್ನ ನಂಬಬೇಕೆ ಬಿಡಬೇಕೆ ಎಂಬ ಪ್ರಶ್ನೆ

ಮೂಡುತ್ತದೆ. ಕಾರಣ ಕನಸು ನನಸಾಗಲಾರದು, ಎಂಬ ಅನುಮಾನವಿದೆ. ಈ ಕಾರಣದಿಂದಲೋ ಏನೋ ಕವಿ ಕವಿತೆಯನ್ನ "ಸ್ವಪ್ನ"ವೆಂದು ಕರೆದಿದ್ದಾರೆ.

ದುಃಸ್ವಪ್ನ ಕವಿ ತನ್ನ ದೃಶ್ಯೇಂದ್ರಿಯಗಳ ಮೂಲಕ ಕಂಡ ಕನಸಲ್ಲವಾದರೂ ಕಾವ್ಯದ ಆರಂಭದಲ್ಲಿಯೇ "ಕಂಡೆ" ಎಂಬ ಭೂತಕಾಲ ಕ್ರಿಯಾಪದವನ್ನ ಬಳಸಿದ್ದಾರೆ. ಆದರೆ ಇವರು ನಿಜವಾಗಿ ನೋಡಿದರೋ ಎಂಬ ಗುಮಾನಿ ಹುಟ್ಟುತ್ತದೆ. ದುಃಸ್ವಪ್ನ ಕೆಟ್ಟ ಕನಸು. ಇದು ಕಾಣಬಾರದಿತ್ತು ; ಆದರೂ 'ಕಂಡೆ.' ಕಾಣಬಾರದ್ದನ್ನ ಕಂಡೆ ಎನ್ನುವ ವಿಷಾದ ಇಲ್ಲಿ ವ್ಯಕ್ತವಾಗಿದೆ. ಹೀಗೆ ವಿಷಾದದ ಹಿನ್ನೆಲೆಯಲ್ಲಿ ಆರಂಭವಾದ ಕವಿತೆ ಮುಂದುವರಿದಂತೆ ವಿಷಾದ ಮಾಯವಾಗಿ ಬೇರೊಂದು ಮಜಲನ್ನು ಕಾಣುತ್ತದೆ, ಕವಿಯ ಮನಸ್ಸು.

ಇಂದಿನ ಸಮಾಜ ಒಂದು ತಿಪ್ಪೆ. ತಿಪ್ಪೆಯಲ್ಲಿ ಏನೇನೋ ಕೊಳಕು ಹೊಲಸು ದೃಶ್ಯಗಳು. ಅಂಥವನ್ನ ಕವಿ ಇಲ್ಲಿ ಕಂಡಿದ್ದಾರೆ.

'ಎಂತೆಂಥವರು ಏನೇನೋ ಆದದ್ದ ಕಂಡೆ.' ಮಹಾಪುರುಷರು ಮೇಧಾವಿಗಳು, ಸಮಾಜದ ಪ್ರತಿಷ್ಠಿತ ವ್ಯಕ್ತಿಗಳು ಇದ್ದಕ್ಕಿದ್ದಂತೆ ಏನೇನೋ ಆದರು, (ಬುದ್ಧನಂತವರೂ ಬಿದ್ದುಹೋದರು); ಅವನತಿಯನ್ನು ಕಂಡರು. ಅಂತ್ಯಹೊಂದಿದರು, ಏನೇನೋ ಆದರು, ಎಂಬ ಮಾತಿನಲ್ಲಿಯೆ ಆಗಬಾರದ್ದು ಆಗಿಹೋಯಿತು ಎಂಬ ಧ್ವನಿಯಿದೆ.

"ಎಂತೆಂಥವರು" ಯಾಕಾಗಿ ಹೀಗಾದರು ಎಂಬುದಕ್ಕೆ ಇಲ್ಲಿ ಉತ್ತರವಿಲ್ಲ. ಇವರ ಹೀನಸ್ಥಿತಿಯನ್ನು ಕಂಡು ಕವಿಗಾಗಲಿ, ಓದುಗರಿಗಾಗಲಿ ಮರುಕವಿಲ್ಲ. ಇವರು ದುರಂತ ನಾಯಕರಂತೆ ವಿಧಿಯ ಬಲೆಯಲ್ಲಿ ಬಿದ್ದವರಲ್ಲ. ಬಹುಶಃ ಖಳನಾಯಕನಂತೆ ಕೊಳೆಗೀಡಾಗಿರಬೇಕು ?

"ಗೊಮ್ಮಟನಾಗಿ ನಿಂತ ಮಹಾಮೂರ್ತಿ
ಕರಗಿ ಕೊಚ್ಚೆಯಾಗಿ ಹರಿದಿದ್ದ ಕಂಡೆ"

ಗೊಮ್ಮಟ ಜೈನಧರ್ಮದ 'ಮಹಾಮೂರ್ತಿ.' ಸಾತ್ವಿಕ ಪ್ರತೀಕ, ತ್ಯಾಗದ ಸಂಕೇತ. ಮಳೆ ಬಿಸಿಲಿಗೆ ಬೆಚ್ಚದೆ ಕಲ್ಲಾಗಿ ನಿಂತಿದ್ದ ಆ ಮಹಾಮೂರ್ತಿ ಕರಗಿ ಕೊಚ್ಚೆಯಾಗಿ ಹರಿಯಿತು. ಇದೊಂದು (ಪವಾಡ) ಪ್ರಳಯ. ಇಂಥ ಪ್ರಳಯಗಳು ಇಂದಿನ ಸಮಾಜದಲ್ಲಿ ನಡೆಯುತ್ತಿವೆ. ಇಂಥವರೂ ಕೊಚ್ಚೆಯಾಗಿ ಹರಿದರೆ! ಎಂದು ಅಚ್ಚರಿಪಡಬೇಕಿಲ್ಲ. ಕಾರಣ ಕವಿ ಆರಂಭದಲ್ಲಿಯೇ 'ಎಂತೆಂಥವರು ಏನೇನೋ ಆದದ್ದ ಕಂಡೆ'ನೆಂದು ಹೇಳಿದ್ದಾರೆ. ಆದ್ದರಿಂದ ಗೊಮ್ಮಟನಂತಹ ಸತ್ವ ತ್ಯಾಗಗಳು ಮಾಯವಾಗುವುದರಲ್ಲಿ ಆಶ್ಚರ್ಯವೇನಿದೆ ?

"ಇಂದ್ರನೈರಾವತಕ್ಕೆ ತೊಣಚಿ ಹತ್ತಿ
ಬೀದಿನಾಯಾಗಿ ಬೂದಿಯಲ್ಲಿ ಹೊರಳಾಡಿದ್ದ ಕಂಡೆ"

ಇಂದ್ರ, ಸಂಪತ್ತಿಗೆ ಶ್ರೀಗೆ ಸಂಕೇತ. ದೇವತೆಗಳ ಒಡೆಯ. ಅದ್ವಿತೀಯ. ಆತನ ಆನೆಯೂ ಅಷ್ಟೆ. ಅದೇನು ಕಾಡಾನೆಯೆ. ಮಹಾ ದಿಗ್ದಂತಿ. ಇಂಥ ಐರಾವತಕ್ಕೆ ನಾಯಿಗೆ ಹತ್ತುವ ಸಾಮಾನ್ಯ ಸೊಳ್ಳೆ ಜಾತಿಯ ತೊಣಚಿ ಹತ್ತಿದೆ. ಐರಾವತ ಬೀದಿ ನಾಯಂತೆ ಬೀದಿಯ ಬೂದಿಯಲ್ಲಿ ಬಿದ್ದು ಹೊರಳಾಡಿದೆ. ಇಂಥ ಘಟನೆ ಅನೂಹ್ಯ

ವಾದುದು. ಒಂದೊಂದು ಘಟನೆಗೂ ದೃಷಗಳಷ್ಟು ನಡುವೆ ಅಂತರವಿದೆ. ಆದರೂ ಕವಿ 'ಕಂಡೆ' ಎಂದು ಪದೇ ಪದೇ ಹೇಳಿದ್ದಾರೆ. ಸ್ವಪ್ನವಾದರೂ ಇದು ಲೋಕಾನುಭವ. ಆದರೆ ಈ ಲೋಕಾನುಭವವನ್ನು ಪೌರಾಣಿಕ ವಸ್ತುಗಳ ಹಿನ್ನೆಲೆಯಲ್ಲಿ ವ್ಯಕ್ತಪಡಿಸಿರುವುದು ವಿಶಿಷ್ಟವಾದುದು. ಪುರಾಣ ಸುಳ್ಳೆಂದು ಈ ಘಟನೆ ಅರ್ಥವಿಲ್ಲ ಎನ್ನುವಂತಿಲ್ಲ.

"ನಿಗಿನಿಗಿ ಉರಿವ ಉಜ್ವಲ ಮಾತೆಲ್ಲ
ಬರೀ ಬೂದಿಯಾಗಿ ತೆಪ್ಪಗಾಗಿದ್ದ ಕಂಡೆ"

ಮಾತಿನ ಮಹತ್ವವನ್ನರಿಯದೆ ಘೋಷಣೆ ಪ್ರಭುಗಳ ಕಂಠಶೋಷಣೆಯ ಮೆರವಣಿಗೆಯ ವಿಡಂಬನೆ ಇಲ್ಲಿದೆ. ಸ್ವಾರ್ಥಿಗಳು ಕಾರ್ಯ ಸಾಧನೆಗಾಗಿ "ನಿಗಿನಿಗಿ ಉಜ್ವಲ"ವಾದ ಮಾತನ್ನಾಡುತ್ತಾರೆ. ಕಾರ್ಯ ಸಿದ್ಧಿಸಿದ ಮೇಲೆ ಉಜ್ವಲತೆ ಮಾಯವಾಗುತ್ತದೆ. ಇಂದಿನ ರಾಜಕೀಯಕ್ಕೆ ಇದು ವಿಶೇಷವಾಗಿ ಅನ್ವಯಿಸುತ್ತದೆ. ನಡೆ-ನುಡಿ ಸಮನ್ವಯವಿಲ್ಲದ ಎಡಬಿಡಂಗಿ ರಾಜಕಾರಣಿಗಳು ಇಂಥ ಸ್ವಾರ್ಥಿಗಳು.

ಮೇಲೆ ಹೇಳಿದ ಗೊಮ್ಮಟ–ಐರಾವತಗಳೆರಡೂ ಪೌರಾಣಿಕ ವಸ್ತುಗಳು. ಇಲ್ಲಿ ಕವಿಯ ಪುರಾಣ ಪ್ರಜ್ಞೆ ವ್ಯಕ್ತವಾಗಿದೆ. ಸಮರ್ಥವಾಗಿ ಬಳಸಿಕೊಂಡಿದ್ದಾರೆ. ಮೂರನೆಯದು ಮಾತಿನ ಅಮೂರ್ತ ವಿಚಾರ.

ಇನ್ನು ಮುಂದಿನ ಅಭಿವ್ಯಕ್ತಿ ಮೊದಲದಕ್ಕಿಂತ ಹೊಸ ರೀತಿಯದು. ವಿರುದ್ಧವಾದುದು. ಇಲ್ಲಿ nagative positive ಆಗಿದೆ.

'ಕೊಳಕುಮಂಡಲಕ್ಕೆ ಏಳು ಹೆಡೆ ಮೂಡಿ ಮಾನಸ ಸರೋವರದಲ್ಲಿ ಜಲಕ್ರೀಡೆಯಾಡಿದ್ದ ಕಂಡೆ" ಎನ್ನುವಲ್ಲಿ ಸಾಮಾನ್ಯವಾದುದು ಅಸಾಮಾನ್ಯವಾಗಿದೆ. ಇಲಿ–ಹುಲಿಯಾದಂತೆ. 'ಕೊಳಕುಮಂಡಲ'ದ ಹೆಸರೇ ಕೊಳಕು. ಇಂಥ ಸಾಮಾನ್ಯ ಕಾಡು ಹಾವು ಅತ್ಯಂತ ಮಹತ್ವಪೂರ್ಣವಾದ ಆದಿಶೇಷವಾದುದು ಅಲ್ಲದೆ ಮಾನಸ ಸರೋವರದಲ್ಲಿ ಜಲಕ್ರೀಡೆಯಾಡಿತು. ಅಯೋಗ್ಯವಾದುದು ಪೂಜ್ಯವಾಯಿತು. ಇದು ಅತ್ಯಂತ ವಿಸ್ಮಯಕಾರಿಯಾದುದು. ನಿಜ. ಈ ಪ್ರಪಂಚದಲ್ಲಿ ಯಾವುದು ಸಾಧ್ಯವಿಲ್ಲ! ಎಲ್ಲವೂ ಸಾಧ್ಯ. ನಡೆಯಬಾರದ್ದು ನಡೆಯುತ್ತದೆ. ಕಾಣಬಾರದ್ದು ಕಾಣುತ್ತದೆ. ಅಂಥದನ್ನೇ 'ಕಂಡೆ' ಎಂದು ಕವಿ ಆರಂಭದಲ್ಲಿಯೇ ಹೇಳಿದ್ದಾರೆ. ಕವಿಯ ಅನುಭವ ವೈಯಕ್ತಿಕವಾದರೂ ಇದು ಲೋಕಾನುಭವ. 'ಲೋಕಾನುಭವದ' 'Techni colourd' ರೂಪ ಈ ಕವಿತೆ?

"ಕಾವಿಯೊಳಗೆ ಕೋವಿಯೆದ್ದು
ತನ್ನನ್ನು ತಾನು ಕೊಂದುಕೊಂಡಿದ್ದ ಕಂಡೆ"

ಕಾವಿ ತ್ಯಾಗದ ಸೂಚಕ. ಅರ್ಥ ಕಾಮುಗಳನ್ನು ನಿಗ್ರಹಿಸಿದವನು ಸನ್ಯಾಸಿಯಾಗಬಲ್ಲ. ಇಲ್ಲಿ ಇಂದ್ರಿಯ ನಿಗ್ರಹ ಬಹಳ ಮುಖ್ಯ. ಆದರೆ ಇಂದು ಸನ್ಯಾಸಿಯಂತೆ ವೇಶ ಧರಿಸಿ ಇಂದ್ರಿಯಗಳನ್ನು ಪೋಷಿಸುವ ಬೂಟಾಟಿಕೆಯ ಸನ್ಯಾಸಿಗಳೇ ಹೆಚ್ಚು. (ವಿಶ್ವಾಮಿತ್ರನಂಥ ಸನ್ಯಾಸಿಗೂ ಮೇನಕೆಯನ್ನು ಕಂಡಾಗ ಕಚ್ಚೆ ಜಾರಿತೆಂದ ಮೇಲೆ ಇಂದಿನ ಸನ್ಯಾಸಿಗಳ ವಿಚಾರ ಸಾಮಾನ್ಯ.) ಕಚ್ಚೆ ಕಟ್ಟಿದ್ದರೂ ಅನೇಕ ಸಾರಿ ಬಿಚ್ಚಿ ಹೋಗು

ತ್ತದೆ. ಇಂಥ ಹಗಲು ಬ್ರಹ್ಮಚಾರಿಗಳು ಸಮಾಜವನ್ನು ಸುಡುವ ಕೋವಿಗಳೂ ಹೌದು, ತಮ್ಮನ್ನು ತಾವೇ ಸುಟ್ಟುಕೊಳ್ಳುವ 'Mechine Gun' ಕೂಡ,

"ಸರಸ್ವತೀ ಮಂದಿರದ ಶ್ವೇತ ಚಾಮರ ಕೆಲವು
ಮಂತ್ರಿಗಳ ಮನೆಯ ಕಸಪೊರಕೆಯಾದದ್ದ ಕಂಡೆ"

ಸಾಹಿತ್ಯ ಕಾರ್ಯ ಪವಿತ್ರವಾದುದು. (ಇತ್ತೀಚೆಗೆ ಈ ಅರ್ಥ ಮಾಯವಾಗಿದೆ. ಇದಕ್ಕೆ ಕಾರಣ ಅನೇಕ). ಅದನ್ನ ಹೀನ ಕಾರ್ಯಕ್ಕೆ ಪ್ರಚಾರಕ್ಕೆ ಬಳಸಬಾರದು. ಅದು "ಅನಪೇಕ್ಷವಾದುದು." ಆದರೆ ಇಂದಿನ ಸಾಹಿತಿಗಳು ಅಕ್ಯಾಡಮಿ ಇಂಕಿನ ವಾಸನೆ ಯಿಂದ ತಮ್ಮ ಶ್ವೇತ ಚಾಮರವನ್ನು ಮಂತ್ರಿಗಳಿಗೆ ಗಾಳಿಹಾಕಲು ಬಳಸಿದರು. ಮಂತ್ರಿ ಗಾಳಿ ಸೋಂಕೊಡೆ ಸೋತರು. ಕವಿಗಳು ಮಂತ್ರಿಗಳನ್ನು (ಅವನು ಕಂತ್ರಿಯಾಗಿದ್ದರೂ) ಇಂದ್ರ ಚಂದ್ರನೆಂದು ಹೊಗಳಿ ಹಾಡಿದರಯ್ಯಾ! ಸ್ವಾರ್ಥಕ್ಕಾಗಿ ತಮ್ಮ ಕಾವ್ಯನಾಯಕ ನೊಂದಿಗೆ ಸಮಕಾಲೀನ ರಾಜಕೀಯ ನಾಯಕರನ್ನು ಹೋಲಿಸಿ, ಅಭೇದ ಕಲ್ಪಿಸಿ 'ಸಮಸ್ತ' ಕಾವ್ಯ ಬರೆದು ಪಂಪರನ್ನರ ಪರಂಪರೆಗೆ ಸೇರಿದರು? ಅವರಂತೆ ಇವರೂ ತಮ್ಮ ಕಾವ್ಯ ಪ್ರತಿಭೆಯನ್ನು ದ್ವಿಮುಖವಾಗಿ ಒಡೆದರು—"ರಾಜಕೀಯ?" "ಸಾಮಾಜಿಕ" ಎಂದು.

ಹುತ್ತಗಳ ಸುತ್ತ ಬೆತ್ತಲೆ ನಿಂತು
ಹಾಲು ತುಪ್ಪವನೆರೆವ ಸರ್ಪಾರಾಧಕರ ಕಂಡೆ

ಇದು ವಿಶಿಷ್ಟ ಅನುಭವ. ವಿಶಿಷ್ಟ ಅಭಿವ್ಯಕ್ತಿ ಕೂಡ. ಹುತ್ತದ ಸುತ್ತ ಬೆತ್ತಲೆ ನಿಲ್ಲುವುದು ಸನ್ಯಾಸತ್ವ ಸ್ವೀಕಾರದ ಸಂಕೇತ. ಅವರು ಬೆತ್ತಲೆ ನಿಂತಿದ್ದಾರೆ. ಬಾಹ್ಯ ಪ್ರಪಂಚ ಇವರ ಇಂದ್ರಿಯಗಳ ಮೇಲೆ ಪ್ರಚೋದನೆ ಮಾಡುವುದಿಲ್ಲ! ಪ್ರಚೋದನೆ ಯಿದ್ದರೂ ವಿಚಲಿತರಾಗದಂಥ ಧೃತಿ ಇವರಿಗಿರುತ್ತದೆ. ಆದರೆ ಇಲ್ಲಿ ಬೆತ್ತಲೆ ನಿಂತವರ ರೀತಿ ಬೆರಗುಗೊಳಿಸುವಂತಹದು. ಹಾಲುತುಪ್ಪವನ್ನೆರೆಯುತ 'ಸರ್ಪಾ'ರಾಧನೆ ಮಾಡು ತ್ತಿದ್ದಾರೆ. ಅಂದರೆ ಇಂದ್ರಿಯಗಳಿಗೆ ಮಾಲಿಸು ಮಾಡುತ್ತಿದ್ದಾರೆ. ಇವರು sexlogs. ಇಂಥವರೂ ಇದ್ದಾರೆ.

"ಹಠಕ್ಕಾಗಿ ಮಠ ಕಟ್ಟಿ ಜಗದ್ಗುರುಗಳಾದ
ಸಾಹಿತಿಗಳನು ಕಂಡೆ"

ಇಂದು ದಿಡೀರ್ ಕವಿಗಳು ಹೆಚ್ಚುತ್ತಿದ್ದಾರೆ. ಇವರ ಕಾವ್ಯ? ಕಾವ್ಯವೊ? ನವ್ಯವೊ? ಭವ್ಯವೊ? ಹೇಳತೀರದು. ಹೇಳಬಾರದು. ಏನಾದರೂ ಮಾಡಬೇಕೆಂಬುದೊಂದೆ ಇವರ ಹಠ. ಕಾವ್ಯ ಇಲ್ಲವೆ ಅಕಾವ್ಯವನ್ನಾದರೂ ಮಾಡಬೇಕು ಎಂಬ ಜಗದ್ಗುರುಗಳು ಇವರು. ಅಂಥೂ ಒಂದು ಮಠ ಕಟ್ಟಬೇಕೆಂಬ ಛಟ. ಇಂಥ ಗುಂಪುಗಾರಿಕೆ ಕವಿಗಳಿಂದ ಸಾಹಿತ್ಯ ಸೇವೆಗಿಂತ ಅನ್ಯಾಯವೇ ಹೆಚ್ಚೆಂದು ಶಿವರುದ್ರಪ್ಪನವರ ಕಳವಳ.

ಈ 'ಜಗದ್ಗುರುಗಳಿಗೆಲ್ಲ' ಪೆರಲಿಸಿಸ್ ಬಡಿದಂತೆ ಒಂದೇ ದೃಷ್ಟಿ. ಒಂದೇ ಸೃಷ್ಟಿ.

"ದೊಡ್ಡ ಪೀಠಗಳ ಮೇಲೆ ಸಣ್ಣ ಜನ
ಇಲಿ ಹೆಗ್ಗಣಗಳಾಗಿ ಹರಿದಾಡಿದ್ದ ಕಂಡೆ"

ಇವರು ಸ್ವತಂತ್ರ ದೇಶದ ಪ್ರೇತಗಣಗಳು. ಅಂದಣವನೇರಿದ ಸೊಣಗನಂತೆ. ಎಲ್ಲಿದ್ದರೂ ನೀಚ ಬುದ್ಧಿ ಹೋಗುವುದಿಲ್ಲ. ದೊಡ್ಡ ಪೀಠಗಳ ಮೇಲೆ ಉನ್ನತ ಅಧಿಕಾರಿಯಾಗಿ ಖಜಾನೆಯನ್ನು ಇಲಿ ಹೆಗ್ಗಣಗಳಂತೆ ಕೊರೆದು ಸೋರಿ ಹೋಗುವಂತೆ ಮಾಡಿದುವು. ಹೊಲ ಮೇಯುವ ಇಲಿ ಹೆಗ್ಗಣಗಳಂಥ ಮುಂದಾಳುಗಳು.

ಇಷ್ಟನ್ನು "ಕಂಡ" ಕವಿ ಕೊನೆಯಲ್ಲಿ ಎಚ್ಚರಗೊಂಡ ರೀತಿ ಅತ್ಯಂತ ವಿಶಿಷ್ಟವಾದುದು. ಅಸೂಹ್ಯವಾದ ಅನ್ಯಾಯ ಅನಾಚಾರವನ್ನು ಮೊದಲಿನಿಂದ ಕೊನೆಯವರೆಗೆ 'ನೋಡಿ' ವೈಯಕ್ತಿಕವಾಗಿ ಎಚ್ಚರಗೊಂಡಿದ್ದಾರೆ. ಎಚ್ಚರ ಉರಿವ ಕೆಂಡದ ಉಂಡೆ. "ಉರಿವ ಕೆಂಡ" ಅತ್ಯಂತ powerful expression. ಲೋಕದ ಡೊಂಕನ್ನೆಲ್ಲ 'ನಾನೊಬ್ಬನೆ' ರಿಪೇರಿ ಮಾಡುತ್ತೇನೆಂಬ ಅಹಂಕಾರ ತಾಳದೆ ತಮ್ಮನ್ನ ತಾವು ಸಂತೈಸಿಕೊಳ್ಳುವ ರೀತಿ ಹೊಸದಲ್ಲದಿದ್ದರೂ ಶಿವರುದ್ರಪ್ಪನವರ ಎಚ್ಚರ ವಿನೂತನ. ಊಹಿಸಿದಂತೆಲ್ಲ ಸುತ್ತಿ ಸುತ್ತಿ ತನ್ನ ಅರ್ಥ ಪರಂಪರೆಯನ್ನ ಬಿಚ್ಚುತ್ತಾ ಹೋಗುವ ಮಾತು "ಎಚ್ಚರವೆಲ್ಲ ನಿಗಿನಿಗಿ ಉರಿವ ಕೆಂಡ" ಒಂದೇ ಮೇಲಿನ ಮಾತಿಗೆ ಸಾಕ್ಷಿ.

ಈ ಕವಿತೆ ಶ್ರೀ ಶಿವರುದ್ರಪ್ಪನವರ ಕಾವ್ಯದ ಕೆಲವು ವಿಶಿಷ್ಟತೆಗಳನ್ನ ಪ್ರತಿನಿಧಿಸುತ್ತದೆ. ಕವಿಗಿರುವ ಸಾಮಾಜಿಕ ಜವಾಬ್ದಾರಿ ಅವುಗಳಲ್ಲಿ ಮೊದಲನೆಯದು. ಅಗಾಧ ಪರಂಪರೆಯ ನಂಬುಗೆ ಎರಡನೆಯದು. ಕವಿತೆಯ ತುಂಬಾ ಜೀವನದ ಅನುಭವದಿಂದ ನೇರವಾಗಿ ಆಯ್ದ ಪ್ರತೀಕಗಳಿವೆ.

ಸಮಕಾಲೀನ ಸಮಾಜದ ವಿಡಂಬನೆಗೆ ಪುರಾಣ ಇತಿಹಾಸಗಳ ಪ್ರತಿಮೆಗಳ ಚೌಕಟ್ಟನ್ನು ಎರೆದಿದ್ದಾರೆ. ಇದ್ದ ಮೌಲ್ಯ ಮಾಯವಾಗಿದೆ. ಹೊಸ ಮೌಲ್ಯ ಹುಟ್ಟದೆ 'waste land' ಆಗಿರುವ ಇಂದಿನ ಪರಿಸರದಲ್ಲಿ ಬದುಕುತ್ತಿರುವ ಕವಿ ವರ್ತಮಾನದ ಎಲ್ಲ ಮಜಲನ್ನು ಕಲಾತ್ಮಕವಾಗಿ ಪ್ರತಿಕ್ರಿಯಿಸಿದ್ದಾರೆ.

ಕವಿತೆಯ ಒಂದೊಂದು ವಾಕ್ಯಗಳೂ ಸ್ವತಂತ್ರ ಸಾರ್ಥಕ ಘಟಕಗಳು (units of meaning) ತನ್ನಷ್ಟಕ್ಕೆ ತಾನೆ ಅರ್ಥಪೂರ್ಣವಾಗಿದೆ. ಇಡೀ ಕವಿತೆಯ ಒಟ್ಟರ್ಥವನ್ನ ಧ್ವನಿಸುತ್ತದೆ. ಮೊದಲ ವಾಕ್ಯ "ಎಂತೆಂಥವರೊ ಏನೇನೋ ಆದದ್ದ ಕಂಡೆ" ಎಂಬುದು. ಕಾವ್ಯದ ಉದ್ದಕ್ಕೂ ಕುತೂಹಲ, ವಿಸ್ಮಯ, ವಿಡಂಬನೆ ಸರಣಿ ಸರಣಿಯಾಗಿ ಬಂದಿವೆ. ಭಾಷೆ; ನೇರ-ಸರಳ, ಆದರೂ ಭಾರ. ಮಿಂಚಿನ ಹೊಳಪು. ಭಾಷೆಗೆ ಬಣ್ಣ ಬಳಿಯದೆ ಇದ್ದ ಹಾಗೆ ಬಳಸಿ ಅದರಲ್ಲಿಯೇ ಹೊಸ ಅರ್ಥವನ್ನು ಹಿಂಡುವ ಕವಿ ಶಿವರುದ್ರಪ್ಪನವರು. ಈ ಕವಿತೆಯನ್ನ ಓದಿದಾಗ ಥಟ್ಟನೆ ಹೊಳೆಯುವ ಅಂಶ: ಶಿವರುದ್ರಪ್ಪನವರು ಎಷ್ಟು ಸಮಕಾಲೀನ ಚೇತನ ಎನ್ನುವುದು.

ಈ ಲೇಖನದ ವಿವರಣೆ ತೀರ ಸರಳ ಎನ್ನುವುದು. ಓದಿದ ಎಲ್ಲರಿಗೂ ಅರಿಯುವ ವಿಚಾರ. ಗಹನವಾಗಿ ವಿಷದ ನಿಗೂಢತೆಯನ್ನು ಹೊಕ್ಕು ಹೊರಬಂದರೆ ಇಂದಿನ 'ಇತಿಹಾಸ'ದ ಒಂದು ಬೃಹತ್ ಸಂಪುಟ ಸಿದ್ಧವಾಗುತ್ತವೆ. ಅಂಥ ಪ್ರಯತ್ನಕ್ಕೆ ನಾನು ಕೈಹಾಕಿಲ್ಲ.

# ದುಃಸ್ವಪ್ನ[1]

ಕಂಡೆ
ಎಂತೆಂಥವರು ಏನೇನೋ ಆದದ್ದ ಕಂಡೆ :
ಗೊಮ್ಮಟನಾಗಿ ನಿಂತಿದ್ದ ಮಹಾಮೂರ್ತಿ
ಕರಗಿ ಕೊಚ್ಚೆಯಾಗಿ ಹರಿದಿದ್ದ ಕಂಡೆ.

ಇಂದ್ರನೈರಾವತಕ್ಕೆ ತೊಣಚಿ ಹತ್ತಿ
ಬೀದಿನಾಯಾಗಿ ಬೂದಿಯಲ್ಲಿ ಹೊರಳಾಡಿದ್ದ ಕಂಡೆ.

ನಿಗಿನಿಗಿ ಉರಿದ ಉಜ್ವಲವಾದ ಮಾತೆಲ್ಲ
ಬರೀ ಬೂದಿಯಾಗಿ ತೆಪ್ಪಗಾದದ್ದ ಕಂಡೆ.
ಕೊಳಕುಮಂಡಲಕ್ಕೆ ಏಳು ಹೆಡೆ ಮೂಡಿ
ಮಾನಸ ಸರೋವರದಲ್ಲಿ ಜಲಕ್ರೀಡೆಯಾಡಿದ್ದ ಕಂಡೆ.

ಕಾವಿಯೊಳಗೇ ಕೋವಿಯೆದ್ದು
ತನ್ನನ್ನು ತಾನೇ ಕೊಂದುಕೊಂಡಿದ್ದ ಕಂಡೆ.
ಸರಸ್ವತೀ ಮಂದಿರದ ಶ್ವೇತ ಚಾಮರ ಕೆಲವು
ಮಂತ್ರಿಗಳ ಮನೆಯ ಕಸಪೊರಕೆಯಾದದ್ದ ಕಂಡೆ.
ಹುತ್ತಗಳ ಸುತ್ತ ಬೆತ್ತಲೆ ನಿಂತು
ಹಾಲು ತುಪ್ಪವನ್ನೆರೆವ ಸರ್ಪಾರಾಧಕರ ಕಂಡೆ.
ಹೆಠಕ್ಕಾಗಿ ಮಠ ಕಟ್ಟಿ ಜಗದ್ಗುರುಗಳಾದ
ಸಾಹಿತಿಗಳನು ಕಂಡೆ.
ದೊಡ್ಡ ಪೀಠಗಳ ಮೇಲೆ ಸಣ್ಣ ಜನ
ಇಲಿ ಹೆಗ್ಗಣಗಳಾಗಿ ಹರಿದಾಡಿದ್ದ ಕಂಡೆ.
ಕಂಡು, ಎಚ್ಚರಗೊಂಡೆ
ಎಚ್ಚರವೆಲ್ಲ ನಿಗಿನಿಗಿ ಉರಿವ ಕೆಂಡದ ಉಂಡೆ!

---

1 ಸಾಧನೆ : ಸಂಪುಟ-೪, ಸಂಚಿಕೆ, ೧

ಎನ್. ವಿಜಯಲಕ್ಷ್ಮಿ

# ವೀರಶೈವ ಸಾಹಿತ್ಯಕ್ಕೆ ಸಾಂಗತ್ಯಗಳ ಕೊಡುಗೆ

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ವೀರಶೈವ ಕವಿಗಳ ಕೃತಿರಚನೆ ಆರಂಭಯುಗದಿಂದ ಹತ್ತೊಂಬತ್ತನೆಯ ಶತಮಾನದವರೆಗೂ ನಡೆದಿದೆ. ಅವರು ವಚನ, ಷಟ್ಪದಿ, ರಗಳೆ— ಈ ಮೊದಲಾದ ಕೆಲವು ಸಾಹಿತ್ಯರೂಪಗಳಿಗೆ ನೇತಾರರಾಗಿದ್ದಾರೆ. ಇವರ ಕಾರ್ಯಚಟು ವಟಿಕೆಗಳನ್ನು ಸಾಂಗತ್ಯ ಕೃತಿಗಳ ಸಂಬಂಧವಾಗಿ ಒಂದು ಸಮೀಕ್ಷೆಯ ರೂಪದಲ್ಲಿ ಹದಿನೈದ ರಿಂದ ಹತ್ತೊಂಬತ್ತು ಶತಮಾನಗಳವರೆಗೆ ಎಂದರೆ ಐದು ಶತಮಾನಗಳ ಚರಿತ್ರೆಯ ಹಿನ್ನೆಲೆ ಯಲ್ಲಿ ನೋಡಿದರೆ ಆಗ ಅವರ ಸಾಧನೆಯೇನೆಂಬುದು ತಿಳಿಯುತ್ತದೆ.

ಹದಿನೈದನೆಯ ಶತಮಾನ ಸಾಂಗತ್ಯದ ಪ್ರಾರಂಭಯುಗ. ಈ ಯುಗದ ಮೂವರು ವೀರಶೈವ ಕವಿಗಳು ಬರೆದ ಮೂರು ಕೃತಿಗಳಲ್ಲಿ ಸೊಬಗಿನ ಸೋನೆ, ಪರಮಾನುಭವ ಬೋಧೆ—ಇವು ಸಾಂಗತ್ಯದ ಪ್ರಭೇದರೂಪದಲ್ಲಿ ಎಂದರೆ ವಿಷ್ಣುಗಣಗಳಿಂದಲೇ ಘಟಿತ ವಾಗಿರುವ ಛಂದಸ್ಸಿನಲ್ಲಿ ರಚಿತವಾದ ಪ್ರಕಟಿತ ಕೃತಿಗಳು. ಶರಣನೊಬ್ಬನ ಕಥೆಯನು ಬಿತ್ತರಿಸುವ ಶ್ವೇತನ ಸಾಂಗತ್ಯ ನಮಗೆ ಉಪಲಬ್ಧವಿರುವಂತೆ ಅಸಮಗ್ರವೂ ಅಪ್ರಕಟಿತವೂ ಆದ ಕಾವ್ಯ. ಇದರಲ್ಲಿ ಶ್ವೇತನು ಪ್ರೇತಪತಿಯ ಸೊಕ್ಕನ್ನು ಮುರಿದು ಭೂತನಾಥನ ಲೀಲೆಯನ್ನು ಮೆರೆದ ಕಥೆಯನ್ನು ೨೮೦ ಪದ್ಯಗಳಲ್ಲಿ ವರ್ಣಿಸಲಾಗಿದೆ.

ಹದಿನಾರನೆಯ ಶತಮಾನದಲ್ಲಿ ವೀರಶೈವ ಕವಿಗಳು ಸಾಂಗತ್ಯದಲ್ಲಿ ಹೇರಳವಾಗಿ ಕೃತಿ ಗಳನ್ನು ಬರೆದರು. ಶರಣರ ಕಥೆ, ಪುರಾಣಕಥೆ, ಐತಿಹಾಸಿಕ ವ್ಯಕ್ತಿಗಳ ಚರಿತ್ರೆ—ಇವೇ ಮೊದಲಾದ ವಿಷಯಗಳನ್ನು ಕುರಿತ ಕೃತಿಗಳು ಈ ಶತಮಾನದಲ್ಲಿ ರಚಿತವಾಗಿವೆ. ಚೋಳ ರಾಜಸಾಂಗತ್ಯ, ನಿಜಲಿಂಗಚಿಕ್ಕಯ್ಯನ ಕಥೆ, ಅಲ್ಲಮಪ್ರಭುವಿನ ಸಾಂಗತ್ಯ, ಸತ್ಯೇಂದ್ರ ಚೋಳನ ಕಥೆ, ಅಮುಗಿದೇವನ ಕಥೆ, ತ್ರಿಭುವನತಿಲಕ—ಇವು ಶರಣರ ಕಥೆಗಳು. ಇವುಗಳಲ್ಲಿ ತ್ರಿಭುವನತಿಲಕ, ಅಲ್ಲಮಪ್ರಭುವಿನ ಸಾಂಗತ್ಯ, ಅಮುಗಿದೇವನ ಕಥೆ—ಈ ಕೃತಿಗಳು ಮಾತ್ರ ಪ್ರಕಟವಾಗಿವೆ. ಚೋರ ಚಿಕ್ಕಯ್ಯನು ನಿಜವಾದ ಭಕ್ತನಾಥ ಕಥೆ ಯನ್ನು ವರ್ಣಿಸುವ ನಿಜಲಿಂಗ ಚಿಕ್ಕಯ್ಯನ ಕಥೆಯಲ್ಲಿ ೭೪೫ ಪದ್ಯಗಳಿವೆ. ೫೬೧ ಪದ್ಯ ಗಳ ಚೋಳರಾಜ ಸಾಂಗತ್ಯ ಒಂದು ಅಸಮಗ್ರ ಕೃತಿ. ೧೬೬೦ ಪದ್ಯಗಳ ಸತ್ಯೇಂದ್ರ ಚೋಳನ ಕಥೆ ರಾಜನೊಬ್ಬನ ನಿಷ್ಪಕ್ಷಪಾತವಾದ ನಡವಳಿಕೆಯನ್ನು ಶಿವಪಂಚಾಕ್ಷರಿ ಮಂತ್ರದ ಉಚ್ಚಾರಣೆಯ ಫಲವನ್ನು ಹೇಳುತ್ತದೆ. ಶಿವಪಂಚಾಕ್ಷರಿ ಮಂತ್ರ ಮಹಿಮೆ ಯನ್ನು, ನರಕಿಗಳನ್ನು ಉದ್ಧರಿಸಿದ ಕಥೆಯನ್ನು ವರ್ಣಿಸುವ ೪೨೨ ಪದ್ಯಗಳ ಸಾನಂದ ಗಣೇಶ ಸಾಂಗತ್ಯವೂ ಇದೇ ಶತಮಾನದ ಕೃತಿ. ತ್ರಿಪುರದಹನ ಕಥೆ, ವೀರಭದ್ರಲೀಲಾ

ರತ್ನ—ಹದಿನಾರನೆಯ ಶತಮಾನದ ಪುರಾಣ ಕಥಾ ಸಾಹಿತ್ಯ. ಇವು ಅನುಕ್ರಮವಾಗಿ ಸು. ೧೦೦೦ ಹಾಗೂ ೧೭೦೦ ಪದ್ಯಗಳಲ್ಲಿ ಶಿವ ತ್ರಿಪುರಗಳನ್ನು, ದಕ್ಷನ ಬಸವನನ್ನು ಸಂಹರಿಸಿದ ಕಥೆಗಳನ್ನು ವರ್ಣಿಸುವವು. ರಾಮನಾಥಚರಿತೆ, ತೋಂಟದರಾಯನ ಕಥೆ ಇವು ಐತಿಹಾಸಿಕ ವ್ಯಕ್ತಿಗಳನ್ನು ಕುರಿತ ಕೃತಿಗಳು. ಇವುಗಳಲ್ಲಿ ರಾಮನಾಥಚರಿತೆ ಸಮಗ್ರವಾಗಿಯೂ, ತೋಂಟದರಾಯನ ಕಥೆ ಭಾಗಶಃ ಪ್ರಕಟವಾದ ಕಾವ್ಯಗಳಾಗಿವೆ.

ಹದಿನೇಳನೆಯ ಶತಮಾನದಲ್ಲಿ ಹಿಂದಿನ ಶತಮಾನದ ಕೃತಿಗಳ ವಿಷಯಾನುಕ್ರಮಣಿಕೆಗೆ ಹೆಚ್ಚು ಸಂಖ್ಯೆಯಲ್ಲಿ ಗ್ರಂಥಗಳು ರಚನೆಯಾಗಿವೆ. ವೀರಶೈವಧರ್ಮದ ನೇತಾರನಾದ ಬಸವಣ್ಣನನ್ನು ಕುರಿತಂತೆ ೪–೫ ಕೃತಿಗಳನ್ನು ಕಾಣಬಹುದು. ಶುದ್ಧಾಂಗವಾಗಿ ಧರ್ಮವನ್ನೇ ವಿವರಿಸುವಂತಹ ಸಾಹಿತ್ಯ ಶಿವಶರಣೆಯರ ಚರಿತ್ರೆಗಳು ಈ ಶತಮಾನದ ವಿಶೇಷ ರಚನೆಗಳು. ಶಿವಶರಣರುಗಳ ಚರಿತ್ರೆ ಅದರ ಹೆಚ್ಚಿನ ಪ್ರಮಾಣದಲ್ಲಿ ರಚಿತವಾದದ್ದು ಇದೇ ಶತಮಾನದಲ್ಲಿ.

ಶಿವಯೋಗಿ ಸೋಮೇಶಕೃತವಾದ ಅರವತ್ತುಮೂವರು ಪುರಾತನರ ಚರಿತ್ರೆ ಹುಲಿಗೆರೆ ಸೋಮೇಶನ ಅಂಕಿತದಲ್ಲಿ ಬರೆಯಲಾಗಿದೆ. ಹರಶರಣರ ಮಹತ್ತ್ವ ಹೇಳಬೇಕೆಂಬ ಉದ್ದೇಶದಿಂದ ಕವಿ ಹೊರಟಿದ್ದಾನೆ. ೨೧೬೨ ಪದ್ಯಗಳು ಈ ಕೃತಿಯ ಪದ್ಯಪ್ರಮಾಣ. ಇದರಲ್ಲಿ ಪ್ರಸಿದ್ಧ ಶರಣರಾದ ತಿರುನೀಲಕಂಠ, ಇಹಪ್ಪಗೆಯಾಂಡ, ಇಳೆಯಾಂಡ ಗುಡಿಮಾರ, ಸೇದಿರಾಜ ಮೊದಲಾದ ಪುರಾತನ ಶರಣರ ಕಥೆಗಳನ್ನು ಹೇಳಲಾಗಿದೆ. ೧೫೦ ಪದ್ಯಗಳ ಪುರಾತನರ ಸಾಂಗತ್ಯ ಚೆನ್ನಗುರುಮಲ್ಲೇಶ್ವರ ಅಂಕಿತದಲ್ಲಿ ರಚಿತವಾಗಿರುವ ಮತ್ತೊಂದು ಪುರಾತನರ ಚರಿತ್ರೆ. ಕವಿ ತನ್ನ ಕೃತಿಯನ್ನು 'ಭಕ್ತಿಯನೆಲೆವನೆ ಮುಕ್ತಿಯ ನಿಲಯ ವಿರಕ್ತಿಯತಾಣ ಭಾವಿಸಲು ಮುಕ್ತಿಯ ಮಂದಿರವೀಕೃತಿನಿಜಜ್ಞಾನಸಕ್ತಿಯ ಸದನ'ವಾಗಿ ರಚಿಸುವ ಹಂಬಲವನ್ನು ತಳೆದಿದ್ದಾನೆ.

ಮೂರು ಸಂಧಿ ೬೯೨ ಪದ್ಯಗಳುಳ್ಳ ಕಿತ್ತನಕೆರೆ ವೀರನ ಪುರಾತನರ ಪುರಾಣದಲ್ಲಿ ಕಲಕೇತ, ಭೋಗಣ್ಣ, ತಿರುನೀಲಕಂಠ, ಜಂಬೂರ ಸತ್ಯಕ್ಕ, ಹಾವಿನ ಹಾಳ ಕಲ್ಲಯ್ಯ, ಇಳೆಯಾಂಡ ಗುಡಿಮಾರ, ನಿರ್ಲಜ್ಜೆ ಶಾಂತಯ್ಯ, ನುಲಿಯ ಚಂದಯ್ಯ, ಕೋಳೂರ ಕೊಡಗೂಸು, ಗೊಲ್ಲಾಳೈಯ್ಯ, ಕಲಿಗಣನಾಥ, ನನ್ನಯ್ಯ, ಮಾರಯ್ಯ—ಎಂಬ ಪುರಾತನ ನೂತನ ಶರಣರುಗಳ, ಶರಣೆಯರುಗಳ ಚರಿತ್ರೆಗಳನ್ನು ಬರೆದಿರುವ ಕವಿ ತನ್ನ ಕೃತಿಯನ್ನು ಹತ್ತು ಲೀಲೆಯ ಕಥೆ ಎಂದು ಕರೆದಿದ್ದಾನೆ. ಕೃತಿಕರ್ತೃವಾರು ? ಅವನ ಕಾಲವಾವುದು ? ತಿಳಿಯದ ಕಲಿಕಾಮದೇವನ ಸಾಂಗತ್ಯ 'ತನುವ ಗುರುವಿಗಿತ್ತು ಮನವ ಲಿಂಗದೊಳಿಟ್ಟು ಧನವ ಜಂಗಮಕೆ ವೆಚ್ಚಿಸುತ ದಿನಗಳೆದವರ' ಕಥೆಗಳನ್ನು ವರ್ಣಿಸುವುದು.

೩೫೪ ಪದ್ಯಗಳಲ್ಲಿ ಸಿರಿಯಾಳ ಸೆಟ್ಟಿಯ ಕಥೆಯನ್ನು ವಿರಚಿಸಿರುವ ಕವಿ ಮಹಾದೇವನ ಕೃತಿ ಪ್ರಮಾಣದಲ್ಲಿ ಸಣ್ಣದಾದರೂ ಉದ್ದೇಶದಲ್ಲಿ ಹಿರಿದಾಮುದು. ತಾಯಿ ತಂದೆ ಗೋತ್ರಗಳ ಕೊಂದ ಕಥೆಯಲ್ಲ, ನರರ ಹೊಗಳುವ ಕಥೆಯಲ್ಲ, ಪರಧನ ಪರಸತಿಗೆಳಸಿದ ನುಡಿಯಲ್ಲ ಹರನ ಸಂಗತಿ ಎಂದು ಕವಿ ಹೇಳುತ್ತಾನೆ. ಶಾಂತವೀರದೇಶಿಕನ ಶಿವಗಣಚರಿತ್ರ

ಈ ಕಾಲದ ಮತ್ತೊಂದು ಪುರಾತನ ನೂತನ ಶರಣ ಸಂಕೀರ್ತನ. ೭೭೬ ಪದ್ಯಗಳ ಈ ಅಸಮಗ್ರ ಕೃತಿಯಲ್ಲಿ ತಿರುನೀಲಕಂಠ, ವಿಕ್ರಮಚೋಳ, ಸತ್ಯೇಂದ್ರಚೋಳ, ರಾಜೇಂದ್ರ ಚೋಳ, ಕರಿಯೂರಚೋಳ, ದೀಪದಕಲಿ, ಕಣ್ಣಪ್ಪ, ಕೆಂಬಾವಿ ಭೋಗಣ್ಣ, ಬಸವೇಶ್ವರ, ಚೆನ್ನಬಸವ, ರೇವಣ, ಸಿದ್ಧರಾಮ, ಶಂಕರದಾಸ—ಮೊದಲಾದ ಶರಣರ ಕಥೆಗಳಿವೆ. ೧೫೦ ಪದ್ಯಗಳ 'ನಂಬಿಯಣ್ಣನ ಪುರಾಣ'ವೂ ಸೇರಿದಂತೆ ಮೇಲೆ ಪ್ರಸ್ತಾಪಿಸಿದ ಏಳು ಪುರಾತನರ ಚರಿತ್ರೆಗಳು ಅಪ್ರಕಟಿತ ಕೃತಿಗಳು.

ಉಪಲಬ್ಧವಿರುವಂತೆ ಬಸವೇಶ್ವರನನ್ನು ಕುರಿತು ರಚಿತವಾದ ನಾಲ್ಕು ಕೃತಿಗಳಲ್ಲಿ ೭೭೭ ಪದ್ಯಗಳ ಬಸವ ಪವಾಡವೊಂದರ ಹೊರತಾಗಿ ಉಳಿದ ಮೂರು ಅಪ್ರಕಟಿತವಾದವುಗಳು. ಇವುಗಳಲ್ಲಿ ವಿಸ್ತಾರವಾದುದು ಸುಮಾರು ಮೂರು ಸಾವಿರ ಪದ್ಯಗಳ ಬಸವೇಶ್ವರನ ಕಾವ್ಯ. ಹಲವು ಶರಣರ ಕಥೆಗಳು ಸೇರಿರುವ ಬಸವೇಶ್ವರ ಚರಿತ್ರೆಗಳು ಪುರಾಣ ಕಥಾ ಕೋಶಗಳಂತಿವೆ. 'ಭಕ್ತಿರಸಸೋನೆ' ಸು. ೨೫೦೦ ಪದ್ಯಗಳುಳ್ಳ ಕೃತಿಯಾಗಿ ಇದರಲ್ಲಿ ದನುಜಪುಂಗವರು, ಪುರಾಣವ್ಯಕ್ತಿಗಳು ಇವರ ಕಥೆಗಳೂ ಸೇರಿವೆ. ಸು. ೧೨೦೦ ಪದ್ಯಗಳ 'ಬಸವ ಶಿಖಾಮಣಿ'ಯಲ್ಲಿ ಶಿವಶರಣನ ಕಥೆಯಿದೆಯೆಂಬುದರಿಂದ 'ಹಾದರದ ಕಥೆಯಲ್ಲ' ಎಂಬ ಭಾವ ವ್ಯಕ್ತವಾಗಿದೆ. ದುರ್ಮಾರ್ಗಿಯಾದವನನ್ನು ಸನ್ಮಾರ್ಗಕ್ಕೆ ತರುವ ಕಥೆಯೇ ೧೭೦೦ ಪದ್ಯಗಳ ಉದ್ದಂಡ ಕವಿಯ ಸುಜ್ಞಾನಿದೇವ ಕಾವ್ಯದ ಮುಖ್ಯ ಕಥೆಯ ವಸ್ತು. ಪರ್ವತದೇವನ ನನ್ನಯ್ಯಕಾವ್ಯದ (ಸು. ೧೫೦೦ ಪದ್ಯಗಳ) ಕಥೆಯಾದರೂ ಇದೇ ವಸ್ತುವನ್ನು ಕುರಿತಿದೆ. ಮುಖ್ಯ ಕಥೆಯ ಈ ಹಿನ್ನೆಲೆಯಲ್ಲಿ ಹತ್ತಾರು ಕಥೆಗಳು ಬರುತ್ತವೆ.

ಮಹಾದೇವಿ ಅಕ್ಕನ ಸಾಂಗತ್ಯ, ಪಿಟ್ಟವ್ವೆ ಚರಿತ್ರೆ, ಹೇರೂರು ಹೆಣ್ಣಿನ ಕಥೆ—ಶಿವ ಶರಣೆಯರ ಕಥೆಗಳನ್ನುಳ್ಳ ಸಣ್ಣಪುಟ್ಟ ಕೃತಿಗಳು. ವೀರಶೈವ ಧರ್ಮವನ್ನು ವಿವರಿಸುವಂತಹ ಪ್ರಸಾದ ಚಾರಿತ್ರ, ಪ್ರಸಾದ ಸಾಂಗತ್ಯ, ಪ್ರಸಾದ ಚಿಂತಾಮಣಿ, ಗುರುಲಿಂಗ ಜಂಗಮಚರಿತ—ಇವು ಅಪ್ರಕಟಿತ ಗ್ರಂಥಗಳು. ಇವುಗಳಲ್ಲಿ 'ಗುರುಲಿಂಗಜಂಗಮಚರಿತ'ವನ್ನು ಬಿಟ್ಟರೆ ಉಳಿದವು ಪ್ರಮಾಣದಲ್ಲಿ ಚಿಕ್ಕ ಗ್ರಂಥಗಳಾಗಿವೆ. ಗುರುಭಕ್ತನ ಕಥೆ, ದೀಪದಕಲಿಯರ ಕಥೆ, ಮಡಿವಾಳಯ್ಯನ ಚರಿತ್ರೆ, ಅಬ್ಬಲೂರು ಚರಿತ್ರೆ, ಮೋಳಿಗಯ್ಯನ ಪುರಾಣ, ಕರಸ್ಥಲನಾಗಲಿಂಗನ ಚರಿತ್ರೆ, ರೇವಣಸಿದ್ಧ ಚರಿತ್ರೆ, ಶಂಕರಲಿಂಗನ ಕಾವ್ಯ—ಇವೇ ಮುಂತಾಗಿ ಹತ್ತಾರು ಮಂದಿ ಶರಣರೂ, ಶಿವಭಕ್ತರೂ ಆದವರ ಚರಿತ್ರೆಗಳು ಹದಿನೇಳನೆಯ ಶತಮಾನದಲ್ಲಿ ರಚಿತವಾಗಿವೆ. ಪೌರಾಣಿಕ ವ್ಯಕ್ತಿ ಹರಿಶ್ಚಂದ್ರನ ಕಥೆಯನ್ನು ವರ್ಣಿಸುವ ಹರಿಶ್ಚಂದ್ರ ಸಾಂಗತ್ಯ, ಪ್ರಾಣಿಕಥೆಯನ್ನುಳ್ಳ ಕಪೋತವಾಕ್ಯ, ಉಜ್ಜಯಿನಿಯ ವಿಕ್ರಮನ ಕಥೆಯನ್ನು ವರ್ಣಿಸುವ ವಿಕ್ರಮವಿಲಾಸ ಇದೇ ಶತಮಾನದ ಇನ್ನಿತರ ಕೃತಿಗಳು. ಹದಿನೇಳನೆಯ ಶತಮಾನದ ಶರಣರ ಕಥೆಗಳೆಲ್ಲ ಪ್ರಮಾಣದಲ್ಲಿ ವಿಸ್ತಾರವಾದವುಗಳೇ. ಇದೇ ಸಾಲಿಗೆ ಸೇರುವ ಇನ್ನಿತರ ಕೃತಿಗಳಲ್ಲಿ ವಿಕ್ರಮವಿಲಾಸವನ್ನು ಹೆಸರಿಸಬೇಕು. ಹದಿನೆಂಟನೆಯ ಶತಮಾನದ ಸಾಂಗತ್ಯ ಕೃತಿಗಳಲ್ಲಿ ತೋಂಟದ ಸಿದ್ಧಲಿಂಗ ಚರಿತ್ರೆ, ಮಾದೇಶ್ವರ ಸಾಂಗತ್ಯಗಳನ್ನು ಬಿಟ್ಟರೆ ದೇವಾಂಗ ದಾಸಿಮಯ್ಯನ ಪುರಾಣ, ಸೊನ್ನಲಾ

ಪುರದ ಸಿದ್ಧರಾಮ ಚರಿತ್ರೆ, ಕೆಂಬಾವಿ ಭೋಗಣ್ಣ ಚರಿತ್ರೆ, ಕಲಿಗಣನಾಥಸಾಂಗತ್ಯ, ಶನಿಭಕ್ತಿಸಾರ—ಎಂಬ ಉಳಿದವು ಅಪ್ರಕಟವಾದ ಕೃತಿಗಳು. ಬಿಸಪುರದ ಮಲ್ಲಯ್ಯ ವಿರಚಿತವಾದ ೬೩೨ ಪದ್ಯಗಳ ಕಲಿಗಣನಾಥ ಸಾಂಗತ್ಯದಲ್ಲಿ ಹಾದಿಯ ಮಾತನು ಸೋದಿಸಿ ಪೇಳುವ ಗಾದೆಯ ಮಾತು ಇದಲ್ಲ ವ್ರತವೀರಶೈವದ ಕೃತಿಯಿದು ಎಂಬ ಭಾವ ವ್ಯಕ್ತವಾಗಿದೆ. ೧೭ನೆಯ ಶತಮಾನದ ಧೋರಣೆಯಂತೆ 'ಸಾಂತಪಿತಮಿತ್ರರು ಹತರಾದ ಕಥೆಯಲ್ಲ' ಎಂಬ ಭಾವವೂ ಈ ಕೃತಿಯಲ್ಲಿ ಮೂಡಿದೆ. ಪುರಾಣಪ್ರಸಂಗವನ್ನು ಆಧರಿಸಿ ರಚಿತವಾಗಿರಬಹುದಾದ ಕೃತಿ ಶನಿಭಕ್ತಿಸಾರ. ಸೊನ್ನಲಾಪುರ ಸಿದ್ಧರಾಮಚರಿತ್ರೆ, ದಾಸಿಮಯ್ಯನ ಪುರಾಣ, ಕೆಂಬಾವಿ ಭೋಗಣ್ಣ ಚರಿತ್ರೆ—ಇವು ಶರಣರ ಕಥೆಗಳು.

ಹತ್ತೊಂಭತ್ತನೆಯ ಶತಮಾನದ ಸಾಂಗತ್ಯ ಕೃತಿಗಳು, ಗುರುಬೋಧಾಮೃತ, ಜಗನ್ನಾಥಕಥೆ, ಗಿರಿಜಾಕಲ್ಯಾಣ, ನಟರಾಜ ಭಕ್ತನಂದ ಹೊಲೆಯ–ಸಾನಂದ ಗಣೇಶನ ಕಥೆ, ರಾಮಪುರದ ಸಿದ್ಧರಾಮನ ಕಥೆ, ವೀರಸೇನನ ಸಾಂಗತ್ಯ ಇವಲ್ಲಿ ನಟರಾಜಭಕ್ತ ನಂದ ಹೊಲೆಯ ಒಂದರ ಹೊರತಾಗಿ ಉಳಿದವು ಅಪ್ರಕಟಿತ ಕೃತಿಗಳು. ಇಡಿಯಾಗಿ ಇವನ್ನು ಚಿಕ್ಕ ಕಾವ್ಯಗಳೆಂದೇ ಹೇಳಬಹುದು. ಬಹುಶಃ ಪುರಾತನ ಶರಣನ ಕಥೆಯೊಂದರ ಆಧಾರದಿಂದ ರಚಿತವಾಗಿದೆ. ನಟರಾಜಭಕ್ತನಂದ ಹೊಲೆಯ. ಗಿರಿಜಾಕಲ್ಯಾಣವ ಪುರಾಣ ಪ್ರಸಿದ್ಧ ಕಥೆಯನ್ನು ಬಿತ್ತರಿಸುತ್ತದೆ. ಜಗನ್ನಾಥ ಕಥೆ ಪ್ರಸಿದ್ಧವಾದ ೩–೪ ಕಥೆಗಳ ಘಟನೆಗಳಿಂದ ಸಿದ್ಧವಾದ ಕಥೆಯಂತಿದೆ. ರಾಮಪುರದ ಸಿದ್ಧರಾಮನ ಕಥೆ, ವೀರಸೇನನ ಕಥೆ—ಶಾಪಗ್ರಸ್ಥರಾದ ವ್ಯಕ್ತಿಗಳಿಬ್ಬರು ಅದನ್ನು ಕಳೆದುಕೊಂಡು ಮುಕ್ತರಾದ ಕಥೆಗಳನ್ನು ವರ್ಣಿಸುತ್ತವೆ.

ಇದುವರೆಗೆ ಸಾಂಗತ್ಯದಲ್ಲಿ ಬರೆದ ವೀರಶೈವ ಕವಿಗಳ ಕೃತಿಗಳಲ್ಲಿ ವಿಶೇಷವಾಗಿ ಅಪ್ರಕಟವಾದ ಕೃತಿಗಳನ್ನು ಕುರಿತಂತೆ ಒಂದು ಸ್ಥೂಲ ಪರಿಚಯ ಮಾಡಿಕೊಂಡಂತಾಯಿತು. ವೀರಶೈವ ಸಾಂಗತ್ಯ ಕವಿಗಳಲ್ಲಿ ಹಲವರು ಒಂದೇ ವಿಷಯದ ಬಗ್ಗೆ ೩–೪ ಕೃತಿಗಳನ್ನು ಬರೆದುದನ್ನು ನೋಡಿದಾಗ ಅವು ಸಾಂಗತ್ಯ ಕವಿಗಳ ಪ್ರಿಯವಾದ ವಸ್ತುವೆಂದು ತಿಳಿಯುತ್ತದೆ. ಬಸವೇಶ್ವರನ ಚರಿತ್ರೆ, ದಕ್ಷಸಂಹಾರದ ಕಥೆಗಳನ್ನುಳ್ಳ ವೀರೇಶ್ವರ ಚರಿತ್ರೆ, ಪುರಾತನರ ಕಥೆ, ವೀರಶೈವ ಧರ್ಮಪ್ರತಿಪಾದನೆಯ ಪ್ರಸಾದ ಚಾರಿತ್ರ—ಇವುಗಳೆಲ್ಲದರ ಮೇಲೂ ೪–೫ ಕೃತಿಗಳು ಸಿಗುತ್ತವೆ. ಕಪೋತವಾಕ್ಯ, ನನ್ನಯ್ಯನ ಕಾವ್ಯ, ವೀರಸಂಗಯ್ಯನ ಕಾವ್ಯ—ಇವು ಒಂದೇ ಕೃತಿಯ ಪದ್ಯಗಳು ಸೇರಿದಂತೆ ಪ್ರಕ್ಷೇಪ ತತ್ತ್ವದಂತೆ ಕೆಲವು ಹೆಚ್ಚಿನ ಪದ್ಯಗಳನ್ನು ಕೂಡಿಕೊಂಡು ಎರಡೆರಡು ಕೃತಿಗಳಾಗಿ ಸಿಗುತ್ತಿವೆ. ಶಿವಪಂಚಾಕ್ಷರಿ ಮಂತ್ರದ ಮಹಿಮೆಯನ್ನು ವ್ಯಕ್ತಪಡಿಸುವ ಸಾನಂದ ಗಣೇಶನ ಕಥೆಗಳೆರಡು, ಸತ್ಯೇಂದ್ರಚೋಳನ ಕಥೆ ಒಂದೇ ಆಶಯವನ್ನುಳ್ಳ ಕೃತಿಗಳು. ಅಲ್ಲಮ ಪ್ರಭು ಚರಿತ್ರೆ, ಗಿರಿಜಾಕಲ್ಯಾಣ, ಸಾನಂದ ಚರಿತ್ರೆ, ಸಿರುಮನ ಚರಿತ್ರೆ—ಇವು ಒಂದೇ ವಸ್ತುವನ್ನು ಒಳಗೊಂಡ ಎರಡೆರಡು ಕಾವ್ಯಗಳಾಗಿವೆ.

ವೀರಶೈವ ಸಾಂಗತ್ಯ ಕವಿಗಳಿಗೆ ಹರಿಹರ, ಭೀಮಕವಿ ಈ ಕವಿಗಳು ಸ್ಮರಣೀಯರು.

ಭೀಮಕವಿಯ ಬಸವ ಪುರಾಣದಂತೆ ಶರಣರ ಕಥಾಕೋಶವನ್ನು ರಚಿಸುವ ಹಂಬಲ ಇವರದು. ಕೆಲವು ಕವಿಗಳು ಭೀಮಕವಿಯಂತೆ ಬಸವ ಚರಿತ್ರೆಯನ್ನೇ ಎತ್ತಿಕೊಂಡು ಅದಕ್ಕೆ ಉಳಿದ ಶರಣರ ಚರಿತ್ರೆಗಳನ್ನು ಸೇರಿಸಿದರೆ, ಮತ್ತೆ ಕೆಲವರು ಇತರ ಶರಣರಲ್ಲಿ ತಮಗೆ ಪ್ರಿಯವಾದವರೊಬ್ಬೊಬ್ಬರ ಚರಿತ್ರೆಗಳನ್ನು ಮುಖ್ಯ ಕಥೆಗಾಗಿ ಎತ್ತಿಕೊಂಡು ಅದಕ್ಕೆ ಉಳಿದ ಶರಣರ ಚರಿತ್ರೆಗಳನ್ನು ಸೇರಿಸಿದರು. ಬಸವೇಶ್ವರನ ಕಾವ್ಯ, ಭಕ್ತಿರಸಸೋನೆ. ಬಸವ ಸವಾಡ, ಭೈರವೇಶ್ವರ ಕಾವ್ಯ, ಗುರುಭಕ್ತನಕಥೆ, ಮೋಳಿಗಯ್ಯನ ಪುರಾಣ, ಸುಜ್ಞಾನಿದೇವಕಾವ್ಯ, ನನ್ನಯ್ಯನ ಕಾವ್ಯ, ದೀಪದಕಲಿಯರ ಕಾವ್ಯ ಮುಂತಾದ ಕೆಲವು ಕೃತಿಗಳನ್ನು ನಿದರ್ಶನಕ್ಕಾಗಿ ಸ್ಮರಿಸಬಹುದು. ಇನ್ನುಳಿದ ಕೆಲವು ಕೃತಿಗಳಲ್ಲಿ ಎಂದರೆ ಕೆಂಬಾವಿ ಭೋಗಣ್ಣನ ಚರಿತ್ರೆ, ಕರಸ್ಥಲ ನಾಗಲಿಂಗ ಚರಿತ್ರೆ, ಅಬ್ಬಲೂರು ಚರಿತ್ರೆ, ಸಿದ್ಧಲಿಂಗೇಶ್ವರ ಸಾಂಗತ್ಯ, ವೀರಸಂಗಯ್ಯನ ಚರಿತ್ರೆಗಳಂತಹ ಕೃತಿಗಳಲ್ಲಿ ಆಯಾ ಕೃತಿಯ ನಾಯಕನಿಗೇ ಸಂಬಂಧಪಟ್ಟಂತೆ ಜೀವನ ಚರಿತ್ರೆ, ಪವಾಡ ವಿಚಾರ ಮುಂತಾದವುಗಳು ವರ್ಣಿತವಾಗಿರುತ್ತವೆ.

ಒಟ್ಟಿನಲ್ಲಿ ವೀರಶೈವ ಕವಿಗಳ ಕಥಾಸಾಹಿತ್ಯವನ್ನು ದರ್ಶಿಸಿದರೆ ಶರಣರ ಕಥೆಗಳು ಇದರ ಬಂಡವಾಳವೂ, ಜೀವಾಳವೂ ಆಗಿತ್ತೆಂದು ಹೇಳಬಹುದು. ಅದೇ ವೀರಶೈವ ಕವಿಗಳ ಮಹತ್ತ್ವದ ಕೊಡುಗೆ. ಜೀವನಧರ್ಮವನ್ನು ಉತ್ತಮವೂ, ಪ್ರಾಮಾಣಿಕವೂ ಆಗುವಂತೆ ಮಾಡಿದ ವಚನ ಸಾಹಿತ್ಯಸಾರ ಸಾಂಗತ್ಯ ಸಾಹಿತ್ಯದಲ್ಲಿ ಕಥೆಗಳ ಮೂಲಕ ತನ್ನ ಅಭಿವ್ಯಕ್ತಿಯನ್ನು ಮತ್ತಷ್ಟು ಸ್ಪಷ್ಟಪಡಿಸಿತು. ಶರಣರ ಒಂದೊಂದು ಕಥೆಯೂ ಒಂದೊಂದು ತತ್ತ್ವ, ಒಂದೊಂದು ಆಚರಣೆಯನ್ನು ಪ್ರತಿಪಾದಿಸಿತು. ಹೀಗೆ ಒಬ್ಬೊಬ್ಬ ಶರಣನ ಕಥೆಯನ್ನು ವೀರಶೈವ ಕವಿಗಳು ಬರೆದರೂ ಅದರಿಂದ ಜೈನ ಸಾಂಗತ್ಯಗಳಲ್ಲಾದಂತೆ ಕಥನಕ್ರಮದಲ್ಲಿ ಸರಳತೆಯೇನೂ ಲಭಿಸಲಿಲ್ಲ. ಕಾರಣ ಒಬ್ಬ ಶರಣನ ಕಥೆಯೆಂದರೆ ಅದು 'ಸಮಗ್ರ ಶರಣರ ಸಂಕ್ಷಿಪ್ತ ಚರಿತ್ರೆ'ಯೇ ಆಗಿತ್ತು. ಇದಲ್ಲದೆ ಒಂದೇ ನಿಷ್ಠೆಯಿಂದ ಶಿವನನ್ನು ನಂಬಿ ಉಪಾಸಿಸುವುದು, ವೀರಶೈವಧರ್ಮದ ಪ್ರಸಾರ—ಇದನ್ನು ವೀರಶೈವ ಸಾಂಗತ್ಯ ಕವಿಗಳು ತಮ್ಮ ಕೃತಿಗಳಿಂದ ಮಾಡಿತೋರಿಸಿದರು. ಶರಣರ ಕಥೆಗೆ ವೈವಿಧ್ಯ ಕಲ್ಪಿಸಲು ಪುರಾಣದ ಕಥೆಗಳು, ಐತಿಹಾಸಿಕ ವ್ಯಕ್ತಿಗಳ ಚರಿತ್ರೆ ಇವನ್ನೂ ಈ ಕವಿಗಳು ಬರೆದಿದ್ದಾರೆ. ಬ್ರಾಹ್ಮಣ ಕವಿಗಳು ಬರೆದಂತಹ ಸ್ಥಳಪುರಾಣ, ದೇವತಾಕಲ್ಯಾಣಗಳೂ ಇವರಿಂದ ರಚಿತವಾಗಿವೆ.

ಉಪಲಬ್ಧವಿರುವಂತೆ ಸಾಂಗತ್ಯದಲ್ಲಿ ವೀರಶೈವ ಕವಿಗಳ ಕೃತಿಗಳು ಸುಮಾರು ೭೦. ಇವುಗಳಲ್ಲಿ ೨೦ ಕೃತಿಗಳು ಪ್ರಕಟವಾದವುಗಳಾದರೆ ಉಳಿದ ೫೦ ಅಪ್ರಕಟಿತವಾದ ಕೃತಿಗಳು. ಅಲ್ಲದೆ ನಮಗೆ ಅನುಪಲಬ್ಧವಾಗಿರುವ ಬಹುಪಟ್ಟಿಗೆ ಪ್ರಕಾಶನವೂ ಹೊಂದಿರದ ಮತ್ತಿಪ್ಪತ್ತು ಗ್ರಂಥಗಳನ್ನು ಸೇರಿಸಿಕೊಂಡರೆ ಸಾಂಗತ್ಯದಲ್ಲಿ ರಚಿತವಾದ ವೀರಶೈವ ಕವಿಗಳ ಕೃತಿ ರಚನೆ ತೊಂಭತ್ತಕ್ಕೇರುತ್ತದೆ. ಈ ಸಾಹಿತ್ಯ ಸಂಪತ್ತಿನಿಂದ ವೀರಶೈವ ಕವಿಗಳು ಶರಣರ ಕಥೆಗಳಿಗೆ ಜನಪ್ರಿಯತೆ, ಧರ್ಮಪ್ರಸಾರ—ಇವನ್ನು ಉಂಟುಮಾಡಿಸಿ ತನ್ಮೂಲಕ ವೀರಶೈವ ಸಾಹಿತ್ಯಕ್ಕೆ ತಮ್ಮ ಸೇವೆಯನ್ನು ಸಲ್ಲಿಸಿದ್ದಾರೆ.

## ಎಂ. ಚಿದಾನಂದಮೂರ್ತಿ

# 'ಪುರಾಣ' ಮತ್ತು 'ಕಾವ್ಯ'—ಬಸವಣ್ಣನ ಬಗ್ಗೆ

"ಪುರಾಣ" ಎಂಬ ಮಾತಿಗೆ ಪ್ರಾಚೀನವಾದುದು, ಹಳೆಯದು ಎಂಬ ಅರ್ಥವಿದೆ. ಎಂದೋ ಆಗಿಹೋದ ಸಂಗತಿಗಳನ್ನು ನಿರೂಪಿಸುವುದು ಪುರಾಣಕೃತಿ ಅರ್ಥಾತ್ ಪುರಾಣ. ಪುರಾಣ ಕಾರನ ದೃಷ್ಟಿ ಯಾವಾಗಲೂ ಹಿಂದಿನವರ ಕಡೆ ಇರುತ್ತದೆ ಎಂಬುದು ಇದರಿಂದ ಸೂಚಿತ ವಾಗುತ್ತದೆ.

ಸಂಸ್ಕೃತದಲ್ಲಿ ಪುರಾಣ ಸಾಹಿತ್ಯ ಅಪಾರವಾಗಿದೆ. ಸುಪ್ರಸಿದ್ಧ ಮಹಾ ಪುರಾಣಗಳು ಮತ್ತು ಉಪ-ಪುರಾಣಗಳಲ್ಲದೆ, ಸಾವಿರಾರು ಪುರಾಣ ಕೃತಿಗಳು ಅಲ್ಲಿ ಹುಟ್ಟಿವೆ. ಅವುಗಳಲ್ಲಿ ಬರುವ ಸಂಗತಿಗಳ ವೈವಿಧ್ಯ, ನಿರೂಪಣೆಯಲ್ಲಿ ಏಕಮುಖತೆಯಿಲ್ಲದಿರುವುದು, ಕಲ್ಪಿತ ಸಂಗತಿಗಳ ಆಧಿಕ್ಯ, ಕಾಲಕಾಲಕ್ಕೆ ಪುರಾಣಗಳು ಬೆಳೆದು ಬಂದಿರುವುದು ಇತ್ಯಾದಿ ಕಾರಣ ಗಳಿಂದಾಗಿ ಪುರಾಣ ಸಾಹಿತ್ಯ ಮೊದಮೊದಲು ವಿದ್ವಾಂಸರ ಗಮನವನ್ನು ಸೆಳೆಯಲಿಲ್ಲ. ಈಚೆಗೆ ಅವುಗಳ ಮಹತ್ವವನ್ನು ವಿದ್ವಾಂಸರು ಮನಗಾಣುತ್ತಿದ್ದಾರೆ. ಅವುಗಳ ಕ್ರಮಬದ್ಧ ವಾದ ಅಧ್ಯಯನ ಭಾರತೀಯ ಸಂಸ್ಕೃತಿಯನ್ನು ತಿಳಿಸಿಕೊಡುತ್ತದೆ: ಇದಕ್ಕೆ ನಿದರ್ಶನವಾಗಿ Cultural history from the Vayupurana ಎಂಬ ಗ್ರಂಥವನ್ನು ನೋಡಬಹುದು.

ಪುರಾಣವನ್ನು (myth) "ಪ್ರಾಚೀನರ ಭಾಷೆ" ಎಂದು ಕರೆಯುವುದುಂಟು. ಜಗತ್ತು ಮತ್ತು ಜೀವನಗಳನ್ನು ಕತೆ ಸಾದೃಶ್ಯ ಸಾಮತಿಗಳ ಮೂಲಕ ಅರ್ಥಮಾಡಿಕೊಳ್ಳುವ ಪ್ರಯತ್ನ ಅಲ್ಲಿ ಕಾಣುತ್ತದೆ. ಒಬ್ಬ ವ್ಯಕ್ತಿ ಅಲ್ಲಿ ಪ್ರಧಾನವಾಗಿರಬಹುದು ಅಥವಾ ಇಲ್ಲದಿರಬಹುದು. ವ್ಯಕ್ತಿ ಪ್ರಧಾನವಾಗಿದ್ದರೂ, ಅವನೊಬ್ಬನನ್ನೇ ಕೇಂದ್ರ ವ್ಯಕ್ತಿಯಾಗಿ ಮಾಡಿಕೊಂಡು ಎಲ್ಲ ಗಮನವನ್ನು ಅವನತ್ತ ಕೇಂದ್ರೀಕರಿಸಿ ಚಿತ್ರಿಸುವುದು ಪುರಾಣ ಗಳಲ್ಲಿ ಅಪೂರ್ವ. ವ್ಯಕ್ತಿಯ (ವ್ಯಕ್ತಿಗಳ ಜೊತೆ) ಒಂದು ಇಡೀ ಪರಂಪರೆಯನ್ನು ಪುರಾಣ ಕೊಡುತ್ತದೆ. ಸಮಗ್ರತೆ ಅದರ ಪ್ರಧಾನ ಲಕ್ಷಣ. ಆದ್ದರಿಂದಲೇ ಸಂಸ್ಕೃತ ಪುರಾಣಗಳಲ್ಲಿ ಸೃಷ್ಟಿಪೂರ್ವ ಸ್ಥಿತಿ ಸೃಷ್ಟಿ, ಕರ್ಮ, ದೇವಾನುದೇವತೆಗಳ ಕತೆ, ಭೂಲೋಕ ದಲ್ಲಿ ಆಳಿದ ರಾಜರು, ಅವರ ವಂಶ, ಸ್ಥಳ ಪುರಾಣಗಳು, ಶಿಲ್ಪ, ಕಾವ್ಯಮೀಮಾಂಸೆ, ವಾಸ್ತು, ಮತಗಳು—ಇತ್ಯಾದಿ ಇತ್ಯಾದಿ ಎಷ್ಟೆಷ್ಟೋ ಸಂಗತಿಗಳು ಬರುತ್ತವೆ. ಇಡೀ ಜಗ ತ್ತನ್ನು ಸಮಗ್ರವಾಗಿ ನೋಡುವ ದೃಷ್ಟಿ ಪುರಾಣಗಳದು. ಇಲ್ಲಿ ಸಂಕ್ಷಿಪ್ತವಾಗಿ ಸಾರವತ್ತಾಗಿ ಹೇಳುವುದೆಂಬುದಿಲ್ಲ. ಎಲ್ಲವನ್ನೂ ವಿವರಿಸಬೇಕು ಆದಷ್ಟು ಹೆಚ್ಚು ವಿವರಗಳಿರಬೇಕು ಎಂಬುದೇ ಪ್ರಧಾನ ದೃಷ್ಟಿ. ಪುರಾಣದ ಮಧ್ಯೆ ಈಚಿನವರು ಯಾರೋ ಒಂದು ಕತೆಯನ್ನು ಸೇರಿಸಿದರೆ ಅದು ನಿರಾಕರಣೀಯವೇನೂ ಅಲ್ಲ. ಪುರಾಣಗಳು ಕಾಲದಿಂದ ಕಾಲಕ್ಕೆ ಬೆಳೆದುಬಂದ ರೀತಿ ಹೀಗೆ. ಪ್ರಸಿದ್ಧ ಪುರಾಣಗಳ ಕರ್ತೃತ್ವವನ್ನು ವ್ಯಾಸರಿಗೆ ಆರೋಪಿಸಿ

ದ್ದರೂ, ಅವುಗಳು ಅಜ್ಞಾತ ಲೇಖಕಕೃತ ಎಂದೇ ತೆಗೆದುಕೊಳ್ಳಬೇಕಾಗುತ್ತದೆ. ಪುರಾಣಗಳು ಒಬ್ಬನ ಸೃಷ್ಟಿಯಲ್ಲ: ಹಲವರ ಸೃಷ್ಟಿ: ಅವು ಎಲ್ಲರಿಗೂ ಸೇರಿದಂಥವು ಎಂಬ ಭಾವನೆಯೇ ಮೊದಲಿಂದ ರೂಢವಾಗಿದೆ. ಸಂಸ್ಕೃತ ಪುರಾಣಗಳು ಸಂಸ್ಕೃತ ಭಾಷೆಯಲ್ಲಿದ್ದರೂ ಅವುಗಳು ಒಂದು ರೀತಿಯಲ್ಲಿ ಜಾನಪದವೂ ಹೌದು ಎಂಬುದನ್ನಿಲ್ಲಿ ಸ್ಮರಿಸಿಕೊಳ್ಳಬಹುದು. ವೇದಗಳಿಗೆ ಅನಧಿಕಾರಿಗಳಾದ ಸ್ತ್ರೀ, ಶೂದ್ರರ ಬೋಧನೆಗಾಗಿ ಪುರಾಣಗಳು ರಚಿತವಾಗಿವೆ ಎಂಬ ಮಾತು ಅರ್ಥಪೂರ್ಣವಾದುದು. ಪುರಾಣಗಳು ಮುಖ್ಯವಾಗಿ ವಿದ್ವಾಂಸರಿಗಲ್ಲ, ಸಾಮಾನ್ಯ ಜನತೆಗಾಗಿ.

ಮೇಲಿನ ಕೆಲ ಸಂಗತಿಗಳ ಹಿನ್ನೆಲೆಯಲ್ಲಿ, ಕನ್ನಡದ ಎರಡು ಕೃತಿಗಳನ್ನು ಇಲ್ಲಿ ಪರಿಶೀಲಿಸುತ್ತೇನೆ. ಅವೆರಡರ ವಸ್ತುವೂ ಒಂದೇ: ಬಸವಣ್ಣನವರು. ಆದರೆ ಆ ಎರಡು ಕೃತಿಗಳಲ್ಲಿ ಮೂಲಭೂತವಾದ ದೃಷ್ಟಿಭೇದವಿದೆ. ಅದು ಈ ಪ್ರಬಂಧದ ಮುಖ್ಯ ವಸ್ತು.

ಬಸವಣ್ಣನವರಿಗೆ ಸಂಬಂಧಿಸಿದಂತೆ ಸು. ೧೨೦೦–೧೨೩೦ರ ಸುಮಾರಿನಲ್ಲಿದ್ದ ಹರಿಹರ “ಬಸವರಾಜದೇವರ ರಗಳೆ”ಯನ್ನು ಬರೆದ. ಬಹುಶಃ ಅವನಾದ ಬಳಿಕ, ಅದೇ ಶತಮಾನದಲ್ಲಿದ್ದ ಪಾಲ್ಕುರಿಕೆ ಸೋಮನಾಥ ತೆಲುಗಿನಲ್ಲಿ “ಬಸವಪುರಾಣಮು”ಎಂಬ ಕೃತಿಯನ್ನು ರಚಿಸಿದ. ಇದನ್ನು ಭೀಮಕವಿ ಕ್ರಿ.ಶ. ೧೩೬೯ರಲ್ಲಿ “ಬಸವಪುರಾಣ” ಎಂಬ ಹೆಸರಲ್ಲಿ ಕನ್ನಡಕ್ಕೆ ಅನುವಾದಿಸಿದ. ಈ ಅನುವಾದ ಬಹುಮಟ್ಟಿಗೆ ಮೂಲವನ್ನೇ ಅನುಸರಿಸಿರುವುದರಿಂದ ಭೀಮಕವಿಯ ಕಾವ್ಯದ ಬಗ್ಗೆ ಹೇಳಿದ್ದೆಲ್ಲ ಪಾಲ್ಕುರಿಕೆ ಸೋಮನಿಗೆ ಅನ್ವಯವಾಗುತ್ತದೆ.

ಹರಿಹರನದು ಮುಖ್ಯವಾಗಿ ಕಾವ್ಯದೃಷ್ಟಿ: ಅವನ ಕೃತಿಯ ಹೆಸರೇ ಹೇಳುವಂತೆ “ಬಸವರಾಜದೇವ”ನ ಬಗ್ಗೆ ಬರೆದಿರುವ ರಗಳೆಯ ರೂಪದ ಕಾವ್ಯ ಅವನದು. ‘ರಾಜ’ ಎಂಬುದನ್ನು ಗಮನಿಸಬೇಕು: ಬಿಜ್ಜಳನಂತೆಯೇ ಇವನೂ ರಾಜ. ಬಿಜ್ಜಳ ಲೌಕಿಕ ರಾಜ, ಬಸವಣ್ಣ ಆಧ್ಯಾತ್ಮಿಕ ರಾಜ ಮತ್ತು ಬಿಜ್ಜಳನಿಗಿಂತ ಒಂದು ಕೈ ಮಿಗಿಲು ಎಂಬುದು ಸ್ಪಷ್ಟವಾಗಿ ಧ್ವನಿತವಾಗುತ್ತದೆ. ಕಾವ್ಯದಲ್ಲಿಯೂ ಬಸವ ತಾನು ಬಿಜ್ಜಳನ ಕೈಕೆಳಗಿನ ಮಂತ್ರಿಯಾಗಿದ್ದರೂ ಅವನಿಗೆ ತಾನು ಸರಿಸಮಾನನಂತೆ ನಡೆದುಕೊಳ್ಳುವ ರೀತಿಯಲ್ಲಿಯೇ ಚಿತ್ರಿತನಾಗಿದ್ದಾನೆ. ಅವನೇ ಇಲ್ಲಿಯ ಕೇಂದ್ರವ್ಯಕ್ತಿ: ಎಲ್ಲ ಘಟನೆಗಳಿಗೂ ಅವನು ಒಂದಲ್ಲ ಒಂದು ರೀತಿ ಸಂಬಂಧಿಸಿದ್ದಾನೆ. ಅವನು ಬರೆದ ಅಧ್ಯಾಯವಿಲ್ಲ ಕತೆಯಿಲ್ಲ. ಕವಿಯ ಗಮನ ಬಸವನನ್ನು ಬಿಟ್ಟು ಅತ್ತ ಇತ್ತ ಸರಿಯುವುದಿಲ್ಲ. ಆದ್ದರಿಂದ ಹರಿಹರನ ಕೃತಿ ಏಕಮುಖ ಉದ್ದೇಶವುಳ್ಳ ಕಾವ್ಯವಾಗಿ ತೋರುತ್ತದೆ. ಇಲ್ಲಿ ಇತರ ಪಾತ್ರಗಳು ಬಂದರೂ ಅವು ಬಸವನಿಗೆ ಸಂಬಂಧಿಸಿದಂತೆ ಮಾತ್ರ ಕಾಣಿಸಿಕೊಳ್ಳಲು ಸಾಧ್ಯ.

ಭೀಮಕವಿಯ (ಪಾಲ್ಕುರಿಕೆ ಸೋಮನ) “ಬಸವಪುರಾಣ” (“ಬಸವಪುರಾಣಮು”) ಹೆಸರೇ ಹೇಳುವಂತೆ ಪುರಾಣ. ಬಸವಣ್ಣ ಈ ಕೃತಿಯ ಪ್ರಮುಖ ವ್ಯಕ್ತಿಯೇ. ಆದರೆ ಕೃತಿಕಾರನದು ಪ್ರಮುಖವಾಗಿ ಪುರಾಣ ದೃಷ್ಟಿ. ಬಸವನನ್ನು ಒಂದು ಮಹಾ ಪರಂಪರೆಯ ಅಂಗವಾಗಿ ಸಮಗ್ರವಾಗಿ ನೋಡಲು ಕೃತಿಕಾರ ಬಯಸುತ್ತಾನೆ. ಇಲ್ಲಿ ಇತರ ಅನೇಕ ಐತಿಹಾಸಿಕ ವ್ಯಕ್ತಿಗಳ ಕತೆಗಳಿವೆ. ಇಲ್ಲಿ ಪೌರಾಣಿಕವಾದ ಸಿರಿಯಾಳನ, ಕೋಳೂರು ಕೊಡಗೂಸಿನ,

ಬೇಡರಕಣ್ಣಪ್ಪನ ಕತೆಗೆ ಮತ್ತು ಅಂತಹ ಇತರ ಕತೆಗಳಿಗೂ ಸ್ಥಾನವಿದೆ. ಅವರೆಲ್ಲರೂ ಭಕ್ತರು ಮತ್ತು ಬಸವ ಅವರ ಪರಂಪರೆಗೆ ಸೇರಿದವನು. ಅವರ ಕತೆ ಅವನ ರಕ್ತಗತವಾಗಿದೆ; ಅವರ ಆದರ್ಶಗಳು ಅವನನ್ನು ರೂಪಿಸಿವೆ. ಬಸವನ ಜೀವನ ರೂಪಿತವಾಗಲು ಹಿಂದಿನ ಪರಂಪರೆಯಂತೆಯೇ ಅವನ ಸಮಕಾಲೀನ ಘಟನೆಗಳೂ ವ್ಯಕ್ತಿಗಳೂ ಮುಖ್ಯರು ತಾನೆ. "ಬಸವಪುರಾಣ"ವನ್ನು ಓದಿದರೆ ಒಂದು ಸಮಗ್ರ ಪರಂಪರೆಯ ಪರಿಚಯವಾಗುತ್ತದೆ. ಅದರ ಜನಪ್ರಿಯತೆಗೆ ಇದೂ ಒಂದು ಕಾರಣವೆಂಬುದನ್ನು ಮರೆಯಬಾರದು.

ಹರಿಹರನ ಬಸವರಾಜದೇವರ ರಗಳೆಯ ಕತೆ ಇತಿಹಾಸವಲ್ಲದಿದ್ದರೂ ಕಾಲ ಮತ್ತು ರೀತಿಗಳೆರಡರ ದೃಷ್ಟಿಯಿಂದಲೂ ಇತಿಹಾಸಕ್ಕೆ ಸಮೀಪ. ಬಸವನ ಬಗ್ಗೆ ಆಸಕ್ತರಾದ ಆಧುನಿಕರಿಗೆ ಆ ಕಾರಣದಿಂದಲೇ ಆ ಕೃತಿ ಪ್ರಿಯವಾಗುವುದು (ಹೀಗೆ ಪ್ರಿಯವಾಗಲು ಅದರ ಕಾವ್ಯಗುಣವೂ ಕಾರಣ). ಅದು ಓದಿ ಸಂತೋಷಪಡಬಹುದಾದ ಕಾವ್ಯ. ಆದರೆ "ಬಸವಪುರಾಣ" ಓದಿಸಿ ಕೇಳಿ ಭಕ್ತಿಭಾವ ಭರಿತವಾಗಲು ಅರ್ಹವಾದ ಪುರಾಣ. ಅದರ ಭಿತ್ತಿ ವಿಶಾಲ. ಇಲ್ಲಿ ಕತೆಗಳು ಹೆಚ್ಚು : ಎಷ್ಟೋ ಕತೆಗಳಲ್ಲಿ ಬಸವನ ಮಾತೇ ಬರುವುದಿಲ್ಲ : ಬಸವನಿಗೂ ಆ ಕತೆಗೂ ಸಂಬಂಧವೇ ಇಲ್ಲ. ಆ ಕತೆಗಳನ್ನು ಓದಿ ವ್ಯಾಖ್ಯಾನಿಸುವವರು ಮಧ್ಯೆ ಮಧ್ಯೆ ವಿವರಿಸಲಿಕ್ಕೆ, ಬೇರೆ ಕತೆಗಳನ್ನು ಸೇರಿಸಿ ವಿವರಿಸಲಿಕ್ಕೆ ಅವಕಾಶವಿದೆ. ಸಾಮಾನ್ಯ ಜನತೆಗೆ ಇದು ಪ್ರಿಯವಾಗುತ್ತದೆ. ದಿನದಿನವೂ ಸ್ವಲ್ಪ ಕೇಳುತ್ತ ಅಲ್ಲಿಯ ಭಕ್ತರ ಕತೆಗಳನ್ನು ಮೆಲುಕುಹಾಕುತ್ತ ಆ ಭಕ್ತರಿಗೆಲ್ಲ ನಾಯಕಮಣಿಯಂತಿರುವ ಬಸವನ ಕತೆಯನ್ನು ಪರಿಚಯ ಮಾಡಿಕೊಳ್ಳುತ್ತಾರೆ. ಕೃತಿಯ ಕಾವ್ಯಗುಣ ಇಲ್ಲಿ ಅಮುಖ್ಯವಾಗುತ್ತದೆ, ಅದರ ಪುರಾಣತ್ವ ಪ್ರಧಾನವಾಗುತ್ತದೆ, ಜನಗಳ ದೃಷ್ಟಿಯಲ್ಲಿ. ಪುರಾಣ ಕರ್ತೃವಿಗೆ ಬಸವ ಒಂದು ಕಾಲ, ದೇಶಕ್ಕೆ ಬದ್ಧನಾದ ವ್ಯಕ್ತಿಯಾಗದೆ, ಅವನು ತತ್ವಶಃ ಯಾವ ಕಾಲಕ್ಕಾದರೂ ಸೇರಬಹುದಾದ ಒಂದು ಮಾದರಿಯಾಗುತ್ತಾನೆ, ಎಲ್ಲಾ ಕಾಲದ ಒಂದು ಆದರ್ಶವಾಗುತ್ತಾನೆ. ಅವನು ಬಿಜ್ಜಳನ ಕಾಲದಲ್ಲಿದ್ದುದರಿಂದ ಬಿಜ್ಜಳನ ಹೆಸರು ಬರುವುದು ಅನಿವಾರ್ಯ. ಸಾಮಾನ್ಯ ಜನತೆಗೂ ಇತಿಹಾಸದಲ್ಲಿ ಆಸಕ್ತಿ ಅಷ್ಟಕ್ಕಷ್ಟೆ ! ಬಸವನ ಹಿರಿಮೆ, ಮಹತ್ಕಾರ್ಯ, ಪವಾಡ ಇವೇ ಅವರಿಗೆ ಇತಿಹಾಸ ಮತ್ತು ಮುಖ್ಯ ; ಅವನು ಯಾವ ಕಾಲದಲ್ಲಿದ್ದ ಎಂಬುದು ಮುಖ್ಯ. ಬಸವ ಯಾವ ಪರಂಪರೆಯ ಅಂಗವಾಗಿ, ಹೇಗೆ ಬದುಕಿದ ಎಂಬುವರ ಸಾರ ಅವರಿಗೆ ದೊರಕಿದರೆ ಸಾಕು ; ಇತಿಹಾಸವನ್ನು ಕಟ್ಟಿಕೊಂಡು ಅವರಿಗೇನು ! "ಕಾವ್ಯ", "ಪುರಾಣ"ಗಳ ಕಲ್ಪನೆಯ ವ್ಯತ್ಯಾಸದ ಹಿನ್ನೆಲೆಯಲ್ಲಿ ಹರಿಹರ ಮತ್ತು ಭೀಮಕವಿಯ (ಅರ್ಥಾತ್ ಪಾಲ್ಕುರಿಕೆ ಸೋಮನ) ಕೃತಿಗಳನ್ನು ಪರಿಶೀಲಿಸಿದಾಗ, ಪುರಾಣದೃಷ್ಟಿಯು ಕಾವ್ಯದೃಷ್ಟಿಗಿಂತ ಕನಿಷ್ಠವಾದದ್ದೆಂದು ಭಾವಿಸುವ ಅಗತ್ಯವೇನೂ ತೋರುವುದಿಲ್ಲ. ಕಾವ್ಯ, ಪುರಾಣಗಳ ದೃಷ್ಟಿಯಿಂದ ನೋಡಿದಾಗ, ಹರಿಹರ ಮತ್ತು ಭೀಮಕವಿಗಳ ಕೃತಿಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಸಹಾಯಕವಾಗುತ್ತದೆಯೆಂಬುದನ್ನು ಸೂಚಿಸುವುದು ಈ ಚಿಕ್ಕ ಲೇಖನದ ಉದ್ದೇಶ.

### ಬಿ. ಸಿ. ಜವಳಿ

# 'ಕನ್ನಡದಲ್ಲಿ ಗದ್ಯ ಸಾಹಿತ್ಯದ ಬೆಳವಣಿಗೆ'

## ೧

ಕನ್ನಡದ ಕವಿರಾಜಮಾರ್ಗದಲ್ಲಿ ಗದ್ಯದ ಲಕ್ಷಣವನ್ನು ಈ ರೀತಿ ಹೇಳಲಾಗಿದೆ :

"ಪದಪಾದನಿಯಮಿತನಿಯಮಮಾ-
ಸ್ಪದಮಲ್ಲದಳಂಕೃತಂ ಕ್ರಿಯಾಕಾರಕ ದೊಳ್
ಪುದಿದರ್ಥವ್ಯಕ್ತಿಯನೀ-
ವುದು ಗದ್ಯಮನೇಕರೂಪ ವಿಭಕ್ತಂ"[1]

ಕವಿರಾಜಮಾರ್ಗಕಾರನು ತನ್ನ ಗ್ರಂಥಕ್ಕೆ ದಂಡಿಯ ಕಾವ್ಯಾದರ್ಶವನ್ನು ಪ್ರಮಾಣ ಗ್ರಂಥವೆಂದು ಸ್ವೀಕರಿಸಿ ಲಕ್ಷಣಗಳನ್ನು ಹೇಳುವಾಗ ಗದ್ಯದ ಬಗೆಗೆ ಅಲ್ಪಸ್ವಲ್ಪ ಬದಲಾವಣೆ ಮಾಡಿಕೊಂಡಂತೆ ತೋರುತ್ತದೆ. ದಂಡಿಯು 'ಕಾವ್ಯಾದರ್ಶ'ದಲ್ಲಿ ಗದ್ಯದ ಲಕ್ಷಣವನ್ನು ಹೇಳಿದ ರೀತಿಯಿದು :

"ಓಜಸ್ಸಮಾಸಭೂಯಸ್ತ್ವಮೇತದ್ಗದ್ಯಸ್ಯ ಜೀವಿತಂ"
"ಅಪಾದಃ ಪದಸಂತಾನೋ ಗದ್ಯಮಾಖ್ಯಾಯಿಕಾ ಕಥಾ"[2]

(ಅ) ಪದ್ಯದಂತೆ ನಿಯತವಾದ ಚರಣಗಳಿಲ್ಲದ (ಆ) ಅಲಂಕಾರಗಳಿಂದ ಯುಕ್ತವಾದ (ಇ) ಕ್ರಿಯಾಕಾರದಿಂದ ಕೂಡಿದ (ಈ) ಅರ್ಥವ್ಯಕ್ತಿಯನ್ನುಳ್ಳ ಪದಸಮುದಾಯವೇ ಗದ್ಯ (ಉ) ಅದು ಅನೇಕ ರೂಪಗಳಿಂದ ವಿಭಜಿಸಲ್ಪಟ್ಟಿದೆಯೆಂಬುದು ಕನ್ನಡ ಕವಿರಾಜಮಾರ್ಗಕಾರನ ಹೇಳಿಕೆ. ದಂಡಿಯ ಹೇಳಿಕೆಯ ಮೇರೆಗೆ ಗದ್ಯವು :

(ಅ) ಓಜೋಗುಣಗಳಿಂದ ಕೂಡಿರಬೇಕು (ಆ) ಸಮಾಸಭೂಯಿಷ್ಠವಾಗಿರಬೇಕು (ಇ) ಪಾದಗಳ ನಿಯತತೆ ಇರಕೂಡದು (ಈ) ಅದು ಆಖ್ಯಾಯಿಕೆ ಮತ್ತು ಕಥೆಯೆಂದು ಎರಡು ವಿಧಗಳುಳ್ಳುದಾಗಿರಬೇಕು. ಇಂತಹ ರಚನೆಯುಳ್ಳ ಪದಸಮುದಾಯವೇ ಗದ್ಯವೆಂದು ಹೇಳಲ್ಪಟ್ಟಿದೆ.

---

[1] ಕವಿರಾಜಮಾರ್ಗ ೧.೨೫; ಸಂಪಾದಕರು: ಎ. ವೆಂಕಟರಾವ್ ಬಿ. ಎ., ಎಲ್. ಟಿ, ಮತ್ತು ಪಂಡಿತ ಎಚ್. ಶೇಷ ಅಯ್ಯಂಗಾರ್ ; ಮದ್ರಾಸ್ ವಿಶ್ವವಿದ್ಯಾಲಯದ ಪ್ರಕಟನೆ (೧೯೩೦).

[2] ಕನ್ನಡ ಕಾವ್ಯಾಲಂಕಾರ, ಅನುಬಂಧ, ಪು. ೧೪೩ ; ಸಂಪಾದಕರು : ಡಾ. ಕೆ. ಕೃಷ್ಣಮೂರ್ತಿ (೧೯೫೫).

ಕವಿರಾಜಮಾರ್ಗಕಾರನು ಗದ್ಯವು ಅಲಂಕಾರಗಳಿಂದ ಕೂಡಿರಬೇಕು ಎಂದು ಹೇಳಿದರೆ ದಂಡಿಯು 'ಓಜೋಗುಣ'ದಿಂದಲೂ ಸಮಾಸಭೂಯಿಷ್ಠತೆಯಿಂದಲೂ ಕೂಡಿರಬೇಕೆಂದು ತಿಳಿಸಿದ್ದಾನೆ. ಹೀಗಿರುವುದೇ ಗದ್ಯಸ್ಯಜೀವಿತ (ಗದ್ಯದ ಜೀವಾಳ)ಎಂದಿದ್ದಾನೆ. ಕವಿ-ರಾಜಮಾರ್ಗದಲ್ಲಿ ಕನ್ನಡ ಗದ್ಯವು "ಕ್ರಿಯಾಕಾರಕದೊಳ್ ಪುದಿದು ಅರ್ಥವ್ಯಕ್ತಿಯ ನೀವುದು" ಎಂದಿದ್ದರೆ ದಂಡಿಯು ಅರ್ಥವ್ಯಕ್ತಿಯ ಬಗೆಗೆ ಏನೂ ಹೇಳಿಲ್ಲ. ಈ ಇಬ್ಬರೂ ಗದ್ಯಕ್ಕೆ ಚರಣಗಳ ಮಿತಿಯಿಲ್ಲವೆಂದು ಹೇಳಿದ್ದಾರೆ. ಅಲ್ಲದೆ ಗದ್ಯದ ವಿಭೇದಗಳನ್ನು ಹೇಳುವಲ್ಲಿ ದಂಡಿಯು ಕಥೆ ಮತ್ತು ಆಖ್ಯಾಯಿಕೆಯೆಂದು ಎರಡು ವಿಧಗಳನ್ನು ಹೇಳಿದ್ದರೆ ಕವಿರಾಜಮಾರ್ಗದಲ್ಲಿ 'ಅನೇಕ ರೂಪವಿಭಕ್ತಂ' ಎಂದು ಹೇಳಿರುವುದರಿಂದ ಅದರ ರೂಪ ಗಳು ಹಲವು ಎಂದು ಹೇಳಿದಂತಾಯಿತು. ಆದುದರಿಂದ ಕವಿರಾಜಮಾರ್ಗಕಾರನು ಗದ್ಯದ ಲಕ್ಷಣಗಳನ್ನು ಹೇಳುವಾಗ ದಂಡಿಯನ್ನು ಸಂಪೂರ್ಣವಾಗಿ ಅನುಸರಿಸಿದಂತಿಲ್ಲ. ಅವನು, ಗದ್ಯವು ಅಲಂಕೃತವಾಗಿರಬೇಕೆಂದು ಹೇಳಿರುವುದರಿಂದ ಈ ವಿಷಯದಲ್ಲಿ ಅವನು ಅಲಂಕಾರ ತತ್ವದ ಧುರೀಣನಾದ ಭಾಮಹನನ್ನು ಅನುಸರಿಸುವಂತೆ ಗೋಚರಿ ಸುತ್ತದೆಯಲ್ಲದೆ ಅಲಂಕಾರಗಳು ಕವಿತೆಯಂತೆ ಗದ್ಯರಚನೆಗೂ ಅವಶ್ಯಕವೆಂದು ಹೇಳಿರು ವುದರಿಂದ ಗದ್ಯಕ್ಕೂ ಸೌಂದರ್ಯತತ್ವವನ್ನು ಹೇಳಿದಂತಾಗಿದೆ. 'ಕ್ರಿಯಾಕಾರಕದೊಳ್ ಪುದಿದು ಅರ್ಥವ್ಯಕ್ತಿಯನೀವುದು' ಎಂಬ ಮಾತಿನಿಂದ ಗದ್ಯದ ವಾಕ್ಯರಚನೆಯಲ್ಲಿ ಕರ್ತೃ, ಕರ್ಮ, ಕ್ರಿಯಾಪದ ಇತ್ಯಾದಿಗಳು ತಮ್ಮ ತಮ್ಮ ಸ್ಥಾನದಲ್ಲಿರಬೇಕು ಮತ್ತು ಅರ್ಥಕ್ಕೆ ಸ್ಪಷ್ಟತೆಯನ್ನೀಯಬೇಕು. ಇವು ಕನ್ನಡದಲ್ಲಿ ಕವಿರಾಜಮಾರ್ಗಕಾರನು ಹೇಳಿದ ಪ್ರಮುಖ ಲಕ್ಷಣಗಳಾಗಿವೆ. ಇಲ್ಲಿ ಕನ್ನಡ ಗದ್ಯಕ್ಕೆ ಯತಿ, ಛಂದಸ್ಸು ಮೊದಲಾದವುಗಳು ಬೇಕೇ ಬೇಡವೇ ಎಂಬ ವಿಷಯವನ್ನು ಪ್ರತಿಪಾದಿಸಿಲ್ಲ.

ಮಮ್ಮಟನು ಗದ್ಯಕಥೆಯೇ ಮುಂತಾದ ಸಕಲ ಸಾಹಿತ್ಯ ಜಾತಿಗಳನ್ನೂ ಕಾವ್ಯವೆಂದೇ ಪರಿಗಣಿಸುತ್ತಾನೆ; ಕೇವಲ ಪದ್ಯವನ್ನು ಮಾತ್ರ ಕಾವ್ಯವೆಂದು ಅವನು ನಿರೂಪಿಸುತ್ತಿಲ್ಲ[3] ಅದರಂತೆಯೇ ಭಾಮಹನೂ ಮತ್ತು ಇತರ ಹಲವು ಆಲಂಕಾರಿಕರೂ ಗದ್ಯವನ್ನು ಕಾವ್ಯ ವಿಭೇದವೆಂದೇ ಪರಿಗಣಿಸಿದ್ದಾರೆ. ಸಂಸ್ಕೃತ ಸಾಹಿತ್ಯದಲ್ಲಿ 'ಗದ್ಯ' ಎಂದರೆ ಆಡುವ ಮಾತಲ್ಲ; ಶಾಸ್ತ್ರಕ್ಕೆ ಯೋಗ್ಯವಾದ ರಚನೆಯೂ ಅಲ್ಲ; ಅಲ್ಲದೆ 'ಪದ್ಯವಲ್ಲದುದೇ ಗದ್ಯ' ಎಂಬ ಮಾತೂ ಅಲ್ಲ. ಸಂಸ್ಕೃತದಲ್ಲಿ ಗದ್ಯವೆಂದರೆ :

ವಿಶಿಷ್ಟಕಾವ್ಯಗುಣಗಳನ್ನುಳ್ಳ ವಿಶಿಷ್ಟ ಕಥಾನಿರೂಪಣೆ

ಎಂಬ ಪಾರಿಭಾಷಿಕವಾದ ನಿಯಮವಿರುವಂತೆ ಗೋಚರಿಸುತ್ತದೆ. ಕಿವಿಗೆ ಹಿತವನ್ನುಂಟು ಮಾಡುವ, ಮತ್ತು ಉದ್ದುದ್ದವಾದ ಸಮಾಸಗಳಿಂದ ಕೂಡಿದ ವಾಕ್ಯರಚನೆ ಇರಬೇಕು; ಓಜೋಗುಣ ಎದ್ದು ಕಾಣುತ್ತಿರಬೇಕು.

ಪುರಾಣದ ನೀತಿಕಥೆಗಳ ಗೋಜಿಗೆ ಹೋಗದೆ ಬೃಹತ್‌ಕಥೆಯ ಸಂಪ್ರದಾಯಕ್ಕೆ ಅನು

3 ಕನ್ನಡ ಕಾವ್ಯಪ್ರಕಾಶ, ಡಾ. ಕೆ. ಕೃಷ್ಣಮೂರ್ತಿ, ಪೀಠಿಕೆ, ಪುಟ X (೧೯೫೯)

ಗುಣವಾದ **ಅದ್ಭುತ ಕಥೆಯನ್ನು ಕವಿಯು ಕಲ್ಪಿಸಿರಬೇಕು**[4] ಎಂಬ ಸಾಮಾನ್ಯ ತಿಳುವಳಿಕೆಯು ಸಂಸ್ಕೃತ ಸಾಹಿತ್ಯದಲ್ಲಿ ಗದ್ಯದ ಬಗೆಗೆ ಪ್ರಚಲಿತವಿದೆ.

೨

'ಗದ್' ಎಂದರೆ ಮಾತನಾಡುವುದು ಎಂದರ್ಥವಾಗುವುದು; ಪ್ರಾಸ, ಗಣ, ಈ ನಿಯಮವಿಲ್ಲದೆ ಅರ್ಥಸಹಿತವಾದ ಶಬ್ದಗಳಿಂದ ಕೂಡಿದ ವಾಕ್ಯಗಳಿಂದ ಬರೆಯಲ್ಪಡುವುದಕ್ಕೆ ಗದ್ಯವೆನ್ನಬಹುದು. 'ಹರ್ಷಚರಿತೆ', 'ಕಾದಂಬರಿ', 'ದಶಕುಮಾರ ಚರಿತೆ', 'ತಿಲಕ ಮಂಜರೀ', 'ಗದ್ಯಚಿಂತಾಮಣಿ', 'ವೀರನಾರಾಯಣ ಚರಿತ' ಇವು ಇಮವರೆಗೆ ಸಂಸ್ಕೃತ ವಾಙ್ಮಯದಲ್ಲಿ ದೊರೆತ ಗದ್ಯಕಾವ್ಯಗಳು.[5] ಎಂದ ಮೇಲೆ ಸಂಸ್ಕೃತದಲ್ಲಿ ಅದು ಕಾವ್ಯವಿಭಾಗವೆಂದೇ ಅರ್ಥವನ್ನೊಳಗೊಂಡಿದೆ. ಅಲ್ಲಿ ದಿನಬಳಕೆಯ ನಾವಾಡುವ ನುಡಿಯನ್ನು ಗದ್ಯವೆಂದು ಕರೆಯಲಿಲ್ಲ. ದೀರ್ಘವೂ ಕ್ಲಿಷ್ಟವೂ ಆದ ಸಮಾಸರಚನೆ, ದೀರ್ಘ ವಾಕ್ಯರಚನೆ ಶಬ್ದಾರ್ಥ ಸೌಂದರ್ಯ ಇವು ಸಂಸ್ಕೃತಗದ್ಯದ ವೈಶಿಷ್ಟ್ಯಗಳು. ಹೀಗಾಗಿ ಸಂಸ್ಕೃತದಲ್ಲಿ ಕೆಲವು ವಿಭಿನ್ನತೆಗಳೊಂದಿಗೆ ಗದ್ಯವು ಕಾವ್ಯವೆಂದೇ ಪರಿಗಣಿತವಾಗಿದೆ. ಗದ್ಯ ಎಂಬ ಪದಕ್ಕಿದ್ದ 'ಆಡುಮಾತು' ಎಂಬರ್ಥವನ್ನು ಅದು ಬದಿಗೆ ಸರಿಸಿದೆ—ಎಂದರೆ ಗದ್ಯವೆಂದರೆ 'ಮಾತನಾಡುವ ನುಡಿ' ಎಂಬರ್ಥವನ್ನು ಅಲ್ಲಿ ಮೀರಿದೆಯೆಂದಂತಾಯಿತು.

ಕನ್ನಡದಲ್ಲಿಯೂ ಗದ್ಯವು ಸಾಹಿತ್ಯದ ಒಂದು ಪ್ರಕಾರ; ಕಾವ್ಯದ ಒಂದು ವಿಧ ಎಂಬುದು ನಮಗೆ ಕವಿರಾಜಮಾರ್ಗದಿಂದಲೇ ತಿಳಿದುಬರುತ್ತಿದೆ. 'ಗದ್ಯ' 'ಪದ್ಯ' ಈ ಎರಡೂ ಪದಗಳೂ ಕನ್ನಡಕ್ಕೆ ಸಂಸ್ಕೃತದಿಂದಲೇ ಬಂದ ಪದಗಳು. ಆ ಪದಗಳಿಗೆ ಮೂಲ ಸಂಸ್ಕೃತ ಸಾಹಿತ್ಯದಲ್ಲಿ ಯಾವ ಅರ್ಥಗಳನ್ನಿಟ್ಟುಕೊಳ್ಳಲಾಗಿದ್ದಿತೋ ಅವೇ ಅರ್ಥಗಳನ್ನು ಕನ್ನಡ ಸಾಹಿತ್ಯದಲ್ಲಿಯೂ ಇಟ್ಟುಕೊಳ್ಳಲಾಗಿದ್ದಿತೆಂದು ಕವಿರಾಜಮಾರ್ಗ-ಕಾರನು 'ಗದ್ಯ', 'ಪದ್ಯ'ಗಳ ಲಕ್ಷಣಗಳನ್ನು ಹೇಳುವುದರ ಮೇಲಿಂದ ಗೋಚರಿಸುತ್ತದೆ. ಅವನು ಕೊಡುವ ಲಕ್ಷಣಗಳು ಭಾಮಹ ಇಲ್ಲವೆ ದಂಡಿಯು ಹೇಳುವ ಲಕ್ಷಣಗಳಾಗಿವೆ.

ಡಾ. ರೆವರೆಂಡ ಎಫ್. ಕಿಟೆಲ್ ಅವರು ಕನ್ನಡ-ಇಂಗ್ಲಿಷ್ ನಿಘಂಟುವಿನಲ್ಲಿ 'ಗದ್ಯ' ಎಂಬ ಪದಕ್ಕೆ ಈ ರೀತಿ ಅರ್ಥಗಳನ್ನು ಬರೆದಿದ್ದಾರೆ:

1. To be spoken or uttered.
2. Prose, especially elaborate prose composition[6]

ಅಲ್ಲದೆ 'ಪದ' ಎಂಬುದಕ್ಕೆ: A piece of metrical composition[7]—ಎಂಬ ಅರ್ಥವನ್ನು ಡಾ. ಕಿಟೆಲ್ಲರು ಕೊಟ್ಟಿದ್ದಾರೆ. ಕವಿರಾಜಮಾರ್ಗದಲ್ಲಿ 'ಪದ್ಯ'ವನ್ನು ಈ ರೀತಿ ವರ್ಣಿಸುತ್ತಾನೆ:

4 ಸಂಸ್ಕೃತ ಸಾಹಿತ್ಯದಲ್ಲಿ ಶೃಂಗಾರರಸ ನಿರೂಪಣೆ, ಡಾ.ಕೆ. ಕೃಷ್ಣಮೂರ್ತಿ, ಪುಟ ೨೧ (೧೯೬೩)
5 ಸಂಸ್ಕೃತ ಕವಿಚರಿತ್ರೆ, ಎಂ. ಎಸ್. ಅಯ್ಯಂಗಾರ್, ಪು. ೧೦೩ (೧೯೨೮)
6 ಕನ್ನಡ-ಇಂಗ್ಲಿಷ್ ನಿಘಂಟು, ಪುಟ ೫೨೬ (೧೮೯೪), ಬಾಸೆಲ್‌ಮಿಶನ್ ಪ್ರೆಸ್ ಪ್ರಕಟನೆ.
7 ಕನ್ನಡ-ಇಂಗ್ಲಿಷ್ ನಿಘಂಟು, ಪುಟ ೯೩೬ (೧೮೯೪), ಬಾಸೆಲ್‌ಮಿಶನ್ ಪ್ರೆಸ್ ಪ್ರಕಟನೆ.

"ಪದ್ಯಂ ಸಮಸ್ತ ಜನತಾ-
ಹೃದ್ಯಂ ಪದವಿದಿತಪಾದನಿಯಮನಿವೇದ್ಯಂ
ವಿದ್ಯಾಪಾರಪರಾಯಣ-
ಮಾದ್ಯಂ ಸದ್ವೃತ್ತಿವೃತ್ತ ಜಾತ್ಯಾಯತ್ತಂ"[8]

ಈ ಎಲ್ಲ ಮಾತುಗಳನ್ನು ಮನದಂದರೆ ಕನ್ನಡದಲ್ಲಿಯೂ ಗದ್ಯವನ್ನು ಕಾವ್ಯಜಾತಿಗೆ ಸೇರಿಸಿದ್ದರೆಂದೇ ಹೇಳಬಹುದು.[9]

೩

ಪದ್ಯವು ಛಂದೋಬದ್ಧವಾಗಿರುವುದು ಅದು ಗದ್ಯದಿಂದ ಭಿನ್ನವಾಗಿರುವುದಕ್ಕೆ ಒಂದು ಕಾರಣ. ಪದ್ಯಕ್ಕೆ ಸ್ವರಲಾಲಿತ್ಯವಿರುತ್ತದೆ. ಆದುದರಿಂದ ಅದು ಆನಂದದಾಯಕವೂ ಮೋಹಕವೂ ಆಗಲು ಕಾರಣವೆನಿಸುತ್ತದೆ. ಛಂದಸ್ಸಿಗನುಗುಣವಾಗಿ ಪದದೊಳಗಣ ಸ್ವರೇಾಲಿತ್ಯವು ಒಂದು ಕ್ರಮದಿಂದ ಕಿವಿಗೆ ಪ್ರತೀತವಾಗುತ್ತದೆ. ಅದನ್ನೇ 'ಲಯ' ಅಥವಾ 'ಧಾಟಿ' ಎಂದು ಕರೆಯುವುದುಂಟು. ಗದ್ಯವನ್ನೂ ಒಂದು ಧಾಟಿಯಲ್ಲಿ ಎನ್ನಬಹುದಾದರೂ ಅದರಲ್ಲಿ ಯಾವ ಬಗೆಯ ನಿಯತತೆ ಇಲ್ಲದಿರುವುದರಿಂದ ಅದು ಸಂಗೀತಕ್ಕೆ ಒಗ್ಗುವುದಿಲ್ಲ.[10] ಲಯದ ಹಾಗೆಯೇ ಪ್ರಾಸ, ಯತಿಗಳು ಬಂದು ಕೇಳುಗರ ಕಿವಿಯ ಮೇಲೆ ಶ್ರವಣಮಾಧುರ್ಯವನ್ನುಂಟುಮಾಡುವುದರಿಂದ ಮತ್ತು ಕಾವ್ಯಕ್ಕೆ ಸಂಗೀತವು ಜೋಡಿಸಲ್ಪಟ್ಟಿತ್ತಾದುದರಿಂದ ಅದು "ಸಮಸ್ತ ಜನತಾಹೃದ್ಯ"ವಾಗಿದ್ದಿತು. ಕನ್ನಡದ ಮಟ್ಟಿಗಂತೂ ಹೇಳಬೇಕೆಂದರೆ ಕನ್ನಡಕಾವ್ಯದ ಸಂಗೀತ ಇಲ್ಲವೆ ಗೇಯತೆ ಮತ್ತು ಪ್ರಾಸಗಳು ಗದ್ಯದಿಂದ ಭಿನ್ನತೆಯನ್ನುಂಟುಮಾಡಿ ಪದ್ಯವನ್ನು ಅತ್ಯಂತ ಆಕರ್ಷಕವೂ ಇನಿದೂ ಮಾಡಿದ್ದುವೆಂದೇ ಹೇಳಬೇಕು. ಜನಪದ ಸಾಹಿತ್ಯದ ಹಾಡುಗಳು ಜನಪ್ರಿಯವಾಗಲು ಒಂದು ಪ್ರಮುಖ ಕಾರಣವೆಂದರೆ ಆ ಹಾಡುಗಳ ಗೇಯಮಾಧುರ್ಯ, ಲಯ ಮತ್ತು ಪ್ರಾಸಗಳೇ ಎನ್ನಬಹುದು.

ಗದ್ಯವನ್ನು ಪದ್ಯದಿಂದ ಎರಡು ವಿಧವಾಗಿ ವ್ಯತ್ಯಾಸ ಮಾಡಬಹುದು : ಒಂದು ಬಾಹ್ಯವಾಗಿ. ಆಗ ಪದ್ಯವೆಂದರೆ ಅಭಿವ್ಯಕ್ತಿಯ ಒಂದು ವಿಧಾನ ಅಥವಾ ತಂತ್ರ ; ಆ ತಂತ್ರವು

---

[8] ಕವಿರಾಜಮಾರ್ಗ I–30.

[9] "ಬಗೆಯದೆ ಸತ್ಕೃಣಾಭ್ಯವ್ಯವಹಾ
ರಿಗಳುಸಿರ್ವರ್ 'ಗದ್ಯಕಾವ್ಯ'ದೊಳ್ ನಿರ್ಬಂಧಂ
ಪುಗದೆಂದರೋಚಿಗಳದಂ
ತೆಗಟಿಂದಾ 'ಗದ್ಯಪದ್ಯಕಾವ್ಯ'ದೊಳಿಕ್ಕರ್"

—ಶಬ್ದಮಣಿದರ್ಪಣ ಸೂತ್ರ ೭೦ ; ಸಂಪಾದಕರು ಪ್ರೊ. ಡಿ. ಎಲ್. ನರಸಿಂಹಾಚಾರ್, ಪುಟ ೪೭ (೧೯೫೯)

[10] ಕೈವಲ್ಯ ಕಲ್ಪವಲ್ಲರಿ, ಪ್ರಸ್ತಾವನೆ, ಪುಟ xv–xvi ; ಸಂಪಾದಕರು ಶಿ. ಶಿ. ಬಸವನಾಳ, ಎಂ.ಎ., (೧೯೪೮)

ನಿಯತವಾಗಿ ಪದ್ಯದ ಮಾಪನ ಇಲ್ಲವೆ ಛಂದಸ್ಸಿಗೆ ಸಂಬಂಧಪಟ್ಟುದು ಎಂದು ವರ್ಣಿಸಬಹುದು; ಗದ್ಯವೆಂದರೆ ಅಭಿವ್ಯಕ್ತಿಯ ಒಂದು ವಿಧಾನ ಇಲ್ಲವೆ ತಂತ್ರವಾಗಿದ್ದು ಅದು ಅಳತೆಯ ಮಾಪನವನ್ನು ಅವಲಂಬಿಸಿರುವುದಿಲ್ಲ ಮತ್ತು ಸಾಧ್ಯವಾದಷ್ಟು ವೈವಿಧ್ಯಮಯವಾದ ರೀತಿಯಲ್ಲಿ ಲಯವನ್ನು ಹೊಂದಲು ಪ್ರಯತ್ನಿಸುತ್ತದೆ. ಹೀಗೆ ಹೇಳಿದಾಗ ಪದ್ಯದ ರೂಪದಲ್ಲಿದ್ದುದೆಲ್ಲವೂ ಕಾವ್ಯವೆಂದು ಓದುಗರು ಭಾವಿಸಬಾರದು. ಅದು ಕೇವಲ ಅಭಿವ್ಯಕ್ತಿಯ ಬಾಹ್ಯರೂಪ ಮಾತ್ರ-ಪ್ರತಿಭಾಪೂರ್ಣವಿರಬಹುದು ಇಲ್ಲದಿರಬಹುದು.[11] ಗದ್ಯಪದ್ಯಗಳ ನಡುವಣ ಭೇದವು ಕೇವಲ ಮಾನಸಿಕವಾದುದು: ಕಾವ್ಯವು ಮಾನಸಿಕ ಚಟುವಟಿಕೆಯ ಒಂದು ವಿಧಾನವಾದರೆ ಅಭಿವ್ಯಕ್ತಿಗೆ ಸಂಬಂಧಿಸಿದಂತೆ ಗದ್ಯವೂ ಅವೇ ಮಾನಸಿಕ ಚಟುವಟಿಕೆಯ ಇನ್ನೊಂದು ರೂಪವೆನ್ನಬೇಕು.[12] ಕಾವ್ಯಾದರ್ಶದಲ್ಲಿ ದಂಡಿಯು ಸರ್ಗಬಂಧ, ಗದ್ಯ, ಚಂಪೂ ಮೊದಲಾದ ಕಾವ್ಯಭೇದಗಳನ್ನು ಪ್ರಾರಂಭದಲ್ಲಿಯೇ ಹೇಳಿದ್ದರೂ ಅವುಗಳ ಪರಸ್ಪರ ವ್ಯತ್ಯಾಸಗಳನ್ನು ಸ್ಥೂಲವಾಗಿ ಹೇಳಿರುವನೇ ಹೊರತು ಔಚಿತ್ಯ ವಿಶೇಷಗಳನ್ನು ವಿಮರ್ಶಿಸಿಲ್ಲ. ಆದರೆ ಆನಂದವರ್ಧನನು ಈ ವಿಮರ್ಶೆ ಮಾಡುತ್ತ ರಸಬಂಧ, ವಿಷಯೌಚಿತ್ಯಗಳೇ ಕಾರಣವೆಂದು ತಿಳಿಸಿದ್ದಾನೆ. ಗದ್ಯಬಂಧದಲ್ಲಿಯು ಕೂಡ ಆಖ್ಯಾಯಿಕೆಯಾದರೆ ವಿಷಯೌಚಿತ್ಯವೇ ಪ್ರಬಲ: ಕಥೆಯಾದರೆ ಔಚಿತ್ಯವು ನಿರ್ಣಾಯಕ[13] ಎಂದಿದ್ದಾನೆ.

'ಕಾವ್ಯ' ಎಂಬುದು ಸಾಹಿತ್ಯದ ಕಲಾವಿಧಾನವನ್ನು ತೋರಿಸುತ್ತದೆ. ಅದು ಛಂದಸ್ಸಿಗೆ ಮಾತ್ರ ಸೀಮಿತವಾಗಿರುವುದಿಲ್ಲ. ರಚನಾವಿಧಾನದ ಕೌಶಲ್ಯ ಇಲ್ಲವೆ ಸೌಂದರ್ಯಕ್ಕೆ ಸಂಬಂಧಿಸಿರುತ್ತದೆ. ಅದು ಗದ್ಯದಲ್ಲಿದ್ದರೂ ಅಷ್ಟೇ, ಪದ್ಯದಲ್ಲಿದ್ದರೂ ಅಷ್ಟೇ; ಆಗ ಅದು ಕಾವ್ಯ ಎಂದು ಕರೆಯಲ್ಪಡುತ್ತದೆ.[14] ಈ ಕಾರಣಗಳಿಂದ ಗದ್ಯಪದ್ಯ ವ್ಯತ್ಯಾಸವು ಸ್ಥೂಲವೇ ವಿನಾ ಸೂಕ್ಷ್ಮವಾದುದಲ್ಲವೆನ್ನಬಹುದು. ಗದ್ಯಪದ್ಯಗಳೆರಡೂ ಕಾವ್ಯಗಳೆನಿಸಿಕೊಳ್ಳಬೇಕಾದರೆ ಕವಿಯ ಕೃತಿಯಲ್ಲಿ ಸೌಂದರ್ಯ ಇಲ್ಲವೆ ಕಲೆ ವ್ಯಕ್ತವಾಗಬೇಕು. ಸಂಸ್ಕೃತದಲ್ಲಿ ಸಮಾಸ, ಪದಬಂಧ ಇವು ಗದ್ಯಕ್ಕೆ ಪ್ರಮುಖವಾಗಿ ಕಂಗೊಳಿಸುತ್ತವೆ. ಪದ್ಯಕ್ಕೆ ಛಂದಸ್ಸು ಅತ್ಯಾವಶ್ಯಕ ಅಂಶಗಳಲ್ಲೊಂದು; ಗುಣ, ರೀತಿ ಇವು ಗದ್ಯಕಾವ್ಯದ ಪ್ರಮುಖ ಅಂಶಗಳೂ ಅಹುದು. ದಂಡಿಯ ಬಗೆಗೆ ಅವನ ವಿಶಿಷ್ಟ ಅಂಶವನ್ನು ತಿಳಿಸು

---

11 *English Prose Style*, p. ix (introduction) by Herbert Read ; Pub : G. B. Bell and Sons Ltd , London (1934)

12 ಅದೇ ಪುಸ್ತಕ—ಮುನ್ನುಡಿ ನೋಡಿರಿ.

13 'ಆನಂದವರ್ಧನನ ಕಾವ್ಯಮೀಮಾಂಸೆ ಮತ್ತು ಧ್ವನ್ಯಾಲೋಕ', ಪುಟ ೮೯, ಸಂ: ಡಾ. ಕೆ. ಕೃಷ್ಣಮೂರ್ತಿ.

14 "It must be understood that the term Poetry is used as a work of Literary art—the work of a poet without any reference to the factor of metre in the work. Both (Prose and Poetry) are called Poetry if they are poetry on account of their artistic beauty in the form." *Survey of Sanskrit Literature*, Dr. C. KunhanRaja, p. 200, Bharateeya VidyaBhavan Pub.(1962)

ವಲ್ಲಿ "ದಂಡಿನಃ ಪದಲಾಲಿತ್ಯಂ" ಎಂದು ಹೇಳಿರುವುದು ರೀತಿಗೇ ಸಂಬಂಧಿಸಿದುದೆಂದು ಹೇಳಬೇಕು. ಅಲಂಕಾರಗಳು ಮುಖ್ಯವಾಗಿ ಕಾವ್ಯದ ಸಾಮಗ್ರಿಗಳಾದರೂ 'ಶಬ್ದಾಲಂಕಾರ' ಮತ್ತು ಕೆಲವು 'ಅರ್ಥಾಲಂಕಾರ'ಗಳೂ ಗದ್ಯಕಾವ್ಯದ ಸಾಮಗ್ರಿಗಳಾಗಿವೆ. ಸಂಸ್ಕೃತ ಗದ್ಯದಲ್ಲಿ 'ಶ್ಲೇಷ', 'ವಿರೋಧಾಭಾಸ', 'ಮಾಲಾಲಂಕಾರ' ಮತ್ತು 'ಲಯ' ಇವು ಅತ್ಯಾವಶ್ಯಕ ಸಾಮಗ್ರಿಗಳೆಂದು ಹೇಳಬಹುದು. ಒಟ್ಟಾರೆ ಗದ್ಯಪದ್ಯಗಳಲ್ಲಿ ಅಂತಹ ಪ್ರಮುಖ ವ್ಯತ್ಯಾಸವಿದ್ದಂತೆ ತೋರುವುದಿಲ್ಲ.[15] ಗದ್ಯದ ಲಕ್ಷಣವನ್ನು ಈ ರೀತಿಯಾಗಿ ಹೇಳಬಹುದು :

ಗದ್ಯವೆಂದರೆ ಜಾಗರೂಕತೆಯಿಂದ ರಚಿಸಿದ ವಾಕ್ಯಸಮುದಾಯ; ಪದಮೈತ್ರಿ, ಪದಗಳ ಒಂದು ತರಂಗಗತಿ (ಲಯಭಂಗಿ); ವಚನಧೋರಣೆ, ಅಲಂಕಾರಗಳೂ ಗದ್ಯಕ್ಕೂ ಬೆಲೆ ತರುವಂತಹವು. 'ರಸಾತ್ಮಕ'ವಾದುದು, 'ರಮಣೀಯ'ವಾದುದು ಕಾವ್ಯವೆಂದು ತಿಳಿದಾಗ ಅದು ಗದ್ಯಕ್ಕೂ ಅನ್ವಯಿಸಲೇಬೇಕು. ವಿಷಯ ನಿರೂಪಣೆಯೇ ಗದ್ಯದ ವೃಷ್ಟಿವಿಶೇಷ. ವಿವರಣೆ, ವಿವೇಚನೆ, ಬುದ್ಧಿಯ ಆಲೋಚನೆಗೆ ಗದ್ಯವು ಹಿತಕಾರಿಯೆಂದು ತೋರುತ್ತದೆ. ಬಾಹ್ಯವ್ಯಾಪಾರ ಪ್ರಪಂಚ ವರ್ಣನೆಗೆ, ಸಾಮಾನ್ಯಸಂಗತಿಯ ನಿರೂಪಣೆಗೆ ಗದ್ಯವು ಬೇಕು. ವಾಕ್ಯಗಳಲ್ಲಿ ಸ್ಪಷ್ಟತೆ, ವಿವರಗಳಲ್ಲಿ ಸರಳತೆ ಇರಬೇಕು. ವಿಷಯಕ್ಕೆ ಅನುಗುಣವಾಗಿ ಪ್ರಸನ್ನ, ಗಂಭೀರಶೈಲಿಯ ಗ್ರಂಥಗಳು ಕನ್ನಡದಲ್ಲಿ ವಿರಳವಾಗಿವೆ. ವಿವಿಧ ವಸ್ತು, ವಿವಿಧ ಭಾವಗಳಿಗೆ ಗದ್ಯವು ಇಂದು ಹದಗೊಳ್ಳಬೇಕಾಗಿದೆ. ಸಾಮಾನ್ಯವಾದ ಭಾಷೆಯಲ್ಲಿ ಅಸಾಮಾನ್ಯ ಶಕ್ತಿಯನ್ನು ಪಡೆಯುವ ಸ್ಥಿತಿ ಇಂದಿನ ಗದ್ಯಕ್ಕೆ ಬರಬೇಕಾಗಿದೆ. ಮಾತಿನ ಭಾರ, ವರ್ಣನೆಯ ಆಡಂಬರ ಇವೇ ಗದ್ಯಕ್ಕೆ ಪ್ರಧಾನವಲ್ಲ. ತತ್ವ (ವಿಷಯ) ಚಿಂತನೆ ಪ್ರಧಾನವಾದುದು; ವಿಷಯಸಾಮಗ್ರಿಯ ಹವಣಿಕೆ, ವಿಷಯವನ್ನು ವಿಂಗಡಿಸುವುದರಲ್ಲಿ ಒಂದು ಕ್ರಮ, ಅಚ್ಚುಕಟ್ಟುತನ, ನಿರೂಪಣಾ ರೀತಿಯಲ್ಲೊಂದು ಚಮತ್ಕಾರ, ಅತಿಭಾರವೂ, ಅತಿಪೇಲವೂ ಅಲ್ಲದ ನಿಸರ್ಗಳವಾಗಿ ಹರಿಯುವ ವಾಕ್ಸರಣಿ—ಇವು ಉತ್ತಮ ಗದ್ಯದ ಲಕ್ಷಣಗಳು ಎನ್ನಬಹುದು. ಗದ್ಯವು ಮುಖ್ಯತಃ ವಸ್ತುವಿವರವನ್ನು ವಿಂಗಡಿಸುತ್ತ ವರ್ಣಿಸುವ ಕಲೆಯಾಗಿದೆ.[16] ಭಾವದ ವಿವರಕ್ಕೆ ರಸಪುಷ್ಟಿಯಾಗಬಲ್ಲ ಶಬ್ದದ ಆಯ್ಕೆ, ಹಿತವಾದ ವಿಶೇಷಣಗಳು ಗದ್ಯದ ಲಕ್ಷಣ. ಸಣ್ಣ ದೊಡ್ಡ, ವಿವಿಧ ಶಾಸ್ತ್ರಗಳ ಬರಹದಿಂದ ವಾಕ್ಯವಾಕ್ಯಗಳ ಸಂಬಂಧ, ನಿಲವು ಇವುಗಳನ್ನು ಗದ್ಯಕ್ಕೆ ಲಕ್ಷಣಗಳೆಂದು ಹೇಳಬಹುದು.[17] ಇಂಗ್ಲಿಷ್ ಸಾಹಿತ್ಯದಲ್ಲಿ ಗದ್ಯವು ಸಾಕಷ್ಟು

[15] "It is important to realise that there is no essential difference in nature between Prose and poetry"—*English Prose*, by John Brophy. (1932)

[16] "Prose is essentially the art of analytical descriptions", *English Prose Style*, p. 34 (1934).

[17] "Prose is words in their natural order and may be spoken or written by any literate person extempore. And where as most poetry, indeed almost

ಬೆಳೆದಿವೆ; ಸಂಸ್ಕೃತದಲ್ಲಿ ಅಷ್ಟೊಂದು ಬೆಳೆದಿರಲಿಲ್ಲ. ಇಂಗ್ಲಿಷ್ ಭಾಷೆಯಲ್ಲಿ ಪತ್ರ ಬರಹಕ್ಕೆ ಸಾಮಾನ್ಯವಾಗಿ ಗದ್ಯವನ್ನೇ ವಿನಿಯೋಗಿಸಿದ್ದಾರೆ. ಅಭಿಜ್ಞಾನ ಶಾಕುಂತಲ ನಾಟಕದಲ್ಲಿ ಶಕುಂತಳೆಯು ದುಷ್ಯಂತನಿಗೆ ಪತ್ರ ಬರೆದರೆ ಅದನ್ನು ಅವಳು ಪದ್ಯ ದಲ್ಲಿಯೇ ಬರೆದಳು. ಅದು ಪದ್ಯದ ವ್ಯಾಮೋಹವನ್ನು ತೋರಿಸುತ್ತದೆ. ಹಿತಮಿತ ಸೂಕ್ತಪದಗಳ ಆಯ್ಕೆ, ಉತ್ತಮ ತರ್ಕಸರಣಿ, ಭಾವೋಚಿತ ವಾಕ್ಯರಚನಾಕ್ರಮ, ಸಹಜತೆ, ಸ್ಪಷ್ಟತೆ ಇವು ಗದ್ಯದ ಆವಶ್ಯಕ ಅಂಶಗಳು. ಗದ್ಯವೇ ಇರಲಿ ಪದ್ಯವೇ ಇರಲಿ ಉತ್ತಮಿಕೆ ಬರುವುದು ಕವಿಯ ಪ್ರತಿಭೆ ಮತ್ತು ಶೈಲಿಯಿಂದ ಉತ್ತಮ ಕಲಾವಿದನ ಕೈಯಲ್ಲಿ ಯಾವುದಾದರೂ ಉತ್ತಮವಾಗಿಯೇ ಹೊರಹೊಮ್ಮುತ್ತದೆ. ಆದುದರಿಂದ "ಪದ್ಯಂ ವಧ್ಯಂ ಗದ್ಯಂ ಹೃದ್ಯಂ" ಎಂಬ ಮುದ್ದಣನು ಆಡಿದ ಉಕ್ತಿಯು ಸಾರ್ವ-ತ್ರಿಕ ಮನ್ನಣೆಯದೆಂದು ಹೇಳಲು ಬರುವಂತಿಲ್ಲ. ಸಂಸ್ಕೃತದಲ್ಲಿ ಗದ್ಯವನ್ನು ಬರೆದ ಕವಿಗಳು ಉತ್ತಮ ಕವಿಗಳೆಂದೇ ಪ್ರಸಿದ್ಧರಾಗಿದ್ದಾರೆ; ಅವರು ಉತ್ತಮ ಪದ್ಯವನ್ನೂ ಬರೆಯುಬಲ್ಲವರಾಗಿದ್ದರು. ಇಂಗ್ಲಿಷಿನಲ್ಲಿಯೂ ಗದ್ಯಪದ್ಯ ಬರೆದವರೂ ಶ್ರೇಷ್ಠ ಕವಿ-ಗಳಿದ್ದಾರೆ. ಕನ್ನಡದಲ್ಲಿ ಹರಿಹರ ಮಹಾಕವಿ ಪದ್ಯವನ್ನು ಎಷ್ಟು ಪ್ರಭಾವಯುತ ವಾಗಿ ಬರೆದನೋ ಅಷ್ಟೇ ಪ್ರಭಾವಯುತವಾಗಿ ಗದ್ಯವನ್ನೂ ಬರೆದಿದ್ದಾನೆ. ಷೇಕ್ಸ್-ಪಿಯರನು ನಾಟಕಕ್ಕೆ ಪದ್ಯವನ್ನು ಬಳಸಿದನು; ಹೋಮರನೂ ನಿರೂಪಣೆಗೆ ಪದ್ಯ ವನ್ನು ಬಳಸಿದನು; ಹೆರೋಡಟಸ್ಸನು ಅದೇ ನಿರೂಪಣೆಗೆ ಗದ್ಯವನ್ನು ಬಳಸಿದನು ಎಂಬುದನ್ನು ನಾವು ಅನುಲಕ್ಷಿಸಬೇಕು.

ಈ ಪ್ರಸಂಗದಲ್ಲಿ ಉತ್ತಮ ಬರಹದ ಲಕ್ಷಣವನ್ನು ತಿಳಿಸುವ ಕೆಳಗಿನ ಆಂಗ್ಲ ಉಕ್ತಿಯನ್ನು ನೋಡಬಹುದಾಗಿದೆ:

> "Emphasis in a piece of writing comes principally
> From the use of 'strong and distinctive words and
> a progressive arrangement of statements' in
> Paragraphs in the whole but sentences contribute to
> this general impression. 'Economy' is an important
> factor for the wordiness burries the meaning but
> there are also specific means to sentence emphasis." [18]

ವಸ್ತುವಿನ ನೇರವಾದ ನಿರೂಪಣೆ, ಶೈಲಿಯ ವೈವಿಧ್ಯ, ಉತ್ತಮರೂಪಕ ಹಾಗೂ ವಿಶೇಷಣಗಳ ಬಳಕೆ, ಪರಿಣಾಮಕಾರವಾದ ಹಾಗೂ ಮಿತವ್ಯಯದ ವಾಕ್ಯಗಳ ಬಳಕೆ,

---

all, that we think of as poetry is impassioned and affects us emotionally; all but small production of prose, is rational and calm in tone seeking to inform or divert or amuse us rather that no waken our passions"—*English Prose*, p 44.

18 Writer's Guide and Index to English, p. 190 (3rd Edition.)

ಗ್ರಾಮ್ಯಶಬ್ದಗಳನ್ನು ಬಳಸದಿರುವುದು, ಬರಹದ ತುಂಬೆಲ್ಲ ಹೊಂದಾಣಿಕೆ ಮತ್ತು ಸಮ-ತೋಲವನ್ನು ಕಾಯ್ದುಕೊಂಡು ಹೋಗುವುದು—ಇವೇ ಮೊದಲಾದುವು ಉತ್ತಮ ಗದ್ಯದ ಪ್ರಮುಖ ಲಕ್ಷಣಗಳೆಂದು ಹೇಳಬಹುದು. ಗದ್ಯವು ಸಜೀವವಾಗಿ ಕಳೆಹೊಂದಿರಬೇಕಾದರೆ ಅದು ನೀರಸತ್ವವನ್ನು ಬದಿಗೊತ್ತಿ, ಭಾಷೆಯಲ್ಲಿ ವೈವಿಧ್ಯವನ್ನು ಪ್ರದರ್ಶಿಸುತ್ತಿರಬೇಕು; ಶಬ್ದಗಳು, ವಿಶೇಷಣಗಳು ಇಲ್ಲವೆ ರೂಪಕಗಳು ಅಥವಾ ಇತರ ಸಾಧನಗಳು ಅವೇ ಅವೇ ಮೇಲಿಂದಮೇಲೆ ಪುನರಾವೃತ್ತಿಗೊಂಡರೆ ಬೇಸರವನ್ನು ತರುವುದಲ್ಲದೆ ನಾಣ್ಯಗಳಂತೆ ಸವೆದು, ಸತ್ವವನ್ನು ಮತ್ತು ಬೆಲೆಯನ್ನು ಕುಗ್ಗಿಸಿಕೊಳ್ಳುತ್ತವೆ. ಆದುದರಿಂದ ಗದ್ಯ ಕಾರನು ಅವೇ ಅವೇ ಪದಗಳನ್ನು ಬಳಸುವುದು ಅನಿವಾರ್ಯವಾದ ಪ್ರಸಂಗಗಳಲ್ಲಿ, ಆ ಪದಗಳನ್ನು ಭಿನ್ನಭಿನ್ನ ಪ್ರಸಂಗಗಳಲ್ಲಿ ಬೇರೆಬೇರೆ ಪದಗಳೊಂದಿಗೆ ಸಮಸ್ತ ಪದಗಳ ನ್ನಾಗಿ ಮಾಡಿ ಬಳಸಿ, ಅಥವಾ ಆ ಪದಗಳಿಗೆ ಹೊಸ ಕಳೆತರುವಂತೆ ಪ್ರಯೋಗಿಸುತ್ತಿದ್ದರೆ ಅಂತಹ ಗದ್ಯಕ್ಕೆ ಕಳೆಬರುತ್ತದೆ.[19] ಗದ್ಯದ ಅಭಿವ್ಯಕ್ತಿಯ ಮಾಧ್ಯಮವೆಂದರೆ ಶಬ್ದಗಳೇ. ಈ ಶಬ್ದಗಳನ್ನು ಬಳಸುವಲ್ಲಿ ಪಳಗಿದ ಕಲೆ ಇಲ್ಲದಿದ್ದರೆ ಶ್ರೇಷ್ಠ ಅಭಿವ್ಯಕ್ತಿ ಸಾಧ್ಯವಾಗ ಲಾರದು.[20] ಗದ್ಯಕಾರನು ಸತ್ವ ಹಾಗೂ ಪರಿಣಾಮಗಳ ಕಡೆಗೆ ಗಮನವಿತ್ತು, ಉದ್ದೇಶ ಸಾಫಲ್ಯಕ್ಕೆ ತಕ್ಕಂತಹ ಪದಗಳನ್ನು ಆಯ್ದುಕೊಂಡು ಬರೆಯುವುದು ಉತ್ತಮ ಗದ್ಯಕ್ಕೆ ಸಾಧನವಾಗುತ್ತದೆ. ಇದಲ್ಲವೆ ಗದ್ಯಕ್ಕೆ ಕಳೆತರುವುದು ಬರಹಗಾರನ ವ್ಯಕ್ತಿತ್ವ ಹಾಗೂ ಶೈಲಿಯನ್ನೂ ಅವಲಂಬಿಸಿರುತ್ತದೆ. ಬರಹಗಾರನ ವಸ್ತು ಬದಲಾದಂತೆ ಶೈಲಿಯೂ ಬದ ಲಾಗುತ್ತದೆ. ಹಲವು ಬಾರಿ ಶೈಲಿಯೇ ಓದುಗನನ್ನು ಆನಂದಸಾಗರದಲ್ಲಿ ಮುಳುಗುವಂತೆ ಮಾಡುತ್ತದೆ ಎಂಬುದಕ್ಕೆ ಬಾಣಕವಿಯ ಕಾದಂಬರಿಯನ್ನು ಉದಾಹರಣೆಯನ್ನು ಹೇಳ ಬಹುದು. ಎಷ್ಟೋ ಬಾರಿ ಉತ್ತಮ ವಸ್ತುವೂ ಸಾಮಾನ್ಯ ಬರಹಗಾರನ ಕೈಯಲ್ಲಿ ಸಿಲುಕಿ ಅಂದಗೇಡಿಯಾಗುತ್ತದೆ. ಬರಹಗಾರನ ಶೈಲಿಯು ಆತನು ಆಯ್ದುಕೊಳ್ಳುವ ಪದಗಳನ್ನೇ ಅವಲಂಬಿಸಿರುವುದರಿಂದ ಗದ್ಯವು ಮೂಲತಃ ಪದಗಳ ಆಯ್ಕೆಯನ್ನೇ ಅವ ಲಂಬಿಸಿಯೆಂದಂತಾಗುತ್ತದೆ.

೪

ಪದ್ಯವು ಭಾವನಾಪ್ರದವಾದುದರಿಂದ ಅದನ್ನು ಭಾವನಾಲಹರಿಯ ಜೀಕಿಗೆ ಬಳಸು

---

[19] "If Prose is to kept alive only a changing language is a living one. Words, Phrases, metaphors, means of approach become worn outuse; they are like coins which gradually get rubbed so that we cannot see what is in them; so with words or metaphors. The good writer then always keeps his coins new minted, by placing the words differently, combining them in a new way, choosing them with freshness and exactitude and being away from idle repetition. It is easy enough to recognise the originality of a writer by the words he uses"—*Modern Prose Style*, p. 10–11, by Bonamy Dobree; Oxford University Press, Pub. (1935)

[20] *English Prose*, p. 94.

ತ್ತಾರೆ. ಗದ್ಯವನ್ನು ಸಾಮಾನ್ಯವಾಗಿ ಸಾಮಾನ್ಯ ನಿರೂಪಣೆ, ಬುದ್ಧಿಯ ಚಾಕಚಕ್ಯತೆ, ತರ್ಕ, ವಾದ, ಶಾಸ್ತ್ರನಿರೂಪಣೆ ಮೊದಲಾದವುಗಳಲ್ಲಿ ಉಪಯೋಗಿಸುತ್ತಾರೆ. ಪದ್ಯವು ರಸಪ್ರತಿಪಾದನೆಯ ಕಡೆಗೆ ವಿಶೇಷ ಗಮನವಿತ್ತರೆ, ಗದ್ಯವು ವಿಷಯ ನಿರೂಪಣೆ, ಚಮತ್ಕಾರಗಳ ಕಡೆಗೆ ದೃಷ್ಟಿಯನ್ನಿತ್ತಂತೆ ಕಂಡುಬರುತ್ತಿದೆ. ಸಂಸ್ಕೃತ ಸಾಹಿತ್ಯದಲ್ಲಿ ಕಾವ್ಯದ ಲಕ್ಷಣಗಳು ಕಾಲಕಾಲಕ್ಕೆ ಬದಲಾಗುತ್ತಿದ್ದುದಕ್ಕೆ ಅಂದಂದಿನ ಕಾಲದಲ್ಲಿ ಹೊರಹೊಮ್ಮಿದ ಸಾಹಿತ್ಯವೇ ಕಾರಣವೆನ್ನಬೇಕು. ನಾಟಕಗಳ (ನಾಟಕಕಾರರ) ಪ್ರಾಬಲ್ಯದ ಕಾಲಕ್ಕೆ 'ರಸ' ಕಾವ್ಯಗಳ ಪ್ರಾಬಲ್ಯದ ಕಾಲಕ್ಕೆ 'ಅಲಂಕಾರ', ಗದ್ಯಪ್ರಾಚುರ್ಯದ ಕಾಲಕ್ಕೆ ಗುಣ ಮತ್ತು ರೀತಿ ಇಲ್ಲವೆ ಗುಣ ಅಥವಾ ರೀತಿ—ಕಾವ್ಯದ ಆತ್ಮವಾಯಿತು. ಈ ಮಾತು ಗದ್ಯದ ಜೀವಾಳವು ಗುಣ ಇಲ್ಲವೆ ರೀತಿಯೆಂಬುದನ್ನು ಸಮರ್ಥಿಸುತ್ತದೆ. ಗದ್ಯದಲ್ಲಿ ಕರ್ತೃ, ಕರ್ಮ, ಕ್ರಿಯಾಪದ ಇವು ಒಂದು ರೀತಿಯ ಹೊಂದಾಣಿಕೆಯಲ್ಲಿ ಕಣ್ಣಿಗೆ ಬಿದ್ದರೆ ಈ ಕ್ರಮವು ಪದ್ಯದಲ್ಲಿ ಕಾಣಲೇಬೇಕೆಂಬ ನಿಯಮವಿಲ್ಲ. ಗದ್ಯಪದ್ಯಗಳೆರಡಕ್ಕೂ ಭಾಷೆಯ ಮಿತವ್ಯಯವು ಅನ್ವಯವಾಗುತ್ತಿದ್ದರೂ ಪದ್ಯವು ಛಂದಸ್ಸಿನ ಬಂಧನದಲ್ಲಿ ಬರಬೇಕಾಗುವುದರಿಂದ ಕವಿಯು ಎಲ್ಲ ಪದಗಳನ್ನು ಬಳಸದೇ ಕೆಲವನ್ನೇ ಆಯ್ದುಕೊಳ್ಳುತ್ತಾನೆ. ಈ ನಿಯಮವು ಅಷ್ಟೊಂದು ಕಟ್ಟುನಿಟ್ಟಾಗಿ ಗದ್ಯಕ್ಕೆ ಅನ್ವಯವಾಗಲಾರದು. ಪದ್ಯವನ್ನು ಸ್ಮರಣೆಯ ಸಾಧನವನ್ನಾಗಿ ಮಾಡಿಕೊಂಡುದರಿಂದ ಅದು ಸಂಕ್ಷಿಪ್ತತೆ, ಮಾಧುರ್ಯತೆಗಳ ಕಡೆಗೆ ವಿಶೇಷ ಗಮನವೀಯುತ್ತಿದ್ದರೆ ಗದ್ಯವು ಎಷ್ಟೊಂದು ದೀರ್ಘವಾಗಿಯಾದರೂ ಮುಂದುವರಿಯಬಹುದು. ಅರ್ಥಾಲಂಕಾರಗಳು ಗದ್ಯದಲ್ಲಿ ಕಡಿಮೆ ಪ್ರಮಾಣದಲ್ಲಿ ಶಬ್ದಾಲಂಕಾರಗಳು ಅಧಿಕ ಪ್ರಮಾಣದಲ್ಲಿ ಗೋಚರಿಸುತ್ತಿದ್ದರೆ ಪದ್ಯದಲ್ಲಿ ಅರ್ಥಾಲಂಕಾರಗಳು ಹೆಚ್ಚಾಗಿಯೂ ಶಬ್ದಾಲಂಕಾರಗಳು ಕಡಿಮೆ ಪ್ರಮಾಣದಲ್ಲಿಯೂ ಗೋಚರಿಸುತ್ತವೆ. ಪದ್ಯಕ್ಕೆ 'ಲಯ' ಮತ್ತು 'ಛಂದ'ಗಳು ಆವಶ್ಯಕವಾದರೆ ಗದ್ಯಕ್ಕೆ ಇವು ಅಷ್ಟೊಂದು ಆವಶ್ಯಕವೆಂದು ಎನಿಸಲಾರವು. ಸಾಮಾನ್ಯವಾಗಿ ಗುಣ ಮತ್ತು ರೀತಿಗಳು ಗದ್ಯಕ್ಕೂ ಅಲಂಕಾರ, ರಸಗಳು ಪದ್ಯಕ್ಕೂ ಅನ್ವಯಿಸುವಂತಿವೆ. ವಸ್ತು, ಪಾತ್ರ, ವರ್ಣನೆ ಈ ಮೂರೂ ಗದ್ಯಪದ್ಯಗಳೆರಡಕ್ಕೂ ಬೇಕು: ಆದರೆ 'ವರ್ಣನೆ' ಗದ್ಯದಲ್ಲಿ ವಿಶೇಷವೆಂದು ಎನ್ನಬೇಕು. 'ಪಾಕವು' ಎರಡಕ್ಕೂ ಅನ್ವಯಿಸುತ್ತದೆ. ಹಿಂದೆಯೇ ತಿಳಿಸಿದಂತೆ ಈ ವ್ಯತ್ಯಾಸಗಳು ಸ್ಥೂಲವಾದುವೇ ವಿನಾ ಸೂಕ್ಷ್ಮವಾದವುಗಳಲ್ಲ ಎನ್ನಬಹುದು.[21]

ಪುರುಷಾರ್ಥಗಳ ಸಮನ್ವಿತ ಸಿದ್ಧಿಯನ್ನು ಬೆಳಗುವ ಸಾಹಿತ್ಯ ರೂಪದಲ್ಲಿ ಮಹಾಕಾವ್ಯವು ಮುಖ್ಯವಾದುದು. ಪದ್ಯಬದ್ಧವಾದ ಮಹಾಕಾವ್ಯವೂ ಗದ್ಯರೂಪದಲ್ಲಿರುವ

---

21 "It is important to realise that there is no essential difference in nature between prose and poetry. The form of poetry is repealet rhythems or verse; the form of prose is rhythems which donot repeat.This difference makes poetry more memorable and more immediately impressive to the emotions. But although they use different means the end to which both poetry and prose strive is the same"—*English Prosec*, p. 44.

ಕಥೆ, ಆಖ್ಯಾಯಿಕೆಗಳೂ ಒಂದು ಕಥಾಭಿತ್ತಿಯಲ್ಲಿ ಮನುಷ್ಯನ ಸಮಗ್ರ ಜೀವನವನ್ನು ಸಮರ್ಥವಾಗಿ ತೋರಿಸಬಹುದು.[22] ಅದರಿಂದಾಗಿ ಜ್ಞಾನಾರ್ಜನೆಗೆ, ಅನುಭವ ನಿರೂಪಣೆಗೆ, ಲಲಿತವೂ, ಉಚಿತವೂ, ಗುಣಾಲಂಕಾರಗಳ ಯೋಜನೆಯಿಂದ ರಮಣೀಯತೆಯನ್ನು ಪಡೆದು ಹೊರಹೊಮ್ಮಿದ ರೂಪವು ಗದ್ಯವಾದರೂ ಅಷ್ಟೇ, ಪದ್ಯವಾದರೂ ಅಷ್ಟೇ. ಎರಡರ ಗುರಿ ಸೌಂದರ್ಯಬೋಧೆ, ಕಲಾಬೋಧೆಯೇ ಆಗಿದೆ.

೫

ಸಂಸ್ಕೃತ ಸಾಹಿತ್ಯದಲ್ಲಿ ಕಾವ್ಯವನ್ನು ಗದ್ಯ, ಪದ್ಯ, ಮಿಶ್ರ ಎಂದು ಮೂರು ವಿಧವಾಗಿ ವಿಭಜಿಸಿ ಗದ್ಯವನ್ನು 'ಕಥಾ' ಮತ್ತು 'ಆಖ್ಯಾಯಿಕಾ' ಎಂಬ ಎರಡು ವಿಭಾಗದಲ್ಲಿ ವಿಂಗಡಿಸುತ್ತಾರೆ. ದಂಡಿಯು ಈ ರೀತಿಯ ವಿಭಾಗವನ್ನು ಒಪ್ಪಲಿಲ್ಲ.[23] ಡಿಂದಯ ಅಭಿಪ್ರಾಯದಂತೆಯೇ ಯಾರೂ ಈ ರೀತಿಯ ವಿಭಾಗಕ್ರಮವನ್ನು ಪಾಲಿಸಲಿಲ್ಲವೆಂದು ಕಂಡುಬರುತ್ತದೆ. ಅಲ್ಲದೆ ಈ ರೀತಿ ಕಟ್ಟುನಿಟ್ಟಾಗಿ ಗದ್ಯವನ್ನು ಎರಡು ಭಾಗವಾಗಿ ವಿಂಗಡಿಸುವುದು ಸರಿಯಲ್ಲವೆಂದು ಹೇಳಿ ಅವೆರಡೂ ಒಂದೇ ವಸ್ತುವಿನ ಎರಡು ಹೆಸರುಗಳೆಂದು ದಂಡಿಯು ಹೇಳುತ್ತಾನೆ. ರುದ್ರಟನು ಗದ್ಯದ ವಿಭಾಗವನ್ನು ಹೇಳುವಾಗ ಕಥೆ ಮತ್ತು ಆಖ್ಯಾಯಿಕೆಯೆಂದು ಕರೆದುದು ಬಾಣನ 'ಕಾದಂಬರಿ' ಮತ್ತು 'ಹರ್ಷಚರಿತೆ'ಯನ್ನು ದೃಷ್ಟಿಯಲ್ಲಿರಿಸಿಕೊಂಡಂತೆ ಕಂಡುಬರುತ್ತದೆ. ಕಥೆ ಮತ್ತು ಆಖ್ಯಾಯಿಕೆಗಳ ಲಕ್ಷಣಗಳನ್ನು ಗೊತ್ತುಪಡಿಸುವಲ್ಲಿ ಆಲಂಕಾರಿಕರಲ್ಲಿ ವ್ಯತ್ಯಾಸಗಳು ಕಂಡುಬಂದರೂ ಮುಖ್ಯತಃ 'ಗದ್ಯಕಾವ್ಯ'ದ ವಿಭಾಗಕ್ರಮದಲ್ಲಿ ಭಿನ್ನತೆಗಳು ತಲೆದೋರಲಿಲ್ಲ. ಅಲ್ಲದೆ ಕೆಲವರು "ಗದ್ಯಂ ಕವೀನಾಂ ನಿಕಷಂ ವದಂತಿ" (ಗದ್ಯವೇ ಕವಿಗಳ ಒರೆಗಲ್ಲು) ಎಂಬುದಕ್ಕೆ ಬಾಣನ ಗದ್ಯದ ರೀತಿಯನ್ನೇ ತಲೆಯಲ್ಲಿರಿಸಿಕೊಂಡಂತೆ ಕಾಣುತ್ತದೆ. ಅಲ್ಲದೆ ಮಹಾಕವಿ ಬಾಣನೇ ಸಂಸ್ಕೃತ ಸಾಹಿತ್ಯದ "ಸುಸಂಸ್ಕೃತ ಗದ್ಯಶೈಲಿಗೆ" ಪ್ರಮುಖನೆಂದು ತಿಳಿಯಲ್ಪಟ್ಟನು.[24] ಕಥಾ ಮತ್ತು ಆಖ್ಯಾಯಿಕೆಗಳ ವ್ಯತ್ಯಾಸಗಳು ವಸ್ತು ಹಾಗೂ ನಿರೂಪಣೆ

---

22 'ಸಂಸ್ಕೃತಸಾಹಿತ್ಯದಲ್ಲಿ ಶೃಂಗಾರ ರಸ' ಪುಟ ೧೪-೧೫ ; ಡಾ. ಕೆ. ಕೃಷ್ಣಮೂರ್ತಿ.

23 "Gadya or Prose is a composition which is not measured in lines and is further divided into two kinds–the Ākhyāyika and kathā. It will be noticed that Dandin himself didnot approve of these two divisions of Gadya and believed them to be some what arbitary", *Dashakumara Charite*, Preface Edited by prof. S.D. & A. B. Gajendragadka. (1919)

24 "Dandin Remarks that no hard and fast line of dermarkation can be drawn between the two works and that the points mentioned above, have not been invariably followed by writers and hence Katha and Akhyayika are but two names of the same species of prose composition Rudrata seems to have in mind 'Kadambari' and 'Harshacharita' while defining katha and Akhyayika, It is said by rhetoricians that prose was the touch stone of poets. Bana is easily the first among the writers of classical sanskrit prose", *Kadambari of Banabhatta*, introduction, Edited by P. V.Kane (1911)

ಗಳನ್ನವಲಂಬಿಸಿವೆ. 'ಆಖ್ಯಾಯಿಕಾ' ಇದರ ವಸ್ತು ಐತಿಹಾಸಿಕ ವಿಷಯವಾದರೆ 'ಕಥೆ'ಯ ವಸ್ತು ಕಾಲ್ಪನಿಕವಾಗಿದೆ. ಆರಂಭದಲ್ಲಿ ಕವಿಯು ತನ್ನ ವಂಶಾವಳಿಯ ವಿಷಯವನ್ನು ನಿರೂಪಿಸಿಕೊಂಡಿರುವುದು ಕಥೆಯಲ್ಲಿ ಹೆಚ್ಚಾಗಿದ್ದರೆ 'ಆಖ್ಯಾಯಿಕೆ'ಯಲ್ಲಿ ಕಡಿಮೆ ಇರುತ್ತದೆ. ಆಖ್ಯಾಯಿಕೆಯಲ್ಲಿ ಕಥಾನಾಯಕನೇ ತನ್ನ ಕಥೆಯನ್ನು ನಿವೇದಿಸಿದರೆ 'ಕಥೆ'ಯಲ್ಲಿ ಇನ್ನೊಬ್ಬರು ಆ ಕಥೆಯನ್ನು ನಿರೂಪಿಸುತ್ತಾರೆ. ಇದಲ್ಲದೆ ಕೆಲವು ಆಲಂಕಾರಿಕರು ಕಥೆ ಮತ್ತು ಆಖ್ಯಾಯಿಕೆಗಳಲ್ಲಿ ನಡುನಡುವೆ ಬರಬಲ್ಲ ಛಂದೋರೂಪ, ಸಮಾಸ, ಕೃತಿವಿಭಜನಾಕ್ರಮ ವ್ಯತ್ಯಾಸ—ಇವುಗಳನ್ನೂ ತಿಳಿಸಿದ್ದಾರೆ. ಉದಾಹರಣೆಗೆ ಪಿ. ವ್ಹಿ. ಕಾಣೆಯವರ ಈ ಕೆಲವು ಮಾತುಗಳನ್ನು ಗಮನಿಸಬಹುದು :

"We have seen (above) that a profusion of compounds was said by Dandin to constitute the very essence of prose and hence long compounds form the ruling characterstics of katha and Akhyayika. The author of 'Dhwanyaloka' says that even in an Akhyayika very long compounds should not occur in depicting the love of separated lovers and pathos."[25]

ಸಾಮಾನ್ಯವಾಗಿ ಹೇಳುವುದಾದರೆ ಕಥೆ ಮತ್ತು ಆಖ್ಯಾಯಿಕೆಗಳು ಒಂದೇ ರೀತಿಯವು ಎನ್ನಬಹುದು; ಯಾಕೆಂದರೆ ಇವುಗಳ ವ್ಯತ್ಯಾಸಗಳು ಅಷ್ಟೊಂದು ಕಟ್ಟುನಿಟ್ಟಾಗಿ ಪಾಲಿಸಲ್ಪಟ್ಟಿರುವಂತೆ ಕಾಣುವುದಿಲ್ಲ. ಒಂದೇ ವಸ್ತುವಿಗೆ ಎರಡು ಹೆಸರಿದ್ದಂತೆ. ಉಳಿದ ಗದ್ಯಭೇದಗಳೂ ಇದರಲ್ಲಿಯೇ ಅಡಕವಾಗುತ್ತವೆ—ಎಂಬುದೇ ದಂಡಿಯ ಅಭಿಪ್ರಾಯವಾಗಿದೆ.[26] ಸಂಸ್ಕೃತದಲ್ಲಿ 'ಕಾದಂಬರಿ' 'ದಶಕುಮಾರ ಚರಿತೆ' ಇವು ಗದ್ಯಶೈಲಿಗೆ ಉತ್ತಮ ನಿದರ್ಶನಗಳಾಗಿವೆ.

**ಆಂಗ್ಲ ಸಾಹಿತ್ಯದಲ್ಲಿ ಗದ್ಯದ ವಿವಿಧ ರೂಪಗಳು ಇಂತಿವೆ:** ಜಾನ್ ಬ್ರಾಫೀ ಅವರು ಇಂಗ್ಲಿಷ್ ಪ್ರೋಸ್ ಎಂಬ ಗ್ರಂಥದಲ್ಲಿ (ಪುಟ ೪೩–೫೮) (ಅ) (desriptive) ವರ್ಣನಾತ್ಮಕ, (ಆ) (Narrative) ನಿರೂಪಣಾತ್ಮಕ (ಇ) (Persuasive) ಪ್ರೇರಣಾತ್ಮಕ ಮತ್ತು (ಈ) (Dramatic) ನಾಟಕೀಯ ಎಂದು ವಿಂಗಡಿಸಿದ್ದಾರೆ.

**ವರ್ಣನಾತ್ಮಕ ಗದ್ಯ** : ಕಾಲ್ಪನಿಕವಾಗಿ ಇಲ್ಲವೆ ವಾಸ್ತವಿಕವಾಗಿ ಬರೆಹಗಾರನು ತಾನು ಕಂಡ ವಸ್ತು, ವ್ಯಕ್ತಿ ಇಲ್ಲವೆ ಸ್ಥಳ ಇವುಗಳ ಬಗೆಗೆ ಇನ್ನೊಬ್ಬರಿಗೆ ನಿರೂಪಿಸುವುದು; ಇಲ್ಲವೆ ಬಣ್ಣ, ಆಕಾರ ಮತ್ತು ಹೊಂದಾಣಿಕೆ ಇವುಗಳ ಪಟ್ಟಿ ಮಾಡುವುದು. ಈ ಗದ್ಯಕ್ಕೆ ಮೂಲವೆಂದರೆ ನಿರೀಕ್ಷಣೆ. ಅದು ವರ್ಣಿಸಿದ ವಸ್ತುಗಳ ಚಿತ್ರಗಳನ್ನು ಓದುಗರಲ್ಲಿ

---

25 'Kadambari of BanaBhatta' Introduction, Edited by P. V. Kane.

26 "ತತ್ಕಥಾಖ್ಯಾಯಿಕೇತ್ಯೇಕಾ ಜಾತಿಃ ಸಂಜ್ಞಾದ್ವಯಾಂಕಿತಾ
ಅತ್ರೈವಾಂತರ್ಭವಿಷ್ಯಂತಿ ಶೇಷಾಶ್ಚಾಖ್ಯಾನ ಜಾತಯಃ"—ಕಾವ್ಯಾದರ್ಶ I- ೨೮;
ನೋಡಿ : 'ಭಾಮಹನ ಕನ್ನಡ ಕಾವ್ಯಾಲಂಕಾರ'; ಅನುಬಂಧ, ಪುಟ ೧೪೫; ಸಂ. ಡಾ. ಕೆ. ಕೃಷ್ಣಮೂರ್ತಿ (೧೯೫೫)

ಮೂಡಿಸಬೇಕು; ಇದೇ ಅದರ ಕಲೋದ್ದೇಶ.

**ನಿರೂಪಣಾತ್ಮಕ ಗದ್ಯ**: ಇದು ಘಟನೆ, ಕಾಲ, ಅವಕಾಶಗಳ ವರ್ಣನೆಗೆ ವಿನಿಯೋಗವಾಗುತ್ತದೆ. ವರ್ಣನಾತ್ಮಕ ಗದ್ಯಕ್ಕಿಂತ ಇದರ ಕಾರ್ಯವು ಜಟಿಲವಾದುದು. ಯಾಕೆಂದರೆ ಇದು ಕಳೆದ ಕಾಲದ ಅವಧಿಯನ್ನು ತಿಳಿಸುವುದಲ್ಲದೆ ಪಾತ್ರಗಳ ಅಂತರಂಗ ವನ್ನು ಎತ್ತಿತೋರಿಸುತ್ತದೆ; ಅದಕ್ಕೆ ಅನುಕೂಲವಾದ ವಿವರಗಳನ್ನೊದಗಿಸಿ ಓದುಗನ ಲಕ್ಷ್ಯವನ್ನು ಸೆಳೆಯುತ್ತದೆ. ಬಾಹ್ಯವಸ್ತುಗಳನ್ನು ಮಾತ್ರ ವರ್ಣಿಸುವುದಲ್ಲ.

**ಪ್ರೇರಣಾತ್ಮಕ ಗದ್ಯ**: ಈ ರೀತಿಯ ಗದ್ಯದ ಉದ್ದೇಶವು ವಿವರಣೆ, ಬೋಧನೆ ಕೊಡಲು, ದತ್ತಾಂಶಗಳಿಂದ ನಿರ್ಣಯವನ್ನು ರೂಪಿಸಲು ಇಲ್ಲವೆ ಓದುಗರಲ್ಲಿ ಅಭಿಪ್ರಾಯ ಗಳನ್ನು ಮೂಡಿಸಲು ಇರುತ್ತದೆ. ಅದು ಕಲೆಗಿಂತ ಹೆಚ್ಚಾಗಿ ಬುದ್ಧಿಶಕ್ತಿಯನ್ನು ಬೆಳೆಸು ವುದಾಗಿರುತ್ತದೆ. ಕೆಲವು ಬಾರಿ ಇದ್ದ ಹಾಗೆಯೇ ಕಲೆಯನ್ನು ಅದು ಸಾಧಿಸುತ್ತದೆ. ಪ್ರೇರಣಾವಿಧಾನಗಳು ಸೂಕ್ಷ್ಮವಾಗಿರಬಹುದು, ಒರಟಾಗಿರಬಹುದು, ಮೃದುತನದಿಂದ ಇಲ್ಲವೆ ಹಿಂಸೆಯಿಂದ ಕೂಡಿರಬಹುದು.

**ನಾಟಕೀಯ ಗದ್ಯ**: ಈ ಗದ್ಯವು ಎರಡು ಇಲ್ಲವೆ ಹಲವು ವ್ಯಕ್ತಿಗಳ ನಡುವಿನ ಸಂಭಾಷಣೆಯನ್ನು ವಿವರಿಸಿ ಅವರ ಮಧ್ಯದಲ್ಲಿ ನಡೆದುದನ್ನು ಓದುಗರಿಗೆ ತಿಳಿಯಪಡಿಸು ವುದಾಗಿರುತ್ತದೆ. ಅದು ಭಾವೋದ್ರೇಕಗೊಳಿಸುವುದೂ ವಿಚಾರ ಚಲನೆ ಮಾಡು ವಂತಹದೂ, ನಿರೂಪಣೆ ಮಾಡುವಂತಹದೂ, ವರ್ಣನಾತ್ಮಕವೂ, ಪ್ರೇರಣಾತ್ಮಕವೂ ಆಗಿರಬಹುದು. ಇದರಲ್ಲಿ ಮಾಧುರ್ಯವು ಅಸಂಭವ. ಜನತೆಯ ಸಂಭಾಷಣೆಗಳನ್ನು ನಿರೂಪಿಸುವ ನಾಟಕ ಇಲ್ಲವೆ ಕಾದಂಬರಿಗಳಲ್ಲಿ ಇಂತಹ ಗದ್ಯವನ್ನು ನೋಡುತ್ತೇವೆ.

"The purpsoe, the end, the thoughts, feelings, perception to be communicated to others may help us to distinguish one kind of prose from another. The form of prose is determined by its purpose."[27]

ಬರಹಗಾರರು ಒಟ್ಟಾರೆ ಮೂರು ಉದ್ದೇಶಗಳಿಂದ ಕೂಡಿ ಗದ್ಯವನ್ನು ಬರೆಯುತ್ತಾರೆ: ವ್ಯಕ್ತಿ, ಕ್ರಿಯೆ, ಇಲ್ಲವೆ ವಸ್ತುವನ್ನು ವರ್ಣಿಸುವುದೇ—ಆ ಉದ್ದೇಶಗಳಾಗಿವೆ; ಈ ರೀತಿಯ ಗದ್ಯವೇ ವರ್ಣನಾತ್ಮಕ ಗದ್ಯ. ಇಲ್ಲವೆ ವಿಜ್ಞಾನದ ಯಾವುದೋ ವಿಷಯವನ್ನು ವಿವರಿಸುವುದಾಗಿರುತ್ತದೆ; ಯಾವುದೋ ವಿಷಯವನ್ನು ಪರಿಶೀಲಿಸುವುದು (criticism) ಗದ್ಯದ ಉದ್ದೇಶವಾಗಿದ್ದರೆ ಅದನ್ನು ವಿವರಣಾತ್ಮಕ (Explanatory prose) ಗದ್ಯ ಎಂದು ಕರೆಯುತ್ತಾರೆ. ಮೂರನೆಯದಾಗಿ ಗದ್ಯದ ಉದ್ದೇಶವು ಭಾವನೆಗಳನ್ನು ಎಬ್ಬಿಸು ವುದಾದರೆ, ಹರ್ಷ, ದುಃಖಗಳನ್ನುಂಟುಮಾಡುವುದಾದರೆ ಅದನ್ನು ಭಾವನಾತ್ಮಕ ಗದ್ಯ (Emotive prose) ಎಂದು ಕರೆಯುತ್ತಾರೆ.[28] ಈ ಮೂರು ವಿಭಾಗಗಳಲ್ಲಿ ಮತ್ತೆ ಒಳವಿಭಾಗಗಳನ್ನೂ ಹೀಗೆ ಗುರುತಿಸಬಹುದು:

27 English Prose, pp. 43-58.
28 *Modern Prose Style*, p. 8; Bonamy Dobree.

I **ವರ್ಣನಾತ್ಮಕ ಗದ್ಯ :** (ಅ) ಕ್ರಿಯಾವರ್ಣನೆ (Narrative)
(ಬ) ಜನರ ವರ್ಣನೆ
(ಕ) ವಸ್ತು-ವಿಷಯ ವರ್ಣನೆ

II **ವಿವರಣಾತ್ಮಕ ಗದ್ಯ :** ವಿಜ್ಞಾನ, ಕಾಯಿದೆ, ತತ್ವಶಾಸ್ತ್ರ, ನೀತಿ, ದೈವ ಶಾಸ್ತ್ರ, ರಾಜ್ಯಶಾಸ್ತ್ರ, ಇತಿಹಾಸ, ವಿಮರ್ಶೆ ಇತ್ಯಾದಿಗಳ—ವರ್ಣನೆ

III **ಭಾವನಾತ್ಮಕ ಗದ್ಯ :** ಭಾವಗಳನ್ನು ಬಡಿದೆಬ್ಬಿಸುವ ವರ್ಣನೆ[29] ಎಂದು.

೨

ಕನ್ನಡದ ಪ್ರಥಮ ಅಲಂಕಾರ(ಲಕ್ಷಣ)ಗ್ರಂಥ–ಕವಿರಾಜಮಾರ್ಗದಲ್ಲಿ "ಗದ್ಯಮನೇಕ ರೂಪವಿಭಕ್ತಂ" ಎಂದು ಮಾತ್ರ ಹೇಳಲಾಗಿದೆ. ಅಲ್ಲಿ ಅವುಗಳ ವೈವಿಧ್ಯ ವಿವರಣೆಯಾಗಲಿ, ಉದಾಹರಣೆಯಾಗಲಿ ದೊರೆಯುವುದಿಲ್ಲ. ಹಳಗನ್ನಡದಲ್ಲಿ ಗದ್ಯಗ್ರಂಥಗಳು ತೀರ ಕಡಿಮೆ. ಬಾಣನ ಶ್ರೇಷ್ಠ ಗದ್ಯಕೃತಿ, ಕಾದಂಬರಿ ಮತ್ತು ದಂಡಿಯ ದಶಕುಮಾರ ಚರಿತೆ ಹಿಂದೆಯೇ ಅನುವಾದಗೊಂಡಿದ್ದರೂ ಅವುಗಳನ್ನು ಕನ್ನಡದಲ್ಲಿ ನಾಗವರ್ಮ ಮತ್ತು ಚೌಂಡರಸರು ಚಂಪೂರೂಪದಲ್ಲಿ ಅನುವಾದಿಸಿರುವುದು ಅಂದು ಕನ್ನಡಿಗರಲ್ಲಿ ಪದ್ಯದ ಬಗೆಗೆ ಇದ್ದ ವ್ಯಾಮೋಹವನ್ನು ವ್ಯಕ್ತಪಡಿಸುತ್ತದೆ. ಕವಿರಾಜಮಾರ್ಗದಲ್ಲಿ :

"ವಿಮಳೋದಯ ನಾಗಾರ್ಜುನ
ಸಮೇತ ಜಯಬಂಧು ದುರ್ವಿನೀತಾದಿಗಳೀ
ಕ್ರಮದೊಳ್ ನೆಗಟ್ಚಿ ಗದ್ಯಾ-
ಶ್ರಮಪದ ಗುರುತಾಪ್ರತೀತಿಯಂ ಕೆಯ್ಕೊಂಡರ್"[30]
".........
ನಿಗದಿಸುವರ್ ಗದ್ಯಕಥಾ ಪ್ರಗೀತಿಯಿ ತಚ್ಚಿರಂತನಾಚಾರ್ಯರ್ಕಳ್"[31]

ಎಂದು ಹೇಳಲಾಗಿದೆ. ಇವರೆಲ್ಲ ಶ್ರೇಷ್ಠ ಗದ್ಯಕಾರರೆಂದು ಹೇಳಲ್ಪಟ್ಟಿದ್ದರೂ ಇವರ ಕೃತಿಗಳ ಬಗೆಗೆ ಸಾಕಷ್ಟು ವಿವರಗಳು ದೊರೆಯುವುದಿಲ್ಲ. ಅಲ್ಲದೆ ಗದ್ಯವಿಭಾಗಳಲ್ಲಿ 'ಗದ್ಯಕಥೆ'ಯೊಂದನ್ನೇ ಹೆಸರಿಸಿ 'ಆಖ್ಯಾಯಿಕೆ'ಯ ಹೆಸರನ್ನೂ ಹೇಳದಿರುವುದು, ಇತರ ಪ್ರಕಾರಗಳನ್ನು ಹೆಸರಿಸದಿರುವುದೂ ಗಮನಾರ್ಹ. ಹಳಗನ್ನಡದಲ್ಲಿ ವಿಶೇಷವಾಗಿ ಚಂಪೂಕಾವ್ಯ ರಚಿಸಿದ ಕವಿಗಳು 'ಗದ್ಯ' ಎಂಬ ಸಾಹಿತ್ಯರೂಪಕ್ಕೆ ಸಂಸ್ಕೃತದಲ್ಲಿ ಯಾವ ಅರ್ಥವನ್ನಿಟ್ಟುಕೊಂಡಿದ್ದರೋ ಅದೇ ಅರ್ಥವನ್ನು ಇಟ್ಟುಕೊಂಡಿದ್ದರು. ಸುಲಭವಾದ ಗದ್ಯಶೈಲಿ ಅವರಿಗೆ ಅಪರಿಚಿತವಾಗಿದ್ದಿಲ್ಲವಾದರೂ, ಅದು, ಹೆಚ್ಚಾಗಿ ಕ್ಲಿಷ್ಟತೆ, ಚಮತ್ಕಾರಗಳಿಂದ ತುಂಬಿ ತುಳುಕುತ್ತಿತ್ತು. ಕನ್ನಡದ ಲಾಕ್ಷಣಿಕರಿಗೂ ಸಂಸ್ಕೃತವೇ ಅಂದೂ ಮಾದರಿಯಾಗಿದ್ದುದ-

[29] ಅದೇ ಪುಸ್ತಕ.

[30] ಕ. ರಾ. ಮಾ. I–೨೯.

[31] ಕ. ರಾ. ಮಾ. I–೨೭.

ರಿಂದ ಅವರು ತಿಳಿಸುವ ಗದ್ಯದ ವಿವಿಧ ರೂಪಗಳು ಸಂಸ್ಕೃತ ಸಾಹಿತ್ಯದ ರೀತಿಯವೇ. ಪ್ರಾಚೀನರಲ್ಲಿ, ವಿಶೇಷತಃ ಹಳಗನ್ನಡ ಚಂಪೂ ಕವಿಗಳಲ್ಲಿ ಗದ್ಯಕೃತಿಯು 'ಪ್ರಬಂಧ'ದ ರೀತಿಯದಾಗಿದ್ದುದರಿಂದ ಅದು ಉತ್ತಮ ಸಾಹಿತ್ಯದ, ರಸಯುಕ್ತ, ಸೌಂದರ್ಯಯುಕ್ತ ಕವಿರಚನೆಯೆಂದೇ ತಿಳಿಯಲ್ಪಟ್ಟಿತ್ತು.

'ಕನ್ನಡ ಕೈಪಿಡಿ' (ಸಂಪುಟ ೧)ಯಲ್ಲಿ ಗದ್ಯದ ವಿವಿಧ ರೀತಿ ಹಾಗೂ ಲಕ್ಷಣಗಳನ್ನು ಈ ರೀತಿ ತಿಳಿಸಲಾಗಿದೆ :

(ಅ) **ಚೂರ್ಣ :** ಸುಲಭವಾದ ಗದ್ಯಶೈಲಿಗೆ ಚೂರ್ಣವೆಂದು ಹೆಸರು. ಇದರಲ್ಲಿ ಪದಗಳು ಸಮಾಸವಾಗದೆ ಬಿಡಿಬಿಡಿಯಾಗಿರುತ್ತವೆ. (ಆ) **ಉತ್ಕಲಿಕಾಪ್ರಾಯ :** ಸಮಾಸಗಳಿಂದ ತುಂಬಿ ಗಂಟುಗಂಟಾಗಿರುವುದು. (ಇ) **ವೃತ್ತಗಂಧಿ :** ಗದ್ಯರೂಪವಾಗಿ ಹೊರಟು, ಮಧ್ಯೆ ಛಂದೋರೂಪಕ್ಕೆ ತಿರುಗಿ, ವೃತ್ತಪಾದಗಳೂ ಪಾದಭಾಗಗಳೂ ಆಗಿ ಪ್ರವಹಿಸುವ ಗದ್ಯಶೈಲಿಗೆ ವೃತ್ತಗಂಧಿ ಎಂದು ಹೆಸರು.[32]

ಡಾ. ಎಲ್. ಬಸವರಾಜು ಅವರು ಶಿವದಾಸಗೀತಾಂಜಲಿಯಲ್ಲಿ (ಪೀಠಿಕೆಯಲ್ಲಿ) ಒಂದೆಡೆ ಹೀಗೆ ಬರೆದಿದ್ದಾರೆ : "ಶಾರ್ಙ್ಗದೇವನು ಸಂಗೀತ ರತ್ನಾಕರದ ಪ್ರಬಂಧಾಧ್ಯಾಯದಲ್ಲಿ : 'ಗದ್ಯಂ ನಿಗದ್ಯತೇ ಛಂದೋಹೀನಂ ಪದಕದಂಬಕಂ' ಎಂದು ಸಂಗೀತಕ್ಕೆ ಹೊಂದಿಕೊಳ್ಳುವ ಆದರೂ ಛಂದಸ್ಸಿಲ್ಲದ ಕೇವಲ ಪದಗುಂಫನದಿಂದಾದ ಗದ್ಯವೆಂಬ ಒಂದು ಪ್ರಕಾರವನ್ನು ಹೇಳಿ, (ಅ) **ಉತ್ಕಲಿಕ,** (ಆ) **ಚೂರ್ಣ** , (ಇ) **ಲಲಿತ,** (ಈ) **ವೃತ್ತಗಂಧಿ,** (ಉ) **ಖಂಡ,** (ಊ) **ಚಿತ್ರ** ಎಂಬ ಆರು ಭೇದಗಳನ್ನು ಪರಿಗಣನೆ ಮಾಡುತ್ತಾನೆ. ಈ ಗದ್ಯಪ್ರಕಾರಗಳು ಸಾಮವೇದದಿಂದ ಹುಟ್ಟಿದುವೆನ್ನುವನು"[33] ಕನ್ನಡ ಕವಿಗಳು ಸಂಸ್ಕೃತ ಗದ್ಯದ ಲಕ್ಷಣಗಳನ್ನು ಅರಿತವರಾಗಿದ್ದರೂ ಕನ್ನಡದಲ್ಲಿ ತಮಗೆ ಸರಿ ಕಂಡ ರೀತಿಯಲ್ಲಿಯೇ ಗದ್ಯಗ್ರಂಥಗಳನ್ನು ಬರೆದಂತೆ ಕಂಡುಬರುತ್ತದೆ. ಹಳಗನ್ನಡದಲ್ಲಿಯ 'ವಡ್ಡಾರಾಧನೆ', 'ಚಾವುಂಡರಾಯಪುರಾಣ', 'ಚಿಕದೇವರಾಯ ವಂಶಾವಳಿ' ಈ ಗದ್ಯಗ್ರಂಥಗಳಿದ್ದರೂ ಇವುಗಳಲ್ಲಿ ಸಂಸ್ಕೃತಗದ್ಯಕ್ಕೆ ಹೇಳಿರುವ ಲಕ್ಷಣಗಳಲ್ಲಿ ಯಾವುದೂ ಸಮನ್ವಯವಾಗುವುದಿಲ್ಲ.[34] ಇಲ್ಲಿರುವ ಗದ್ಯಪ್ರಭೇದದ ಹೆಸರುಗಳಾವುವೂ ಕನ್ನಡದ ಪದಗಳಲ್ಲ. ಸಂಸ್ಕೃತದಲ್ಲಿ ಗದ್ಯಕೃತಿಯೆಂದೊಡನೆ ಅದೊಂದು 'ಪ್ರಬಂಧ', 'ಕವಿಗಳ ಒರೆಗಲ್ಲು' 'ಪ್ರೌಢರೀತಿಯ ರಚನೆ' ಎಂಬ ಭಾವನೆಯಿದ್ದು ಹಳಗನ್ನಡ ಕವಿಗಳು ಗದ್ಯ ಕೃತಿ ಬರೆಯುವಾಗ ಅವರ ಮನಸ್ಸಿನಲ್ಲಿ ಎಲ್ಲರಲ್ಲೂ ಈ ಭಾವನೆ ಇದ್ದಿರಲಿಲ್ಲವೆಂದು ಹೇಳಬಹುದಾದರೂ[35] ಆ ಹಳಗನಡ್ನ ಕೃತಿಗಳನ್ನು ಯಾವುದಾದರೊಂದು ರೀತಿಯ ಮೇಲೆ

---

[32] ಕನ್ನಡ ಕೈಪಿಡಿ–ಸಂಪುಟ ೧, ತೃತೀಯ ಆವೃತ್ತಿ, ಪುಟ ೧೭೮–೧೭೯ (ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟಣೆ)

[33] ಶಿವದಾಸಗೀತಾಂಜಲಿ (೧೯೬೩)

[34] ಕನ್ನಡ ಕೈಪಿಡಿ, ಸಂಪುಟ ೧, ಪುಟ ೧೮೦

[35] ಕನ್ನಡ ಕೈಪಿಡಿ, ಸಂಪುಟ ೧, ಪುಟ ೧೮೦, ಅಡಿ ಟಿಪ್ಪಣಿ.

ವಿವರಿಸಿದ ಗದ್ಯದ ವಿಭಜನಕ್ರಮಕ್ಕೆ ವಿದ್ವಾಂಸರು ಅಣಿಗೊಳಿಸುತ್ತಾರೆಂಬುದನ್ನು ನೋಡುತ್ತೇವೆ.

ಕಥಾ ಮತ್ತು ಆಖ್ಯಾಯಿಕಾ ಎಂಬ ವಿಭಸಾಕ್ರಮವು ವಸ್ತುವನ್ನು ಅನುಸರಿಸಿ ಮಾಡಿದುದಾಗಿದೆ. ಅದು ಸಂಸ್ಕೃತದಲ್ಲಿ 'ಕಾವ್ಯ'ವಾಗಿದೆ. ಕಾವ್ಯದ ಕಕ್ಷೆಯಲ್ಲಿ ಬರಲಾರದ ಗದ್ಯವನ್ನು ಈ ರೀತಿಯ ವಿಭಜನೆಗೆ ಸೇರಿಸಿಕೊಂಡಂತಿಲ್ಲವೆಂಬುದು ಗಮನಾರ್ಹವಾದ ಅಂಶವಾಗಿದೆ. ಚೂರ್ಣ, ಉತ್ಕಲಿಕಾಪ್ರಾಯ, ವೃತ್ತಗಂಧಿ ಎಂಬುವುಗಳನ್ನು ಒಂದೇ ಗ್ರಂಥದಲ್ಲಿಯೂ ಕಾಣಬಹುದು. ಅವುಗಳ ಭೇದಗಳು 'ವಾಕ್ಯರಚನಾಕ್ರಮ' ಮತ್ತು 'ಶೈಲಿ'ಯನ್ನು ಕುರಿತಾದವುಗಳಾದುದರಿಂದಲೂ ಇಂಗ್ಲಿಷ್ ಗದ್ಯ ಬರಹಗಾರರ ಗದ್ಯ ಪ್ರಭೇದಗಳಿಗೆ 'ವಸ್ತು' ಮತ್ತು ಶೈಲಿಯನ್ನು ಅವಲಂಬಿಸಿರುವುದರಿಂದ ಕನ್ನಡದ ಗದ್ಯ ಗ್ರಂಥಗಳಿಗೂ ಈ ತತ್ವಗಳನ್ನೇ ಅನ್ವಯಿಸಬಹುದಾಗಿದೆ. ಅಲ್ಲದೆ ಸಂಸ್ಕೃತ ಇಂಗ್ಲಿಷ್ ಭಾಷೆಗಳಲ್ಲಿ Simple, compound, complex ಎಂಬ ರೀತಿಯ ವಾಕ್ಯರಚನೆಯಿದ್ದು ಈ ಭಾಷೆಗಳಲ್ಲಿ ದೀರ್ಘವಾದ ವಾಕ್ಯಗಳನ್ನು ಬರೆಯುವುದು ಸೌಂದರ್ಯದ ಲಕ್ಷಣವೆಂದು ಕೆಲವರಲ್ಲಿಯಾದರೂ ಭಾವನೆ ಇದೆ. ಕನ್ನಡದಲ್ಲಿ ಚಿಕ್ಕ ಚಿಕ್ಕ ವಾಕ್ಯಗಳು ಹೆಚ್ಚು ಸುಂದರವಾಗಿ ಕಾಣಬಹುದು. ಸಾಮಾನ್ಯವಾಗಿ ಗದ್ಯವು ಛಂದಸ್ಸಿನಿಂದ ತಲೆದೋರುವುದಿಲ್ಲ; ಆದರೂ ಪದ್ಯದಿಂದ ಭಿನ್ನವಾದ ಒಂದು ರೀತಿಯ ಕಳೆತರುವ ಓಟ, ಇಲ್ಲವೆ 'ಲಯ' (ಅಥವಾ ಗತಿ) ಇದ್ದುದು ಕನ್ನಡ ಸಂಸ್ಕೃತ ಗ್ರಂಥಗಳಲ್ಲಿ ಕಂಡುಬರುವುದು; ಇದು ಗದ್ಯದ ಇಲ್ಲವೆ ಸೌಂದರ್ಯದ ಲಕ್ಷಣವೆನ್ನಲಡ್ಡಿಯಿಲ್ಲ. ಕೃತಿಕಾರನ ಉದ್ದೇಶಕ್ಕನುಗುಣವಾಗಿ ಬರಹಗಾರನ ಶೈಲಿಯೂ ಭಿನ್ನವಾಗುತ್ತ ಹೋಗುತ್ತದೆ.

'ಬಸವಪುರಾಣ'ದಲ್ಲಿ ವಾಙ್ಮಯವಿಭಾಗವನ್ನು ಕುರಿತು—ವಾಙ್ಮಯವು 'ಭಾಷಾಂಗ'ವೆಂದೂ 'ಕ್ರಿಯಾಂಗ'ವೆಂದೂ ಇಬ್ಬಗೆಯಾಗಿದ್ದು—ಈ ಎರಡರಲ್ಲಿ ನಾಟಕ, ಗದ್ಯ, ಪದ್ಯ, ಗೀತ ಎಂಬ ಭಾಗಗಳನ್ನು ಹೇಳಲಾಗಿದೆ. ಭಾಷಾಂಗದಲ್ಲಿ ಗದ್ಯಪದ್ಯಗಳನ್ನು ಕ್ರಿಯಾಂಗದಲ್ಲಿ ನಾಟಕ-ಗೀತಗಳನ್ನೂ ಸೇರಿಸಬಹುದಾದರೆ ಗದ್ಯಕ್ಕೂ 'ಭಾಷಾಪ್ರೌಢಿಮೆ' ಬೇಕಿತ್ತೆಂಬ ತಿಳುವಳಿಕೆ ಇದ್ದಂತಿದೆ.[36]

ಕ್ರಿ.ಶ. ಸುಮಾರು ಹದಿನೇಳನೆಯ ಶತಮಾನದಲ್ಲಿದ್ದಿರಬಹುದಾದ ಗೂಳೂರು ಸಿದ್ಧವೀರಾರ್ಯನ ಶಿಷ್ಯನಾದ ತೋಂಟದಾರ್ಯನು ರಚಿಸಿದ ಪಾಲ್ಕುರಿಕೆ – 'ಸೋಮೇಶ್ವರಪುರಾಣ'ದಲ್ಲಿ – ಸೋಮನಾಥನು ಇಷ್ಟಲಿಂಗಾರಾಧನೆಯ ಕಾಲಕ್ಕೆ ಬಸವೇಶ್ವರನನ್ನು ಪದ್ಯದಲ್ಲಿ ಸ್ತುತಿಸಿದುದಲ್ಲದೆ ಗದ್ಯದಲ್ಲಿಯೂ ಸ್ತುತಿಸಿದನೆಂದು ಹೇಳುತ್ತಾನೆ. ಆಗ ಅವನು ಕೆಲವು ಪ್ರಭೇದಗಳನ್ನು ತಿಳಿಸುತ್ತಾನೆ:

(ಅ) ಅಕ್ಷರಾಂಕ ಗದ್ಯ, (ಆ) ಅಕ್ಷರಮಾಲಿಕಾಗದ್ಯ, (ಇ) ಉದಾಹರಣಗದ್ಯ, (ಈ)

36 ಬಸವಪುರಾಣ, ಸಂಧಿ ೨೪, ಪದ್ಯ ೨೦; ಸಂಪಾದಕರು: ಡಾ. ಆರ್. ಸಿ. ಹಿರೇಮಠ, ಲಿಂಗಾಯತ ವಿದ್ಯಾಭಿವೃದ್ಧಿ ಶಾಖೆಯ ಪ್ರಕಟನೆ (೧೯೫೪)

ನಮಸ್ಕಾರಗದ್ಯ, (ಉ) ಉತ್ಕರ ಗದ್ಯ—ಇವೇ ಐದು ಆ ಪ್ರಭೇದಗಳು.[37] ಕನ್ನಡದಲ್ಲಿ ಗದ್ಯವು 'ಅನೇಕ ರೂಪವಿಭಕ್ತಂ' ಎಂಬುದನ್ನು ಇದು ಸಮರ್ಥಿಸುತ್ತದೆ.

ಡಾ. ಎಲ್. ಬಸವರಾಜು ಅವರು ಈ ಗದ್ಯ ಪ್ರಭೇದಗಳ ಬಗೆಗೆ ಈ ರೀತಿ ಉಲ್ಲೇಖಿಸಿದ್ದಾರೆ :

"ಬಾಣಗದ್ಯ, ಅಕ್ಷರಗದ್ಯ, ಪಂಚಗದ್ಯ—ಮೊದಲಾದವುಗಳನ್ನು ಓದುತ್ತ ಶ್ರೀಶೈಲದ ದಾರಿಯನ್ನು ಶಿವಭಕ್ತರು ನಡೆದರೆಂದು ಪಾಲ್ಕುರಿಕೆ ಸೋಮನಾಥನು 'ಪಂಡಿತಾರಾಧ್ಯ ಚರಿತ್ರೆ'ಯಲ್ಲಿ ಹೇಳಿದ್ದಾನೆ. ಕಾಳಿದಾಸನು ಶಿವನ ಮೇಲೆ ಒಂದು ಗದ್ಯವನ್ನು ಹೇಳಿ, ಅವನಿಂದ ಕಣ್ಣುಗಳನ್ನು ಪಡೆದ ಐತಿಹ್ಯವಿದೆ. ಹಲಾಯುಧನು ಶಿವನನ್ನು ಪೂಜಿಸುವಾಗ ಗದ್ಯಪದ್ಯಂಗಳಂ ಹೇಳುತ್ತಿದ್ದಂತೆ ಹರಿಹರನು ಅವನ ಮೇಲೆ ಬರೆದಿರುವ ರಗಳೆಯಲ್ಲಿದೆ. ಹಿಂದಿನ ಕಾಲದ ಶಿವಾಲಯಗಳಲ್ಲಿ ಸಮಸ್ತ ಭಕ್ತಜನ ಭಜಿತ ಶುದ್ಧ ಸಂಕೀರ್ತನ ಸಂಯುಕ್ತ ಗಂಭೀರಧ್ವಾನ ಪುರಾತನ ಗೀತರವಂಗಳಂ ಬುಧನಿಕರವದನೋದ್ಗತ ಮಧುರತರ ಗದ್ಯಪದ್ಯಸೇವ್ಯ ಕಾವ್ಯನಾಟಕ ಪ್ರಸಂಗಂಗಳಂ ಭೋರೆಂದು ಓರಂತೆ ನೆಗಳೆ ಪೂಜೆಯಾಗುತ್ತಿತ್ತು.

ಪಾಲ್ಕುರಿಕೆ ಸೋಮನಾಥನ **ನಮಸ್ಕಾರ ಗದ್ಯವು** ಪ್ರಸಿದ್ಧವಾಗಿದೆ. ಇದರ ಪ್ರಾರಂಭದಲ್ಲಿ ಒಂದು ವೃತ್ತವೂ ಕೊನೆಯಲ್ಲಿ ಒಂದು ಶ್ಲೋಕ ಮತ್ತು ಒಂದು ಕಂದವೂ ಇವೆ. ಇವೆರಡಕ್ಕೂ ಮಧ್ಯದಲ್ಲಿರುವ ಭಾಗವು ಹಲವು ನುಡಿಗಳಾಗಿ ವಿಭಾಗಿಸಲ್ಪಟ್ಟು ಮೊದಲ ಇಪ್ಪತ್ತಾರು (೧೩?) ನುಡಿಗಳಲ್ಲಿ ಒಂದೊಂದರಲ್ಲಿ ನಾಲ್ಕು ಪಾದಗಳಿದ್ದು ಒಂದೊಂದು ಪಾದದಲ್ಲಿ ನಾಲ್ಕು ಮಾತ್ರೆಯ ನಾಲ್ಕು ಗಣಗಳಿವೆ. ಅಥವಾ ನಾಲ್ಕು ಮಾತ್ರೆಯ ಮೂರು ಗಣಗಳೂ ಮೇಲೊಂದು ಗುರುವೂ ಇದೆ. ಇವುಗಳಲ್ಲಿ ಎರಡೆರಡು ಪಾದಗಳಿಗೂ ಪರಸ್ಪರ ಆದಿ (ದ್ವಿತೀಯಾಕ್ಷರ) ಮತ್ತು ಅಂತ್ಯಪ್ರಾಸವಿದೆ. ಆಮೇಲೆ ಬರುವ ಎರಡು ಮೂರು ನುಡಿಗಳಲ್ಲಿ ಐದು ಮಾತ್ರೆಯ ಗಣಗಳಿವೆ. ಇದರಲ್ಲಿ ಒಟ್ಟು ಹತ್ತೊಂಬತ್ತು ಪದ್ಯಗಳಿವೆಯೆನ್ನಬಹುದು. ಹೀಗಾಗಿ ಇದು ಛಂದೋಹೀನವಾದ ಕೇವಲ 'ಪದಕದಂಬಕ'ವಾಗುವುದಿಲ್ಲ.

**ಉದಾಹರಣಗದ್ಯದಲ್ಲಿ** ವೃತ್ತ ಕಳಿಕೆ ಉತ್ಕಳಿಕೆಗಳು ನಿಯತವಾಗಿ ಎಂಟುಸಲ ಆವೃತ್ತವಾಗಿ ಕೊನೆಗೆ ಒಂದೋ ಎರಡೋ ವೃತ್ತಗಳು ಬಂದಿವೆ. ಇಲ್ಲಿನ ಕಳಿಕೆ ಉತ್ಕಳಿಕೆಗಳಲ್ಲಿ ಎರಡೆರಡು ಪಾದಗಳು ಜೋಡಿಯಾಗಿ, ಅವಕ್ಕೆ ಪರಸ್ಪರ ಆದಿ ಅಂತ್ಯಪ್ರಾಸವಿದ್ದು ಮಾತ್ರಾಗಣಛಂದಸ್ಸಿಗೆ ಹೊಂದಿಕೆಯಾಗುವುದು. ಇವುಗಳಲ್ಲಿ ಸಾಮಾನ್ಯವಾಗಿ ಎಂಟು ಪಾದಗಳಿವೆಯೆನ್ನಬಹುದು.

**ಷಟ್ಸ್ಥಲ ಗದ್ಯದಲ್ಲಿ** ಏಳು ವೃತ್ತಗಳೂ ಕೊನೆಗೊಂದು ಕಂದವೂ ಇವೆ. ಪಾಲ್ಕುರಿಕೆ ಸೋಮನಾಥನ **ಅಕ್ಷರಾಂಕ-ಗದ್ಯದಲ್ಲಿ** ಒಟ್ಟು ೮೧ ಪದ್ಯಗಳಿವೆ. ಮೊದಲಲ್ಲಿ ಒಂದೂ

[37] ಪಾಲ್ಕುರಿಕೆ ಸೋಮೇಶ್ವರಪುರಾಣಂ, ೩ನೆಯ ಸಂಧಿ, ೧೫ನೆಯ ಪದ್ಯ; ಸಂ : ಎನ್. ಆರ್. ಕರಿಬಸವಶಾಸ್ತ್ರಿಗಳು (೧೯೧೨)

ಕೊನೆಯಲ್ಲಿ ಮೂರೂ ಕಂದಪದ್ಯಗಳಿವೆ. ಮಿಕ್ಕ ೩೨ ಪದ್ಯಗಳೂ ವೃತ್ತ ಛಂದಸ್ಸಿನವು. ಮೂರನೆಯ ಪದ್ಯದಲ್ಲಿ ಹದಿನಾರು ಸ್ವರಾಕ್ಷರಗಳಿಂದ ಪ್ರಾರಂಭವಾಗುವ ಬಸವನಾಮಾವಳಿ ಇದೆ. ಮುಂದಣ ೩೫ ವೃತ್ತಗಳೂ ಕ್ರಮವಾಗಿ ೨೫ ವರ್ಗೀಯಾಕ್ಷರಗಳಿಂದಲೂ ಹತ್ತು ಅವರ್ಗೀಯಾಕ್ಷರಗಳಿಂದಲೂ ಪ್ರಾರಂಭವಾಗುವವು. ಈ ಅಕ್ಷರಾಂಕ-ಗದ್ಯವು ಹೆಸರಿಗೆ ಗದ್ಯವಾದರೂ ಅದರಲ್ಲಿ ಗದ್ಯದ ಒಂದು ತುಣುಕಾದರೂ ಇಲ್ಲ. ಇರುವುದೆಲ್ಲ ಕಂದ ಮತ್ತು ವೃತ್ತಗಳು. ಹೀಗಾಗಿ ಶರಣರ ಗದ್ಯಕ್ಕೂ ಸಂಗೀತ ರತ್ನಾಕರದ ಗದ್ಯಪ್ರಕಾರಕ್ಕೂ ಹೊಂದಿಕೆ ಇಲ್ಲವೆನಿಸುವುದು. ಕೆರೆಯ ಪದ್ಮರಸನ ಮರಿಮಗನಾದ ಗೌರಾರ್ಯನು ರಚಿಸಿದ್ದ ಒಂದು **ಸ್ತೋತ್ರಗದ್ಯಕ್ಕೆ** ೧೦೧ ಪಾದಗಳಿದ್ದುದಾಗಿ ಪದ್ಮರಾಜ ಪುರಾಣದಿಂದ (೧–೨೫) ತಿಳಿದುಬರುತ್ತದೆ. ಬಹುಶಃ ಮಧ್ಯೆ ಮಧ್ಯೆ ವೃತ್ತಮಿಶ್ರಣವಿಲ್ಲದೆ ಮಾತ್ರಾಗಣಪಾದ-ಘಟಿತವಾದ ಈ ಗದ್ಯವು ರಗಳೆಯಂತೆ ಆದಿ ಅಂತ್ಯಪ್ರಾಸಗಳೊಡಗೂಡಿ ನೂರೊಂದು ಪಾದಪರ್ಯಂತ ಒಂದೇ ಧಾರೆಯಾಗಿ ಹರಿದಿರಬೇಕು. ಹೀಗಿದ್ದೂ ಈ ಪ್ರಕಾರವನ್ನು ರಗಳೆಯೆಂದೋ ಪದ್ಯವೆಂದೋ ಕರೆಯದೆ ಗದ್ಯವೆಂದು ಏಕೆ ಕರೆದರೋ ತಿಳಿಯದಾಗಿದೆ. ಜಕ್ಕ ಭೂಪಾಲನ ಗದ್ಯಕೃತಿಯಾದ 'ಭಾರತ ಕಥಾಸಂಗ್ರಹ'ವನ್ನು 'ಬೊಲ್ಲಿ' ಎಂದು ಕರೆದಿದೆ"[38]

ಇಲ್ಲಿಯವರೆಗಿನ ವಿವೇಚನೆಯಿಂದ ಕನ್ನಡ ಗದ್ಯದ ಬಗೆಗೆ ಹಲವು ಅಂಶಗಳು ತಿಳಿದು ಬಂದರೂ ಈ ಕೆಳಗಿನ ಕೆಲವು ಲಕ್ಷಣಗಳನ್ನು ಅದಕ್ಕೆ ಹೇಳಬಹುದು.

೧) ಪದ, ಪಾದ ನಿಯತಿಯಿಲ್ಲದುದು ;

೨) ಸೌಂದರ್ಯಾತ್ಮಕ-ರಸಾತ್ಮಕ ಇಲ್ಲವೆ ಆಲಂಕಾರಿಕ ರಮಣೀಯವಾದುದು ;

೩) ಕ್ರಿಯಾಕಾರಕದಲ್ಲಿ ಕೂಡಿ ಅರ್ಥವ್ಯಕ್ತಿಯನೀವುದು ;

೪) ಹಲವು ವಿಧಗಳನ್ನೊಳಗೊಂಡುದು ;

೫) ಕಾವ್ಯದ ಛಂದಸ್ಸಿನಿಂದ ಭಿನ್ನವಾದ ಬೇರೊಂದು (ವಿಶಿಷ್ಟ) ಲಯವನ್ನೊಳ-ಗೊಂಡುದು.

(ಈ ಲಯವು ಕೆಲವು ಬಾರಿ ಮಾತ್ರಾವೃತ್ತಗಳ ರೂಪದಲ್ಲಿರಬಹುದು. ಇದರಿಂದ ಅದನ್ನು ಪದ್ಯದಂತೆ ಕಂಠಪಾಠ ಮಾಡಲು ಸಾಧ್ಯವಾಗುತ್ತದೆ. ನಮಸ್ಕಾರಗದ್ಯ ಇತ್ಯಾದಿ —'ಬಸವಲಿಂಗ ನಾಮಾವಳಿ' ಈ ವರ್ಗಕ್ಕೆ ಸೇರಿದಂತೆ ಕಾಣುತ್ತವೆ) ಕೆಲವೆಡೆ ಛಂದೋ ಬದ್ಧವಾಗಿದೆ. ಪದಪಾದ ನಿಯತಿಯಿಲ್ಲದುದರಿಂದ ಸುದೀರ್ಘ ವಾಕ್ಯಗಳನ್ನು ಪದ್ಯದಲ್ಲಿ ಸಾಧಿಸುವುದಕ್ಕಿಂತ ಗದ್ಯದಲ್ಲಿ ಸಾಧಿಸುವುದು ಸುಲಭ. ಹೀಗಾಗಿ ದೀರ್ಘಸಮಾಸ, ದೀರ್ಘವಾಕ್ಯ ಇವು ಗದ್ಯದ ವಿಶೇಷ ಲಕ್ಷಣಗಳೆಂದು ಪರಿಗಣಿತವಾದಂತಿರಬೇಕು.

ಸಂಸ್ಕೃತದಲ್ಲಿ ಗದ್ಯವು ನಾಟಕಗಳಲ್ಲಿಯೂ ಕಂಡುಬರುತ್ತದೆ. ನಾಟಕಗಳಲ್ಲಿ ಸಾಮಾನ್ಯ ವಾಗಿ ನಿರೂಪಣೆಯು ಗದ್ಯದಲ್ಲಿದ್ದರೆ ಸನ್ನಿವೇಶ, ಭಾವತೀವ್ರತೆಗಳೆಲ್ಲ ಪದ್ಯದಲ್ಲಿರುತ್ತವೆ. ಚಂಪೂಕಾವ್ಯಗಳಲ್ಲಿ ಕವಿಯು ವರ್ಣನೆಗೆ ಸಾಮಾನ್ಯವಾಗಿ ಗದ್ಯವನ್ನು ಆಯ್ದುಕೊಂಡಿರು

38 ಶಿವದಾಸಗೀತಾಂಜಲಿ, ಪೀಠಿಕೆ, ಪುಟ ೬೮–೭೨.

ತ್ತಾನೆ. ಕಾವ್ಯದ ಭಾಷೆಯಲ್ಲಿ ಮಾತ್ರ ಚಂಪೂಕಾವ್ಯಗಳಲ್ಲಿ ಮತ್ತು ನಾಟಕಗಳಲ್ಲಿ ಕೆಲವೆಡೆ ಭೇದವು ಕಾಣಿಸದಂತಿರುತ್ತದೆ. ಕೆಲವೆಡೆ ಗದ್ಯವೇ ಕ್ಲಿಷ್ಟವಾಗಿರುತ್ತದೆ.

ಸಂಸ್ಕೃತದಲ್ಲಿ ಗದ್ಯವು ಚಂಪೂ ನಾಟಕಗಳಲ್ಲದೆ ಯಜುರ್ವೇದ ಮತ್ತು ಅಥರ್ವವೇದ ಗಳಲ್ಲಿಯೇ ಕಣ್ಣಿಗೆ ಬೀಳುತ್ತದೆ. ಕೆಲವೆಡೆ (ಅಥರ್ವವೇದ) ಅದು ಛಂದೋಬದ್ಧವಾಗಿಯೂ ಕಣ್ಣಿಗೆ ಬೀಳುತ್ತದೆ. ಕಥಾವಸ್ತು, ಪಾತ್ರ, ಶೈಲಿ, ಇವು ಸಂಸ್ಕೃತ ಸಾಹಿತ್ಯದ ಪ್ರಮುಖ ಅಂಗಗಳು. ಇವು ಗದ್ಯ, ಪದ್ಯ ಎರಡರಲ್ಲಿಯೂ ಕಂಡುಬರುತ್ತವೆ.

ಶಾಸ್ತ್ರಪ್ರತಿಭೆಗೂ ಕಾವ್ಯಪ್ರತಿಭೆಗೂ ವ್ಯತ್ಯಾಸವಿರುವುದನ್ನು ಹಿಂದಿನ ಲಾಕ್ಷಣಿಕರು ಕವಿಗಳು ತಿಳಿದಿದ್ದರು. "ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಂ ಅಸ್ತೋಭ ಮನವದ್ಯಂ ಚ" ಎಂಬ ಸೂತ್ರ ಲಕ್ಷಣಗಳು ಶಾಸ್ತ್ರಶೈಲಿಗೆ ಅನ್ವಯಿಸುತ್ತವೆ. ಶಾಸ್ತ್ರಕ್ಕೂ ಕಾವ್ಯಕ್ಕೂ ಇರುವ ವ್ಯತ್ಯಾಸವೆಂದರೆ–ವಸ್ತುಭೇದ ಮತ್ತು ಉಕ್ತಿಭೇದ. ಶಾಸ್ತ್ರದಲ್ಲಿ ಉಕ್ತಿವಕ್ರತೆಯಿಲ್ಲ; ಉಕ್ತಿವಕ್ರತೆಯಿಲ್ಲದೆ ಅಲಂಕಾರವೇ ಇಲ್ಲ; ಅಲಂಕಾರವಿಲ್ಲದೆ ಕಾವ್ಯ ವಿಲ್ಲ" ಎಂಬುದು ಭಾಮಹನ ಮತ.[39] ಒಂದು ಅಭಿಪ್ರಾಯವನ್ನು ದೀರ್ಘಸಮಾಸಗಳಿಂದ ಇಲ್ಲವೆ ಸಮಾಸರಹಿತವಾಗಿ ಹೇಳಬಹುದು. ಒಂದೊಂದು ರೀತಿಯ ರಚನೆಗೆ ಒಂದೊಂದು ಗುಣವಿರುವುದರಿಂದ ಇಂತಹದೇ ಸುಂದರವೆಂದು ಹೇಳುವುದು ಕಠಿಣವೇ ಸರಿ. ಕೃತಿಯ ವಸ್ತು, ವಿಷಯ, ಧ್ಯೇಯಗಳಿಗನುಗುಣವಾಗಿ ಗದ್ಯವಾದರೂ ಅಷ್ಟೇ ಪದ್ಯವಾದರೂ ಅಷ್ಟೇ ಶೈಲಿಯು ಕೃತಕವೆನಿಸದಿದ್ದರೇ ಹಿತ.[40] ಹೀಗಿದ್ದುದರಿಂದಲೇ ಶ್ರೇಷ್ಠ ಕವಿಗಳು ತಮ್ಮನ್ನು ಶಾಸ್ತ್ರಕಾರರಿಂದ ಬೇರ್ಪಡಿಸಿಕೊಂಡಿದ್ದಾರೆ. ಆದುದರಿಂದಲೇ ಪಂಪನು :

"ಇರುಮುರುಳೆ ಶುಷ್ಕವೈಯಾಕರಣಂಗಂ ತಾರ್ಕಿಕಂಗಂ ಬೆಳ್ಳಕ್ಕರಿಗಂಗಂ" ಎಂದೂ
ಕವಿತಾಕದಂಬವಿಷಯಮತಿ ಚತುರಮೇ" ಎಂದೂ

ಷಡಕ್ಷರದೇವನು :

"ಆರಾರೇಜಿಶರ್ಾಸ್ತ್ರ ಶ್ರೀರೋಹಣಗಿರಿಯಂ...
ಅಲ್ಲಿ ನವಕವಿತಾಚಿಂತಾರತ್ನಂ ದೊರೆಗುಮೇ"

ಎಂದೂ ಆಡಿದ್ದಾರೆ.

ಶಾಸ್ತ್ರವನ್ನೂ ಕಾವ್ಯಮಯವಾಗಿ ಹೇಳಿದ ಕೇಶಿರಾಜನಂತಹ ಕವಿಗಳೂ ಉಂಟು. ಸೌಂದರ್ಯ ದೃಷ್ಟಿಯೊಂದಿದ್ದರೆ ಯಾವುದನ್ನೂ ಕಾವ್ಯವರ್ಗಕ್ಕೆ ಸೇರಿಸಬಹುದು. ಕೃತಿಯ ಉದ್ದೇಶಕ್ಕನುಗುಣವಾಗಿ ಕಾವ್ಯ, ಶಾಸ್ತ್ರಗಳಲ್ಲಿ ಭಾಷೆಯು ಬದಲಾಗುವುದು ಅನಿವಾರ್ಯ.

---

39 ಕನ್ನಡ ಕಾವ್ಯಾಲಂಕಾರ, ಪೀಠಿಕೆ; ಸಂಪಾದಕರು : ಡಾ. ಕೆ. ಕೃಷ್ಣಮೂರ್ತಿ (೧೯೫೫)

40 Repeated rhymes (ಯಮಕ) and alliterative effects (ಅನುಪ್ರಾಸ) and too many puns and paradoxes are sure signs of artificiality and these cannot, therfore, serve as free insrtuments (ಅಂಗ) of the emotions (ರಸ) intended to be portrayed by the poet"—by Dr. K. Krishnamurthy–*Concept of Rasabhasa in Sanskrit Literary theory*" Karnatak University Journal, vol, vi, June 62 issue, page 149.

ಈ ರೀತಿಯಲ್ಲಿ ಸಂಸ್ಕೃತದಲ್ಲಿ ಗದ್ಯವು ಚಂಪೂ, ನಾಟಕಗಳಲ್ಲದೆ ಶಾಸ್ತ್ರಗ್ರಂಥ, ತಾತ್ವಿಕ ಗ್ರಂಥ, ವ್ಯಾಖ್ಯಾನಗ್ರಂಥ ಮೊದಲಾದವುಗಳಲ್ಲಿ ಅತಿಪೂರ್ವಕಾಲದಿಂದಲೂ ದೊರೆಯುತ್ತದೆ. "ಕವಿಮುಖದಿಂದ ಹೊರಟ ರಸಲಹರಿ ಇಲ್ಲವೇ ಭಾವಲಹರಿಯೇ ಕಾವ್ಯ ; ಅದಕ್ಕೆ ಛಂದಸ್ಸು ಕೃತ್ರಿಮ ; ಸಹಜವಾದುದಲ್ಲ" ಎನ್ನುವ ಅಭಿಪ್ರಾಯವನ್ನು ನಾವು ದೃಷ್ಟಿಯಲ್ಲಿರಿಸಿಕೊಳ್ಳಬೇಕು.[41]

೭

ಕನ್ನಡ ಸಾಹಿತ್ಯದಲ್ಲಿ ಗದ್ಯವು ಪದ್ಯಕ್ಕಿಂತ ಕಡಿಮೆ ಪ್ರಮಾಣದಲ್ಲಿದೆ. ಕಾಂತಿಯುತವಾದ ಗದ್ಯವನ್ನು ಬರೆಯಲು ಬರುತ್ತಿದ್ದಿಲ್ಲವೆಂದಲ್ಲ; ಅಂದಿನ ಅಭಿರುಚಿ ಪದ್ಯದ ಕಡೆಗಿದ್ದಿತು. ಪದ್ಯವಿಲ್ಲದ ಗದ್ಯ, ಗದ್ಯವಿಲ್ಲದ ಪದ್ಯ ರಸಿಕರಿಗೆ ರುಚಿಸಲಿಕ್ಕಿಲ್ಲವೆಂದೂ, ಭಾವ ಬದಲಾವಣೆಗೆ ಗದ್ಯವು ಆವಶ್ಯಕವೆಂದೆನಿಸಿಯೂ ಗದ್ಯಪದ್ಯ ಮಿಶ್ರಿತ ಸಾಹಿತ್ಯ ನಿರ್ಮಾಣವಾದಂತೆ ಗೋಚರಿಸುತ್ತದೆ; ಕನ್ನಡ ಸಾಹಿತ್ಯದಲ್ಲಿ ಗದ್ಯಪ್ರಕಾರವು ಕವಿರಾಜಮಾರ್ಗಕ್ಕಿಂತ ಎಷ್ಟೋ ವರ್ಷ ಹಿಂದಿನಿಂದಲೇ ಬೆಳೆದುಬಂದಿರಬೇಕೆಂಬ ಅಭಿಪ್ರಾಯಗಳೂ ಇವೆ.[42]

ಕನ್ನಡದಲ್ಲಿ ಒಟ್ಟಾಗಿ ಬೆಳೆದಿರುವ ಗದ್ಯಸಾಹಿತ್ಯವನ್ನು ಈ ರೀತಿಯಾಗಿ ವಿಂಗಡಿಸಬಹುದಾಗಿದೆ :

೧) ಕಾವ್ಯಮಯಗದ್ಯ
೨) ಶಾಸ್ತ್ರಗದ್ಯ
೩) ಅನುಭಾವ ಇಲ್ಲವೆ ವಚನಗದ್ಯ
೪) ವ್ಯಾಖ್ಯಾನಗದ್ಯ
೫) ಮಾತಿನ ಗದ್ಯ—ಎಂಬವೇ ಅವು ಸ್ಥೂಲವಾದ ವಿಭಾಗಗಳು.

ಛಂದಸ್ಸು ಗದ್ಯಕ್ಕೆ ಆವಶ್ಯಕವಲ್ಲದಿದ್ದರೂ ಗದ್ಯದಲ್ಲಿ ಛಂದಸ್ಸನ್ನೂ ಕಾಣಬಹುದಾಗಿದೆ. ಆದುದರಿಂದ ಕನ್ನಡದಲ್ಲಿ ಎರಡೂ ಪ್ರಕಾರದ ಗದ್ಯಗಳನ್ನು ಕಾಣುತ್ತೇವೆ. ಪ್ರತಿ ಪಾದದ ಆದಿಯಲ್ಲಿ ಎರಡು 'ನ'ಗಣಗಳೂ ಅನಂತರ ಏಳು "ರ'ಗಣಗಳೂ ಬಂದು ಬಹುಪಾದಗಳಿಂದ ಯುಕ್ತವಾಗಿದ್ದರೆ ಅದು "ದಂಡಕ" ಎಂದು ಪರಿಕೀರ್ತಿತವಾಗುತ್ತದೆ.[43] ಕನ್ನಡ ಕೈಪಿಡಿಯಲ್ಲಿ ಮಾತ್ರಾವೃತ್ತ ಪ್ರಕರಣದಲ್ಲಿ 'ದಂಡಕ'ದ ಲಕ್ಷಣವನ್ನು ಇಂತು ವಿವರಿಸಿದ್ದಾರೆ :

"ನಿಯತವಾದ ಗಣಗಳಿಂದ ಕೂಡಿ, ಪಾದ ವಿಭಾಗವಿಲ್ಲದ, ದಂಡಾಕಾರವಾಗಿರುವ

---

41 "ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ", ಪುಟ ೪೩ ; ಲೇ : ಎಸ್. ಅನಂತನಾರಾಯಣ (೧೯೬೨)

42 'ಕವಿರಾಜಮಾರ್ಗಂ'—ಪ್ರಥಮ ಪರಿಚ್ಛೇದ, ಪದ್ಯ ೨೭-೨೯ ; ಸಂ : ಎಂ. ವಿ. ಸೀತಾರಾಮಯ್ಯ (೧೯೬೮)

43 ಪ್ರೊ. ಡಿ. ಎಲ್. ನರಸಿಂಹಾಚಾರ್, ಪ್ರಬುದ್ಧ ಕರ್ನಾಟಕ, ಸಂಪುಟ ೪೫, ಸಂಚಿಕೆ ೨, ಪುಟ ೫೫ (೧೯೬೩)

ಶಬ್ದರಚನಾ ವಿಶೇಷವು ದಂಡಕವೆನಿಸುವುವು." ಈ ದಂಡಕಕ್ಕೆ ಸೋಮರಾಜನ ಉದ್ಭಟ ಕಾವ್ಯದಿಂದ ಕೆಳಗಿನ ಉದಾಹರಣೆ ಕೊಟ್ಟಿದ್ದಾರೆ.

"ಶ್ರೀ ಹೇಮಕೂಟೋನ್ನತಶ್ರೋಣಿಭೃಚ್ಛೃಂಗಿತಾವಾಸ, ಸರ್ವೇಶ, ಷಂಪಾಂಬಿಕಾ ವಕ್ತ್ರ ಸಂಪೂರ್ಣ ಶೀತಾಂಶುಸಂಜಾತ ಮಂದಸ್ಮಿತ ಜ್ಯೋತಿಸ್ನಿಕಾಪುಂಜಭುಂಜಚ್ಚಕೋರಾಯಮಾಣ, ಸ್ತುತಾಮ್ನಾಯ ಸಂತಾನ ಚಂಚಚ್ಚಿರಚ್ಛಂದ್ರಲೇಖಾಮಯೂಖಾವಳೀಚ್ಛಾದಿತ ಸ್ವಚ್ಛ ಗೀರ್ವಾಣ ಗಂಗಾತರಂಗೌಘ ಘನಸಂಘಟ್ಟನೋದ್ಭೂತವಾರ್ಬಿಂದು ಸಂದೋಹ ಸಂಘಾತ ಸಮ್ಯಕ್ಜಟಾ ಜೂಟಕೋಟೀರಭಾರ..."[44]

ಹೀಗೆ ಗದ್ಯಪದ್ಯಗಳ ನಡುವಣ ಮಾದರಿಯ ಬರಹವೊಂದು ಕನ್ನಡದಲ್ಲಿಯೂ ಬಂದಿರುವುದು ನಮ್ಮ ಗಮನಕ್ಕೆ ಬಂದಿರುತ್ತದೆ. ಅದನ್ನು ಕೆಲವರು ಗದ್ಯದಲ್ಲಿಯೂ ಕೆಲವರು ಪದ್ಯದಲ್ಲಿಯೂ ಸೇರಿಸಿದಂತೆ ಭಾಸವಾಗುತ್ತದೆ.

೧. **ಕಾವ್ಯಮಯ ಗದ್ಯ**ವನ್ನು ವಚನಗದ್ಯದಿಂದ ಬೇರ್ಪಡಿಸಲೂಬಹುದು. ಇಲ್ಲವೆ ಅವರಲ್ಲಿಯೇ ಸೇರಿಸಲೂಬಹುದು. ಯಾಕೆಂದರೆ ಕೆಲವರು ಅದನ್ನು ಪ್ರತ್ಯೇಕ ವಿಭಾಗವನ್ನಾಗಿಯೇ ಇರಿಸಿಕೊಂಡಿರುವುದರಿಂದ ಅದನ್ನು ಪ್ರತ್ಯೇಕವಾಗಿಯೇ ಇರಿಸುವುದು ಲೇಸು. ಮೊದಲನೆಯ ವಿಭಾಗದಲ್ಲಿ ಶಾಸನ ಗದ್ಯವನ್ನು ಸೇರಿಸುವುದೂ ಒಂದು ಸಮಸ್ಯೆಯೇ. ಶಾಸನಗಳ ಭಾಷೆ ಮೊದಮೊದಲು 'ಅಡುಮಾತಿನ ಗದ್ಯ'ವಾಗಿದ್ದರೂ ನಂತರ ಅದು ಸಹ ಕಾವ್ಯಾಂಶದ ಕಡೆಗೆ ಒಲಿಯತೊಡಗಿತು. ಶಾಸನಗಳಲ್ಲಿಯೂ ಗದ್ಯಪದ್ಯ ಮಿಶ್ರಿತ ಬರಹವೂ ದೊರೆಯುತ್ತದೆ. ಆದುದರಿಂದ ಅದನ್ನೂ 'ಕಾವ್ಯಮಯ'ವೆಂದೇ ಪರಿಗಣಿಸಬಹುದು. ಹೀಗಾಗಿ ಕಾವ್ಯಮಯ ಗದ್ಯದಲ್ಲಿ ಹಲವು ರೂಪದ ಗದ್ಯವನ್ನು ಪರಿಗಣಿಸಬಹುದು. ಕೆಳಗಿನ ಕೆಲವು ಪ್ರಕಾರಗಳನ್ನು ಅದರ ಒಳಭೇದಗಳೆಂದು ಹೇಳಬಹುದು.

(ಅ) ಶಾಸನ ಗದ್ಯ

(ಆ) ಚಂಪೂಗದ್ಯ

(ಇ) ಕಥಾಗದ್ಯ (ಗದ್ಯಕೃತಿ), ಕತೆ, ಹರಟೆ, ಕಾದಂಬರಿ

(ಈ) ನಾಟಕ ಗದ್ಯ.

೨. **ಶಾಸ್ತ್ರಗದ್ಯ**ದಲ್ಲಿ ಹಳಗನ್ನಡದಿಂದ ಹಿಡಿದು ಇಂದಿನವರೆಗೂ ರಾಜ್ಯಶಾಸ್ತ್ರ, ತತ್ವ-ಶಾಸ್ತ್ರ, ಅರ್ಥಶಾಸ್ತ್ರ, ವಿಜ್ಞಾನಶಾಸ್ತ್ರ, ಇತಿಹಾಸ, ಭೂಗೋಳ, ಪ್ರಬಂಧ, ವಿಮರ್ಶೆ— ಇತ್ಯಾದಿ ವಿಷಯಗಳನ್ನು ಕುರಿತು ಬಂದ ಬರಹವನ್ನು ಈ ವಿಭಾಗದಲ್ಲಿ ಪರಿಶೀಲಿಸಬಹುದು.

೩. **ಅನುಭಾವಗದ್ಯ ಇಲ್ಲವೆ ವಚನಗದ್ಯ:** ಇಲ್ಲಿ ಹಾಡುಗಳನ್ನು, ಪದ್ಯಗಳನ್ನು ಹೊರತುಪಡಿಸಿ, ವಚನಕಾರರಿಂದ ಅಂದಿನಿಂದ ಇಂದಿನವರೆಗೂ ಬೆಳೆದು ಬಂದಿರುವ ಸಾಹಿತ್ಯವನ್ನು ಪರಿಶೀಲಿಸಬಹುದು.

[44] ಕನ್ನಡ ಕೈಪಿಡಿ, ಸಂಪುಟ ೧, ಪುಟ ೧೦೦ (೧೯೫೫)

೪. **ವ್ಯಾಖ್ಯಾನಗದ್ಯ :** ಕನ್ನಡದಲ್ಲಿಯೂ ಸಾಕಷ್ಟು ವ್ಯಾಖ್ಯಾನ ಗದ್ಯವು ಬೆಳೆದು ಬಂದಿದೆ. ಶಾಸ್ತ್ರ ವಿವರಣೆಗೆ ಎಂದರೆ ಸೂತ್ರಬದ್ಧವಾಗಿರುವ ವ್ಯಾಕರಣ-ಅಲಂಕಾರಾದಿಗಳ ಅರ್ಥವಿವರಣೆಗೆ ಕಾವ್ಯ-ವಚನಗಳ ವಿವರಣೆಗೆ ಬಳಕೆಗೊಂಡ ಬರಹವನ್ನು ಈ ವರ್ಗದಲ್ಲಿ ಸೇರಿಸಿಕೊಳ್ಳಬಹುದಾಗಿದೆ. ಶಬ್ದಮಣಿದರ್ಪಣ ಸೂತ್ರಗಳಿಗೆ ವ್ಯಾಖ್ಯಾನ, ವಚನ ವಾಙ್ಮಯಕ್ಕೆ ಮಹಲಿಂಗದೇವ, ಸಿಂಗಳದ ಸಿದ್ಧಬಸವಾರ್ಯ, ಕಲ್ಲುಮಠದ ಪ್ರಭುದೇವಾದಿಗಳ ವ್ಯಾಖ್ಯಾನ, ರಾಜಶೇಖರ ವಿಳಾಸ, ಜೈಮಿನಿ ಭಾರತ ಮೊದಲಾದ ಕಾವ್ಯಗಳಿಗೆ ಬರೆದ ವ್ಯಾಖ್ಯಾನ ಇವೆಲ್ಲ ಈ ಗುಂಪಿಗೆ ಸೇರುತ್ತವೆ.

೫. **ಮಾತಿನಗದ್ಯ :** ದಿನನಿತ್ಯದ ಪ್ರಾಪಂಚಿಕ ವ್ಯವಹಾರದ ಭಾಷೆಯನ್ನು ಪತ್ರಿಕಾ ಪ್ರಪಂಚದ ವರದಿ ಇತ್ಯಾದಿಗಳ ಬರಹವನ್ನು ಈ ವರ್ಗದಲ್ಲಿ ಸೇರಿಸಬಹುದು.

ಕನ್ನಡ ಗದ್ಯಕ್ಕೆ ಸುಮಾರು ಐದನೆಯ ಶತಮಾನದಿಂದ ಇಪ್ಪತ್ತನೆಯ ಶತಮಾನದ ವರೆಗೆ—೧೫೦೦ ವರ್ಷಗಳ ದೀರ್ಘಕಾಲದ ಇತಿಹಾಸವಿದೆ. ಕನ್ನಡ ಕಾವ್ಯವು ರಭಸದಿಂದ ಬೆಳೆಯುತ್ತಿದ್ದ ಕಾಲವೆಂದರೆ ಕವಿರಾಜಮಾರ್ಗದ ಪೂರ್ವದಲ್ಲಿ ಸುಮಾರು ೧೫೦ ವರ್ಷ ಇರಬೇಕು. ಆದುದರಿಂದಲೇ 'ಗದ್ಯಾಶ್ರಮಪದ ಗುರುತಾಪ್ರತೀತಿಯಂ' ಕೈಕೊಂಡ ಗದ್ಯ ಕಾರರಿದ್ದರೆಂದು ಕವಿರಾಜಮಾರ್ಗಕಾರನು ಹೇಳಿದಂತಿದೆ. ಅಲ್ಲಿಂದ ಅದು ಹಲ ವಾರು ಏರುಪೇರುಗಳನ್ನು ಕಂಡಿದೆ; ವೈವಿಧ್ಯವನ್ನು ಪ್ರಕಟಪಡಿಸಿದೆ. ಕವಿಯಾದವನು ಸ್ಫೂರ್ತಿದಾಯಕ ಗದ್ಯ ಬರೆಯಬಲ್ಲವನಾದರೆ ಅವನ ಗದ್ಯವು ಹೃದ್ಯಯೇ ಸರಿ. 'ಭಾರತೀಯ ಸಮಕಾಲೀನ ಸಾಹಿತ್ಯ'ವನ್ನು ಪರಿಶೀಲಿಸಿದರೆ ಇಪ್ಪತ್ತನೆಯ ಶತಮಾನದಲ್ಲಿ ಗದ್ಯವೇ ಪ್ರಮುಖ ಮಾಧ್ಯಮವಾಗಿದೆಯೆಂಬುದರ ಅರಿವು ನಮಗಾಗುತ್ತದೆ. ಭಾವನಾ-ಪ್ರದ ಅಂಶಗಳಿಗೆ ಪದ್ಯವನ್ನು, ವಿಚಾರಪ್ರಧಾನ ಅಂಶಗಳಿಗೆ ಗದ್ಯವನ್ನು, ಸಂಕ್ಷಿಪ್ತತೆಗೆ ಪದ್ಯವನ್ನು, ವಿಸ್ತೃತ ನಿರೂಪಣೆಗೆ ಗದ್ಯವನ್ನು ಬಳಸಬಹುದೆಂದು ಹೇಳಬಹುದಾದರೂ ಈ ರೀತಿಯ ವಿಭಜನೆ ಮಾಡುವುದು ಕೃತಕವೆನಿಸಬಹುದು. ಕನ್ನಡ ಸಾಹಿತ್ಯದಲ್ಲಿ ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡಗಳಲ್ಲೆಲ್ಲ ಗದ್ಯವು ಬೆಳೆದುಬಂದಿದೆ. ವಿವಿಧ ಕಾಲಗಳಲ್ಲಿ ವಿವಿಧ ಭಾವಗಳನ್ನೊಳಗೊಂಡು ವಿವಿಧ ರೀತಿಗಳನ್ನು ಪಡೆದಿವೆ. ಹಳಗನ್ನಡ ಚಂಪೂಕಾವ್ಯದಲ್ಲಿಯಂತೂ ಗದ್ಯವು ಅವಿರತವಾಗಿ ಮುಂದುವರಿಯುವ ರಚನೆಯನ್ನೇ ಪಡೆದಿರುತ್ತದೆ. ಅದರಲ್ಲಿ ಹಲವು ಬಾರಿ ಒಂದೇ ಒಂದು ದೀರ್ಘವಾಕ್ಯವಿದ್ದು ಅನೇಕ ಅಪೂರ್ಣಕ್ರಿಯೆಗಳಿಂದ ಕೂಡಿ, ತೊಡರು ತೊಡರು ಶೈಲಿಯನ್ನುಪಡೆದಿದೆ.

೮

**ಶಾಸನಗದ್ಯ :** ಕನ್ನಡಿಗರ ವಿಚಾರಗಳು ಅಭಿವ್ಯಕ್ತಗೊಂಡು ಮೊತ್ತಮೊದಲು ಪ್ರಕಟವಾದುದಕ್ಕೆ ಶಾಸನ ಗದ್ಯದಲ್ಲಿಯ ದೃಷ್ಟಾಂತವೇ ನಿದರ್ಶನ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕ್ರಿ.ಶ. ಸು. ೫ನೆಯ ಶತಮಾನದ ಹಲ್ಮಿಡಿಯ ಶಾಸನವು ಅಗ್ರಪೂಜೆಗೆ ಸಂದಿದೆ.

ದಾಖಲಾಗಿರುವ ಮೊತ್ತಮೊದಲ ಗದ್ಯದ ಮಾದರಿ; ಸಂಸ್ಕೃತದ ಬೆಂಬಲದಿಂದ ದಟ್ಟಡಿಯಿಟ್ಟ ಕನ್ನಡದ ಒಂದು ಶೈಶವಾವಸ್ಥೆಯ ಒಂದು ಹಂತ. ಇಲ್ಲಿಯೇ ನಮ್ಮ ಸಾಹಿತ್ಯದ ಕುರುಹುಗಳಿವೆ. ಬಾದಾಮಿಯ ಚಾಲುಕ್ಯರ ಶಾಸನಗಳಲ್ಲಿ ಭಾಷಾಸಂಸ್ಕಾರ, ಬರೆಯುವ ವಿಧಾನ ಇನ್ನೂ ರೂಪುಗೊಳ್ಳುತ್ತಲೇ ಇದ್ದುವು. ರಾಷ್ಟ್ರಕೂಟರ ಕಾಲದ ಹೊತ್ತಿಗೆ ಶಾಸನಗಳಲ್ಲಿ ಬರೆಯುವ ಕ್ರಮ, ಭಾಷಾಸಂಸ್ಕಾರ, ನಿರೂಪಣಕಲೆ, ಪ್ರಶಸ್ತಿನಿರೂಪಣೆ, ವರ್ಣನೆಯಿಂದ ವಿಸ್ತರಿಸುವ ಕಲೆ ಆಗಲೇ ವ್ಯಕ್ತವಾಗುತ್ತಿವೆ. ಈ ಕಾಲದಲ್ಲಿ ಗದ್ಯವೂ ಉನ್ನತ ಮಟ್ಟಕ್ಕೇರಿದೆ ಇದೇ ನೃಪತುಂಗನ ಕಾಲದ ಗದ್ಯ. ಗದ್ಯಪದ್ಯ ಮಿಶ್ರಿತ ಬರಹವಿದ್ದು ಚಂಪೂ ರಚನೆಯ ವಿಧಾನವನ್ನೂ ಸೂಚಿಸುತ್ತದೆ. ಭಾಷಾಸೌಷ್ಠವ, ಕಲ್ಪನಾವೈಚಿತ್ರ್ಯ, ವೈಪುಲ್ಯ, ಅರ್ಥಗಾಂಭೀರ್ಯ ಹಾಗೂ ವೈವಿಧ್ಯಗಳಿಂದ ೧೦–೧೨ನೆಯ ಶತಮಾನದ ಗದ್ಯವು ವಿಪುಲಗೊಂಡಿದೆ. ಈ ಕಾಲಾವಧಿಯಲ್ಲಿ ವಿಸ್ತೃತಗೊಂಡ ಈ ಶಾಸನ ಸಾಹಿತ್ಯ ಪ್ರಪಂಚವು ಹೆಚ್ಚು ಸತ್ವಯುತವಾಗಿಯೂ ಸಾಹಿತ್ಯದ ಸಂಭಾರದಿಂದ ಸಮೃದ್ಧವಾಗಿದೆ. ಸಾಮಾನ್ಯ ರೀತಿಯ ಗದ್ಯವಲ್ಲದೆ ಅನುಪ್ರಾಸಯುಕ್ತ, ತಾಳಬದ್ಧ, ಅಲಂಕಾರಮಯ ರಚನೆಯೂ ನಡೆದಿದೆ. ಇಂತಹ ರಚನೆಯನ್ನು ವಿಂಗಡಿಸಿ 'ಗದ್ಯ' ಎಂದು ನಿರ್ದೇಶಿಸಿದ ಉದಾಹರಣೆಗಳೂ ಸಿಗುತ್ತವೆ.[45] ವಿಶೇಷತಃ ಕನ್ನಡದಲ್ಲಿ ಕಾವ್ಯಗಳು ಬಂದಂತೆಲ್ಲ ಅವುಗಳ ಶೈಲಿಯು ಶಾಸನಗಳಲ್ಲಿಯೂ ಹರಿದುಬಂದಿದೆ. ಆದುದರಿಂದ ಪ್ರೌಢರೀತಿಯ ಭಾಷೆ, ಪ್ರತಿಭೆ, ಕಲ್ಪನೆ, ದೇಣಿಗೆ ಕೊಡುವವನ ಭಾವನೆ—ಮೊದಲಾದ ಗುಣಗಳು ಹನ್ನೆರಡನೆಯ ಶತಮಾನದ ಶಾಸನದ ಗದ್ಯದಲ್ಲಿ ನೋಡಲು ಸಿಗುತ್ತವೆ.[46] ಕಾರಣವೆಂದರೆ ಕವಿಗಳೇ ಇಂತಹ ಶಾಸನಗಳನ್ನು ಬರೆದಿರಬೇಕು. ಈ ಗದ್ಯವು ಐದು–ಆರು–ಏಳನೆಯ ಶತಮಾನಗಳ ಗದ್ಯಕ್ಕಿಂತ ಭಿನ್ನ. ೫–೬–೭ನೆಯ ಶತಮಾನದ ಶಾಸನಗದ್ಯದ ಕೆಲವು ಪ್ರಮುಖ ಲಕ್ಷಣ ಇಂತಿವೆ :

೧. ಅನವಶ್ಯಕವಾಗಿ ವಿವರಗಳನ್ನು ಕೊಡದೇ ನೇರವಾಗಿ ವಿಷಯವನ್ನು ನಿರೂಪಿಸುವುದು.

೨. ಚಿಕ್ಕ ಚಿಕ್ಕ ವಾಕ್ಯಗಳ ಅಭಾವ.

---

45 "ಶಾಸನ ಸಾಹಿತ್ಯ"..ಪಾಂಡುರಂಗರಾವ ದೇಸಾಯಿ ; ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಸಂಪುಟ ೩೧, ಸಂಚಿಕೆ..೨ (ಜೂನ್ ೧೯೪೬)

46 The prose style of No 1 and 15 (of 1186 A. D.) is a classical one and resembles that of Bana's Kadambari in sanskrit. In reading the texts, therefore, one is taken unawares by the style, imagination, feelings of donors depicted, feelings of the temple builders, the political diction and the musical cadance, and is enraptured in going through them. He forgets himself and the surroundings and is carried away to the times of the 11th to 13th centuries. Such is the powerful influence of the poets brought to bear on the readers."—*Inscription in Northern Karnatak* and the kolhapur state, p. 29–30 ; Edited by prof. K. G. Kundanagar (1939).

೩. ಸುಮಾರು ಒಂದುಮೂರಾಂಶದಷ್ಟು ಅನ್ಯದೇಶೀಯ ಪದಗಳ ಬಳಕೆ—ಅವು ಸ್ಥಳ ವಾಚಕ ವ್ಯಕ್ತಿವಾಚಕ ಬಿರುದುಗಳಾಗಿ ಬಳಸಲ್ಪಟ್ಟಿವೆ; ತದ್ಭವವಾಗಿ ವಿಭಕ್ತಿ ಪ್ರತ್ಯಯ ಪಡೆದಿವೆ; ಕನ್ನಡವಾಗದಿದ್ದರೆ ಸಮಾಸಗಳ ರೂಪದಲ್ಲಿ ಬಳಕೆಯಾಗಿವೆ.

೪. ಕರ್ತೃ, ಕರ್ಮ, ಕ್ರಿಯಾಪದಗಳು ವಾಕ್ಯದಲ್ಲಿ ಕ್ರಮವಾಗಿ ಬರುವುವಲ್ಲದೆ ವಿಶೇಷಣಗಳು ಅವುಗಳ ಹಿಂದೆ ಗೋಚರಿಸುತ್ತವೆ. ಸ್ವತಂತ್ರ ವಾಕ್ಯಗಳಲ್ಲದೆ, ಪರತಂತ್ರ ಪದ ಸಮುದಾಯಗಳೂ (clauses) ಪದಪುಂಜಗಳೂ (phrases) ಕಣ್ಣಿಗೆ ಬೀಳು ತ್ತವೆ. 'ಲಯ', 'ಗತಿ', 'ಛಂದ', 'ದೀರ್ಘಸಮಾಸ'ಗಳ ದರ್ಶನವಿಲ್ಲ. ದತ್ತಿಗಳ ವಿಷಯವೇ ಅಲ್ಲಿ ಪ್ರಧಾನ. ವಿಭಕ್ತಿಪಲ್ಲಟ, ಆಡುನುಡಿ ಗೋಚರಿಸುತ್ತವೆ.

೫. ಈ ಶಾಸನಗಳ ಉದ್ದೇಶವು ನೇರವಾಗಿ ವಿಷಯನಿರೂಪಣೆ ಮಾಡುವುದು; ಬರಹಗಾರನ ಶಕ್ತಿಸಾಮರ್ಥ್ಯ ಪ್ರದರ್ಶನವಲ್ಲ. ಹೀಗಾಗಿ ಅಲಂಕಾರಗಳು ತಲೆದೋರ ಲಿಲ್ಲ; ಕೃತಕತೆ, ಅನುಕರಣೆ ಅಲ್ಲಿ ಇಣುಕುಹಾಕಲಿಲ್ಲ; ವಂಶಾವಳಿ ವರ್ಣನೆಯಲ್ಲಿಯೂ ದೀರ್ಘ ವಿವರಗಳಿಲ್ಲ; ಕ್ರಿಯಾಪದವಿಲ್ಲದೆ ಕೆಲವು ವೇಳೆ ಬರೆಯುವ ರೂಢಿಯೂ ಇದ್ದುದು ಗೋಚರಿಸುತ್ತದೆ.[47] ಆದರೆ ಹಲ್ಮಿಡಿ ಶಾಸನವು ಗದ್ಯದಲ್ಲಿದ್ದರೂ, ಅತಿ ಪೂರ್ವದ್ದಾದರೂ ಹದಿನೈದು-ಹದಿನಾರು ಚರಣಗಳ ಅತಿ ದೊಡ್ಡ ವಾಕ್ಯ. ಸಂಸ್ಕೃತ ದೀರ್ಘಸಮಾಸ ಅಲಂಕಾರಗಳನ್ನೊಳಗೊಂಡುದು ವಿಶೇಷ; ಕಾವ್ಯಮಯವಾಗಿದೆ; ಕೆಲವೆಡೆ ಸಂಧಿ ಇಲ್ಲ; ಕೆಲವೆಡೆ ಅಪೂರ್ವ ಪ್ರಯೋಗಗಳಿವೆ. ಈ ಶಾಸನವು ಗದ್ಯಶೈಲಿಯಲ್ಲಿ ಒಂದು ಸಂಪ್ರ- ದಾಯವನ್ನೂ, ಬಿಗುವನ್ನೂ, ಓಟವನ್ನೂ ತೋರುತ್ತದೆ; ವಾಕ್ಯರಚನೆಯಲ್ಲಿ ಸೌಂದರ್ಯ ವನ್ನು ನಾವು ಕಾಣುತ್ತೇವೆ.[48]

೬

**ಚಂಪೂಗದ್ಯ:** ಚಂಪೂಗದ್ಯದಲ್ಲಿ ವರ್ಣನೆ, ಕಲ್ಪನೆ, ಒಂದು ರೀತಿಯ ಲಯ ಮತ್ತು ಅಲಂಕಾರ ಹಾಗೂ ದೀರ್ಘ ಸಮಾಸಗಳು ಪ್ರಮುಖವಾಗಿರುವುದರಿಂದ ಅದನ್ನು 'ಪ್ರೌಢ ಗದ್ಯ' ಎಂದು ಹೆಸರಿಸಬಹುದಾಗಿದೆ. ಸಂಸ್ಕೃತ ಪ್ರಭಾವ, ಪಾಂಡಿತ್ಯಪ್ರದರ್ಶನ, ಶಬ್ದಾ ಲಂಕಾರ ಬಳಕೆ, ಶ್ಲೇಷ, ಚಾತುರ್ಯ ಹಾಗೂ ಕವಿಯ ಕಸರತ್ತು ಇವೇ ಮುಖ್ಯ; ಇದಕ್ಕೆ ಅಪವಾದಗಳೂ ಉಂಟು; ಆದರೆ ಅದು ವಿರಳ. ಚಂಪೂಗದ್ಯದ ಶೈಲಿಯಲ್ಲಿ ಪಕ್ಷ- ಪಾತ ಮಾಡಿದ ಕವಿಗಳೆಂದರೆ: ಪಂಚತಂತ್ರದ ದುರ್ಗಸಿಂಹ, ಧರ್ಮಾಮೃತದ ನಯಸೇನ, ಗಿರಿಜಾಕಲ್ಯಾಣದ ಹರಿಹರದೇವ. ಹರಿಹರದೇವನ ಹೆಸರು ಗದ್ಯದ ಬಳಕೆಯಲ್ಲೊಂದು ಮೈಲುಗಲ್ಲು. ಗಿರಿಜಾಕಲ್ಯಾಣದಷ್ಟೇ ಅಲ್ಲದೆ ಇತರ ರಗಳೆಗಳ ಮಧ್ಯದಲ್ಲಿಯೂ ಗದ್ಯವನ್ನು

---

47 ಉದಾಹರಣೆಗಳನ್ನು ಡಾ. ಎ. ಎನ್. ನರಸಿಂಹಯ್ಯನವರ *Grammar of the oldest Kanarese Inscriptions* ಗ್ರಂಥದ ಅನುಬಂಧದ ಶಾಸನಗಳನ್ನು ಅವಲೋಕಿಸಬಹುದು. ಲೇಖ ನವು ದೀರ್ಘವಾಗಲಿರುವುದರಿಂದ ಆ ಉದಾಹರಣೆಗಳನ್ನು ಇಲ್ಲಿ ಕೊಟ್ಟಿಲ್ಲ.

48 'ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ', ಪುಟ ೧೪; ಪ್ರೊ. ಮರಿಯಪ್ಪ ಭಟ್ಟ.

ಬಳಸಿದ್ದಾನೆ. ಅದು ಸಹ ಒಂದು ದೃಷ್ಟಿಯಿಂದ 'ಹೊಸಬಗೆಯ ಚಂಪೂಗದ್ಯ' ಎನ್ನಬೇಕು. ಹರಿಹರನು ಸರ್ವರಸ, ಸರ್ವಭಾವ, ಸರ್ವ ಅಲಂಕಾರಗಳಿಗೂ ಬಳಸಿದ್ದಾನೆ. ಚಾವುಂಡರಾಯ ಪುರಾಣದ ಗದ್ಯವು ಸುಲಭವಾದರೂ ಶಾಸ್ತ್ರಶುದ್ಧವಾದ ನಡಿಗೆ, ನಿರಾಡಂಬರತೆ, ಸರಳ, ಲಾಲಿತ್ಯಗತಿಯಿಂದ ಕೂಡಿದೆ.[49] ಚಂಪೂಕಾವ್ಯದಲ್ಲಿ ಗದ್ಯಪದ್ಯಗಳು ತಂಪು ಬಿಸಿಲುಗಳಂತೆ ಹಿತವರಿದಿದ್ದರೆ ಉತ್ತಮ. ಚಂಪೂಕಾವ್ಯದಲ್ಲಿಯ ವೈವಿಧ್ಯಮಯ ಗದ್ಯದ ಬಳಕೆಯಿಂದ ಅದು ಅಧಿಕ ಕೃಷಿಗೊಂಡಿತು. ಗದ್ಯದ ಎಲ್ಲ ಸಂಕೀರ್ಣತೆಯೊಂದಿಗೆ ಪ್ರಕಟಿಸಲು ಕವಿಗಳಿಗೆ ಅವಕಾಶ ದೊರಕಿತು. ಮಹಾಕಾವ್ಯದ ಸಮಗ್ರತೆಯೊಂದಿಗೆ ನಾಟಕೀಯತೆಯನ್ನೂ ಇಲ್ಲಿ ಕಾಣಬಹುದಾಗಿದೆ. "ಚಂಪೂಕಾವ್ಯಗಳಲ್ಲಿ ಬರುವ ಗದ್ಯವು ಪದ್ಯದ ಸೆಳವಿಗೆ ಸಿಲುಕಿ ತೀರ ಕೃತಕವಾಗಿದೆ. ಪಂಪ ಹರಿಹರರ ಚಂಪೂಕಾವ್ಯಗಳಲ್ಲಿ ಗದ್ಯ ಸ್ವಲ್ಪ ಸಜೀವವಾಗಿ ಕಂಡುಬಂದರೂ ಸಾಮಾನ್ಯವಾಗಿ ಚಂಪೂಕಾವ್ಯಗಳಲ್ಲಿ ಗದ್ಯದಲ್ಲಿ ಸುದೀರ್ಘವಾದ ಸಮಸ್ತಪದಗಳೂ ಉದ್ದುದ್ದ ವಾಕ್ಯಗಳೂ ಬರುವುದುಂಟು. ದೇಶಿಗಿಂತ ಸಂಸ್ಕೃತಕ್ಕೆ, ಮಾತಿಗಿಂತ ಮಾರ್ಗಕ್ಕೆ, ಸಹಜತೆಗಿಂತ ಕೃತಕತೆಗೆ ಅಲ್ಲಿ ಹೆಚ್ಚಿನ ಸ್ಥಾನವಿದೆ" ಎಂಬ ಅಭಿಪ್ರಾಯವನ್ನೂ ನಾವು ನೆನಪಿಟ್ಟುಕೊಳ್ಳಬೇಕು.[50]

## ೧೦

**ಕಥಾಗದ್ಯ :** ಕನ್ನಡ ಸಾಹಿತ್ಯದಲ್ಲಿ ಇಡೀ ಕೃತಿಗಳೇ ಗದ್ಯದಲ್ಲಿ ಬಂದಿರುವುದನ್ನು ನಾವು ಕಾಣುತ್ತೇವೆ. ವಡ್ಡಾರಾಧನೆ, ಚಿಕದೇವರಾಜ ಬಿನ್ನಪ, ರಾಜಾವಳೀ ಕಥೆ, ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ, ರಾಮಾಶ್ವಮೇಧ, ಅದ್ಭುತ ರಾಮಾಯಣ, ಮುದ್ರಾಮಂಜೂಷ ಮೊದಲಾದ ಕೃತಿಗಳನ್ನು ಹೆಸರಿಸಬಹುದು. ಗದ್ಯ ಕಥೆಗೆ ವಡ್ಡಾರಾಧನೆಯೊಂದು ಉತ್ಕೃಷ್ಟ ನಿದರ್ಶನ. ಸನ್ನಿವೇಶ, ಪಾತ್ರನಿರ್ಮಾಣ, ಸಂವಾದ, ಮಾನವೀಯತೆ, ಈ ಎಲ್ಲ ಅಂಶಗಳಿಂದ ವಡ್ಡಾರಾಧನೆಯನ್ನು ಮತ್ತೆ ಮತ್ತೆ ಓದಬೇಕೆನ್ನಿಸುತ್ತದೆ. ಕನ್ನಡ ಸಂಸ್ಕೃತಗಳ ಸಂಬೆರಕೆ, ದೇಶಿಮಾರ್ಗಗಳ ಸಮನ್ವಯ, ಪ್ರಾಕೃತದ ಅಪೂರ್ವ ಪ್ರಭಾವ, ಅಚ್ಚಗನ್ನಡಮೊಲವು ಇವುಗಳಿಂದ ಇಲ್ಲಿಯ ಗದ್ಯವು ಅರ್ಥಯುತವೂ ಶಕ್ತಿದಾಯಕವೂ ಆಗಿ ಕೃತಿಗೆ ಕಳೆಯನ್ನು ತಂದಿದೆ. ಅನಾವಶ್ಯಕ ಸಂಸ್ಕೃತದ ಆಡಂಬರ, ಕ್ಲಿಷ್ಟತೆಗಳು ತುಂಬಿಲ್ಲ. ಕನ್ನಡಕ್ಕೆ ಪ್ರಾಧಾನ್ಯತೆ ದೊರೆತಿದೆ; ಕಥನಶೈಲಿ ಪಳಗಿದೆ. ಕನ್ನಡದ ಜೀವಾಳವನ್ನರಿತು ಕನ್ನಡವನ್ನು ಸಂಸ್ಕೃತದ ಅಡಿಯಾಳು ಮಾಡದೆ ತನ್ನ ಕಾಲಮೇಲೆ ತಾನು ನಿಲ್ಲುವಂತೆ ಮಾಡಿದ ಶ್ರೇಯಸ್ಸು, ಉತ್ತಮ ರೀತಿಯ ಧರ್ಮಬೋಧೆ, ಸರಳವಾದ ನಿರೂಪಣೆ, ಉತ್ತಮ ನೀತಿ-ಬೋಧೆ ಇವು ಈ ಕೃತಿಯ ಪ್ರಧಾನ ಆಕರ್ಷಕ ಅಂಶಗಳು. ದೀರ್ಘವಲ್ಲದ ವಾಕ್ಯರಚನೆ. ಕನ್ನಡ ಪ್ರಾಕೃತ ಮಿಶ್ರಣ, ದೇಶಿಯ

---

49 ಕನ್ನಡ ಸಾಹಿತ್ಯ ಚರಿತ್ರೆ, ಪುಟ ೧೧೪ ; ರಂ. ಶ್ರೀ. ಮುಗಳಿ.

50 "ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ"—ಪ್ರಸ್ತಾವನೆ, ಪುಟ xxvi-xxvii ; ಸಂಪಾದಕರು : ಡಾ. ಆರ್. ಸಿ. ಹಿರೇಮಠ (೧೯೬೪)

ಬೆಡಗು, ಹಳಗನ್ನಡ ಭಾಷೆ, ಮೋಹಕ ಕಥೆ ಇವೆಲ್ಲ ಗದ್ಯಶೈಲಿಗೆ ಸಹಾಯಮಾಡಿವೆ. ಕಥಾನಕ ಗದ್ಯವನ್ನು ಅತ್ಯಂತ ಪ್ರತಿಭಾನ್ವಿತ ರೀತಿಯಲ್ಲಿ ಬರೆದು ಕನ್ನಡ ಗದ್ಯವನ್ನು ವಿಪುಲವಾಗಿ ವಿಸ್ತರಿಸಿದ ಅವನ ತರುವಾಯ ಹರಿಹರ ಕವಿಗೆ ಸಲ್ಲುತ್ತದೆ. ಕನ್ನಡ ಸಾಹಿತ್ಯದಲ್ಲಿ ಹೊಸ ಸಂಪ್ರದಾಯವೊಂದನ್ನು ವಚನಕಾರರು ಹರಿಹರ ಕವಿಯೂ ಸ್ಥಾಪಿಸಿದರು. ವಚನಕಾರರು ಆಧ್ಯಾತ್ಮಿಕ ಅನುಭವಗಳನ್ನು ಲೋಕನೀತಿಯನ್ನು ನಿರೂಪಣೆ ಮಾಡುವುದಕ್ಕೆ ಗದ್ಯವನ್ನುಪಯೋಗಿಸಿಕೊಂಡರೆ ಹರಿಹರ ಕವಿಯು ಕಥೆ ಹೇಳುವುದಕ್ಕೆ ಅವನ್ನು ಬಳಸಿಕೊಂಡಿದ್ದಾನೆ. ಯಾವ ಭಾವವನ್ನೇ ಆಗಲಿ, ಯಾವ ರಸವನ್ನೇ ಆಗಲಿ ಉದ್ಬೋಧನೆ ಮಾಡುವ ಶಕ್ತಿ ಹರಿಹರನ ಗದ್ಯದಲ್ಲುಂಟು.[51] ಅವನು ರಗಳೆಯಂತೆಯೇ ಗದ್ಯಕ್ಕೂ ಹೊಸ ಜೀವಕಳೆ ತುಂಬಿದ್ದಾನೆ. ಚಂಪೂಕಾವ್ಯಗಳಲ್ಲಿ ತುಂಡುತುಂಡಾಗಿ ಬಳಸಲ್ಪಡುತ್ತಿದ್ದ ಗದ್ಯವು ನಂಬಿಯಣ್ಣನ ರಗಳೆ, ಮಲಹಣನ ರಗಳೆ, ಮಹಾದೇವಿಯಕ್ಕನ ರಗಳೆ. ರೇವಣಸಿದ್ಧೇಶ್ವರ, ಆದಯ್ಯ, ಶಂಕರ ದಾಸಿಮಯ್ಯ ಮೊದಲಾದ ಶರಣರ ರಗಳೆ, ಬಸವರಾಜದೇವರ ರಗಳೆ ಈ ಮೊದಲಾದ ಕೃತಿಗಳಲ್ಲಿ ದೀರ್ಘವಾಗಿ ವಿಸರಗೊಂಡು ವಿಸ್ತೃತವಾಗಿ ಹರಿದು, ಕಾವ್ಯದಷ್ಟೇ ಪ್ರಭಾವಯುತವಾಗಿ ಶಕ್ತಿ ಔಚಿತ್ಯಗಳನ್ನು ಪಡೆದಿದೆ. ಅವನದು ಜನ ಬಳಕೆಯ ಗದ್ಯ; ಆದರೂ ಅದು ಕಲೆಯ ರಾಜ್ಯಕ್ಕೆ ಸೇರಿಮದು; ಬಹು ಸುಸಂಸ್ಕೃತವಾದುದು; ಒಂದು ದೃಷ್ಟಿಯಿಂದ "ಕನ್ನಡ ಸಾಹಿತ್ಯದ ಉತ್ಕೃಷ್ಟ ಗದ್ಯ." ಲಯ, ನಾದ ಮಾಧುರ್ಯ, ಬದಲಾವಣೆ, ಅಲಂಕಾರ ಮೊದಲಾದ ಗುಣಗಳಿಂದ ಎಷ್ಟೋ ರಗಳೆಗಳಲ್ಲಿ ಹರಿಹರದೇವನ ಗದ್ಯವು ಪದ್ಯಕ್ಕಿಂತಲೂ ಅಧಿಕ ಮನೋಹರವೂ ಕಾವ್ಯಮಯವೂ ಪ್ರಭಾವಯುತವೂ ಆಗಿದೆ, ಒಂದೆಡೆ ಮಂದವಾದಂತೆ ಪ್ರವಹಿಸುತ್ತಿದ್ದರೆ ಇನ್ನೊಂದೆಡೆ ರಭಸದಿಂದ ಭೋರ್ಗರೆಯುತ್ತದೆ. ಕೆಲವೆಡೆ ಅತಿ ಸರಳವೂ, ಚಿಕ್ಕ ಚಿಕ್ಕ ವಾಕ್ಯಗಳಿಂದ ಕೂಡಿದುದೂ ಆಗಿದ್ದರೆ ಮತ್ತೆ ಕೆಲವೆಡೆ ಅತಿ ಕಠಿಣವೂ ಅತಿ ದೀರ್ಘ ವಾಕ್ಯಗಳಿಂದ ಕೂಡಿದುದೂ ಆಗಿದೆ. 'ಒಂದು ದೃಷ್ಟಿಯಿಂದ ಕನ್ನಡ ಗದ್ಯಕ್ಕೆ ಹರಿಹರನದೇ ಉನ್ನತ ಶಿಖರ' ಎಂಬ ತೀರ್ಮಾನವೂ[52] ಹಲವು ದೃಷ್ಟಿಯಿಂದ ಸಮಂಜಸವಾಗಿದೆಯೆನ್ನಬಹುದು. ವಡ್ಡಾರಾಧನೆಯ ತರುವಾಯ ಕನ್ನಡ ಪದಗಳಿಗಿರುವ ಎಲ್ಲ ಅರ್ಥಗಳನ್ನೂ ಗತಿ-ಗಮಕಗಳನ್ನೂ ಸಮರ್ಥವಾಗಿ ಬಳಸಿದ ಶ್ರೇಯಸ್ಸು ಹರಿಹರನಿಗೆ ಸಲ್ಲುತ್ತದೆ. ಅವನು ತನ್ನ ಗದ್ಯ ಅಂದಿನ ಕಾಲದಲ್ಲಿದ್ದ ಹಳಗನ್ನಡ, ಹೊಸದಾಗಿ ಅದರ ಬದಲು ತಲೆದೋರಿದ ನಡುಗನ್ನಡವನ್ನೂ ಕಾಣುತ್ತೇವೆ. ಅದು ತೀರ ಜನವಾಣಿಯೂ ಅಲ್ಲ, ತೀರ ಕೃತಕವೂ ಅಲ್ಲ. ಜನವಾಣಿಗೆ ಸಂಸ್ಕಾರವನ್ನು ಕೊಟ್ಟು ತಲೆಯ ಪ್ರಪಂಚಕ್ಕೆ ಸೇರಿಸಿಕೊಂಡ ವಾಣಿಯಾಗಿದೆ. ಅವನ ಗದ್ಯವು 'ಕ್ಲುಪ್ತ ಛಂದಸ್ಸನ್ನು ತೊರೆದಿದ್ದರೂ ಅದು ಅಛಂದವಾದುದಲ್ಲ.[53] ರಗಳೆ

[51] 'ಹರಿಹರನ ಗದ್ಯ'—ಪ್ರ. ಕ. ಸಂಪುಟ ೧೯, ಸಂ. ೪, ಪುಟ ೬೪-೬೯, ಲೇಖಕರು: ಟಿ. ಎಸ್. ವೆಂಕಣ್ಣಯ್ಯ.

[52] "ಸಾಹಿತ್ಯರಶ್ಮಿ"ಯಲ್ಲಿ 'ಕನ್ನಡ ಗ್ರಂಥಗಳಲ್ಲಿ ಗದ್ಯರಚನೆ'ಯೆಂಬ ಲೇಖನ, ಲೇ: ಗೊರೂರು ರಾಮಸ್ವಾಮಿ ಅಯ್ಯಂಗಾರ್; ಪುಟ ೨೧ (೧೯೬೯).

[53] ಕುವೆಂಪು–'ವಚನಕಾರ ಬಸವೇಶ್ವರ'; ಪ್ರ. ಕ. ಸಂಪುಟ ೩೧, ಸಂ. ೧ (೧೯೫೦)

ಗಳಲ್ಲಿಯ ಗದ್ಯಭಾಗಗಳು ಪದ್ಯಕ್ಕೆ ಪೂರಕವಾಗಿವೆ; ಓಜಸ್ವಿಯಾಗಿವೆ; ಭಾವಸಂಚಾರ ಶಕ್ತಿಯುಳ್ಳುವೂ ಆಗಿವೆ.[54] ಚಿಕ್ಕದೇವರಾಯ ವಂಶಾವಳಿ ಹಳಗನ್ನಡ ಗದ್ಯಕ್ಕೆ ಇನ್ನೊಂದು ನಿದರ್ಶನ. ತಿಳಿಯಾದ ಶೈಲಿ, ಅಚ್ಚಗನ್ನಡ ಪದ, ಬಿಡಿ ಬಿಡಿ ವರ್ಣನೆ, ಸಾದೃಶ್ಯಮಾಲೆ, ಸಮತೂಕ, ಹಿತವಾದ ಸಂಸ್ಕೃತ ಪದಬೆರಕೆಗಳಿಂದ ಅಂದವಾದ ಗದ್ಯವು ಹೊರಹೊಮ್ಮಿದೆ. ಗದ್ಯದಲ್ಲಿ ಮತ್ತೊಮ್ಮೆ ಕೃತಿ ರಚಿಸಿ, ಅದರ ಮಹತ್ವವನ್ನು ತೋರಿಸಿಕೊಟ್ಟ ಕೀರ್ತಿ ಮುದ್ದಣನಿಗೆ ಸಲ್ಲುತ್ತಿದೆ. ನಾಟಕೀಯತೆ, ಹಿತಮಿತವಾದ ಕನ್ನಡ-ಸಂಸ್ಕೃತ ಬೆರಕೆ, ದೇಶೀಯತೆ ಕಥಾನಕದಲ್ಲಿ ಉತ್ತಮ ರೀತಿ ಇವುಗಳಿಂದ ಆತನದು ಆಕರ್ಷಕ ಗದ್ಯವಾಗಿದೆ. ಹೀಗೆ ನಾನಾ ರೀತಿಯಲ್ಲಿ ಕನ್ನಡದಲ್ಲಿ ಕಥನಾತ್ಮಕ ಗದ್ಯವು ಬೆಳೆದು ಬಂದಿದೆ. ಅದು ಇಂದು ಕತೆ, ಕಾದಂಬರಿ ಮೊದಲಾದವುಗಳ ಮೂಲಕ ನಾನಾ ಭಂಗಿಗಳಿಂದ ಬೆಳೆದಿದೆ. ಅಲ್ಲದೆ ಅನೇಕರ ಭಾಷಣಗದ್ಯವೂ ಹೊರಹೊಮ್ಮಿದೆ. ಕುವೆಂಪು, ಜವರೇಗೌಡರ ಪ್ರವಾಸ ಬರಹ, ಆತ್ಮಚರಿತ್ರೆ, ಕಾರಂತರ ಹುಚ್ಚುಮನಸ್ಸಿನ ಹತ್ತು ಮುಖ, ಡಿ.ವಿ.ಜಿ ಅವರ ಸಾಹಿತ್ಯ ಜೀವನ ಸೌಂದರ್ಯ, ಬಿ.ಎಂ.ಶ್ರೀ, ಬಸವನಾಳರ ಭಾಷಣ—ಈ ಎಲ್ಲವೂ ಹೃದ್ಯಗದ್ಯಗಳನ್ನೊಳಗೊಂಡ ಕೃತಿಗಳಾಗಿವೆ. ಕಾದಂಬರಿ ಪ್ರಪಂಚದಲ್ಲಿ ಕೆ. ವಿ. ಅಯ್ಯರ್, ಶಿವರಾಮಕಾರಂತ, ಕುವೆಂಪು, ಬಸವರಾಜ ಕಟ್ಟೀಮನಿ, ತರಾಸು, ಅನಕೃ ಇವರ ಗದ್ಯವು ಕಲಾತ್ಮಕವಾಗಿ ಹೊರಹೊಮ್ಮಿದೆ. ಪ್ರಬಂಧಗಳು, ವಚನಗಳು, ವೈಜ್ಞಾನಿಕ ಗ್ರಂಥಗಳ ಮೂಲಕ ಶಾಖೋಪಶಾಖೆಗಳಾಗಿ ವಿಸ್ತಾರವೂ ವೈವಿಧ್ಯವೂ ಆಗಿ ಕನ್ನಡ ಗದ್ಯವು ಕಂಗೊಳಿಸುತ್ತಿದೆಯೆಂದರೆ ಹೆಚ್ಚಲ್ಲ.*

---

[54] ಈ ಲೇಖಕನ "ಹರಿಹರ ಕವಿಯ ಬಸವೇಶ್ವರದೇವರ ಚರಿತ್ರೆ" ಪುಟ ೧೧೫–೧೨೦ (೧೯೬೬) ಮತ್ತು 'ನಂಬಿಯಣ್ಣನ ರಗಳೆ' ಕಾವ್ಯವಿಮರ್ಶೆ ಪುಟ ೯೨–೧೦೨ (೧೯೭೨) ನೋಡಬೇಕು.

* ಇಲ್ಲಿ ಲೇಖನವು ದೀರ್ಘವಾಗಿದೆಯಾದುದರಿಂದ ಸಾಕಷ್ಟು ಉದಾಹರಣೆ ಕೊಡಲು, ಮತ್ತು ಇತರ ಭಾಗಗಳನ್ನು ವಿಶೇಷತಃ 'ವಚನವಾಙ್ಮಯದ ಗದ್ಯ'ದ ಬಗೆಗೆ ವಿವರಿಸಲು ಸಾಧ್ಯವಾಗಲಿಲ್ಲ.

ಎಸ್. ವಿದ್ಯಾಶಂಕರ

# ವಚನಕಾರರ ದೃಷ್ಟಿಯಲ್ಲಿ ಮರ್ತ್ಯಲೋಕ-ಕೈಲಾಸ

ಹನ್ನೆರಡನೆಯ ಶತಮಾನದ ಶಿವಶರಣರು ಸಾಮೂಹಿಕವಾಗಿ ಸಂಘಟನೆಗೊಂಡು ನಡೆಸಿದ ಕ್ರಾಂತಿಯ ಫಲ ವಚನಸಾಹಿತ್ಯ. ಮೂಲತಃ ಈ ಕ್ರಾಂತಿ ಸಾಮಾಜಿಕ ಪರಿವರ್ತನೆಯ ದರ್ದಿನಿಂದ ಹುಟ್ಟಿದುದು. ರೂಢಿಮೂಲವಾದ ನಂಬುಗೆಗಳು ಸಮಾಜದಲ್ಲಿ, ವ್ಯಕ್ತಿಗಳ ಹೃದಯದಲ್ಲಿ ಆಳವಾಗಿ ಬೇರುಬಿಟ್ಟು, ಪರಂಪರೆಯ ಹೊಂಡದಲ್ಲಿ ನಾರುತ್ತಿದ್ದುವು. ಅರ್ಥ ಹೀನ ನಂಬುಗೆ, ಆಚರಣೆಗಳು ಹಾಗೂ ಅವುಗಳ ಪಾತ್ರ ಭೀತಿಪ್ರೇರಿತವಾಗಿದ್ದುವು ಇಲ್ಲವೇ ಭವಿಷ್ಯತ್ ಪ್ರಾಪ್ತಿಯ ಕಡೆಗೆ ವಾಲಿದ್ದುವು. ಇಂತಹ ಸ್ಥಿತಿಯಲ್ಲಿ ಯಾವ ಪ್ರಬಲ ಶಕ್ತಿಯೇ ಆಗಲಿ ಸುಲಭವಾಗಿ ತಿದ್ದಲಾಗದು. ಇದು ಸಾರ್ವಕಾಲಿಕ ಸತ್ಯ. ಹನ್ನೆರಡ ನೆಯ ಶತಮಾನದಲ್ಲಿ ಬಸವಣ್ಣ ಚುಂಬಕಶಕ್ತಿಯಾಗಿ ಎಲ್ಲ ವರ್ಗದ ಜನರನ್ನು ತನ್ನತ್ತ ಸೆಳೆದನು. ಅಲ್ಲಮ, ಚನ್ನಬಸವಣ್ಣ, ಸಿದ್ಧರಾಮ ಮೊದಲಾದ ವಿಚಾರವಾದೀ ಶರಣರು ಹೊಸ ಬದುಕಿನ ಸೂತ್ರಗಳನ್ನು ಮುಂದಿಟ್ಟರು. ಇವರೆಲ್ಲರ ಆದರ್ಶ ಬರಿಯ ಕನಸುಗಾರಿಕೆಯದೇ? ಇಲ್ಲವೆ ಸಾಮೂಹಿಕ ಆಚರಣೆಯ ಮೂಲಕ ದೊಡ್ಡ ಪರಿವರ್ತನೆಗೆ ಕಾರಣವಾಯಿತೆ? ಕ್ರಾಂತಿ ನಡೆದ ಕಾಲಕ್ಕೂ ನಮಗೂ ಎಂಟುನೂರು ವರ್ಷಗಳ ದೊಡ್ಡ ಅಂತರವಿದೆ. ಹೀಗಾಗಿ ವಾಸ್ತವವಾಗಿ ನಡೆದದ್ದೇನೆಂಬುದರ ಅಂಶಿಕ ತಿಳುವಳಿಕೆಯೂ ನಮಗಿಂದು ಆಗಲು ಸಾಧ್ಯವಾಗುತ್ತಿಲ್ಲ. ಆದರೂ ಈ ಆದರ್ಶದ ಘೋಷಣೆ ನಡೆ-ನುಡಿ ಶುದ್ಧವಿದ್ದವರಿಂದ ಆಯಿತೆಂಬುದು ಗಟ್ಟಿ ಮಾತು. ಸಮಾಜದಲ್ಲಿ ಬಸವಾದಿ ಶರಣರಿಂದ ಸಾಂಘಿಕ ಪರಿವರ್ತನೆ ಅವರ ಆದರ್ಶದ ಘೋಷಣೆಯಿಂದ ಆಯಿತೆಂಬುದೂ ಸತ್ಯಕ್ಕೆ ದೂರವಾದ ಮಾತು. ಯಾವುದೇ ಸಮಾಜ ಈ ರೀತಿಯ ಧಿಡೀರ್ ಒಪ್ಪಂದವನ್ನು ಅಲ್ಪಕಾಲಾವಧಿಯಲ್ಲಿ ಮಾಡಿಕೊಳ್ಳುವುದು ಕಷ್ಟ. ವ್ಯಕ್ತಿಗಳ ಹೃದಯ ಶೋಧನೆ ಸಾಮೂಹಿಕವಾಗಿ ಆಗಿ, ದೊಡ್ಡ ಕ್ರಾಂತಿ ಆಗಿದ್ದಲ್ಲಿ ಬಲವಾಗಿ ಬೇರುಬಿಟ್ಟಿದ್ದ ನಂಬುಗೆ ಗಳು ಸಡಿಲಗೊಂಡು ಉರುಳಿಬಿದ್ದುವೆಂದಲ್ಲಿ ಅದರ ಫಲ ನಮಗೂ ಮುಟ್ಟಬೇಕಾಗಿತ್ತು. ಅಂದು ಹೇಗಿದ್ದೆವೋ ಹಾಗೆಯೇ ಇಂದೂ ನಾವಿದ್ದೇವೆ. ಈ ದುರಂತಕ್ಕೆ ಕಾರಣ ಊಹಿಸು ವುದು ಸುಲಭ. ಬಸವಾದಿ ಶರಣರು ಮುಂದಿಟ್ಟ ಆದರ್ಶ ಎಲ್ಲರದಾಗದೆ ಕೆಲವರದಾಯಿತು. ಏಕೆಂದರೆ ಎಲ್ಲರೂ ಬಸವಣ್ಣ, ಅಲ್ಲಮಪ್ರಭು, ಚನ್ನಬಸವಣ್ಣ, ಸಿದ್ಧರಾಮ—ಈ ಮಹಾನ್ ಶರಣರ ಮಟ್ಟದಲ್ಲಿ ನಿಂತು ಆಲೋಚಿಸಲು, ಆಲೋಚಿಸಿದ್ದನ್ನು ಕಾರ್ಯರೂಪಕ್ಕೆ ತರಲು

ಶಕ್ತರಿರುವುದು ಸಾಧ್ಯವಿಲ್ಲ. ಎಲ್ಲರೂ ಇವರಂತೆ ಇಮ್ಮನವಿಲ್ಲದೆ ಒಮ್ಮನವಾಗಿರುವುದೂ ಲೌಕಿಕ ದೃಷ್ಟಿಯಿಂದ ಸಾಧ್ಯವಿರಲಿಲ್ಲ. ನಮ್ಮ ವಚನಕಾರರ ಸ್ವರ್ಗ-ಮರ್ತ್ಯಗಳ ಕಲ್ಪನೆ ಎಷ್ಟರಮಟ್ಟಿಗೆ ವಾಸ್ತವ ಎಂಬುದು ಈ ಹಿನ್ನೆಲೆಯಲ್ಲಿ ಮಾತ್ರ ಪರಿಶೀಲನಾರ್ಹ.

ಭಾರತೀಯರ ಬದುಕಿನ ಪರಮೋಚ್ಚ ಗುರಿ-ಮೋಕ್ಷ ಇಲ್ಲವೇ ಸ್ವರ್ಗ. ನಮ್ಮ ಭಾರತೀಯ ಸಾಹಿತ್ಯ ಇತ್ತಲೇ ಮುಖಮಾಡಿದೆ. ಈ ಗುರಿ ಸಾಧನೆಗಾಗಿಯೇ ಮಾನವರು ಜೀವನದುದ್ದಕ್ಕೂ ಹೋರಾಡಿದರು. ಈ ಹುಟ್ಟು ಸಾವುಗಳ ಚಕ್ರಭ್ರಮಣಕ್ಕೆ ಮುಗಿತಾಯ ಹೇಳಲು ಇಲ್ಲವೇ ಬದುಕಿನಲ್ಲಿ ತಮ್ಮ ಅನುಭವಕ್ಕೆ ಬರದ ಸುಖವನ್ನು ಪಡೆಯಲು ಎಲ್ಲರೂ ಆ ಅಲೌಕಿಕವಾದ 'ಸುಖ'ದ ಅಪೇಕ್ಷಿಗಳಾದರು. ಅದಕ್ಕೆ ಮರ್ತ್ಯಕ್ಕಿಂತ ಹೆಚ್ಚಿನ ಬೆಲೆ ಕಲ್ಪಿಸಿದರು. ಶಿವಶರಣರು ಕಾಣದ 'ಸ್ವರ್ಗ'ಕ್ಕಿಂತ ಕಾಣುವ ಮರ್ತ್ಯಕ್ಕೆ ಹೆಚ್ಚಿನ ಬೆಲೆ ಕೊಟ್ಟುದು ನಿಜಕ್ಕೂ ಗಮನೀಯ ವಿಷಯವಾಗಿದೆ. ಮರ್ತ್ಯದಲ್ಲಿ ಜನಿಸಿ, ಲಿಂಗದೊಂದಿಗೆ ಬೆಳೆದು, ಕೊನೆಗೆ ಲಿಂಗದಲ್ಲೇ ಬಯಲಾಗುವ ಆದರ್ಶ ಅವರದು. ಪುಣ್ಯ-ಪಾಪಗಳು ಸ್ವರ್ಗ-ನರಕಗಳಿಗೆ ಕಾರಣವೆಂದಾಗಲೀ, ವ್ಯಕ್ತಿಯ ಪೂರ್ವಭವದ ಪುಣ್ಯ-ಪಾಪಗಳು ಮುಂದಣ ಜನ್ಮ (ಅ) ಜನ್ಮಗಳಿಗೆ ಬುತ್ತಿ ಆಗುವವೆಂದಾಗಲೀ ಅವರು ಭಾವಿಸಿರಲಿಲ್ಲ. ಅವರ ನಂಬುಗೆಯಂತೆ ಶರಣನಿಗೆ ಮರ್ತ್ಯಜನ್ಮವೇ ಕೊನೆ. ಮರುಜನ್ಮವಿಲ್ಲ. ಹಡಪದಪ್ಪಣ್ಣಗಳು ಹೇಳುವಂತೆ ಶರಣರಿಗೆ ಭವವುಂಟೆಂದು ಹೇಳುವ ಭವಭಾರಿಗಳು ಸಂದೇಹಿಗಳು; ಉದರ ಪೋಷಕರು.[1] 'ದೇಹವೇ ದೇವಾಲಯ' ಎಂಬ ಶರಣರ ಭಾವನೆಯಲ್ಲಿ ವಿಶೇಷ ಅರ್ಥವಿದೆ. ಅವರ ಪ್ರಕಾರ ಸತ್ಯ ಶುದ್ಧ ಚಾರಿತ್ರ್ಯವುಳ್ಳಾತನ ಮನದಲ್ಲಿ ಶಿವ ನೆಲಸುವನು. "ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ ಮುನಿಯ ಬೇಡ ಅನ್ಯರಿಗೆ ಅಸಹ್ಯಪಡಬೇಡ ತನ್ನ ಬಣ್ಣಿಸಬೇಡ ಇದಿರ ಹಳಿಯಲು ಬೇಡ ಇದೇ ಅಂತರಂಗ ಶುದ್ಧಿ ಇದೇ ಬಹಿರಂಗ ಶುದ್ಧಿ ಇದೇ ನಮ್ಮ ಕೂಡಲ ಸಂಗನೊಲಿಸುವ ಪರಿ" ಎಂದು ಬಸವಣ್ಣನವರು ತಮ್ಮ ಧರ್ಮದ ಬಗೆಗೆ ತೀರಾ ಸರಳವಾದ ವಿವರಣೆ ನೀಡಿರುವರು. ಅವರು ಹೇಳುವ ಮಾತು ಸರಳವಾಗಿದ್ದರೂ ಅರ್ಥಗರ್ಭಿತವಾಗಿದೆ. ಕಳವು, ಕೊಲೆ ಇತ್ಯಾದಿ ಸಪ್ತ ನಿಷೇಧಾತ್ಮಕ ಕ್ರಿಯೆಗಳನ್ನು ವ್ಯಕ್ತಿ ಮಾಡದಿರುವುದೇ ಅಂತರಂಗ ಹಾಗೂ ಬಹಿರಂಗ ಶುದ್ಧಿ. ಒಳಗೆ ಹೊರಗೆ ಯಾವಾಗ ವ್ಯಕ್ತಿ ಶುದ್ಧವಾಗುವನೋ ಆಗ ದೇವ ಜೀವನಲ್ಲಿ ನೆಲಸಲು ಬರುವನು. ನಮ್ಮ ತಿಳುವಳಿಕೆಗೆ ದೇವನು ಇಂದ್ರಿಯಗಮ್ಯನಲ್ಲದ, ಸುಲಭವಾಗಿ ಒಲಿಯುವವನಲ್ಲದ ಒಂದು ದೈವೀಮೂರ್ತಿಯಾಗಿದ್ದ. ಬಸವಣ್ಣನವರು ನಮ್ಮ ಈ ನಂಬುಗೆಯನ್ನು ಸುಲಭವಾಗಿ ತಳ್ಳಿಹಾಕುತ್ತಾ 'ದೇಹವೇ ದೇವಾಲಯ' ಬೇರೆ ದೇವಾ

---

[1] ಶರಣರಿಗೆ ಭವವುಂಟೆಂದು ಮರ್ತ್ಯದಲ್ಲಿ ಹುಟ್ಟಿದ ಭವಭಾರಿಗಳು ನುಡಿವಾಡುವರು. ತಮ್ಮ ಹುಟ್ಟ ತಾವರಿಯರು. ತಾವು ಮುಂದೆ ಹೊಂದುವುವನರಿಯರು. ಇವರು ಬಂದ ಬಂದ ಭವಕ್ಕೆ ಕಡೆ ಮೊದಲಿಲ್ಲ. ಇಂತಪ್ಪ ಸಂದೇಹಿಗಳು ನಮ್ಮ ಶರಣರ ಹುಟ್ಟ ಬಲ್ಲೆನೆನಬಹುದೆ? ತನ್ನನರಿವವನಲ್ಲದೆ ಇದಿರನರಿಯರು. ಈ ಉದರಪೋಷಕರೆಲ್ಲರೂ ಇದ ಬಲ್ಲೆನೆಂಬುದು ಹುಸಿ...

—ಹಡಪದಪ್ಪಣ್ಣಗಳ ವಚನಗಳು (ಸಂ: ಫ. ಗು. ಹಳಕಟ್ಟಿ) ವ. ೨೨

ಲಯವಿಲ್ಲ. ಅಂತರಂಗ ಬಹಿರಂಗ ಶುದ್ಧರಾದರೆ ಸಾಕು ಶಿವ ಒಲಿಯುತ್ತಾನೆ ನಂಬಿ; ಕರೆದಡೆ ಓ ಎನ್ನುತ್ತಾನೆ ಎಂದರು. ದೇವಾಲಯದ ಕಲ್ಲು ಮೂರ್ತಿಯಲ್ಲಿ ಮಾತ್ರ ಶಿವ ನಿರುವುದಿಲ್ಲ. ಸತ್ಯ ಶುದ್ಧ ಚಾರಿತ್ರ್ಯವುಳ್ಳ ಎಲ್ಲ ವ್ಯಕ್ತಿಗಳ ಹೃದಯದಲ್ಲೂ ಶಿವನಿರುವನು. ಶಿವನಿರುವುದು ಮಾತ್ರ ಕೈಲಾಸವಲ್ಲ 'ದೇವನಿದ್ದುದೇ ಕೈಲಾಸ' 'ಸಂಗನ ಶರಣರ ಕಾಯವೆ ಕೈಲಾಸ' ಎಂದು ಬಸವಣ್ಣನವರು ಶಿವ ಹಾಗೂ ಶಿವನಿರುವ ತಾಣದ ಪರಿಚಯ ವನ್ನು ಸಾಮಾನ್ಯನಿಗೆ ತಿಳಿಯ ಹೇಳಿದರು.

"ಸ್ವರ್ಗವೆಂದಡೆ ಸುಖಕ್ಕೆ ನಾಮ, ನರಕವೆಂದಡೆ ಬಾಧೆಗೆ ನಾಮ. ಸುಖವೆಂದಡೆ ಪುಣ್ಯ, ನೋವೆಂದಡೆ ದುಃಖ. ಸುಖವಿಯೋಗವಾದಲ್ಲಿ ದುಃಖವೆನಿಸಿತ್ತು, ದುಃಖವಿಯೋಗ ವಾದಲ್ಲಿ ಸುಖವೆನಿಸಿತ್ತು. ಸುಖಾಸುಖವೆಂದಱಿಯಬಾರದು, ಮೊದಲ ಹಿಡಿದ ಸಂಗತಿ ಯಿಂದ; ಸಂಗಸುಖದಿಂದ ದುಃಖ"[1] ಎಂಬ ತತ್ವಕ್ಕೆ ಶರಣರು ಬದ್ಧರು. ಸುಖ-ದುಃಖಗಳು ನಮ್ಮ ನಡಾವಳಿ, ಆಚರಣೆಗಳಲ್ಲಿವೆಯೆಂಬುದನ್ನು ಒಪ್ಪಿದ ಅವರು 'ಕೈಲಾಸ'ವನ್ನು ಮರ್ತ್ಯ ದಲ್ಲಿ ತಮ್ಮ ದೈನಂದಿನ ಬದುಕಿನ ಸಾಗಾಟದಲ್ಲಿ ಕಂಡರು. ಚನ್ನಬಸವಣ್ಣನವರು ಹೇಳಿ ದಂತೆ "ಕಾಯಕ್ಲೇಶದಿಂದ ತನು-ಮನ ಬಳಲಿಸಿ ಧನವ ಗಳಿಸಿ ಗುರು-ಲಿಂಗ-ಜಂಗಮಕ್ಕೆ ಮೆಚ್ಚಿಸಿ ದಾಸೋಹವ ಮಾಡುವ ಸದ್ಭಕ್ತನ ಕಾಯಕವೇ ಕೈಲಾಸ."[2] ಈ ಮಾತಿನಿಂದ ಶರಣರು ಮರ್ತ್ಯದಲ್ಲಿನ ಶುಚಿಜೀವನಕ್ಕೆ ಕೊಟ್ಟ ಮಹತ್ವವನ್ನು ನಾವು ಅರಿಯಬಹುದು. ಮರ್ತ್ಯದಲ್ಲಿನ ಸಾಧನೆಗೆ ಹೆಚ್ಚಿನ ಬೆಲೆ ಕೊಟ್ಟ ಶರಣರು ಕೈಲಾಸವನ್ನೇ ಮಿಗಿಲೆಂದು ಭಾವಿಸಲಿಲ್ಲ. ಮರ್ತ್ಯವನ್ನೇ ಕಡೆಯೆಂದು ಪರಿಗಣಿಸಲಿಲ್ಲ. ಇವೆರಡಕ್ಕೂ ಮಿಗಿಲಾದುದು ಮಹಾ ಬೆಳಕಿನಲ್ಲಿ ಜೀವ ಬಯಲಾಗುವುದು. ಶರಣರ ಬದುಕಿನ ಗೊತ್ತುಗುರಿಯನ್ನು ಶರಣೆ ಲಿಂಗಮ್ಮ ಅತ್ಯಂತ ಸೊಗಸಾಗಿ ಹೀಗೆ ಪರಿಚಯಿಸಿರುವಳು :

"ಕೈಲಾಸ ಮರ್ತ್ಯಲೋಕ ಎಂಬರು. ಕೈಲಾಸವೆಂದಡೇನೊ, ಮರ್ತ್ಯಲೋಕವೆಂದ ಡೇನೊ ? ಅಲ್ಲಿಯ ನಡೆಯೂ ಒಂದೆ. ಇಲ್ಲಿಯ ನಡೆಯೂ ಒಂದೆ. ಅಲ್ಲಿಯ ನುಡಿಯೂ ಒಂದೆ. ಇಲ್ಲಿಯ ನುಡಿಯೂ ಒಂದೆ ಕಾಣಿರಯ್ಯಾ ಎಂಬರು. ಕೈಲಾಸದವರೆ ದೇವರ್ಕ ಳೆಂಬರು; ಮರ್ತ್ಯಲೋಕದವರೆ ಮಹಾಗಣಂಗಳೆಂಬರು. ಸುರಲೋಕದೊಳಗೆ ಸಾಸಿರ ಕಾಲಕ್ಕಲ್ಲದೆ ಅಳಿದಿಲ್ಲವೆಂಬರು. ನರಲೋಕದೊಳಗೆ ಸತ್ತು ಸತ್ತು ಹುಟ್ಟುತಿಹರೆಂಬರು. ಇದ ಕಂಡು ನಮ್ಮ ಶಿವಶರಣರು ಸುರಲೋಕವನು ನರಲೋಕವನು ತೃಣವೆಂದು ಭಾವಿಸಿ, ಭವವ ದಾಂಟಿ ತಮ್ಮ ತಮ್ಮ ಹುಟ್ಟನರಿದು, ಮಹಾಬೆಳಗನೆ ಕೂಡಿ, ಬೆಳಗಿನಲ್ಲಿ ಬಯಲಾದರಯ್ಯಾ; ಅಪ್ಪಣ್ಣಪ್ರಿಯ ಚನ್ನಬಸವಣ್ಣಾ."[3]

ಅಲ್ಲಮಪ್ರಭು ಶರಣರು ನಡೆಸಿದ ಕ್ರಾಂತಿಯಲ್ಲಿ ನೇರವಾಗಿ ಪಾಲ್ಗೊಳ್ಳದಿದ್ದರೂ ತನ್ನ

---

1 ಸಿದ್ಧರಾಮೇಶ್ವರ ವಚನಗಳು (ಸಂ : ಡಾ॥ ಆರ್. ಸಿ. ಹಿರೇಮಠ), ವ. ೮೬

2 ಚನ್ನಬಸವಣ್ಣನವರ ವಚನಗಳು (ಸಂ : ಡಾ॥ ಆರ್. ಸಿ. ಹಿರೇಮಠ), ವ. ೮೪

3 ಲಿಂಗಮ್ಮನ ಬೋಧೆಯ ವಚನಗಳು (ಶಿವಶರಣೆಯರ ವಚನಗಳು, ಸಂ : ಡಾ॥ ಆರ್. ಸಿ. ಹಿರೇಮಠ), ಪು. ೨೪೯, ವ. ೫೨.

ತೇಜೋಭೂತ ವ್ಯಕ್ತಿತ್ವದಿಂದ, ಘನೀಭೂತ ಪರಮಜ್ಞಾನದಿಂದ, ಅನುಭಾವ ಗಟ್ಟಿಗೊಂಡ ವಚನಗಳಿಂದ, ಲೋಕೋದ್ಧಾರ-ಭಕ್ತೋದ್ಧಾರ ಕ್ರಿಯೆಗಳಿಂದ ಜನತೆಯ ಕಣ್ಣು-ಮನ ಗಳನ್ನು ತನ್ನತ್ತ ಸೆಳೆದ ಮಹಾನುಭಾವ. ಪ್ರಭು ಮೇಲುನೋಟಕ್ಕೆ ಪ್ರಶಾಂತ ಸಮುದ್ರ. ಅವನ ವಚನಗಳ ಮೂಲಕ ಅವನನ್ನು ಕಂಡಾಗ ಸಮುದ್ರದ ತುದಿ ಮೊದಲಿಲ್ಲದ ವಿಸ್ತಾರ, ತಳಮುಟ್ಟಲಾಗದ ಗುಣ್ಪು, ಭಯವನ್ನುಂಟುಮಾಡುವ ಭೋರ್ಗರೆತ ಕಂಡಾಗಿನ ಅನುಭವ ನಮಗಾಗುತ್ತವೆ. ಆತ ಕಲ್ಯಾಣದಲ್ಲಿದ್ದುದು ಕೆಲವು ದಿವಸಗಳು ಮಾತ್ರ. ಅವನ ಜೀವಿ ತದ ಬಹುಪಾಲು ಆತ್ಮಸಿದ್ಧಿ ಪಡೆಯಲು, ಭಕ್ತೋದ್ಧಾರ ಪತಿತೋದ್ಧಾರ ಮಾಡಲು ಮೀಸಲಾಯಿತು. ಆತ ಕಲ್ಯಾಣಕ್ಕೆ ಬಂದಾಗ ಪರಿಪೂರ್ಣಜ್ಞಾನಿಯಾಗಿದ್ದನು. ತಾನು –ತನ್ನದು–ತನ್ನಿಂದ ಈ ಬಗೆಯ ಭ್ರಾಮಕ ಕಲ್ಪನೆಗಳಿಂದ ಮುಕ್ತನಾಗಿ ನಿಂತದ್ದರಿಂದಲೋ ಏನೋ ಅವನ ವಚನಗಳು ವ್ಯಕ್ತಿ ವಿಶಿಷ್ಟ ಮುದ್ರೆಯನ್ನು ಪಡೆದಿವೆ. ತಮ್ಮನ್ನು ತಾವೇ ಅರಿಯದೆ, ಹುಸಿಯನ್ನೇ ಹಿಡಿದು, ಹುಸಿಯನ್ನೇ ಪೂಜಿಸಿ ವ್ಯರ್ಥಜೀವನ ನಡೆಸಿದವರನ್ನು; ತಮ್ಮ ಉಗ್ರಭಕ್ತಿಯಿಂದ ಶಿವನನ್ನು ಆರಾಧಿಸಹೊರಟ ಭಕ್ತರನ್ನು (ಬಹುಶಃ ತಮಿಳು ನಾಡಿನ ಅರುವತ್ತುಮೂವರು ಪುರಾತನರನ್ನು); ಮಾಯಾಮೋಹಿತರನ್ನು ಖಂಡಿಸುವ ಕೆಳಗಿನ ವಚನ ಪ್ರಭುವಿನ ವ್ಯಕ್ತಿತ್ವಕ್ಕೇ ಹಿಡಿದ ಕನ್ನಡಿಯಾಗಿದೆ:

"ಆದಿಯನರಿಯದೆ ಅನಾದಿಯಿಂದತ್ತ ತಾನಾರೆಂಬುದ ವಿಚಾರಿಸಿ ತಿಳಿದು ನೋಡದೆ ಮಾಡಿದರೆ ಫಲವೇನಯ್ಯಾ? ಸಾವನ್ನಕ್ಕ ಸಾಧಕವ ಮಾಡಿದರೆ ಕಾಮುವದಿನ್ನಾವುದೋ? ಬಾಳುವನ್ನಕ್ಕ ಭಜನೆಯ ಮಾಡಿದರೆ, ತಾನಹ ದಿನವಿನ್ನಾವುದೋ? ಇದು ಕಾರಣ ಮರ್ತ್ಯಲೋಕದ ಸದ್ಭಕ್ತರುಗಳೆಲ್ಲರು ತತ್ವವನರಿಯದೆ ಮಿಥ್ಯವನೆ ಹಿಡಿದು, ಮಿಥ್ಯವನೆ ಪೂಜಿಸಿ ವ್ಯರ್ಥರಾಗಿ ಹೋದರು. ತಮ್ಮ ತಾವರಿಯದೆ ಕೆಟ್ಟರು. ತಲೆಯ ಕೊಯಿದು, ದೇಹವ ಕಡಿದು, ಕಣ್ಣ ಕಳೆದು ಹೊಟ್ಟೆಯ ಸೀಳಿ, ಮಗನ ಕೊಂದು ಬಾಣಸವ ಮಾಡಿ ಕಾಯವೆರಸಿ ಕೈಲಾಸಕ್ಕೆ ಹೋದವರು ಭಕ್ತರಪ್ಪರೇ? ಅವರಿಗೆ ಶಿವಪಥವು ಸಾಧ್ಯ ವಾಯಿತ್ತೆ? ಭವ ಹಿಂಗಿತ್ತೇ? ಅದು ಸಹಜವೇ? ಅಲ್ಲಲ್ಲ, ನಿಲ್ಲು. ಮಾನವರ ಲೋಕ ದವರೆಲ್ಲರು ನರಸಂಸಾರಕ್ಕೊಳಗಾದರು. ಮುನಿಜನಂಗಳೆಲ್ಲರೂ ತಪವೆಂಬ ಸಂಸಾರಕ್ಕೊಳ ಗಾದರು. ಜಂಗಮವ ಹಿಡಿದವರೆಲ್ಲರೂ ಸಾಯುಜ್ಯವೆಂಬ ಸಂಸಾರಕ್ಕೊಳಗಾದರು. ಇಂತೀ ಸಂಕಲ್ಪಕ್ಕೊಳಗಾದವರೆಲ್ಲ ಮಾಯೆಯ ಹೊಡೆಗೆಚ್ಚ ಗೆಲಬಲ್ಲರೆ? ಇದು ಕಾರಣ ನಿತ್ಯ ನಿಜತತ್ವ ತಾನೆಂದರಿಯದೆ ತತ್ವಮಸಿ ವಾಕ್ಯದ ಹೊರ ಹೊರಗೆ ನೆಲಿಸಿ ಕೆಟ್ಟರಲ್ಲ ಹಿರಿಯರು, ಸತ್ತರಲ್ಲ ನಾಯ ಸಾವ. ಸತ್ತವರ ಹೆಸರ ಪತ್ರವ ನೋಡಿದರೆ ಅವೆತ್ತಣ ಮುಕ್ತಿಯೋ ಗುಹೇಶ್ವರಾ?"[1]

ಪ್ರಭುವಿನ ವಚನಗಳಲ್ಲಿ ಕಾಣುವ ವ್ಯಂಗ್ಯ, ವಿಡಂಬನೆ, ಚುಚ್ಚು, ನಿಂದೆ ಮರ್ಮಾ ಘಾತಸ್ವರೂಪದ್ದು. ಅವನದು ನಿರ್ಭಿಡೆ ಮನೋಭಾವ. ಯಾರ ಹಂಗಿಗೂ ಒಳಗಾಗದ

[1] ಅಲ್ಲಮನ ವಚನ ಚಂದ್ರಿಕೆ (ಸಂ: ಡಾ. ಎಲ್. ಬಸವರಾಜು), ವ. ೧೨೭

ಸ್ವತಂತ್ರ ಮನೋಭಾವ. ಹೀಗಾಗಿ ಅವನ ಮಾತಿನಲ್ಲಿ ಒಮ್ಮೊಮ್ಮೆ ಹರಿತ ಹೆಚ್ಚು. ಅದು ಪ್ರಕ್ಷುಬ್ಧಗೊಂಡ ರಾಡಿ ಮನಸ್ಸಿನ ಸಿಡಿಮಿಡಿಯಲ್ಲ. ಜನ ಶುದ್ಧರಾಗಿ ಬಾಳಬೇಕು. ಋಜುಜೀವನ ನಡೆಸಬೇಕು—ಎಂಬುದು ಅವನ ಬಯಕೆ. ಈ ಉದ್ದೇಶದಿಂದ ಪ್ರೇರಣೆಗೊಂಡು ತಪ್ತಮಾತುಗಳು ಹೊಮ್ಮಿಬರುತ್ತವೆ. ಅವು ಜ್ಯೋತಿರ್ಲಿಂಗ; ಅಧರಕ್ಕೆ ಕಹಿ, ಉದರಕ್ಕೆ ಸಿಹಿಯಂತಿರುವ ವೈದ್ಯನ ಔಷಧಿಯಂತೆ ಪರಿಣಾಮಕಾರಿ. ಮೇಲಿನ ವಚನವನ್ನೇ ಪರಿಶೀಲಿಸಿದಾಗ ಮುಕ್ತಿ (ಅ) ಬದುಕಿನ ಪರಮೋಚ್ಚ ಪದವಿಗಾಗಿ ಸಾಧನೆ ಮಾಡಿದ ಸಾಧಕರ ಬಗೆಗಿನ ನವಿರಾದ ವ್ಯಂಗ್ಯ ಅವನ ಮಾತಿನುದ್ದಕ್ಕೂ ಹಂದಿದೆ. ಬದುಕನ್ನು ತಮ್ಮ ನಿರರ್ಥಕ ಕ್ರಿಯೆಗಳಿಂದ ವ್ಯರ್ಥಗೊಳಿಸುವ ವ್ಯಕ್ತಿಗಳ ಬಗೆಗಿನ ಅವನ ಆಕ್ರೋಶವಿದೆ. ಹಾಗೆಯೇ ಅವರ ವ್ಯರ್ಥ ಪ್ರಯತ್ನದ ಬಗೆಗೆ ಅನುತಾಪವಿದೆ.

ಬಸವಣ್ಣನವರು ಪರಕ್ಕಿಂತ ಇಹಕ್ಕೇ ಹೆಚ್ಚಿನ ಪ್ರಾಧಾನ್ಯ ಕೊಟ್ಟರು. 'ಮರ್ತ್ಯವೆಂಬುದು ಕರ್ತಾರನ ಕಮ್ಮಟವಯ್ಯ ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯ ಎನ್ನುವಲ್ಲಿ ಅವರ ನಿಲವು ಸ್ಪಷ್ಟವಾಗುತ್ತದೆ. ಬಸವಾದಿ ಶರಣರಿಗೆ ಶುದ್ಧಭಕ್ತಿ ಪ್ರಿಯವಾಗಿದ್ದಷ್ಟು ಉಗ್ರಭಕ್ತಿ ಪ್ರಿಯವಿದ್ದಿರಲಾರದು. ತಮ್ಮ ಅಂಗಾಂಗಗಳನ್ನು ಕಳೆದು ಇತ್ತ ಶಿವನ ನಿಷ್ಠಾವಂತ ಭಕ್ತರ ಉಗ್ರಭಕ್ತಿಯನ್ನು ಪ್ರಭು ಮೇಲೆ ತಿಳಿಸಿದ ತನ್ನ ವಚನದಲ್ಲಿ ಖಂಡಿಸಿರುವನು. ಪ್ರಭುವಿನಂತೆ ಚನ್ನಬಸವಣ್ಣನೂ ಉಗ್ರಭಕ್ತಿಯ ಭಕ್ತರನ್ನು ಖಂಡಿಸುತ್ತಾ 'ಭಕ್ತಿಯೆಂಬ ಪಿತ್ತ ತಲೆಗೇರಿ ಕೈಲಾಸದ ಬಟ್ಟೆಯ ಹತ್ತುವ ಪಾಪಾತ್ಮರ ಕಂಡು ಎನ್ನ ಮನ ನಾಚಿತ್ತು !' ಎಂದಿರುವನು. ಅಷ್ಟೇ ಅಲ್ಲ 'ಕೈಲಾಸವೆಂಬುದೇನೊ? ಎಂದು ಪ್ರಶ್ನೆ ಹಾಕಿ 'ಪೃಥ್ವಿಯ ಮೇಲೊಂದು ಮೊರಡಿ' ಎಂದು ತಾನೇ ಉತ್ತರವಿತ್ತಿರುವನು. ಚನ್ನಬಸವಣ್ಣನ ಈ ಮಾತು ನಿಜಕ್ಕೂ ಆಶ್ಚರ್ಯವನ್ನುಂಟುಮಾಡುತ್ತದೆ. ಯಾವುದನ್ನು ಪರಮ ಪದವ ತಾವು ಎಂದು ಕರೆಯುವರೋ ಅದನ್ನು ಚನ್ನಬಸವಣ್ಣ ಭೂಮಿಯ ಮೇಲಿನ ಕಿರುಬೆಟ್ಟ ಎಂದು ನಿಕೃಷ್ಟವಾಗಿ ಕರೆದಿರುವುದು ಯಾರನ್ನು ತಾನೇ ಮೂಕವಿಸ್ಮಿತರನ್ನಾಗಿ ಮಾಡದು! ಚನ್ನಬಸವಣ್ಣ ಪೃಥ್ವಿ ಹಾಗೂ ಮೊರಡಿಗಳಿಗೆ ಲಯವಿರುವುದನ್ನು ಅರಿತೇ ಶರಣನಾದವನು ಈ ಅಶಾಶ್ವತವಾದವುಗಳತ್ತ ಮನವಿಡದೆ ಶಾಶ್ವತವಾದ ಮಹಾಬೆಳಗಿನೊಳಗೆ ಬೆಳಗಾಗುವತ್ತ ಮನವಿಡಲು ಸೂಚಿಸಿರುವನು.[1] ಚನ್ನಬಸವಣ್ಣ ಕೈಲಾಸದ

---

[1] ಭಕ್ತಿಯೆಂಬ ಪಿತ್ತ ತಲೆಗೇರಿ, ಕೈಲಾಸದ ಬಟ್ಟೆಯ ಹತ್ತುವ
ಪಾಪಾತ್ಮರ ಕಂಡು ಎನ್ನ ಮನ ನಾಚಿತ್ತು !
ಕೈಲಾಸವೆಂಬುದೇನೊ? ಪೃಥ್ವಿಯ ಮೇಲೊಂದು ಮೊರಡಿ !
ಆ ಪೃಥ್ವಿಗೆ ಲಯವುಂಟು, ಆ ಮೊರಡಿಗೆ ಲಯವುಂಟು.
ಇದು ಕಾರಣ, "ಯದ್ದೃಷ್ಟಂ ತನ್ನಷ್ಟಂ" ಎಂಬ ಶ್ರುತಿಯ ನೋಡಿ ತಿಳಿದು,
ಬಟ್ಟ ಬಯಲ ತುಟ್ಟತುದಿಯ ಮೆಟ್ಟನಿಂದ, ಕೂಡಲ ಚನ್ನಸಂಗಾ, ನಿಮ್ಮ ಶರಣ.

—ಚನ್ನಬಸವಣ್ಣನವರ ವಚನಗಳು (ಸಂ: ಡಾ॥ ಆರ್. ಸಿ. ಹಿರೇಮಠ), ವ. ೧೪೫೭.

ಪರಮ ಪದವಿಯನ್ನು ಒಪ್ಪದೆ ನಿರಾಕರಿಸಿದಂತೆ ಸಿದ್ಧರಾಮನೂ ತಿರಸ್ಕರಿಸಿರುವನು : "ಕೈಲಾಸ ಕೈಲಾಸವೆಂದು ಬಡಿದಾಡುವ ಅಣ್ಣಗಳಿರಾ, ಕೇಳಿರಯ್ಯಾ. ಕೈಲಾಸವೆಂಬುದೊಂದು ಭೂಮಿಯೊಳಿರುವ ಹಾಳುಬೆಟ್ಟ. ಅಲ್ಲಿರುವ ಮುನಿಗಳೆಲ್ಲರು ಜೀವಗಳ್ಳರು. ಅಲ್ಲಿರುವ ಚಂದ್ರಶೇಖರನು ಬಹು ಎಡ್ಡ. ಇದರಾಡಂಬರವೇಕಯ್ಯ ? ಎಮ್ಮ ಪುರಾತನರಿಗೆ ಸದಾಚಾರದಿಂದ ವರ್ತಿಸಿ ಲಿಂಗಾಂಗ ಸಮರಸವ ತಿಳಿದು ನಿಮ್ಮ ಪಾದಪದ್ಮದೊಳು ಬಯಲಾವ ಪದವಿಯೇ ಕೈಲಾಸವಯ್ಯಾ"[1] ಸಿದ್ಧರಾಮ ತನ್ನ ಈ ವಚನದಲ್ಲಿ ಸದಾಚಾರ, ಲಿಂಗಾಂಗಸಾಮರಸ್ಯ, ಬಯಲಾಗುವಿಕೆ—ಇವುಗಳಿಗೆ ಪ್ರಾಧಾನ್ಯವಿತ್ತು ಇವೇ ಕೈಲಾಸವೆಂದಿರುವುದು ಗಮನೀಯ ಸಂಗತಿ. ಕೈಲಾಸವನ್ನು ಅಲ್ಲಗಳೆಯುವುದಷ್ಟೇ ಅಲ್ಲ ಕೈಲಾಸದ ಶಿವನ ಸಭೆಯಲ್ಲಿನ ಮುನಿಗಳು, ಸಭೆಗೆ ಭೂಷಣನಾಗಿರುವ ಚಂದ್ರಶೇಖರ—ಈ ಜನಪ್ರಿಯ ಕೈಲಾಸದ ಕಲ್ಪನಾಚಿತ್ರವನ್ನೂ ಗೇಲಿಮಾಡಿರುವನು. ಇದು ಮರ್ತ್ಯಕ್ಕೆ ಹೆಚ್ಚಿನ ಮಹತ್ವವನ್ನು ಕೊಡುವ ಉದ್ದೇಶದಿಂದಲೇ ಆದ ಪ್ರಯತ್ನವೆಂದು ಹೇಳಬಹುದಾದರೂ ಇದಕ್ಕಿಂತಲೂ ಮುಖ್ಯವಾದ ಉದ್ದೇಶವಿರುವಂತಿದೆ. ಶಿವಶರಣರು ಕಂಡ ಸದಾಶಿವನ ಚಿತ್ರವೇ ಬೇರೆ. ಅಂದು ಲೌಕಿಕರ ಮನದಲ್ಲಿ ಮೂಡಿದ್ದ ಶಿವನ ಚಿತ್ರವೇ ಬೇರೆ ಆಗಿದ್ದಿತು. ಇವೆರಡರ ನಡುವೆ ದೊಡ್ಡ ಅಂತರ ಅಂದು ಇದ್ದಿತು. ಶಿವಶರಣರು ಮಹತೋ ಮಹೀಯನೂ ಅಣೋರಣೀಯನೂ ಜನನಮರಣವಿದೂರನೂ ಆದ ನಿರಾಕಾರಿ ಸದಾಶಿವನನ್ನು ಆರಾಧಿಸಿದರೆ ಸಾಮಾನ್ಯರು ಸ್ಮಶಾನವಾಸಿಯೂ, ತ್ರಿಶೂಲಧಾರಿಯೂ, ಗಜ ಚರ್ಮಾಂಬರಧಾರಿಯೂ, ಗಂಗಾಧರನೂ, ಉಮಾಲೋಲನೂ, ಸರ್ಪಭೂಷಣನೂ, ಭಸ್ಮೋದ್ಧೂಳನೂ ಆದ ಸಾಕಾರ ಸ್ವರೂಪಿ ಶಿವನನ್ನು ಪೂಜಿಸಿದರು. ಶಿವಶರಣರು ಸದಾಶಿವನ ನಿಲವು ಇಂದ್ರಿಯಗಮ್ಯವಲ್ಲ, ಭಾವಗಮ್ಯವೆಂದು ನಂಬಿದ್ದರು. ಮಹಾದೇವಿಯಕ್ಕ ಹೇಳುವಂತೆ ಚನ್ನಮಲ್ಲಿಕಾರ್ಜುನನ ನಿಲವು ಆರಿಗೂ ಅರಿಯ ಬಾರದು. ಏಕೆಂದರೆ ಆತ 'ನೆಲದ ಮರೆಯ ನಿಧಾನದಂತೆ ಫಲದ ಮರೆಯ ರುಚಿಯಂತೆ ಶಿಲೆಯ ಮರೆಯ ಹೇಮದಂತೆ ತಿಲದ ಮರೆಯ ತೈಲದಂತೆ ಮರದ ಮರೆಯ ತೇಜದಂತೆ ಭಾವದ ಮರೆಯ ಬ್ರಹ್ಮವಾಗಿಪ್ಪ"[2] 'ನೀರಕ್ಷೀರದಂತೆ ನೀನಿಪ್ಪೆ' ಎಂದು ಮಹಾದೇವಿಯಕ್ಕ ಹೇಳುವ ಮಾತಿನಲ್ಲಿ ಲೋಕದ ಸಕಲ ಜೀವಿಗಳಲ್ಲಿ ವ್ಯಾಪಿಸಿರುವ ಸದಾಶಿವನ ಸರ್ವವ್ಯಾಪಕತ್ವದ ಚಿತ್ರ ಕಾಣಬರುತ್ತದೆ. ನಿರಾಕಾರಿ ಶಿವನ ಆರಾಧನೆ ಬಿಟ್ಟು ಸಾಕಾರಿ ಶಿವನ ಪೂಜೆ ದೇವಾಲಯಗಳ ನಿರ್ಮಾಣದ ಮೂಲಕ ಆದುದನ್ನು ಕಂಡು ಲೋಕದ ರೀತಿ-ನೀತಿಯನ್ನು ಖಂಡಿಸುವ ಉದ್ದೇಶದಿಂದಲೇ ಶಿವಶರಣರು 'ದೇಹವೇ ದೇವಾಲಯ' ಎಂದು ಸಾರಿದುದು ; ಸ್ಥಾವರಲಿಂಗ ಪೂಜೆಯನ್ನು ನಿರಾಕರಿಸಿದುದು. ಜನಮನದಲ್ಲಿ ನೆಲೆಗೊಂಡ ಸದಾಶಿವನ ಮೂರ್ತಿಯನ್ನು ಬದಲಿಸಲು ಹಾಗೂ ಸಾಕಾರಮೂರ್ತಿಯ ಪೂಜೆಯಿಂದ ಲಭಿಸಬಹುದಾದ ಪರಮಪದ ಕೈಲಾಸವೆಂಬ ನಂಬುಗೆಯನ್ನು ಅಳಿಸಲು ಬಹುಶಃ ಶಿವಶರಣರು ತೀವ್ರವಾಗಿ ಪ್ರಯತ್ನಿಸಿರಬಹುದು. ಆ

[1] ಸಿದ್ಧರಾಮೇಶ್ವರರ ವಚನಗಳು (ಸಂ : ಡಾ|| ಆರ್. ಸಿ. ಹಿರೇಮಠ), ವ. ೬೦೫.
[2] ಅಕ್ಕನ ವಚನಗಳು (ಸಂ : ಡಾ|| ಎಲ್. ಬಸವರಾಜು), ವ. ೨.

ಪ್ರಯತ್ನದ ಸೂಚನೆ ಶಿವಶರಣರು ಮರ್ತ್ಯಕ್ಕೆ ಕೊಟ್ಟ ಮಹತ್ವ, ಕೈಲಾಸಕ್ಕೆ ಕೊಟ್ಟ ಅಮಹತ್ವದಿಂದ ತಿಳಿದುಬರುತ್ತದೆ.

ಶಿವಶರಣರು ಮರ್ತ್ಯಕ್ಕೆ ಕೊಟ್ಟ ಮಹತ್ವ ಬಹುವಾಗಿ ಮುಂದೆ ಬಂದ ಹರಿಹರನಿಗೆ ಹಿಡಿಸಿರಬೇಕು. ಅಂತೆಯೇ ಆತ ಶಿವಶರಣರನ್ನು ಕುರಿತು ಬರೆದ ರಗಳೆಗಳಲ್ಲಿ ತನ್ನ ನಾಯಕರನ್ನು ಮರ್ತ್ಯದಲ್ಲಿ ಅವತಾರವೆತ್ತುವಂತೆ ಮಾಡಿರುವನು. 'ಮರ್ತ್ಯವೆಂಬುದು ಕರ್ತಾರನ ಕಮ್ಮಟ'ವೆಂಬ ಬಸವಣ್ಣನವರ ಸಿದ್ಧಾಂತವನ್ನು ಚಾಮರಸನೂ ಒಪ್ಪಿ 'ಪ್ರಭುಲಿಂಗಲೀಲೆ'ಯ ಆರಂಭದಲ್ಲಿ[1] "ಭೋಗ ಭೂಮಿಯ ಭೋಗ ತನುವಿನ । ಲಾಗ-ದನುಪಮ ಸಿದ್ಧಿ ಕರ್ಮೋ । ದ್ಯೋಗ ಭೂಮಿಯ ಕರ್ಮತನುವಿನಲಲ್ಲದದರಿಂದ । ಯೋಗಯೋಗ್ಯರು ಯೋಚಿಸುತ ಭೂ । ಭಾಗದೊಳು ಮಾನವ ಶರೀರಿಗ । ಳಾಗಿ ಸಾಧಿಸಿ ನಿಜ ವನಜೀವರು...." ಎಂದು ಶಿವನ ಬಾಯಿಂದಲೇ ಮರ್ತ್ಯದ ಹಿರಿಮೆಯನ್ನು ಹೇಳಿಸಿರುವನು.

---

[1] ಪ್ರಭುಲಿಂಗಲೀಲೆಯ ಸಂಗ್ರಹ (ಸಂ: ಎಂ. ಎಸ್. ಬಸವಲಿಂಗಯ್ಯ, ಎಂ. ಆರ್. ಶ್ರೀನಿವಾಸಮೂರ್ತಿ), ೧.೧೯

## ಆರ್. ರಾಚಪ್ಪ

# ದಾಸಿಮಯ್ಯಗಳು

ಶರಣಸಾಹಿತ್ಯಾವಲೋಕನ ಮಾಡುವಾಗ, ಶಿವದಾಸಿಮಯ್ಯ, ಶಂಕರದಾಸಿಮಯ್ಯ, ದೇವರದಾಸಿಮಯ್ಯ, ಜೇಡರದಾಸಿಮಯ್ಯ, ವೀರಶಂಕರದಾಸಿಮಯ್ಯ ಎಂಬ ಹೆಸರುಗಳು ಕಂಡುಬರುತ್ತವೆ. ಇವರುಗಳಲ್ಲಿ ದೇವರದಾಸಿಮಯ್ಯ–ಜೇಡರದಾಸಿಮಯ್ಯ ಎಂಬ ಹೆಸರುಗಳು ಒಬ್ಬನಿಗೇ ಅನ್ವಯವಾಗುತ್ತವೆಂದು ಕೆಲವೊಂದು ವಿದ್ವಾಂಸರ ಅಭಿಮತ.[1] ಇವರುಗಳ ಬಗೆಗೆ ಕೂಲಂಕಶವಾಗಿ ವಿಚಾರಮಾಡುವ ಉದ್ದೇಶವನ್ನು ಈ ಲೇಖನದಲ್ಲಿ ತಳೆಯಲಾಗಿದೆ. ಮೊದಲು ಶಿವದಾಸಿಮಯ್ಯ, ಶಂಕರದಾಸಿಮಯ್ಯ, ವೀರಶಂಕರದಾಸಿಮಯ್ಯಗಳ ವಿಚಾರವನ್ನು ಗಮನಿಸೋಣ.

### ಶಿವದಾಸಿಮಯ್ಯ

ಶಿವದಾಸಿಮಯ್ಯ ಶಿವಶರಣರಾದ ದೇವರದಾಸಿಮಯ್ಯ, ಶಂಕರದಾಸಿಮಯ್ಯಗಳೊಡನೆ ಯಾವಾಗಲೂ ಸ್ಮರಿಸಲಾಗುತ್ತಿರುವ ಶರಣ. ಅನೇಕ ಪವಾಡಗಳನ್ನು ಮೆರೆದಿದ್ದಾನೆ. ಇವನು ಹೊಲಿಗೆಕಾಯಕದವನು. ಹಾಗೂ ನೀಲಿ ಮೊದಲಾದ ಬಣ್ಣಗಳನ್ನು ಎದ್ದುವುದರಲ್ಲಿ ನಿಷ್ಣಾತನಾಗಿದ್ದನು. 'ಈತನ ಬಗೆಗೆ ಪುರಾಣವೊಂದು ಪ್ರಸಿದ್ಧವಾಗಿದೆ' ಎಂದು ಡಾ|| ಫ. ಗು. ಹಳಕಟ್ಟಿಯವರು ಹೇಳುತ್ತಾರೆ.[2] ಇದೇ ಅಭಿಪ್ರಾಯವನ್ನು ಶ್ರೀ ತ. ಸು. ಶಾಮರಾಯರು ತಳೆದಿದ್ದಾರೆ.[3] ಈತನ ಬಗೆಗೆ ಹೆಚ್ಚೇನು ತಿಳಿದುಬರುವುದಿಲ್ಲ.

### *ಶಂಕರದಾಸಿಮಯ್ಯ

ಶಂಕರದಾಸಿಮಯ್ಯ ಶಿವಶರಣ ಸಂದೋಹದಲ್ಲಿ ಪದೇ ಪದೇ ಸ್ಮರಿಸಲಾಗುತ್ತಿರುವ

---

[1] ಡಾ|| ಎಲ್. ಬಸವರಾಜು, 'ದೇವರದಾಸಿಮಯ್ಯನ ವಚನಗಳು', ಗೀತಾ ಬುಕ್ ಹೌಸ್, ಮೈಸೂರು, ೧೯೭೦. ಸೀತಾರಾಮ ಜಾಗೀರ್‌ದಾರ್, 'ದೇವರದಾಸಿಮಯ್ಯನ ಕಾಲ ವಿಚಾರ', ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಸಂಪುಟ ೫೯, ಸಂಚಿಕೆ ೧, ೧೯೭೪.

[2] ಡಾ|| ಫ. ಗು. ಹಳಕಟ್ಟಿ, ೭೭೦ ಅಮರಗಣಾಧೀಶ್ವರರ ಚರಿತ್ರೆ, ವಿಜಾಪುರ, ೧೯೫೪.

[3] ಪ್ರೊ|| ತ. ಸು. ಶಾಮರಾಯ, ಶಿವಶರಣ ಕಥಾರತ್ನಕೋಶ, ತಳುಕಿನ ವೆಂಕಣ್ಣಯ್ಯ ಗ್ರಂಥಮಾಲೆ, ಮೈಸೂರು ೪, ೧೯೬೭.

* ಈತನ ಬಗೆಗೆ ಪಂಡಿತ ಮಲ್ಲಿಕಾರ್ಜುನ ಕ್ರಿ.ಶ. ೧೮೦೦ರಲ್ಲಿ ಹತ್ತು ಸಂಧಿಗಳುಳ್ಳ ಪುರಾಣವನ್ನು ಬರೆದಿದ್ದಾನೆ.

ಮಹಾಶರಣ. ಈತನ ಬಗೆಗೆ ಹರಿಹರ ಮಹಾಕವಿ ರಗಳೆಯೊಂದನ್ನು ರಚಿಸಿದ್ದಾನೆ. ರಗಳೆಯಲ್ಲಿ ಬರುವ ಈತನ ಚರಿತ್ರೆ ಈ ರೀತಿ ಇದೆ :

‘ಬಿಜಾಪುರಜಿಲ್ಲೆಯ ಕಂದಶಿಲೆ ಎಂಬ ಗ್ರಾಮದಲ್ಲಿ ಗೋವಿಂದಭಟ್ಟನೆಂಬ ಬ್ರಾಹ್ಮಣ ತನ್ನ ಸತಿ ಉಮ್ಮವ್ವೆಯೊಡನೆ ಸಂಸಾರ ಮಾಡಿಕೊಂಡಿದ್ದನು. ಕಾಲ್ನಡಗೆಯಲ್ಲಿ ಕಾಶೀಯಾತ್ರೆ ಮಾಡುವ ಉದ್ದೇಶದಿಂದ ಹೊರಟನು. ಸಂಜೆಯಾಗುವಸಿತರಲ್ಲಿ ತನ್ನೂರ್ಗೆ ಗಾವುದ ದೂರದಲ್ಲಿದ್ದ ನವಿಲೆಯಲ್ಲಿಗೆ ಬಂದರು. ಅಲ್ಲಿ ಜಡೆಯ ಶಂಕರದೇವರ ದೇವಾಲಯವನ್ನು ಹೊಕ್ಕನು. ಅಲ್ಲಿ ನಡೆವ ಶಿವಪೂಜಾದಿಗಳನ್ನು ಕಂಡು ‘ಇನ್ನೇಕೆ ವಾರಣಾಸಿಯ ಪಯಣವೆನಗೆಂದು’ ನಿತ್ಯವೂ ಕಂದಶಿಲೆಯಿಂದ ನವಿಲೆಗೆ ಬಂದು ಶಿವನನ್ನು ಅರ್ಚಿಸಿ ಹೋಗುತ್ತಿದ್ದನು. ಜಡೆಯ ಶಂಕರದೇವನನ್ನು ಅರ್ಚಿಸುತ್ತಾ ಭಕ್ತಿವಿಡಿದು ಎಲ್ಲವೂ ತನಗೆ ಜಡೆಯ ಶಂಕರದೇವನೆಂದೇ ನಂಬಿದ್ದನು. ಈತನ ಭಕ್ತಿಗೆ ಮೆಚ್ಚಿ ಶಂಕರದೇವನು ತನ್ನೂರ್ಗೆ ಬಂದಿರುವಂತೆ ಬೆಸಸಿದನು. ಈ ಆಜ್ಞೆಯನ್ನು ಶಿರದಲ್ಲಿ ಹೊತ್ತು ತನ್ನ ಸತಿವೆರಸಿ ನವಿಲೆಗೆ ಬಂದು ಶಂಕರದೇವರ ಅರ್ಚನೆಯಲ್ಲಿ ಮುಳುಗಿದ್ದನು. ಒಂದು ದಿವಸ ನೇಮವನ್ನು ಮಾಡುತ್ತಿರಲು ಇಂದುಧರನು ಕರುಣದಿಂದ ಜಂಗಮವೇಷದಿಂದ ಬಂದು ಶಿವಮಂತ್ರ, ಶಿವಲಿಂಗವಿತ್ತುದಲ್ಲದೆ ನೊಸಲಕಣ್ಣನ್ನೂ ಇತ್ತನು. ತನಗೆ ನಾಮವೊಂದನ್ನೀಯಬೇಕೆಂದು ಬೇಡಲು, ಆತನಿಗೆ ಶಂಕರದಾಸಿಮಯ್ಯನೆಂದೂ, ಆತನ ಸತಿಗೆ ಶಿವದಾಸಿಯೆಂದೂ ಹೆಸರನ್ನಿಟ್ಟು ಹರಸಿದನು. ಹೀಗೆ ಹರನಿಂದ ನೊಸಲಕಣ್ಣನ್ನು ಪಡೆದು ಪರಸಮಯಿಗಳನ್ನು ಗೆದ್ದು ಶಿವ ಧರ್ಮವನ್ನು ಪಸರಿಸುತ್ತಿದ್ದನು.

ನಿಂತಲ್ಲಿ ನಿಲ್ಲದೆ ಅಲ್ಲಲ್ಲಿಗೆ ಹೋಗಿ ಶಿವಧರ್ಮವನ್ನು ಪಸರಿಸುವಾಗ ಮುದನೂರಿನಲ್ಲಿ ಶಿವನಿಂದ ತವನಿಧಿಯನ್ನು ಪಡೆದು ಜೀವನ ಸಾಗಿಸುತ್ತಿದ್ದ ಜೇಡರದಾಸಯ್ಯನು ಈತನ ಭಕ್ತಿ-ಶಕ್ತಿಗೆ ಮಾರುಹೋಗಿ ವಂದಿಸಲು ಬಂದನು. ಅದೇ ಸಮಯಕ್ಕೆ ‘ಧಾನ್ಯಕ್ಕೆ ಹೋಗೇಳು’ ಎಂದು ಶಿವದಾಸಿ ವಕ್ರಪಾದನಿಗೆ ಹೇಳಿದಳು. ಅಲ್ಲಿಯೇ ಇದ್ದ ದಾಸಿಮಯ್ಯ, ‘ಶಿವನಂತೆ ಕೊಡುವವರುಂ ತನ್ನಂತೆ ಪಡೆವವರಿಲ್ಲೆಂಬಗರ್ವ’ದಿಂದ ಕೂಡಿದವನಾಗಿ ‘ಎನ್ನ ಮನೆಯೊಳ್ಸುಕುಮಾರ ಧಾನ್ಯಮುಂಟು, ಇಲ್ಲಿ ನೀವಿರ್ಪನ್ನೆವರಂ ಧಾನ್ಯಕ್ಕೆ ಪೋಗಲಾಗದು’ ಎಂದೂ, ಇಪ್ಪತ್ತುಸಾವಿರ ನೆಲ್ಲ ಹೇರನ್ನು ಕಳುಹಿಸುವೆನೆಂದು ಹೇಳುವನು. ಆಗ ಶಂಕರದಾಸಿಮಯ್ಯನು ‘ಎಲೆ ದಾಸ ನೀಂ ಕೊಡುವವ ನಾಂ ಕೊಳ್ವವನುಂಟುಂಟೆಂದು’, ಕಟಕಿಯಾಡಿ, ಬಿಡಾರದ ಮುಂದಿನ ತಿಪ್ಪೆಯನ್ನು ಅಗೆಸಿ ಹೊನ್ನಕಡವರಗಳನ್ನು ತೋರಿಸುವನು. ಇತ್ತ ಜೇಡರದಾಸಿಮಯ್ಯನ ಮನೆಯಲ್ಲಿ ತವನಿಧಿ ಬತ್ತಿತ್ತು. ತನ್ನ ತಪ್ಪಿನ ಅರಿವಾಗಿ ದಾಸಿಮಯ್ಯ, ಶಂಕರದಾಸಿಮಯ್ಯನ ಪದತಲದಲ್ಲಿ ಬಿದ್ದು ‘ದೇವಾ ಶಿಶುವಿನೊಳ್ನೀತಿಯುಂಟೆ ಪಶುವಿನೊಳ್ಬುದ್ಧಿಯುಂಟೆ ಮತಿಹೀನಂಗೆ ಮನ್ನಣೆಯುಂಟೆ.... ಸತಿಯಪರಾಧಮಂ ಪತಿ ನಿರೀಕ್ಷಿಸುವರೆ ಕೃಪಾಸಮುದ್ರ ಕರುಣಿ ಕರುಣಿಸುವುದೆಂದು” ಬೇಡಿದನು. ಆಗ ಆತನ ಶಿರದ ಮೇಲೆ ಶ್ರೀಹಸ್ತವನಿಟ್ಟು ತವನಿಧಿ ಉಕ್ಕಿಬರಲೆಂದು ಆಶೀರ್ವದಿಸಿ ಕಳುಹಿಸಿದನು.

ಕೆಲವು ಕಾಲಾನಂತರ, ಜಯಸಿಂಹರಾಯನು ಆಳುವ ಕಲ್ಯಾಣದಲ್ಲಿದ್ದ 'ದರ್ಘಿಯ ನಿರ್ಭಾಗ್ಯರುಂ ವೇದವಾದಿಗಳುಂ ತರ್ಕದ ತಾಮಸರುಂ ಯಜ್ಞದ ಅಜ್ಞಾನಿಗಳುಂ' ಆದ ಪರಸಮಯಿಗಳು ಬಂದು ಅರಸನಿಗೆ ಶಂಕರದಾಸಿಮಯ್ಯನ ವಿಷಯವನ್ನು ತಿಳಿಸಿ, ನಮ್ಮ ನರಸಿಂಹನನ್ನು ತೋರಿಸಿ, ಅವನ ಪರದೈವ ಪ್ರತಿಮೆಗಳನ್ನು ದಹಿಸುವ ಬಿರುದನ್ನು ಇಲ್ಲವಾಗಿಸಬೇಕೆಂದು ಹೇಳುವರು. ಅರಸನು ಅದಕ್ಕೆ ಒಪ್ಪಿ ಶಂಕರದಾಸಿಮಯ್ಯನಿಗೆ ಆಹ್ವಾನವನ್ನು ಕಳುಹಿಸಿ ಗೌರವದಿಂದ ಬರಮಾಡಿಕೊಂಡು 'ನೃಸಿಂಹ ಪ್ರತಿಮೆಯುಂ ನಿಮ್ಮ ನೊಸಲಗಣ್ಣಿಂ ನೋಡಲು ಘನಪ್ರತಿಷ್ಠೆಯಾದಪುದು', ಎಂದನು ಅದರಂತೆ ಆ ಪ್ರತಿಮೆಯನ್ನು ನೋಡಿ ತನ್ನ ಹಣೆಗಣ್ಣಿಂದ ಭಸ್ಮಮಾಡಿದನು. ಪರಸಮಯಿಗಳ ಬಾಯಿಗೆ ಬೀಗ ಬಿದ್ದಿತು.

ಮುಂದೆ ಬರುವಾಗ ಮೈಲಾರನಿಂದ ಕೊಡೆವಿಡಿಸಿಕೊಂಡನು. ಭೈರವನನ್ನು ಉದ್ಧರಿಸಿದನು. ಮೂರಿ ಮುಸಣಿಗಳಿಂದ ಧಾನ್ಯವನ್ನು ಹಸನುಗೊಳಿಸಿ ಗಣಪರ್ವವನ್ನು ಮಾಡಿದನು. ಹೀಗೆ ಅನೇಕ ಪವಾಡಗಳನ್ನು ಮೆರೆದು ನವಿಲೆಗ್ರಾಮಕ್ಕೆ ಹಿಂದಿರುಗಿ ಬಂದು ಅಲ್ಲಿಯೇ ಐಕ್ಯವನ್ನು ಹೊಂದಿದನು.*

ಈ ಚರಿತ್ರೆಯಲ್ಲಿ ನಾವು ಗಮನಿಸಬೇಕಾದ ಮುಖ್ಯ ಅಂಶವೆಂದರೆ—ಈತನು ಚಾಲುಕ್ಯ ಜಯಸಿಂಹನ ಮತ್ತು ಜೇಡರ ದಾಸಿಮಯ್ಯನ ಸಮಕಾಲೀನ ಎಂಬುದೇ ಆಗಿದೆ. ಆದರೆ ಈ ಜಯಸಿಂಹ ಯಾರು? ಈತನ ಕಾಲ ಯಾವುದು? ಸ್ಪಷ್ಟವಿಲ್ಲ. ಮುಂದೆ ಈ ವಿಷಯವನ್ನು ವಿವರಿಸಲಾಗಿದೆ. ಈತನು ಜೇಡರ ದಾಸಿಮಯ್ಯನಲ್ಲಿದ್ದ ಅಹಂಕಾರವನ್ನು ಮುರಿದವನು ಎಂಬಂಶ ಇತರ ಗ್ರಂಥಗಳಿಂದಲೂ ಸ್ಪಷ್ಟವಾಗುತ್ತದೆ. (ಭೀಮಕವಿಯ ಬಸವಪುರಾಣ, ಷಡಕ್ಷರಿಯ ಬಸವರಾಜೇಂದ್ರವಿಜಯ).

## ವೀರಶಂಕರ ದಾಸಿಮಯ್ಯ

ವಚನ ಸಾಹಿತ್ಯವನ್ನು ಅವಲೋಕಿಸುವಾಗ ವೀರಶಂಕರ ದಾಸಿಮಯ್ಯ ಎಂಬ ಶರಣನ ವಚನವೊಂದು ದೊರೆಯುತ್ತದೆ. ಇವನ ವಚನ, ಇದುವರೆಗೆ ದೊರೆತಿರುವುದು ಒಂದೇ ಒಂದು. ಅದೂ ದೀರ್ಘವಾಗಿದೆ. ಇವನ ಅಂಕಿತ 'ಘನಗುರು ಶಿವಲಿಂಗ ರಾಮನಾಥ' ಎಂಬುವೇ ಆಗಿವೆ.[4] ಈತನ ಬಗೆಗೆ ಹೆಚ್ಚಿನ ವಿಷಯಗಳೇನೂ ತಿಳಿದುಬಂದಿಲ್ಲ.

---

* ಈ ಕಥೆಯನ್ನು ಡಾ|| ಫ. ಗು. ಹಳಕಟ್ಟಿಯವರು ಸಂಪಾದಿಸಿರುವ 'ಹರಿಹರನ ರಗಳೆಗಳು' ಎಂಬ ಕೃತಿಯಲ್ಲಿನ 'ಶಂಕರ ದಾಸಿಮಯ್ಯನ ರಗಳೆ'ಯನ್ನು ಆಧರಿಸಿ ಹೇಳಲಾಗಿದೆ. ಇದಕ್ಕೆ ಪೂರಕವಾಗಿ ಇದೇ ಲೇಖಕರ ೨೨೦ ಅಮರಗಣಾಧೀಶ್ವರರ ಚರಿತ್ರೆ ಮತ್ತು ತ. ಸು. ಶಾಮರಾಯರ 'ಶಿವಶರಣ ಕಥಾರತ್ನಕೋಶ'ಗಳಲ್ಲಿನ ವಿಷಯಗಳನ್ನು ಆಧಾರವಾಗಿ ತೆಗೆದುಕೊಳ್ಳಲಾಗಿದೆ.

[4] ಈ ವಚನ, ಮೂರುಸಾವಿರ ವಚನಗಳ ಕಟ್ಟಿನಲ್ಲಿದೆ. ಈ ವಿಷಯದತ್ತ ನನ್ನ ಗಮನ ಸೆಳೆದವರು ಹಿರಿಯರಾದ ಶ್ರೀ ಎಚ್. ದೇವೀರಪ್ಪನವರು. ಈ ವಚನವನ್ನು ಅನುಬಂಧದಲ್ಲಿ ಕೊಡಲಾಗಿದೆ.

## ದೇವರ ದಾಸಿಮಯ್ಯ-ಜೇಡರ ದಾಸಿಮಯ್ಯ

ಈ ಹೆಸರುಗಳು ಒಬ್ಬನೇ ವ್ಯಕ್ತಿಗೆ ಅನ್ವಯಿಸುವುವು ಎಂದೂ, ಈ ಇಬ್ಬರು ಬೇರೆ ಬೇರೆ ಎಂದೂ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ದೇವರ ದಾಸಿಮಯ್ಯನೇ ವಚನ ಕಾರನು ಎಂಬುದಾಗಿ ಡಾ|| ಫ. ಗು. ಹಳಕಟ್ಟಿ ಅವರು ತಮಗೆ ಸಿಕ್ಕಿದ 'ರಾಮನಾಥಾಂ ಕಿತವಿರುವ ವಚನಗಳನ್ನೆಲ್ಲಾ ಒತ್ತಟ್ಟಿಗಿಟ್ಟು 'ದೇವರ ದಾಸಿಮಯ್ಯನ ವಚನಗಳು'[5] ಎಂಬ ಶೀರ್ಷಿಕೆಯಲ್ಲಿ ೧೪೭ ವಚನಗಳನ್ನು ಅಚ್ಚುಹಾಕಿಸಿದ್ದಾರೆ. ಮುನ್ನುಡಿಯಲ್ಲಿ ದೇವರ ದಾಸಿಮಯ್ಯ ಚರಿತ್ರೆಯನ್ನು ಹೇಳಿದ್ದಾರೆ. ವಚನಗಳನ್ನು ಸ್ಥಲಾನುಕ್ರಮದಲ್ಲಿ ಜೋಡಿಸಿ, ವಿವರಣೆಗಳನ್ನೂ ನೀಡಿದ್ದಾರೆ. ಅವರು ಆ ಕಾಲಕ್ಕೆ ವಚನಕರ್ತೃ ದೇವರ ದಾಸಿಮಯ್ಯನೇ, ಜೇಡರ ದಾಸಿಮಯ್ಯನೇ ಎಂಬುದನ್ನು ವಿಚಾರಿಸಹೋಗಿಲ್ಲ. ಆ ಬಗೆಗೆ ಯಾವ ಶಂಕೆಯೂ ಇಲ್ಲವೆಂದು ಭಾವಿಸಿರಬಹುದು. ಈ ಎರಡು ಹೆಸರುಗಳು ಒಬ್ಬನೇ ವ್ಯಕ್ತಿಗೆ ಅನ್ವಯಿಸುವಂತಹವು ಎಂದು ಅವರು ಭಾವಿಸಿದ್ದಂತೆ ತಿಳಿಯುತ್ತದೆ.

ನಿಡುಮಾಮಿಡಿ ಸಂಸ್ಥಾನದಿಂದ ಪ್ರಕಟಗೊಂಡ 'ದೇವರ ದಾಸಿಮಾರ್ಯ ಪ್ರಶಸ್ತಿ' ಗ್ರಂಥದಲ್ಲಿನ ಕೆಲವೊಂದು ಲೇಖನಗಳು ವಿಚಾರವಂತರು ಮೆಲಕುಹಾಕುವಂತಿವೆ. 'ದೇವರ ದಾಸಿಮಯ್ಯನ ಕಾಲವಿಚಾರ' ಎಂಬ ಲೇಖನದಲ್ಲಿ ಶ್ರೀ ಎಂ. ಗೋವಿಂದಪ್ಪೈ ಅವರು, ದೇವರ ದಾಸಿಮಯ್ಯ—ಜೇಡರ ದಾಸಿಮಯ್ಯ ಎಂದು ಇಬ್ಬರು ವ್ಯಕ್ತಿಗಳಿರಬೇಕೆಂದು ಅನುಮಾನ ಬರುವಂತಹ ಸಂಗತಿಗಳನ್ನು ಹೇಳಿದ್ದರೂ, ಈ ಎರಡು ಹೆಸರುಗಳು ಒಬ್ಬನಿಗೇ ಅನ್ವಯವಾಗುತ್ತವೆಂದು ಹೇಳಿದ್ದಾರೆ.[6] ಡಾ|| ಎಸ್. ನೀಲಕಂಠಶಾಸ್ತ್ರಿಗಳು ದೇವರ ದಾಸಿಮಯ್ಯ—ಜೇಡರ ದಾಸಿಮಯ್ಯ ಎಂಬ ಇಬ್ಬರು ವ್ಯಕ್ತಿಗಳಿರಬೇಕೆಂಬ ಅನುಮಾನ ವನ್ನು ವ್ಯಕ್ತಪಡಿಸಿದ್ದಾರೆ. 'ದೇವರ ದಾಸಿಮಯ್ಯ' ಎಂಬ ಲೇಖನದ ಕೊನೆಯಲ್ಲಿ "ಮುದನೂರದಾಸನೂ, ದೇವರದಾಸನು ಪ್ರತ್ಯೇಕವೆಂದು ಕೆಲವು ಗ್ರಂಥಗಳಲ್ಲಿ ಹೇಳಿರು ವುದನ್ನು ವಿವೇಚಿಸಬೇಕು. ಮತ್ತು ಜಯಸಿಂಹ ಅವನ ರಾಣಿ ಸುಗ್ಗಲೆಯರಿಬ್ಬರನ್ನೂ ದೇವರ ದಾಸಿಮಯ್ಯನಿಗೆ ಸಂಬಂಧಿಸಿ, ರಾಜನು ಜೈನನೋ ವೈಷ್ಣವನೋ ಆಗಿದ್ದನೆಂದು ನಿರ್ಧಾರ ಮಾಡುವವರೆಗೂ, ಬಸವಣ್ಣನಿಗೆ ಬಹಳ ಹಿಂದೆ ದೇವರ ದಾಸಿಮಯ್ಯನ ಅಸ್ತಿತ್ವವನ್ನು ಅಂಗೀಕರಿಸುವುದರಲ್ಲಿ ಎಚ್ಚರಿಕೆ ಇರಬೇಕು....ಜಯಸಿಂಹ ಸುಗ್ಗಲೆ ಪೊಟ್ಟಲಕೆರೆ ಸಂಬಂಧ ಪಡೆದ ಮುದನೂರ ದಾಸಿಮನ ಸಂಬಂಧವಾದ ಕಥೆಗಳು ಹುಟ್ಟಿ ಬಿಜ್ಜಳನ ಹಿರಿಯ ಸಮಕಾಲೀನನಾದ ದೇವರ ದಾಸಿಮಯ್ಯನಿಗೆ ಅನ್ವಯಿಸಲ್ಪಟ್ಟುವೆಂದು ತಾತ್ಕಾಲಿಕವಾಗಿ ಹೇಳಬಹುದು[7] ಎಂದಿದ್ದಾರೆ. ಈ ಹೇಳಿಕೆಯಿಂದ ಸ್ಪಷ್ಟವಾಗುವ

---

5 ಡಾ|| ಫ. ಗು. ಹಳಕಟ್ಟಿ, 'ದೇವರ ದಾಸಿಮಯ್ಯನ ವಚನಗಳು', ಶಿವಾನುಭವ ಗ್ರಂಥ ಮಾಲಾ, ಬಿಜಾಪುರ.

6 'ದೇವರ ದಾಸಿಮಾರ್ಯ ಪ್ರಶಸ್ತಿ', ನಿಡುಮಾಮಿಡಿ ಸಂಸ್ಥಾನ, ೧೯೫೩, ಪುಟ ೧೬೦–೧೯೮.

7 'ದೇವರ ದಾಸಿಮಾರ್ಯ ಪ್ರಶಸ್ತಿ', ಪುಟ ೨೬೦.

ಅಂಶವೆಂದರೆ ಈ ಹೆಸರಿನ ಇಬ್ಬರು ವ್ಯಕ್ತಿಗಳಿರಬೇಕೆಂಬುದು.

ದೇವರ ದಾಸಿಮಯ್ಯ—ಜೇಡರ ದಾಸಿಮಯ್ಯ ಎಂಬ ಈ ಹೆಸರುಗಳು, ಇಬ್ಬರು ವ್ಯಕ್ತಿಗಳಿಗೆ ಅನ್ವಯವಾಗುತ್ತಿದ್ದುವು ಎಂಬುದು, ಪಾಲ್ಕುರಿಕೆ ಸೋಮನಾಥ, ಭೀಮ-ಕವಿಗಳ ಕಾವ್ಯಗಳಿಂದ ವ್ಯಕ್ತವಾಗುತ್ತದೆ. ಬಸವಪುರಾಣದ ೨೩ನೇ ಸಂಧಿಯಲ್ಲಿ ಮಡಿ-ವಾಳ ಮಾಚಿದೇವನು ಶಂಕರ ದಾಸಿಮಯ್ಯನ ಹಾಗೂ ಜೇಡರ ದಾಸಿಮಯ್ಯನ ಕಥೆಯನ್ನು ಬಸವೇಶ್ವರನಿಗೆ ಹೇಳಿದ್ದಾನೆ. ಆ ಕಥೆ ಹೀಗಿದೆ :

ಜೆಡೆಯ ಶಂಕರವರಮಹಾಸ್ಥಾನವಾದ ನವಿಲೆಯಲ್ಲಿ 'ಖಂಡಪರಶುವೆನಲು ಮೆರೆಯುತ್ತಕೊಂಡು ಕನ್ನದಿಗಳಂ ಹೊಲಿವ ಕಾಯಕವೆ ತನಗಾಗಿ' ಅದರ ವಿಕ್ರಯದಿಂದ ಧಾನ್ಯವನ್ನು ಗಳಿಸುತ್ತಾ ಶಂಕರ ದಾಸಿಮಯ್ಯನಿದ್ದನು. ಶಿವನು ಆತನಿಗೆ 'ವಿಚಿತ್ರ ಭಾಳಾಂಬಕ'ವನ್ನು ಇತ್ತಿದ್ದನು. ಆತನು ಒಮ್ಮೆ ಜಗದೇಕಮಲ್ಲನ ಪಟ್ಟಣಕ್ಕೆ ಹೋಗಿ ಅಲ್ಲಿದ್ದ ಉಕ್ಕಿನ ವಿಷ್ಣು ಪ್ರತಿಮೆಯನ್ನು ತನ್ನ ಭಾಳಾಭೀಳಲೋಚನದಿಂದ ನೋಡಿ ಹುಡಿ ಹುಡಿ ಮಾಡಿದನು. ಜೇಡರ ದಾಸಿಮಯ್ಯನೆಂಬ ಮತ್ತೊಬ್ಬ ಭಕ್ತನು ಆತನನ್ನು ನೋಡಲು ಹೋಗಿ ಆತನ 'ಘನದರಿದ್ರತೆ'ಯನ್ನು ಕಂಡು 'ತಾನಧಿಕನಂತೆ' ತನ್ನ ಹೆಂಡತಿ ದುಗ್ಗಳೆಗೆ ಹೇಳಿ ಬಂದು ಹೊಡಗೆಯ ಭತ್ತವನ್ನು ಕಳಿಸಿದನು. ಜಾಡರ ದಾಸಿ-ಮಯ್ಯನಲ್ಲಿದ್ದ 'ಬಹಳ ಸಂಪದವುಡುಗಿಹೋದುದು, ಧಾನ್ಯವೌಷಧಕಿಲ್ಲದಂತಾಯ್ತು' ; 'ಹರನ ಕೈಯಲ್ಲಿ ಮುನ್ನ ಜಾಡರ ದಾಸಿಮಯ್ಯ ಪಡೆದ ತವನಿಧಿ' ತೆಗೆದು ಹೋಯಿತು. ಆಗ ಗಂಡಹೆಂಡಿರಿಬ್ಬರೂ ಬಂದು ಅಂಗಲಾಚಿ ಬೇಡಿ ಸಾಷ್ಟಾಂಗವೆರಗಿದರು. ಶಂಕರ ದಾಸಿಮಯ್ಯ ಪ್ರಸಾದಿಸಲಾಗಿ ತವನಿಧಿ ಮುನ್ನಿನಂತೆ ಸಮುನ್ನತಿವೆತ್ತು ಮರಳಿತು."[8]

ಇದೇ ಗ್ರಂಥದ ೫೧ನೇ ಸಂಧಿಯಲ್ಲಿ ದೇವರ ದಾಸಿಮಯ್ಯನ ಕಥೆಯನ್ನು 'ಹೊಟಲ ಕೆರೆಯ ಅರಸನಾದ ಜೇಸಿಂಗರಾಯನು ಜಿನಸಮಯಿಯಾಗಿದ್ದನು. ಆತನ ಹೆಂಡತಿ ಸುಗ್ಗಲದೇವಿ ದೇವರ ದಾಸಿಮಯ್ಯನನ್ನು ತನ್ನ ಸದ್ಗುರುವೆಂದು ಭಾವಿಸಿದ್ದಳು. ಆಕೆ ತನ್ನ ಗಂಡನ ವರ್ತನವನ್ನು ಕುರಿತು ದಾಸಿಮಯ್ಯನಿಗೆ ಹೇಳಿಕಳುಹಿಸಲು, ಆ ಕರೆಯನ್ನು ಮನ್ನಿಸಿ ಬಂದು ಅರಸನ ಆಸ್ಥಾನದ ಜೈನರನ್ನು ವಾದದಲ್ಲಿ ಗೆದ್ದನು. ಆಗ ಜೈನರು ಆತನನ್ನು "ಶಿವ ಮಾರ್ಗದೊಳಾದಡಾತನ ನಾವು ಕೆಡಿಸಿದಡಲ್ಲದಾಗದು" ಎಂದು ವಿಚಾರಿಸಿ, "ಪಾವಕಜ್ವಾಲಾಪ್ರಭಾವದ ಹಾವನೊಂದಂ ತರಿಸಿ ಘಟದೊಳಗಿರಿಸಿ ತುಡುಕಿಸುವ" ಎಂದು ಉಪಾಯ ಮಾಡಿ ದಾಸಿಮಯ್ಯನನ್ನು ಕುರಿತು "ಇಲ್ಲುಂಟೆ ಶಿವಂ" ಎಂದು ಕೇಳಿದರು. ಅದಕ್ಕೆ ಆತ "ಅಭವನೀಘಟದೊಳುಂಟುಂಟೆನಿತು ಸಂದೆಗವಿಲ್ಲ.... ರಾಮೇಶ್ವರಂ ತಾಂ ಸರ್ವಗತನಹನ್" ಎಂದು ಮಡಕೆಯಲ್ಲಿ ಕೈಹಾಕಿ ತೆಗೆಯುವಾಗ ಸ್ಫಟಿಕ ಲಿಂಗವೊಂದು ಕಾಣಿಸಿತು. ಶ್ರಾವಕರು ಭಯಗೊಂಡರು. ಆಗ ದಾಸಿಮಯ್ಯ

---

[8] ಸಂ. ಡಾ|| ಆರ್. ಸಿ. ಹಿರೇಮಠ, 'ಬಸವಪುರಾಣ', ಪ್ರಕಾಶಕರು, ಶ್ರೀ ನಿ. ಪ್ರ. ಮೃತ್ಯುಂಜಯಸ್ವಾಮಿಗಳು, ಮುರುಘಾಮಠ, ಧಾರವಾಡ, ಸಂಧಿ ೨೩.

ಅರಸನಾದಿಯಾಗಿ ಜೈನರಿಗೆ ಶಿವದೀಕ್ಷೆ ಇತ್ತನು'[9] ಎಂಬುದಾಗಿ ಹೇಳಲಾಗಿದೆ.

ಚನ್ನಬಸವಪುರಾಣವನ್ನು ಬರೆದ ವಿರೂಪಾಕ್ಷಪಂಡಿತನು, ಶಂಕರ ದಾಸಿಮಯ್ಯ—ಜೇಡರ ದಾಸಿಮಯ್ಯಗಳನ್ನು ಕುರಿತು—

ಒಯ್ಯನೀಶ್ವರನಿಂದೆ ಪಡೆದು ಶಂಕರದಾಸಿ
ಮಯ್ಯಂ ನೊಸಲ್ಗಣ್ಣನನ್ಯದೇವಂಗಳಂ
ಕೆಯ್ಯೊಡನೆ ನೋಡಿಪಹಿಸುವೆನೀಶನಿಂದೆ ತಪನಿಧಿಯ ಜೇಡರ ದಾಸನು
ಕೆಯ್ಯಾರ ಪಡೆದು ಭಕ್ತಂಗಳ ಶಂಕರದಾಸಿ
ಮಯ್ಯನಾಲಯಕಟ್ಟುಲಾತನೀಕ್ಷಿಸಿ ತನ್ನ
ಕೆಯ್ಯೊಳವನಪಗಿಸಲ್ಕಡಗಿ ತಾತಂ ಪಡೆದ ತಪನಿಧಿಯದಾಕ್ಷಣದೊಳು !
ಬಂದು ಕೊಂಡಾಡೆ ಶಂಕರದಾಸ ನೊಕ್ಕನೆ
ಲ್ಲಿಂದೆ ತಪನಿಧಿಯಾಗುವಂತೆ ನೇಮಿಸಿ"[10]

ಎಂದು ಹೇಳಿ, ದೇವರ ದಾಸಿಮಯ್ಯನನ್ನು ಕುರಿತು—

ಜಿನಭಕ್ತನೆಸೆವ ದೇಸಿಂಗ ಬಲ್ಲಾಳನಾ
ತನ ಮಡದಿ ಸುಗ್ಗಲೆಯು ಶಿವಭಕ್ತೆ ತನ್ನ ಗುರು
ವೆನಿಪ ದೇವರದಾಸನಂ ಜಿನರಕೂಡೆವಾದಂಗೆಯ್ಸಿ ಪೆಟ್ಟಿಗೆಯೊಳು
ತೊನೆವ ಘಟಸರ್ಪನಂ ಚಂದ್ರಕಾಂತದ ಲಿಂಗ
ವನೆ ಮಾಡಿ ಗೆಲಿಸಿ ಜೈನರಿಗಾಜ್ಞೆಯಂ ಮಾಡಿ
ಜನಪತಿಯನಂದು ಶಿವಭಕ್ತನಂ ಮಾಡಿದಳದೇನೆಂಬೆನಚ್ಚರಿಯನು"[11]

ಎಂದು ಹೇಳಿದ್ದಾನೆ.

ವೃಷಭೇಂದ್ರವಿಜಯವನ್ನು ಬರೆದ ಷಡಕ್ಷರ ಮಹಾಕವಿಯು ತನ್ನ ಕಾವ್ಯದ ೧೩ನೇ ಆಶ್ವಾಸದಲ್ಲಿ ಮಡಿವಳ್ಳ ಮಾಚಿದೇವನಿಗೂ ಬಸವೇಶ್ವರನಿಗೂ ನಡೆದ ಸಂವಾದದಲ್ಲಿ ಶಂಕರದಾಸಿಮಯ್ಯ—ಜೇಡರ ದಾಸಿಮಯ್ಯನನ್ನು ಕುರಿತು—

"ನವಿಲೆ ಎಂಬ ಊರಿನಲ್ಲಿ 'ಸೂಚಿಯ ಕಾಯಕ'ದ ಅಚಳ ಶಿವೈಕ್ಯನಾದ ಶಂಕರ ದಾಸಯ್ಯನೆಂಬ ಶಿವಭಕ್ತನಿದ್ದನು. ಆತನಿಗೆ ಶಿವನು 'ನಿಟಿಲತಟದೊಳ್ಪಾವಕಾಕ್ಷಿ'ಯನ್ನು ಕರುಣಿಸಿದ್ದನು. ಆತನೊಮ್ಮೆ ಜಗದೇಕಮಲ್ಲನೆಂಬ ರಾಜನ ಊರನ್ನು ಹೊಕ್ಕು ಅಲ್ಲಿದ್ದ ಉಗ್ರದಾಮೋದರನ ಪಂಚಲೋಹದ ವಿಗ್ರಹವನ್ನು ತನ್ನ ನೊಸಲ ಕಣ್ಣಿಂದ ನೋಡಿ ಸುಟ್ಟನು. ಜೇಡರ ದಾಸಯ್ಯನೆಂಬ ಮತ್ತೊಬ್ಬ ಶಿವಭಕ್ತ ಈತನನ್ನು ನೋಡಲು ಬಂದು ಹರಭಕ್ತನಾಗಿದ್ದು ಬಡತನಕ್ಕೆ ಪಕ್ಕಾಗಿರುವ ಆತನಿಗೆ ಧಾನ್ಯ ಕಳುಹಿಸಬೇಕೆಂದು ತನ್ನ ಸತಿದುಗ್ಗಳೆಗೆ ಹೇಳುವನು. ಆ ಮೇರೆಗೆ ಆಕೆ ಧಾನ್ಯವನ್ನು ಕಳುಹುವಳು. ಶಂಕರ

---

9 ಅದೇ, ಸಂಧಿ ೫೧.

10 ಸಂ॥ ಶಿ. ಶಿ. ಬಸವನಾಳರು, 'ಚನ್ನಬಸವಪುರಾಣ', ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ, ೧೯೩೪, ಕಾಂಡ ೫, ಸಂಧಿ ೫೭, ಪದ್ಯ ೧೯–೨೦.

11 ಅದೇ., ಸಂಧಿ ೫೭, ಪದ್ಯ ೧೧.

ದಾಸಯ್ಯನು ಆ ಛತ್ರವನ್ನು ಒಂದು ಮುಷ್ಟಿಯಲ್ಲಿ ಅಡಸಿ ಹಿಡಿದು ನೆಲದಲ್ಲಿ ಮಡಗಿದನು. ಆ ಶರಣನ ಪರಿಯನ್ನು ಅರಿಯದೆ ಉರುಮುದದಿಂದ ಆತನಿಗೆ ಧಾನ್ಯವನ್ನು ಕಳುಹಿಸಿದ ಕಾರಣ ಜೇಡರದಾಸಯ್ಯನಿಗೆ ಶಿವನಿತ್ತಿದ್ದ ತವನಿಧಿ ಬಯಲಾಯಿತು. ಅದನ್ನು ಕಂಡು ಜೇಡರದಾಸಯ್ಯ ಸತಿಯೊಡನೆ ತಳವಳಿಸಿ ಬಂದು ಅಡಿಗೆರಗಿ ಬೇಡಿಕೊಳ್ಳಲು, ಆತನು ಒಂದು ಹಾರೆಯನ್ನು ಈತನ ಕೈಗಿತ್ತು 'ಇದೊ ಭೂಮಿಯನ್ನು ಅಗಿ' ಎಂದಂತೆ ಜೇಡರದಾಸಯ್ಯನು ಅಗಿಯಲು ಹೊನ್ನರಾಶಿ ಸೂಸಿತು. ಆಶ್ಚರ್ಯಚಕಿತರಾದ ಆ ದಂಪತಿಗಳಿಗೆ ಶಂಕರದಾಸಿಮಯ್ಯನು ಅಕ್ಷಯನಿಧಿಯನ್ನು ಮರಳಿ ಕರುಣಿಸಿದನು"[12] ಎಂದು ಹೇಳಿದ್ದಾನೆ. ಇದೇ ಕಾವ್ಯದ ೩೫ನೇ ಆಶ್ವಾಸದಲ್ಲಿ ದಾಸಿಮಯ್ಯನೆಂಬ ಭಕ್ತನನ್ನು ಕುರಿತು—

'ಪೊಟ್ಟಳಕೆರೆ ಎಂಬ ಪಟ್ಟಣದ ಅರಸನಾಗಿದ್ದ ಜಯಸಿಂಹನು ಜಿನಧರ್ಮಪರನಾಗಿದ್ದನು. ಆತನ ಹೆಂಡತಿ ಸುಗ್ಗಲದೇವಿ ಶಿವಭಕ್ತೆಯಾಗಿದ್ದಳು. ದಾಸಿಮಯ್ಯ ಆಕೆಯ ಗುರುವಾಗಿದ್ದನು.' ಜಿನಮುನಿಗಳು ಅದನ್ನು ಕಂಡು ಅರಸನಿಗೆ ಆಕೆಯ ಮೇಲೆ ದೂರನ್ನಿತ್ತರು. ಗಂಡಹೆಂಡಿರಲ್ಲಿ ತರ್ಕವಾಗಿ ತನ್ನ ಜೈನ ಗುರುಗಳನ್ನೂ, ದಾಸಿಮಯ್ಯನನ್ನೂ 'ಸಭಾಸ್ಥಳ'ಕ್ಕೆ ಕರೆಸಿದನು. ಚರ್ಚೆಯಾಗಿ ಜೈನರು ಸೋತರು. ಸೋತ ಜೈನರು 'ಕಪಟೋಪಾಯಮನಾಳೋಚಿಸಿ' ದಾಸಿಮಯ್ಯನನ್ನು ಕೊಲ್ಲಲು ಘಟವೊಂದರಲ್ಲಿ 'ಭೀಕರ ಮುಖಫಣಿ'ಯನ್ನು ಬಯ್ತಿಟ್ಟು 'ಇಗೋ ಲಿಂಗಬಾಹ್ಯಾತ್ಪರಂ ನಾಸ್ತಿ' 'ಎಲ್ಲ ಶಿವಮಯಂ' ಎಂಬಿಯಲ್ಲ? 'ಆ ಮೃಡನಿದರಲ್ಲಿ ತಳ್ತಿಸೆವನೆಂಬುದನೀಗಳೆ ತೋರಿಸು' ಎಂದು ಮೂದಲಿಸಿದರು. ದಾಸಿಮಯ್ಯನು ತನ್ನ ಇಷ್ಟದೇವತೆಯಾದ 'ರಾಮನಾಥನೇ ವಿಶ್ವದೊಳ್ಪರಿಪೂರ್ಣನೆಂಬುದೆ ಸತ್ಯ' ಎಂದು ಧ್ಯಾನಿಸುತ್ತಾ ಆ ಕೊಡದಲ್ಲಿ 'ಕೈಯ್ಯಿಟ್ಟು ಅಡಸಿ ತುಡುಕಲು' ಆತನ 'ಸ್ಫುಟ ಕರಕಮಲ ಸ್ಪರ್ಶದಿಂದ' ಆ ಅಹಿ ಪೂರ್ವಭಾವವನ್ನು ಕಳೆದುಕೊಂಡು 'ಜಾಜ್ವಲ್ಲಿಂಗ ರೂಪಂದಳೆದು' ಹೊಳೆಯಿತು. ಆಗ ದಾಸಿಮಯ್ಯನು, ಜೈನರಿಗೂ, ಅರಸನಿಗೂ ದೀಕ್ಷೆ ಇತ್ತನು[13] ಎಂದು ಹೇಳಿದ್ದಾನೆ. ಈ ಹೇಳಿಕೆಗಳಿಂದ ಸ್ಪಷ್ಟವಾಗುವ ಅಂಶಗಳು—(೧) ಶಂಕರ ದಾಸಿಮಯ್ಯ—ಜೇಡರ ದಾಸಿಮಯ್ಯ ಸಮಕಾಲೀನರು. (ಹಾಗೂ ಆಗ ಆಡಳಿತ ಮಾಡುತ್ತಿದ್ದ ರಾಜ ಮೂರನೆ ಜಯಸಿಂಹ) (೨) ದೇವರದಾಸಿಮಯ್ಯ—ಜಯಸಿಂಹ—ಸುಗ್ಗಲೆಯರಿಗೆ ದೀಕ್ಷೆಯಿತ್ತು ಪವಾಡಗಳನ್ನು ಮೆರೆದನು. (ಈ ಜಯಸಿಂಹ ಎರಡನೆಯವನು) (೩) ದೇವರ ದಾಸಿಮಯ್ಯನೇ ಬೇರೆ —ಜೇಡರ ದಾಸಿಮಯ್ಯನೇ ಬೇರೆ—ಎಂಬುವು.

'ದೇವರ ದಾಸಿಮಯ್ಯನ ವಚನ'ಗಳು ಎಂಬ ಶೀರ್ಷಿಕೆಯಲ್ಲಿ ರಾಮನಾಥಾಂಕಿತವಿರುವ ವಚನಗಳನ್ನು ಸಂಪಾದಿಸಿರುವ ಡಾ. ಎಲ್. ಬಸವರಾಜುರವರು, ತೃತೀಯ ಪೀಠಿಕೆ

---

12 ಡಾ|| ಆರ್. ಸಿ. ಹಿರೇಮಠ, 'ಬಸವರಾಜ ವಿಜಯಂ', ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೮, ಆಶ್ವಾಸ ೧೩.

13 ಅದೇ, ಆಶ್ವಾಸ, ಪುಟ ೩೫.

ಯಲ್ಲಿ "ಒಟ್ಟಿನಲ್ಲಿ ಜೇಡರ ದಾಸಮಯ್ಯ, ಮುದನೂರ ದಾಸಮಯ್ಯ, ದೇವರ ದಾಸಿಮಯ್ಯ ಈ ಮೂರೂ ಬಸವಪೂರ್ವ ಪ್ರಸಿದ್ಧ ವಚನಕಾರನಾದ ಒಬ್ಬನೇ ವ್ಯಕ್ತಿಗೆ ಅನ್ವಯಿಸುವುವೆಂಬುದು ಸುನಿಶ್ಚಿತ.' ವಸ್ತುಸ್ಥಿತಿ ಹೀಗಿರುವಲ್ಲಿ, ದೇವರ ದಾಸಮಯ್ಯ (ಅಥವಾ ದೇವರ ದಾಸಯ್ಯ)ನೆಂಬ ಹೆಸರು ಬಸವ ಸಮಕಾಲೀನನಾದೊಬ್ಬ ಶರಣನಿಗೆ ಅನ್ವಯಿಸುವುದೆಂದೂ, ಬಸವಪೂರ್ವ ಪ್ರಸಿದ್ಧ 'ವಚನಕಾರ ಹೆಸರು' ಮುದನೂರ ದಾಸಯ್ಯ ಎಂಬುದಲ್ಲವೆ ಬೇರೆಯದಾಗವೆಂಬಂತಹ ಊಹಾಪೋಹಗಳು ನಿಲ್ಲುವಂಥವಲ್ಲ"[14] ಎಂದು ಹೇಳಿದ್ದಾರೆ. ಈ ಊಹೆಗಳು ಯಾವುವು ಎಂಬುದಕ್ಕೆ ದೇವರದಾಸಿಮಾರ್ಯ ಪ್ರಶಸ್ತಿ—ಪುಟಗಳು; ೨೧೫, ೨೬೦ ಎಂದು ಆಧಾರ ನೀಡಿದ್ದಾರೆ. ಇವು ನಾವು ಈ ಹಿಂದೆ ಉದ್ಧರಿಸಿರುವ ಡಾ. ನೀಲಕಂಠಶಾಸ್ತ್ರಿಗಳವರ ಅಭಿಪ್ರಾಯವೇ ಆಗಿವೆ.

ಬಸವರಾಜುರವರು ತಮ್ಮ ನಿರ್ಧಾರಕ್ಕೆ ಸುದೀರ್ಘ ವಿವರಣೆ ನೀಡಿದ್ದಾರೆ. ಆದರೆ ಅದೇ ಕೊನೆಯ ತೀರ್ಮಾನವಾಗುವುದಿಲ್ಲ. ಏಕೆಂದರೆ ಪಾಲ್ಕುರಿಕೆ ಸೋಮನಾಥನ ಕಾಲದಿಂದ ಸಿದ್ಧನಂಜೇಶನ ಕಾಲದವರೆಗೂ ದೇವರದಾಸಿಮಯ್ಯನೇ ಬೇರೆ. ಜೇಡರದಾಸಿಮಯ್ಯನೇ ಬೇರೆ ಎಂಬಂತೆ ವೀರಶೈವ ಕವಿಗಳು ಹೇಳಿದ್ದಾರೆ. ಇದನ್ನು ಕೇವಲ ಪೌರಾಣಿಕ ಅಂಶವೆಂದು ಕಡೆಗಣಿಸಲಾಗುವುದಿಲ್ಲ. 'ಬೆಂಕಿಯಿಲ್ಲದೆ ಹೊಗೆಯೇಳುವುದಿಲ್ಲವೆಂಬಂತೆ' ಕವಿಗಳು ಹೇಳಿರುವ ವಿಷಯದಲ್ಲಿ ಸತ್ಯಾಂಶವಿದೆ ಎನ್ನಿಸುತ್ತದೆ. ಈ ಎರಡೂ ಹೆಸರು ಒಬ್ಬನೇ ವ್ಯಕ್ತಿಗೆ ಅನ್ವಯವಾಗುತ್ತಿದ್ದರೆ ಹಾಗೇ ಹೇಳಲು ಅವರಿಗಿದ್ದ ಆತಂಕವಾದರೂ ಏನು? ಅವರು ಬೇರೆ ಬೇರೆ ಎಂದು ಹೇಳಿರುವುದರಿಂದ ಅವರಿಗಾಗಿರುವ ಲಾಭವಾದರೂ ಏನು? ಇದ್ದುದನ್ನು ಇದ್ದಂತೆ ಅವರು ನಿರೂಪಿಸಲೆಳಸಿದ್ದಾರೆ.

ಈ ಎರಡು ಹೆಸರುಗಳೂ ಒಬ್ಬನಿಗೇ ಅನ್ವಯವಾಗುತ್ತವೆಂಬ ಭ್ರಮೆಗೆ ಬಹುಶಃ ದೇವರ ದಾಸಿಮಯ್ಯನ ಮನೆದೇವರೂ 'ರಾಮನಾಥ' ಜೇಡರ ದಾಸಿಮಯ್ಯನ ಮನೆದೇವರೂ 'ರಾಮನಾಥ' ಆಗಿದ್ದುದು. ರಾಮನಾಥ ಲಿಂಗವು ಮುದನೂರಿನಲ್ಲಿಯೇ ಅಲ್ಲದೆ, ದಕ್ಷಿಣ ಭಾರತದ ದ್ರಾಕ್ಷಾರಾಮ, ಐಹೊಳೆ, ಕುರುವ ಮುಂತಾದ ಹಲವು ಕಡೆಗಳಲ್ಲಿವೆ. ಆದುದರಿಂದ ಈ ಕಲ್ಪನೆಗೆ ಆಧಾರವಿಲ್ಲವೆನಿಸುತ್ತದೆ. ಆಂಧ್ರ ದೇಶದ ಕೊಲ್ಲಿಪಾಕಿಯಲ್ಲಿ ದೇವರ ದಾಸಿಮಯ್ಯನ ವಿಗ್ರಹವೊಂದಿದೆ[15] ಎಂದು ತಿಳಿಯುತ್ತದೆ. ಈ ಕ್ಷೇತ್ರ ಚಾಲುಕ್ಯ ಜಯಸಿಂಹನ ನೆಲವೀಡುಗಳಲ್ಲಿ ಒಂದು.[16] ಆದುದರಿಂದ ದೇವರ ದಾಸಿಮಯ್ಯ ತೆಲುಗು ದೇಶದವನಿರಬೇಕೆಂದು ಆತನು ಚಾಲುಕ್ಯ ಎರಡನೆ ಜಯಸಿಂಹನಿಗೆ(ಕ್ರಿ.ಶ. ೧೦೧೫–೧೦೪೨) ಶೈವದೀಕ್ಷೆ ಕೊಟ್ಟಿರಬೇಕೆಂದೂ ಊಹಿಸಬಹುದು. ಆದರೆ ಇತ್ತೀಚಿನ ಪುರಾಣಕಾರರೂ, ಶೂನ್ಯಸಂಪಾದನಕಾರರೂ, ಜೇಡರ ದಾಸಿಮಯ್ಯ—ದೇವರ ದಾಸಿಮಯ್ಯಗಳ

---

[14] ಡಾ. ಎಲ್. ಬಸವರಾಜು, 'ದೇವರ ದಾಸಿಮಯ್ಯನ ವಚನಗಳು', ಗೀತಾ ಬುಕ್ ಹೌಸ್, ಮೈಸೂರು, ೧೯೭೦, ಪೀಠಿಕೆ, ಪು. xlvi.

[15] ಶ್ರೀ ಮಲ್ಲಿಕಾರ್ಜುನ, 'ಶ್ರೀ ರೇವಣಸಿದ್ಧರು', ಪು. ೫೧೨.

[16] *Karnataka Through The Ages*, Ed. R. R. Diwakar, p. 273.

ವೃತ್ತಾಂತವನ್ನು ಕಲಸುಮೇಲೋಗರ ಮಾಡಿದ್ದಾರೆ.

ಈ ಇಬ್ಬರಲ್ಲಿ ವಚನಕರ್ತೃ ಯಾರೆಂಬುದನ್ನು ಈಗ ನಿರ್ಧರಿಸೋಣ. ಇದುವರೆಗೆ ಪ್ರಕಟಗೊಂಡ ವಚನ ಸಂಕಲನಗಳಲ್ಲೆಲ್ಲಾ 'ದೇವರ ದಾಸಿಮಯ್ಯನ ವಚನಗಳು' ಎಂದೇ ಕರೆಯಲಾಗಿದೆ.[17] ಆದರೆ ವಚನಕರ್ತೃ ಜೇಡರ ದಾಸಿಮಯ್ಯನೆಂದು ನಾವು ಅನ್ಯತ್ರ ನಿರ್ಧರಿಸಿದ್ದೇವೆ.[18] ಅಲ್ಲದೆ ವಚನಕರ್ತೃ ಜೇಡರ ದಾಸಿಮಯ್ಯನೇ ಎಂದು ಹೇಳಲು ಆತನ ವಚನ—

'ಉಂಕೆಯನಿಗುಚಿ ಸಲಿಗೆಯ ಸಮಗೊಳಿಸಿ
ಸಮಗಾಲನಿಕ್ಕಿ ಅಣಿಯೇಳ ಮೆಟ್ಟದೆ
ಹಿಡಿದ ಲಾಳಿಯಮುಳ್ಳು ಕಂಡಿಕೆಯ ನುಂಗಿತ್ತು
ಈ ಸೀರೆಯ ನೆಯ್ವವ ನಾನೋ ನೀನೋ ರಾಮನಾಥ'[19]

ಎಂಬಲ್ಲಿ ಇವನು ಜೇಡರ ಕುಲದವನು ಎಂಬುದು ಸ್ಪಷ್ಟವಾಗುತ್ತದೆ. ಅಂಬಿಗರ ಚವುಡಯ್ಯ ತನ್ನ ವಚನಗಳಲ್ಲಿ ಜೇಡರ ದಾಸಿಮಯ್ಯನನ್ನು ಕುರಿತು—

'ಜೇಡಂಗೆ ಬೇಡಂಗೆ ಡೋಹಾರಂಗೆ ಹೊಲೆಯಂಗೆ
ಜೂಢಿಗೀಶ್ವರನೊಲಿದ ಪರಿಯ ನೋಡಾ ಅಯ್ಯಾ'[20]
"ಕೃಷ್ಣನ ಮನೆಯಲ್ಲಿ ಸೃಷ್ಟಿಗೀಶ್ವರನುಂಬಾಗ ಎತ್ತಹೋದವು ನಿಮ್ಮ ಶಾಸ್ತ್ರಂಗಳು
ಕೆತ್ತ ಮುಚ್ಚಳು ಜೇಡಗಚ್ಚರಿದೆಱಿವಾಗ ಇಕ್ಕಿದ ಜನ್ನಿವಾರ* ಭಿನ್ನವಾದವು"[21]

ಎಂದು ಹೇಳಿದ್ದಾನೆ. ಜೇಡರ ದಾಸಿಮಯ್ಯನಿಗೆ ಮುಚ್ಚಿದ್ದ ದೇವಾಲಯದ ಬಾಗಿಲು ತೆಗೆದ ಕಥೆಯನ್ನು ಅನುಲಕ್ಷಿಸಿ ಚವುಡಯ್ಯ ಈ ಮಾತುಗಳನ್ನು ಹೇಳಿರುವಂತಿದೆ. ಈ ಕಥೆ ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರದಲ್ಲಿ ಬಂದಿದೆ.[22] ಸಿದ್ಧರಾಮೇಶ್ವರರು "ಜೇಡರೆಲ್ಲರು ದಾಸಿಮಯ್ಯನಾಗಬಲ್ಲರೆ"[23] ಎಂದಿದ್ದಾರೆ. ಬಹುಶಃ ಈ ಮಾತುಗಳನ್ನು

---

17 ಡಾ. ಫ. ಗು. ಹಳಕಟ್ಟಿ, ಶ್ರೀ ಬಿ. ಎಸ್. ಸಣ್ಣಯ್ಯ, (ಪ್ರಬುದ್ಧ ಕರ್ಣಾಟಕ, ೪೬-೪) ಶ್ರೀ ಜ.ಚ.ನಿ. (ದೇವರದಾಸಿಮಾರ್ಯ ಪ್ರಶಸ್ತಿ). ಡಾ. ಎಲ್. ಬಸವರಾಜು.

18 ಸಂ॥ ಎಚ್. ದೇವೀರಪ್ಪ, ಆರ್. ವಾಚಪ್ಪ, 'ಜೇಡರ ದಾಸಿಮಯ್ಯನ ವಚನಗಳು', ತರಳ ಬಾಳು ಪ್ರಕಾಶನ, ಸಿರಿಗೆರೆ, ೧೯೭೪, ಪ್ರಸ್ತಾವನೆ, ಪು. xi.

19 ಅದೇ., ವ. ಸಂ : ೨, ಪು ೧.

20 ಡಾ॥ ಆರ್. ಸಿ. ಹಿರೇಮಠ, 'ಸಕಲ ಪುರಾತನರ ವಚನಗಳು', ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ೧೯೭೨, ಪು ೪೦೨, ವ. ಸಂ : ೧೦೦.

21 ಅದೇ., ಪು ೪೦೨, ವ. ಸಂ: ೧೦೧.

* ಇದಕ್ಕೆ 'ಬೀವಾದುವು' ಎಂಬ ಪಾಠಾಂತರವೂ ಇದೆ. ನಮ್ಮ ದೃಷ್ಟಿಯಲ್ಲಿ 'ಬೀವಾದುವು' ಎಂಬ ಪಾಠವೇ ಸರಿ ಎನಿಸುತ್ತದೆ.

22 ಡಾ॥ ಆರ್. ಸಿ. ಹಿರೇಮಠ, ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ, ಭಾಗ ೨, ಪು ೪೪೭.

23 ಡಾ॥ ಆರ್. ಸಿ. ಹಿರೇಮಠ, ಸಿದ್ಧರಾಮೇಶ್ವರ ವಚನಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಈ ಇಬ್ಬರು ವಚನಕಾರರೂ ವಚನಕರ್ತೃವಾದ ಜೇಡರ ದಾಸಿಮಯ್ಯನನ್ನೇ ಅನುಲಕ್ಷಿಸಿ ಹೇಳಿರಬೇಕೆನಿಸುತ್ತದೆ. ಈ ಕಾರಣಗಳಿಂದ ವಚನಕಾರ ಜೇಡರದಾಸಿಮಯ್ಯ ಎಂಬುದು ಸ್ಪಷ್ಟವಾಗುತ್ತದೆ. ಆದುದರಿಂದ ಸುಗ್ಗಲೆಯ ಗುರುವಾಗಿದ್ದವನೂ ಜಯಸಿಂಹನ ಸಮಕಾಲೀನನೂ ಆಗಿ ಪವಾಡಗಳನ್ನು ಮೆರೆದವನು ದೇವರ ದಾಸಿಮಯ್ಯ ಎಂಬುದು ತೀರ್ಮಾನವಾಗುತ್ತದೆ.

ಇವರಿಬ್ಬರ ಕಾಲದ ಬಗೆಗೆ ಒಂದೆರಡು ಮಾತುಗಳನ್ನು ಹೇಳಬಹುದು. 'ದೇವರ ದಾಸಿಮಯ್ಯನೇ ವಚನಕರ್ತೃ, ಅವನ ಕಾಲ ೧೦೫೦ ಎಂದು ಕೆಲವರ ಅಭಿಪ್ರಾಯ. ಇಲ್ಲಿ ದೇವರ ದಾಸಿಮಯ್ಯ ಎರಡನೆ ಜಯಸಿಂಹ (೧೦೧೫ರಿಂದ ೧೦೪೨)ನ ಸಮಕಾಲೀನನಾಗಿದ್ದು ಅನೇಕ ಪವಾಡಗಳನ್ನು ಮೆರೆದು ಶಿವಮಾಹಾತ್ಮ್ಯೆಯನ್ನು ಸ್ಥಾಪಿಸಿದನು. ಆದುದರಿಂದ ದೇವರ ದಾಸಿಮಯ್ಯ ಬಸವಣ್ಣನವರಿಗಿಂತ ಬಹುಪೂರ್ವದಲ್ಲಿದ್ದ ಅಂದರೆ ೧೦೫೦ರ ಸುಮಾರಿಗೆ ಇದ್ದವನೆಂದು ತೀರ್ಮಾನವಾಗುತ್ತದೆ. ಬಸವಣ್ಣನ ಹಿರಿಯ ಸಮಕಾಲೀನನಾಗಿ, ಶಂಕರದಾಸಿಮಯ್ಯ ಚಾಲುಕ್ಯ ಮೂರನೆ ಜಯಸಿಂಹನ (೧೦೭೬ರಿಂದ ೧೧೨೬) ಸಮಕಾಲೀನನಾಗಿ ವಚನ ರಚಿಸಿದವನು ಜೇಡರ ದಾಸಿಮಯ್ಯ. ಇದಕ್ಕೆ ಇನ್ನೂ ಕೆಲವು ಆಧಾರಗಳಿಂದಲೂ ಈತನ ಕಾಲವನ್ನು ೧೦೬೦ರಿಂದ ೧೧೫೦ ಎಂದು ಸಧ್ಯಕ್ಕೆ ಹೇಳಬಹುದು.

ಈ ಎಲ್ಲ ಅಂಶಗಳಿಂದ ದೇವರ ದಾಸಿಮಯ್ಯನೇ ಬೇರೆ. ಜೇಡರ ದಾಸಿಮಯ್ಯನೇ ಬೇರೆ ಎಂಬುಂದು ಸ್ಪಷ್ಟವಾಗುತ್ತದೆ. ಹೀಗಾಗಿ ಶರಣ ಸಮೂಹದಲ್ಲಿ, ಶಿವದಾಸಿಮಯ್ಯ, ಶಂಕರದಾಸಿಮಯ್ಯ, ವೀರಶಂಕರ ದಾಸಿಮಯ್ಯ, ದೇವರ ದಾಸಿಮಯ್ಯ, ಜೇಡರ ದಾಸಿಮಯ್ಯ ಎಂದು ಐದು ಜನ ದಾಸಿಮಯ್ಯಗಳನ್ನು ಕಾಣಬಹುದು.

## ಅಭ್ಯಾಸ ಗ್ರಂಥಗಳು

1. ಪಂಪಾಶತಕ, ಹರಿಹರ—ಸಂ. ಪ್ರೊ. ಬಸವನಾಳ ಶಿವಲಿಂಗಪ್ಪ
2. ಲಿಂಗಾರ್ಚನೆಯ ರಗಳೆ, ಹರಿಹರ—ಸಂ. ಮಲ್ಲಬಾದಿ ವೀರಭದ್ರಪ್ಪ
3. ಬಸವಪುರಾಣ, ಭೀಮಕವಿ—ಸಂ. ಡಾ॥ ಆರ್. ಸಿ. ಹಿರೇಮಠ
4. ಚನ್ನಬಸವ ಪುರಾಣ, ವಿರೂಪಾಕ್ಷ ಪಂಡಿತ—ಸಂ. ಶಿ. ಶಿ. ಬಸವನಾಳ
5. ಬಸವರಾಜೇಂದ್ರ ವಿಜಯ, ಷಡಕ್ಷರ ಕವಿ—ಸಂ. ಡಾ. ಆರ್. ಸಿ. ಹಿರೇಮಠ
6. ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ, ಶಾಂತಲಿಂಗದೇಶಿಕ —ಸಂ. ಡಾ. ಆರ್. ಸಿ. ಹಿರೇಮಠ
7. ಸಿದ್ಧರಾಮೇಶ್ವರ ವಚನಗಳು, ಶಾಂತಲಿಂಗ ದೇಶಿಕ—ಸಂ. ಡಾ. ಆರ್. ಸಿ. ಹಿರೇಮಠ
8. ಸಕಲ ಪುರಾತನರ ವಚನಗಳು ,, ,,
9. ಶಿವತತ್ವ ಚಿಂತಾಮಣಿ, ಲಕ್ಕಣದಂಡೇಶ—ಸಂ. ಎಚ್. ದೇವೀರಪ್ಪ
10. ಕರ್ಣಾಟಕ ಕವಿಚರಿತ್ರೆ, ಆರ್. ನರಸಿಂಹಾಚಾರ್ಯ—ಕನ್ನಡ ಸಾಹಿತ್ಯ ಪರಿಷತ್ತು
11. ಹರಿಹರನ ರಗಳೆಗಳು—ಸಂ. ಡಾ. ಫ. ಗು. ಹಳಕಟ್ಟಿ
12. ಶ್ರೀ ರೇವಣಸಿದ್ಧರು—ಶ್ರೀ ಮಲ್ಲಿಕಾರ್ಜುನ

13. ದೇವರದಾಸಿಮಾರ್ಯ ಪ್ರಶಸ್ತಿ—ಶ್ರೀ ಸಿಮುಸಾಪುಡಿ ಸಂಸ್ಥಾನ
14. ದೇವರ ದಾಸಿಮಯ್ಯನ ವಚನಗಳು—ಡಾ. ಫ. ಗು. ಹಳಕಟ್ಟಿ
15. ದೇವರ ದಾಸಿಮಯ್ಯನ ವಚನಗಳು—ಸಂ. ಬಿ. ಎಸ್. ಸಣ್ಣಯ್ಯ : ಪ್ರಬುದ್ಧ ಕರ್ನಾಟಕ, ೪೬–೪
16. ದೇವರ ದಾಸಿಮಯ್ಯನ ವಚನಗಳು—ಡಾ. ಎಲ್. ಬಸವರಾಜು
17. ದೇವರ ದಾಸಿಮಯ್ಯನ ವಚನಗಳು—ಸಂ. ಎಚ್. ದೇವೀರಪ್ಪ, ಆರ್. ರಾಜಪ್ಪ
18. ೭೭೦ ಅಮರ ಗಣಾಧೀಶ್ವರರ ಚರಿತ್ರೆ—ಡಾ. ಫ. ಗು. ಹಳಕಟ್ಟಿ
19. ಶಿವಶರಣ ಕಥಾ ರತ್ನಕೋಶ—ತ. ಸು. ಶಾಮರಾಯ
20. ಶಾಸನಗಳಲ್ಲಿ ಶಿವಶರಣರು—ಡಾ. ಎಂ. ಎಂ. ಕಲ್ಬುರ್ಗಿ
21. *Karnataka Through the Ages*—Ed. R. R. Diwakar

## ಅನುಬಂಧ

## ವೀರಶಂಕರ ದಾಸಿಮಯ್ಯಗಳ ವಚನ

### ನೂರುಸಾವಿರ ವಚನಗಳ ಕಟ್ಟು, ಗರಿ ; ೭೧–೭೨

ಶಿವ ಶಿವಾ ದ್ವಿಜರೆಂಬ ಪಾತಕರು ನೀವ್ಕೇಳಿಭೋ
ನೀವು ಎಲ್ಲಾ ಜಾತಿಗೂ ನಾವೇ ಮೇಲೆಂದು,
'ವರ್ಣಾನಾಂ ಬ್ರಾಹ್ಮಣ ಗುರು'ವೆಂದು ಬೊಳ್ಳಿಟ್ಟು
ಭಾಷ್ಕಳಗೆಡವುತಿಪ್ಪಿರಿ ನೋಡಾ
'ಆದಿ ಬಿಂದೂದ್ಭವೇಬೀಜಂ' ಎಂಬ ಶ್ರುತಿಯಂ ತಿಳಿದು ನೋಡಲು
ಆದಿಯಲ್ಲಿ ನಿಮ್ಮ ಮಾತಾಪಿತರ ಕೀವು ರಕ್ತದ ಮಿಶ್ರದಿಂದ ನಿಂದು ಪಿಂಡಲುದ್ಭವಿಸಿತ್ತು.
ಆ ಕೀವು ರಕ್ತಕ್ಕೆ ಆವ ಕುಲ ಹೇಳಿರೇ
ಅದುಮಲ್ಲದೆ ಪಿಂಡವೊಂಬತ್ತು ತಿಂಗಳು ಒಡಲೊಳಗೆ
ಕರುಳು ಮಲಮೂತ್ರ ಕೀವು ದುರ್ಗಂಧರಕ್ತ ಖಂಡಕಾಳಿಜ
ಜಂತುಗಳೊಳಗೆ ಪಾಕುಳದೊಳಗಣ ಕ್ರಿಮಿಯಂತೆ
ಹೊದಕುಳಿಗೊಂಬಂದು ನೀವಾವ ಕುಲವು ಹೇಳಿರೇ ?
ಅದುಮಲ್ಲದೆ ಮೂತ್ರದಕುಳಿಯ ಹೊರವಡುವಾಗ
ಹೊಲೆಮುಂತಾಗಿ ಮುದುಡಿ ಬಿದ್ದಲ್ಲಿ ಹೆತ್ತವಳು ಹೊಲತಿ
ಹುಟ್ಟಿದಮಗ ಹೊಲೆಯನೆಂದು ನಿಮ್ಮ ಕುಲಗೋತ್ರ ಮುಟ್ಟಲಮ್ಮದೆ,

ಹನ್ನೆರಡುದಿನದಂದು ಪ್ರಾಯಶ್ಚಿತ್ತವನಿಕ್ಕಿಸಿಕೊಂಬಾಗ ನೀವಾವ ಕುಲವು
ಹೇಳಿರೇ ?
ಮುಂಜೆಗಟ್ಟದಮುನ್ನ ಕೀಳುಜಾತಿ
ಮುಂಜೆಗಟ್ಟಿದ ಬಳಿಕ ಮೇಲುಜಾತಿಗಳೆಂಬ ಪಾತಕರು
ನಿಮ್ಮ ನುಡಿಯಕೊರತೆಗೆ ನೀವು ನಾಚಬೇಡವೆ?
ನೀವು ನಾಚದಿರ್ದೊಡೆ ನಿಮ್ಮ ಕುಲದ ಬೇರ ನೆಲೆ ತಲೆಕೆಳಗು ಮಾಡಿ ತೋರಿಹೆನು.
ನಾನು ಉತ್ತಮದ ಬ್ರಾಹ್ಮಣರೆಂಬ ನಿಮ್ಮದೇಹ ಬ್ರಾಹ್ಮಣನೋ
ನಿಮ್ಮ ಪ್ರಾಣ ಬ್ರಾಹ್ಮಣನೋ, ಆವುದು ಬ್ರಾಹ್ಮಣ್ಯ ಬಲ್ಲರೆ ಬಗುಳಿರೇ.
ಅರಿಯದಿರ್ದರೆ ಕೇಳು—
ದೇಹಕುಲಜನೆಂದರೆ, ಚರ್ಮಕ್ಕೆ ಕುಲವಿಲ್ಲ, ಖಂಡಕ್ಕೆ ಕುಲವಿಲ್ಲ
ಎಲವಿಂಗೆ ಕುಲವಿಲ್ಲ ನರವಿಂಗೆ ಕುಲವಿಲ್ಲ ರಕ್ತಕ್ಕೆ ಕುಲವಿಲ್ಲ.
ಕೀವಿಂಗೆ ಕುಲವಿಲ್ಲ ಕರುಳಿಂಗೆ ಕುಲವಿಲ್ಲ ಮಲಮೂತ್ರಕೆಂತೂ ಕುಲವಿಲ್ಲ
ಒಡಲೆಂಬುದು ಅಪವಿತ್ರವಾಯಿತ್ತು, ಕುಲವೆಲ್ಲಿಯದೊಡಲಿಂಗೆ.
ಅವಂತಿರಲಿ
ಇನ್ನು ನಿಮ್ಮ ಪ್ರಾಣಕ್ಕೆ ಕುಲವುಂಟೆಂದರೆ
ಪ್ರಾಣ ದಶವಾಯುವಾದಕಾರಣ ಆ ವಾಯು ಹಾರುವನಲ್ಲ
ಅದುಮಲ್ಲದೆ ನಿಮ್ಮೊಡಲನಲಗಾಗಿ ಇಜೀವ
ಕಾಮಕ್ರೋಧ ಲೋಭ ಮೋಹ ಮದ ಮತ್ಸರಂಗಳು
ಉತ್ತಮ ಕುಲವೆಂಬ ಅವು ಮುನ್ನವೇ ಪಾಪಕಾರ್ಯಗಳಾದಕಾರಣ ಅವಕ್ಕೆ
ಕುಲವಿಲ್ಲ. ನಿಲ್ಲು, ಮಾಣು.
ನಿಮ್ಮೊಳಗಣ ಸಪ್ತವ್ಯಸನಂಗಳು ಉತ್ತಮಕುಲವೆಂಬಾ ?
ಅವು ಮುನ್ನವೆ ದುರ್ವ್ಯಸನಂಗಳಾದ ಕಾರಣ ಅವಕೆಂತೂ ಕುಲವಿಲ್ಲ. ನಿಲ್ಲು
ಮಾಣು.
ನಿಮ್ಮ ಅಷ್ಟಮದಂಗಳು ಉತ್ತಮಕುಲವೆಂಬ ಅವು
ನಿನ್ನ ಸುರೆಯಸವಿದ ಕೊಡದಹಂಗೆ ಮುಂದುಗಾಣಲೀಯವಾದಕಾರಣ ಅವು
ಕುಲವಲ್ಲ.
ಇನ್ನು ಒಡಲ ತಾಪತ್ರಯಂಗಳು ಉತ್ತಮ ಕುಲವೆಂಬ ಅವು
ನಿಮ್ಮ ಇಜೀದಿಜೀದು ಸುಡುವ ಒಡಲಿಚ್ಚುಗಳು ಅವು ಕುಲವಲ್ಲ ನಿಲ್ಲು, ಮಾಣು.
ನಿಮ್ಮೊಡಲ ಮುಚ್ಚಿದ ಮಲಮೂತ್ರಂಗಳು ಕುಲವುಂಟೆ
ಅವು ಅರಿಕೆಯಲ್ಲಿ ಮಲಮೂತ್ರಂಗಳಾದ ಕಾರಣ ಅವಕ್ಕೆ ಕುಲವಿಲ್ಲ. ನಿಲ್ಲಿ,
ಮಾಣಿ.
ಇನ್ನುಳಿದ ಅಂತಃಕರಣಗಳಿಗೆ ಉತ್ತಮ ಕುಲವೆಂಬಿರೆ ?

ಅವು ನೀವು ಕಾಣಿರಿ ನಿಮ್ಮ ಮನವು ಕಾಣವು
ಅದು ಕಾರಣ ಬಯಲಭ್ರಮೆಗೆ ಉತ್ತಮ ಕುಲವುಂಟೆ? ಇಲ್ಲ. ನಿಲ್ಲಿ. ಮಾಣಿ.
ಇಂತು ಪಂಚಭೂತ ಸಪ್ತಧಾತು ಪಂಚೇಂದ್ರಿಯಂಗಳು
ಉತ್ತಮ ಕುಲವೆಂಬ ಅವು ಎಲ್ಲಾ ಜೀವರಾಶಿಗೂ ನಿಮಗೂ ಒಂದೇಸಮಾನ
ಅದೆಂತೆಂದೊಡೆ—

'ಸಪ್ತಧಾತು ಸಮಂ ಪಿಂಡಂ ಸಮಯೋನಿಸಮುದ್ಭವಂ
ಆತ್ಮದೀವ ಸಮಾಯುಕ್ತಂ ವರ್ಣಾನಾಂ ಕಿಂಪ್ರಯೋಜನಂ'

ಎಂದುದಾಗಿ ನಿಮ್ಮ ದೇಹಕ್ಕೆ ಕುಲವಾವುದು ಹೇಳಿರೇ!
ಇದಲ್ಲದೆ ಆತ್ಮನು ದೇಹಬಿಟ್ಟು ಒಂದುಗಳಿಗೆ ತೊಲಗಿರಲು ಆ ದೇಹ ಹಡಿಕೆಯಾಗಿ
ಹುಳಿತು ನಾಯಿ ನರಿ ತಿಂಬ ಕಾರಣ ನಿಮ್ಮ ದೇಹ ಅಪವಿತ್ರ ಕಾಣಿರೋ
ಇಂತಪ್ಪ ಅಪವಿತ್ರಕಾಯಕ್ಕೆ ಕುಲವಿಲ್ಲ, ಆ ಕಾಯಕ್ಕೆ ಕುಲವುಂಟೆಂದರೆ
ಮೇಲುಜಾತಿಯ ದೇಹದೊಳಗೆ ಹಾಲುಳ್ಳರೆ ಕೀಳುಜಾತಿಯ ದೇಹದೊಳಗೆ
ರಕ್ತವುಳ್ಳರೆ ಅದು ಕುಲವಹುದು. ಅಂಥಗುಣ ನಿಮಗಿಲ್ಲವಾಗಿ
ಎಲ್ಲಾ ಜೀವರಾಶಿಯ ದೇಹವೂ ನಿಮ್ಮ ದೇಹ ಸಮಾನವಾದ ಕಾರಣ
ನಿಮಗೆ ಕುಲವಿಲ್ಲ ನಿಲ್ಲಿ, ಮಾಣಿ.
ಒಡಲು ಕರಣಾದಿಗಳು ಕುಲವಿಲ್ಲದೆ ಹೋದಡು
ಎಲ್ಲವರಿವ ಚೈತನ್ಯಾತ್ಮನೇ ಸತ್ಕುಲಜನೆಂಬಾತ್ಮನಾವ ಕುಲಜನೂ ಅಲ್ಲ.
ಅದು ಆವಕುಲವೆಂದು ಹೆಸರುಗೊಂಬಾತ್ಮ ಹೆಣ್ಣಲ್ಲ ಗಂಡಲ್ಲ ನಪುಂಸಕ-
ನಲ್ಲ ಸ್ಥೂಲನಲ್ಲ ಸೂಕ್ಷ್ಮನಲ್ಲ, ಷಡುವರ್ಣದೊಳಗೆ ಆವ ವರ್ಣನೂ ಅಲ್ಲ.
ಅದುಕಾರಣ ವರ್ಣವ ಹೊದ್ದುವರು ಆತ್ಮನ ಅರಿಯರಾಗಿ
ಆತ್ಮನು ಆವ ಕುಲದೊಳಗೂ ಅಲ್ಲ.
ಶರೀರ ಬೇರೆ ಆತ್ಮ ಬೇರೆ, ಅದೆಂತೆಂದೊಡೆ—

'ಭೂಯೋಯಮತಾದ್ಭಾಂಡುಮನೇಕರೂಪಂ
ಸೌವರ್ಣಮೇಕಂ ಬಹುಭೂಷಣಾನಾಂ
ಗೋಕ್ಷೀರಮೇಕಂ ಬಹುವರ್ಣದೇಹಂ
ಶರೀರಮೇಕಂ ಪರಮಾತ್ಮನೇಕಂ'

ಎಂದುದಾಗಿ ಶರೀರಂಗಳು ಅನಂತ ಆತ್ಮನೊಬ್ಬನೆ.
ಅದುಕಾರಣ ಆ ಆತ್ಮನು ಆವ ಕುಲದಲೂ ಅಲ್ಲ
ಇನ್ನು ಆವ ಠಾವಿನಲ್ಲಿ ನಿಮ್ಮಕುಲವ ಪ್ರತಿಷ್ಠೆಯಮಾಡಿ ತೋರುವಿರೋ
ದೇಹ ಮೃತ್ತಿಕೆ ಆತ್ಮ ನಿರಾಕಾರವೆನುತ್ತಿರಲು
ಇನ್ನಾವ ಪರಿಯಲ್ಲಿ ವಾವುತ್ತಮಕುಲವೆಂಬಿರೋ
'ಜೀವೋಶಿವ ಶಿವೋಜೀವ ಸಜ್ಜೀವಃ ಕೇವಲಂ ಶಿವಃ

ಪಾಶಬದ್ಧ ಸ್ಥಿತೋಜೀವ ಪಾಶಮುಕ್ತೋ ಸದಾಶಿವಃ'
ಎಂಬ ಶ್ರುತಿಯನ್ನು ತಿಳಿದುನೋಡಲು ನೀವೆಲ್ಲಾ ಪಾಶಬದ್ಧ
ಜೀವಿಗಳಾಗುತ್ತಿರಲು ನಿಮಗೆಲ್ಲಿಯ ಉತ್ತಮ ಕುಲವೋ
ಪಾಶಮುಕ್ತರಾದ ಎಮ್ಮ ಶಿವಭಕ್ತರೇ ಕುಲಜರಲ್ಲವೇ
ನಿಮಗೆ ಉತ್ತಮ ಕುಲವುಂಟಾದರೆ ನಿಮ್ಮ ದೇಹದೊಳಗೆ
ಹೊರಗೆ ಇಂಥಾ ಠಾವೆಂದು ಬೆರಳಮುಡಿದು ತೋರಿ
ಅದಲ್ಲದೆ ಒಂದು ಪಕ್ಷಿಯ ತತ್ತಿಯೊಳಗೆ ಹಲವು ಮರಿ ಹುಟ್ಟಿದರೆ
ಒಂದರ ಮರಿಯೋ ಹಲವು ಪಕ್ಷಿಯ ಮರಿಯೋ
ತಿಳಿದು ನೋಡಿದರೆ ಅವಕ್ಕೆ ಬೇರೆ ಬೇರೆ ಪಕ್ಷಿಗಳೆಂಬ ಕುಲವಿಲ್ಲ.
ಹಾಂಗೆ ಒಬ್ಬ ಬ್ರಹ್ಮನ ಅಂಡವೆಂಬ ತತ್ತಿಯೊಳಗೆ—
ಸಕಲ ಜೀವರಾಸಿಯೆಲ್ಲವೂ ಉದಯಿಸಿದುವು, ಅದೆಂತೆಂದೊಡೆ—
'ಪೃಥಿವಿ ಆಕಾಶಮೇ ಭಾಂಡಂ ತಸ್ಯಾಂಡಂಜಾಯತೇಕುಲಾ
ಅಂತ್ಯಜಾತಿ ದ್ವಿಜಾತಿಯುಂ ಏಕಯೋನಿ ಸಹೋದರಾ' ಎಂದುದಾಗಿ
ಇರುಹೆ ಮೊದಲು ಆನೆ ಕಡೆಯಾದ ಸಚರಾಚರವೆಲ್ಲವೂ ಒಬ್ಬ ಬ್ರಹ್ಮನ ಅಂಡ-ದೊಳಗೆ ಹುಟ್ಟಿ
ಏಕಯೋನಿ ಸಹೋದರರೆಂದು ಪ್ರತಿಷ್ಠಿಸುತ್ತಿರಲು
ನಿಮಗೆಲ್ಲಿಯ ಕುಲವೋ, ಶಿವಭಕ್ತರೇ ಉತ್ತಮರು
ಕುಲಜರೆಂದು ಮಿಕ್ಕಿನವರೆಲ್ಲ ಕೀಳುಜಾತಿ ಎಂಬುದ ನೋಡಿ ಬಲುದೊರೆಯಾದರು.
ನಾನು ನಿಮಗೆ ಹೇಳಿಹೆನು ಕೇಳಿ—
"ಶ್ವಪಚೋಪಿಮುನಿಶ್ರೇಷ. ಶಿವ ಸಂಸ್ಕಾರಯುತಂ
ಶಿವಸಂಸ್ಕಾರ ಹೀನಸ್ಯ ಬ್ರಾಹ್ಮಣಶ್ವಪಚೋಧಮಂ"
ಎಂಬ ಶ್ರುತಿಗಿದಿರುತ್ತರವಕೊಟ್ಟರೆ ಬಾಯಲ್ಲಿ ಕೋಷ್ಠ ಮೂಡುವುದಾಗಿ
ನೀವು ಕೀಳುಜಾತಿಗಳು ಅಂದ ಶಿವಭಕ್ತರು ಸತ್ಕುಲಜರೆಂದು ಸುಮ್ಮನಿರಿರೋ
ಅಲ್ಲದ ಅಜ್ಞಾನವಾದುದೆಲ್ಲಾ ಒಂದುಕುಲ, ಸುಜ್ಞಾನವಾದುದೆಲ್ಲಾ ಒಂದು ಕುಲವೆಂದು
ಶಾಸ್ತ್ರಂಗಳು ಹೇಳುತ್ತೈದಾವೆ, ಅದೆಂತೆಂದೊಡೆ—
"ಆಹಾರ ನಿದ್ರಾ ಭಯ ಮೈಥುನಂಚ ಸಾಮಾನ್ಯಮೇತತ್ ಪಶುಭಿಃ ನರಾಣಾಂ
ಜ್ಞಾನಂ ನರಾಣಾಂ ಅಧಿಕೋ ವಿಶೇಷಃ ಜ್ಞಾನೇನ ಹೀನಪಶುಭಿಸ್ಸಮಾನಂ"
ಎಂದುದಾಗಿ ಅಜ್ಞಾನತಂತುಗಳು ನೀವೆಲ್ಲರು ಕರ್ಮಪಾಶಬದ್ಧರು
ನಿಮಗೆಲ್ಲಿಯದೋ ಸತ್ಕುಲ. ಇದು ಅಲ್ಲದೆ ನಿಮ್ಮ ನುಡಿಯೊಡನೆ ನಿಮಗೆ ಹಗೆ
ಮಾಡಿ ತೋರಿಹೆನು ಕೇಳಿಲವೋ
ನಿಮಗೆ ಕುಲ ವಶಿಷ್ಠ ವಿಶ್ವಾಮಿತ್ರ ಭಾರಧ್ವಾಜ ಕೌಂಡಿಲ್ಯಕಾಶ್ಯಪನೆಂಬ

ಋಷಿಗಳಿಂದ ಬಂದಿತ್ತೆಂಬಿರಿ, ಅವರ ಪೂರ್ವವನೆತ್ತಿನುಡಿವರೆ ಹುರುಳಿಲ್ಲ
ಅವರೆಲ್ಲಾ ಕೀಳು ಜಾತಿಗಳಾದ ಕಾರಣ ನೀವೇ ಋಷಿಮೂಲ ನದಿಮೂಲವನೆತ್ತ-
ಲಾಗದೆಂಬಿರಿ

ಇನ್ನು ನಿಮ್ಮ ನುಡಿ ನಿಮಗಾಯಿತ್ತೆಂಡೆ ಕೇಳಿರೋ
ಆ ಋಷಿಗಳ ಸಂತಾನವಾಗಿ ನಿಮ್ಮ ಮೂಲವನೆತ್ತಿದಡೂ ಹುರುಳಿಲ್ಲ
ನಿಮ್ಮ ಕುಲಕೆ ಗುರುವೆನಿಸುವ ಋಷಿಗಳೆಲ್ಲರೂ ಲಿಂಗವನಲ್ಲದೆ ಪೂಜಿಸರು
ಪಂಚಾಕ್ಷರಿಯನಲ್ಲದೆ ಜಪಿಸರು ಜಡೆಯನಲ್ಲದೆ ಕಟ್ಟರು.
ಹಾಂಗೆ ನೀವು ಲಿಂಗಪೂಜಿಸಿ ವಿಭೂತಿರುದ್ರಾಕ್ಷಿಯ ಧರಿಸಿ
ಪಂಚಾಕ್ಷರಿಯ ಜಪಿಸಿ ಜಡೆಯ ಕಟ್ಟಿ ಈಶ್ವರಲಾಂಛನವ ಧರಿಸಿದರೆ
ನೀವು ಋಷಿಮೂಲದವರಹುದು, ಹೀಗಾದಡೂ ಅನುಸರಿಸಿ ಕೇಳಬಹುದು.
ಅದುನಿಮಗಿಲ್ಲದೆ ಮಟ್ಟೆಯನಿಟ್ಟು ವಿಷ್ಣುವಂ ಪೂಜಿಸಿ
ಮುಡುಹು ಸುಡಿಸಿಕೊಂಡು ಸಾಲಿಗ್ರಾಮ ಶಕ್ತಿ ಲಕ್ಷ್ಮಿ ದುರ್ಗಿಯೆಂಬ
ಕಿರುಕುಳದೈವಂಪೂಜಿಸಿ ನರಕಕ್ಕಿಳಿದು ಪೋಗಲಾವಕಾರಣ ನೀವೇ ಹೀನ ಜಾತಿ
ಗಳು.

ನಿಮ್ಮ ಋಷಿಮಾರ್ಗವ ವಿಚಾರಿಸ ನಡೆಯಿರಾಗಿ ನೀವೇ ಗುರುದ್ರೋಹಿಗಳು
ಲಿಂಗದೈವವೆಂದು ಏಕನಿಷ್ಠೆಯಿಂದಿರಿರಾಗಿ ನೀವೇ ಗುರುಲಿಂಗದ್ರೋಹಿಗಳು
ರುದ್ರಾಕ್ಷಿಯ ಧರಿಸಿರಾದಕಾರಣ ನೀವು ಶಿವಲಾಂಛನದ್ರೋಹಿಗಳು
ಪಂಚಾಕ್ಷರಿಯ ನೆನೆಯಿರಾಗಿ ನೀವು ಮಂತ್ರದ್ರೋಹಿಗಳು
ಶಿವಭಕ್ತರಿಗೆರಗದಕಾರಣ ನೀವು ಶಿವಭಕ್ತರಿಗೆ ದ್ರೋಹಿಗಳು, ನಿಮ್ಮ ಮುಖ
ನೋಡಲಾಗದು.

ಬರಿದೆ ಬ್ರಹ್ಮವನಾಚರಿಸಿ ನಾವು ಬ್ರಹ್ಮರೆಂಬಿರಿ ಬ್ರಹ್ಮವೆಂತಿಪ್ಪುದೆಂದರಿಯಿರಿ
ಬ್ರಹ್ಮಕ್ಕೂ ನಿಮಗೂ ಸಂಬಂಧವೇನೋ
'ಸತ್ಯಬ್ರಹ್ಮ ಶೌಚಬ್ರಹ್ಮ ಬ್ರಹ್ಮವಿಂದ್ರಿಯನಿಗ್ರಹ
ಸರ್ವಜೀವದಯಾಬ್ರಹ್ಮ ಇತ್ಯೇತೇಬ್ರಹ್ಮ ಲಕ್ಷಣಂ
ಸತ್ಯಂನಾಸ್ತಿ ಶೌಚಂನಾಸ್ತಿ ನಾಸ್ತಿವಿಂದ್ರಿಯನಿಗ್ರಹಂ
ಸರ್ವಜೀವ ದಯಂ ನಾಸ್ತಿ ಇತ್ಯೇತೇ ಚಾಂಡಾಲಲಕ್ಷಣಂ'
ಬ್ರಹ್ಮಕ್ಕೂ ನಿಮಗೂ ಸಂಬಂಧವೇನೋ
ಬ್ರಹ್ಮವೇ ನಿಃಕರ್ಮ ನೀವೇ ಕರ್ಮಿಗಳು
ಮತ್ತೆಂತೋ ಬ್ರಹ್ಮಚರಿತಿಬ್ರಹ್ಮಣಾ ಎಂದು ಕೆಡುವುತ್ತಿಹಿರಿ
ಗಾಯತ್ರಿಯ ಜಪಿಸಿ ನಾವು ಕುಲಜರೆಂಬಿರಿ
ಆ ಗಾಯತ್ರಿ ಕರ್ಮವಲ್ಲವೆ ಮುಕ್ತಿಗೆ ಕಾರಣವಿಲ್ಲ
ಅಂತೂ ಗಾಯತ್ರಿಯಿಂದ ನೀವು ಕುಲಜರಲ್ಲ

ವೇದವನೋದಿ ನಾವೇ ಬ್ರಹ್ಮವಾದೆವೆಂಬಿರಿ ವೇದ ಹೇಳಿದ ಹಂಗೆ ನಡೆಯಿರಿ
ಅದೆಂತೆಂದೊಡೆ—
'ದೇವಾ ಭೂಮಿಜನಯಂ ದೇವಾ ಏಕೋ' ಎಂದೋದಿ ಮರೆದು
ವಿಷ್ಣುವನೆ ಭಜಿಸುವಿರಿ. ನೀವೇ ವೇದ ವಿರೋಧಿಗಳು
'ವಿಶ್ವತೋಮುಖೋ ವಿಶ್ವತೋಚ್ಚಕ್ಷುಃ ವಿಶ್ವತೋಬಾಹು' ಎಂದೋದಿ ಮತ್ತಂ
'ಏಕೋರುದ್ರನದ್ವಿತೀಯಾಯತಸ್ಥಿ' ಎಂದು ಮಱದು ಬೇರೊಬ್ಬ ದೈವವುಂಟೆಂದು
ಗಳಹುತಿಪ್ಪಿರಿ ನೀವೇ ವೇದದ್ರೋಹಿಗಳು.
'ಏಕಮೇವಾದ್ವಿತೀಯಂ ಬ್ರಹ್ಮಂ' ಎಂದೋದಿ ಕರ್ಮದಲ್ಲಿ ಸಿಕ್ಕಿಪ್ಪಿರಿ ನೀವೇ
ದುಷ್ಕರ್ಮಿಗಳು.
'ಅಯಂ ಮೇಹಸ್ತ್ರೋ ಭಗವಾನ್ ಅಯಂ ಮೇ ಭಗವೋತ್ತರಂ' ಎಂದೋದಿ
ಅನ್ಯಪೂಜೆಯಂ ಮಾಡುತ್ತಿಪ್ಪಿರಿ. ನೀವೇ ಪತಿತರು.
'ಶಿವೋಮೇವ ಪಿತರೌ' ಎಂದೋದಿ ಸನ್ಯಾಸಿಗಳಿಗೆ ಮಕ್ಕಳೆಂಬಿರಿ
ನೀವೇ ಶಾಸ್ತ್ರ ವಿರುದ್ಧಿಗಳು.
'ಸದ್ಯೋಜಾತಾದ್ಭವೇ ಭೂಮಿಃ ವಾಮದೇವಸ್ಥತಾಜಲಂ
ಅಘೋರಮಗ್ನಿ ಮಿಥ್ಯಾಹು ವಾಯುತತ್ಪುರುಷೋದ್ಭವಂ
ಈಶಾನ ಗಗನಾಕಾರಂ ಪಂಚಬ್ರಹ್ಮಮಯಂ ಜಗತೆಂದು' ಓದಿ ಸರ್ವವಿಷ್ಣು
ಮಯ ಎನುತಿರ್ಪಿರಿ. ನಿಮ್ಮಿಂದ ಬಿಟ್ಟು ಶಿವದ್ರೋಹಿಗಳಾರು.
'ಜಲಮಿತಿಭಸ್ಮ ಸ್ಥಲಮಿತಿಭಸ್ಮ ಅಗ್ನಿರಿತಿಭಸ್ಮ ವಾಯುರಿತಿಭಸ್ಮ'
ಎಂದೋದಿ ಮಱದು ವಿಭೂತಿಯನಿಡಲೊಲ್ಲದೆ ಮಟ್ಟಿಯನಿಡುವಿರೇ
ನಿಮ್ಮಿಂದ ಪತಿತರಿನ್ನಾರೋ
'ರುದ್ರಾಕ್ಷಧಾರಣಂ ಚ ರುದ್ರ' ಎಂಬುದನೋದಿ ರುದ್ರಾಕ್ಷಿಯ ಧರಿಸಲೊಲ್ಲದೆ
ಪದ್ಮಾಕ್ಷಿ ತೊಳಸಿಯಮಣಿಯಂ ಕಟ್ಟಿಕೊಂಬಿರೇ ನಿಮ್ಮಿಂದ ಪಾಪಿಗಳಿನ್ನಾರೋ.
'ಪಂಚಾಕ್ಷರ ಸಮೋಮಂತ್ರನಾಸ್ತಿಂಗತ್ವ ಮಹಾಮುನೇ' ಎಂಬುದನೋದಿ
ಪಂಚಾಕ್ಷರಿಯ ಜಪಿಸಲೊಲ್ಲದೆ ಗೋಪಾಳ ಮಂತ್ರವ ನೆನೆವಿರಿ, ಎಂತೋ
ನಿಮ್ಮ ನುಡಿ ನಿಮಗೆ ವಿರುದ್ಧವಾಗಿರಲು ನಿಮ್ಮ ಓದು ವೇದ ನಿಮಗೆ ವಿರುದ್ಧ
ವಾಗಿರಲು
ನಿಮ್ಮ ಉತ್ತಮ ಕುಲಜರೆಂದು ವಂದಿಸಿದವರಿಗೆ ಸೂಕರಜನ್ಮದಲ್ಲಿ ಬಪ್ಪುದು
ತಪ್ಪದು ನೋಡಿರೇ.

'ವಿಪ್ರಾಣಾಂ ದರ್ಶನಂ ಕಾಲೇಪಾಪಂ ಭುಂಜಂತುಪುಂಜರ
ವಿಪ್ರಾಣಾಂ ವಂದನಶ್ಚೈವ ಕೋಟಿಜನ್ಮೇವ ಸೂಕರಾ'
ಇಂತೆಂದುದಾಗಿ ನಿಮ್ಮೊಡನೆ ಮಾತಾಡಿದೊಡೆ ಪಂಚ ಮಹಾಪಾತಕ
ನಿಮ್ಮ ಮುಖವ ನೋಡಿದೊಡೆ ಅಘೋರ ನರಕ-ಅದೆಂತೆಂದೊಡೆ—

'ಒಬ್ಬ ಹಾರುವನ ದಾರಿಯಲ್ಲಿ ಕಂಡರೆ ಇಹಮುಕೆಡಹುದಲ್ಲದೆ ಹೋಗಬಾರದೆಂದು'
ನಿಮ್ಮ ವಾಕ್ಯವೆಂಬ ನೇಣಿಂದ ಹೆಡಗುಡಿಯ ಕಟ್ಟಿಸಿಕೊಳುತ್ತಿಪ್ಪಿರಿ
ಮತ್ತು ನಿಮ್ಮ ದುಶ್ಚರಿತ್ರವ ನೆನಿಸುವರೇ
'ಅಣೋರಣೀಯಾಂ ಮಹತೋಮಹೀಯಾಂ' ಎಂಬುದ
ನೀವೇ ಓದಿ ಪ್ರಾಣಿಯಂ ಕೊಂದು ಯಾಗವನಿಕ್ಕಿ ದೇವರ್ಕಳುಗಳಿಗೆ
ಹೋಮಹೊಗೆಯಂ ತೋಱಿ ಕೊಬ್ಬಿ ಬೆಳೆದ ಸವಿಯುಳ್ಳ ಖಂಡವನೆ ತಿಂದು
ಸೋಮಪಾನವೆಂಬ ಸುರೆಯನೆ ಕುಡಿದು ಮೈಮಱೆದು
ನೊಸಲಕಣ್ಣ ತೋರುವಂಥಾ ಶಿವಭಕ್ತನಾದಡೂ ನಿಂದಿಸಿ ನುಡಿವುತಿಪ್ಪಿರೇ
ನಿಮ್ಮೊಡನೆ ನುಡಿವರೆ ಗುರುಲಿಂಗವಿಲ್ಲದವರು ನುಡಿವರಲ್ಲದೆ
ಗುರುಲಿಂಗವಿದ್ದವರು ನುಡಿವರೇ, ಇದು ಶ್ರುತದುಷ್ಟ
ಅನುಮಾನವೆಂದು ವಿಚಾರಿಸಿನೋಡಲು ನೀವೇ ಪಂಚಮಹಾಪಾತಕರು.
ಶಿವಭಕ್ತಿಯರಿಯದ ನರರೂಪಿ ಕುರಿಗಳು.
ನಿಮ್ಮಿಂದ ಏಳು ಬೆಲೆ ಹೊರಗಾದ ಹೊಲೆಯನೇ ಉತ್ತಮಕುಲಜನೆಂದು
ಮುಡಿಗೆಯ ಹಾಕಿದೆನು. ಎಲೆರೋ ಸತ್ಯವುಳ್ಳರೆ, ಅಮ್ಮದಿರೆ
ಬಾಯ ಬಲವ ಮುಚ್ಚಿಕೊಳ್ಳಿರೇ.
ಎಮ್ಮ ಶಿವಭಕ್ತರೇ ಅಧಿಕರು ಎಮ್ಮ ಶಿವಭಕ್ತರೇ ಕುಲಜರು
ಎಮ್ಮ ಶಿವಭಕ್ತರೇ ಸದಾಚಾರಿಗಳು ಎಮ್ಮ ಶಿವಭಕ್ತರೇ ಪಾಪರಹಿತರು
ಎಮ್ಮ ಶಿವಭಕ್ತರೇ ಸರ್ವಜೀವದಯಾಪಾರಿಗಳು ಎಮ್ಮ ಶಿವಭಕ್ತರೇ ಸದ್ಯೋನ್ಮುಕ್ತರಯ್ಯಾ
ಘನಗುರು ಶಿವಲಿಂಗ ರಾಮನಾಥ.

ಆರ್. ಪೂರ್ಣಿಮಾ

# ಸಾಹಿತ್ಯವಿಮರ್ಶೆಯ ನೆಲೆ - ನಿಲವು

ಭಾರತೀಯ ಸಾಹಿತ್ಯಿಕ ಪರಂಪರೆಯ ಜೊತೆಗೆ ನಿಲ್ಲಬಲ್ಲ ಸ್ವತಂತ್ರ ವಿಮರ್ಶಾ ಪರಂಪರೆಯ ಅಭಾವವನ್ನು ಎಲ್ಲ ಸಾಹಿತಿವಿಮರ್ಶಕರೂ ಗಮನಿಸಿದ್ದಾರೆ. ಅದು ಬೆಳೆದಿದ್ದರೆ ಸಾಹಿತ್ಯ ಇನ್ನಷ್ಟು ತೂಕವಾಗಿ ಬರುಹುದಿತ್ತೇನೋ ಎಂಬ ಕೊರಗೂ ಇದೆ. ಆದರೆ, ಯಾವುದೇ ಕ್ರಿಯೆಯನ್ನು ಅದರ ಪರಿಣಾಮಗಳಿಂದ ತೂಗಿ ನೋಡದೆ, ಆ ಕ್ರಿಯೆ ನಡೆಯುವ ಪ್ರಕ್ರಿಯೆಯ (process) ರೀತಿ ನೀತಿ, ಅಂದ ಚಂದಗಳಿಂದಲೇ ಅದರ ಬೆಲೆಕಟ್ಟುವ ಅವೈಜ್ಞಾನಿಕದೃಷ್ಟಿ ಈ ಕ್ಷೇತ್ರದಲ್ಲೂ ಮುಸುಕಿ, ಅದರ ಫಲವಾಗಿ ಅಗಾಧವಾದ ಕಾವ್ಯಮೀಮಾಂಸೆ ಬೆಳೆದುಬಂದಿದೆ.

ರೂಪನಿಷ್ಠ ದೃಷ್ಟಿಕೋನವೇ ಭಾರತೀಯ ಕಾವ್ಯಮೀಮಾಂಸೆಯ ಮುಕ್ಕಾಲು ಪಂಥ ಪ್ರಸ್ಥಾನಗಳನ್ನು ನಿರ್ದೇಶಿಸಿದೆ. ವೇದಗಳ ಅಧ್ಯಯನದಲ್ಲೂ ಕೂಡ ಅದರಲ್ಲಿನ ಅರ್ಥಕ್ಕಿಂತ ಹೆಚ್ಚಾಗಿ ಅದರ ಪಾಠಕ್ರಮಗಳ ಬಗ್ಗೆ ನಿಷ್ಠುರ ಗಮನ ಕೊಡಲಾಗಿದೆ. ವೇದದ ತಪ್ಪು ಉಚ್ಚಾರಣೆ ಪಾಪ ಎಂಬ ಕಲ್ಪನೆಯಿಂದ, ಛಂದಸ್ಸು, ವ್ಯಾಕರಣ, ನಿರುಕ್ತಗಳು ವೇದಾಂಗಗಳ ಪಟ್ಟಕ್ಕೇರಿವೆ. ಇದರ ಪರಿಣಾಮವಾಗಿ ಛಂದಸ್ಸು ವ್ಯಾಕರಣಗಳ ಗ್ರಂಥ ನಿರ್ಮಾಣದ ಸರಣಿಯೇ ಆರಂಭವಾಯಿತು. ಕಾವ್ಯವನ್ನು ವಿವೇಚಿಸುವ ಲಾಕ್ಷಣಿಕ ಗ್ರಂಥಗಳಿಗೇ ಅವುಗಳನ್ನು ವಿವರಿಸುವ ನೂರೆಂಟು ಟೀಕೆ, ವ್ಯಾಖ್ಯಾನಗಳು ಬಂದಿವೆ. ಭಾರತೀಯ ಕಾವ್ಯಮೀಮಾಂಸೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ನಮ್ಮ ಕಾವ್ಯ ವಿಮರ್ಶಾದೃಷ್ಟಿಯು ಕಾವ್ಯದ ಶರೀರದಿಂದ ಕಾವ್ಯದ ಆತ್ಮದ ಕಡೆಗೆ ಕಾಲಕ್ರಮೇಣ ಸಾಗಿರುವುದು ಕಾಣುತ್ತದೆ. ಇವೆರಡೂ ದೃಷ್ಟಿಕೋನಗಳು ಅಂದಿನಿಂದ ಈ ಹೊತ್ತಿನ ತನಕ ಇದ್ದರೂ, ಒಟ್ಟು ಉದ್ದೇಶದಲ್ಲಿ ಯಾವುದೂ ಸಾಹಿತ್ಯದ ನಿಜವಾದ ಕರ್ತವ್ಯಗಳ ಕಡೆಗೆ ಈ ತನಕ ಗಮನ ಹರಿಸಿಲ್ಲವೆಂಬುದು, ನಮ್ಮ ಸಾಹಿತ್ಯ-ವಿಮರ್ಶೆಗಳ ಚರಿತ್ರೆಯನ್ನು ಅವುಗಳು ಬೀರಿದ ಪರಿಣಾಮದ ದೃಷ್ಟಿಯಿಂದ ವಿವೇಚಿಸಿದಾಗ ತಿಳಿದುಬರುವ ಸತ್ಯ.

ಕಾವ್ಯಮೀಮಾಂಸೆಯ ಮೊದಲ ಪ್ರಸ್ಥಾನವಾದ ಅಲಂಕಾರಗಳಿಂದ ಹಿಡಿದು ಮುಂದಿನ ಗುಣ-ರೀತಿ, ರಸ, ಧ್ವನಿ ಇವೆಲ್ಲ ಪ್ರಸ್ಥಾನಗಳು ಕಾವ್ಯವನ್ನು ಕುರಿತ ಚಿಂತನೆಯ ಬೆಳವಣಿಗೆಯನ್ನು ಬಿಂಬಿಸುತ್ತವೆ. ಕಾವ್ಯದ ಬಾಹ್ಯಲಕ್ಷಣಗಳಾದ ಅಲಂಕಾರಗಳನ್ನು ಮೊದಲು ಗುರುತಿಸಲಾಗಿದೆ. ಲೋಕದ ರೂಢಿಮಾತಿಗೆ ಮೀರಿದ ಉಕ್ತಿ

ವೈಚಿತ್ರ್ಯವೇ ಅಲಂಕಾರ, ಅಲಂಕಾರದಿಂದ ಕೂಡಿದ್ದು ಕಾವ್ಯ. ಎಂದರೆ ಕಾವ್ಯಕ್ಕೆ ಮೊದಲ approach ಅದರ ಭಾಷೆಯ ಮೂಲಕವೇ! ನಂತರ ರೀತಿಮಾರ್ಗಿಗಳು ಮೊದಲು ಕಾವ್ಯದ ಆತ್ಮವನ್ನು ಗುರುತಿಸಿ, 'ರೀತಿರಾತ್ಮಾ ಕಾವ್ಯಸ್ಯ' ಎಂದರು. ಮುಂದೆ ರಸಪಂಥ, ಧ್ವನಿಪಂಥಗಳು ಬೆಳೆದು, ಕಡೆಗೆ 'ಕಾವ್ಯಸ್ಯಾತ್ಮಾ ಧ್ವನಿಃ' ಎಂಬ ಘೋಷಣೆಯೊಂದಿಗೆ ಕಾವ್ಯಮೀಮಾಂಸೆಯಲ್ಲಿ ಹೊಸತನದ ಸರಕು ಮುಗಿದುಹೋಗುತ್ತದೆ. ಬಹಳ ಸ್ತುತಿಸಲ್ಪಟ್ಟ, ಪ್ರಖ್ಯಾತವಾದ ರಸ, ಧ್ವನಿಗಳು ಕೂಡ ಅಭಿವ್ಯಕ್ತಿಯಲ್ಲಿನ ಪ್ರಬುದ್ಧತೆಯಿಂದಾಗಿ ಸ್ಥಾಪಿತವಾಗುತ್ತವೆಯೇ ಹೊರತು ಕಾವ್ಯದ ವಸ್ತುವಿನಿಂದಲ್ಲ. ಕವಿಯ ಅಭಿವ್ಯಕ್ತಿಯ ಆಶಯದ ಬಗ್ಗೆ ನಮ್ಮ ಹೆಸರಾಂತ 'ಆಲಂಕಾರಿಕ'ರೊಬ್ಬರೂ ಗಂಭೀರವಾಗಿ ಆಲೋಚಿಸದಿರಲು ಕಾರಣ ಸಾಹಿತ್ಯದ ಬಗ್ಗೆ ಇದ್ದ ಅದ್ಭುತವಾದ ಕಲ್ಪನೆಗಳು, ಕಾವ್ಯರಚನೆಯ ಬಗ್ಗೆ ಇದ್ದ ಪೂಜ್ಯಭಾವನೆ, ಅವರು ತಿಳಿದಿದ್ದ ಕಾವ್ಯ ಪ್ರಯೋಜನಗಳು, ಇವಿರಬಹುದು.

ಕಾವ್ಯವನ್ನು ಹೇಗೆ ಬರೆಯಬೇಕು ಎಂಬುದರ ಬಗ್ಗೆ ಒಂದು ಶಾಸ್ತ್ರವನ್ನೇ ಕಟ್ಟಿ ಕೊಟ್ಟ ಆಲಂಕಾರಿಕರು ಕಾವ್ಯದಲ್ಲಿ ಏನು ಬರೆಯಬೇಕು ಎಂಬುದರ ಬಗ್ಗೆ ಯೋಚಿಸಿಯೇ ಇಲ್ಲವೆಂದಲ್ಲ. ಈ ಆಲಂಕಾರಿಕರು ಸೂಚಿಸಿದ ವಸ್ತುಗಳನ್ನು ಕುರಿತೇ ಸಾಹಿತ್ಯ ಬಂತೋ ಅಥವಾ ರಚನೆಯಾಗುತ್ತಿದ್ದ ಸಾಹಿತ್ಯದ ವಸ್ತುಗಳನ್ನು ಗಮನಿಸಿ ಆಲಂಕಾರಿಕರು ಪಟ್ಟಿಮಾಡಿದರೋ, ಅಂತೂ ಇದು ಪರಸ್ಪರ ಪ್ರೇರಕವಾಗಿದ್ದಂತೂ ನಿಜ. ಕಾವ್ಯದ ವಸ್ತು 'ಮಹತಾಂ ಚ ಮಹಚ್ಚರಿಯತ್' ಆಗಿರಬೇಕು, ಪುರಾಣಪ್ರಸಿದ್ಧವಾಗಿರಬೇಕು ಇತ್ಯಾದಿಗಳನ್ನು ಕುರಿತು ಬೇಕಾದಷ್ಟು ಮಾತುಗಳು ಸಿಗುತ್ತವೆ. ಸಂಸಾರವೆಂಬ ವಿಷವೃಕ್ಷದ ಅಮೃತೋಪಮ ಫಲವಾದ ಕಾವ್ಯದ ವಸ್ತು ಮಹತ್ತಾದನ್ನು ಬಿಟ್ಟು ಬೇರೆ ಆಗಿರಬೇಕೆಂದು ಅವರು ಹೇಗೆ ತಾನೆ ಯೋಚಿಸಿಯಾರು? ಲಾಕ್ಷಣಿಕ ಗ್ರಂಥಗಳಲ್ಲಲ್ಲದೆ ಕವಿಗಳೂ ತಮ್ಮ ಕಾವ್ಯಗಳಲ್ಲಿ ತಾವು ಯಾವ ವಸ್ತುಗಳನ್ನು ಕುರಿತು ಬರೆಯುತ್ತಿದ್ದೇವೆಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ. 'ಪುರಾಣಮಿತ್ಯೇವ ನ ಸಾಧು ಸರ್ವಂ' ಎಂದು ಅಲ್ಲಲ್ಲಿ ಹೊಸ ವಸ್ತುವನ್ನಾರಿಸುವಾಗ ಘೋಷಣೆಗಳಿರಬಹುದು! ಆದರೆ ಈ ಎಲ್ಲ ಕವಿಗಳ ದೃಷ್ಟಿಯಲ್ಲಿ ಸಾಹಿತ್ಯದ ಉದ್ದೇಶ ಕೇವಲ ರಸಾನುಭವ; ಅದೇ ಸಾಹಿತ್ಯದ ಪರಮ ಪ್ರಯೋಜನ—'ಕಾವ್ಯಮಾನಂದಾಯ' 'ಕಾವ್ಯೇ ರಸಯಿತಾ ಸರ್ವೋ ನ ಬೋದ್ಧಾ ನ ನಿಯೋಗಭಾಕ್.'

ಈ ವಾಕ್ಯಗಳೇ ಕನ್ನಡ ವಿಮರ್ಶೆಯ ಮೊದಲ ಪಾಠವಾಗಿದೆ. ಕನ್ನಡ ಸಾಹಿತ್ಯದಲ್ಲಿ ಅನೇಕ ಕವಿಗಳು ಹಿಂದಿನ ಕಾವ್ಯಗಳ ವಿಮರ್ಶೆ ಮಾಡುವ ಕೆಲವು ಮಾತುಗಳನ್ನಾಡಿದ್ದಾರೆ. ತಮ್ಮ ಗ್ರಂಥಗಳನ್ನು ಪರೀಕ್ಷಿಸುವವರಿಗೆ ಎಂಟೆರ್ದೆಯಿರಬೇಕೆಂದು ಹೇಳಿ ಸರಸ್ವತೀ ದ್ರೋಹರ ಉಪಹಾಸ ಮಾಡಿದ್ದಾರೆ. ಇಷ್ಟು ಬಿಟ್ಟರೆ ಬೇರೇನೂ ಸಿಗುವುದಿಲ್ಲ. ವಿಮರ್ಶೆ ಒಂದು ಶಾಸ್ತ್ರವಾಗಿ ಬೆಳೆದ ಮೇಲೆಯೇ ಅದರ ಸ್ವರೂಪ ಸರಿಯಾಗಿ ಗೋಚರಿಸುವುದು. ಸುಮಾರು ಐವತ್ತು ವರ್ಷಗಳ ಕನ್ನಡ ವಿಮರ್ಶೆಯ ಇತಿಹಾಸವನ್ನು

ಪರಿಶೀಲಿಸಿದಾಗ ರೂಪನಿಷ್ಠೆ ಆಶಯನಿಷ್ಠೆಗಳೆರಡೂ ಇರುವುದು ಕಂಡ ವಿಚಾರ. ಆಶಯ ನಿಷ್ಠೆಯಲ್ಲಿ ಪ್ರತಿಗಾಮಿ ಧೋರಣೆಯ ಬೆಳವಣಿಗೆಯು ವಿಮರ್ಶೆಯ ದಾರಿ ತಪ್ಪಿಸಿರು ವುದನ್ನು ಕಾಣಬಹುದು. ಈ ಮಾತು ನವೋದಯ ಮತ್ತು ನವ್ಯ ವಿಮರ್ಶೆಗಳೆರಡಕ್ಕೂ ಅನ್ವಯಿಸುತ್ತದೆ.

ಕನ್ನಡಕ್ಕೆ ಕಾವ್ಯರಚನೆಯ ರೀತಿನೀತಿಗಳು ಸಂಸ್ಕೃತದಿಂದ ಬಂದರೆ ವಿಮರ್ಶೆಯ ರೀತಿ ನೀತಿಗಳು ಇಂಗ್ಲಿಷಿನಿಂದ ಬಂದವು. ಹಳೆಯ ಕಾವ್ಯರಚನೆಯ ವಸ್ತು, ರೀತಿಯನ್ನೆಲ್ಲ ಅನಾಮತ್ತಾಗಿ ಬಿಟ್ಟುಕೊಟ್ಟು ಹೊಸ ಕಾವ್ಯದ ರಚನೆಯಲ್ಲಿ ತೊಡಗಿದ ನವೋದಯರು ತಮ್ಮ ರಚನೆಗಳನ್ನು ಹುರಿದುಂಬಿಸುವ, ಹಳೆಯದನ್ನು ಮೆಚ್ಚುವ, ವಿಮರ್ಶೆಯ ಶಾಸ್ತ್ರ ವೊಂದನ್ನು ಕಟ್ಟಿಕೊಳ್ಳಲಾರಂಭಿಸಿದರು. ಪ್ರಾಸವನ್ನು ತೊರೆದು, ಹೊಸ ಹೊಸ ರೂಪ ಗಳನ್ನೂ ಹೊಸ ಭಾಷೆಯನ್ನೂ ರೂಪಿಸಿಕೊಳ್ಳಬೇಕಾಗಿದ್ದ ಪ್ರಯೋಗಶೀಲತೆಯ ಕಾಲ ದಲ್ಲಿದ್ದ ನವೋದಯರು, ಕವಿಯು ಹೇಳಬೇಕಾದ್ದನ್ನು ಎಷ್ಟು ಚೆನ್ನಾಗಿ ಹೇಳಿದ್ದಾನೆ ಎಂಬುದರ ಕಡೆಗೇ ಹೆಚ್ಚು ಗಮನಕೊಟ್ಟರು. ನಿಸರ್ಗ, ಅಲ್ಪವೆಂದು ಪ್ರಾಚೀನರು ತ್ಯಜಿಸಿದ್ದ ವಸ್ತುಗಳು, ಇವನ್ನು ಕುರಿತು ಕಾವ್ಯ ಬರೆದರು. ನವೋದಯರು ಮರೆತಿದ್ದ ಸಾಮಾಜಿಕ ತುಡಿತವನ್ನು ಪ್ರಗತಿಶೀಲರು ಆರಿಸಿಕೊಂಡಾಗ ನವೋದಯ ವಿಮರ್ಶಕ ರನೇಕರು ತೀವ್ರವಾದ, ಸುಸಂಸ್ಕೃತ ಪ್ರತಿಭಟನೆಯನ್ನು ಮುಂದಿಟ್ಟರು. ರಮ್ಯಪ್ರಜ್ಞೆ ಯನ್ನು ವಿರೋಧಿಸಿ, ಸಮಾಜ ಸಂಸ್ಕರಣ ಸಾಹಿತ್ಯದ ಗುರಿಯಾಗಬೇಕೆಂದು ಹೊರಟ ಪ್ರಗತಿಶೀಲರು, ಸಾಮಾಜಿಕ ಅನ್ಯಾಯಗಳಿಗೆ ಗುರಿಯಾದವರ ಬಗ್ಗೆ ರಮ್ಯಕಥೆಗಳನ್ನೇ ಬರೆದರು. ಅದರ ನಿವಾರಣೆಯ ಬಗ್ಗೆ ತಾತ್ವಿಕ ಚಿಂತನೆ ಅವರಿಂದ ಸಾಧ್ಯವಾಗಲಿಲ್ಲ.

ಸಾಹಿತ್ಯನಿರ್ಮಿತಿಯ ಬಗ್ಗೆ ಅಗಾಧ ಗೌರವವಿದ್ದ ಕಾಲದಲ್ಲಿ, ಸಾಹಿತಿಗಳೇ ವಿಮರ್ಶೆ ಎಂದರೇನು, ವಿಮರ್ಶಕನ ಗುಣದೋಷಗಳೇನು, ವಿಮರ್ಶೆ ಹೇಗೆ ಮಾಡಬೇಕು ಎಂಬುದರ ಬಗ್ಗೆ ಪುಸ್ತಕಗಳನ್ನು ಬರೆದು ಆದರ್ಶ ವಿಮರ್ಶೆಯ ಕಲ್ಪನೆಯನ್ನು ಮಾಡಿ ಕೊಟ್ಟರು. ಇದಕ್ಕೆ ತಕ್ಕಂತೆ ವಿಮರ್ಶಕರು ಆದರ್ಶ ಸಾಹಿತ್ಯವನ್ನು ಊಹಿಸಿ ಇತರ ಕೃತಿಗಳ ಬಗ್ಗೆ ವ್ಯಾಖ್ಯಾನಿಸಿದರು. ರಸಗ್ರಹಣ, ಉನ್ಮೀಲನ ಇತ್ಯಾದಿ ಫಾರ್ಮುಲಾಗಳು ವಿಮರ್ಶೆಯು ಮಾಡಬೇಕಾಗಿದ್ದ ಇನ್ನೊಂದು ಕೆಲಸವನ್ನು ಮರೆಮಾಚಿದವು. ಸಾಹಿತ್ಯದ ಮೂಲ ಹಿತಾಸಕ್ತಿಗಳನ್ನು ಕಾಣದ ಈ ವಿಮರ್ಶಕರು, ವಿಮರ್ಶೆ ಸಾಹಿತ್ಯಕ್ಕೆ ನೀಡ ಬೇಕಾಗಿದ್ದ ಹೊಸ ಮಾರ್ಗದ ಬಗ್ಗೆ ಕಣ್ಣುಮುಚ್ಚಿದರು. ಹಿಂದಿನ ಸಾಹಿತ್ಯ ಇದು ವರೆಗೂ ಯಾವ ಆಶೋತ್ತರಗಳನ್ನು ಮುಂದಿಟ್ಟಿದೆ, ನವೋದಯ ಸಾಹಿತ್ಯವೂ ಯಾರ ಅನುಭವಗಳನ್ನು ಕುರಿತು ಹೇಳುತ್ತಿದೆ ಎಂಬ ವಿವೇಚನೆಯ ಅಭಾವ ನವೋದಯ ವಿಮರ್ಶೆಯಲ್ಲಿ ಕಾಣುತ್ತದೆ.

ನವೋದಯ ಕಾವ್ಯಮಾರ್ಗವನ್ನೂ ವಿಮರ್ಶಾಮಾರ್ಗವನ್ನೂ ಅಲ್ಲಗಳೆದು ಹೊರಟ ನವ್ಯರು ಹೊಸತೊಂದು ವಿಮರ್ಶಾಪದ್ಧತಿಯನ್ನು ಬೆಳೆಸಿಕೊಂಡರು. ತಾವು ಸಾಹಿತ್ಯದಲ್ಲಿ ಯಾವ ಆಶಯಗಳಿಗೆ ಪ್ರಾಧಾನ್ಯ ಕೊಟ್ಟಿದ್ದರೋ ಅವನ್ನು ವಿಮರ್ಶೆ ಗಮನಿಸಬೇಕೆಂದು

ಹೇಳಿ, ಅವುಗಳನ್ನು ಸೂತ್ರಸಿದ್ಧಾಂತಗಳಾಗಿ ರೂಪಿಸಿದರು. ಸಾಕ್ಷಿಪ್ರಜ್ಞೆ, ಮಣ್ಣಿನವಾಸನೆ, ಅನಾಥಪ್ರಜ್ಞೆ, ಆತ್ಮಶೋಧನೆ, ಅನುಭವಿಸೋದು, ಬದುಕೋದು ಇತ್ಯಾದಿಯೆಲ್ಲವೂ ಸಾಹಿತ್ಯದ ಸಾಮಾಜಿಕ ಹಿನ್ನೆಲೆಯನ್ನು ಸರಿಯಾಗಿ ಅರ್ಥೈಸದೆ, ಬರೀ ಸಾಹಿತಿಗಳ ಪಕ್ಷ ದಿಂದ ಬಂದವು. "ಸಾಹಿತ್ಯ ಸ್ವಯಂಸಂಪೂರ್ಣವಾದ, ಸ್ವಯಂಸಿದ್ಧವಾದ ಮೌಲ್ಯ, ಅದರ ಸಮರ್ಥನೆಗೆ ಸಾಹಿತ್ಯೇತರವಾದ ಯಾವ ಪ್ರಮಾಣವೂ ಬೇಡ" ಎಂದೆಲ್ಲ ಹೇಳಿ, ಸಾಹಿತ್ಯಕ್ಕೆ ದಿಕ್ಕು ತಪ್ಪಿಸಿದ ಅಡಿಗರೇ ವಿಮರ್ಶೆಗೂ ದಿಕ್ಕು ತಪ್ಪಿಸಿದರು. ಸಾಹಿತ್ಯೇತರ ವಾದ ಪ್ರಮಾಣ ಯಾಕೆ ಬೇಡ? ಸಾಹಿತ್ಯ ಯಾವತ್ತೂ ಮನುಷ್ಯನ ಆರ್ಥಿಕ ವ್ಯವಸ್ಥೆಯನ್ನವಲಂಬಿಸಿಯೇ ಪರಿಗಣಿತವಾಗುವ, ಅದರ ಒಂದು ಭಾಗ ಮಾತ್ರ. ನಮ್ಮ ದೇಶದ ಸಾಮಾಜಿಕ ವ್ಯವಸ್ಥೆಯ ಬೆಳವಣಿಗೆಯೊಂದಿಗೇ ನಮ್ಮ ಸಾಹಿತ್ಯದ ಬೆಳವಣಿಗೆಯೂ ಸೇರಿದೆ. ಸಾಮಾಜಿಕ ಚರಿತ್ರೆ, ಸಾಹಿತ್ಯಕ ಚರಿತ್ರೆ ಬೇರೆ ಬೇರೆಯಾಗಿಲ್ಲ. ರಾಜಶಾಹಿ ಇಲ್ಲವೆ ಬಂಡವಾಳಶಾಹಿ ಇವನ್ನು ಪೋಷಿಸುವ ಬರೆಹಗಳೇ ನಮ್ಮಲ್ಲಿ ಬಂದುದಕ್ಕೆ ಕಾರಣ ಇದು. ಸಾಹಿತ್ಯ ಯಾವತ್ತೂ ತನ್ನ ಕಾಲದ ವ್ಯವಸ್ಥೆಯಿಂದ ಬದ್ಧವಾಗಿದೆ. ಅದು ಸ್ವಯಂಭೂ ಅಲ್ಲ. ವಿಶ್ರಾಂತಿಯ ಕೈಗೆಲಸವಲ್ಲ. ಅದೊಂದು ಆರ್ಥಿಕ ಚಟುವಟಿಕೆ. ಸಾಹಿತ್ಯವನ್ನು ಬರೀ ಸಾಹಿತ್ಯಿಕವಾಗಿ ನೋಡಲು ಸಾಧ್ಯವಿಲ್ಲ. ಕ್ರಿಸ್ಟೋಫರ್ ಕಾಡ್‌ವೆಲ್ ಹೇಳುವ ಹಾಗೆ

> "Poetry is written in language . . . language is a social product, the instrument where by men communicate and persuade each other; thus the study of poetry's sources cannot be seperated from the study of society" (*Illusion and Reality*, Introduction).

ಸಾಹಿತ್ಯ ಮಣ್ಣಿನವಾಸನೆಯಿಂದಿರಬೇಕು ಎಂಬ ಸಿದ್ಧಾಂತಕ್ಕೂ ಮೇಲಿನ ಮಾತು ಗಳು ಅನ್ವಯಿಸುತ್ತವೆ. ಸಾಹಿತಿ ತಾನು ಬದುಕುತ್ತಿದ್ದ ವ್ಯವಸ್ಥೆಯನ್ನು ಒಪ್ಪಿಕೊಂಡೇ ಸಾಹಿತ್ಯ ಬರೆದಿರುವುದು, ನಮ್ಮ ಸಂದರ್ಭದಲ್ಲಿ ಹೇಳದಿದ್ದರೂ ತಿಳಿಯಬಲ್ಲಂಥ ವಿಚಾರ. ರಾಜಶಾಹಿಯಲ್ಲಿನ ಲೇಖಕ, ಬಂಡವಾಳಶಾಹಿಯಲ್ಲಿನ ಲೇಖಕ ತಮ್ಮ ತಮ್ಮ ವ್ಯವಸ್ಥೆ ಒದಗಿಸಿದ ಪ್ರಜ್ಞೆಗೆ ತಕ್ಕಂತೆ, ಅದನ್ನು ಒಪ್ಪಿಕೊಂಡು ಸಾಹಿತ್ಯ ರಚಿಸುತ್ತಾರೆ. ಅವರವರ ಮಣ್ಣಿನವಾಸನೆ ಅವರವರ ಕೃತಿಗಳಲ್ಲಿ ಮೂಡುತ್ತದೆ!

ಸಾಹಿತ್ಯ ಜೀವನದ ಗತಿಬಿಂಬ, ನಿಜ. ಆದರೆ ಸಾಹಿತ್ಯ ಯಾವ ಸಮಾಜದ ಗತಿ ಯನ್ನು ಯಾರ ಮತಿಯಿಂದ ಬಿಂಬಿಸಿದೆ ಎಂಬುದರ ಅರಿವನ್ನು ಈ ಸಿದ್ಧಾಂತ ಮೈಗೂಡಿಸಿ ಕೊಳ್ಳಲಿಲ್ಲ. ಸಾಹಿತ್ಯ ಬರೀ ಪ್ರತಿಭಾವಿಲಾಸವಲ್ಲ, ವ್ಯವಸ್ಥೆಯ ಕೂಸು ಎಂಬುದನ್ನು ಎಲ್ಲ ವಿಮರ್ಶಕರೂ ಗ್ರಹಿಸಿ, ತಾವು ರೂಪಿಸಿದ ಸಿದ್ಧಾಂತಗಳನ್ನು ಆ ಗ್ರಹಿಕೆಯ ಮೇಲೆ ನಿಲ್ಲಿಸಿ, ಸಾಹಿತ್ಯವನ್ನು ವಿಮರ್ಶಿಸಿದ್ದರೆ ನಮ್ಮ ಸಾಹಿತ್ಯ, ವಿಮರ್ಶೆಗಳ ಹಣೆಬರಹವೇ ಬೇರೆಯದಾಗಿರುತ್ತಿತ್ತು. ಅನುಭವಗಳಿಗೆ "ಮಾತುಗಳಲ್ಲಿ ರೂಪುಕೊಡುವಾಗ ಸಾಮಾಜಿಕ,

ಆರ್ಥಿಕ ಪ್ರಭಾವ ಲೆಕ್ಕಿಸದ, ಕಲೆಯನ್ನು ಕುರಿತ ಅಪಾರವಾದ ಗೌರವ”ವುಳ್ಳ ಅಪಾಯಕಾರಿ ಧೋರಣೆಯನ್ನು ನಮ್ಮ ವಿಮರ್ಶಕರು ಹೊಂದಿ, ವಿಮರ್ಶೆಯ ಕ್ಷೇತ್ರವನ್ನು ಮೊಟಕುಗೊಳಿಸಿದ್ದಾರೆ.

ನವ್ಯವಿಮರ್ಶೆ, ಆಶಯನಿಷ್ಠೆಗೆ ಸಾಮಾಜಿಕಪ್ರಜ್ಞೆಗೆ ಮೊದಲ ಸ್ಥಾನ ಕೊಡುತ್ತದೆ ಎಂದು ನವ್ಯರೆಲ್ಲರೂ ಕಹಳೆಯೂದಿದ್ದಾರೆ. ಆದರೆ ಅವರು ಮೆಚ್ಚುವ ಕೃತಿಯ ಭಾಗ ಎಂಥದ್ದು? ಅವರು ಸಮರ್ಥಿಸುವ ಧೋರಣೆ ಯಾವುದು? ಗತಿಸ್ಥಿತಿಯಂಥ ಕಾದಂಬರಿಯ ಆಶಯ ಅನಂತಮೂರ್ತಿಯಂಥವರಿಗೆ ಹುಚ್ಚುಹಿಡಿಸಿ, ಮನಸ್ಸನ್ನು ಆವರಿಸಿ, ಗಾಢವಾಗಿ ಕಲಕಿ, ನಮ್ಮ ಸಮಕಾಲೀನತೆಯನ್ನು ಹೊಸದಾಗಿ ತೆಗೆದು ತೋರಿಸಿತು (ಸನ್ನಿವೇಶ : 'ಈಚಿನ ಸಾಹಿತ್ಯದ ಬಗ್ಗೆ') ಎಂದ ಮೇಲೆ ನವ್ಯವಿಮರ್ಶೆಯ ಆಶಯನಿಷ್ಠೆಯ ಒಲವು ಯಾವ ಕಡೆಗಿದೆ ಎಂಬುದು ವೇದ್ಯವಾಗುತ್ತದೆ. ಬೂರ್ಜ್ವಾವಿಕ್ಷಿಪ್ತತೆಯ ವೈಭವೀಕರಣ ನಮ್ಮ ವಿಮರ್ಶಕರಿಗೆ ಹುಚ್ಚುಹಿಡಿಸಿದೆ. ಅಂತರಂಗಶೋಧನೆಯ ಹೆಸರಿನಲ್ಲಿ, ಅನುಭವಿಸುವ, ಬದುಕುವ ನೆಪದಲ್ಲಿ ನಮ್ಮ ಸಾಹಿತಿಗಳು ಬೂರ್ಜ್ವಾವ್ಯವಸ್ಥೆಯ ವಿಕ್ಷಿಪ್ತಸ್ಥಿತಿಗಳನ್ನು ಅದ್ಭುತವಾಗಿ ವರ್ಣಿಸುತ್ತಾರೆ. ಇವರ ಕೆಲಸ “to idealise the negation of the bourgeois mode of life.” ನವ್ಯ ಸಾಹಿತಿಗಳು ಮಾಡುತ್ತಿರುವ ಇದನ್ನೇ ಅವರ ಸಾಮಾಜಿಕಪ್ರಜ್ಞೆ ಎನ್ನುತ್ತಿದ್ದೇವೆ. ಗತಿಸ್ಥಿತಿ, ಹಳದಿಮೀನು, ಬಿರುಕು, ಇವುಗಳೂ ಸೇರಿ ಮುಕ್ಕಾಲು ನವ್ಯಸಾಹಿತ್ಯ ಮಾಡಿರುವುದು ಈ ಕೆಲಸವನ್ನೇ. ಬೂರ್ಜ್ವಾ ವ್ಯವಸ್ಥೆಯ ಹತ್ತು ಭಾಗದ ಸ್ವಾರ್ಥ, ಕೊಳಕು, ಆಡಂಬರ, ಧೂರ್ತಕ್ಕೆ, ಯಾಂತ್ರಿಕತೆಗಳನ್ನು ಮೋಹಕವಾಗಿ ಬಳಸುತ್ತಾರಲ್ಲ, ಇದೇ ಬೂರ್ಜ್ವಾ ವ್ಯವಸ್ಥೆಯಲ್ಲಿ ನರಳುತ್ತಿರುವ ಮಿಕ್ಕ ತೊಂಬತ್ತು ಭಾಗ ಇವರ ಕಣ್ಣಿಗೇಕೆ ಬೀಳುವುದಿಲ್ಲ? ಬೂರ್ಜ್ವಾ ಸಮಾಜದ ವಿಕ್ಷಿಪ್ತತೆಯನ್ನು ವರ್ಣಿಸಿದ್ದರಿಂದ ಅವರಿಗೆ ಆ ವ್ಯವಸ್ಥೆಯ ಬಗ್ಗೆ ವಿರೋಧವಿದೆ ಎಂದರ್ಥವಲ್ಲ. ನವ್ಯರಿಗೆ ಬೂರ್ಜ್ವಾಮೌಲ್ಯಗಳ ಬಗ್ಗೆ, ಅಭಿರುಚಿಗಳ ಬಗ್ಗೆ, ಸೋಗುಗಳ ಬಗ್ಗೆ ಅಸಮಾಧಾನವಿದೆ, ಅಸಹ್ಯವಿದೆ. ಆದರೆ ಬೂರ್ಜ್ವಾ ಸಾಮಾಜಿಕ ವ್ಯವಸ್ಥೆಯ ಅಡಿಪಾಯವಾಗಿರುವ ಆರ್ಥಿಕ ತತ್ವದ ಬಗ್ಗೆ ಇವರ ಅಭ್ಯಂತರವಿಲ್ಲ. ಅದರ ಬಗ್ಗೆ ಪ್ರತಿಭಟನೆ ಸಾಹಿತ್ಯದಲ್ಲಿ ಎಲ್ಲೂ ಕಂಡಿಲ್ಲ. ಆ ವಿಕ್ಷಿಪ್ತತೆಯ ನಿವಾರಣೆಗಿರುವ alternateಅನ್ನು ಇವರು ತಿರಸ್ಕರಿಸುವುದರ ಮೂಲಕ ಮಾನವ ಚರಿತ್ರೆಯಲ್ಲಿ ಘಟ್ಟಗಳ ಅನಿವಾರ್ಯ ಬೆಳವಣಿಗೆಯನ್ನು ಒಪ್ಪದೆ, ಅಚಾರಿತ್ರಿಕ ದೃಷ್ಟಿಯನ್ನು ಪ್ರದರ್ಶಿಸಿದ್ದಾರೆ. ತಾವೂ ಬದುಕುತ್ತಿರುವ ಬೂರ್ಜ್ವಾ ಸಮಾಜದ ಬಗ್ಗೆ ಇವರೆಲ್ಲರಿಗೂ ಗುಟ್ಟಾಗಿ ಗೌರವ, ಸಮ್ಮತಿಗಳಿವೆ; ಅದರ alternate ಒಪ್ಪಿಕೊಳ್ಳಲು ಭಯ, ಅಸಮ್ಮತಿಗಳಿವೆ. ಈ ವ್ಯವಸ್ಥೆಯ ಅಡಿಪಾಯವನ್ನು ಪ್ರಶ್ನಿಸದೆ ಇವರೆಷ್ಟೇ ಚಾತುರ್ಯದಿಂದ ಅದರ ಮೇಲು ರಚನೆಯ ವಿಕ್ಷಿಪ್ತತೆಗಳನ್ನು ವರ್ಣಿಸಿದರೂ, ಅದರಲ್ಲಿ ಬದಲಾವಣೆಗಳನ್ನು ಎಷ್ಟೇ ಉತ್ಸಾಹದಿಂದ ನಿರೀಕ್ಷಿಸಿದರೂ ಇಡೀ ದೃಷ್ಟಿಕೋನವೇ ಅವೈಜ್ಞಾನಿಕವಾಗಿಬಿಡುತ್ತದೆ. ನವ್ಯ ಸಾಹಿತ್ಯ ಹೀಗೆ ಮಾಡುವುದರ ಮೂಲಕ ಬೂರ್ಜ್ವಾ ವ್ಯವಸ್ಥೆಯನ್ನು ಪರೋಕ್ಷ

ವಾಗಿ ಪ್ರೋತ್ಸಾಹಿಸುತ್ತಿದೆ ಎಂಬ ಅಂಶವನ್ನು ಯಾವ ವಿಮರ್ಶಕನೂ ಯಾಕೆ ಗುರುತಿಸುತ್ತಿಲ್ಲ? ಇದನ್ನು ಗುರುತಿಸದೆ ವಿಮರ್ಶಕರೂ ಈ ಕಾರ್ಯಕ್ಕೆ ಸಮ್ಮತಿ ನೀಡಿ, ಅದರಲ್ಲಿ ಪಾಲ್ಗೊಂಡಿದ್ದಾರೆ. ಆಶಯನಿಷ್ಠೆಯಲ್ಲಿ ಪ್ರತಿಗಾಮಿ ಧೋರಣೆ ಎಂದು ನಾನು ಕರೆದಿದ್ದು ಇದನ್ನೇ.

ಹೊಸ ಆಶಯಕ್ಕೆ ಹೋರಾಡಿದ್ದಕ್ಕಿಂತ ತೀವ್ರವಾಗಿ ಭಾಷೆರೂಪಗಳಿಗೆ ಹೋರಾಟ ನಡೆಸುವುದು ಯಾವುದೇ ಸಾಹಿತ್ಯಕ ಚಳುವಳಿಯ ಆಭಾಸಗಳಲ್ಲೊಂದು. ವಿಮರ್ಶೆಯಲ್ಲಿ ರೂಪನಿಷ್ಠೆಗೆ ಸಲ್ಲಬೇಕಾದ್ದಕ್ಕಿಂಥ ಹೆಚ್ಚು ಸ್ಥಾನವನ್ನು ಕೊಡುವುದು ಅದನ್ನು ಅಡ್ಡ ದಾರಿಗೆಳೆದಂತೆ. ಈಗಲೂ ಒಂದು ಕೃತಿಯಲ್ಲಿ ನಮ್ಮ ವಿಮರ್ಶಕರ ಕಣ್ಣನ್ನು ಮೊದಲು ಸೆಳೆಯುವುದು ಮನೋಹರವಾದ ಸಾಲುಗಳು. ಅದರ ಸಾಮಾಜಿಕ ಆಶಯ, ತೀವ್ರತೆಗಳನ್ನು ಮರೆತುಬಿಟ್ಟು ವಚನಗಳ ಒಂದೊಂದು ಪದವನ್ನೂ ಹಿಡಿದು ಚಪ್ಪರಿಸಿ, ಚಪ್ಪರಿಸಿ ರೋಮಾಂಚನಗೊಳ್ಳುವುದು ವಿಮರ್ಶೆಯ ಒಂದು ಫ್ಯಾಷನ್ನಿಯಾಗಿದೆ. ರಾಮಾನುಜನ್ನರ ಕಾವ್ಯದ ಆಶಯದ ಬಗ್ಗೆ ಇರಲಿ, ಅವರ ಪದವಿನ್ಯಾಸದ ಬಗ್ಗೆ ಅಪಾರ ಹೊಗಳಿಕೆಯಿದೆ. ನಮ್ಮ ವಿರ್ಮಶಕರ ರೂಪನಿಷ್ಠೆ ಅಡಿಗರ 'ಭೂತ'ಕ್ಕೆ ರಾಶಿಕುಂಡಲಿ ತಯಾರಿಸುವಷ್ಟು ಅತಿರೇಕಕ್ಕೆ ಹೋಗಿದೆ (ಎಚ್. ಎಂ. ಚನ್ನಯ್ಯ : ಜಿಜ್ಞಾಸೆ 'ಕಾವ್ಯದಲ್ಲಿ ಅರ್ಥ').* ಬಹುಶಃ "We pay attention to externals when we donot know what else to do with a poem" ಎಂಬ ಮಾತು ಸರಿಯಾದದ್ದು.

ಸಾಹಿತ್ಯದಲ್ಲಿ ಕಲಾತ್ಮಕತೆಯ ಅಂಶವನ್ನು ಅಲ್ಲಗಳೆಯಬೇಕೆಂದು ಇದರರ್ಥವಲ್ಲ. ಹೇಳಬೇಕೆನಿಸಿದ್ದನ್ನು ಹೇಳಲು ಸಾಹಿತ್ಯಮಾಧ್ಯಮವನ್ನು ಆರಿಸಿಕೊಳ್ಳುವುದೇ ಕಲೆಯ ಶಕ್ತಿಯ ಬಗ್ಗೆ ನಮಗಿರುವ ನಂಬಿಕೆಯ ದ್ಯೋತಕ. ಕಾನೂನು, ಚರಿತ್ರೆಗಳನ್ನು ಹೇಳಲೂ ಮಾನವ ಸಾಹಿತ್ಯವನ್ನು ಬಳಸಿಕೊಂಡನೆಂಬುದನ್ನು ಗಮನಿಸಿದರೆ ಮನುಷ್ಯ ಸ್ವಭಾವದಲ್ಲೇ ಕಲೆಯ ಬಗ್ಗೆ ಇರುವ ಪಕ್ಷಪಾತ ಗೋಚರಿಸುತ್ತದೆ. ಸಾಹಿತ್ಯ ಜನತೆಯನ್ನು ಮುಟ್ಟಬೇಕಾದರೆ ಅದು ಕಲಾತ್ಮಕವಾಗಿ ಪರಿಪೂರ್ಣತೆಯನ್ನು ಪಡೆದಿರಬೇಕು. ಹಾಗಿದ್ದರೇ ಜನತೆ ಅದನ್ನು ತಮ್ಮದೆಂದು ಒಪ್ಪಿಕೊಳ್ಳುವುದು. ಆದರೆ ಭಾಷೆ, ಛಂದಸ್ಸು ಮುಂತಾದ ಅಭಿವ್ಯಕ್ತಿ ಸಾಧನಗಳು ತಮಗೆ ತಾವೇ ಕಲಾತ್ಮಕವಾಗಿರುವುದಿಲ್ಲ. ಅವು ಕೇವಲ ಕಚ್ಚಾವಸ್ತುಗಳಷ್ಟೆ. ಅವನ್ನು ಕಲೆಯನ್ನಾಗಿ ಮಾರ್ಪಡಿಸುವುದು ಅವು ಹೇಳುವ ಆಶಯವೇ. ಜೀವನಕ್ಕೂ ಸಾಹಿತ್ಯಕ್ಕೂ ಇರುವ ನಂಟೇ ಆಶಯಕ್ಕೂ ರೂಪಕ್ಕೂ ಇರುವುದು. ಮೊದಲನೆಯದು ಎರಡನೆಯದನ್ನು ನಿರ್ದೇಶಿಸುತ್ತದೆ. ಆದರೆ ಈ ಕಲೆ ಇಲ್ಲದೆ ಆಶಯ ಪರಿಣಾಮ ಬೀರುವುದಿಲ್ಲ. ಆಶಯವನ್ನು ಕಲೆಯನ್ನಾಗಿಸುವ ಮಾಧ್ಯಮ ರೂಪವೇ. ಈ ಮಾಧ್ಯಮವಿಲ್ಲದೆ ಕಲೆಗೆ ಅಸ್ತಿತ್ವವಿಲ್ಲ; ಆಶಯಕ್ಕೆ ಅಸ್ತಿತ್ವವಿಲ್ಲ. ಏಕೆಂದರೆ

* ಚನ್ನಯ್ಯನವರ ಅದೇ ಸಂಕಲನದಲ್ಲಿರುವ 'ಕವಿ ಮತ್ತು ಕಾಲಧರ್ಮ', 'ಪಂಪನಲ್ಲಿ ಸಾಮಾಜಿಕತೆಯ ಅರಿವು' ಇತ್ಯಾದಿ ಲೇಖನಗಳು ಅವರ ಇನ್ನೊಂದು ದೃಷ್ಟಿಕೋನವನ್ನು ಪ್ರತಿನಿಧಿಸುತ್ತವೆ.

"Ideas donot exist seperately from language." ಆದರೆ ಕೃತಿಯ ರೂಪಕ್ಕಿಂತ ಕೃತಿಯ ಆಶಯ ದೊಡ್ಡದು. ಕೃತಿಯ ಆಶಯಕ್ಕಿಂತ ಅದು ಬೀರುವ ಪರಿಣಾಮ ದೊಡ್ಡದು. ಇದನ್ನು ಮರೆತ ವಿಮರ್ಶೆಯ ದೃಷ್ಟಿ ಸಣ್ಣದಾಗುತ್ತದೆ.

ನಮ್ಮ ಸಾಹಿತ್ಯ ಜನಜೀವನದಿಂದ ದೂರವಾಗಲು ನಮ್ಮ ವಿಮರ್ಶೆಯಷ್ಟೇ ಕಾರಣ, ಸಾಹಿತ್ಯದ ಬಗ್ಗೆ ಸಾಹಿತಿಗಳಿಗಿರುವ ಭ್ರಮೆಗಳು. "ಎಂತಹ ವಿಷಮ ಪರಿಸ್ಥಿತಿಯಲ್ಲೂ ಮನುಷ್ಯನ ಮನಸ್ಸು ಸಮತೋಲನವನ್ನು ಕಳೆದುಕೊಳ್ಳದಿರಬೇಕಾದರೆ ಅವನು ಕಾವ್ಯಾಲಾಪ ಚತುರನಾಗಬೇಕು" ಎಂದು ಇವತ್ತಿಗೂ ನಮ್ಮ ಸಾಹಿತಿಗಳು ನಂಬಿರಬಹುದು (ಎಸ್. ವಿ. ಪರಮೇಶ್ವರಭಟ್ಟ: ಕನ್ನಡ ವಿಕ್ರಮೋರ್ವಶೀಯ : ಮುನ್ನುಡಿ). ಆದರೆ ವಾಸ್ತವವಾಗಿ ಹಾಗಾಗಿಲ್ಲ. ಹಾಗಾಗುವುದೂ ಇಲ್ಲ. ಹಸಿದ ಮನುಷ್ಯನಿಗೆ ಬೇಕಾದ ಮೊದಲ ಕಾವ್ಯ ಆಹಾರ. "ನಮ್ಮ ಲೇಖಕರು ನಮ್ಮ ಜನಜೀವನದ ಮೇಲೆ ಮಾಡುತ್ತಿರುವ ಪರಿಣಾಮದ ದೃಷ್ಟಿಯಿಂದ ಸಮಕಾಲೀನ ಐರೋಪ್ಯ ರಾಷ್ಟ್ರಗಳಿಗಿಂತ ಭಾರತದಲ್ಲೆ ಸಾಹಿತ್ಯ ಹೆಚ್ಚು ಪ್ರಭಾವಶಾಲಿಯಾಗಿದೆ" ಎಂದು ವಿಮರ್ಶಕರು ಬೆನ್ನುತಟ್ಟಿಕೊಳ್ಳಬಹುದು. (ಯು. ಆರ್. ಅನಂತಮೂರ್ತಿ 'ಸನ್ನಿವೇಶ') ಯಾವ ಜನಜೀವನದ ಮೇಲೆ? ಯಾವ ಪರಿಣಾಮ ? ಜನಜೀವನದ ಮೇಲೆ ಪ್ರಭಾವ ಬೀರುವಷ್ಟು ನಮ್ಮ ಸಾಹಿತ್ಯ ಜನರ ನಡುವೆ ನುಗ್ಗಿಯೂ ಇಲ್ಲ, ಅಲ್ಲಿ ಬೆಳೆದೂ ಇಲ್ಲ. ಸಮಾಜ ಮತ್ತು ಸಾಹಿತ್ಯಗಳ ಬಗ್ಗೆ ಇಂಥ ಅಭಿಪ್ರಾಯಗಳು ಬರಲು, ಒಬ್ಬನೇ ಕವಿಯ ಬಗ್ಗೆ ಸಾಧ್ಯತೆ ಮುಗಿದ ಕವಿ ಎಂದು, ಈಗಲೂ ಕಾವ್ಯದ ಗಡಿಗಳನ್ನು ವಿಸ್ತರಿಸುತ್ತಿರುವ ಕವಿ ಎಂದು, ಎರಡು ಭಿನ್ನ ಅಭಿಪ್ರಾಯಗಳು ಬರಲು ಮುಖ್ಯ ಕಾರಣ ಇದು : ನಮ್ಮ ಸಾಹಿತಿ ವಿಮರ್ಶಕರಿಗೆ ಸಮಾಜವನ್ನಾಗಲೀ, ಸಾಹಿತ್ಯವನ್ನಾಗಲೀ ವೈಜ್ಞಾನಿಕವಾಗಿ ಅರ್ಥೈಸಲು ಬೇಕಾದ ತಿಳುವಳಿಕೆಯನ್ನು ಪಡೆಯಲು ಮನಸ್ಸಿಲ್ಲ. ಈ ಹಿನ್ನೆಲೆಯನ್ನು ಪಡೆಯದೆ "ಬದಲಾಗಬೇಕಾದ ಕನ್ನಡ ಕಾವ್ಯಕ್ಕೆ ಬೇಕಾದ ಬದಲಿದ ಪರಿಸರ ಇದೆಯೆ? ಹಾಗಿದ್ದಾಗಲೂ ಕಾಲದ ಎಲ್ಲ ಸಂವೇದನೆಗಳನ್ನೂ ತನ್ನ ವೈಯಕ್ತಿಕ ಸಂವೇದನೆಗಳ ಆವೃತ್ತಿಯಲ್ಲಿ ಹಿಡಿಯಬಲ್ಲ ಕವಿ ಈಗ ಬರಬಲ್ಲನೆ?" ಎಂದು (ಎನ್. ಎಸ್. ಲಕ್ಷ್ಮೀನಾರಾಯಣಭಟ್ಟ : ಹೊರಳುದಾರಿಯಲ್ಲಿ ಕಾವ್ಯ : 'ಹೊಸ ಕಾವ್ಯ – ಹೊಸ ತಿರುವು') ಸುಂದರವಾಗಿ ಪ್ರಶ್ನಿಸುವುದನ್ನು ಬಿಟ್ಟು ಹೆಚ್ಚಿನ ಜವಾಬ್ದಾರಿ ಕೆಲಸವನ್ನು ವಿಮರ್ಶೆ ಈಗ ಮಾಡಬೇಕಾಗಿದೆ. ಸಹೃದಯ, ರಸಾನುಭವ, ಬ್ರಹ್ಮಾನಂದ ಸೋದರ ಇತ್ಯಾದಿಗಳ ಬಗ್ಗೆ ಮಾತನಾಡಿ ಪ್ರಾಚೀನ ಕಾವ್ಯಮೀಮಾಂಸೆ ದಾರಿ ತಪ್ಪಿಸಿದರೆ, ನಿಸರ್ಗ, ಕಲೆ, ರಸಗ್ರಹಣ ಇತ್ಯಾದಿ ಹೇಳಿ ನವೋದಯ ವಿಮರ್ಶೆ, ದಾರಿತಪ್ಪಿಸಿದೆ. ನವ್ಯ ವಿಮರ್ಶೆ ಭಾಷೆ, ಲಯ, ಭಾರತೀಯತೆ, ಶೂದ್ರ-ಬ್ರಾಹ್ಮಣ, ಅನಾಥಪ್ರಜ್ಞೆ, ಸಂಕೀರ್ಣತೆ, ಹೊಸ ತಿರುವು, ಸೋಪಜ್ಞತೆ ಇತ್ಯಾದಿ ನೂರೆಂಟು ನಾನ್ಸೆನ್ಸ್‌ಗಳ ಬಗ್ಗೆ ಮಾತನಾಡಿ ವಿಮರ್ಶೆಯ ದಿಕ್ಕು ತಪ್ಪಿಸಿದೆ.

ಮನುಷ್ಯನು ನಿಸರ್ಗದ ಮೇಲೆ ಸಾಧಿಸಿದ ವಿಜಯದ ಘಟ್ಟಗಳನ್ನು, ಸಾಮಾಜಿಕ

ವ್ಯವಸ್ಥೆಯಿಂದ ಮನುಷ್ಯನ ಪ್ರಜ್ಞೆ ನಿರ್ಧಾರವಾಗುವುದನ್ನು, ಅವುಗಳ ಗುಣದೋಷಗಳನ್ನು ಬಿಂಬಿಸುವುದು ಸಾಹಿತ್ಯದ ಕೆಲಸ. ಇವನ್ನು ಸಾಹಿತ್ಯ ನಿರ್ವಹಿಸಿದೆಯೇ ಇಲ್ಲವೇ ಎಂಬುವನ್ನು ಚಾರಿತ್ರಿಕವಾಗಿ ಗುರುತಿಸುವುದು ಸಾಹಿತ್ಯ ವಿಮರ್ಶೆಯ ಕೆಲಸ. ಕಾಲ ಕಾಲಕ್ಕೆ ಸಾಹಿತ್ಯಶಕ್ತಿಯನ್ನು ಹೀಗೆ ಸಿದ್ಧಪಡಿಸುವುದು ವಿಮರ್ಶೆಯ ಕೆಲಸ. ನಮ್ಮ ಸಾಹಿತ್ಯ ಈ ಕೆಲಸವನ್ನು ಮಾಡದೆ ತಪ್ಪುಮಾಡಿದ್ದರೆ, ತಮ್ಮ ಪಾಲಿನ ಕೆಲಸಗಳನ್ನು ಮಾಡದೆ ಸಾಹಿತ್ಯ ಚರಿತ್ರೆ, ವಿಮರ್ಶೆಗಳು ಕಡು ತಪ್ಪುಮಾಡಿವೆ. ನಾವು ನಿಂತ ನೆಲೆ ನಮ್ಮ ನಿಲುವುಗಳನ್ನು ರೂಪಿಸುತ್ತದೆ. ಬದುಕು, ಸಾಹಿತ್ಯಗಳ ಬಗ್ಗೆ ಇರುವ ನಮ್ಮ ತಿಳುವಳಿಕೆಯ ನೆಲೆ ನಮ್ಮ ವಿಮರ್ಶೆಯ ನಿಲುವುಗಳನ್ನು ರೂಪಿಸಿದೆ. ಸಮಾಜದ ಬಗ್ಗೆ ನಮ್ಮ ತಿಳುವಳಿಕೆಯ ನೆಲೆ ಬದಲಾಗದ ಹೊರತು ನಮ್ಮ ಸಾಹಿತ್ಯಿಕ ನಿಲುವುಗಳು ಬದಲಾಗುವುದಿಲ್ಲ. ಸಾಹಿತ್ಯದ ಬಗ್ಗೆ ನಮ್ಮ ತಿಳುವಳಿಕೆಯ ನೆಲೆ ಬದಲಾಗದ ಹೊರತು ನಮ್ಮ ವಿಮರ್ಶೆಯ ನಿಲುವುಗಳು ಬದಲಾಗಲು ಸಾಧ್ಯವಿಲ್ಲ. ಸಾಹಿತಿ-ಪಟ್ಟದ, ಬುದ್ಧಿಜೀವಿ ಪಟ್ಟದ ಸಂಭ್ರಮಗಳನ್ನು ಪೂರ್ಣವಾಗಿ ಕಳಚಿ, ಸಾಹಿತ್ಯ ಮಾಧ್ಯಮದಲ್ಲಿ ದುಡಿಯುವ ವಿಜ್ಞಾನವಾದಿಗಳಾಗುವ ದಿಕ್ಕಿನತ್ತ ಸಾಹಿತಿಗಳನ್ನು ಪ್ರೇರೇಪಿಸುವುದು ವಿಮರ್ಶೆಯ ಮೊದಲ ಕರ್ತವ್ಯವಾಗಿದೆ. ಈ ಕಾರ್ಯವನ್ನು ಮಾಡುವುದಕ್ಕೆ ವಿಮರ್ಶಕನು ಸಮಾಜದ, ಸಾಹಿತ್ಯದ ಬಗ್ಗೆ ತನ್ನ ತಿಳುವಳಿಕೆಯ ನೆಲೆಯನ್ನು ಮೊದಲು ಬದಲಾಯಿಸಿಕೊಳ್ಳಬೇಕಾದದ್ದು ಅತ್ಯಗತ್ಯ. ಆ ದಿಸೆಯಲ್ಲಿ ನಡೆಯುವ ವಿಮರ್ಶಾಪ್ರಯತ್ನಗಳನ್ನು ಅಸಾಹಿತ್ಯಿಕವೆಂದು ದೂರಿ, ಪ್ರತಿಗಾಮಿ ಪ್ರತಿಕ್ರಿಯೆಯನ್ನು ಸೂಚಿಸುವುದು ವಿಮರ್ಶಕನ ಅನಾರೋಗ್ಯವಾಗುತ್ತದೆ.

ವ್ಯವಸ್ಥೆಯ ಬಗ್ಗೆ ಸರಿಯಾದ ಪರಿಶೀಲನೆ ನಡೆಸಿ, ಅದನ್ನು ಸಾಹಿತ್ಯದಲ್ಲಿ ಚಿತ್ರಿಸಿ, ಅಲ್ಲೇ ಅದಕ್ಕೆ ಪರಿಹಾರಗಳನ್ನು ಸೂಚಿಸಿಬಿಟ್ಟಮಾತ್ರಕ್ಕೆ ಸಮಾಜ ಬದಲಾಗಿಬಿಡುವುದಿಲ್ಲ. ಪ್ರಗತಿಪರ ಸಾಹಿತ್ಯ ನಿರ್ಮಾಣಕ್ಕೆ ಸದಾ ಸ್ಫೂರ್ತಿ ಕೊಡಬಲ್ಲಂಥ, ಅದರಿಂದ ಪ್ರಯೋಜನ ಪಡೆಯಬಲ್ಲಂಥ, ರಾಜಕೀಯವಾಗಿ ಕ್ರಿಯಾಶೀಲವಾಗಿರುವಂಥ ರಂಗವೊಂದು ಈ ಸಾಂಸ್ಕೃತಿಕ ರಂಗಕ್ಕೆ ಬೆನ್ನೆಲುಬಾಗಿ ನಿಂತಿರಬೇಕಷ್ಟೆ. ಆ ರಂಗ, ತತ್ವವನ್ನು ಕ್ರಿಯೆಯಲ್ಲಿ ತೋರಿಸಿದರೆ, ಈ ರಂಗ ಕಲೆಯಲ್ಲಿ ತೋರಿಸಬೇಕು. ಆ ರಂಗವೇ ಇಲ್ಲದೆ ಇದು ಹೇಗೆ ಕೆಲಸ ಮಾಡುವುದು ಎಂಬ ಸಂಶಯ ಬರಬಹುದು. ಆದರೆ ಸಾಹಿತ್ಯದಂಥ ಶಕ್ತಮಾಧ್ಯಮ, ಮೊದಲು ಕ್ರಿಯೆಯನ್ನು ಪ್ರೇರೇಪಿಸುವ ಸೂಚಕ ಸಾಹಿತ್ಯವಾಗಿ ನಂತರ ಕ್ರಿಯೆಗೆ ಸಹಾಯಕ ಸಾಹಿತ್ಯವಾಗಿ ದುಡಿಯಬಲ್ಲದು. ಇವೆಲ್ಲ ಮಾತುಗಳು ನಮ್ಮ ರಂಗಭೂಮಿ, ಚಲನಚಿತ್ರ ಮಾಧ್ಯಮಗಳಿಗೂ ಅನ್ವಯಿಸುತ್ತವೆ. ಇದನ್ನು ಆಗ-ಮಾಡಿಸಬೇಕಾದ್ದು ವಿಮರ್ಶೆಯ ಕರ್ತವ್ಯ.

ರಾಜಕೀಯ ಸಿದ್ಧಾಂತವೊಂದನ್ನು ಸಾಹಿತ್ಯಕ್ಕೆ ಅನ್ವಯಿಸಿ ಬೀಸು ಹೇಳಿಕೆಗಳನ್ನು ನೀಡುವ ಪ್ರಯತ್ನ ಇದೆಂದು, ಸಾಹಿತ್ಯ-ವಿಮರ್ಶೆಯಲ್ಲಿ ಶಿಷ್ಟ ಸಂಪ್ರದಾಯಕ್ಕೆ ಸೇರಿದವರಿಗೆ, ನವ್ಯ ವಿದ್ವಾಂಸರಿಗೆ, ಸೋಗಿನ ಪ್ರಗತಿವಾದಿಗಳಿಗೆ ರೇಗಬಹುದು. ಆದರೆ

ಇದರಿಂದ ನಾನು ಏನನ್ನೂ ಕಳೆದುಕೊಳ್ಳುವುದಿಲ್ಲ. ಕಲೆಗೆ ಯಾವತ್ತೂ ರಾಜಕೀಯ ತತ್ವದ ನೆಲೆ ಅಗತ್ಯವೆಂಬುದು ನನ್ನ ದೃಢನಂಬಿಕೆ. ಪ್ರತಿ ನೂರು ವರ್ಷಗಳಿಗೊಮ್ಮೆ, ಯಾದರೂ ಸರಿ, ಒಬ್ಬ ವಿಮರ್ಶಕ ಹುಟ್ಟಿ ತನ್ನ ಹಿಂದಿನ ಇಡೀ ಸಾಹಿತ್ಯಿಕ ಪರಂಪರೆಯನ್ನು ಪುನರ್‌ಮೌಲ್ಯಮಾಪನ ಮಾಡಬೇಕೆಂದು ಎಲಿಯೆಟ್ ಸೂಚಿಸುತ್ತಾನೆ. ಆದರೆ ನಮ್ಮ ಸಾವಿರ ವರ್ಷಗಳ ಸಾಹಿತ್ಯದ ಪರಂಪರೆಯನ್ನು ತಾತ್ವಿಕವಾದ ನೆಲೆಯಿಂದ ಪರೀಕ್ಷಿಸಬಲ್ಲ ಒಬ್ಬ ವಿಮರ್ಶಕನಲ್ಲ, ಒಂದು ವಿಮರ್ಶನ ಪ್ರಜ್ಞೆಯೇ ಹುಟ್ಟಿಕೊಳ್ಳಬೇಕಾದ ಅಗತ್ಯವಿದೆ. ಈ ಅಗತ್ಯದ ತುರ್ತನ್ನು ಕಂಡುಕೊಂಡು ಕಾರ್ಯಶೀಲರಾಗುವುದು, ಸಾಹಿತ್ಯದ ದಿಕ್ಕನ್ನು ಬದಲಿಸುವುದು, ನನ್ನ ಪೀಳಿಗೆಯ ಸಾಹಿತ್ಯಾಸಕ್ತರ ವಿಮರ್ಶಕರ ನೈತಿಕ ಜವಾಬ್ದಾರಿಯಾಗಿದೆ.

ರಾ. ಶೇಷಶಾಸ್ತ್ರಿ

# ಬೀರಗೊಳು-ವೀರಗೊಳು-ರಣಗೊಳ್

ಶಿವಮೊಗ್ಗೆ ಜಿಲ್ಲೆ ಸೊರಬ ತಾಲ್ಲೂಕ್ ಕವಡಿ ಎಂಬಲ್ಲಿನ ವೀರಗಲ್ಲಿನ ಮೇಲೆ ದೊರೆಯುವ ಶಾಸನ ಪಾಠದಿಂದ[1] : "ಕನ್ನಡಿ ಕಾವೆಯನಾಯಕನೆಂಬುವನು ಹೋರಾಟವೊಂದರಲ್ಲಿ ಮಡಿಯುತ್ತಾನೆ. ಆಗ ಆತನ ತಮ್ಮ ಕನ್ನಡಿಯ ಕೇತಯನಾಯಕ ವೀರ ಭಟಗ್ಗೆ ಬೀರಗೊಳಿತ್ತಿ ಕಲ್ಲನಿರಿಸಿ ಕ್ರಿತಾರ್ಥನಾದ"—ಎಂಬುದಾಗಿ ತಿಳಿದುಬರುತ್ತದೆ. ಈ ಶಾಸನಕ್ಕೆ ಅನುವಾದವನ್ನು ಶ್ರೀ ರೈಸ್ ಅವರು ಈ ರೀತಿ ನೀಡುತ್ತಾರೆ[2] "His yuonger brother Kannadi Keteya Nayaka erected a biragol and set up this stone" ಎಂದು. ಡಾ॥ ಎಂ. ಚಿದಾನಂದ ಮೂರ್ತಿಗಳವರು ಈ 'ಬೀರಗೊಳ್'— ಎಂಬ ಪದವನ್ನು ವ್ಯಾಖ್ಯಾನಮಾಡದಿದ್ದರೂ, ಇದೂ ಸಹ 'ಬಾಳ್ಗಟ್ಟು' 'ನೆತ್ತರು ಕೊಡಗೆ' 'ಕಲ್ನಾಟ್ಟು'ಗಳ ಹಾಗೆಯೇ ದತ್ತಿಯನ್ನೇ ತಿಳಿಸುತ್ತದೆಯೆಂದು ಭಾವಿಸುತ್ತಾರೆ.[3]

ಈ 'ಬೀರಗೊಳ್' ಎಂಬ ಪದದ ಅರ್ಥದ ವಿವರಣೆಗೆ ವೀರರ ಆರಾಧನೆಯಲ್ಲಿ ಪ್ರಚಲಿತವಿದ್ದ, ಇರುವ ಕೆಲವಾರು ಸಂಪ್ರದಾಯಗಳನ್ನು ನೋಡಬೇಕಾಗುತ್ತದೆ.

'ರಣಧೀರ ರಾಮನಾಥ' ಪುಸ್ತಕದ ಅನುಬಂಧದಲ್ಲಿ ಶ್ರೀ ಮೈ. ಹೆ. ರಾಮಶರ್ಮರು ಕುಮ್ಮಟ ದುರ್ಗದಲ್ಲಿ ನಡೆಯುವ ಕುಮಾರರಾಮನ ಜಾತ್ರೆಯ ಬಗ್ಗೆ ಕೆಲವಾರು ವಿವರಣೆಗಳನ್ನು ನೀಡುತ್ತಾರೆ. ಅವುಗಳಲ್ಲಿ ಒಂದು ಈ ರೀತಿ ಇದೆ. "ವರ್ಷಕ್ಕೊಂದಾವರ್ತಿ ವೈಶಾಖ ಶುದ್ಧ ಪೂರ್ಣಿಮಿಯ ದಿವಸ ಮಾತ್ರ ಸುತ್ತಮುತ್ತಲಿನ ಗ್ರಾಮಸ್ಥರು ಸುಮಾರು ಸಾವಿರ ಜನ ಇಲ್ಲಿ ಜಾತ್ರೆ ನಡೆಸುತ್ತಾರೆ. ಆಗ ಎರಡು ಕೃತಕ ರುಂಡಗಳನ್ನು ಪೂಜಿಸುತ್ತಾರೆ. ಅವುಗಳಲ್ಲಿ ಒಂದು ಸುಮಾರು ಆರು ಮೈಲಿ ದೂರದಲ್ಲಿನ ಇಂದರಗಿ ಎಂಬ ಹಳ್ಳಿಯಿಂದಲೂ, ಇನ್ನೊಂದು ಆನೆಗೊಂದಿಯ ಬಳಿ ಇರುವ ಮಲ್ಲಾಪುರದಿಂದಲೂ ಬರುವುದೆಂದು ಹೇಳುವರು. ಜಾತ್ರೆಗಾಗಿ ಬಂದವರು ಕುರಿಗಳನ್ನು ಕಡಿದು ಜೋಳದೊಂದಿಗೆ ಬೇಯಿಸಿ ಊಟಮಾಡುತ್ತಾರಂತೆ. ಇದಕ್ಕೆ 'ವೀರ ಕೊಳ್' ಎಂದು ಹೆಸರು. ನಿಸ್ಸಂದೇಹವಾಗಿ ಇದು ವೀರ ರಾಮನಾಥನ ಆತ್ಮಯಜ್ಞದ ಸ್ಮರಣೆಗೆಂದೇ ಹೇಳಬೇಕು. ಹಾಗೆಯೇ ಹೊಸಪೇಟೆಗೆ ಪಶ್ಚಿಮ ಹೈದರಾಬಾದ್ ಸಂಸ್ಥಾನದಲ್ಲಿರುವ ಹುಲುಗಿ ಅಥವಾ ಮುನಾರಾಬಾದ್ ಎಂಬ ಊರಿನಲ್ಲಿ ವೈಶಾಖ ನವಮಿಯ ದಿವಸ ಒಂದು ಜಾತ್ರೆಯಾಗುತ್ತದೆ.

ಆಗಲೂ ಇದೇ ರೀತಿ ನಡೆಯುವುದೆಂದು ಹೇಳುತ್ತಾರೆ. ಅಲ್ಲಿ ಊಟಮಾಡುವ ಪದಾರ್ಥಕ್ಕೆ 'ಕುಮಾರಊಟ'ವೆಂದು ಹೆಸರಂತೆ. ಅವರು ಹೇಳುವ ಕುಮಾರ ಎಂಬ ಪದವು ಕುಮಾರ ರಾಮನ ಹೆಸರನ್ನೆ ಸೂಚಿಸುವುದೆಂದೇ ತಿಳಿಯಬೇಕು."[4]

ಸುಮಾರು ಒಂದು ಅಥವಾ ಎಡನೆಯ ಶತಮಾನದ್ದೆಂದು ವಿದ್ವಾಂಸರಿಂದ ಪರಿಗಣಿಸಲ್ಪಟ್ಟಿರುವ 'ಸಂಗಮ್ ಸಾಹಿತ್ಯ'ದಲ್ಲಿ, ವೀರಗಲ್ಲನ್ನು ಸ್ಥಾಪನೆ ಮಾಡಿದ ಮೇಲೆ, ಸಾಮಾನ್ಯವಾಗಿ ಬೆಳಗಿನ ಹೊತ್ತು, ಜಯಾಪೇಕ್ಷಿಗಳಾಗಿ, ಯುದ್ಧಕ್ಕೆ ಹೊರಡುವ ಮುನ್ನವೋ ಅಥವಾ ವೀರ ಆತ್ಮತೃಪ್ತಿಗಾಗಿಯೋ ವೀರಗಲ್ಲಿನ ಮುಂದೆ ಅನ್ನವನ್ನು ಹಾಕುತ್ತಿದ್ದರೆಂದೂ, ಈ ಅನ್ನವನ್ನು "ನಾಟ್ಟುಬಲಿ" ಎಂಬುದಾಗಿ ಕರೆಯುತ್ತಿದ್ದರೆಂದೂ ನಮಗೆ ವಿವರಗಳು ದೊರೆಯುತ್ತವೆ.[5]

ಇದೇ ಸಂದರ್ಭದಲ್ಲಿ ಆಂಧ್ರದ ರೆಡ್ಡಿ ರಾಜ ವಂಶದವರ ಕಾಲದಲ್ಲಿ (ಸು. ೧೩೨೫–೧೪೪೮) ಪ್ರಚಲಿತವಿದ್ದ ಇಂತಹದೇ ಒಂದು ಆಚರಣೆ ಗಮನಾರ್ಹವಾಗಿದೆ. ಶತ್ರುರಾಜರ ರಕ್ತ, ಮಾಂಸ, ಮೂಳೆಗಳೊಂದಿಗೆ ಬೇಯಿಸಿದ ಅನ್ನವನ್ನು ಭೂತಗಳಿಗೆ ತೃಪ್ತಿಯುಂಟಾಗಲೆಂದು ಯುದ್ಧದ ಅನಂತರದ ಕಾಲದಲ್ಲಿ ವಿಜೇತರಾದ ರಾಜರು ಆಚರಿಸುವ ಒಂದು ಸಂಪ್ರದಾಯ. ಇದನ್ನು 'ರಣಮುಕುಡುಪು' (ಯುದ್ಧದ ಊಟ) ಎಂಬುದಾಗಿ ಕರೆಯುತ್ತಿದ್ದರೆಂದು ತಿಳಿದುಬರುತ್ತದೆ.[6]

'ವೇಲು ಗೋಟಿ ವಾರಿ ವಂಶಾವಳಿ' ಎಂಬ ತೆಲಗು ಕೃತಿ ಈ ಬಗ್ಗೆ ನಮಗೆ ವಿಶೇಷವಾದ ಮಾಹಿತಿಯನ್ನು ಒದಗಿಸುತ್ತದೆ. ಶತ್ರುರಾಜರನ್ನು ಗೆದ್ದು ಪ್ರತಿಯೊಬ್ಬ ರೇಚೇರ್ಲ ವಂಶದ ದೊರೆಯೂ ಯುದ್ಧಾನಂತರ ಈ ಸಂಪ್ರದಾಯವನ್ನು ಆಚರಿಸುತ್ತಿದ್ದುದಾಗಿ ತಿಳಿದುಬರುತ್ತದೆ: ಅನೇಕಾನೇಕ ಅರಸರನ್ನು ಯುದ್ಧದಲ್ಲಿ ಕೊಂದು ಅವರ ತಲೆಗಳನ್ನು ಖಂಡಿಸಿ, ಸೆರೆ ಸಿಕ್ಕವರನ್ನು ಗಾಣಕ್ಕೆ ಹಾಕಿ ರಕ್ತ ತೆಗೆದು ಅದರಿಂದ ಅನ್ನವನ್ನು ಬಲಿಗಾಗಿ ಸಿದ್ಧಮಾಡುತ್ತಿದ್ದರು.[7]

ಅವರ ಪ್ರಕಾರ ಇದು ಒಂದು ಆಗಮಿಕ ವಿಧಿ. ಇದನ್ನು ಅರ್ಧರಾತ್ರಿಯ ವೇಳೆಯಲ್ಲಿ ಯುದ್ಧಭೂಮಿಯಲ್ಲಿ ಆಚರಿಸತಕ್ಕದ್ದು. ಈ ಬಲಿಯನ್ನು ತೆಗೆದುಕೊಂಡು ಹೋಗುವವನು ನಗ್ನನಾಗಿ, ವಿಭೂತಿಯನ್ನು ಮೈಗೆಲ್ಲಾ ಬಳಿದುಕೊಂಡು ಒಂಟಿಯಾಗಿ. ಶತ್ರುರಾಜರ ರಕ್ತಮಾಂಸಗಳಿಂದ ಮಾಡಿದ ಅನ್ನವನ್ನು ಶತ್ರುರಾಜರುಗಳ ಕಪಾಲಗಳಲ್ಲಿ ತುಂಬಿಕೊಂಡು ಹೋಗಬೇಕು. ಶಕ್ತಿದೇವತೆಗಳಿಗೆ ಸಂಬಂಧಿಸಿದ ಮಂತ್ರಗಳನ್ನು ಪಠಿಸುತ್ತಾ, ಶಾಕಿನೀ, ಡಾಕಿನೀ, ಕಾಳಿ, ಮಹಾಕಾಳಿ, ದಿಗಂಬರೀ, ಚಾಮುಂಡಾ, ಕಾಯನಿ ಭೈರವ, ವೀರಭದ್ರ, ರಣಪೋತುರಾಜು ಮುಂತಾದ ಕುಲಾಧಿಷ್ಠ ದೇವತೆಗಳನ್ನು ಆವಾಹನೆ ಮಾಡಿ ಅವರಿಗೆ ಅರ್ಪಿಸಬೇಕು.[8]

ಕೆಲವೊಮ್ಮೆ ಯುದ್ಧದಲ್ಲಿ ಗೆದ್ದ ಅರಸರು ಶತ್ರುರಾಜರುಗಳ ರಕ್ತದಿಂದ ತಮ್ಮ ತಂದೆ ತಾಯಿಗಳಿಗೆ ತಿಲೋದಕ ಪಿತೃ ತರ್ಪಣವನ್ನು ಮಾಡುತ್ತಿದ್ದರು.[9]

ವಿಜಯನಗರದ ಅರಸರ ಕಾಲದಲ್ಲಿ ಕ್ಷುದ್ರದೇವತೆಗಳಿಗೆ ನೀಡುತ್ತಿದ್ದ ಬಲಿಯನ್ನು

'ರಣಮು ಕುಡುಪು'—ಎಂದು ಆಂಧ್ರಪ್ರದೇಶದಲ್ಲಿ ಕರೆಯುತ್ತಿದ್ದರೆಂದು ತಿಳಿಯಬರುತ್ತದೆ.[10] ಆಂಧ್ರಪ್ರದೇಶದ ಸರಹದ್ದಿನಲ್ಲಿರುವ ಕೆಲವರು (ಕೋಲಾರ ಜಿಲ್ಲೆ) ಹಳ್ಳಿಗಳಲ್ಲಿ ಕ್ಷುದ್ರ ದೇವತೆ, ಗ್ರಾಮದೇವತೆಗಳಿಗೆ ನೀಡುವ ಬಲಿಯನ್ನು 'ರಣಬಲಿ" ಎಂಬುದಾಗಿ ಕರೆಯುತ್ತಾರೆ.

ಈ ಒಂದು ಹಿನ್ನೆಲೆಯಲ್ಲಿ ಕಾಪಡಿಯ ಶಾಸನವನ್ನು ವ್ಯಾಖ್ಯಾನಮಾಡಬೇಕಾಗುತ್ತದೆ.

ಶಾಸನದ ಪಾಠಕ್ಕೆ ಶ್ರೀ ಬಿ. ಎಲ್. ರೈಸ್ ಅವರು ನೀಡಿರುವ ಅನುವಾದ ಪದಶಃ ಅನುವಾದವಾಗಿದೆಯೇ ವಿನಾ ಭಾವಾನುವಾದ ಖಂಡಿತ ಅಲ್ಲ. ಇಲ್ಲಿನ 'ಬೀರಗೊಳ್'—ಎಂಬ ಪದ ಆಚರಣೆಯೊಂದನ್ನು ತೋರಿಸುತ್ತದೆ. ಇಲ್ಲಿ 'ಎತ್ತಿ' ಎಂಬ ಕ್ರಿಯಾಪದ ಮೇಲುನೋಟಕ್ಕೆ ಹಿಂದಿನ ಪದವಾದ 'ಬೀರಗೊಳ್' ಎಂಬ ಪದದ ಅರ್ಥದ ದಿಕ್ಕನ್ನೇ ಬದಲಾಯಿಸುತ್ತದೆ. ಆದ್ದರಿಂದ ಈ ಪದಪ್ರಯೋಗವಲ್ಲಿನ ಪ್ರಾದೇಶಿಕ ಹಾಗೂ ಸಾಮಾನ್ಯ ವೈಲಕ್ಷಣ್ಯಗಳನ್ನು ಗುರುತಿಸಬೇಕಾಗುತ್ತದೆ. ಉದಾಹರಣೆಗೆ 'ಆರತಿ ಎತ್ತಿ', 'ಮೆರವಣಿಗೆ ನೈವೇದ್ಯ ಎತ್ತಿ', 'ಸೂರ್ಯಮ್ಮಂಗೆ ಉತ್ಸವ ಎತ್ತಿ' ಎಂಬ ಪದಗಳಿಗೆ 'ನಿಲ್ಲಿಸು', 'to erect—' ಎಂಬ ಅರ್ಥ ಹೊರಡದೆ 'ಮಾಡಿ' ಎಂಬ ಅರ್ಥ ಹೊರಡುತ್ತದೆ. ಹೀಗೆ ಇಲ್ಲಿ 'ವೀರಭಟರ್ಗೆ ಬೀರಗೊಳೆತ್ತಿ' ಎಂಬಲ್ಲಿ 'ಬೀರಗೊಳ್' ಎಂಬ ಆಚರಣೆಯನ್ನು ನಡೆಯಿಸಿ—ಎಂಬ ಅರ್ಥಬರುತ್ತದೆ. ಆದ್ದರಿಂದ ಶ್ರೀ ಬಿ. ಎಲ್. ರೈಸ್ ಅವರು ಅನುವಾದ ಮಾಡಿರುವಂತೆ ಇದು ಒಂದು 'ಸ್ಮಾರಕ'ವಾಗಿಯಾಗಲೀ ಅಥವಾ ಡಾ|| ಎಂ. ಚಿದಾನಂದ ಮೂರ್ತಿಗಳವರು ಭಾವಿಸುವಂತೆ ವೀರರಿಗೆ ಬಿಟ್ಟ 'ದತ್ತಿ'ಯಾಗಿ ಆಗಲಿ ಆಗಿರದೆ, ವೀರರ ಆರಾಧನಾ ಸಂಪ್ರದಾಯದ ಆಚರಣೆಯ ಪಾರಿಭಾಷಿಕ ಪದವಾಗಿದೆ.

ಮೇಲಿನ ನನ್ನ ವ್ಯಾಖ್ಯಾನಕ್ಕೆ ಮತ್ತೆರಡು ಶಾಸನಗಳು ಪುಷ್ಟಿಯನ್ನು ನೀಡುತ್ತವೆ. ಕ್ರಿ.ಶ. ೧೧೧೬ ಚಿಕ್ಕಮಗಳೂರು ತಾಲ್ಲೂಕಿನ ಅಲ್ದೂರು[11] ಗ್ರಾಮದ ವೀರಗಲ್ಲಿನಲ್ಲಿ "ಬಮ್ಮ ಗೌಡಂ ತನ್ನ ಮಗಂ ಮೊಸೆಯೊಳ್ ಬಮ್ಮಿಗಂ ಸುರಲೋಕ ಪ್ರಾಪ್ತನಾದಡೆ ಕೊಳಂ ಮಾಡಿ ಕಲ್ಲನಿಕ್ಕಿಸಿ" ಎಂಬುದಾಗಿ ಬರುತ್ತದೆ. ಇದಕ್ಕೆ ಸಂಪಾದಕರು 'making a feast this stone was set up'[12] ಎಂಬುದಾಗಿ ಕೊಡುತ್ತಾರೆ. ಸಾಗರ ತಾಲ್ಲೂಕ್ ಸಣಿಗೆ[13] ಗ್ರಾಮದ ಒಂದು ಶಾಸನದಲ್ಲಿ ಕಾಳಬ್ಬೆ ನಾಯಕ್ಕಿತ್ತಿ ಎಂಬುವಳು ತನ್ನ ಗಂಡನಿಗೆ ಕಲ್ಲನ್ನು ಇರಿಸಿ 'ಕೂಳಂ ಕಾಳದು" ಎಂಬುದಾಗಿ ಉಲ್ಲೇಖವಾಗಿದೆ. ಇವಕ್ಕೆ ಸಂಪಾದಕರು ಅನುವಾದವನ್ನು ಹೀಗೆ ಕೊಡುತ್ತಾರೆ "set up a stone for her husband and distributed food"[14] ಎರಡು ಕಡೆಗಳಲ್ಲಿಯೂ ಸರಿಯಾದ ರೀತಿಯಲ್ಲಿ ಅನುವಾದ ಮಾಡಿ ಕವಡಿಯ ಶಾಸನದ ಅನುವಾದದಲ್ಲಿ ಏಕೆ ಆ ರೀತಿ ಅನುವಾದ ಮಾಡಿದ್ದರೋ ತಿಳಿಯದು.

ಮೇಲಿನ ಈ ವಿಚಾರ ಸರಣಿಯನ್ನು ಗಮನದಲ್ಲಿಟ್ಟುಕೊಂಡು ಶಾಸನವನ್ನು ಬಹುಶಃ ಹೀಗೆ ಅರ್ಥೈಸಬಹುದು. ಆ ಹೋರಾಟದಲ್ಲಿ ಮಡಿದ ವೀರಭಟರಿಗೆ 'ಬೀರಗೊಳ್'

ಎಂಬ ಶಾಂತಿಯ ಆಚರಣೆಯನ್ನು ಮಾಡಿ ಅನಂತರ ಕೇತಯನಾಯಕನು ತನ್ನ ಅಣ್ಣನಿಗೆ ಸ್ಮಾರಕವಾಗಿ ವೀರಗಲ್ಲನ್ನು ಸ್ಥಾಪಿಸಿದನು. ಅಂದರೆ ವೀರಗಲ್ಲನ್ನು ತನ್ನ ಅಣ್ಣನಿಗೆ ಪ್ರತ್ಯೇಕವಾಗಿ ನಿಲ್ಲಿಸುವುದಕ್ಕೆ ಮುಂಚೆ. ತನ್ನ ಅಣ್ಣನು ಹೋರಾಡಿದ ಯುದ್ಧದಲ್ಲಿ ಮಡಿದ ವೀರಭಟರಿಗೆ ಸಾಮೂಹಿಕವಾಗಿ ಯುದ್ಧಭೂಮಿಯಲ್ಲಿ ಈ 'ಬೀರಗೊಳ್'ನ್ನು ಮಾಡಿರಬಹುದು.

ಈ ರೀತಿ ಹೋರಾಟದಲ್ಲಿ ಸತ್ತ ವೀರರಿಗೆ ಅನ್ನ ನೀಡುವುದು ಒಂದು ಸಂಪ್ರದಾಯ. ಇದು ಮಾನವನಿಗೆ ಇರುವ ತನ್ನ ಆಮುಷ್ಮಿಕ ಜೀವನದ ಕಲ್ಪನೆಯಿಂದ ಪ್ರೇರಣೆ ಪಡೆದಿರಬೇಕು. ಆರಂಭದ ದಿಶೆಯಲ್ಲಿ ಗೆದ್ದ ಅರಸನು ತನ್ನ ಪಕ್ಷದ ಸತ್ತ ವೀರರ ಶಾಂತಿಗಾಗಿ ಅನ್ನ ಹಾಕುವ ಸಂಪ್ರದಾಯವಾಗಿ ಬೆಳೆಯಿತು. ಕಾಲಾನುಕ್ರಮದಲ್ಲಿ ತನ್ನ ಪರವಾಗಿ ಹೋರಾಡಿ ಸತ್ತ ವೀರರ ಆತ್ಮಕ್ಕೆ ಶತ್ರುರಾಜರ ಮತ್ತು ಅವನ ಪರವಾಗಿ ಹೋರಾಡಿದ ರಕ್ತಮಾಂಸಗಳಿಂದ ಕೂಡಿದ ಅನ್ನ ತುಂಬಾ ಪ್ರಿಯವೆಂದು ಭಾವಿಸಿದ ಜನತೆ ಈ ಒಂದು ಸಂಪ್ರದಾಯವನ್ನು ನಿರ್ಮಿಸಿತು. ಇದರ ಇನ್ನೊಂದು ಮುಖವೇ 'ರಣಮು ಕುಡುಪು' (ಯುದ್ಧದ ಊಟ). ಯುದ್ಧ, ಯುದ್ಧದ ಅಧಿದೇವತೆಗಳು, ದುಷ್ಟ ಶಕ್ತಿಗಳು, ಭೂತಗಳು ಇವುಗಳ ಕಲ್ಪನೆ ಮಾನವನಿಗೆ ಬೆಳೆದ ಹಾಗೆ, ಅವು ಮಾನವರ ರಕ್ತಮಾಂಸಗಳಿಂದ ತೃಪ್ತಿ ಹೊಂದುವುದೆಂದು ನಂಬತೊಡಗಿದ. ಈ ರೀತಿಯ ನಂಬಿಕೆ ಈ ಸಂಪ್ರದಾಯಕ್ಕೆ ಇಂಬು ನೀಡಿರಬಹುದು. ಈ ತರದ ಒಂದು ಸಂಪ್ರದಾಯವೇ ಬಹುಶಃ ಶಿವಮೊಗ್ಗ ಜಿಲ್ಲೆಯ ಕಾಪಡಿಯ ಶಾಸನದಲ್ಲಿ ಉಕ್ತವಾಗಿರುವುದು ಎಂಬ ತೀರ್ಮಾನಕ್ಕೆ ನಾವು ಬರಬಹುದು.

ಇನ್ನು ಕುಮಾರ ರಾಮನಿಗೆ ಸಂಬಂಧಪಟ್ಟ ಜಾತ್ರೆಗಳಲ್ಲಿ ನಡೆಯುವ 'ವೀರಗೊಳ್' ಅಥವಾ 'ಕುಮಾರ ರಾಮನ ಊಟ'ದ ಬಗೆ ಹೇಳುವುದಾದರೆ; ಇದು ಮೂಲಭೂತ ಸಂಪ್ರದಾಯದ ಆಚರಣೆಯೇ ಆಗಿದೆ. ಸಂಗಮ್ ಸಾಹಿತ್ಯದಲ್ಲಿ ನಿರೂಪಿತವಾಗಿರುವಂತೆ ಇದು ವೀರಗಲ್ಲಿನ ಮುಂದೆ ಹಾಕುವ ಬಲಿಯಾಗಿರದೆ, ಕುಮಾರ ರಾಮನ ವಿಗ್ರಹದ ಮುಂದೆ ವರ್ಷಕ್ಕೆ ಒಮ್ಮೆ ನೈವೇದ್ಯ ರೂಪದಲ್ಲಿ ಅವನಿಗಾಗಿ ಇಟ್ಟು ಅದನ್ನು ಜನ ಪ್ರಸಾದವೆಂದು ಸ್ವೀಕರಿಸುವ ಹಾಗೆ ತೋರುತ್ತದೆ. ಈ ದೃಷ್ಟಿಯಿಂದ ಶ್ರೀ ವೈ. ಹೆ. ರಾಮಶರ್ಮರು[15] ಹೇಳಿರುವ "ನಿಸ್ಸಂದೇಹವಾಗಿ ಇದು ವೀರ ರಾಮನಾಥನ ಆತ್ಮಯಜ್ಞದ ಸ್ಮರಣಗೆಂದೇ ಹೇಳಬೇಕು" ಎಂಬ ಮಾತುಗಳು ತುಂಬಾ ಸಮಂಜಸವಾಗಿವೆ.

ಈ ಸಂಪ್ರದಾಯಗಳ ಹಿಂದೆ ಇರುವ ಮಾನವನ ಮನೋಭಾವದ ವಿಶ್ಲೇಷಣೆಯೂ ಸಹ ಮುಖ್ಯವೆಂದೇ ಅನಿಸುತ್ತದೆ. ಈ ಸಂಪ್ರದಾಯಗಳು ಆರಂಭವಾದ ಕಾಲಕ್ಕೆ ಇವುಗಳಿಗೆ ಪ್ರೇರಣೆಯಾದವು: ಸತ್ತವನ ಬಗ್ಗೆ ಬದುಕಿರುವವರಿಗೆ ಇರುವ ಶ್ರದ್ಧೆ, ಕೃತಜ್ಞತೆ, ಆಮುಷ್ಮಿಕ ಜೀವನಕ್ಕೆ ಶಾಂತಿ, ಮುಂತಾದುವೇ. ಆದರೆ ಎರಡನೆಯ ಹಂತದಲ್ಲಿ ಇದು ಹೊಸ ತಿರುವನ್ನೇ ಪಡೆಯಿತು. ಮಾನವನಲ್ಲಿ ದ್ವೇಷ, ಕ್ರೋಧ, ಮತ್ಸರ ಮುಂತಾದ ಭಾವಗಳು ಸುಪ್ತವಾಗಿರುತ್ತವೆ. ಅವಕಾಶ ಉಂಟಾದಾಗ ಅವು ಕೆರಳುತ್ತವೆ. ಇವು

ತನ್ನ ಶತ್ರುವಿನ ಅವನತಿಯನ್ನು ಕಂಡಷ್ಟರಿಂದಲೇ ತೃಪ್ತಿ ಹೊಂದುವುದಿಲ್ಲ. ಅಂತಹ ತೃಪ್ತಿಯನ್ನು ಮತ್ತಷ್ಟು ಪಡೆಯಲು ಹವಣಿಸುತ್ತದೆ. ಪ್ರಸ್ತುತ ಸಂದರ್ಭದಲ್ಲಿ ದುಶ್ಶಾಸನನ ರಕ್ತವನ್ನು ಕುಡಿಯುವ ಭೀಮಸೇನನನ್ನು ನೆನೆಯಬಹುದು. ಶತ್ರುರಾಜರ ಮತ್ತು ಅವರ ಕಡೆಯವರ ರಕ್ತಮಾಂಸಗಳಿಂದ ಬೇಯಿಸಿದ ಅನ್ನವನ್ನು ತಮ್ಮ ಪಕ್ಷದ ಸತ್ತ ವೀರರಿಗೆ ಆಹುತಿಯಾಗಿ ನೀಡುವುದು ಬದುಕಿರುವ ವೀರರಿಗೆ, ಶತ್ರು ಪಕ್ಷದವರ ಬಗ್ಗೆ ಇರುವ ಕ್ರೋಧ, ದ್ವೇಷ, ಮತ್ಸರಗಳಿಗೆ ಇಂಬು ನೀಡುತ್ತದೆಯಲ್ಲದೆ, ಅವರಿಗೆ ಒಂದು ರೀತಿಯ ಪ್ರೋತ್ಸಾಹದ ಮತ್ತನ್ನು ತಂದುಕೊಡುತ್ತದೆ ಎಂಬುದನ್ನು ನಾವು ಗಮನಿಸಬೇಕು. ಈ ರೀತಿ ಶತ್ರು ರಾಜರನ್ನು ಮತ್ತು ಅವರ ಪಕ್ಷದವರನ್ನು, ತಮ್ಮ ಪಕ್ಷದ ವೀರರಿಗೆ ಆಹುತಿಯಾಗಿ ನೀಡುವ ಸಂಪ್ರದಾಯ ಭಾರತದಲ್ಲಿ ಮಾತ್ರವಲ್ಲ ಪ್ರಾಚೀನ ಗ್ರೀಸ್ ದೇಶದಲ್ಲಿಯೂ ಪ್ರಚಲಿತವಿತ್ತೆಂಬ ಅಂಶ ಮಹಾಕಾವ್ಯವಾದ 'ಇಲಿಯಡ್'ನಿಂದ ತಿಳಿದುಬರುತ್ತದೆ. ಸೆರೆಹಿಡಿದ ಶತ್ರು ಪಕ್ಷದವರನ್ನು ಕತ್ತರಿಸಿ ಬೆಂಕಿಗೆ ಹಾಕುವುದರ ಮೂಲಕ ಸತ್ತ ತಮ್ಮ ವೀರನಿಗೆ ಆತ್ಮಶಾಂತಿ ದೊರೆಯುತ್ತದೆಂದು ಅವರು ಭಾವಿಸುತ್ತಾರೆ.

## ಟಿಪ್ಪಣಿಗಳು

1 *EC.*, VII Sb 525, 1152. A.D.
2 ಅದೇ, ನೋಡಿ: ಇಂಗ್ಲಿಷ್ ಅನುವಾದ
3 ಎಂ. ಚಿದಾನಂದಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೨೯೨-೯೩.
4 ಮೈ. ಹ. ರಾಮಶರ್ಮ, ರಣಧೀರರಾಮನಾಥ, ಅನುಬಂಧ, ಪು. ೭೮-೮೦.
5 N. Subramani, *Sangam Polity*, p. 131.
6 M. Somasekhara Sarma, *The History of Reddi Kingdom*, p. 131.
7 ಸುರವರಸು ಪ್ರತಾಪರೆಡ್ಡಿ, ಆಂಧ್ರುಲಸಾಂಘಿಕ ಚರಿತ್ರಮು, ಪು. ೩೭೮
8 M. Somasekhara Sarma, *The History of Reddi Kingdom*, p. 250.
9 ಸುರವರಸು ಪ್ರತಾಪರೆಡ್ಡಿ, ಆಂಧ್ರುಲಸಾಂಘಿಕ ಚರಿತ್ರಮು, ಪು. ೩೭೮
10 ಅದೇ, ಪು. ೩೭೬.
11 *EC.*, VII. cm. ೧೦೦.
12 ಅದೇ, ನೋಡಿ ಇಂಗ್ಲಿಷ್ ಅನುವಾದ.
13 *EC.*, VII. ii. Sa ೭೧.
14 ಅದೇ, ನೋಡಿ ಇಂಗ್ಲಿಷ್ ಅನುವಾದ.
15 ಮೈ. ಹ. ರಾಮಶರ್ಮ, ರಣಧೀರರಾಮನಾಥ, ಅನುಬಂಧ, ಪು. ೮೨.

ಈ ಲೇಖನವನ್ನು ಸಿದ್ಧಮಾಡುವಲ್ಲಿ ನನ್ನೊಂದಿಗೆ ಚರ್ಚಿಸಿ ಉಪಯುಕ್ತ ಸಲಹೆಗಳನ್ನಿತ್ತ ನನ್ನ ಗುರುಗಳಾದ ಡಾ|| ಎಂ. ಚಿದಾನಂದಮೂರ್ತಿಯವರಿಗೂ ಮತ್ತು ಮಿತ್ರರಾದ ಶ್ರೀ ಎಸ್. ಶಿವಣ್ಣನವರಿಗೂ ನಾನು ಕೃತಜ್ಞ.

ವಿ. ಶಿವಾನಂದ

# ಕನ್ನಡ ಸಾಹಿತ್ಯಕ್ಕೆ ಜೈನರ ಕೊಡುಗೆ

## ಕನ್ನಡ ಸಾಹಿತ್ಯಕ್ಕೆ ಆದ್ಯರು

ಕನ್ನಡ ಸಾಹಿತ್ಯ ಚರಿತ್ರೆ ಆರಂಭವಾಗುವುದೇ ಜೈನರಿಂದ. 'ಕರ್ನಾಟಕ ಕವಿಚರಿತೆ'ಯ ಮೂರು ಮಹಾ ಸಂಪುಟಗಳನ್ನು ಕನ್ನಡಿಗರಿಗೆ ನೀಡಿದ ರಾ॥ ಬ॥ ಆರ್. ನರಸಿಂಹಾಚಾರ್ಯರು ಪ್ರಥಮ ಸಂಪುಟದ ಆದಿಯಲ್ಲೇ ಮೂವರು ಆಚಾರ್ಯರನ್ನು ಸ್ಮರಿಸುತ್ತಾರೆ. ಆದಿಕವಿ ಪಂಪ ಇವರನ್ನು ಸ್ತುತಿಸಿದ್ದಾನೆ:

ಶ್ರೀಸಮಂತಭದ್ರ
ಸ್ವಾಮಿಗಳ ಜಗತ್ಪ್ರಸಿದ್ಧ ಕವಿ ಪರಮೇಷ್ಠಿ
ಸ್ವಾಮಿಗಳ ಪೂಜ್ಯಪಾದ
ಸ್ವಾಮಿಗಳ ಪದಂಗಳೀಗೆ ಶಾಶ್ವತ ಪದಮಂ ॥

ಇವರಲ್ಲಿ ಸಮಂತಭದ್ರನ ಕಾಲ ಕ್ರಿ.ಶ. ೪೦೦. ಕವಿಪರಮೇಷ್ಠಿಯದು ಕ್ರಿ.ಶ. ೫೫೦. ಪೂಜ್ಯಪಾದರದು ಕ್ರಿ.ಶ. ೬೦೦. ಇವರು ಕನ್ನಡದಲ್ಲಿ ರಚಿಸಿದ ಗ್ರಂಥಗಳಾವುವು ಎಂಬುದಕ್ಕೆ ಪ್ರತ್ಯಕ್ಷ ಸಾಕ್ಷಿಗಳಿಲ್ಲದಿದ್ದರೂ ಪೂರ್ವ ಕವಿಗಳ ನಾಮಸಂಕೀರ್ತನದ ಮೇಲಿಂದ ಈಗಿನ ಮಟ್ಟಿಗೆ ಈ ಆಚಾರ್ಯತ್ರಯರನ್ನು ಕನ್ನಡ ಸಾಹಿತ್ಯಕ್ಕೆ ಆದ್ಯರು ಎನ್ನಬಹುದು.

## ಸುವರ್ಣಯುಗ

ಹತ್ತನೆಯ ಶತಮಾನವು ಕನ್ನಡ ಸಾಹಿತ್ಯದಲ್ಲಿ ಸುವರ್ಣಯುಗ. ಪೆರಿಕ್ಲಿಸನ ಕಾಲದಲ್ಲಿ ಗ್ರೀಕ್ ಸಾಹಿತ್ಯ, ಎಲಿಜಾಬೆತ್, ವಿಕ್ಟೋರಿಯಾಳ ಯುಗದಲ್ಲಿ ಆಂಗ್ಲ ಸಾಹಿತ್ಯ; ಗುಪ್ತರ ಕಾಲದಲ್ಲಿ ಸಂಸ್ಕೃತ ಸಾಹಿತ್ಯ ಸುವರ್ಣಕಾಲವೆಂದು ಹೆಸರಾದಂತೆ ಕರ್ನಾಟಕದಲ್ಲಿ ರಾಷ್ಟ್ರಕೂಟ ಮತ್ತು ಚಾಳುಕ್ಯರ ಆಳ್ವಿಕೆಯಲ್ಲಿ ಹುಟ್ಟಿದ ಸಾಹಿತ್ಯ ಸುವರ್ಣಯುಗವನ್ನು ನಿರ್ಮಿಸಿದೆ. ಈ ಯುಗದ ಪ್ರತಿಭೆಯೆನ್ನಿಸಿದ ಕವಿಗಳು ಪಂಪ, ಪೊನ್ನ, ರನ್ನ ಮತ್ತು ಚಾವುಂಡರಾಯ. ರಾಷ್ಟ್ರಕೂಟ ೩ನೆಯ ಕೃಷ್ಣ, ಚಾಳುಕ್ಯ ೨ನೆಯ ತೈಲಪ ಮತ್ತು ಹೊಯ್ಸಳ ವೀರಬಲ್ಲಾಳರು ಚಕ್ರವರ್ತಿ ದೊರೆಗಳಾಗಿದ್ದು ತಮ್ಮ ಆಶ್ರಯದಲ್ಲಿದ್ದ

ಪೊನ್ನ, ರನ್ನ, ಜನ್ನರಿಗೆ ಕ್ರಮವಾಗಿ 'ಕವಿಚಕ್ರವರ್ತಿ' ಬಿರುದು ಕೊಟ್ಟಿದ್ದಾರೆ. ಜಿನ-ಸಮಯ ದೀಪಕರಾಗಿ ಧರ್ಮವನ್ನು ಕಾವ್ಯದಲ್ಲಿ ಬೆಳಗಿದ ಪಂಪ, ಪೊನ್ನ, ರನ್ನ, 'ರತ್ನ ತ್ರಯ'ರೆಂದು ಹೆಸರಾಗಿದ್ದಾರೆ. ಈ ಅಭಿದಾನಗಳು ಕನ್ನಡ ಸಾಹಿತ್ಯದಲ್ಲಿ ಇನ್ನಾರಿಗೂ ಇಲ್ಲದಿರುವದು ವೈಶಿಷ್ಟ್ಯವೆನಿಸಿದೆ.

## ಕೃತಿಶ್ರೇಣಿ

ಜೈನ ಕವಿಗಳ ಸಂಖ್ಯೆ ಸು. ೧೭೫ಕ್ಕೆ ಮಿಕ್ಕಿದೆ. ಇದು ಕವಿಚರಿತೆಕಾರರ ಲೆಕ್ಕ. ಕೃತಿ ಸಂಖ್ಯೆಯಂತೂ ವಿಪುಲವಾಗಿದೆ. ವೈವಿಧ್ಯಪೂರ್ಣವಾಗಿದೆ. ಭಟ್ಟಾಕಳಂಕನು ತನ್ನ 'ಶಬ್ದಾನುಶಾಸನದಲ್ಲಿ' "ಶಬ್ದಾಗಮ ಯುಕ್ತ್ಯಾಗಮ ಪರಮಾಗಮ ವಿಷಯಾಣಾಂ ತಥಾ ಕಾವ್ಯಾಲಂಕಾರ ಕಲಾಶಾಸ್ತ್ರ ವಿಷಯಾಣಾಂಚ ಬಹೂನಾಂ ಗ್ರಂಥಣಯಪಿಭಾಷಾ ಕ್ರರ್ತಂ ಯುಪಲಬ್ಧಮಾನತ್ವಾತ್" ಎಂದರೆ ಕನ್ನಡದಲ್ಲಿ ಮತಗ್ರಂಥಗಳು ಅಲ್ಲದೆ ಕಾವ್ಯ ನಾಟಕ ಅಲಂಕಾರ ಗ್ರಂಥಗಳು ಉಪಲಬ್ಧವಾಗಿವೆ ಎನ್ನುತ್ತಾನೆ. ಇವನು ಹೇಳುವ ಎಷ್ಟೋ ಗ್ರಂಥಗಳು ಅಜ್ಞಾತವಾಗಿವೆ. ಕೆಲವು ಅಚ್ಚಾಗದೇ ಇವೆ. ಈಗ ದೊರೆತ ಕೃತಿ ಪ್ರಮಾಣದ ಮೇಲಿಂದಲೇ ಈ ಸಾಹಿತ್ಯ ಕನ್ನಡಕ್ಕೆ ಅಕ್ಷಯ ನಿಧಿಯಾಗಿದೆ. ಜೈನ ಸಾಹಿತ್ಯವು ಸಂಖ್ಯೆಯಲ್ಲಂತೂ ಸರಿ, ಸತ್ವದಲ್ಲಿಯೂ ಕೂಡ ಘನವಾಗಿದೆ.

ಕನ್ನಡ ಸಾರಸ್ವತ ಪ್ರಪಂಚದಲ್ಲಿ ಪಂಪ ಯುಗಪುರುಷನಾಗಿ ಬಾಳಿದ ಕವಿ. ಕನ್ನಡಕ್ಕೆ ಅವನು ಆದಿಯೂ ಅಗ್ರಗಣ್ಯನೂ ಎನಿಸಿದ್ದಾನೆ. "ಪಸರಿಪ ಕನ್ನಡಕ್ಕೊಡೆಯನೋರ್ವನೆ ಸತ್ಕವಿಪಂಪನಾವಗಂ" ಎಂಬ ನಾಗರಾಜನ (ಕ್ರಿ.ಶ. ೧೩೩೧) ಉಕ್ತಿ ಉತ್ಪ್ರೇಕ್ಷೆಯಲ್ಲ. ಅವನಲ್ಲಿ ಅದಕ್ಕೆ ಸಾಟಿಯಾಗುವ ಪ್ರತಿಭೆಯಿದೆ. ಪಂಪನಲ್ಲಿ ಮುಗಿಲ ಮುಟ್ಟುವ 'ಪೆಂಪೂ' ಇದೆ. "ಮುಂ ಸಮಸ್ತ ಭಾರತಮನಪೂರ್ವಮಾಗೆ ಸಲೆ ಪೇಳ್ದ ಕವೀಶ್ವರರಿಲ್ಲ" (ಪಂ.ಭಾ. ೧–೧೧) "ಮುನ್ನಿನ ಕಬ್ಬಮನೆಲ್ಲಮನ್ ಇಕ್ಕಿ ಮೆಟ್ಟಿದವು ಭಾರತಮುಮಾದಿ ಪುರಾಣ ಮಹಾ ಪ್ರಬಂಧಮುಂ." (೧೪–೫೪) ಈ ಹೇಳಿಕೆಗಳು ಅಸಮಾನ್ಯವೂ ಅದ್ವಿತೀಯವೂ ಆದ ಪಂಪನ ಕವಿತಾಸಾಮರ್ಥ್ಯಕ್ಕೆ ಪ್ರಮಾಣೋಕ್ತಿಗಳು. 'ಕವಿತಾ ಗುಣಾರ್ಣವ'ನಾದ ಪಂಪ ಕಲಿಯೂ ಆಗಿದ್ದ. ವ್ಯಕ್ತಿತ್ವದಿಂದ ಆತ ಸುಂದರನೂ, ಸುಭಗಕಾರನೂ, ಸೂಕ್ತಿಗರ್ಭನೂ, ಗಂಭೀರನೂ ಹಿತ-ಮಿತ ಮೃದುವಚನನೂ ಆಗಿ ಕನ್ನಡ ಚಂಪೂ ಸಾಹಿತ್ಯ ಸಾಮ್ರಾಜ್ಯದ ಪಟ್ಟದೊಡೆಯನಾಗಿ ಮೆರೆದ. ಮಾರ್ಗ ಸಾಹಿತ್ಯಕ್ಕೆ ಅವನೇ ಮಾರ್ಗನೇತ್ರ. ಅವನ ತರುವಾಯದ ಎಲ್ಲಾ ಕವಿಗಳಿಗೆ ಅವನ ಕೃತಿಗಳೇ ಕಣ್ಬೆಳಕು. 'ಬೆಳಗುವೆನಿಲ್ಲಿ ಲೌಕಿಕಮನ್ ಅಲ್ಲಿ ಜಿನಾಗಮಮನ್' ಎಂಬ ಕವಿ ವ್ಯಾಖ್ಯೆ ನಂತರದ ಕವಿಗಳಿಗೆಲ್ಲಾ ವಾಕ್ಯಮಣಿ ದರ್ಪಣವಾಗಿದೆ. ಅವನು ನಡೆಯ ಹೋದ ಹೆದ್ದಾರಿಯಲ್ಲಿ ಕಾಣಿಸಿಕೊಂಡ ಕವಿ ಕೃತಿಗಳನ್ನಿಲ್ಲಿ ಮುಖ್ಯವಾಗಿ ಹೆಸರಿಸ ಬಹುದು.

| ಕವಿ | ಕಾಲ | ಲೌಕಿಕ ಕೃತಿ | ಧಾರ್ಮಿಕ ಕೃತಿ |
|---|---|---|---|
| ೧) ಪಂಪ | ಕ್ರಿ.ಶ. ೯೪೧ | ವಿಕ್ರಮಾರ್ಜುನ ವಿಜಯ | ಆದಿಪುರಾಣ |
| ೨) ಪೊನ್ನ | ಕ್ರಿ.ಶ. ೯೫೦ | ಭುವನೈಕರಾಮಾಭ್ಯುದಯ | ಶಾಂತಿಪುರಾಣ |
| ೩) ರನ್ನ | ಕ್ರಿ.ಶ. ೯೯೦ | ಸಾಹಸಭೀಮ ವಿಜಯ | ಅಜಿತನಾಥಪುರಾಣ |
| ೪) ನಾಗಚಂದ್ರ | ಕ್ರಿ.ಶ. ೧೧೦೦ | ರಾಮಚಂದ್ರಚರಿತಪುರಾಣ | ಮಲ್ಲಿನಾಥಪುರಾಣ |
| ೫) ಜನ್ನ | ಕ್ರಿ.ಶ. ೧೨೦೯ | ಯಶೋಧರ ಚರಿತೆ | ಅನಂತನಾಥಪುರಾಣ |

ಪಂಪನಿಗೆ ಒಂದನೆಯ ಗುಣವರ್ಮನ (ಕ್ರಿ.ಶ. ೯೦೦) 'ಹರಿವಂಶ', 'ಶೂದ್ರಕ' ಗಳು ದಾರಿದೀಪಗಳಾಗಿದ್ದಿರಬಹುದಾದರೂ ಅವು ಈಗ ನಮಗೆ ಉಪಲಬ್ಧವಾಗಿಲ್ಲ. ಕಾರಣ ಈ ದಾರಿಯಲ್ಲಿ ಪಂಪನ ಕೃತಿಗಳೇ ದೀಪಸ್ತಂಭ.

## ಮೊತ್ತಮೊದಲಿಗರು

ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಿಗೆ ಅವರು ಪ್ರಥಮರಾಗಿದ್ದಾರೆ. ಕೆಲವರು ಪ್ರಥಮಾವಸ್ಥೆಯಲ್ಲೇ ಪರುಷಹಸ್ತದ ಸಿದ್ಧಿ ತೋರಿದ್ದಾರೆ. 'ಕವಿರಾಜಮಾರ್ಗ' ಉಪಲಬ್ಧ ಕನ್ನಡ ಗ್ರಂಥಗಳಲ್ಲಿ ಮೊದಲಿನದು (ಕ್ರಿ.ಶ. ೮೪೦). ಅದು ಅಲಂಕಾರ ಗ್ರಂಥ. ನೃಪತುಂಗನ ಸಭಾಸದನಾದ ಶ್ರೀವಿಜಯನ ಈ 'ಕವಿರಾಜಮಾರ್ಗ' ಮುಂದಿನ ಕವಿಗಳಿಗೆ ಕೈದೀವಿಗೆಯೂ ಕನ್ನಡಿಯೂ ಆಗಿದೆ. ವ್ಯಾಕರಣ ಗ್ರಂಥಕರ್ತರಲ್ಲಿ ನಯಸೇನನ ಹೆಸರಿದ್ದರೂ ಕೃತಿಯಲ್ಲಿ ಈಗ ೨ನೆಯ ನಾಗವರ್ಮನ (೧೦೪೨) ಶಬ್ದಸ್ಮೃತಿ ಮೊದಲಿನದು. ರನ್ನನ 'ರನ್ನಕಂದ' ನಿಘಂಟುವಿನಲ್ಲಿ ಮೊದಲು, ಗಜಶಾಸ್ತ್ರದಲ್ಲಿ ಸೈಗೊಟ್ಟ ಶಿವಮಾರನ 'ಗಜಾಷ್ಟಕ'; ವೈದ್ಯಶಾಸ್ತ್ರದಲ್ಲಿ ಜಗದ್ದಳ ಸೋಮನಾಥನ 'ಕರ್ನಾಟಕ ಕಲ್ಯಾಣಕಾರಕ'; ಜ್ಯೋತಿಷ್ಯಶಾಸ್ತ್ರದಲ್ಲಿ ಶ್ರೀಧರಾಚಾರ್ಯನ(೧೦೫೦) 'ಜಾತಕತಿಲಕ'; ಕಾಮಶಾಸ್ತ್ರದಲ್ಲಿ ಚಂದ್ರರಾಜನ (೧೦೫೦) 'ಮದನತಿಲಕ'ಗಳು ಮೊದಲೆನ್ನಿಸಿದ ಗ್ರಂಥಗಳಾಗಿವೆ. ಲೌಕಿಕಶಾಸ್ತ್ರಗಳಲ್ಲಿ ಮೊದಲಾದಂತೆ ಶಾಸ್ತ್ರಗ್ರಂಥರಚನೆಯಲ್ಲೂ ಇವರು ವಿಕ್ರಮ ಸ್ಥಾಪಿಸಿದ್ದಾರೆ. ಶಿವಕೋಟ್ಯಾಚಾರ್ಯನ (೯೨೦) 'ವಡ್ಡಾರಾಧನೆ' ಕನ್ನಡದ ಉಪಲಬ್ಧ ಗ್ರಂಥಗಳಲ್ಲಿ ಮೊದಲಿನದು. ಚಂಪೂವಿನಲ್ಲಿ ಪಂಪನ ಕೃತಿಗಳು ಆರಂಭದವು. ಕಾವ್ಯಸಂಕಲನಗಳಲ್ಲಿ ಮಲ್ಲಿಕಾರ್ಜುನನ 'ಸೂಕ್ತಿ ಸುಧಾರ್ಣವ' (೧೨೫೦) ಮೊದಲಿನದು. ಸಾಂಗತ್ಯದಲ್ಲಿ ರಚಿತವಾದ ಕನ್ನಡ ಮಹಾಕಾವ್ಯ ರತ್ನಾಕರವರ್ಣಿಯ 'ಭರತೇಶವೈಭವ' ವೊಂದೇ. ಹಲ್ಮಿಡಿಯಶಾಸನ ಬಿಟ್ಟರೆ ಅತಿ ಪ್ರಾಚೀನವಾದ, ನರಗುಂದಶಾಸನ ಬರೆದ ಶಾಸನ ಕವಿ ಜೈನನೆಂಬುದಾಗಿ ರೈಸರು ಹೇಳುತ್ತಾರೆ. ಕನ್ನಡದ ಮೊದಲ ನಗೆಗಾರ ನಯಸೇನ. ಮೊದಲ ವಿಡಂಬನ ಕವಿ ಬ್ರಹ್ಮಶಿವ. ಸ್ವತಂತ್ರ ವಸ್ತುವಿನ ಆಲೋಚಕರಲ್ಲಿ ಆಂಡಯ್ಯನೇ ಮೊದಲಿಗ. ಖಂಡ ಕಾವ್ಯಗಳಲ್ಲಿ ರನ್ನನ ಗದಾಯುದ್ಧ ಮೊದಲಿನದು. 'ನೇಮಿ ಜನ್ನಮರಿರ್ವರೇ ಕರ್ಣಾಟ ಕೃತಿಗೆ ಸೀಮಾಪುರುಷರ್' ಎಂದು ಮಧುರ ಕವಿ ತನ್ನ ಧರ್ಮನಾಥಪುರಾಣದಲ್ಲಿ ಹೇಳುತ್ತಾನೆ. (೧–೨೫೬) ವಿಕೃತ ಪ್ರೇಮದ ಸ್ವರೂಪವನ್ನು

ನಾವು ಕಾಣುವದು ಜನ್ನನ 'ಯಶೋಧರ ಚರಿತೆ'ಯಲ್ಲಿ.ದುರಂತ ಪಾತ್ರಗಳನ್ನು ಕನ್ನಡದಲ್ಲಿ ತಂದವರು ಜೈನಕವಿಗಳೇ. ಭಾರತಿಯ ಮಹಾಕಾವ್ಯಗಳಾದ ರಾಮಾಯಣ ಮಹಾಭಾರತ ಗಳನ್ನು ಕನ್ನಡದಲ್ಲಿ ರಚಿಸಿದ ಪ್ರಥಮ ಶ್ರೇಯಸ್ಸು ಜೈನ ಕವಿಗಳಿಗೆ ಸಲ್ಲಬೇಕು.

## ಚಂಪೂರೂಪ

ಚಂಪೂಶೈಲಿ ಕನ್ನಡಕ್ಕೆ ಜೈನರಿತ್ತ ವಿಶೇಷ ಕೊಡುಗೆ. ಸಂಸ್ಕೃತದಲ್ಲಿ ದೊರಕುವ ಮೊದಲ ಚಂಪೂಕೃತಿ ತ್ರಿವಿಕ್ರಮಭಟ್ಟನ 'ನಳಚಂಪೂ'. ಇದರ ಕಾಲ ಕ್ರಿ.ಶ. ೧೦ನೆಯ ಶತಮಾನದ ಉತ್ತರಾರ್ಧ. ಇದಕ್ಕೂ ಹಿಂದೆ ಪಂಪ ರನ್ನರ ಕೃತಿಗಳು ನಮಗೆ ಕನ್ನಡದಲ್ಲಿ ದೊರಕುವುದಲ್ಲದೆ ಅವುಗಳ ಶೈಲಿ ಆರಂಭದ ಘಟ್ಟದ್ದಾಗಿರದೆ ಉತ್ಕೃಷ್ಟತೆಯ ಕುರುಹಾಗಿದೆ. ಪ್ರಾಕೃತದಲ್ಲಿ, ತಮಿಳಿನಲ್ಲಿ, ಮಲೆಯಾಳದಲ್ಲಿ ಯಾವ ಚಂಪೂ ಕೃತಿಯೂ ಹುಟ್ಟದಿದ್ದಾಗ ತೆಲುಗು ಸಾಹಿತ್ಯ ಇನ್ನೂ ಶೈಶವಾವಸ್ಥೆಯಲ್ಲಿದ್ದಾಗ ಕನ್ನಡ ಚಂಪೂ ಸಾಹಿತ್ಯದ ವೈಭವ-ಸೂರ್ಯ ನಡುನೆತ್ತಿಯ ಮೇಲಿದ್ದನೆಂದು ತಿಳಿದರೆ ಈ ಸಾಹಿತ್ಯದ ಪ್ರತಿಷ್ಠೆ ನಮಗೆ ವೇದ್ಯ ವಾಗುತ್ತದೆ.

ಕವಿರಾಜಮಾರ್ಗದಲ್ಲಿ ಉಲ್ಲೇಖಗೊಂಡ (೧-೩೨) ಚತ್ತಾಣ, ಬೆದಂಡೆ, ಬಾಜನೆಗಬ್ಬ, ಪದ, ಮೆಲ್ವಾಡು, ಒನಕೆವಾಡುಗಳೆಂಬ ದೇಶೀ ಸಾಹಿತ್ಯ ಪ್ರಕಾರಗಳನ್ನು ಜೈನರೇ ಆರಂಭದಲ್ಲಿ ರಚಿಸಿದ್ದಾರೆಂಬುದು ನಿರ್ವಿವಾದ. ಸೈಗೊಟ್ಟ ಶಿವಮಾರನ ರಚನೆ ಒನಕೆ-ವಾಡಿನ ರೂಪದಲ್ಲಿದೆ. ರಟ್ಟಕವಿಯ ರಟ್ಟಮತ ಚತ್ತಾಣ ಲಕ್ಷಣವನ್ನು ಪ್ರತಿನಿಧಿಸುತ್ತದೆ. ವಸ್ತುಕೃತಿಯನ್ನು ವಿಶಿಷ್ಟ ಸಂಪ್ರದಾಯವಾಗಿ ಬೆಳೆಸಿಕೊಂಡುಬಂದ ಹಿರಿಮೆ ಜೈನಕವಿ ಗಳದಾಗಿದೆ. ಇದರಲ್ಲಿ ಮಾರ್ಗ ಮತ್ತು ದೇಶೀಗಳನ್ನು ಅವರು ಸಮನ್ವಯ ಮಾಡಿರುವದು ಒಂದು ವೈಲಕ್ಷಣ್ಯವಾಗಿದೆ. ವಸ್ತುಕವನ್ನು (ಕ್ಲಾಸಿಕಲ್) ಎಂದೂ ದೇಶಿಯ ಅಥವಾ ವರ್ಣಕವನ್ನು (ರೊಮ್ಯಾಂಟಿಕ್) ಎನ್ನುವುದೂ ತೀರ ಸ್ಥೂಲವಾಗು ತ್ತದೆ. ಏಕೆಂದರೆ ಪಂಪನ ಕೃತಿಗಳಲ್ಲಿ ಇವುಗಳ ಸಮನ್ವಯವಾಗಿದೆ. ಅವನ ಆದಿ-ಪುರಾಣ ವಸ್ತು ಕೃತಿಯೆಂದು ಭಾರತ ಕೃತಿ ವರ್ಣಕವೆಂದೂ ವಿಭಾಗಿಸುವಲ್ಲಿ ಇವುಗಳ ಲಕ್ಷಣ ಬೇರೆಯದಾಗುತ್ತದೆ. ಅದು ಕೃತಿ ಪ್ರಕಾರವೆಂಬುದಕ್ಕಿಂತ ವಿಶಿಷ್ಟ ಶೈಲಿ ಎನ್ನ ಬಹುದು. ಇದೇ ಕೃತಿಯಲ್ಲೂ ಇವೆರಡರ ಪರಿಪಾಕಗೊಂಡ ಶೈಲಿ ಕಾಣಿಸಿಕೊಳ್ಳಬಹು ದಾಗಿದೆ. "ದೇಶಿಯೊಳ್ ಪುಗುವದು ಪೊಕ್ಕ ಮಾರ್ಗನೊಳ್ ತಳ್ಪುದು" (ಪಂ.ಭಾ. ೧-೨೫) ಎಂಬ ಹೇಳಿಕೆ ಈ ಶೈಲಿಯ ಲಕ್ಷಣ ಸಮನ್ವಯ ಮಾಡುತ್ತದೆ. ಇದರಿಂದ ಚಂಪೂ ಶೈಲಿಯ ವೈಶಿಷ್ಟ್ಯ ಕನ್ನಡದಲ್ಲಿ ವೈವಿಧ್ಯಪೂರ್ಣವಾಗಿ ಕಾಣಿಸಿಕೊಂಡಿದೆ.

## ಕಾವ್ಯದ ಭಾಷೆ

ಆನೆ ನಡೆಯುವ ದಾರಿಯಲ್ಲಿ ಆಡೂ ನಡೆಯಲಾರಂಭಿಸಿದರೆ ಆ ದಾರಿ ಹದಗೆಡುತ್ತದೆ. ಪ್ರತಿಭಾನ್ವಿತ ಕವಿಗಳು ಚಂಪೂ ಮಾರ್ಗದಿಂದ ಬಹಳಷ್ಟು ಸಾಧಿಸಿದರೂ ಆ ಕವಲು

ಪಂಪ ರನ್ನರ ತರುವಾಯದಲ್ಲಿ ಪರಂಪರೆಯ ಗೀಳಿನಿಂದ ತುಂಬಿತು. ಪಂಡಿತ ರಂಜನೆ ಕಾವ್ಯದ ಉದ್ದೇಶವಾಯಿತು. ಸಂಸ್ಕೃತಭೂಯಿಷ್ಠತೆಯಿಂದ ದುರ್ಬೋಧ್ಯತೆ, ದುಂದುಗಾರಿಕೆ ಹೆಚ್ಚಿ ಕನ್ನಡಕ್ಕೆ ಉರುಲು ಬಂದಾಗ ಅದರ ಉಚ್ಚಾಟನೆ ಮಾಡಲೇಬೇಕಾಯಿತು. ಈ ದಿಸೆಯಲ್ಲಿ ಜೈನ ಕವಿಗಳು ಹೋರಾಟ ನಡೆಸಿದ್ದು ಕಾವ್ಯದ ಭಾಷೆಯ ದೃಷ್ಟಿಯಿಂದ ಗಣನೀಯವೆನ್ನಿಸಿವೆ. ಕನ್ನಡ ಶುದ್ಧೀಕರಣಕ್ಕಾಗಿ ಕ್ರಾಂತಿಕಹಳೆ ಊದಿದ ಮೊದಲ ಕವಿ ನಯಸೇನ. "ಶುದ್ಧ ಕನ್ನಡದೊಳ್ ತಂದಿಕ್ಕುವಡೆ ಸಕ್ಕದಮಂ ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ" ಎಂದು ಮಾರ್ಮಿಕವಾಗಿ ನುಡಿದಿದ್ದಾನೆ. ಪಂಪನ ಹೆಜ್ಜೆಯಲ್ಲಿ ಹೆಜ್ಜೆಯಿಟ್ಟರೂ ಈ ಕವಿ "ನಾಣ್ಣುಡಿ ದೇಶಿವೆತ್ತ ಪೊಸನುಡಿಮಾರ್ಗಂ" ಎಂದು ತನ್ನ ವೈಶಿಷ್ಟ್ಯವನ್ನು ಸ್ವತಂತ್ರವಾಗಿಸಿದ್ದಾನೆ. ಪಂಪನ ತಿರುಳ್ಗನ್ನಡ, ನಯಸೇನನ ಪೊಸಗನ್ನಡ ಆಂಡಯ್ಯನ ಅಚ್ಚಗನ್ನಡ ಕನ್ನಡ ಕಾವ್ಯದ ಭಾಷೆಗೆ ವಿನೂತನ ಕಾಣಿಕೆಗಳು. ಕಾಲ ದೇಶ ಪರಿಸರಗಳಲ್ಲಿ ಬೆಳೆಯುತ್ತಿದ್ದ ಬದಲಾಗುತ್ತಿದ್ದ ಜೀವಂತ ಭಾಷೆಯ ಜಾಯಮಾನಗಳನ್ನು ಜೈನ ಕವಿಗಳು ಸೂಕ್ಷ್ಮವಾಗಿ ಗಮನಿಸಿದ್ದಾರೆ. ನಡುಗನ್ನಡ ಕಾಲಿಟ್ಟ ಮೇಲೆ ಸುಲಭ ಸಾಹಿತ್ಯ ಹೆಚ್ಚಿತು. ಷಟ್ಪದಿ, ತ್ರಿಪದಿ, ಸಾಂಗತ್ಯ, ಹಾಡುಗಳು, ಶ್ರೀಸಾಮಾನ್ಯರ ಮೇಲೆ ಅಚ್ಚೊತ್ತಿದ್ದಾಗ ಜನಮನೋಧರ್ಮವನ್ನು ಅರಿತು ರತ್ನಾಕರವರ್ಣಿ ಸಾಂಗತ್ಯದಂತಹ ಸರಳ ಹಾಡುಗಬ್ಬವನ್ನು ಭರತೇಶವೈಭವದಲ್ಲಿ ಬಳಸಿಕೊಂಡದ್ದು ಅವನ ಕಾಲೋಚಿತ ಜ್ಞಾನಕ್ಕೆ ಸಾಕ್ಷಿ. ಜೈನರು ಚಂಪೂ ಯುಗದ ಮಹಾವೃಕ್ಷವನ್ನು ನೆಟ್ಟು ಬೆಳೆಸಿದರೂ ಆ ವೃಕ್ಷದ ಬೇರುಗಳು ಶಿಥಿಲಗೊಂಡುದನ್ನು ಈ ಕವಿ ಅರಿತು ಕಾಲಕ್ಕೆ ತಕ್ಕಂತೆ ಬದಲಾಗಿದ್ದಾನೆ. ಹರಿಹರನಂತಹ ಮಹಾಕವಿ ರಗಳೆಯಲ್ಲಿ ಉತ್ಕೃಷ್ಟ ಸಿದ್ಧಿ ಪಡೆದು ಚಂಪು ರಚನೆಗೆ ಕೈಯಿಕ್ಕಿದ್ದು, ಪಾಂಡಿತ್ಯವನ್ನೆಲ್ಲ ಸೂರೆ ಮಾಡುವುದಕ್ಕೆ ಷಡಕ್ಷರಿ ಸತ್ತ ಚಂಪೂವನ್ನು ಮತ್ತೆ ಬದುಕಿಸಿದ್ದು ಬಹುಶಃ ವಿಪರ್ಯಾಸಗಳೇ, ಆದರೆ ಅವರು ಕಾವ್ಯಮಾರ್ಗದಲ್ಲಿ ದಕ್ಷರಾಗಿದ್ದರಿಂದ ದಕ್ಕಿಸಿಕೊಂಡರು. ಉಳಿದವರಾಗಿದ್ದರೆ ನಗೆಗೆಡೆಯಾಗುತ್ತಿದ್ದರು. ಒಂದು ದೃಷ್ಟಿಯಿಂದ ವೀರಶೈವ ಕವಿಗಳಿಗೆ ಕನ್ನಡ ತವರುಮನೆ ಅವರು ಕನ್ನಡದಲ್ಲೇ ಬರೆದರೆಂಬುದು ಕ್ರಾಂತಿಯೆನ್ನಿಸಲಾರದು. ಅದು ಅವರ ಸಹಜ ಸ್ವಾಭಾವಿಕವಾಗಿ ಪಡೆದ ಸಿದ್ಧಿ. ಆದರೆ ಜೈನ ಕವಿಗಳ ಮನೋಭೂಮಿಕೆ ಸ್ವಾವಲಂಬಿಯಾದುದಲ್ಲ. ಸಾಹಿತ್ಯ, ವಸ್ತು, ಉದ್ದೇಶ, ಶೈಲಿ, ಭಾಷೆಗಾಗಿ ಅವರು ಹೋರಾಟ ಮಾಡಬೇಕಾಯಿತು. ಕನ್ನಡ ಕಾವ್ಯದ ಬೆಳವಣಿಗೆಯಲ್ಲಿನ ಪರಂಪರೆ ಮತ್ತು ಪ್ರಯೋಗಗಳನ್ನು ಮತೀಯ ಆವರಣದಲ್ಲಿ ನಿಂತು ಬೆಲೆಕಟ್ಟದೆ ಸಾಹಿತ್ಯದ ಪೃಷ್ಠಭೂಮಿಯ ಮೇಲೆ ನಿಂತು ಚರ್ಚಿಸಿದಾಗ, ಜೈನ ಕವಿಗಳ ಭಾಷಾಪ್ರಜ್ಞೆ ನಮಗೆ ತಿಳಿಯುತ್ತದೆ. ಎಲ್ಲ ಜೈನ ಕವಿಗಳಿಗೂ ಇದು ಅನ್ವಯಿಸುವುದಿಲ್ಲವೆಂಬುದನ್ನು ಒಪ್ಪಿಕೊಳ್ಳಬೇಕು. ಆದರೆ ಈ ಕಡೆಗೂ ಅವರೂ ಕಾಳಜಿ ವಹಿಸಿದರೆಂಬುದು ಮಹತ್ವದ್ದು.

## ಪ್ರತಿಷ್ಠಿತ ಶಕ್ತಿಗಳು

ಜೈನ ಸಾಹಿತ್ಯ ರಾಜಾಶ್ರಯದಲ್ಲಿ ಬೆಳೆಯಿತು. ಇದರಿಂದ ಜಿನಧರ್ಮಪ್ರಸಾರವೂ ಹೆಚ್ಚಿತು. ೧) ರಾಜಾಶ್ರಯ ೨) ಮತಾವೇಶ ಇವೆರಡೂ ಜೈನ ಸಾಹಿತ್ಯದ ಪ್ರತಿಷ್ಠಿತ ಶಕ್ತಿಗಳೆನ್ನಬಹುದು. ಈ ಕವಿಗಳು ಆಶ್ರಯದಾತರಾದ ಅರಸರನ್ನು ತಮ್ಮ ಕಾವ್ಯದ ಕಥಾನಾಯಕರೊಂದಿಗೆ ಹೋಲಿಸಿ ಅವರನ್ನು "ಇಂದ್ರ, ಚಂದ್ರ, ದಧೀಚಿ, ಕಲಿಕರ್ಣ" ಎಂದು ವಂದಿ ಮಾಗಧರಂತೆ ಹೊಗಳಿದರು. ನಿಜ. ಅಂದು ಇದು ಅವರಿಗೆ ಅನಿವಾರ್ಯವಾಗಿತ್ತು. ಮತ್ತು ಇದು ಅವರ ಲೌಕಿಕ ಕೃತಿಗಳಿಗೆ ಮಾತ್ರ ಮರ್ಯಾದಿತವಾದ ವಿಷಯ. ಪಂಪ ಕವಿಗೆ ಸಾಹಿತ್ಯದ ಪರಮೋದ್ದೇಶ ನರಸ್ತುತಿಯಲ್ಲವೆಂಬುದು ಸ್ಪಷ್ಟವಾಗಿತ್ತು. ಆದಿಪುರಾಣದಲ್ಲಿ ಹೇಳಿಕೊಂಡ ಬಗೆ ಅದೆಷ್ಟು ಬೋಧಪ್ರದ:

> ಕವಿತೆಯೊಳಾಸೆಗೈವ ಫಲಮಾವುದೊ ಪೂಜೆ ನೆಗಳ್ತೆ ಲಾಭಮೆಂ
> ಬಿವೆನಲಮಿಂದ್ರಪೂಜೆ ಭುವನಸ್ತುತಮಪ್ಪ ನೆಗಳ್ತೆ ಮುಕ್ತಿ ಸಂ
> ಭವಿಸುವ ಲಾಭಮೆಂಬಿವೆ ಜಿನೇಂದ್ರ ಗುಣಸ್ತುತಿಯಿಂದೆ ತಾಮೆ ಸಾ
> ರವೆ ಪೆರರೀವುದೇನ್ ಪೆರರಮಾಡುವದೇನ್ ಪೆರರಿಂದವಪ್ಪುದೇನ್ ॥

ಧಾರ್ಮಿಕ ವಸ್ತುವನ್ನು ಕವಿ ಸ್ವೀಕರಿಸುವದು ತಪ್ಪಲ್ಲ. ಅದನ್ನು ಕಾವ್ಯವಾಗಿಸುವದು ಬಿಡುವದು ಮಾತ್ರ ಆತನ ಪ್ರತಿಭೆಗೆ ಸೇರಿದ್ದು. "ಅರಿವುದು ಕಾವ್ಯಧರ್ಮಮುನ್ ಧರ್ಮಮುನ್" ಎಂಬ ಪಂಪನ ಹೇಳಿಕೆ ಅರ್ಥಪೂರ್ಣವಾದುದು. ಸಮರ್ಥ ಜೈನ ಕಾವ್ಯಗಳಿಗೆ ಈ ನೆಲಗಟ್ಟು ಶೋಭೆ ತಂದಿದೆ. ಅನುಕರಣ ಮಾಡಿದ ಕವಿಗಳಲ್ಲಿ ಈ ಸಮುಚಿತತ್ವ ಸಾಧ್ಯವಾಗದೆ ಹೋದಾಗ ಸಾಹಿತ್ಯಾಂಶಕ್ಕೆ ಧಕ್ಕೆ ಬಂದಿದೆ. ಕಾವ್ಯದಲ್ಲಿ ಜಾತೀಯತೆ, ಮತೀಯತೆ, ಬಿಡಾರ ಬಿಟ್ಟಿದೆ. ಒಟ್ಟಿನಲ್ಲಿ ಜೈನ ಕವಿಗಳ ಈ ಕಾವ್ಯಸೂತ್ರ ಅದೆಷ್ಟೋ ಕನ್ನಡದ ಸತ್ಕವಿಗಳಿಗೆ ದೃಕ್ಪಥವಾಗಿದೆ.

ಈ ಕವಿಗಳು ರಾಜಕೀಯ ಪ್ರತಿಷ್ಠೆಯನ್ನು ನೆಲಗೊಳಿಸಹೋಗಿ ಅಂದಿನ ಯುಗಧರ್ಮವನ್ನು ಚಿತ್ರಿಸಿರುವದು ಕನ್ನಡ ಸಾಂಸ್ಕೃತಿಕ ದೃಷ್ಟಿಯಿಂದ ಗಮನಾರ್ಹ. ಪಂಪ ರನ್ನರ ಕಾವ್ಯಗಳನ್ನೋದುವದರಿಂದ ಕರ್ನಾಟಕದ ಅಂದಿನ ಕ್ಷಾತ್ರ ಜೀವನದ ಬಹಳಷ್ಟು ಪರಿಚಯದ ಲಾಭವಾಗುತ್ತದೆ. ಇತಿಹಾಸದಲ್ಲಿ ಶಾಸನಗಳೇ ಮಹತ್ವವೆನ್ನುವವರು ಒಂದಿಷ್ಟು ಈ ಕಾವ್ಯಗಳನ್ನು ಓದಬೇಕು. ಪಂಪ ಭಾರತದಲ್ಲಿ ಅರ್ಜುನ ಶ್ರೀಕೃಷ್ಣನಿಗೆ ಹೇಳುವ ಈ ಡಿಂಡಿಮೋಕ್ತಿ ಅಂದಿನ ಕನ್ನಡಿಗರ ಕ್ಷಾತ್ರಧರ್ಮ ಅಥವಾ ರಾಜಧರ್ಮದ ಪ್ರಮಾಣ ವಚನವಾಗಿದೆ.

> ಒತ್ತಿ ತೆಱಂಬಿನಿಂದೆ ರಿಪುಭೂಜಸಮಾಜದ ಬೇರ್ಗಳಂ ನಭ
> ಕ್ಕೆತ್ತದೆ ಬಂದು ತನ್ನ ಮಱೆವೊಕ್ಕೊಡೆ ಕಾಯದೆ ಚಾಗದೊಳ್ಪಿನ
> ಚ್ಚೊತ್ತದೆ ಪೊಣ್ದು ಬಾಳ್ವ ಪುಱುವಾಸಸನೆಂಬವಜಾಂಡಮೆಂಬೊಂ
> ದತ್ತಿಯ ಪಣ್ಣೊಳಿರ್ಪ ಪುೞುವಲ್ಲದೆ ಮಾನಸನೇಂ ಮುರಾಂತಕಾ ॥

ವಿಶೇಷತಃ ಹತ್ತನೆಯ ಶತಮಾನದ ಕಾವ್ಯ ಮತ್ತು ಜನಜೀವನದಲ್ಲಿ ವೀರರಸ ಮತ್ತು ನೆತ್ತರ ತೊರೆ ಒಡಗೂಡಿಯೇ ಹರಿದಿವೆ. ಆದರ್ಶೋನ್ಮುಖರಾದ ಕನ್ನಡ ವೀರರಲ್ಲಿ ರಾಷ್ಟ್ರ ಪ್ರಜ್ಞೆ ಎಚ್ಚತ್ತಿದೆ. ವೀರನ ಲಕ್ಷಣವನ್ನು ದ್ರೌಪದಿ ಭೀಮನಿಗೆ ತಿಳಿ ಹೇಳುವ ರೀತಿಯಿದು.

ಮಣಿಕನಕ ವಸ್ತುವಿಭೂ
ಷಣಂಗಳಂ ಕೊಟ್ಟು ಪೆಂಡಿರೊಲ್ವರೆ ಗಂಡರ್
ಗುಣಮನೆ ಮೆಚ್ಚುವುದು.

ಒಡಲೊಡಮೆಯೆಂಬಿವೆರಡುಂ
ಕೆಡಲಿರ್ಪುವು ಕೆಡದ ಕಸವರಂ ಜಸಂ (ಗದಾಯುದ್ಧ, ೧೧-೪)

ರಾಜಕೀಯ ಆಸರೆ ತಪ್ಪಿ ಜೈನ ಧರ್ಮವು ಖಿಲವಾಗುತ್ತಿದ್ದ ಕಾಲದಲ್ಲಿ ನಯಸೇನ ಮತ್ತು ಬ್ರಹ್ಮಶಿವ ಕವಿಗಳು ಜಿನಧರ್ಮಾಭ್ಯುದಯಕ್ಕಾಗಿ ಕೃತಿ ರಚಿಸಿದಂತೆ ಇಲ್ಲ. ಅವರು ರಚಿಸಿದ ಮಾರ್ಗ ಬಳಸಿದ ತಂತ್ರ, ಕಾವ್ಯೋದ್ದೇಶ ಬೇರೆ ಸ್ವರೂಪದ್ದು. ಆದರೂ ಮುಖ್ಯವಾಗಿ ಅವರ ಕೃತಿಗಳಲ್ಲಿ ಅಂದಿನ ಧಾರ್ಮಿಕ, ಸಾಮಾಜಿಕ ಜೀವನ ಹೊರಚೆಲ್ಲಿದೆ. ನಯಸೇನನ ನಾಣ್ನುಡಿಗಳಂತೂ ಕನ್ನಡ ನಾಡಿನ ಜಾನಪದ ಜೀವನದ ಅಭ್ಯಾಸಕ್ಕೆ ಬಾಗಿಲು ತೆರೆದಂತಿವೆ. ಹೀಗೆ ಧಾರ್ಮಿಕ, ರಾಜಕೀಯ, ಸಾಮಾಜಿಕ, ಪ್ರತಿಷ್ಠಿತ ಶಕ್ತಿಗಳನ್ನು ಅವಲಂಬಿಸಿಯೂ ಇವರು ಸತ್ವಯುಕ್ತವಾದ ಸಾಹಿತ್ಯವನ್ನು ರಚಿಸಿದ್ದಾರೆ.

## ಸಾಹಿತ್ಯದ ರಸಪುಷ್ಟಿ

ಜೈನ ಕಾವ್ಯಗಳಲ್ಲಿ ನವರಸ ಸಿದ್ಧಿಯಿದೆ. "ಕವಿಮಾರ್ಗದೊಳೊಳಪೊಕ್ಕುಂ ನವರಸಮಂ ತೆರೆಯ ಮಾಡಿದನೆನಿಸಿದ ಕವಿ ಸತ್ಕವಿಯೆನಿಕ್ಕುಂ" ಎಂಬ ರನ್ನನ ವಾಕ್ಯ ಇದಕ್ಕೆ ಪುಷ್ಟಿಯನ್ನೀಯುತ್ತದೆ. ಪಂಪರನ್ನರ ಕೃತಿಗಳಲ್ಲಂತೂ ವೀರರಸ ಓಕುಳಿಯಾಡಿದೆ. ಇಡೀ ಕನ್ನಡ ಸಾಹಿತ್ಯದಲ್ಲೇ ಇಲ್ಲಿನ ವೀರರಸಕ್ಕೆ ಸಮನಾದ ಪದ್ಯ ಇನ್ನೊಂದಿಲ್ಲವೆಂದರೆ ತಪ್ಪಾಗಲಾರದೇನೊ.

ಆ ರವಮಂ ನಿರ್ಜಿತ ಕಂ
ಠೀರವ ರವಮಂ ನಿರಸ್ತ ಘನರವಮಂ ಕೋ
ಪಾರುಣ ನೇತ್ರಂ ಕೇಳ್ದಾ
ನೀರೊಳಗಿರ್ದುಂ ಬೆಮರ್ತನುರಗಪತಾಕಂ (ಗದಾ. ೯-೨೨)

ವೈಶಂಪಾಯನ ಕೊಳದಲ್ಲಿ ಅವಿತು ಕುಳಿತ ದುರ್ಯೋಧನನಿಗೆ ಭೀಮನ ಮೂದಲಿಕೆಯ ಮಾತುಗಳನ್ನು ಕೇಳುವುದು ಅಸಹನೀಯವಾಗುತ್ತದೆ. ಕ್ರೋಧದಿಂದ ಕತಕತನೆ ಕುದಿಯುತ್ತಾನೆ. ಅದನ್ನೇ ಕವಿ "ನೀರೊಳಗಿರ್ದುಂ ಬೆಮರ್ತಂ" ಎಂದು ಶಕ್ತಿಯುತವಾಗಿ ಹೇಳುತ್ತಾನೆ. ದುರ್ಯೋಧನನ ಕೋಪಾಗ್ನಿಗೆ ಕೊಳದ ನೀರು ಕಾಯ್ದು ಎಸರಿಟ್ಟಂತಾಗುತ್ತದೆ. ಅದರಲ್ಲಿನ ಜಲಚರಗಳು ಹೊಯ್ದಾಡುತ್ತವೆ. "ರಸೆಯಿಂ ಕಾಲಾಗ್ನಿ ರುದ್ರಂ ಪೊಱಮಡುವಂತೆ ತೊಟ್ಟನೆ ಬಂದು ಎಲ್ಲಿದಂ ಭೀಮಂ" ಎನ್ನುತ್ತ ರಭಸದಿಂದ ಗದೆ

ಯನ್ನು ತೂಗುತ್ತಾನೆ. ಇಲ್ಲಿನ ಸನ್ನಿವೇಶ, ಉಕ್ಕಿನ ವೀರಾವೇಶ, ಎಂತಹ ಹೇಡಿಗಳ ಮೈಯಲ್ಲೂ ಹೊಸ ರಕ್ತ ಸಂಚಲನ ಮಾಡುವಂತಹದು. ಒಬ್ಬನೇ ಕವಿ ವಿವಿಧ ಭಾವಗಳನ್ನು ಭಾಷೆಯಲ್ಲಿ ತರುವ ಸಾಮರ್ಥ್ಯವುಳ್ಳವನಾದರೆ ಅದು ಮಹತ್ ಸಿದ್ಧಿ. ರನ್ನನಲ್ಲಿ ಇದು ಮಿಗಿಲಾಗಿದೆ. ಅವನು ವೀರ ಮತ್ತು ಕರುಣಗಳೆರಡರಲ್ಲೂ ಸವ್ಯಸಾಚಿ. ಬಾಳಿನಲ್ಲಿ ಸಾವು ನೋವುಗಳು ಶಾಶ್ವತವಾದ ಅನುಭವವನ್ನು ಹೊತ್ತು ತರುತ್ತವೆ. ಸುಯೋಧನನು ಕರ್ಣನ ಕಳೇವರವನ್ನು ಕಂಡು ಪ್ರಶ್ನಿಸುವಲ್ಲಿ ಹೃದಯ ಪರಿತಾಪಗೊಳ್ಳುತ್ತದೆ. ಕರ್ಣನ ಕೆಳೆತನಕ್ಕೆ ಕಣ್ಣೀರೇ ಕೊನೆಯ ಕಾಣಿಕೆ. ಆದರೀಗ ಅದರಿಂದಲೂ ತನಗೆ ಮೋಕ್ಷವಿಲ್ಲವೆಂದು ಹೇಳುವುದು ಅದೆಷ್ಟು ಕಂಠ ಉಮ್ಮಳಿಸುವಂತೆ ಮಾಡುತ್ತದೆ!

ಕೆಳೆಯುಂಗಾಯ್ತು ಸುಮೋಕ್ಷಮಾಗಮಾವಗಂ ಬಾಷ್ಪಾಂಬುಮೋಕ್ಷಂ ಧರಾ
ತಳಮುಂ ಕೊಟ್ಟೆಸೆವಂ ಜಲಾಂಜಳಿಯುಮಂ ನಾಂ ಕೊಟ್ಟೆನಿಲ್ಲ ಅನ್ಯಮಂ
ದಳಮಂ ಸುಟ್ಟೆಸೆವಂ ಪ್ರಕೋಪ ಶಿಖಿಯಿಂ ಮಾನೀತನ ಸತ್ಕ್ರಿಯಾ
ವಳನಿಂ ಸುಟ್ಟೆಸುಮಿಲ್ಲ ಮತ್ತ್ರಿಯುತಮುಂ ಕರ್ಣಂಗಿಂದೇಂ ಕೊರ್ತೆನೊ ॥

ಒಬ್ಬೊಬ್ಬ ಕವಿಗಳನ್ನಿಲ್ಲಿ ಒಟ್ಟಾರೆ ಪರಾಮರ್ಶಿಸಿದರೆ "ಧ್ವನಿರಾತ್ಮಾ ಕಾವ್ಯಸ್ಯ" ಎಂಬ ಕಾವ್ಯಲಕ್ಷಣ, ಪಂಪನಲ್ಲಿ ಸಾರ್ಥಕಗೊಂಡಿದೆ. ನಿರ್ವೇದ ಸ್ಥಾಯೀ ಮೂಲವಾದ ಶಾಂತರಸದ ಪ್ರತಿಪಾದನೆ ನಾಗಚಂದ್ರನ ಮಲ್ಲಿನಾಥಪುರಾಣದಲ್ಲಿದೆ. ನಿನಗೆ ರಸಪ್ರೊಂದೆ ಶಾಂತಂಜಿನೇಂದ್ರ ಮಿಕ್ಕರಸಮುಂ ಕನಸಿನೊಳಂ ನೆನೆಯದಂತು ಮಾಡೆನಗರ್ಹಾ ಎಂಬುದು ಕವಿಯ ಆತ್ಮನಿವೇದನೆಯಾಗಿದೆ. ಸಾಮಾನ್ಯವಾಗಿ ಜೈನ ತೀರ್ಥಂಕರರ ಪುರಾಣದಲ್ಲಿ ಶಾಂತರಸಕ್ಕೆ ಪ್ರಾಧಾನ್ಯ ದೊರಕಿದೆ. ನೇಮಿಚಂದ್ರನ ಲೀಲಾವತಿಯಂತೂ ಶೃಂಗಾರ ಕಾವ್ಯ. "ಸ್ತ್ರೀರೂಪಮೆ ರೂಪಂ ಶೃಂಗಾರಮೆ ರಸಂ" ಎಂಬುದು ಕವಿಯ ಉದ್ಘೋಷಣೆ. ಭರತೇಶ ವೈಭವದಲ್ಲಿ ಭೋಗ ಮತ್ತು ಯೋಗಗಳಲ್ಲಿ ಸಮರಸತ್ವದ ಅಪೂರ್ವತೆಯಿದೆ. ಲೌಕಿಕ, ಪಾರಮಾರ್ಥಿಕವಾದ ಭಾವ ಮೌಲ್ಯಗಳಿಗೆ ಅದು ನೆಲೆಯಾಗಿದೆ. ಸಾಮಾನ್ಯವಾಗಿ ಆಗಮಿಕ ಕೃತಿಗಳಿಗಿಂತ ಲೌಕಿಕ ಕೃತಿಗಳ ರಸ, ರುಚಿ, ಕನ್ನಡಕ್ಕೆ ಉಜ್ವಲ ಕಾಂತಿಯನ್ನಿತ್ತಿದೆ.

## ಕಾವ್ಯ ಮತ್ತು ಜೀವನ ದರ್ಶನ

ಉತ್ತಮ ಜೀವನ ದರ್ಶನವೂ ಉತ್ತಮ ಕಾವ್ಯದ ಲಕ್ಷಣವಾಗಿದೆ. ಜೈನ ಕವಿಗಳ ವಿಶೇಷವೆಂದರೆ ಜೈನ ಮತತತ್ವದ ಸೈದ್ಧಾಂತಿಕ ಸೂಕ್ಷ್ಮತೆಗಳನ್ನು ಆಚರಣೆಯ ಕ್ಲಿಷ್ಟತೆಗಳನ್ನು ಹೇಳಿದ್ದರೂ ಅದರ ಜೊತೆಗೆ ಸಂಸ್ಕೃತಿಯ ತಿರುಳನ್ನು ಕಥಾರೂಪದಲ್ಲಿ ಬೋಧಿಸಲು ಪ್ರಯತ್ನಿಸಿದ್ದು, ಕನ್ನಡ ಕಾವ್ಯಗಳಲ್ಲಿ ಅವರು ಈ ಮೂಲಕ ಕೆಲವು ಉತ್ತಮ ಸಂಸ್ಕಾರಗಳನ್ನು ಉದಾತ್ತ ಸಂಸ್ಕೃತಿಯನ್ನು ಪ್ರತಿಬಿಂಬಿಸಿದ್ದಾರೆ. ಮುಖ್ಯವಾಗಿ—

೧) ಕರ್ಮಸಿದ್ಧಾಂತವು ಕನ್ನಡ ತೀರ್ಥಂಕರರ ಚರಿತ್ರೆಯಲ್ಲಿ ನಿರೂಪಿತವಾಗಿದೆ. 'ಭವಾವಳಿ' ಚಿತ್ರಗಳಲ್ಲಿ ಇವನ್ನು ಕಾಣಬಹುದು. ಆದಿಪುರಾಣದಲ್ಲಿ ಇವು ಹೆಚ್ಚಾಗಿ

ಬಂದಿವೆ. ಜೀವನು ಅಶುಭ ಕರ್ಮಗಳನ್ನು ಒಂದೊಂದು ಜನ್ಮದಲ್ಲಿ ನಿವಾರಿಸಿಕೊಂಡು ಹಂತಹಂತವಾಗಿ ವಿಕಾಸವಾಗುತ್ತ ಹೇಗೆ ಉತ್ತಮ ಗುಣಸ್ಥಾನಕ್ಕೇರುತ್ತಾನೆಂಬುದರ ಮಾರ್ಮಿಕ ಚಿತ್ರ ಇಲ್ಲಿದೆ. ಅಪೂರ್ಣತೆಯಿಂದಾಗಿ ಜೀವಿಯು ಅನಂತ ಭವಾವಳಿಗಳಲ್ಲಿ ಸುತ್ತಬೇಕಾಗುತ್ತದೆ. ಅವನಿಗೆ ನಿಜದ ನಿಲವು ಒಮ್ಮೆಲೆ ಸಾಧ್ಯವಾಗುವುದಿಲ್ಲ. ಇದಕ್ಕೆ ಕರ್ಮ ಹೆಚ್ಚಿರುವುದೇ ಕಾರಣ. "ಬಹುದುಷ್ಟಮುಷ್ಟಕರ್ಮಾನ್ನ ಪರಿಪುಷ್ಟ ಪಾದಿಕ ಚೀಃ ಕಷ್ಟಮವಶ್ಯಂ ನಿಕೃಷ್ಟಮೀ ಸಂಸಾರಂ"ಎಂದು ರನ್ನ ತನ್ನ ಅಜಿತ ತೀರ್ಥಂಕರ ಪುರಾಣ ದಲ್ಲಿ ಹೇಳುತ್ತಾನೆ. ದುಷ್ಕೃತಿಗಳನ್ನುಚ್ಚರಿಸುವದರಿಂದಾಗಿ ಜೀವನವು ಬದ್ಧವಾಗಿದೆ. ಅದರಲ್ಲಿ ಗತಿಯಿದ್ದರೂ ಪ್ರಗತಿಯಿಲ್ಲದಾಗಿದೆ. ಶುಭಕರ್ಮಗಳನ್ನು ಅನುಷ್ಠಾನಕ್ಕೆ ತಂದರೆ ಜೀವನ ವಿಕಾಸವಾಗುತ್ತದೆ ಎಂಬ ಬೋಧೆ ಕರ್ಮಸಿದ್ಧಾಂತದ ಹಿನ್ನಲೆಯಲ್ಲಿ ನಿರೂಪಿತ ವಾಗಿದೆ.

೨) ಅಹಿಂಸಾ ತತ್ವವು ಜೈನ ಧರ್ಮದ ಪ್ರಮುಖ ಲಕ್ಷಣವಾಗಿದೆ. ಜನ್ನನ 'ಯಶೋಧರ ಚರಿತ'ದಲ್ಲಿ ಹಿಟ್ಟಿನ ಹುಂಜವನ್ನು ಕೊಲ್ಲುವ ಸಂಕಲ್ಪ ಮಾಡಿದ ಮಾತ್ರಕ್ಕೇ ಯಶೋಧರ ಏಳು ಭವಗಳಲ್ಲಿ ಸತ್ತು ಹುಟ್ಟಬೇಕಾಯಿತೆಂದು ವರ್ಣಿಸಲಾಗಿದೆ. ಜೈನ ಕವಿಗಳು ಅಹಿಂಸಾ ವ್ರತಕ್ಕೆ ಇಷ್ಟೊಂದು ಮಹತ್ವವಿತ್ತರೆಂದೇ ಕಾವ್ಯಗಳಲ್ಲಿ ಅವರು ಕೆಲವು ಔಚಿತ್ಯಪೂರ್ಣವಾದ ಮಾರ್ಪಾಡು ಮಾಡಿಕೊಳ್ಳಬೇಕಾಯಿತು. ನಾಗಚಂದ್ರನ ರಾಮಾಯಣದಲ್ಲಿ ರಾವಣನು ದಿಗ್ವಿಜಯ ಮಾಡಿದರೂ ಯಾರನ್ನೂ ಕೊಲ್ಲುವುದಿಲ್ಲ. ರಾವಣ ವಧೆ ಇಲ್ಲಿ ಉದಾತ್ತಚರಿತ್ರನಾದ ರಾಮನಿಂದ ನಡೆಯುವದಿಲ್ಲ. ಲಕ್ಷ್ಮಣನಿಂದಾಗುತ್ತದೆ. ರತ್ನಾಕರವರ್ಣಿಯು ಭರತೇಶ ವೈಭವದ ಬಾಹುಬಲಿ ಭರತರ ಯುದ್ಧ ಪ್ರಕರಣದಲ್ಲಿ ಭರತ ಚಕ್ರವರ್ತಿ ತಮ್ಮನನ್ನು ಮಾತಿನಲ್ಲೇ ಸೋಲಿಸಿ ಅವನ ಮನಃ ಪರಿವರ್ತನೆಯನ್ನುಂಟುಮಾಡುತ್ತಾನೆಯೆ ಹೊರತು ಹಿಂಸೆ ನಡೆಯುವಂತೆ ಮಾಡುವುದಿಲ್ಲ. ಅಹಿಂಸಾ ಬೋಧೆ ಕಾವ್ಯಗಳಲ್ಲಿ ಒಂದು ಉದಾತ್ತ ಜೀವನಾದರ್ಶವಾಗಿ ಈ ಕವಿಗಳಿಗೆ ಕಂಡಿದೆ.

೩) ಮಾನವಿಕ ದೃಷ್ಟಿ (Humanitarian outlook) ಜೈನ ಕಾವ್ಯಗಳಲ್ಲಿ ತೋರಿರುವ ಉದಾತ್ತ ಧೋರಣೆಗಳಲ್ಲಿ ಮಹತ್ವದ್ದಾಗಿದೆ. ವ್ಯಾಸ, ವಾಲ್ಮೀಕಿಗಳ ಭಾರತ –ರಾಮಾಯಣಗಳಲ್ಲಿ ಪಾಪಾತ್ಮರೆಂದೂ, ದುಷ್ಟರೆಂದೂ ನಿರ್ಣಯಿಸಲಾದ ದುರ್ಯೋಧನ, ಕರ್ಣ, ರಾವಣಾದಿಗಳನ್ನು ಈ ಕವಿಗಳು ಅತ್ಯಂತ ಅನುಕಂಪೆಯಿಂದ ಕಂಡಿದ್ದಾರೆ. ರನ್ನನಿಗೆ ದುರ್ಯೋಧನ ಮಹಾನುಭಾವನೆನಿಸಿದ್ದಾನೆ. ನಿರ್ಮಲ ಕ್ಷತ್ರಿಯಧರ್ಮ ವ್ರತ ಕೈಗೊಂಡು ಕಟ್ಟಕಡೆಗೂ ಛಲ, ಸ್ವಾಭಿಮಾನ ವಿಶೇಷಗಳನ್ನು ಮುಂದಿಡುವ ಧೀರನಾಗಿದ್ದಾನೆ. 'ನೆಲಕಿರಿವನೆಂದು ಬಗೆವಿರೆ ಛಲಕಿರಿವೆಂ' ಎಂಬಲ್ಲಿ ಅವನ ಜೀವಿತದ ಉಪ್ಪೇಕ್ಷವನ್ನು ಕವಿ ಸಾರಿದ್ದಾನೆ. ಇಂತಹ ಹೋರಾಟಗಾರ, ಕಠೋರ ಹೃದಯಿಯೆನ್ನಿಸಿದರೂ ಅವನು ಸಹಜ ಮಾನವ ಮೂರ್ತಿಯಾಗಿದ್ದಾನೆ. ಕರ್ಣನ ಅವಸಾನದಲ್ಲಿ, ದುಶ್ಶಾಸನ ಸಂಚತ್ವದಲ್ಲಿ, ಭೀಷ್ಮರ ಶರಶಯ್ಯೆಯಲ್ಲಿ, ದುರ್ಯೋಧನ ಎಂತಹವನನ್ನೂ ಶೋಕ ಸಾಗರ

ದಲ್ಲಿ ಮುಳುಗಿಸುತ್ತಾನೆ. ಅಂತಃಕರಣವನ್ನು ಕಲಕಿಬಿಡುತ್ತಾನೆ. ಅದೇ ರೀತಿ ಪಂಪಭಾರತದಲ್ಲಿ ಅದೆಷ್ಟು ಗೌರವ ಕರ್ಣನಿಗೆ. "ಕರ್ಣನೊಳಾರ್ ದೊರೆ" "ಕರ್ಣಂಗೆ ದಲ್ ಒಡ್ಡಿತ್ತು ಭಾರತಂ" "ಕರ್ಣರಸಾಯನಮಲ್ತೆ ಭಾರತಂ" ಇವು ಪ್ರಾಸಕ್ಕಾಗಿ ನುಡಿದ ನುಡಿಗಳಲ್ಲ. ಕರ್ಣಪಾತ್ರದ ಮಹಾಶಿಲ್ಪಿ ಪಂಪ. ನಾಗಚಂದ್ರನ ರಾವಣನಂತೂ ಸತ್ವಶಾಲಿ, ಶುಚಿ, ಜಿನಪದ ಭಕ್ತ, ವಾಲ್ಮೀಕಿಯ ರಾವಣ ಪರಸ್ತ್ರೀ ಲಂಪಟನಾದರೆ ನಾಗಚಂದ್ರನ ರಾವಣ ಪರಾಂಗನಾವಿರತಿ ವ್ರತ ಸ್ವೀಕರಿಸಿದ ಸಚ್ಚರಿತ್ರ. ಅವನು ರಾಕ್ಷಸನಲ್ಲ, ಅವನಿಗೆ ಹತ್ತು ತಲೆಗಳಿಲ್ಲ. 'ದಶಕಂಠ' ಅವನ ಹೆಸರು ಅಷ್ಟೆ. ಹೀಗೆ ಅತ್ಯಂತ ನಿಂದಾಸ್ಪದಕ್ಕಿಂತ ವರ್ಣಿತವಾದ ಈ ಪುರಾಣ ಪುರಾಣದ ವ್ಯಕ್ತಿಗಳ ಗುಣಸ್ವಭಾವದಲ್ಲಿ ಔಚಿತ್ಯವನ್ನು ಕಾಣಿಸಿರುವುದು ಅದ್ಭುತ ಪವಾಡವೆನ್ನಿಸಿದೆ. ಜೈನ ಕವಿಗಳು ಇವರನ್ನು ದುಷ್ಟರನ್ನಾಗಿ ಮಾಡದೆ ದುರಂತರಾಗಿ ಮಾಡಿರುವಲ್ಲಿ ಇವರ ಮೇಲ್ಮೆಯಿದೆ. ಕಾಲಕರ್ಮಸಂಯೋಗದಿಂದ ವ್ಯಕ್ತಿ ಮೇಲೆನ್ನಿಸಿದವನು ಕೀಳಾಗುತ್ತಾನೆ ಎಂಬುದು ಇವರು ಇಲ್ಲಿ ಅನುಸರಿಸಿದ ತತ್ವವಾಗಿದೆ. ವ್ಯಕ್ತಿ ಜೀವನದ ದುರಂತಕ್ಕೆ ಅವನು ಆಚರಿಸುವ ಅಶುಭ ಕರ್ಮವೇ ಕಾರಣ. ಎಷ್ಟೇ ಸದ್ಗುಣ ವ್ರತವುಳ್ಳನಾದರೂ ಕಿಂಚಿತ್ ಅಶುಭಕರ್ಮ ವಿಪಾಕದಿಂದ ಅವನು ಅಧೋಗತಿಗಿಳಿಯುತ್ತಾನೆ. ಇದರಿಂದ ಎಷ್ಟೇ ಧೀರೋನ್ನತರಾದರೂ ದೈವಬಲವಿಲ್ಲದೆ ಬಾಳಿನಲ್ಲಿ ಸೋಲನ್ನನುಭವಿಸುತ್ತಾನೆ. ಕರ್ಣನನ್ನು ಕುರಿತು ಪಂಪ ಹೇಳುವ 'ವಿಧಿವಶದಿಂದ ಪುಟ್ಟುವುದು ಪುಟ್ಟಿಸುವಂ ಬಿದಿ (ಪಂ. ಭಾ. ೧೨–೧೮೨) ಸುಯೋಧನನನ್ನು ಕುರಿತು ರನ್ನ ಹೇಳುವ ನೀಂ ಪ್ರತಿಕೂಲ ದೈವನಯ್' ರಾವಣನನ್ನು ಕುರಿತು ನಾಗಚಂದ್ರನು ಹೇಳುವ 'ಅಬ್ಧಿಯುಂ ಒರ್ಮೆ ಕಾಲವಶದಿಂ ಮರ್ಯಾದೆಯುಂ ದಾಂಟದೇ' (ಪಂ. ರಾ. ಸಂ. ೪–೪೮) ಈ ಹೇಳಿಕೆಗಳಲ್ಲಿ ದೈವದ ಪ್ರಗೂಢವಾದ ಹಸ್ತಕ್ಷೇಪ ಬಾಳಿನುದ್ದಕ್ಕೂ ಹೇಗೆ ಬೆನ್ನಟ್ಟಿ ಕಾಡುತ್ತದೆ, ಯಾವ ಪಾಡಾಗಿಸುತ್ತದೆ ಎಂಬುದರ ವಿವೇಚನೆಯಿದೆ. ದೈವಬಲವಿಲ್ಲದ ಈ ಅಸಹಾಯಕ ವ್ಯಕ್ತಿಗಳ ಬಗೆಗೆ ಇಷ್ಟೊಂದು ಅನುಕಂಪೆಯನ್ನೇಕೆ ಈ ಕವಿಗಳು ತೋರಿದ್ದಾರೆ? ಎಂದರೆ ಇದಕ್ಕೆ ಕಾವ್ಯದ ಪ್ರತಿನಾಯಕರ ಮೇಲಿನ ಪಕ್ಷಪಾತವಲ್ಲ, ಮಾನವೀಯ ಅನುಕಂಪೆಯುಳ್ಳ ಜೈನ ದರ್ಶನದ ಅನುಭೂತಿಯೇ ಕಾರಣ. ಮಹಾವೀರ ತೀರ್ಥಂಕರನು ಕೇವಲಜ್ಞಾನವನ್ನು ಪಡೆದು ಶಿಷ್ಯನಾದ ಗೌತಮ ಇಂದ್ರಭೂತಿಗೆ ನೀಡಿದ ರನ್ನನ ಮೊದಲ ಸಂದೇಶದಲ್ಲಿ ಇದರ ಸಾರವಿದೆ. "ಮಾನವ ತನ್ನಿಂದ ತಾನೇ ಕೆಡುತ್ತಾನೆ. ತನ್ನಿಂದ ತಾನೇ ಉದ್ಧಾರವಾಗುತ್ತಾನೆ. ಬಾಳಿನಲ್ಲಿ ಸೋಲು–ಗೆಲವುಗಳು ಮುಖ್ಯವಲ್ಲ. ಅವಿರತವಾದ ಸಾಧನೆ ಮಾತ್ರ ನಡೆಯಲೇಬೇಕು. ಒಬ್ಬರ ಉದ್ಧಾರಕ್ಕೆ ಇನ್ನೊಬ್ಬರು ಕಾರಣರಲ್ಲ. ಅವರೆಲ್ಲ ಪ್ರೇರಕರಾಗಬಹುದು. 'ಇತರರನ್ನು ಉದ್ಧರಿಸುತ್ತೇನೆ' ಎಂದರೆ, ನರಕ ಇತರರಿಂದ ಉದ್ಧಾರವಾಗುತ್ತದೆಯೆಂದರೆ ಬಂಧನ. ಅದಕ್ಕೆ ಪರಾಧೀನನಾಗುವುದು ಬೇಡ ಸ್ವಂತ ಸಾಧನೆ ಮಾಡು" ಈ ತತ್ವನಿಷ್ಠೆ ಈ ದುರಂತ ಪಾತ್ರಗಳಲ್ಲಿ ಪಡಿಮೂಡಿ ಬಂದಿದೆ. ತೀರ್ಥಂಕರರು ಹೇಳುವ 'ಮನಃಪರ್ಯಾಯ ಜ್ಞಾನ'ದಂತೆ ಪ್ರತಿವಸ್ತುವು ಪ್ರಾಣರೂಪವಾಗಿದೆ. ಅಣು ಅಣುವಿಗೆ ಕ್ರಿಯಾಶಕ್ತಿಯಿದೆ.

ಜಡವಾದರೂ ಅದಕ್ಕೆ ಸ್ಪರ್ಶಜ್ಞಾನವಿದೆ. ಅದು ಹುಟ್ಟುತ್ತದೆ. ಬೆಳೆಯುತ್ತದೆ. ಶಾಶ್ವತ ಗುರಿಯನ್ನು ಕಾಣಲು ಹೋರಾಡುತ್ತದೆ. ಆದರೆ ಅವಕ್ಕೆ ವಿರುದ್ಧವಾಗಿ ಅಜ್ಞಾನವಶದಿಂದ ಕರ್ಮಕೋಟಲೆಗೆ ಸಿಲುಕಿ ಅಧೋಗತಿಗಿಳಿಯುತ್ತದೆ. ಕಾಲಗತಿಯಲ್ಲಿ ಅದು ವಿಕಾಸ ಗೊಳ್ಳಲೂಬಹುದು. ಈ ಜನ್ಮದಲ್ಲಿ ನರಕಕ್ಕೆ ಹೋದರೆ ಮುಂದೆ ಸದ್ಗತಿಗೇಳಲೂಬಹುದು. ಅದಕ್ಕೆ ಯಾವುದನ್ನೂ ಹೀನಾಯವಾಗಿ ಕಾಣುವ, ಇದು ಕೀಳೆಂದು ಸ್ಥಾಪಿಸುವ ನಿರ್ಣಯ ದೋಷಪೂರ್ಣ. ಪ್ರತಿ ವ್ಯಕ್ತಿಯಲ್ಲಿನ ಆತ್ಮ ಪರಿಚಯವನ್ನು ಮಾಡಿಕೊಳ್ಳುವುದೇ ನಮ್ಮ ಕರ್ತವ್ಯ. ಯಾವುದನ್ನೂ ನಿಂದಿಸಬೇಡ ದಲಿತ ಹೃದಯಗಳನ್ನು ಕಂಡರೆ ಅನುಕಂಪೆ ಪಡು ವುದು ಮನುಷ್ಯ ಗುಣವಾಗಬೇಕು. ಇಂತಹ ವಿಶಿಷ್ಟ ದೃಷ್ಟಿವಿಶೇಷದಿಂದ ಜೈನಕವಿ ಗಳು ದುಷ್ಟರನ್ನು ಶಿಷ್ಟರಂತೆ ಮನ್ನಿಸಿದರು, ಮಾನವರಂತೆ ಚಿತ್ರಿಸಿದರು. ಇಂತಹ ದುರಂತ ಪಾತ್ರಗಳಲ್ಲಿ ಮಾನವೀಯ ಭಾವಗಳ ಅವತರಣ ಇರುವವರ ಜೊತೆಗೆ ಅವರ ಉದ್ಧಾರದ ಅಭೀಪ್ಸೆಯನ್ನೂ ಜೈನ ಕವಿಗಳು ವ್ಯಕ್ತಪಡಿಸಿದ್ದಾರೆ. ಇವರೆಲ್ಲರೂ ಕೊನೆ ಯಲ್ಲಿ ಪ್ರಾಯಶ್ಚಿತ್ತ ವಿಧಿಯಿಂದ ವಿವೇಕವುಳ್ಳವರಾಗುತ್ತಾರೆ. ಈ ದೃಷ್ಟಿಯಿಂದಾಗಿ ಜಗತ್ತಿನ ಮಾನವತಾವಾದಿ ಕವಿಗಳ ಶ್ರೇಷ್ಠ ಸಾಲಿನಲ್ಲಿ ಕನ್ನಡ ಜೈನ ಕವಿಗಳಿಗೆ ಸ್ಥಾನ ದೊರಕಿದೆ. ಜೈನ ಕವಿಗಳ ಉದಾತ್ತ ಪಾತ್ರಚಿತ್ರಣದಿಂದಾಗಿ ಕನ್ನಡ ಸಾಹಿತ್ಯವಾಹಿನಿ ಪಾಪಿಗಳನ್ನು ಸಹ ಸ್ವರ್ಗಕ್ಕೊಯ್ಯುವ ಪವಿತ್ರ ಗಂಗೆಯಾಗಿದೆ.

## ಜೈನ ಸಾಹಿತ್ಯದ ಪಾಠಗಳು

ಸಾರ್ವತ್ರಿಕವಾದ ಜೀವನ ಮೌಲ್ಯಗಳನ್ನು ಸಂದೇಶ ರೂಪದಲ್ಲಿ ಜೈನ ಕವಿಗಳು ತಮ್ಮ ಕಾವ್ಯಗಳಲ್ಲಿ ಹೇಳಿದ್ದಾರೆ. ಸಾಹಿತ್ಯಕ್ಕೆ ಮಾಧ್ಯಮವಾದ ಭಾಷೆಯನ್ನು ಅವರು ಭಾವ ಪ್ರಕಾಶವೆಂದು ಬಗೆದಿದ್ದಾರೆ. “ಪರಮ ಜಿನೇಂದ್ರ ವಾಣಿಯೆ ಸರಸ್ವತಿ ಅದು ಬೇರೆ ಪೆಣ್ಣ ರೂಪಮನೆ ಧರಿಸಿ ನಿಂದುದಲ್ತು” ಎನ್ನುತ್ತಾನೆ ಪಂಪ. ಕವಿರಾಜಮಾರ್ಗದಲ್ಲಿ ಕಾವ್ಯದ ಪರಮೋದ್ದೇಶವೇನೆಂಬುದರ ವಿವರಣೆಯಿದೆ. (ಕ. ರಾ. ಮಾ. ೧-೧೮)

ಪಾಪಮಿದು ಪುಣ್ಯಮಿದು ಹಿತ ರೂಪಮಿದಹಿತ ಪ್ರಕಾರಮಿದು ಸುಖಮಿದು ದುಃ
ಖೋಪೇತ ವಿದೆಂದಱಿಪುಗುಮಾ ಕವಿ ಪ್ರಧಾನಮಾ ಕಾವ್ಯಂಗಳ್

ಸಾಹಿತ್ಯ ಕ್ರಿಯೆ ಉದ್ವೇಗದ್ದಲ್ಲ ಅನುಕರುಣೆಯದಲ್ಲ. ಅವಾಸ್ತವಲೋಕದ ಅನಾಥ ಪ್ರಜ್ಞೆಯ ಪ್ರತೀಕವಲ್ಲ. ಬಾಳಿನ ವಾಸ್ತವ ಸಂಗತಿಗಳ ಕಲಾತ್ಮಕ ಅಭಿವ್ಯಕ್ತಿ. ಬಾಳಿನ ಹೋರಾಟ ಕಥನ ಸಾಹಿತ್ಯವನ್ನು ಜೀವಂತವಾಗಿಸಬಹುದು; ಆದರೆ ಹೋರಾಟದ ಉದ್ದೇಶವೇನು? ಅದರ ಕೊನೆಯ ದಾರಿ ಯಾವುದು? ಮಾನವ ಅಂತಃಕರಣಗಳನ್ನು ಕದಡುವ ಈ ಸಾಹಿತ್ಯ ಮನಸ್ಸನ್ನು ಪ್ರಶಾಂತ ಕೊಳವನ್ನಾಗಿಯೂ ಮಾಡಬೇಕು. ಅದಕ್ಕೆ ಜನ್ನ ಕವಿ ಸಾಹಿತ್ಯವನ್ನು “ಬಾಳ ಬಟ್ಟೆಯುಪರಮಾಗಮ” ಎನ್ನುತ್ತಾನೆ. ಈ ದೃಷ್ಟಿಯಿಂದ ಜೈನ ಸಾಹಿತ್ಯ ಕೇವಲ ಜನರಂಜನೆಯ ಸಾಧನವಾಗಿರದೆ ಆತ್ಮ ಸಂಸ್ಕಾರ ವನ್ನು ಉಂಟು ಮಾಡುವ ಚೈತನ್ಯ ವಸ್ತುವಾಗಿದೆ. ಜೈನ ಕವಿಗಳು ಲೋಕಕ್ಕೆ ಸಾರಿದ

ಸಂದೇಶ ವಾಕ್ಯಗಳನ್ನಿಲ್ಲಿ ಸಂಗ್ರಹಿಸಬಹುದು. ಇವು ಅವರ ಅನುಭವದ ಸುಪ್ರಾಣಿಗಳು.

ಅರಿವು—ನೀನಾರೆಂಬಱಿವಾಗೆ ಸಾಕು—ರತ್ನಾಕರವರ್ಣಿ.
ಮಾತು—ಪರಮ ಜಿನೇಂದ್ರ ವಾಣಿಯೆ ಸರಸ್ವತಿ—ಪಂಪ.
ಮೌನ—ಮೌನಂ ಸರ್ವಾರ್ಥ ಸಾಧನಂ—ರನ್ನ.
ವಿದ್ಯೆ—ಕ್ಷಯಮುಣವಿಲ್ಲ ಕೇಳ್ದು ಕಡಗಂಡವನಾವನುವಿಲ್ಲ ಎನಲ್ ತದಕ್ಷಯ ನಿಧಿ ತಾನೆ ತನ್ನ ಮಿಸೆದೋಲಗಿಪಂಗಿದಿರಿಲ್ಲ ಎನಿಪ್ಪ ವಾಣಿಯುಂ—ಪಂಪ.
ಕುಲ—ಕುಲಂ ಕುಲಮಲ್ತು ಚಲಂಕುಲಂ ಗುಣಂಕುಲಂ ಅಭಿಮಾನಪ್ಪೊಂದೆ ಕುಲಂ —ಪಂಪ.
ವಿಶ್ವಮಾನವದೃಷ್ಟಿ—ಮನುಜ ಜಾತಿ ತಾನೊಂದೆವಲಂ—ಪಂಪ.
ತ್ಯಾಗ—ತ್ಯಾಗಿಯ ಬಡತನಮುಂ ಕಳದಸಿರಿಯಿಂ ಅಗ್ಗಳಮಲ್ತೆ—ನೇಮಿಚಂದ್ರ.
ದೈವ—ಲಲಾಟದೊಳ್ ಬರೆದ ಲಿಪಿ ಜಲಲಿಪಿಯೇ—ನಾಗಚಂದ್ರ.
ದಯೆ—ಜೀವದಯೆ ಜೈನಧರ್ಮಂ—ಜನ್ನ.
ಕರ್ಮ—ಪುರಾತನ ಕರ್ಮಾಯತ ಮುಕ್ತಿದೇಹಿಗಳಸಕಂ—ನಾಗಚಂದ್ರ.
ಅರಸು—ನೃಪಚಿತ್ತ ವೃತ್ತಿಸಂಚಲಂ ಅದಱಿಂ ಓಲಗಿಸಿ ಬಾಳ್ವುದೆ ಕಷ್ಟಂ ಇಳಾಧಿನಾಥರಾ—ಪಂಪ.
ನ್ಯಾಯ ನಿಷ್ಠುರತೆ—ಉಳ್ಳುದನಾಡೆ ಕೊಳ್ಳಿಗೊಳುವರ್ನೋಡ—ರತ್ನಾಕರವರ್ಣಿ.
ಜಗದ್ಗುರು—ಪರಲೋಕಂ ತನ್ನನಾಡೆಂಬ ಪರಮಜ್ಞಾನಿ ಜಗದ್ಗುರು —ರತ್ನಾಕರವರ್ಣಿ.
ಪುಣ್ಯವಂತರು—ಪುಣ್ಯವಂತರ್ ಮಣ್ಣಂ ಪಿಡಿದೊಡಂ ಪೊನ್ನಕ್ಕುಂ—ನೇಮಿಚಂದ್ರ.
ಸಚ್ಚಾರಿತ್ರ್ಯ—ಆತ್ಮ ಸತ್ವಗುಣ ಹಾನಿಯೆ ಸೂಚಿಸವೆ ವಿನಾಶಮಂ—ನಾಗಚಂದ್ರ.
ಕಾರ್ಯಸಾಧನೆ—ಕಾರ್ಯವಶಕ್ಕೆ ಕತ್ತೆಯ ಕಾಲ್ಪಿಡಿವುದು—ನೇಮಿಚಂದ್ರ.
ಹುಟ್ಟುಸಾವು—ಸಂಸಾರಜೀವಿಗಳ್ ಎಂದು ಪುಟ್ಟಿದರ್ ಅಂದೆ ಸತ್ತರ್—ರನ್ನ.
ಧರ್ಮ—ಭೂತಳದೊಳ್ ಧರ್ಮದಿಂವಗ್ಗಳಮುಂಟೆ ?—ನಯಸೇನ

## ಭಾವೈಕ್ಯ ಮತ್ತು ಸಾಹಿತ್ಯ

ಕನ್ನಡ ಸಾರಸ್ವತ ಪ್ರಪಂಚಕ್ಕೆ ಜೈನ ಸಾರಸ್ವತದಿಂದ ಅಜೇಯ ಬಲ ಬಂದಿದೆ. ಪಂಪ, ರನ್ನ, ರತ್ನಾಕರವರ್ಣಿಗಳು ಕನ್ನಡದಲ್ಲಿ ಪ್ರಥಮ ದರ್ಜೆಯ ಕವಿಗಳೆನ್ನಿಸಿದ್ದಾರೆ. ಪಂಪನ ಕರ್ಣ, ರನ್ನನ ದುರ್ಯೋಧನ, ರತ್ನಾಕರನ ಭರತೇಶ ಈ ಪಾತ್ರಗಳು ಜಾಗತಿಕ ಸಾಹಿತ್ಯದಲ್ಲಿ ಆದರ್ಶಪ್ರಾಯರಾಗಿದ್ದಾರೆ. ಒಟ್ಟಿನಲ್ಲಿ ಈ ಸಾಹಿತ್ಯದ ಭಾವವೈಪುಲ್ಯ ವಿಸ್ತಾರವಾದುದು. ಆ ವಾಙ್ಮಯ ವಾರಿಧಿಯನ್ನು ದಾಟುವದು ಅದಮ್ಯ ಸಾಹಸ. ಪಂಪನ ಹೇಳುವ ಎಂದೂ ಮರೆಯದಂತಹ ಒಂದು ಸನ್ನಿವೇಶವನ್ನಿಲ್ಲಿ ಪ್ರಸ್ತಾಪಿಸಬಹುದು.

ಒಮ್ಮೆ ಗಂಧರ್ವರು ದುರ್ಯೋಧನನನ್ನು ಎತ್ತಿಕೊಂಡು ಆಕಾಶಕ್ಕೊಯ್ಯುತ್ತಾರೆ

ಭಾನುಮತಿ ತನ್ನ ಪತಿಯನ್ನು ಬಿಡಿಸಿ ತರುವದಿಲ್ಲ ಎಂದು ಕಣ್ಣೀರಿಡುತ್ತಾಳೆ. ಅದನ್ನು ತಿಳಿದ ಧರ್ಮ ಕೌರವ ತನ್ನ ವೈರಿಯಾದರೂ ಅದನ್ನು ಬಗೆಯಡೆ ಭಾನುಮತಿಗೆ ಸಂತೈಸುತ್ತ ಹೇಳುತ್ತಾನೆ.

ಸುರಿಯಲ್ವೇಡಮುದರ್ಕೆ ಬಾಷ್ಪಜಳಮಂ ನಿನ್ನಾಣ್ಮನಂ ನಿನ್ನೊಳಿಂ
ದಿರದಾಂ ಕೂಡುವೆವೆಮ್ಮೊಳಾದಕಲಹಕ್ಕೆಂತಾದೊಡಂ ಕೇಳ್ ನೂ
ರ್ವರದಲ ಕೌರವ ರಾಯಂಮುಯ್ವರ್ ವಲಂ ಮತ್ತೋರ್ವರೊಳ್ ತೊಟ್ಟ ಸಂ
ಗರರಂಗಕ್ಕೆ ಜಸಕ್ಕೆ ಕೂಡಲ ವೆಡೆಯೊಳ್ ನೂರಯ್ವರಾವಲ್ಲವೇ :

"ಕಣ್ಣೀರು ಸುರಿಸಬೇಡ ನಿನ್ನ ಪತಿಯನ್ನು ಮರಳಿ ತರುತ್ತೇವೆ. ನಮ್ಮಲ್ಲಿನ ಕಲಹದಲ್ಲಿ ನೀವು ನೂರು ನಾವು ಅಯ್ವರು. ಆದರೆ ನಾವು ಮತ್ತೊಬ್ಬರೊಡನೆ ಕಲಹ ಮಾಡುವಲ್ಲಿ ಯಶ ಸಂಪಾದಿಸುವಲ್ಲಿ ನೂರಯ್ವರೂ ಒಂದೇ." ಭಾರತೀಯ ಸಾಹಿತ್ಯದಲ್ಲಿ ಭಾವೈಕ್ಯ ಕುರಿತು ಇಷ್ಟೊಂದು ಗಟ್ಟಿಯಾದ ಮಾತು ಪ್ರಾಯಶಃ ಇನ್ನೆಲ್ಲಿಯೂ ಬಂದಿರಲಾರದು. ನಾವು ಭಕ್ತರೂ ಹೌದು, ಅವಿಭಕ್ತರೂ ಹೌದು. "ಅವಿಭಕ್ತಂ ವಿಭಕ್ತೇಷು" ಎಂಬ ಭಾವಸೂತ್ರ ಇಲ್ಲಿದೆ.

## ಮರೆಯಲ್ಕೆ ಬರ್ಕುಮೆ

ಮಹಾಕವಿ ಒಂದು ರಾಷ್ಟ್ರದ ಸಂಪತ್ತು. ಅವನ ಸ್ವದೇಶಾಭಿಮಾನ ಜನತೆಯನ್ನು ಮೇಲೆತ್ತುತ್ತದೆ. ಮಾತೃ ಋಣದಷ್ಟೇ ಮಾತೃ ಭೂಮಿಯ ಋಣವೂ ಹೆಚ್ಚಿನದಾಗಿದೆ. ಸರ್ ವಾಲ್ಟರ್ ಸ್ಕಾಟ್ ಹೇಳುತ್ತಾನೆ.

"Breathes there the man with soul so dead,
Who never to himself hath said,
This is my own my native Land"

ಯಾರು 'ಇದು ನನ್ನ ಮಾತೃ ಭೂಮಿ' ಎಂದು ಹೇಳುವುದಿಲ್ಲವೋ ಅವರು ಬದುಕಿದ್ದರೂ ಸತ್ತಂತೆ ಈ ಹಿನ್ನೆಲೆಯಲ್ಲಿ ಪಂಪನ "ಆರಂಕುಸವಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ ತೆಂಕಣನಾಡ ಮರೆಯಲ್ಕೆಂದುಂ ಮನಂ ಬರ್ಕುಮೇ" ಎಂಬೀ ಮಾತುಗಳು ಮರುಕಳಿಸುತ್ತವೆ. ಜೈನ ಸಾಹಿತ್ಯ ಇವೆಲ್ಲ ಕಾರಣಗಳಿಂದ ಕನ್ನಡದ ಅಕ್ಷಯ ನಿಧಿಯೆನ್ನಿಸಿದೆ.

## ಎಸ್. ಶಿವಣ್ಣ

# ಕೆಲವು ಅಪ್ರಕಟಿತ ತ್ರಿಪದಿಗಳು*

### ೧. ಚಿಕ್ಕ ಬಸವ ತ್ರಿವಿಧಿ

ಬಸವಾದಿ ಶಿವಶರಣ–ಶರಣೆಯರ ಸ್ತುತಿ ಕೃತಿಯ ವಸ್ತು. ಇದರಲ್ಲಿ ೫೨ ತ್ರಿಪದಿಗಳೂ, ಕೊನೆಯಲ್ಲಿ ಒಂದು ಕಂದವೂ ಇವೆ. ಕೃತಿಯಿಂದ ಕೃತಿಕಾರನ ಬಗೆಗೆ ಯಾವ ಸಂಗತಿಯೂ ತಿಳಿದುಬರುವುದಿಲ್ಲ. ಕೃತಿಗಿರುವ ಹೆಸರನ್ನು ಆಧರಿಸಿ ಪ್ರೊ. ಸಿ. ಮಹಾದೇವಪ್ಪನವರು "ಕ್ರಿ.ಶ. ೧೫೨೦ರ ವೇಳೆಗೆ ಗತಿಸಿಹೋಗಿದ್ದ ಸೋಲೂರ ಚಿಕ್ಕಬಸವನೇ" ಕೃತಿಕಾರ ನಾಗಿರಬಹುದೆಂದು ಅಭಿಪ್ರಾಯಪಟ್ಟಿದ್ದಾರೆ.[1] ಈ ಕೃತಿಯಲ್ಲಿ ಉಲ್ಲೇಖಗೊಂಡಿರುವ ಹಲವಾರು ಶಿವಶರಣ-ಶರಣೆಯರ ಹೆಸರುಗಳಿಂತಿವೆ. ಆಯ್ದಕ್ಕಿ ಮಾರಯ್ಯ, ಜೋದರ ಮಾಯಣ್ಣ, ಕಿನ್ನರಿ ಬೊಮ್ಮಯ್ಯ, ಕಕ್ಕಯ್ಯ, ರಕ್ಕಸ ಬೊಮ್ಮಯ್ಯ, ಚಿಕ್ಕ ಚೆನ್ನಬಸವ, ಅಂಬಿಗರ ಚೌಡಯ್ಯ, ಕೆಂಬಾವಿ ಭೋಗಣ್ಣ, ಮಡಿವಳ ಮಾಚಿದೇವ, ಪಡಿಹಾರಿ ಬ್ರಹ್ಮಯ್ಯ, ಹಡಪದಪ್ಪಣ್ಣ, ಮಿಂಡ ಸಂಗಯ್ಯ, ನಂಬಿಯಣ್ಣ, ಕೊಂಡಗೂಳಿ ಕೇಶಿ ರಾಜ, ರೇವಣ್ಣ, ನೀಲಮ್ಮ, ಮಹಾದೇವಿ, ಬೊಂತಾದೇವಿ, ಕೊಡಗೂಸು, ಹೇರೂರ ಹೆಣ್ಣು, ಅಮ್ಮವ್ವೆ, ಜಿಕೆಮ್ಮವ್ವೆ, ನಾಗಾಯಿ, ಸತ್ಯಕ್ಕ.

ಕೃತಿಯ ಆದ್ಯಂತ್ಯಗಳ ಪದ್ಯಗಳು :

ಜಯ ಜಯ ಬಸವಯ್ಯ ಜಯ ಜಯ ಬಸವರಸ
ಜಯ ಜಯ ಬಸವಲಿಂಗ ಗುರು ತಂದೆಯೆ
ಜಯ ಸಿದ್ಧಿಯನಿತ್ತು ಸಲಹಯ್ಯ

ಕಂದ ॥ ಜಯ ಶಂಕರ ಜಯ ಶಂಕರ
ಜಯ ಶಂಕರ ಜಯತು ಜಯತು ಜಯ ಜಯ ಎನುತಂ
ಜಯ ಸ್ತೋತ್ರ ಮಾಡಿ ಪೊಗಳಲು
ಜಯ ಸಿದ್ಧಿಯನಿತ್ತು ಎನ್ನ ಸಲಹುವ ಬಸವಾ

ತ್ರಿವಿಧಿಯಲ್ಲಿನ ಇನ್ನು ಕೆಲವು ಪದ್ಯಗಳು :

---

* ಇಲ್ಲಿನ ತ್ರಿವಿಧಿಗಳೆಲ್ಲ ಕವಿಚರಿತೆಯ ಅನುಕ್ತ ಕೃತಿಗಳು.

[1] ಸಿದ್ಧಲಿಂಗ ಶಿವಯೋಗಿ, ಪು. ೧೨೧, ೧೯೭೪.

ತಂದೆತಾಯಿಯು ನೀನು ಬಂಧುಬಳಗವು ನೀನು
ಚಂದ್ರಶೇಖರನೆ ಬಸವಯ್ಯ ನೀವೆನ್ನ
ಕಂದ ಬಾರೆಂದು ಸಲಹಯ್ಯ (೮)
ಎನ್ನ ಕರದೊಳಗಿರ್ದು ಎನ್ನೊಳೀತಕೆ ನುಡಿಯೆ
ನಿನ್ನ ನೆಲೆಗಳನು ಕಾಣಬಾರದು ಬಸವ
ಮನ್ನಿಸಿ ಎನ್ನ ಸಲಹಯ್ಯ (೧೦)
ನೊಂದೆ ಬೆಂದೆನು ಬಸವ ಬಂದೆ ಭವಭವದೊಳು
ಕಂದ ನೀನಂಜದಿರು ಎಂದು ಅಭಯಕರ-
ದಿಂದೆತ್ತಿ ಎನ್ನ ಸಲಹಯ್ಯ (೧೯)
ಲಿಂಗದೊಳು ನಿಜಸುಖಿ ಜಂಗಮದೊಳವಧಾನಿ
ಸಂಗನ ಬಸವೇಶನರ್ಧಾಂಗಿ ನೀಲಮ್ಮ
ಹಿಂಗದೆ ಎನಗೆ ಕೃಪೆಯಾಗು (೪೪)
ಹೇಮುವೆಲ್ಲವು ಒಂದೆ ನಾಮ ಹಲವಾದಾವು
ಸೋಮಧರ ನಿಮ್ಮ ಶರಣರ ಪರಿಯಿಂತು
ಆ ಮಹಾತ್ಮರಿಗೆ ಶರಣಯ್ಯ (೪೫)

## ೨. ಬಸವಸ್ತೋತ್ರದ ತ್ರಿವಿಧಿ

ಕಲ್ಯಾಣದ ಭಕ್ತಿಭಂಡಾರಿ ಬಸವಣ್ಣನ ಸ್ತುತಿಯನ್ನು ವಸ್ತುವಾಗುಳ್ಳ 'ಬಸವಸ್ತೋತ್ರ ತ್ರಿವಿಧಿ'ಯ ಕರ್ತೃ ಸಿದ್ಧಲಿಂಗ. ಕೃತಿಯಿಂದ ಕೃತಿಕಾರನ ಹೆಸರು ಹೊರತಾಗಿ ಮತ್ತಾವ ಸಂಗತಿಗಳು ತಿಳಿದುಬರುವುದಿಲ್ಲ. ಕೃತಿಯಲ್ಲಿ ೬೭ ತ್ರಿಪದಿಗಳಿದ್ದು ಪ್ರಾಯಿಕವಾಗಿ 'ಬಸವ ಕೃಪೆಯಾಗು' ಅಥವಾ 'ಬಸವಯ್ಯ ಕೃಪೆಯಾಗು' ಎಂದು ಮುಗಿಯುವುವು. ಸಿದ್ಧಲಿಂಗ ತನ್ನ ಕೃತಿಯನ್ನು 'ಗಣನೇಸು ಛಂದವನಣುಮಾತ್ರವಱಿಯದೆ ಬಣ್ಣಿಸಿ'ದುದಾಗಿ ಹೇಳಿ ಕೊಂಡಿರುವನು.

ಕೃತಿಯ ಆದ್ಯಂತ್ಯಗಳ ಪದ್ಯಗಳು :

ಶ್ರೀ ಮಹಾದೇವಮತ್ಸ್ವಾಮಿ ಸಂಗನಬಸವ
ಕಾಮುಗುಣವಳಿದು ನಿಮ್ಮ ಸ್ಮರಿಸುವ ಮನವ
ಪ್ರೇಮದಿಂದೆನಗೆ ಕೃಪೆಯಾಗು (೧)
ಪರಮ ಗುರು ಬಸವನ ವರಮಹಾಸ್ತೋತ್ರವ
ಬರದೋದಿ ಪಠಿಸಿ ಕೇಳಿ ಪೇಳ್ದರಿಗೆ
ಮರಳಿ ಭವವಿಲ್ಲವಿದು ಸತ್ಯ (೬೭)

ತ್ರಿಪದಿಯಲ್ಲಿನ ಇನ್ನು ಕೆಲವು ಪದ್ಯಗಳು :

ಏನೊಂದು ನೋವನು ನಾ ನಿಮಗೆ ಪೇಳುವೆ
ಮಾನವರೊಡನೆ ನಾನುಸುರೆ ಸರ್ವ
ಸನ್ಮಾನಿ ಬಸವ ಕೃಪೆಯಾಗು (೬)

ಕೊಡುವಾತ ಶಿವನೆಂದು ನುಡಿದ ಗುರುವಚನವ
ಬಿಡದೋದಿ ಮರಳಿ ಒಡಲಿಗಿನ್ನೆಂತೆಂಬ
ದೃಢ ಹೀನಗೆ ಬಸವ ಕೃಪೆಯಾಗು (೨೩)
ಸಗಣಿಯ ಬೆನಕನಿಗೆ ಅಗಿಲು ಕುಂಕುಮವಿಡಲು
ಸೊಗಸುಳ್ಳ ಗಂಧ ಒಗೆವುದೆ ಅದರೊಳಗೆ
ಸುಗುಣಮಯ ಬಸವ ಶರಣಾಗು (೩೬)
ಕೃಪೆಯಾಗು ಬಸವಣ್ಣ ಕೃಪೆಯಾಗು ಬಸವಪ್ಪ
ಕೃಪೆಯಾಗು ಬಸವ ಶಶಿಧರ ಮೂರ್ತಿಯೆ
ಅಪರಾಧವೆನ್ನೊಳರಸದೆ (೫೩)
ಸಂಗಯ್ಯನೊಳು ನಿನ್ನ ಅಂಗವನಡಗಿಸಿದ
ಹಾಂಗೆ ನಾ ನಿನ್ನ ಅಂಗದೊಳಗಡಗುವದ
ಮಂಗಳಮಯ ಬಸವ ಕೃಪೆಯಾಗು (೬೫)

## ೩. ಪ್ರಭುದೇವರ ಸ್ತೋತ್ರದ ತ್ರಿವಿಧಿ

ಗರಣಿ ಬಸವಲಿಂಗ (ಸು. ೧೬೦೦)ನ ಶಿಷ್ಯ ಮರಿರಾಚಪಟ್ಟೇಶ (ಸು. ೧೬೨೦) 'ಪ್ರಭುದೇವರ ಸ್ತೋತ್ರದ ತ್ರಿವಿಧಿ'ಯ ಕರ್ತೃ. ಈತನ ಮತ್ತೊಂದು ಕೃತಿಯಾದ ಪ್ರಭುನಟನ ತಾರಾವಳಿಯಿಂದ ಈತ ಪ್ರಸನ್ನ ದೇಶಿಕನ ಕುವರನೆಂಬ ಅಂಶ ತಿಳಿಯುವುದು. ಬಸವಾದಿಗಳ ಸಮಕಾಲೀನನಾಗಿದ್ದ ವೈರಾಗ್ಯಮೂರ್ತಿ ಅಲ್ಲಮಪ್ರಭುವಿನ ಸ್ತುತಿ ತ್ರಿಪದಿಯ ವಸ್ತು. ಗುರುವಾದ ಬಸವೇಶ್ವರನ ಅನುಜ್ಞೆಯಂತೆ ಕೃತಿಯನ್ನು ರಚಿಸಿದುದಾಗಿಯೂ, ತಾನು 'ಛಂದಸ್ಸು, ವ್ಯಾಕರಣ ಛಂದದಲಂಕಾರ'ಗಳನ್ನು ತಿಳಿಯದೆ 'ಮನ ಬಂದಂತೆ ನುತಿಸಿ'ದುದಾಗಿ ಹೇಳಿಕೊಂಡಿರುವನು. ಕೃತಿಯಲ್ಲಿ ೬೩ ತ್ರಿಪದಿಗಳಿದ್ದು ಬಹುಪಾಲು ತ್ರಿಪದಿಗಳು 'ಕೃಪೆಯಾಗು' ಎಂದು ಮುಗಿದಿವೆ.

ಕೃತಿಯ ಆದ್ಯಂತ್ಯಗಳ ಪದ್ಯಗಳು :

ಶ್ರೀಮಹಾದೇವ ಮತ್ಸ್ವಾಮಿ ಸದ್ಗುರುಮೂರ್ತಿ
ಪ್ರೇಮದಿಂದೆನ್ನ ಬಿನ್ನಪವನವಧರಿಸು
ಕಾಮಮದಭಂಗ ಪ್ರಭುಲಿಂಗ (೧)
ಪರಮಗುರು ಪ್ರಭುದೇವನುರುತರದ ಸ್ತೋತ್ರದ
ಬರದೋದಿಯರ್ಥಗಳ ಕೇಳೆ ಪ್ರಮಥರೊಳ-
ಗಿರುತಿರ್ಪನವನು ಪುಸಿಯಲ್ಲ (೬೩)

ತ್ರಿವಿಧಿಯಲ್ಲಿನ ಇನ್ನು ಕೆಲವು ಪದ್ಯಗಳು :

ಅಸಮ ಬಸವಾದಿಗಣವಿಸರಕ್ಕೆ ಪ್ರಾಣ ತಾ-
ಮಸಗುಣಹರಣ ಸದ್ಭಕ್ತನತಚರಣ
ಮಿಸುಪ ಪ್ರಭುಶರಣ ಶುಭಕರಣ (೩)
ನಿರುತಲಿಂಗದಿ ಮನವು ಗುರುಭಕ್ತಿಯೊಳು ತನುವು

ಚರಲಿಂಗಕಿನಿತು ಧನವೇದ್ಯವಾಗದು
ವರಪ್ರಭುವೆನೆನಗೆ ಗತಿ ಏನು ? (೨೧)
ನೀನು ಅಱಿವಿನ ತಿರುಳು ನಾನು ಮಱವೆಯ ಮರುಳು
ನೀನು ನಿಜ ಸುಗುಣ ನಾನು ಜಿನುಗುವ ಪಿಸುಣ
ನಾ ನಿಮಗೆ ಸಮನೆ ಪ್ರಭುದೇವ (೪೨)
ಉರಿಯು ಕರ್ಪುರ ಬೆರದು ಎರಡಳಿದ ತೆಱನಂತೆ
ಗುರು ಪ್ರಭುವೆ ಎನ್ನ ಶರಿರವ ನಿಮ್ಮ ಪದ
ಸರಸಿಜದೊಳಿರಿಸಿ ಪೊರೆಯಯ್ಯ (೫೪)
ಮಂಗಳಾಂಗನೆ ನಿಮ್ಮ ಹಿಂಗಿರಲಾರೆ ಪ್ರಭು-
ಲಿಂಗ ನಿಮ್ಮಂಘ್ರಿ ಪಂಕಜದೊಳು ಬಿಡದೆ
ಭೃಂಗನಾಗಿರಿಸೊ ವನುಗಾಲ (೫೬)

## ೪. ಕಥಾಮಲ್ಲನ ತ್ರಿವಿಧಿ

'ಗುರುಶಾಂತ' ಅಂಕಿತದಲ್ಲಿನ ೨೧ ತ್ರಿವಿಧಿಗಳುಳ್ಳ 'ಕಥಾಮಲ್ಲನ ತ್ರಿವಿಧಿಯ ಕರ್ತೃವಿನ ಹೆಸರು ಉಳಿದುಬಂದಿಲ್ಲ. ಇದರ ವಸ್ತು ಪ್ರಮುಖವಾಗಿ ದೃಷ್ಟಾಂತಪೂರ್ವಕವಾದ ನೀತಿನಿರೂಪಣೆ. ಕರಸ್ಥಲದ ನಾಗಲಿಂಗನ ಕೃತಿಗಳಲ್ಲಿ 'ಗುರುಶಾಂತ' ಅಂಕಿತ ದೊರಕುತ್ತದೆ. ಹೀಗಾಗಿ ಪ್ರಸ್ತುತ ಕೃತಿಯ ಕರ್ತೃ ನಾಗಲಿಂಗನೇನೋ ಎಂಬುದು ಪರಿಶೀಲನಾರ್ಹ. ಕೃತಿಯ ಆದ್ಯಂತ್ಯಗಳ ಪದ್ಯಗಳು :

ನಗೆಗೆಡೆಯಾದವರ ನಗುನಗುತ ಪೇಳಿದನು
ಅಗಜಾವಲ್ಲಭನೆ ಗುರುಶಾಂತ ನೀನೆನ್ನ
ನಗುವಂತೆ ಮಾಡದಿರು ತಂದೆ (೧)
ಈ ತ್ರಿವಿಧಿಯನತ್ಯಂತ ಪ್ರೀತಿಯಿಂ ಬರದೋದಿ
ಓತು ಕೇಳಿದರೆ ಒಲಿದರ್ಥವ ಪೇಳಿದರೆ
ಭೂತೇಶನೊಲಿವ ಗುರುಶಾಂತ (೨೧)

ತ್ರಿವಿಧಿಯಲ್ಲಿನ ಇನ್ನು ಕೆಲವು ಪದ್ಯಗಳು :

ಹಗೆ ಹೊಲ್ಲಬಲ್ಲಿದರ ನಗೆ ಹೊಲ್ಲನಲ್ಲೆಯರ
ಅಘಹರನೊಡನೆ ಸೆಣಸಿದ ದಕ್ಷಬ್ರಹ್ಮ
ನಗೆಗೇಡಿಯಾದ ಗುರು ಶಾಂತ (೭)
ಒಂದು ಸಂಧಿಗೆ ಸಿಂಹನೊಂದು ಸಾವಿರ ತ್ರಾಣ
ಅಂದು ದ್ರಾಪದಿಗೆ ಮನವಿಟ್ಟ ಕೀಚಕನ
ಕೊಂದನು ಭೀಮ ಗುರುಶಾಂತ (೫)
ನಾರದರು ಪರ್ವತರು ಘೋರತಪದೊಳಗಿರ್ದು
ನಾರಿಯೊರ್ವಳಿಗೆ ಮನಸೋತ ಕಾರಣದಿ
ಪರುಕಾದರಂದು ಗುರುಶಾಂತ (೯)

ಏಡಿಗೆ ತಲೆಯಿಲ್ಲ ಕೋಡಗಕೆ ಮನೆಯಿಲ್ಲ
ಓಡಿನೊಳಗಿಲ್ಲ ಪ್ರತಿಬಿಂಬ ಕತ್ತೆಯ
ಹೊಡಿದವರಿಲ್ಲ ಗುರುಶಾಂತ (೧೫)
ಬೆಲ್ಲದ ಮೂಲೆಯನೆಲ್ಲಿ ಸವಿದಡೆ ಸ್ವಾದ
ಬಲ್ಲವರೊಡನೆ ಮಥನ ಮಾಡಿದರೆ
ಬೆಲ್ಲವ ಸವಿದಂತೆ ಗುರುಶಾಂತ (೭೦)

## ೫. ಗೌರಮ್ಮನ ಸೋಬಾನದ ತ್ರಿವಿಧಿ

೩೭ ತ್ರಿವಿಧಿಗಳನ್ನುಳ್ಳ 'ಗೌರಮ್ಮನ ಸೋಬಾನದ ತ್ರಿವಿಧಿ'ಯ ಕರ್ತೃ ಅಜ್ಞಾತ. ಇದರಲ್ಲಿ ಪಾರ್ವತಿಯ ಅಂಗಾಂಗಗಳನ್ನು ಹೋಲಿಕೆಗಳೊಡನೆ ಸ್ತುತಿಸಲಾಗಿದೆ. ಪ್ರತಿ ತ್ರಿವಿಧಿಯು ಪ್ರಾಯಿಕವಾಗಿ 'ಭಾಪಮಿಗೆ ಚಂದ' ಅಥವಾ 'ಮಿಗೆ ಚಂದ' ಎಂದು ಮುಗಿದಿವೆ.

ಕೃತಿಯ ಆದ್ಯಂತ್ಯಗಳ ಪದ್ಯಗಳು :

ಶ್ರೀ ಗಿರಿಜಾಪತಿ ಚಂದ ಶ್ರೀಗೌರಿ ನಡೆ ಚಂದ
ಶ್ರೀ ಗಣಾಧಿಪ ಮಿಗೆ ಚಂದ
ಶ್ರೀ ಗಣಾಧಿಪ ಮಿಗೆ ಚಂದ ಧರೆಯೊಳು
ಶ್ರೀ ಗೌರಿದೇವಿ ಮಿಗೆ ಚಂದ (೧)
ಉರ್ವಿಗೆ ದೊರೆ ಚಂದ ಪುರ ಜನಕೆ ಮನೆ ಚಂದ
ಸರ್ವರಿಗೆ ಶರಣ ಮಿಗೆ ಚಂದ
ಸರ್ವರಿಗೆ ಶರಣ ಮಿಗೆ ಚಂದ ಗೌರಮ್ಮನ
ಸರ್ವಾಂಗವೆಲ್ಲ ಮಿಗೆ ಚಂದ (೩೭)

ತ್ರಿವಿಧಿಯಲ್ಲಿನ ಇನ್ನು ಕೆಲವು ಪದ್ಯಗಳು :

ಭಾಸೆ ಭಕ್ತಗೆ ಚಂದ ಲೇಸು ನಂಟಗೆ ಚಂದ
ದಾಸೋಹ ಮಾಡುವ ಮನೆ ಚಂದ
ದಾಸೋಹ ಮಾಡುವ ಮನೆ ಚಂದ ಗೌರಮ್ಮನ
ಕೇಶದ ಭಾವ ಮಿಗೆ ಚಂದ (೩)
ಹಬ್ಬದ ಮನೆ ಚಂದ ಇಬ್ಬರ ದನಿ ಚಂದ
ಉಬ್ಬೆದ್ದು ಹರಿವ ಹೊಳೆ ಚಂದ
ಉಬ್ಬೆದ್ದು ಹರಿವ ಹೊಳೆ ಚಂದ ಗೌರಮ್ಮನ
ಹುಬ್ಬಿನ ಭಾವ ಮಿಗೆ ಚಂದ (೬)
ಗಂಗೆಯ ತಡಿ ಚೆಂದ ಲಿಂಗದ ಗುಡಿ ಚಂದ
ಹೊಂಗೇದಗೆಯ ಹೂವು ಮಿಗೆ ಚಂದ
ಹೊಂಗೇದಗೆಯ ಹೂವು ಮಿಗೆ ಚಂದ ಗೌರಮ್ಮನ
ಮುಂಗಯ್ಯ ಭಾವ ಕರ ಚಂದ (೨೧)
ಗರುಡನ ಮರಿ ಚಂದ ಮುರುಡಿ ಸರ್ಪಣಿ ಚಂದ

ಹುರುಡಿನ ಹೆಣ್ಣು ಮಿಗೆ ಚಂದ
ಹುರುಡಿನ ಹೆಣ್ಣು ಮಿಗೆ ಚಂದ ಗೌರಮ್ಮನ
ಹರಡಿನ ಭಾವ ಕರ ಚಂದ (೩೪)
ಸಾಧಿನ ಕಪ್ಪು ಚಂದ ಪಾದರಿಹೂವು ಚಂದ
ಸೋಧಿಸಿದ ಸುಣ್ಣ ಮಿಗೆ ಚಂದ
ಸೋಧಿಸಿದ ಸುಣ್ಣ ಮಿಗೆ ಚಂದ ಗೌರಮ್ಮನ
ಪಾದದಾ ಭಾವ ಮಿಗೆ ಚಂದ (೩೬)

## ೬. ಮಠಸ್ಥಲದ ತ್ರಿವಿಧಿ

ಗವಿಯ ಸಿದ್ಧಾರ್ಯ ಕೃತ 'ಮಠಸ್ಥಲ ತ್ರಿವಿಧಿಯಲ್ಲಿ ೬೭ ತ್ರಿಪದಿಗಳಿವೆ. ಇದರಲ್ಲಿ ಚತುರಾಚಾರ್ಯರಾದ ರೇವಣಸಿದ್ಧ, ಮರುಳಾರ್ಯ ಏಕೋರಾಮ ಮತ್ತು ಪಂಡಿತಾ ರಾಧ್ಯರ ಸ್ತುತಿ ಮತ್ತು ಪ್ರತಿ ಆಚಾರ್ಯರ ಸ್ಥಲ, ಕಂಥೆ, ಬಗೆ, ಗೋತ್ರ, ವಾಹನ, ಮುದ್ರೆ ಮೊದಲಾದುವುಗಳಿಗೆ ಸಂಬಂಧಿಸಿದ ವಿವರಗಳಿವೆ. ಗವಿಯ ಸಿದ್ಧಾರ್ಯ ತ್ರಿವಿಧಿ ಯೊಡನೆ 'ದೀಕ್ಷಾ ವಿಧಾನ' ಮತ್ತು 'ಹಾಡು'ಗಳನ್ನು ರಚಿಸಿರುವನು.

ಕೃತಿಯ ಆದ್ಯಂತ್ಯಂಗಳಲ್ಲಿನ ಪದ್ಯಗಳು :

ಶ್ರೀ ಗುರು ಮಾಹೇಶ್ವರ ಕೃಪೆಯಾಗಿ ಕೃತಿಯುಗದಿ ಭವ
ಸಾಗರವದಾಂಟೆ ನರರಿಗೆ ದೀಕ್ಷೆಯನಿತ್ತ
ಆಗಮ ಮಠಸ್ಥಲವಿದು (೧)
ಅಪಹರಿಸಿ ದೋಷವನು ಕೃಪೆಯಿಂದಾಚಾರ್ಯರ
ನಿಪುಣ ಮತೀಯೀಯೆ ಗವಿಯ ಸಿದ್ಧಾಚಾರ್ಯ
ತ್ರಿಹುದಿ ಸಂಪೂರ್ಣ (?) (೬೭)

ತ್ರಿವಿಧಿಯಲ್ಲಿನ ಇನ್ನು ಕೆಲವು ಪದ್ಯಗಳು :

ಶ್ರೀ ಕೈಲಾಸದಲಿ ರೇಣುಕ ಗಣೇಶ್ವರನು
ತಾ ಕಲಿಯುಗದ ಮೊದಲ ಪಾದದ ಕೊಲ್ಲಿ-
ಪಾಕಿ ಸೋಮೇಶ್ವರನೊಳಗುದಿಸೀ (೨೨)
ಖ್ಯಾತಿಯಿಂ ಕೈಲಾಸನಾಥನಿಂ ದಾರುಕಾ
ಭೂತಳದೊಳಗೆ ಮರುಳಾಚಾರ್ಯನಾಮದಿ
ಜ್ಯೋತಿ ಸಿದ್ಧೇಶನೊಳಗುದಿಸೀ (೩೦)
ಶ್ರೀ ಕೈಲಾಸದ ಹರನ ವಾಕು ನಿರೂಪದಿ
ಶಂಕುಕರ್ನನೆಂಬ ಗಣನಾಥನೆ ಘನ
ಏಕೋ ರಾಮನಾಮಾಂಕಿತದಲಿ (೩೯)
ಲೀಲೆಯಿಂದೈದಿ ಭೂತಳವ ಪಾವನವ ಮಾಡಿ
ಬಾಲಬ್ರಹ್ಮೇಶನಿಂದುದಿಸಿ ಪ್ರಾಣ
ಸಮ್ಮೇಳ ಗೋಮಯದಿ ಕರಲಿಂಗ (೪೦)
ಮುಂತೆ ಕೈಲಾಸದಲಿ ಕಂತುಹರ ಕಳುಪೆ ನಿ-

ಶ್ಚಿಂತೆ ಗೋಕರ್ಣನೆಂಬ ಗಣೇಶ್ವರ ತ್ರಿಪು-
ರಾಂತಕರೊಳು ಉದಯಿಸೀ (೪೯)
ನಿರ್ಜರ ಪಂಡಿತಾರ್ಯರಾಪ್ರಜ್ವಲಪಾಂಕುರನೇನಾ
ಸೆಜ್ಜೆಮಣಿಮಯದ ಪ್ರಾಣಲಿಂಗ ಚೆನ್ನಮಲ್ಲಿ-
ಕಾರ್ಜುನನೆಂಬ ವರನಾಮಾ (೫೦)

ಇಲ್ಲಿನ ತ್ರಿವಿಧಿಗಳನ್ನು ಬಳಸಿಕೊಳ್ಳಲು ಸಮ್ಮತಿಸಿದ ಶ್ರೀ ಎಸ್. ಉಮಾಪತಿ, ಎಂ. ಎ. ಪ್ರೊ. ಸಿ. ಮಹಾದೇವಪ್ಪ ಎಂ. ಎ. ಅವರಿಗೆ ನನ್ನ ವಂದನೆಗಳು.

ಎಸ್. ಉಮಾಪತಿ

# ಮೇದಾರ ಕೇತಯ್ಯಗಳ ಸಾಂಗತ್ಯ*

ಮೇದಾರ ಕೇತಯ್ಯಗಳ ಸಾಂಗತ್ಯದ ಆರಂಭದಲ್ಲಾಗಲೀ ಅಥವಾ ಕೊನೆಯಲ್ಲಾಗಲೀ ಕವಿ ತನ್ನ ಹೆಸರನ್ನು ಸಹ ಹೇಳಿರುವುದಿಲ್ಲ. ಆದುದರಿಂದ ಕಾಲದೇಶಗಳು ಕಾವ್ಯದಿಂದ ತಿಳಿದುಬರುವುದಿಲ್ಲ. ಕಾವ್ಯ ಕವಿ ಸೂಚಿಸಿರುವಂತೆ ಸಾಂಗತ್ಯದಲ್ಲಿ ರಚಿತವಾಗಿದೆ.

ಮೊದಲ ನಾಲ್ಕು ಪದ್ಯಗಳಲ್ಲಿ ಕವಿಯು ಈಶ್ವರನನ್ನು ಸಾಂಪ್ರದಾಯಿಕವಾಗಿ ಸ್ತುತಿಸಿ ಐದನೆಯ ಪದ್ಯದಲ್ಲಿ ಶಿವಶರಣರನ್ನು ಪ್ರಾರ್ಥಿಸಿ

"ಪೊಡವಿಯೊಳೀಯೆ ಮೇದಾರ ಕೇತಿ ತಂದೆಯ
ಅಡಿವಿಡಿದಸುಗೊಡೆ ಬಸವಾ।
ಮಡಿವಾಳ ಮೃಡಗೆ ಡಂಗುರವಿಕ್ಕಿ ಪ್ರಾಣವ
ಪಡೆದುದೀ ಶರಣ ಸಂಗತ್ಯಾ || ೬ ||

ಎಂದು ತನ್ನ ಕಾವ್ಯದ ಕಥಾಗರ್ಭವನ್ನು ಸೂಚಿಸಿದ್ದಾನೆ.
ಮುಂದುವರಿದು,

"ಈ ಕೃತಿ ಸುಜನರ ಸಾಕಾರ ಸುಕೃತವು
ಈ ಕೃತಿ ನಾಲ್ಕನೆ ಪದವು॥
ಈ ಕೃತಿ ಮುಖ್ಯಾರ್ಥದ ಜ್ಯೋತಿಯ ಸಿರಿ
ಈ ಕೃತಿ ಪರುಷ ನಿಧಾನ || ೭ ||

ಎಂದು ತನ್ನ ಕಾವ್ಯದ ಹಿರಿಮೆಯನ್ನು ತಿಳಿಸಿದ್ದಾನೆ.

ಹರಭಕ್ತರು ಕಲ್ಯಾಣಕ್ಕೆ ಬಂದು ಕೈಲಾಸಕ್ಕೆ ಹಾದಿಯನ್ನು ಸರಿಮಾಡಿದರೆಂದು ವಿವರಿಸಿದ್ದಾನೆ. ಮಡಿವಾಳ ಮಾಚಿದೇವರು ಬಿಜ್ಜಳನ ಆನೆಯನ್ನು ಮೆಟ್ಟಿ ಸೀಳಿದ ಕೀರ್ತಿ ಈರೇಳು ದಿಕ್ಕುಗಳನ್ನು ಮುಟ್ಟುತ್ತದೆ.

---

* ದಾವಣಗೆರೆ ಹಳೆಪೇಟೆ ವಾಸಿಗಳಾದ ಶ್ರೀಮಾನ್ ಮೈಲಾರದ ಮಹಂತಪ್ಪನವರಿಂದ ಪಡೆದ ಕೆಲವು ಓಲೆ ಪ್ರತಿಗಳಲ್ಲಿ "ಮೇದಾರ ಕೇತಯ್ಯಗಳ ಸಾಂಗತ್ಯ"ದ ಪ್ರತಿಯೂ ಒಂದಾಗಿದೆ. ಇದರಲ್ಲಿ ೧-೬೪ ಗರಿಗಳಿವೆ. ಗರಿಗಳ ಎರಡು ಪಕ್ಕಗಳಲ್ಲಿಯೂ ಬರವಣಿಗೆ ಇದೆ. ಪ್ರತಿ ಗರಿಯಲ್ಲಿ ನಾಲ್ಕು ಪಂಕ್ತಿಗಳಿವೆ. ಪ್ರತಿ ಪಂಕ್ತಿಯಲ್ಲಿ ೩೨ರಿಂದ ೩೬ ಅಕ್ಷರಗಳು ಇರುತ್ತವೆ. ಗರಿಗಳ ಉದ್ದ—೯.೬" ಮತ್ತು ಅಗಲ ೧.೩." ಅಕ್ಷರಗಳು ಸ್ಫುಟವಾಗಿರುತ್ತವೆ. ಶಟಕರೇಫದ ಬಳಕೆಯಿದೆ. ಪ್ರತಿ ಚೆನ್ನಾಗಿರುತ್ತದೆ.

"ಸೃಷ್ಟಿ ಪಾಲಕ ಬಿಜ್ಜಳರಾಜನೆಂಬನ
ಪಟ್ಟದಾನೆಯ ಮಡಿವಾಳನು ।
ಮೆಟ್ಟಿ ಸೀಳಿದ ದೂಱು ಮುಟ್ಟಿತು ಈರೇಳು
ಅಷ್ಟದಿಕ್ಕಿನ ಭೂಪರಿಗೆ ॥ ೧೬ ॥

ಆಗ ಇಂತಹ ಮಹಿಮೆಯಿಂದ ಕೂಡಿದ ಶರಣರಿದ್ದ ದೇಶವನ್ನು ನೋಡಬೇಕೆಂದು ಇಚ್ಛಿಸಿ ತ್ರಿಲೋಕ ಸಂಚಾರಿಯಾದ ನಾರದನು ಕಲ್ಯಾಣ ಪಟ್ಟಣಕ್ಕೆ "ಸಂದಿಗೊಂದಿಯ ಕಲಹದ ಗಂಟೆಕ್ಕುತ ಮುಂದೆ ಕೃತ್ರಿಮದ ಧ್ಯಾನಿಸುತ"—ಬರುತ್ತಾನೆ. ಬಂದು ಬಸವನ ಪವಾಡಗಳನ್ನು ತಿಳಿದು ಕೈಲಾಸಕ್ಕೆ ಈಶ್ವರನಿಗೆ ತಿಳಿಸಲು ಹೋಗುತ್ತಾನೆ. ಹೀಗೆ ಕಥೆಯು ಆರಂಭವಾಗುತ್ತದೆ. ಮುಂದಿನ ಎಂಭತ್ತು ಪದ್ಯಗಳಲ್ಲಿ ಬಸವನ ಪವಾಡಗಳ ವಿಷಯವನ್ನು ಕವಿ ಪಟ್ಟಿಮಾಡಿ ಈಶ್ವರನಿಗೆ ನಾರದನಿಂದ ಹೇಳಿಸಿದ್ದಾನೆ.

"ಚರಲಿಂಗ ಹರಣವ ಬಿಡಲು ತನಗೆ ಒಡ
ಮರಣವೆಂದು ಬಸವಣ್ಣಾ ।
ಬಿರಿದ ನುಂಗಿದನೆಂದು ಗುಡಿಗಳನೆತ್ತಿದು
ಹರಿಣೇಂದು ಧರನೆ ಚಿತ್ತೈಸಿ ॥ ೮೦ ॥

"ನುಡಿದ ಸತ್ಯಕ್ಕೆ ತಪ್ಪಿ ಬಿಸುಬಿಸಿ (?) ಬಸವನು
ಮೃಡನ ಪುರಕ್ಕೆ ಹೋದನಾದಡೆ ।
ಒಡನೈದಿ ಹಿಡಿತಾಹೆನೆಂದೆಂಬ ಬಿರಿದಿನ
ಎಡಗಾಲ ತೊಡರು ಮಾಚಯ್ಯಗೆ ॥ ೮೧ ॥

ಎಂಬ ಮಾತನ್ನು ಈಶ್ವರನು ಹೇಳಿ ವೀರೇಶನನ್ನು ಗಣಸಹಿತ ಶಿವಶರಣನಾದ ಮೇದಾರ ಕೇತಿ ತಂದೆಯನ್ನು ಕೈಲಾಸಕ್ಕೆ ಕರೆತರುವಂತೆ ಕಳಿಸಿಕೊಡುತ್ತಾನೆ.

ಸತ್ಯದ ಸಾಧನ ತತ್ವದ ನಡೆನುಡಿ
ಭಕ್ತಿಯ ಸುಖದಲಂಕಾರ ।
ಮುಕ್ತಿಯ ಮುಖದರ್ಪಣ ಕರ್ತೃ ಹರತಾನೆ
ಹಸ್ತದಲಡಗಿರುತ್ತಿಹನು ॥ ೧೦೮ ॥

ಅಱಿಕೆ ವಿವೇಕನುಭಾವವು ಮೂಱಂಗ
ಉಱುವಿಯ ತುಂಬಿಕೊಂಡಿಹನು ।
ಮಱವೆ ಮಾಯೆ ಮದ ಮಚ್ಚರವೆಲ್ಲವ
ಹೊಱತಿಯ ಹೊಱಿಸಿ ಕೊಲ್ಲುತಿಹನು ॥ ೧೦೯ ॥

ಏಕಾಂತದ ಮಠದೊಳಗಿಷ್ಟಲಿಂಗೈಕ್ಯ
ನೇಕ ಪುಷ್ಪದ ಪೂಜೆ ಮಾಡಿ ।
ಸಾಕಾರದ ಸನ್ಮಾನದಾರತಿಯ ನಿ-
ರಾಕಾರ ಹರನಿಗೆತ್ತಿದರು ॥೧೧೦॥

ವೀರೇಶನಿಗೂ ಕೇತಿ ತಂದೆಗಳಿಗೂ ನಡೆದ ಸಂಭಾಷಣೆ ಕಾವ್ಯದಲ್ಲಿ ಅಷ್ಟು ಸ್ಪಷ್ಟವಾಗಿ ಬಂದಿಲ್ಲ. ಅಂತು ಕೇತಿ ತಂದೆಗಳು ಮೊದಲು ಕೈಲಾಸಕ್ಕೆ ಹೋಗಲು

ದಾಸೋಹದ ಸಮಯವ ಬಿಟ್ಟು ಬರಲಾಱ
ಈಶನ ಜಂಗಮಾರ್ಚನೆಯ ।
ಮೋಸವಹುದು............ ॥ ೧೧೭ ॥

ಎಂದು ಒಪ್ಪದೆ ಇದ್ದು ನಂತರ ತಮ್ಮ ದೇಹವನ್ನು ಜೋಪಾನ ಮಾಡಿ ದಾಸೋಹವ ಬಿಡದೆ ಮಾಡೆಂದು ತಮ್ಮ ಸತಿ ಗೌರತಿಗೆ ಹೇಳಿ ಕೈಲಾಸಕ್ಕೆ ಪುಷ್ಪಕದಲ್ಲಿ ಹೋಗುತ್ತಾನೆ. ಮಾರನೆಯ ದಿನ ಪ್ರಾತಃಕಾಲದಲ್ಲಿ ಮೇದಾರಕೇತಿ ತಂದೆಗಳು ಶಿವಸಾಯುಜ್ಯವನ್ನು ಪಡೆದ ಸುದ್ದಿ ಕಲ್ಯಾಣವಲ್ಲೆಲ್ಲಾ ಹರಡುತ್ತದೆ. ಮೇದಾರ ಕೇತಿ ತಂದೆಗಳು ತಮ್ಮ ದೇಹವನ್ನು ಜೋಪಾನವಾಗಿಡುವಂತೆ ಹೇಳಿದ್ದರೂ, ಶರಣರು ಅವರ ಕಾಯ ಸಂಸ್ಕಾರಕ್ಕೆ ಸಿದ್ಧತೆಯನ್ನು ನಡೆಸುತ್ತಾರೆ. ಈ ವಿಷಯವನ್ನು ಬಸವಣ್ಣನವರಿಗೆ ಸಹ ತಿಳಿಸುತ್ತಾರೆ. ಆಗ ಬಸವಣ್ಣನೂ ಕೇತಿ ತಂದೆಗಳ ಮನೆಗೆ ಬರುತ್ತಾನೆ. ಈ ಮಧ್ಯೆ ಚೆನ್ನಬಸವಣ್ಣನು ಪಡಿಹಾರಿ ಉತ್ತಣ್ಣನನ್ನು ಕರೆದು ಮಡಿವಾಳ ಮಾಚಿದೇವರಿಗೆ ಹೇಳಿಕಳುಹಿಸುತ್ತಾನೆ. ಈ ಮಾತು ಚೆನ್ನಬಸವಣ್ಣನವರ ವಚನವೇ ಆಗಿರುತ್ತದೆ.

ವಚನ—

ಮದುವಣಿಗನಿಲ್ಲದೆ ನಿಬ್ಬಣ ಮೆಱವುದೆ ಅಯ್ಯಾ ?
ಕೋಗಿಲೆಗಳಿಲ್ಲದ ವಸಂತ ವನಂಗಳೊಪ್ಪುವವೆ ಅಯ್ಯಾ ?
ತಾವರೆಗಳಿಲ್ಲದ ಕೊಣಂಗಳೊಪ್ಪುವವೆ ಅಯ್ಯಾ ?
ಪತಿಯಿಲ್ಲದ ಸತಿಗೆ ಸಂತೋಷವಹುದೆ ಅಯ್ಯಾ ?
ಆಧಾರವಿಲ್ಲದ ಸೂತ್ರವ ಮೆಟ್ಟಿನಡೆಯಲಹುದೆ ಅಯ್ಯಾ ?
ಹೂಳಿದ ನಿಧಾನವ ಅಂಜನವಿಲ್ಲದೆ ಕಾಣಬಹುದೆ ?
ಎನಗೆನ್ನ ಮಡಿವಾಳ ದೇವನಿಲ್ಲದೆ ಒಪ್ಪದೆಂದು
ಕೂಡಲ ಚೆನ್ನಸಂಗಮದೇವರು ಬಿನ್ನಹವಂ ಮಾಡಿ ಕಳುಹಿದರೆಂದು
ಹೇಳಯ್ಯ, ಹೇಳಯ್ಯ. ಪಡಿಹಾರಿ ಉತ್ತಣ್ಣಾ ! ॥ ೧ ॥

(೧೬೨ನೆಯ ಪದ್ಯದ ಅನಂತರ)

ಮುಂದೆ ಮಡಿವಾಳ ಮಾಚಿದೇವರ ಸಕಾಲಿಕವಾದ ಎಚ್ಚರಿಕೆಯಿಂದ ಎಚ್ಚೆತ್ತ ಬಸವಣ್ಣನು ಕೇತಿ ತಂದೆಗಳ ಅಡಿವಿಡಿದು ಕೈಲಾಸಕ್ಕೆ ಹೋಗುತ್ತಾನೆ. ಆಗ ಮಡಿವಾಳ ಮಾಚಿ ತಂದೆಗಳು

ಭಂಡಾರಿ ಬಸವನ ಕೊಂಡೊಯಿದ ಗವುರಿಯ
ಗಂಡನ ಮೇಲಂಕ ಮಸದು ।
ಕೊಂಡ ಚಲವ ಬಿಡೆಬಿಡೆನೆಂದು ಮಡಿವಾಳ
ಅಂಡಲೆದುಗ್ಘಡಿಸಿದನು ॥ ೨೬೧ ॥

ಭರದಿಂದ ತ್ರಿಪುರಾಂತಕ ವಾಲ್ಯ ಶಿಖರದ
ಹಿರಿಯ ಹೊಂಗಳಸದ ಮೇಲೆ ।
ಚರಣವನೂಱಿನಿಂದನ ಪರವಸ್ತು ವೀ-
ಶ್ವರನಿಗೆ ದನಿ ಮಾಡಿದನು ॥ ೨೬೧ ॥

ಆ ದನಿಯನ್ನು ಕೇಳಿ ಈಶ್ವರನು ಕೈಲಾಸದಿಂದ ಬಸವಣ್ಣನನ್ನು ಮತ್ತು ಕೇತಿ ತಂದೆಗಳನ್ನು ಭೂಲೋಕಕ್ಕೆ—ಕಲ್ಯಾಣ ಪಟ್ಟಣಕ್ಕೆ—ಭಕ್ತರ ಸಮಾಧಾನಕ್ಕೆ ಕಳಿಸಿಕೊಡುತ್ತಾನೆ.

ಲಿಂಗಜಂಗಮ ದಾಸೋಹ ಸೇವಿತನು
ಸಂಗನ ಬಸವನ ನೆನದು
ಮಂಗಳತರದ ಶಿವಾರ್ಚಕರಂಘ್ರಿಗೆ
ಹಿಂಗದೆ ಶರಣು ಶರಣಾರ್ಥಿ ॥ ೩೬೭ ॥

ಅಂತು ಸಂಧಿ ೧ಕ್ಕೆ ಪದನು ೩೬೭ಕ್ಕ ಮಂಗಳ ಮಹಾಶ್ರೀ ಎಂದಿದೆ.

ಹೀಗೆ ಕಥೆ ಮುಕ್ತಾಯವಾಗುತ್ತದೆ. ಸಾಂಗತ್ಯದ ಕವಿಯಾದರೂ ಸಂಪ್ರದಾಯದ ರೀತಿಯಲ್ಲಿ ಕಾವ್ಯವನ್ನು ರಚಿಸಿದ್ದಾನೆ. ಸಿದ್ಧರಾಮೇಶ್ವರ ಪುರಾಣ ಮತ್ತು ಬಸವರಾಜದೇವರ ರಗಳೆಯ ಪ್ರಭಾವವು ಕಥಾವಸ್ತುವನ್ನು ನಡೆಸಿರುವುದರಲ್ಲಿ ಕಾಣಬಹುದಾಗಿದೆ.

## ಜಿ. ಎಸ್. ಭಟ್ಟ

# ಜಿ. ಎಸ್. ಶಿವರುದ್ರಪ್ಪ*

ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರೂ ಕನ್ನಡ ವಿಭಾಗದ ಮುಖ್ಯಸ್ಥರೂ ಆಗಿರುವ ಡಾ. ಶಿವರುದ್ರಪ್ಪನವರು ಹೆಸರಾಂತ ಕವಿ, ವಿಮರ್ಶಕರು. ಕನ್ನಡದಲ್ಲಿ ವಿಮರ್ಶೆ ಸಾಕಷ್ಟು ಬೆಳೆದಿಲ್ಲವೆಂಬುದು ಅವರ ಕೊರಗು. ಕನ್ನಡ ಅಧ್ಯಯನ ಕೇಂದ್ರದ ಉದ್ದೇಶವಾದರೂ ವಿಮರ್ಶೆಗೆ ಸಂಬಂಧಿಸಿದಂತೆ ವಿಶೇಷ ಪಾತ್ರವಹಿಸುವುದೇ ಆಗಿದೆ.

ಶಿವಮೊಗ್ಗ ಜಿಲ್ಲೆಯ ಶಿಕಾರಿಪುರದಲ್ಲಿ ಹುಟ್ಟಿದರೂ (ಫೆಬ್ರವರಿ ೭, ೧೯೨೬) ತಾವು ಜನಿಸಿದ ಊರನ್ನು ಅವರು ಇನ್ನೂ ನೋಡಿಲ್ಲ; ಕಾರಣವಿಷ್ಟೇ: ತಂದೆ ಶಾಂತ ವೀರಪ್ಪನವರು ಮಿಡ್ಲ್‌ಸ್ಕೂಲ್ ಉಪಾಧ್ಯಾಯರಾಗಿದ್ದರು. ಊರಿಂದ ಊರಿಗೆ ವರ್ಗ ವಾಗುತ್ತಿದ್ದುದರಿಂದ ಇವರದೂ ಅಲೆಮಾರಿ ಜೀವನವಾದುದರಲ್ಲಿ ಆಶ್ಚರ್ಯವೇನಿಲ್ಲ. ತಂದೆಯವರಿಗೆ ಆಸ್ತಿಪಾಸ್ತಿ ಇರಲಿಲ್ಲ. ಉಪಾಧ್ಯಾಯ ವೃತ್ತಿಯನ್ನೇ ಅವಲಂಬಿಸಿದ್ದುದ ರಿಂದ ಬಡತನ ಆವರಿಸಿತ್ತು. ಹೀಗಾಗಿ ಶಿವರುದ್ರಪ್ಪನವರು ಬಾಲ್ಯದಲ್ಲಿರುವಾಗಲೆ ಬಡತನದ ಕಹಿಯನ್ನು ಸಾಕಷ್ಟು ಉಂಡಿದ್ದಾರೆ. ತಂದೆ ಉಪಾಧ್ಯಾಯರಾಗಿದ್ದುದರಿಂದ ಪ್ರತಿ ಯೊಂದು ಶಾಲೆಯ ಗ್ರಂಥಾಲಯದ ಉಪಯೋಗ ಪಡೆಯುವುದು ಸಾಧ್ಯವಾಯಿತು. ಅವರು ಸಾಹಿತ್ಯದ ವ್ಯಕ್ತಿತ್ವ ಸ್ವತಃ ಬೆಳೆಸಿಕೊಂಡಿದ್ದು, ಅವರಿಗೆ ಓದುವ ಅಭಿರುಚಿ ಬಂದಿದ್ದು ಬಾಲ್ಯದಿಂದಲೆ. ಕಾರಂತರ ಬಾಲಪ್ರಪಂಚ ಅವರ ಮೇಲೆ ತುಂಬ ಪರಿಣಾಮ ಬೀರಿತು. ಅವರ ಎಳೆಯ ಮನಸ್ಸಿನ ಮೇಲೆ ಅಗಾಧ ಪರಿಣಾಮ ಬೀರಿದ ಇನ್ನೊಂದು ಕೃತಿ ಗೋವಿನ ಕಥೆ. ಅವರು ಹೈಸ್ಕೂಲು ಎರಡನೆಯ ವರ್ಗದಲ್ಲಿ ಓದುತ್ತಿರುವಾಗ ಗಣಿತದ ಉಪಾಧ್ಯಾಯರು ತರಗತಿಯಲ್ಲಿ ಕುವೆಂಪು ಅವರ ರಕ್ತಾಕ್ಷಿಯನ್ನು ಓದುತ್ತಿದ್ದ ರಂತೆ. "ನನ್ನ ಮೇಲೆ ಪ್ರಭಾವ ಬೀರಿದ ವ್ಯಕ್ತಿ ಕುವೆಂಪು ಎನ್ನುವುದರಲ್ಲಿ ಅನುಮಾನವೇ ಇಲ್ಲ" ಎಂದವರು ಹೇಳುತ್ತಾರೆ. ಅವರ ಮೇಲೆ ಅಚ್ಚಳಿಯದ ಪರಿಣಾಮ ಬೀರಿದ ಇನ್ನೊಂದು ಕೃತಿ ಮಂಕುತಿಮ್ಮನ ಕಗ್ಗ. ಕನ್ನಡ-ಇಂಗ್ಲಿಷ್ ಸಾಹಿತ್ಯವನ್ನು ಅವರು ಚೆನ್ನಾಗಿ ಓದಿಕೊಂಡಿದ್ದಾರೆ. ಅವರ ಮೇಲೆ ವರ್ಡ್ಸ್‌ವರ್ತ್, ಎಲಿಯಟ್ ಇವರಿಬ್ಬರ ಕೃತಿಗಳೂ ಪ್ರಭಾವ ಬೀರಿವೆ. ಲಾರೆನ್ಸ್‌ನ ಕಾದಂಬರಿಗಳು ಅವರಿಗೆ ಮೆಚ್ಚುಗೆಯಾಗಿವೆ.

* 'ಸಾಹಿತ್ಯ ಸಾಧಕರು' ಗ್ರಂಥದಿಂದ ಸ್ವೀಕಾರ.

ಕವಿ ಶಿವರುದ್ರಪ್ಪ ಏಕಾಂತಪ್ರಿಯರು. ಅವರಲ್ಲಿ ಇಂದಿಗೂ ಆ ಪ್ರವೃತ್ತಿ ಇರುವುದನ್ನು ಅವರ ಹಲವು ಸ್ನೇಹಿತರು ಗುರುತಿಸಿದ್ದಾರೆ. ಬಾಲ್ಯದಲ್ಲಿ ಗುಡ್ಡ-ಬೆಟ್ಟ, ಕಾಡು-ಹೊಳೆ ಇವುಗಳ ಮಧ್ಯೆ ಅವರು ಬೆಳೆದದ್ದು. ಕವಿಯಾಗಬೇಕಾದವನಿಗೆ ದೊರಕಿದ ಪರಿಸರಗಳಿವು.

ಶಿವರುದ್ರಪ್ಪನವರ ಪ್ರಾಥಮಿಕ ಶಿಕ್ಷಣ ನಡೆದದ್ದು ಹೊನ್ನಾಳಿ, ಕೋಟೆಹಾಳಗಳಲ್ಲಿ; ಮಿಡ್ಲ್ ಸ್ಕೂಲ್ ರಾಮಗಿರಿ; ಬೆಲಗೂರುಗಳಲ್ಲಿ. ಪ್ರೌಢಶಾಲೆಯ ಶಿಕ್ಷಣ ದಾವಣಗೆರೆ ಮತ್ತು ತುಮಕೂರುಗಳಲ್ಲಿ. ಅವರು ಮ್ಯಾಟ್ರಿಕ್ಯುಲೇಷನ್ ಮುಗಿಸಿದ್ದು ೧೯೪೧ರಲ್ಲಿ. ಜೂನಿಯರ್ ಇಂಟರ್‌ಮೀಡಿಯೇಟ್‌ನಲ್ಲಿರುವಾಗ (೧೯೪೨) ಭಾರತದಾದ್ಯಂತ ಅಸಹಕಾರ ಚಳವಳಿ ಪ್ರಾರಂಭವಾಯಿತು. ಇದರಿಂದ ಶಿಕ್ಷಣವನ್ನು ಮುಂದುವರಿಸದೆ ಊರಿಗೆ ಹೋಗಲೇಬೇಕಾಯಿತು. ಸರ್ಕಾರಿ ನೌಕರನ ಮಗನಾದ್ದರಿಂದ ಅವರಿಗೆ ಚಳವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸುವುದಾಗಲಿಲ್ಲ. ಅನಂತರ ಶಿಕ್ಷಣ ಮುಂದುವರಿಸಿ (೧೯೪೩–೪೪) ಇಂಟರ್ಮೀಡಿಯೆಟ್‌ನ್ನು ೧೯೪೫ರಲ್ಲಿ ಪಾಸುಮಾಡಿದರು. ಬೇಸಿಗೆ ರಜೆಯಲ್ಲಿ ಯಾವುದಾದರೂ ಸರ್ಕಾರಿ ಕಚೇರಿಯಲ್ಲಿ ಕೆಲಸಮಾಡಿ ಅಲ್ಪಸ್ವಲ್ಪ ಗಳಿಸುತ್ತಿದ್ದುದೂ ಉಂಟು. ಅವರ ಶಿಕ್ಷಣ ಮುಂದುವರಿಸಲು ಇಂಥ ಗಳಿಕೆ ಅನಿವಾರ್ಯವಾಗಿತ್ತು. ಮನೆಯ ಆರ್ಥಿಕ ಪರಿಸ್ಥಿತಿ ಚೆನ್ನಾಗಿರದ್ದರಿಂದ ಅವರು ಬಿ.ಎ.ಗೆ ಹೋಗಲಾಗಲಿಲ್ಲ. ಅನಂತರ ಅವರು ಗುಬ್ಬಿ ತಾಲ್ಲೂಕ್ ಕಚೇರಿಯಲ್ಲಿ ಗುಮಾಸ್ತರಾಗಿ ಸೇರಿದರು. ಆಗ ಅವರಿಗೆ ತಿಂಗಳಿಗೆ ೩೫ ರೂಪಾಯಿ ಬರುತ್ತಿತ್ತಂತೆ. ಒಂದು ವರ್ಷ ಕೆಲಸಮಾಡಿ, ಸಂಬಳದಲ್ಲೇ ಉಳಿಸಿ ಮೊದಲನೆಯ ಬಿ.ಎ. (ಆನರ್ಸ್) ಸೇರಿದರು. (೧೯೪೬) ಆಗ ಮಹಾರಾಜ ಕಾಲೇಜಿನಲ್ಲಿ ಎ. ಆರ್. ಕೃಷ್ಣಶಾಸ್ತ್ರಿಗಳು ಅವರಿಗೆ ಗುರುಗಳಾಗಿದ್ದು ನಿವೃತ್ತರಾದರು. ಅನಂತರ ಅಲ್ಲಿಂದ ಐದು ವರ್ಷಗಳ ಕಾಲ ಕುವೆಂಪು ಅವರ ಶಿಷ್ಯನಾಗುವ ಅಪೂರ್ವ ಅವಕಾಶ ಅವರಿಗೆ ಲಭ್ಯವಾಯಿತು. "ಯಾರಿಗೂ ತಲೆಬಾಗದೆ ನಿಲ್ಲುವಂಥ ಕೆಚ್ಚು ಧೈರ್ಯಗಳನ್ನು ನಾನು ಕಂಡದ್ದು ಪುಟ್ಟಪ್ಪನವರಲ್ಲಿ. ನಿಜವಾಗಲೂ ಕನ್ನಡ ಸಾಹಿತ್ಯದ ಸತ್ವವನ್ನು ಮೈಗೂಡಿಸಿಕೊಂಡರೆ ವ್ಯಕ್ತಿತ್ವಕ್ಕೆ ಯಾವ ತೇಜಸ್ಸು ಬರುತ್ತದೆ ಎಂಬುದನ್ನು ನಾನು ಅವರಲ್ಲಿ ಕಂಡೆ. ಪುಟ್ಟಪ್ಪನವರು ಹೊಸಹೊಸ ದೃಷ್ಟಿಯ ಬೀಗದಕ್ಕೆ ಕೊಟ್ಟಿದ್ದಾರೆ. ಕನ್ನಡ ಸಾಹಿತ್ಯವನ್ನು ನೋಡುವ ಬೇರೆ ಒಂದು ದೃಷ್ಟಿಯನ್ನು ನನಗೂ ನನ್ನಂಥ ಅನೇಕರಿಗೂ ಅವರು ಕೊಟ್ಟರು. ನನ್ನ ಜೀವನದಲ್ಲಿ ಉಜ್ವಲವಾದ ಕಾಲ ಪುಟ್ಟಪ್ಪನವರ ಶಿಷ್ಯನಾಗಿದ್ದದು" ಎಂದವರು ಹೇಳುತ್ತಾರೆ.

೧೯೪೯ರಲ್ಲಿ ಅವರು ಬಿ.ಎ. (ಆನರ್ಸ್) ಮೊದಲ ವರ್ಗ ಮೊದಲಸ್ಥಾನದಲ್ಲಿ ಪಾಸುಮಾಡಿದರು. ಆ ವರ್ಷದ ಎಲ್ಲ ಆನರ್ಸ್ ವಿದ್ಯಾರ್ಥಿಗಳಿಗಿಂತಲೂ ಅವರಿಗೆ ಹೆಚ್ಚು ಗುಣಗಳು ಬಂದು ಪ್ರಶಸ್ತಿಗಳಿಸಿದರು. ಅರ್ಹತೆಗೆ ಅನುಗುಣವಾಗಿ ತಕ್ಷಣ ಕೆಲಸ ಕೊಡುತ್ತಿದ್ದುದರಿಂದ ಅವರಿಗೆ ಕೆಲಸ ದೊರಕಿತು. ದಾವಣಗೆರೆಯ ಡಿ.ಆರ್.ಎಂ. ಕಾಲೇಜಿನಲ್ಲಿ ಅಧ್ಯಾಪಕರೆಂದು ಸೇರಿದರು (೧೯೪೯). ಅನಂತರ ಅವರು ಯುವರಾಜ ಕಾಲೇಜಿಗೆ ಅಧ್ಯಾಪಕ ಮತ್ತು ವಿದ್ಯಾರ್ಥಿಯಾಗಿ ಬಂದರು. ಅವರು ಎಂ.ಎ. ಮುಗಿಸಿದ್ದು ೧೯೫೩

ರಲ್ಲಿ. ವಿಶ್ವವಿದ್ಯಾನಿಲಯಕ್ಕೇ ಪ್ರಥಮಸ್ಥಾನ ಬಂದುದರಿಂದ ಬಿ.ಎಂ.ಶ್ರೀ ರಜತಪದಕ; ಕೇಣಿ ಸಿದ್ದಪ್ಪ ಸುವರ್ಣಪದಕಗಳು ಬಂದವು. ಅನಂತರ ಅವರು ಶಿವಮೊಗ್ಗೆಗೆ ವರ್ಗವಾಗಿ ಹೋದರು. ೧೯೫೫ರಲ್ಲಿ ಭಾರತ ಸರ್ಕಾರದ ಸಂಶೋಧನಾ ಶಿಷ್ಯವೇತನ ದೊರೆತದ್ದರಿಂದ ಮೈಸೂರಿಗೆ ಬಂದು ಸಂಶೋಧನೆ ಆರಂಭಿಸಿದರು. 'ಸೌಂದರ್ಯ ಸಮೀಕ್ಷೆ' ಎಂಬ ಮಹಾ ಪ್ರಬಂಧವನ್ನು ಅವರು ಬರೆದದ್ದು ಪುಟ್ಟಪ್ಪನವರ ನಿರ್ದೇಶನದಲ್ಲಿ. ಅವರಿಗೆ ಪು.ತಿ.ನ., ಗೋಕಾಕ, ಬೇಂದ್ರೆ ಮೊದಲಾದವರು ಅನಧಿಕೃತವಾಗಿ ಮಾರ್ಗದರ್ಶನ ನೀಡಿದ್ದುಂಟು. ೧೯೬೦ರಲ್ಲಿ ಅವರಿಗೆ ಮೈಸೂರು ವಿಶ್ವವಿದ್ಯಾನಿಲಯ ಡಾಕ್ಟರೇಟ್ ನೀಡಿತು. ಅನಂತರ ಯು.ಜಿ.ಸಿ. ಅಧ್ಯಾಪಕರೆಂದು ಮಹಾರಾಜ ಕಾಲೇಜು ಸೇರಿದರು. ಅವರು ಮಾನಸಗಂಗೋತ್ರಿಗೆ ಅಧ್ಯಾಪಕರಾಗಿ ಬಂದದ್ದು ೧೯೬೦ರಲ್ಲಿ. ೧೯೬೩ರ ವರೆಗೂ ಮಾನಸಗಂಗೋತ್ರಿಯಲ್ಲಿದ್ದ ಅವರು ೧೯೬೩ರ ನವೆಂಬರಿನಿಂದ ೧೯೬೫ರ ನವೆಂಬರ್ ವರೆಗೆ ಉಸ್ಮಾನಿಯ ವಿಶ್ವವಿದ್ಯಾಲಯದ ಆಹ್ವಾನದ ಮೇರೆಗೆ ಕನ್ನಡ ವಿಭಾಗದ ಮುಖ್ಯಸ್ಥ ಮತ್ತು ಉಪಪ್ರಾಧ್ಯಾಪಕರೆಂದು ಕೆಲಸ ಮಾಡಿದರು. "ಅಲ್ಲಿದ್ದಿದ್ದರೆ ನವಾಬನ ಹಾಗೆ ಇರಬಹುದಾಗಿದ್ದರೂ ನೀರಿನಿಂದ ಹೊರಬಿದ್ದ ಮೀನಿನ ಹಾಗೆ ಇರಲಾರದೆ ಕನ್ನಡ ನಾಡಿಗೆ ೧೯೬೫ರಲ್ಲಿ ವಾಪಸು ಬಂದೆ" ಎನ್ನುತ್ತಾರೆ ಶಿವರುದ್ರಪ್ಪನವರು. ೧೯೬೬ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗಕ್ಕೆ ಮುಖ್ಯಸ್ಥ ಮತ್ತು ಉಪ ಪ್ರಾಧ್ಯಾಪಕರಾಗಿ ಬಂದರು. ೧೯೭೦ರಲ್ಲಿ ಪ್ರಾಧ್ಯಾಪಕ ಮತ್ತು ವಿಭಾಗ ಮುಖ್ಯಸ್ಥರಾದ ಶಿವರುದ್ರಪ್ಪನವರು ೧೯೭೧ ನವೆಂಬರಿನಿಂದ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿದ್ದಾರೆ.

ಅವರು ಬರೆವಣಿಗೆ ಪ್ರಾರಂಭಿಸಿದ್ದು ಸುಮಾರು ೧೪–೧೫ ವರ್ಷದವರಿರುವಾಗಲೇ. ಆಗ ಎಷ್ಟೋ ಪದ್ಯ ಬರೆದದ್ದುಂಟು. ಅನಂತರ ಇಂಟರ್‌ಮೀಡಿಯೆಟ್‌ನಲ್ಲಿದ್ದಾಗ ಕೆಲವು ಕವನಗಳನ್ನು ಬರೆದು ಜಿ. ಪಿ. ರಾಜರತ್ನಂ ಅವರಿಗೆ ತೋರಿಸಿದರಂತೆ. ಅವರು ಅನೇಕ ಸಲಹೆಗಳನ್ನು ನೀಡಿ ಮಾರ್ಗದರ್ಶನ ಮಾಡಿದ್ದುಂಟು. ಅವರ ಪ್ರಥಮ ಕವನ ಪ್ರಕಟವಾದದ್ದು ಮಾಸ್ತಿಯವರ 'ಜೀವನ'ದಲ್ಲಿ. ಬಹುಶಃ ಅದೇ ಅವರ ಸಾಹಿತ್ಯದ ಆರಂಭ ಜೀವನ ಎಂದು ಕಾಣುತ್ತದೆ. ಥಾಮಸ್‌ಗ್ರೇನ ಎಲಿಜಿಯಿಂದ ಆ ಪದ್ಯ ಪ್ರೇರಿತವಾಗಿತ್ತು.

ಡಾ॥ ಶಿವರುದ್ರಪ್ಪನವರ ಮನೆ ಬೆಂಗಳೂರಿನ ಗವಿಪುರಂ ಬಡಾವಣೆಯಲ್ಲಿ. ಮೊದಲೇ ನಿಶ್ಚಯಿಸಿದಂತೆ ಸಂಕ್ರಾಂತಿಯ ದಿನ ನಾನು ಅವರ ಮನೆಗೆ ಹೋದಾಗ ಬೆಳಗ್ಗೆ ೯ ಗಂಟೆ. ಉಭಯ ಕುಶಲೋಪರಿಯೊಂದಿಗೆ ನಾನು ಮಾತಿಗಾರಂಭಿಸಿದೆ.

**"ನಿಮ್ಮ ಕಾವ್ಯ ಸಮನ್ವಯ ಕಾವ್ಯ ಎಂದು ಪ್ರಸಿದ್ಧವಾಗಿದೆ. ಈ ಸಮನ್ವಯದಲ್ಲಿ ನವೋದಯ ಸಂಪ್ರದಾಯದಿಂದ, ನವ್ಯ ಸಂಪ್ರದಾಯದಿಂದ ಪಡೆದುಕೊಂಡ ಗುಣಗಳಾವುವು? ಮತ್ತು ನಿಮ್ಮ ವ್ಯಕ್ತಿವಿಶಿಷ್ಟವಾದ ಗುಣಾಂಶವೇನು?"**

"ನನ್ನ ಕಾವ್ಯ ಸಮನ್ವಯ ಕಾವ್ಯ ಎಂದು ಹಲವರು ಕರೆದುದು ತಪ್ಪೇನಲ್ಲ. ವಾಸ್ತವ ವಾಗಿ ನಾನು, ಕಾವ್ಯಗಳಿಗೆ ಹಣೆಚೀಟಿಗಳನ್ನು ಅಂಟಿಸಿ ಬಣಗಳನ್ನು ಏರ್ಪಡಿಸುವ ಸಾಹಿತ್ಯ ರಾಜಕೀಯಕ್ಕೆ ಮೊದಲಿನಿಂದಲೂ ವಿರೋಧಿ. ಆದರೆ ಅಭ್ಯಾಸದ ದೃಷ್ಟಿಯಿಂದ ಯಾವುದೋ ಒಂದು ಪರಿವರ್ತನ ಘಟ್ಟವನ್ನು ಮೂಲಮಾನವಾಗಿರಿಸಿಕೊಂಡು. ವಿಂಗಡಿಸಿ ಕೊಂಡು ನೋಡುವಾಗ, ನವೋದಯ, ನವ್ಯ, ಸಮನ್ವಯ—ಹೀಗೆಂದು ಕರೆದರೆ ತಪ್ಪೇ ನಲ್ಲ. ನಾವು ಈ ಐವತ್ತು ವರ್ಷದ ಕಾವ್ಯವನ್ನು ನವೋದಯ ಮತ್ತು ನವ್ಯ ಎಂದು ಕರೆಯುವುದು ಅಭ್ಯಾಸದ ಅನುಕೂಲಕ್ಕೆ ಮಾತ್ರ; ಬೇರೆಯ ಸಾಹಿತ್ಯೇತರ ಉದ್ದೇಶ ಗಳಿಗಾಗಿ ಅಲ್ಲ. ನಾನು ಸಾಹಿತ್ಯದಲ್ಲಿ ಯಾವುದೇ ಒಂದು ಪಂಥಕ್ಕೆ ಸೇರಿದವನಲ್ಲ; ಹಾಗೆ ಸೇರಬೇಕಾದ ಆವಶ್ಯಕತೆಯೂ ನನಗಿಲ್ಲ. ಈ ದಿನಗಳಂತೂ ನಮ್ಮ ವಿಮರ್ಶೆಯ ರೀತಿಯನ್ನು ನೋಡಿದರೆ ಲೇಖಕನಾದವನು ಯಾವುದೇ ಒಂದು ಪ್ರಬಲವಾದ ಪಂಥಕ್ಕೆ ಸೇರದೆ ಇರುವುದು ಕಷ್ಟವಾಗಿದೆ. ಎಂತಲೇ ಹೊಸದಾಗಿ ಬರೆಯುವವರು ಉದ್ದೇಶ ಪೂರ್ವಕವಾಗಿಯೇ ಇಂಥ ಗುಂಪುಗಳ ರಕ್ಷಣೆಯನ್ನು ಬಯಸುತ್ತಾರೆ.

"ಸ್ಥೂಲವಾಗಿ ಹೇಳುವುದಾದರೆ ನನ್ನ ಕಾವ್ಯದ ವಸ್ತು ಈ ಮೂರು ಎಂದು ನಾನು ತಿಳಿದುಕೊಂಡಿದ್ದೇನೆ. (ಎ) ಕಾಲ ಮತ್ತು ಮಾನವ; ಈ ಎರಡರ ಸಂಬಂಧ ಹಾಗೂ ಸಂಘರ್ಷ. (ಬಿ) ನಾಗರಿಕ ಬದುಕಿನಲ್ಲಿ ಮನುಷ್ಯ ದಿನದಿಂದ ದಿನಕ್ಕೆ ತನ್ನ ವ್ಯಕ್ತಿತ್ವ ವನ್ನು ಕಳೆದುಕೊಳ್ಳುತ್ತಿರುವ ದುರಂತ. (ಸಿ) ವ್ಯಕ್ತಿ ವ್ಯಕ್ತಿಗಳ ನಡುವಣ ಸಂಪರ್ಕ ರಾಹಿತ್ಯದಿಂದ ಉಂಟಾಗಿರುವ ಏಕಾಕಿತನದ ವಿಷಾದ. ಈ ಮೂರು ವಸ್ತುಗಳ ಚಿಂತನೆ ಗಳನ್ನು ದೀಪದ ಹೆಜ್ಜೆ ಕವನ ಸಂಗ್ರಹದಿಂದ ಹಿಡಿದು, ಇತ್ತೀಚಿನ ಗೋಡೆ ಕವನ ಸಂಗ್ರಹದ ತನಕ ಗುರುತಿಸಬಹುದು. ಈ ನನ್ನ ಕಾವ್ಯ ಜೀವನದಲ್ಲಿ ಒದಗಿದ ಪ್ರೇರಣೆ ಗಳನ್ನು ನಾನು ವಿಂಗಡಿಸಿ ತೋರಿಸಲಾರೆ. ಹಾಗೆಯೆ ನನ್ನ ವ್ಯಕ್ತಿವಿಶಿಷ್ಟವಾದ ಗುಣಾಂಶ ಗಳೇನು—ಎಂಬುದನ್ನು ನಾನು ಹೇಗೆ ಹೇಳಲಿ? ಹೇಳಬೇಕಾದವರು ಓದುಗರು ಹಾಗೂ ವಿಮರ್ಶಕರು."

**"ನವೋದಯ ಮತ್ತು ನವ್ಯ ಇವೆರಡರಲ್ಲಿರುವ ಪ್ರಧಾನ ಕೊರತೆ ಗಳಾವುವು?"**

"ನವೋದಯ ಬಹುಮಟ್ಟಿಗೆ ಅನವಶ್ಯಕವಾದ ಆದರ್ಶಮಯತೆಯಿಂದ ಕೂಡಿದೆ. ಒಂದು ತರಹದ ಘೋಷಣೆಗಳಿಂದ, ವಿಶೇಷತಃ ಸೌಂದರ್ಯದ ಜಾಹೀರಾತುಗಳಿಂದ ಕೂಡಿದ್ದು, ಕಾವ್ಯ ಬರೆಯುವುದು ಸಲೀಸಾದ ಹವ್ಯಾಸವಾಗಿತ್ತೇನೋ ಅನಿಸುತ್ತದೆ.

ನವೋದಯದ ಕವಿಗಳು ಪಶ್ಚಿಮದಿಂದ ಪ್ರೇರಣೆ ಹೊಂದಿರಬಹುದು. ಆದರೆ ಅನು ಕರಿಸಲಿಲ್ಲ; ಅವರು ಬರೆದದ್ದೆಲ್ಲ ನಮ್ಮ ದೇಶ ನಮ್ಮ ಪರಂಪರೆಗೆ ಸಂಬಂಧಪಟ್ಟದ್ದಾಗಿದೆ. ನವ್ಯದಲ್ಲಿ ಬೇರೆ ದೇಶದವರ ಪ್ರಭಾವ ತೀರ ಹೆಚ್ಚಾಯಿತು ಎನಿಸುತ್ತದೆ. ಅವರು ಅನು ಭವಕ್ಕಿಂತ ತಂತ್ರಕ್ಕೆ ಹೆಚ್ಚು ಮಹತ್ವಕೊಟ್ಟಂತೆ ಅನಿಸುತ್ತದೆ. ಬರೆಯುವ ಕಾವ್ಯ

ನಮ್ಮ ಪರಿಸರಕ್ಕೆ ಹೊಂದಿಕೊಳ್ಳಬೇಕು. ತಾವು ಯಾವ ಪರಿಸರ, ಯಾವ ಪರಂಪರೆಯಲ್ಲಿ ಬರೆಯುತ್ತಿದ್ದೇವೆ ಎನ್ನುವುದನ್ನು ನವ್ಯರು ಖಚಿತಪಡಿಸುವುದಿಲ್ಲ. ಇದಕ್ಕೆ ಮುಖ್ಯ ಕಾರಣ ಬರೆದವರೆಲ್ಲ ಬಹುಮಟ್ಟಿಗೆ ಇಂಗ್ಲಿಷ್ ಅಧ್ಯಾಪಕರು. ಇವರಿಗೆ ತಾವು ಬರೆಯುತ್ತಿರುವ ಪರಿಸರದ ಸಾಹಿತ್ಯ ಪರಂಪರೆಯ ಪರಿಚಯ ಸಾಲದು. ಹೀಗಾಗಿ ಇವರು ಬರೆಯುವ ಬರವಣಿಗೆ ನಮ್ಮದೆ ಎಂದು ಖಚಿತಪಡಿಸುವಲ್ಲಿ ಸಫಲವಾಗಿಲ್ಲ. ಇದಕ್ಕೆ ತಕ್ಕ ವಿಮರ್ಶೆಯನ್ನು ಅವರು ಅಲ್ಲಿಂದಲೆ ಆಮದು ಮಾಡಿಕೊಂಡರು. ಹಾಗೆಂದ ಮಾತ್ರಕ್ಕೆ ಅವರು ಬರೆದದ್ದೆಲ್ಲ ಕಳಪೆ ಎಂದಲ್ಲ. ನಮ್ಮ ಕಾವ್ಯದಲ್ಲಿ ಬದಲಾವಣೆ ಅನಿವಾರ್ಯವಾಗಿತ್ತು. ಅವರು ಅದನ್ನು ತಂದರು ನಿಜ. ಆದರೆ ಈ ನೆಪದಲ್ಲಿ ನಾವು ಎಲ್ಲವನ್ನೂ ಏಕೆ ಇನ್ನೊಬ್ಬರಿಂದಲೆ ಅನುಕರಣೆ ಮಾಡಬೇಕು? ಈ ದಿನ ಒಬ್ಬ ಲೇಖಕ ಎಷ್ಟು ಆಧುನಿಕ ಎನ್ನುವುದು ಆತನಲ್ಲಿ ಎಷ್ಟು ಬೇರೆಯವರ ಪ್ರಭಾವ ಇದೆ ಎನ್ನುವುದರ ಮೇಲೆ ಅವಲಂಬಿತವಾಗತೊಡಗಿದೆ! ಹಾಗಿದ್ದರೆ ನಾವು ಇನ್ನೊಬ್ಬರ ಮೇಲೆ ಪ್ರಭಾವ ಬೀರುವುದು ಯಾವಾಗ? ಹಾಗೆ ಪ್ರಭಾವ ಬೀರುವಂಥ ಸ್ವಂತದ್ದು ಏನೂ ಇಲ್ಲವೆ? ನಮ್ಮ ಇತ್ತೀಚಿನ ಬರವಣಿಗೆಗಳನ್ನು ಒಂದು ವೇಳೆ ಪಾಶ್ಚಿಮಾತ್ಯ ಭಾಷೆಗಳಿಗೆ ಅನುವಾದಿಸಿಕೊಟ್ಟರೆ, ಅದನ್ನೋದಿದ ಪಾಶ್ಚಾತ್ಯರು ಈ ಕನ್ನಡಿಗನ ಬರವಣಿಗೆಯಲ್ಲಿ ತಮ್ಮನ್ನು ತಾವೇ ಕಂಡು ತಬ್ಬಿಬ್ಬುಗೊಂಡಾರು! ಭಾರತೀಯತ್ವ ನಮ್ಮ ಬರವಣಿಗೆಯಲ್ಲಿ ಕಡಿಮೆಯಾಗಿದೆ. ಹೀಗೆಂದರೆ ಅನ್ಯ ಪ್ರಭಾವಗಳಿಂದ ನಾವು ಪ್ರೇರಣೆ ಪಡೆಯುವುದೇ ತಪ್ಪು ಎಂದು ನಾನು ಹೇಳುತ್ತಿಲ್ಲ; ಹೊರಗಿನ ಪ್ರಭಾವವಿಲ್ಲದೆ ಮನುಷ್ಯ ಬೆಳೆಯಲಾರ. ಅನ್ಯಪ್ರಭಾವಗಳನ್ನು ಅರಗಿಸಿಕೊಂಡು ನಮ್ಮ ಪರಿಸರದಲ್ಲಿ ಸ್ವಾತ್ಮಾನುಭವ ಅಭಿವ್ಯಕ್ತಿಯನ್ನು ಸಾಧಿಸಬೇಕು. ಪರಾನುಕರಣವೆಂದು ತೋರುವ ಪ್ರವೃತ್ತಿಗೆ ಅಡಿಗ, ನರಸಿಂಹಸ್ವಾಮಿ ಇವರು ಹೊರತಾಗಿದ್ದಾರೆ. ಕಾವ್ಯಕ್ಕೆ ಹೊಸ ಆಯಾಮವನ್ನು ಕೊಟ್ಟಿದ್ದಾರೆ."

**"ನವೋದಯ ಪೂರ್ವದ ಒಟ್ಟು ಕನ್ನಡ ಕಾವ್ಯ ಪರಂಪರೆ ಕವಿಯಾದ ನಿಮಗೆ ಎಷ್ಟರಮಟ್ಟಿಗೆ ಪ್ರೇರಕ ಅಥವಾ ಪೋಷಕವಾಗಿದೆ?"**

"ಇದು ತುಂಬ ಪ್ರಭಾವ ಬೀರಿದೆ. ನಾನು ಕನ್ನಡ ವಿದ್ಯಾರ್ಥಿಯಾಗಿದ್ದರಿಂದ ನಾನು ಯಾವ ಪರಂಪರೆಯಲ್ಲಿ ಬರೆಯುತ್ತಿರುವೆನೆಂಬುದರ ಅರಿವು ನನಗೆ ವಿಶೇಷವಾಗಿದೆ. I belong to the tradition of Kannada poets; I am proud of it. ನಾನು ಮೂಲತಃ ಮೊದಲು ಕನ್ನಡಿಗ. ನನ್ನ ಜನರ ನಡುವೆ ಬೆಳೆದಿರುವೆ. ಆದ್ದರಿಂದ ನನ್ನತನ ಮೊದಲು ಇಲ್ಲಿ ಬೇರೂರಬೇಕು."

"ನಿಮ್ಮ ಪ್ರಾರಂಭದ ಕವನ ಸಂಕಲನಗಳಲ್ಲಿ ಸೌಂದರ್ಯಾಸಕ್ತಿ ವಿಶೇಷವಾಗಿ ಕಾಣಿಸುತ್ತದೆ. ಅನಂತರದ ಸಂಕಲನಗಳಲ್ಲಿ ಕಟಕಿ, ವ್ಯಂಗ್ಯ ಹೆಚ್ಚಾದಂತೆ ತೊರುತ್ತದೆ ಎನ್ನಲಾಗುತ್ತಿದೆ. ಈ ಹೇಳಿಕೆಯನ್ನು ತಾವು ಒಪ್ಪುವಿರಾ?"

"ಇವೆರಡೂ ಹೇಳಿಕೆಗಳು ದಾರಿತಪ್ಪಿಸುವ ಮಾತುಗಳು. ಇರುವ ಸ್ಥಿತಿ ಹೇಳಿದರೆ

ಚುಟುಕಿ, ವ್ಯಂಗ್ಯ ಎಂದು ಏಕೆ ತೆಗೆದುಕೊಳ್ಳಬೇಕು? ನಮ್ಮಲ್ಲಿ ವಿಮರ್ಶಕರು ಸರಿಯಾಗಿ ತಿಳಿದುಕೊಳ್ಳದ್ದರಿಂದ ತಪ್ಪು ಕಲ್ಪನೆ ಉಂಟಾಗಿರಲು ಸಾಕು. Modernistಕ್ಕಿಂತ ರೊಚ್ಚು ವ್ಯಂಗ್ಯ ನನ್ನಲ್ಲಿಲ್ಲ. ಅಬ್ಬರಿಸಿಕೊಂಡು ಕೂಗಿ ಹೇಳುವುದು ನನಗೆ ಹಿಡಿಸುವುದಿಲ್ಲ. ನೀವು ಯಾವುದಾದರೂ ಗುಂಪಿಗೆ ಸೇರದ ಹೊರತೂ ನಿಮ್ಮ ಕೃತಿಗಳನ್ನು ಓದುವುದಿಲ್ಲ. ನಮ್ಮ ಕಾವ್ಯದಲ್ಲಿ ಪರಿಸ್ಥಿತಿ ವಿಲಕ್ಷಣಕ್ಕೆ ಬಂದಿದೆ. ನಮ್ಮಲ್ಲಿ ಒಬ್ಬ ಯೋಚನೆ ಮಾಡುತ್ತಾನೆ. ಗಿಳಿಪಾಠ ಮಾಡುವವರು ಬಹಳ ಜನ."

**"ಇತ್ತೀಚಿನ ಸಾಹಿತ್ಯ ವಿಮರ್ಶೆಯ ರೀತಿ ಮತ್ತು ಧಾಟಿ ಇವುಗಳನ್ನು ಕುರಿತು ನಿಮ್ಮ ಪ್ರತಿಕ್ರಿಯೆ ಏನು?"**

ವಿಮರ್ಶೆಯಲ್ಲಿ ವಿಚಾರ ಮಾಡುವವರು ಒಬ್ಬರೋ ಇಬ್ಬರೊ. ಅವರಲ್ಲಿ ಕೂಡ ಒಂದು ಸಮತೂಕ ಕಾಣಿಸುವುದಿಲ್ಲ. ವಿಮರ್ಶೆಯಲ್ಲಿ ಕವಿಗಳ ಕುರ್ಚಿಯನ್ನು ಅದಲು-ಬದಲು ಮಾಡುವ, ಇದ್ದಕ್ಕಿದ್ದಂತೆ ಕೆಲವರಿಗೆ ಪಟ್ಟಕಟ್ಟುವ ಪ್ರವೃತ್ತಿಗಳೇ ಹೆಚ್ಚಾಗಿವೆ. ಕೆಲವರು ಆಸ್ಥಾನ ವಿಮರ್ಶಕರು ಹೆಚ್ಚಾಗಿದ್ದಾರೆ. ವಿಮರ್ಶೆ ಮಾಡುವಂಥ ಜನ ಸಾಕಷ್ಟು ಕಳಕಳಿಯಿಂದ ಮತ್ತು ಸಾಕಷ್ಟು ಹಿನ್ನೆಲೆಯಿಂದ ಅಭ್ಯಾಸದಿಂದ ಮಾಡುವುದಕ್ಕಿಂತ, ಕೆಲವು ರೋಚಕವಾದ ಹೇಳಿಕೆಗಳನ್ನು ವಿಮರ್ಶೆಯ ನೆಪದಲ್ಲಿ ಕೊಟ್ಟಂತೆ ಕಾಣುತ್ತದೆ. ಹಾಗೆ ನಮ್ಮ ವಿಮರ್ಶೆ ಮಾಡುವವರು ಕೂಡ ವಿಮರ್ಶೆಯ ಒಂದು ಪರಂಪರೆ ಈ ದೇಶದಲ್ಲಿದೆ ಎನ್ನುವುದರ ಕಡೆ ಅಷ್ಟಾಗಿ ಗಮನಕೊಟ್ಟಂತೆ ಕಾಣುವುದಿಲ್ಲ. ಇಲ್ಲಿ ಕೂಡ ಅನೇಕ ಎರವಲು ಪದಗಳನ್ನು ಬಳಸಿ ವಿಮರ್ಶೆಯ ವಲಯದಲ್ಲಿ ಕೂಡ ಒಂದು ರೀತಿಯ ಗೊಂದಲ ಉಂಟುಮಾಡಿದ್ದಾರೆ. ಯೋಚನೆಮಾಡುವ ತಲೆಗಳಿಗಿಂತ, ಮಾತನಾಡುವ ಬಾಯಿಗಳೇ ಹೆಚ್ಚಾಗಿರುವ ಪರಿಸರದಲ್ಲಿ ನಿಜವಾದ ವಿಮರ್ಶೆಯನ್ನು ನಿರೀಕ್ಷಿಸುವುದು ತಪ್ಪಾಗುತ್ತದೆ. ಹೀಗಿದ್ದರೂ ವಿಮರ್ಶೆಯ ಒಂದು ವಾತಾವರಣ ನಮ್ಮಲ್ಲಿ ಇತ್ತೀಚೆಗೆ ನಿರ್ಮಾಣವಾಗುತ್ತಿದೆ. ಕ್ರಮೇಣ ವಿಮರ್ಶೆ ಹೆಚ್ಚು ನಿರ್ದುಷ್ಟವಾಗುವ ಮತ್ತು ವಿಶಿಷ್ಟವಾಗುವ ಲಕ್ಷಣ ಕಾಣುತ್ತಾ ಇದೆ."

**"ನೀವು ವಿಮರ್ಶೆ ಯಾವ ರೀತಿ ಇರಬೇಕೆಂದು ಬಯಸುತ್ತೀರಿ?"**

"ವಿಮರ್ಶೆ ಹೇಗಿರಬೇಕೆಂಬುದನ್ನು ಎಲ್ಲ ಕಾಲದಲ್ಲೂ ಹೇಳುತ್ತ ಬಂದಿದ್ದಾರೆ. ಆದರೆ ನನಗೆ ತೋರುವ ಮಟ್ಟಿಗೆ ಸಾಹಿತ್ಯವನ್ನು ಅರ್ಥಮಾಡಿಕೊಳ್ಳಲು ಅಗತ್ಯವಾದ ಆರೋಗ್ಯಕರವಾದ ಒಂದು ಆವರಣವನ್ನು ನಿರ್ಮಿಸುವಂತಿರಬೇಕು. ವಿಮರ್ಶೆ ಅನವಶ್ಯಕವಾಗಿ ಪಂಥ-ಪಕ್ಷಗಳ ನಡುವೆ ಟಗರು ಕಾಳಗವನ್ನೇರ್ಪಡಿಸಬಾರದು. ಒಂದೆಡೆ ತೀರಾ ಕೃಪಣ ಮನೋಭಾವ ಕಂಡರೆ, ಇನ್ನೊಂದೆಡೆ ತೀರ ಡೋಲುಬಾರಿಸುವ ಮನೋವೃತ್ತಿ ಕಂಡು ಬರುತ್ತಿದೆ. ತುತ್ತೂರಿ ವಿಮರ್ಶೆ ಒಂದುಕಡೆ, ತುಟಿ ಬಗಿತದ ವಿಮರ್ಶೆ ಇನ್ನೊಂದು ಕಡೆ ಕಂಡುಬರುತ್ತಿದೆ. ನಿಜವಾದ ಕವಿಗೆ ಅತಿ ಪ್ರಶಂಸೆಯಿಂದ ಎಷ್ಟು ಅಪಾಯವೋ

ಅವಜ್ಞತೆಯಿಂದಲೂ ಅಷ್ಟೇ ಅನ್ಯಾಯವಾಗುತ್ತದೆ. ವಿಮರ್ಶಕನ ಜವಾಬ್ದಾರಿ ಬಹಳ ದೊಡ್ಡದು."

**"ಇಂದಿನ ಕನ್ನಡ ಸಾಹಿತ್ಯದ ಬಗ್ಗೆ ನೀವೇನಾದರೂ ಹೇಳುವಿರಾ ?"**

"ಸಮೃದ್ಧವಾಗಿ ಬೆಳೆದಿದೆ. ಆ ವಿಚಾರದಲ್ಲಿ ಅನುಮಾನವೇ ಇಲ್ಲ. ಅದರಲ್ಲಿಯೂ ವಿಮರ್ಶೆ, ಸಂಶೋಧನೆ ಇತ್ಯಾದಿ ವೈಚಾರಿಕ ವಲಯಗಳಲ್ಲಿ ಆಗುತ್ತಿರುವ ಪ್ರಗತಿ ಸಂತೋಷ ದಾಯಕವಾದದ್ದು. ಆದರೆ ಕಾವ್ಯದ ಬಗ್ಗೆ ಹೇಳುವುದಾದರೆ ಹಿಂದಿನ ರಭಸ-ಉತ್ಸಾಹ ಗಳು ತಗ್ಗಿ ಒಂದು ರೀತಿಯ ಸಾವಧಾನಗತಿಗೆ ಬಂದಿವೆ. ಬಹುಶಃ ಪದ್ಯ ಬರೆಯುವುದು ಕಷ್ಟವಾಗುವಂಥ ಪರಿಸ್ಥಿತಿ ಪ್ರಾಪ್ತವಾಗಿ ಮತ್ತೊಂದು ಬದಲಾವಣೆಗೆ ಕಾವ್ಯ ತಿರುಗುವ ಸಂಧಿಕಾಲದಲ್ಲಿದೆ."

**"ನಮ್ಮ ಸಾಹಿತ್ಯದಲ್ಲಿ ಪಾಶ್ಚಾತ್ಯರ ಅತಿಯಾದ ಅನುಕರಣೆ ಕಂಡುಬರುತ್ತಿದೆ ಎಂಬ ಅಭಿಪ್ರಾಯವೊಂದಿದೆ. ಇದನ್ನು ತಾವು ಒಪ್ಪುವಿರಾ ?"**

"ಅನುಕರಣೆ ಇದೆ. ಅತಿಯಾದ ಎಂದು ಹೇಳಲಾಗದು. ಇವನ್ನು ಸುಳ್ಳು ಎಂದು ಹೇಳುವಂತಿಲ್ಲ. ಆದರೆ ಈ ಅನುಕರಣೆ ಕೇವಲ ಕುರುಡು ಅನುಕರಣೆ ಅಲ್ಲ. ಏನೋ ಒಂದು ಹೊಸತನ ನಿರ್ಮಾಣಮಾಡುವ ಉದ್ದೇಶಕ್ಕೆ ಪಡೆಯುವ ಪ್ರೇರಣೆ ಬೇರೆ, ಏನೂ ಇಲ್ಲದೆ ಅನುಕರಿಸುವುದು ಬೇರೆ. ನಮ್ಮ ಇಂದಿನ ಸಾಹಿತ್ಯ ಕೇವಲ ಅನುಕರಣೆ ಆಗಿದೆ ಎನ್ನುವುದಕ್ಕಿಂತ ಪಡೆದ ಪ್ರೇರಣೆಯ ಅಂಶ ಅಗತ್ಯವಾದ್ದಕ್ಕಿಂತ ಹೆಚ್ಚಾಗಿದೆ ಅನಿಸುತ್ತದೆ."

**"ಇತ್ತೀಚಿನ ಲೇಖಕರ ಬಗ್ಗೆ ನಿಮ್ಮ ಅಭಿಪ್ರಾಯ ?"**

"ಸಿದ್ಧಲಿಂಗಯ್ಯ, ಕಂಬಾರ, ನಿಸಾರ್ ಅಹಮ್ಮದ್, ತಿರುಮಲೇಶ, ಲಕ್ಷ್ಮೀ ನಾರಾಯಣ ಭಟ್ಟ ಇವರ ಪ್ರಯತ್ನಗಳಲ್ಲಿ ಕನ್ನಡ ಕಾವ್ಯ ಹೊಸ ದಿಕ್ಕುದೆಸೆಗಳನ್ನು ಹುಡುಕುವ ಒಂದು ಪ್ರಯತ್ನ ವಿಶೇಷವಾಗಿ ಕಾಣುತ್ತಿದೆ. ಅವರಲ್ಲೂ ತಿರುಮಲೇಶರ ಬರವಣಿಗೆ ವಿಶೇಷ ಭರವಸೆ ಹುಟ್ಟಿಸುವಂತಹುದು."

**"ಕನ್ನಡ ಸಾಹಿತ್ಯದ ಭವಿಷ್ಯದ ಬಗ್ಗೆ ನಿಮ್ಮ ಕಲ್ಪನೆ ಏನು ?"**

"ಯಾರೂ ನಿರಾಶರಾಗುವ ಕಾರಣವಿಲ್ಲ. ಭವಿಷ್ಯ ಇಂದಿಗಿಂತ ಚೆನ್ನಾಗಿರುತ್ತದೆ. ಮುಂಬರುವ ಜನಾಂಗ ಇವತ್ತಿನದಕ್ಕಿಂತ ಶಕ್ತವಾಗಬಲ್ಲುದು. ಮುಂಬರುವ ಕವಿಗಳು ಈಗ ಇರುವ ಕವಿಗಳಿಗಿಂತ ವಿಶಿಷ್ಟರಾಗಬಲ್ಲರು. ಕಾಲ ಬದಲಾದಂತೆ, ಬದಲಾದ ಪರಿಸರದ ವಿಶೇಷ ಅನುಕೂಲದಲ್ಲಿ ಮುಂದೆ ಬರೆಯುವವರು ಇರುತ್ತಾರೆ. ನಾನು ನಿರಾಶಾ ವಾದಿಯಲ್ಲ."

**"ನಿಮ್ಮ ಬರವಣಿಗೆಯಲ್ಲಿ ಅತ್ಯಂತ ತೃಪ್ತಿನೀಡಿದ ಕೃತಿ ಯಾವುದು ?"**

"ತೃಪ್ತಿ ಎಂದರೆ ನಿಲುಗಡೆ. ನನಗೆ ಯಾವುದರಿಂದಲೂ ಸಮಾಧಾನವಿಲ್ಲ."

**"ಜೀವನದಲ್ಲಿ ಏನನ್ನು ಸಾಧಿಸಬೇಕೆಂದಿದ್ದೀರಿ?"**

"ಇನ್ನೂ ಒಳ್ಳೆಯ ಲೇಖಕನಾಗಬೇಕೆಂಬ ಬಯಕೆ ಇದೆ. ತೃಪ್ತಿ ನೀಡಬಹುದಾದ ಕೃತಿಗಳನ್ನು ಬರೆಯಬೇಕೆಂಬ ಆಸೆಯಿದೆ."

**"ಕನ್ನಡ ಅಧ್ಯಯನ ಕೇಂದ್ರ ಸಾಧಿಸಬೇಕೆಂದಿರುವ ಯೋಜನೆಗಳಾವುವು?"**

"ಎಲ್ಲ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಗಳು ಮಾಡುತ್ತಿರುವುದು ಕನ್ನಡದ ಕೆಲಸ. ಈ ಕೆಲಸದಲ್ಲಿ ಶ್ರದ್ಧೆ ಮುಖ್ಯವೇ ಹೊರತು ಸ್ಪರ್ಧೆಯಲ್ಲ ಅನ್ನುವುದು ನನ್ನ ನಂಬಿಕೆ. ಮುಖ್ಯವಾಗಿ ಯಾವ ಕೆಲಸ ಮಾಡಿದರೆ ಅನುಕರಣೆ ಮತ್ತು ಪುನರಾವರ್ತನೆ ಆಗದೆ ಪೂರಕವಾಗಬಹುದೋ ಅಂಥ ಕಾರ್ಯಗಳನ್ನು ಕೈಗೊಳ್ಳುವುದರಲ್ಲಿ ನನಗೆ ಆಸಕ್ತಿ. ಅದರಲ್ಲೂ ವಿಮರ್ಶೆಗೆ ಸಂಬಂಧಪಟ್ಟ ದಿಕ್ಕಿನಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನಕೇಂದ್ರ ವಿಶೇಷವಾದ ಪಾತ್ರವಹಿಸಲಿದೆ. ಈ ದಿಕ್ಕಿನಲ್ಲಿ ವಿಚಾರಸಂಕಿರಣಗಳು ಬಹು ಪ್ರಮುಖವಾದ ಪಾತ್ರವಹಿಸುತ್ತವೆ. ಈಗಾಗಲೇ ಎರಡು ಮಹತ್ವದ ವಿಚಾರಸಂಕಿರಣಗಳನ್ನು ಈ ಕೇಂದ್ರ ಏರ್ಪಡಿಸಿದೆ. ಒಂದು ಹೊಸಗನ್ನಡ ಕಾವ್ಯದ ಎರಡು ಮಾರ್ಗಗಳು (೧೯೭೧). ಎರಡನೆಯದು ಕನ್ನಡ ನಾಟಕ ಪರಂಪರೆ ಮತ್ತು ಪ್ರಯೋಗ (೧೯೭೨). ಈ ಎರಡು ವಿಚಾರಸಂಕಿರಣಗಳಲ್ಲಿ ಕನ್ನಡದ ಹೆಸರಾಂತ ಲೇಖಕರನ್ನು, ವಿಮರ್ಶಕರನ್ನು ಒಂದೆಡೆ ಕೂಡಿಸಿ ವಿಚಾರವಿನಿಮಯ, ಚರ್ಚೆಗಳಿಗೆ ಅವಕಾಶ ಮಾಡಿಕೊಡಲಾಯಿತು. ಭಿನ್ನ ಮನೋಧರ್ಮದ, ಭಿನ್ನ ಅಭಿರುಚಿಯ, ಭಿನ್ನ ದೃಷ್ಟಿಕೋನದ ಲೇಖಕರು ಒಂದೆಡೆ ಸೇರಿ ಮುಕ್ತಮನಸ್ಸಿನಿಂದ ವಿಚಾರ ಮಾಡಲು ಅನುಕೂಲವಾಗುವಂಥ ವೇದಿಕೆಯನ್ನು ನಿರ್ಮಾಣ ಮಾಡುವುದೇ ಈ ವಿಚಾರಸಂಕಿರಣದ ಉದ್ದೇಶ. ಈ ಉದ್ದೇಶ ಇವೆರಡು ವಿಚಾರಸಂಕಿರಣಗಳ ಮೂಲಕ ತಕ್ಕಮಟ್ಟಿಗೆ ನೆರವೇರಿದೆ. ಈ ಎರಡೂ ಸಂಕಿರಣಗಳಲ್ಲಿ ಓದಿ—ಚರ್ಚಿತವಾದ ಲೇಖನಗಳನ್ನು ಕೂಡಿಸಿ ಪುಸ್ತಕ ರೂಪದಲ್ಲಿ ಪ್ರಕಟಿಸಲಾಗಿದೆ. ಕನ್ನಡ ಕಾವ್ಯ ಮತ್ತು ನಾಟಕಕ್ಕೆ ಸಂಬಂಧಪಟ್ಟ ವಿಮರ್ಶಾ ಸಾಹಿತ್ಯಕ್ಕೆ ಇವು ನಿಜವಾಗಿಯೂ ಕೊಡುಗೆಗಳಾಗಿವೆ ಎಂದು ನಾನು ತಿಳಿದುಕೊಂಡಿರುವೆ. ಲೇಖಕರನ್ನು ಒಂದೆಡೆ ಕೂಡಿಸುವುದರ ಜೊತೆಗೆ ಒಳ್ಳೆಯ ವಿಮರ್ಶೆಯ ಬೆಳವಣಿಗೆಗೂ ಇಂಥ ವಿಚಾರಸಂಕಿರಣಗಳಿಂದ ಅನುಕೂಲವಾಗುತ್ತದೆ. ಈ ವರ್ಷ ಕನ್ನಡದ ಪ್ರಥಮ ಕವಿ ಪಂಪನನ್ನು ಕುರಿತ ವಿಚಾರಸಂಕಿರಣವನ್ನು ಏರ್ಪಡಿಸಲಾಗಿದೆ. ಇದರ ಉದ್ದೇಶ ಕನ್ನಡದ ಎಲ್ಲ ಪ್ರಮುಖ ಕವಿ ಕೃತಿಗಳ ಪುನರ್ಮೌಲ್ಯವಾಗಬೇಕು ಎನ್ನುವುದು. ಇದುವರೆಗೆ ಬಂದ ವಿಮರ್ಶೆ ಬಹುಮಟ್ಟಿಗೆ ವರ್ಣನಾತ್ಮಕ ಹಾಗೂ ಪರಿಚಯಾತ್ಮಕವಾಗಿತ್ತೇ ಹೊರತು ನಿಜವಾದ ಮೌಲ್ಯಮಾಪನದ ಅಂಶ ಅಷ್ಟಾಗಿ ಇರಲಿಲ್ಲವಾದಕಾರಣ ಈಗ ಮತ್ತೆ ಸಮಗ್ರ ಕನ್ನಡ ಸಾಹಿತ್ಯವನ್ನು ಪುನರ್ಮೌಲ್ಯ ಮಾಡುವ

ಸವಾಲು ನಮ್ಮ ಮುಂದಿದೆ. ಇದರ ಜೊತೆಗೆ ವಿಮರ್ಶೆಯ ಪುನರ್ವಿಮರ್ಶೆಯೂ ನಡೆಯ ಬೇಕಾಗಿದೆ.

**ಯೋಜನೆಗಳು**

ಈಗಾಗಲೇ ಈ ಕೆಲವು ಯೋಜನೆಗಳು ಪ್ರಗತಿಯಲ್ಲಿವೆ:

೧. ಕನ್ನಡದಲ್ಲಿ ಭಾರತೀಯ ಕಾವ್ಯಮೀಮಾಂಸೆಯ ಇತಿಹಾಸ ಮತ್ತು ಮೀಮಾಂಸೆಯ ಪಾರಿಭಾಷಿಕ ಪದಗಳ ಒಂದು ಕೋಶದ ನಿರ್ಮಾಣ.

೨. ಉಪಭಾಷಾ ಪರಿವೀಕ್ಷಣೆ.

೩. ಜಾನಪದ ಪಾರಿಭಾಷಿಕ ಶಬ್ದಕೋಶ ನಿರ್ಮಾಣ.

೪. ಸಾಹಿತ್ಯ ವಾರ್ಷಿಕ: ಪ್ರತಿವರ್ಷವೂ ಪ್ರಕಟವಾಗುವ ಸಾಹಿತ್ಯ ಕೃತಿಗಳ ಒಂದು ವಿಮರ್ಶೆ.

೫. ಹರಿದಾಸೇತರ ಕೀರ್ತನೆಗಳ ಸಂಗ್ರಹ ಮತ್ತು ಪರಿಷ್ಕರಣ ಯೋಜನೆ.

೬. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯ ಯೋಜನೆ.

೭. ವಿಶ್ವದ ಬೇರೆ ಬೇರೆ ಭಾಷೆಗಳ ಮಹಾಕೃತಿಗಳನ್ನು ಕನ್ನಡಕ್ಕೆ ಅನುವಾದಿಸುವ ಯೋಜನೆ.

ಇದಲ್ಲದೆ ಭಾರತದ ಇತರ ಭಾಷೆಗಳ ಮಹಾಕೃತಿಗಳನ್ನು ಕನ್ನಡಕ್ಕೆ ತರುವ ಯೋಜನೆ ಇದೆ. ಕೆಲವು ಬೃಹತ್ ಪ್ರಮಾಣದ ಯೋಜನೆಗಳನ್ನು ಸರ್ಕಾರದ ಪರಿಶೀಲನೆಗೆ ಕಳಿಸಲು ಸಿದ್ಧತೆ ನಡೆದಿವೆ. ಕನ್ನಡ ಅಧ್ಯಯನ ಕೇಂದ್ರ ಮಾಲೆಯಲ್ಲಿ ಆಗಲೇ ಹತ್ತು ಕೃತಿಗಳು ಪ್ರಕಟವಾಗಿವೆ. ನಾವು ತುಂಬ ದೊಡ್ಡ ಕೆಲಸ ಮಾಡದಿದ್ದರೂ ಅತ್ಯಂತ ಅಗತ್ಯವಾದ ಕೆಲಸ ಮಾಡುತ್ತಿದ್ದೇವೆ; ಸಾಹಿತ್ಯ ಮತ್ತು ಭಾಷೆಯ ದೃಷ್ಟಿಯಿಂದ ಅತ್ಯಂತ ಅಗತ್ಯ ವಾದ ಕೆಲಸ ಮಾಡುತ್ತಿದ್ದೇವೆ. ಬೆಂಗಳೂರು ವಿಶ್ವವಿದ್ಯಾಲಯ ಸ್ಥಾಪನೆಯಾಗಿ ಕೆಲವೇ ವರ್ಷಗಳಾದುವು. ಕನ್ನಡ ಅಧ್ಯಯನಕೇಂದ್ರ ಆರಂಭವಾಗಿ ಕೇವಲ ಎರಡು ವರ್ಷಗಳಾ ದುವು. ಇದರ ಹಿನ್ನೆಲೆಯಲ್ಲಿ ನಮ್ಮ ಸಾಧನೆಯನ್ನು ನೋಡಬೇಕು.

**"ಕನ್ನಡ ಶಿಕ್ಷಣ ಮಾಧ್ಯಮವಾಗಲು ಮತ್ತು ಆಡಳಿತ ಭಾಷೆಯಾಗಲು ಈಗ ನಡೆಯುತ್ತಿರುವ ಪ್ರಯತ್ನಗಳು ಸಮರ್ಪಕವಾಗಿವೆಯೆ?"**

"ಸಮರ್ಪಕವಾಗಿಲ್ಲ. ಸಮರ್ಪಕವಾಗಲು ಒಂದೇ ದಾರಿ ಎಂದರೆ ಸರ್ಕಾರ ಮೊದಲು ಕನ್ನಡವನ್ನು ರಾಜ್ಯಭಾಷೆಯೆಂದು ಘೋಷಿಸಬೇಕು."

"ಈಗ ರಾಜ್ಯದ ಮೂರು ವಿಶ್ವವಿದ್ಯಾಲಯಗಳು ಕನ್ನಡದಲ್ಲಿ ವಿಪುಲವಾಗಿ ಪಠ್ಯಪುಸ್ತಕ ಗಳನ್ನು ಸಿದ್ಧಪಡಿಸುತ್ತಿವೆ. ಪಾರಿಭಾಷಿಕ ಪದಗಳೇ ಮೊದಲಾದ ವಿಷಯಗಳಲ್ಲಿ ಏಕ ರೂಪತೆ ಸಾಧಿಸುವುದು ಅಗತ್ಯವೆನಿಸುವುದಿಲ್ಲವೆ?"

"ಮೂರೂ ವಿಶ್ವವಿದ್ಯಾಲಯಗಳು ಒಂದಾಗಿ ಸೇರಿ ಈ ವಿಚಾರದಲ್ಲಿ ಗಮನ ಕೊಡುವುದು ಅಗತ್ಯ ಮತ್ತು ಪಾರಿಭಾಷಿಕ ಪದಗಳಲ್ಲಿ ಏಕರೂಪತೆ ಇರುವಂತೆ ನೋಡಿಕೊಳ್ಳುವುದು ಪಠ್ಯಪುಸ್ತಕ ನಿರ್ಮಾಣ ಯೋಜನೆಯ ಜವಾಬ್ದಾರಿಗಳಲ್ಲಿ ಒಂದು."

**"ಕನ್ನಡದಲ್ಲಿ ಹೆಚ್ಚಾಗಿ ಪಠ್ಯಪುಸ್ತಗಳು ಬರಲು ಸಲಹೆ ಏನಾದರೂ ನೀಡುವಿರಾ?"**

"ಕನ್ನಡ ರಾಜ್ಯಭಾಷೆ ಆಗದ ಹೊರತೂ ಕನ್ನಡ ಶಿಕ್ಷಣ ಮಾಧ್ಯಮ ವ್ಯಾಪಕವಾಗಿ ರೂಢಿಗೆ ಬರುವುದಿಲ್ಲ. ಕನ್ನಡ ಮಾಧ್ಯಮ ವ್ಯಾಪಕವಾಗಿ ರೂಢಿಗೆ ಬರದೆ, ನಿರ್ಮಾಣ ಆಗಿರುವ, ಆಗುವ ಪಠ್ಯಪುಸ್ತಕಗಳು ಉಪಯೋಗಕ್ಕೆ ಬರುವುದಿಲ್ಲ. ಕನ್ನಡ ಮಾಧ್ಯಮ ಹೆಚ್ಚಿದಷ್ಟೂ ಪಠ್ಯಪುಸ್ತಕಗಳ ರಚನೆ, ವೈವಿಧ್ಯತೆ ಹೆಚ್ಚುತ್ತದೆ."

**"ರಾಜ್ಯದ ಎಲ್ಲ ವಿಶ್ವವಿದ್ಯಾಲಯಗಳಲ್ಲೂ ಏಕರೂಪದ ಶಿಕ್ಷಣ ವ್ಯವಸ್ಥೆ ಅಭ್ಯಾಸ ಪತ್ರಿಕೆಗಳಿರುವುದು ಅಪೇಕ್ಷಣೀಯವಲ್ಲವೆ?"**

"ಏಕರೂಪತೆ ಬೇಕಾಗಿಲ್ಲ. ಕೆಲವು ವಿಷಯಗಳನ್ನು ವಿಶಿಷ್ಟವಾಗಿ ಇಟ್ಟುಕೊಳ್ಳಬಹುದು. ಸರ್ವಸಮಾನವಾದ ಏಕರೂಪತೆ ಅಪೇಕ್ಷಣೀಯವಲ್ಲವಾದರೂ ತನ್ನದೇ ಆದ ವೈಶಿಷ್ಟ್ಯ ಉಳಿಸಿಕೊಂಡು ಬೇರೆ ವಿಶ್ವವಿದ್ಯಾಲಯದೊಂದಿಗೆ ಕೆಲವು ಅಂಶಗಳಲ್ಲಿ ಏಕರೂಪತೆ ಉಳಿಸಿಕೊಳ್ಳುವುದು ಒಳ್ಳೆಯದು.

ಡಾ. ಶಿವರುದ್ರಪ್ಪನವರು ಬೆಂಗಳೂರು ವಿಶ್ವವಿದ್ಯಾಲಯ ಪ್ರಕಟಿಸುತ್ತಿರುವ 'ಸಾಧನೆ' ತ್ರೈಮಾಸಿಕದ ಪ್ರಧಾನ ಸಂಪಾದಕರಾಗಿದ್ದಾರೆ. ಇದಲ್ಲದೆ ಅವರು ಪಠ್ಯಪುಸ್ತಕ ಮತ್ತು ಪ್ರಚಾರೋಪನ್ಯಾಸ ಮಂಡಳಿಯ ಅಧ್ಯಕ್ಷರು. ಮೂರು ವರ್ಷಗಳ ಅವಧಿಯಲ್ಲಿ ಅವರ ನಿರ್ದೇಶನದಲ್ಲಿ ಸುಮಾರು ೧೦೦ ಪುಸ್ತಕಗಳು ಪ್ರಕಟವಾಗಿವೆ.

ಶಿವರುದ್ರಪ್ಪನವರು ಚಿಂತನಶೀಲ ಕವಿ ಹಾಗೂ ಒಳ್ಳೆಯ ವಿಮರ್ಶಕರು. ಸಾಮಗಾನ, ಚೆಲವು-ಒಲವು, ದೇವಶಿಲ್ಪ, ದೀಪದ ಹೆಜ್ಜೆ, ಕಾರ್ತೀಕ, ತೀರ್ಥವಾಣಿ, ಅನಾವರಣ, ತೆರೆದ ದಾರಿ, ಗೋಡೆ—ಇವು ಅವರ ಕವನ ಸಂಕಲನಗಳು. ಸೌಂದರ್ಯ ಸಮೀಕ್ಷೆ ಅವರ ಮಹಾಪ್ರಬಂಧ, ಕರ್ಮಯೋಗಿ, ವಿಮರ್ಶೆಯ ಪೂರ್ವ ಪಶ್ಚಿಮ, ಪರಿಶೀಲನ, ಗತಿಬಿಂಬ ಇವು ಅವರ ಇತರ ಕೃತಿಗಳು. ಕಳೆದ ವರ್ಷ ಅವರು ರಷ್ಯದ ರಾಜಧಾನಿ ಮಾಸ್ಕೋಗೆ ಭೇಟಿ ಇತ್ತಾಗಿನ ಅನುಭವ ಪ್ರವಾಸಕಥನ ಮಾಸ್ಕೋದಲ್ಲಿ ಇಪ್ಪತ್ತೆರಡು ದಿನ ಅಚ್ಚಿನಲ್ಲಿದೆ. ತೌಲನಿಕ ಕಾವ್ಯಮೀಮಾಂಸೆ, ಮಹಾಕಾವ್ಯ ಕುರಿತಂತೆ ಒಂದು ಪುಸ್ತಕ, ಕನ್ನಡ ಪರಂಪರೆ ಇವು ಅವರ ಮುಂಬರುವ ಕೃತಿಗಳು.

ಶ್ರೀನಿವಾಸ್

# ಜಿ. ಎಸ್. ಶಿವರುದ್ರಪ್ಪ: ಒಂದು ಸಂದರ್ಶನ*

**ಅಕ್ಯಾಡೆಮಿಕ್ ಜನಜೀವನದಿಂದ ದೂರ ಎನ್ನುತ್ತಾರೆ. ಇದನ್ನು ನೀವು ಎಷ್ಟು ಮಾತ್ರ ಒಪ್ಪುತ್ತೀರಾ?**

ನಿಮ್ಮ ಪ್ರಶ್ನೆಯಲ್ಲಿ 'ಅಕ್ಯಾಡೆಮಿಕ್ ಜನ' ಮತ್ತು 'ಜೀವನದಿಂದ ದೂರ' ಎಂಬ ಎರಡು ಮಾತುಗಳಿವೆ. ಈ ಎರಡು ಮಾತುಗಳೂ ತೀರಾ ಅಸ್ಪಷ್ಟವಾಗಿವೆ.

ಮೊದಲನೆಯದಾಗಿ ನೀವು ಹೇಳುವ ಈ 'ಅಕ್ಯಾಡೆಮಿಕ್ ಜನ' ಯಾರು? ನಿಮ್ಮ ಪ್ರಕಾರ 'ಅಕ್ಯಾಡೆಮಿಕ್ ಜನ' ಎಂದರೆ ವಿಶ್ವವಿದ್ಯಾನಿಲಯದಲ್ಲಿದ್ದುಕೊಂಡು, ಕೇವಲ ಅಧ್ಯಯನ, ಬೋಧನ, ಸಂಶೋಧನೆಗಳಲ್ಲಿ ನಿರತರಾಗಿರುವವರು ಎನ್ನುವುದಾದರೆ, ನನಗೆ ತೋರುವ ಮಟ್ಟಿಗೆ ಈಗ ಅಂಥ ಜನವನ್ನು ದೀಪಹಚ್ಚಿಕೊಂಡು ಹುಡುಕಬೇಕಾಗಿದೆ! ಅಕ್ಯಾಡೆಮಿಕ್ ಎಂದು ಭಾವಿಸಲಾದ ಆವರಣಗಳಲ್ಲಿ ಕೆಲಸ ಮಾಡುವ ನೂರಕ್ಕೆ ತೊಂಬತ್ತರಷ್ಟು ಜನ ರಾಜಕೀಯದಲ್ಲಿ ಮುಳುಗಿಹೋಗಿದ್ದಾರೆ. ಈ ಅರ್ಥದಲ್ಲಿ ಅವರನ್ನು 'ಜೀವನದಿಂದ ದೂರ' ಎನ್ನಬಹುದೆ ಅಥವಾ ಅವರೆಲ್ಲಾ ನಿಜವಾದ ಜೀವನದಲ್ಲೆ ಇದ್ದಾರೆ ಎಂದು ಸಮಾಧಾನ ಮಾಡಿಕೊಳ್ಳಬಹುದೆ! ಯಾಕೆಂದರೆ ಇವತ್ತಿನ ಜೀವನದ ಬಹುಭಾಗ ರಾಜಕೀಯವೇ ಆಗಿಬಿಟ್ಟಿದೆ. ಹೀಗಾಗಿ ಸ್ವಯಂಪ್ರೇರಿತರಾಗಿಯೋ, ಪರಿಸರದ ಒತ್ತಡದಿಂದಲೋ ನಮ್ಮ ಅಕ್ಯಾಡೆಮಿಕ್ ಮಂದಿ ರಾಜಕೀಯ ಜೀವನಕ್ಕೆ ಹತ್ತಿರವಾಗಿದಾರೆ ಎಂದು ಅನ್ನಿಸುತ್ತದೆ.

'ಅಕ್ಯಾಡೆಮಿಕ್ ಜನಜೀವನದಿಂದ ದೂರ'—ಎಂಬ ಮಾತನ್ನು ನೀವು ಬಹುಶಃ ಬೇರೆಯ ದೇಶಗಳ 'ಅಕ್ಯಾಡೆಮಿಕ್' ಜನವನ್ನು ಮನಸ್ಸಿನಲ್ಲಿಟ್ಟುಕೊಂಡು ಹೇಳುತ್ತಿದ್ದೀರಿ ಎಂದು ತೋರುತ್ತದೆ. ವಿದೇಶಗಳಲ್ಲಿ ಇಂಥ ಅಕ್ಯಾಡೆಮಿಕ್ ಜನ ಬೆಳಗಿನಿಂದ ಸಂಜೆಯ ತನಕ ವಾರದ ಐದು ದಿನಗಳು ಗ್ರಂಥಾಲಯಗಳಲ್ಲಿ, ಸಂಶೋಧನೆಯ ಪ್ರಯೋಗಾಲಯಗಳಲ್ಲಿ ತಮ್ಮನ್ನು ತಾವು ಹುಗಿದುಕೊಳ್ಳುತ್ತಾರೆ ಎಂದು ಕೇಳಿದ್ದೇನೆ. ಆದರೆ ಅವರೂ 'ಜೀವನದಿಂದ ದೂರವಲ್ಲ'ವೆಂದು ಹೇಳುತ್ತಾರೆ. ಆದರೆ ನಮ್ಮಲ್ಲಿ ಅಂಥ ಜನ ನೂರಕ್ಕೆ ಒಬ್ಬರಿದ್ದಾರೊ ಏನೋ.

* ಶೂದ್ರ, ಡಿಸೆಂಬರ್ ೧೯೭೪

**ವೈದಿಕ ಪ್ರಜ್ಞೆ ಭಾರತ ಸಂಸ್ಕೃತಿಯ ಅಡಿಪಾಯ. ಒಪ್ಪುತ್ತೀರಾ?**

'ವೈದಿಕ ಪ್ರಜ್ಞೆ ಭಾರತ ಸಂಸ್ಕೃತಿಯ ಅಡಿಪಾಯ' ಎಂಬ ಮಾತನ್ನು ನಾನು ಒಪ್ಪುವುದಿಲ್ಲ. ಯಾಕೆಂದರೆ ವೈದಿಕ ಪ್ರಜ್ಞೆಗೆ ಎದುರಾಗಿ ಸಿಡಿದೆದ್ದ ಬೇರೆಯ 'ಪ್ರಜ್ಞೆ'ಗಳೂ, ಮತ್ತು ವೇದ ಪೂರ್ವಕಾಲದಿಂದ ಅಸ್ತಿತ್ವದಲ್ಲಿದ್ದು, ಇಂದೂ ವೈದಿಕವೆನ್ನಲಾಗದ ಹಲವು ಸಾಂಸ್ಕೃತಿಕ ಪರಂಪರೆಗಳೂ ಈ ರಾಷ್ಟ್ರದಲ್ಲಿವೆ ಎಂಬುದನ್ನು ಮರೆಯಬಾರದು.

**ನೂರಕ್ಕೆ ತೊಂಬತ್ತೈದು ಮಂದಿ ನನ್ನ ಸಾಹಿತಿ ಮಿತ್ರರು ನಿರ್ಲಿಪ್ತತೆಯ ಆದರ್ಶ ಬಯಸುತ್ತಾರೆ. ಅವರಿಗೆ ಬಂಡಾಯ ಒಂದು ಪಾಪಪ್ರಜ್ಞೆ. ಇದರ ಬಗ್ಗೆ ನಿಮ್ಮ ಅಭಿಪ್ರಾಯವೇನು?**

ನಿಮ್ಮ ಸಾಹಿತಿ ಮಿತ್ರರ ವಿಚಾರ ಹಾಗಿರಲಿ. ಒಟ್ಟಿನಲ್ಲಿ ಈ ದೇಶದ ಜನಕ್ಕೇ ಬಂಡಾಯ ಒಂದು ಪಾಪಪ್ರಜ್ಞೆಯಾಗಿ ಕಾಡುತ್ತಿದೆ ಎಂದು ನನ್ನ ಅಭಿಪ್ರಾಯ. ಈ ದೇಶದ ಜನ ಏನು ಮಾಡಿದರೂ ಬಂಡಾಯ ಏಳುವವರಲ್ಲ. ಅದೇ ನಮ್ಮ ದುರಂತ. ಈ ಜನ ಹೀಗಿರುವುದಕ್ಕೆ ಕಾರಣ ನಮ್ಮ ಪರಂಪರೆಯ ಹಿಡಿತವೇ. ಸಾವಿರಾರು ಧಾರ್ಮಿಕ-ನೈತಿಕ-ತಾತ್ವಿಕ ಹಿನ್ನೆಲೆಗಳು ಇಂಥ ಒಂದು ನಿಷ್ಕ್ರಿಯ ಮನೋಧರ್ಮವನ್ನು ರಕ್ತಗತವನ್ನಾಗಿ ಮಾಡಿವೆ. ಇದರಿಂದ ತಪ್ಪಿಸಿಕೊಂಡು, ಸ್ವತಂತ್ರವಾಗಿ ವಿಚಾರಮಾಡಲು ಕಲಿತಾಗ ಮಾತ್ರ ನಿಜವಾದ ಅರ್ಥದಲ್ಲಿ ಬಂಡಾಯವೇಳುವುದು ಸಾಧ್ಯವಾದೀತು.

ನಮ್ಮ ಸಾಹಿತಿಗಳೂ ಇಂಥ ಜನದ ಒಂದು ಭಾಗವಾಗಿರುವುದರಿಂದ ನೀವೆಂದಂತೆ ನೂರಕ್ಕೆ ತೊಂಬತ್ತೈದರಷ್ಟು ಮಂದಿ ನಿರ್ಲಿಪ್ತತೆಯ ಆದರ್ಶವನ್ನು ಬಯಸಬಹುದು. ಇನ್ನು ಐದರಷ್ಟು ವಿಚಾರವಂತರಿದ್ದಾರಲ್ಲ ಅವರೇನಾದರೂ ಈ ಪರಿಸರದಲ್ಲಿ ಬದಲಿಸಬಹುದೆಂಬ ದೂರದ ಆಸೆ ನನ್ನದು. ಆದರೆ ಈ ಐದರಷ್ಟು ವಿಚಾರವಂತರ ಬೇರುಗಳು ಕೂಡಾ ಇನ್ನಾವುದೋ, ಇನ್ನಾರದೋ ವಿಚಾರದ ಕುಂಡಗಳಲ್ಲಿ ಇಳಿದಿವೆಯೆಂದು ನನಗೆ ಅನುಮಾನ.

**ಇಪ್ಪತ್ತೈದು ವರ್ಷಗಳ ಸ್ವಾತಂತ್ರ್ಯದಲ್ಲಿ ಸುತ್ತಲಿನ ಪರಿಸರ ನಿಮಗೆ ಹೇಗೆ ಕಾಣುತ್ತದೆ?**

ಸ್ವಾತಂತ್ರ್ಯ ಬಂದ ನಂತರ ಈ ದೇಶ ಕುಲಗೆಟ್ಟುಹೋಯಿತು ಎಂದು ಹುಯ್ಯಲಿಡುವವರ ಸಾಲಿಗೆ ನಾನು ಸೇರುವುದಿಲ್ಲ. ಉಬ್ಬಸಬಡಿಸುವ ರಾಜಕೀಯದ ಹೊಗೆಯಲ್ಲಿ, ಸರಿಯಾದ ಗೊತ್ತು-ಗುರಿಯಿಲ್ಲದ ನಾಯಕತ್ವದಲ್ಲಿ, ಇರುವ ಸಾಧ್ಯತೆಗಳನ್ನು ಸದುಪಯೋಗಪಡಿಸಿಕೊಳ್ಳಲಾರದ ವಿವೇಕ ಸಾಹಿತ್ಯದಲ್ಲಿ, ಅತಿಯಾದ ಪರಾವಲಂಬನೆಗಳಲ್ಲಿ, ಮುಗ್ಗರಿಸುತ್ತಿರುವ ಈ ದೇಶದ ಬದುಕು ನೆಟ್ಟಗಾಗಲು ಇನ್ನೂ ಬಹುಕಾಲ ಬೇಕು ಅನ್ನಿಸುತ್ತದೆ. ನನ್ನ ಮಟ್ಟಿಗೆ ಸುತ್ತಣ ಪರಿಸರ ಒಂದು ಸಂಧಿಕಾಲದ ಸಂಘರ್ಷದಲ್ಲಿದೆ.

**ನಿಮ್ಮ ರಷ್ಯಾ ಪ್ರವಾಸದ ನಂತರ ಈ ದೇಶ ನಿಮಗೆ ಹೇಗೆ ಕಾಣುತ್ತಿದೆ?**

ರಷ್ಯಾ ಪ್ರವಾಸದ ನಂತರ ನನಗೆ ಅನ್ನಿಸಿದ್ದು, ನಾವು ಇನ್ನೂ ಎಷ್ಟು ಹಿಂದುಳಿದ

ದೇಶವಾಗಿದ್ದೇವೆ ಎಂದು ; ನಮ್ಮ ಭವ್ಯಪರಂಪರೆ, ನಮ್ಮ ಆದರ್ಶಗಳು, ನಮ್ಮ ಸಂಸ್ಕೃತಿಯ ಹೆಮ್ಮೆ—ಇವೆಲ್ಲಾ ಎಷ್ಟು ಜಳ್ಳು ಎಂದು. ಯಾವ ದೊಡ್ಡ ದೊಡ್ಡ ಮಾತನ್ನೂ ಆಡದೆ ಆ ದೇಶದ ಜನ ಅರ್ಧ ಶತಮಾನದಲ್ಲಿ ಎಂಥ ಪ್ರಗತಿಯನ್ನು ಸಾಧಿಸಿದ್ದಾರೆ. ಆದರೆ ನಾವಿನ್ನೂ ಮಾತಿನ ಮೋಳಗಿನಲ್ಲೇ ಗತವೈಭವಗಳ ಸ್ಮರಣೆಯಲ್ಲೇ ಇದ್ದೇವೆ. ಆ ಜನಕ್ಕಿರುವ ರಾಷ್ಟ್ರೀಯ ಪ್ರಜ್ಞೆ, ಆಲಸಿಕೆಗೆ ಆಸ್ಪದವಿಲ್ಲದ ದುಡಿಮೆ, ಎಲ್ಲಕ್ಕೂ ಮಿಗಿಲಾಗಿ ಜೀವಂತಿಕೆ ನಮ್ಮಲ್ಲಿ ಯಾಕೆ ಇಲ್ಲ ಎಂದು ಪ್ರಶ್ನೆ ಹಾಕಿಕೊಂಡಿದ್ದೇನೆ. ಆ ಜನ ಇಷ್ಟು ಮುಂದುವರಿದದ್ದಕ್ಕೆ ಕಾರಣ ಹೀಗಿರಬಹುದು. ಒಂದು, ಆ ದೇಶದ ಪ್ರತಿಯೊಬ್ಬನೂ ರಕ್ತ ಸುರಿಸಿ ಜೀವ ತೆತ್ತು ಸ್ವಾತಂತ್ರ್ಯವನ್ನು ಗಳಿಸಿಕೊಂಡರು. ಎರಡು, ಸ್ವಾತಂತ್ರ್ಯ ಬಂದ ಕೂಡಲೇ ಅನ್ಯಪ್ರಭಾವಗಳನ್ನು, ನೆರವುಗಳನ್ನು ನಿರಾಕರಿಸಿ, ಸುತ್ತ ಉಕ್ಕಿನಕೋಟೆ ಕಟ್ಟಿಕೊಂಡು ಸ್ವಾವಲಂಬಿಗಳಾಗಿ ಹಗಲಿರುಳೂ ದುಡಿದರು. ಮೂರು, ವಿಧಿ-ಕರ್ಮ-ದೈವಗಳ ಮಾತಾಡದೆ ಪೌರುಷವನ್ನು ನೆಚ್ಚಿಕೊಂಡರು. ನಾವೂ ಹೀಗೆ ಬದುಕಿದ್ದರೆ ಮುಂದುವರಿಯಬಹುದಾಗಿತ್ತು. ಹೀಗಾಗಿ ನಾವಿನ್ನೂ ಅಂಬೆಗಾಲಿಡುತ್ತಿದ್ದೇವೆ.

**ಜಾತೀಯತೆಯ ಬಗ್ಗೆ ನಿಮ್ಮ ಅಭಿಪ್ರಾಯವೇನು ?**

ಜಾತಿಗಳು ಒಂದು ಪಿಡುಗು, ಜಾತಿಗಳು ಮಹಾಶಾಪ, ನಾವು ಜಾತ್ಯತೀತರಾಗಬೇಕು ಎಂದು ಎಷ್ಟೇ ಉಪನ್ಯಾಸ ಕೊಟ್ಟರೂ ನಾವು ಯಾವುದೋ ಒಂದು ಜಾತಿಯೊಳಗಿದ್ದೇವೆ ಅನ್ನುವುದನ್ನು ಮರೆಯಲಾಗುವುದಿಲ್ಲ. ಅಲ್ಲದೆ ಹೀಗೆ ನಾವು ಯಾವುದೋ ಒಂದು ಜಾತಿಯಲ್ಲಿ ಹುಟ್ಟಿದ್ದಕ್ಕೆ ನಾವು ಜವಾಬ್ದಾರರಲ್ಲ. ಯಾಕೆಂದರೆ ಅದೊಂದು ಆಕಸ್ಮಿಕ ಅಷ್ಟೆ. ಹುಟ್ಟುವ ಮೊದಲು ನಾವು ಯಾವ ಜಾತಿಯಲ್ಲಿ ಹುಟ್ಟಬೇಕೆಂಬುದನ್ನು ನಿರ್ಣಯಿಸುವ ಅಧಿಕಾರ ನಮ್ಮ ಕೈಯ್ಯಲ್ಲಿಲ್ಲ. ಹೀಗೆ ಆಕಸ್ಮಿಕವಾಗಿ ಯಾವುದೋ ಒಂದು ಜಾತಿಯಲ್ಲಿರುವ ಕುಟುಂಬದೊಳಗೆ ಹುಟ್ಟಿದಂದಿನಿಂದ, ಆ ಜಾತಿಯ ಇತಿಹಾಸವೆಲ್ಲ ರಕ್ತಗತವಾಗಿ ಮುಕ್ತಿಗೆ ಬಂದುಬಿಡುತ್ತದೆ. ತನ್ನದು ಶ್ರೇಷ್ಠ ಜಾತಿ ಎಂಬ ಅಹಮ್ಮನ್ನೋ, ತನ್ನದು ಕನಿಷ್ಠ ಜಾತಿ ಎಂಬ ಕೊರಗನ್ನೋ ಹಚ್ಚಿಕೊಳ್ಳತೊಡಗುತ್ತಾನೆ. ಮತ್ತು ಸಾಮಾಜಿಕ ಚೌಕಟ್ಟಿನಲ್ಲಿ ಆಯಾ ಜಾತಿಗಿರುವ ಸ್ಥಾನಮಾನ ಆ ಜಾತಿಯ ಜನಕ್ಕಿರುವ ಉದ್ಯೋಗಾವಕಾಶ, ಆ ಜಾತಿಯ ಸಂಖ್ಯಾಬಲ—ಈ ಎಲ್ಲ ತಿಳುವಳಿಕೆಗಳಿಂದ ವ್ಯಕ್ತಿ ತನ್ನ ಜಾತಿಯ ಬಲದಿಂದ ಯಾವ ಪಾತ್ರ ವಹಿಸಬಹುದೆಂಬುದನ್ನು ಗೊತ್ತುಮಾಡಿಕೊಳ್ಳುತ್ತಾನೆ. ಉಣ್ಣುವಾಗ, ಉಡುವಾಗ, ಪಡುವಾಗ, ಸ್ನೇಹವಿಶ್ವಾಸ ಸಂದರ್ಭಗಳಲ್ಲಿ ಯಾವ ಒಂದು ಜಾತಿಯವನೂ, ತಾನು ಯಾವ ಜಾತಿಯವನು ಎಂದು ಯೋಚಿಸುವುದಿಲ್ಲ. ಆದರೆ ಯಾವುದೋ ಒಂದು ಕೆಲಸಕ್ಕೆ ಸ್ಪರ್ಧೆ ಏರ್ಪಟ್ಟಾಗ, ಮತ್ಯಾವುದೋ ಲಾಭದ ಪ್ರಶ್ನೆ ಬಂದಾಗ ಸುಪ್ತವಾದ ಜಾತೀಯತೆ ಹೆಡೆಯೆತ್ತುತ್ತದೆ. ಆದ್ದರಿಂದ ನಿಜವಾದ ಜಾತೀಯತೆ ಕಾಣಿಸಿಕೊಳ್ಳುವುದು ಇಂಥ ಸ್ವಾರ್ಥ ಸ್ಪರ್ಧೆಯ ಸಂದರ್ಭದಲ್ಲಿ ; ಸಾಧನೆಗಳಲ್ಲಿ.

ಎರಡನೆಯದಾಗಿ ಒಂದೇ ಜಾತಿಗೆ ಸೇರಿದವರಲ್ಲಿ ಕೂಡ ವರ್ಗಗಳಿವೆ. ಅನುಕೂಲ ವಿರುವವನು, ಅನುಕೂಲವಿಲ್ಲದವನು ಎಂದು ವಿಭಾಗಿಸಬಹುದು ಇದನ್ನು. ಒಂದೇ ಜಾತಿಗೆ ಸೇರಿದವರಲ್ಲಿ, ಹಣವಂತರಾದವರಿಗೆ, ಪ್ರಭಾವಶಾಲಿಗಳಾದವರಿಗೆ ದೊರೆಯುವ ಅವಕಾಶಗಳು, ಅದಾವುದೂ ಇಲ್ಲದವರಿಗೆ ದೊರೆಯುವುದಿಲ್ಲ. ಆದ್ದರಿಂದ ಕೇವಲ ಜಾತಿಯಿಂದಲೇ ಎಲ್ಲ ಅನುಕೂಲಗಳನ್ನು ಸಾಧಿಸಿಕೊಳ್ಳಲಾಗುವುದಿಲ್ಲ. ಹೀಗಾಗಿ ಆರ್ಥಿಕ ಅಸಮಾನತೆಯಿಂದಾದ ಈ 'ವರ್ಗ', ಜಾತಿಗಿಂತ ಅಪಾಯಕಾರಿಯಾಗಿ ತೋರುತ್ತದೆ.

ಮೂರನೆಯದಾಗಿ, ಯಾವುದೇ ಒಂದು ಜಾತಿಯಲ್ಲಿ ಹುಟ್ಟಿದ ಎಲ್ಲರೂ ತೀರಾ 'ಜಾತೀಯತೆ'ಯಿಂದಲೇ ನಡೆದುಕೊಳ್ಳುತ್ತಾರೆಂದು ಭಾವಿಸುವುದೂ ತಪ್ಪು. 'ಜಾತಿ' ಅಂಥವರ ಪಾಲಿಗೆ ತೀರ ವೈಯ್ಯಕ್ತಿಕವಾದ ಮನೆವಾರ್ತೆ ಮಾತ್ರವಾಗಿದ್ದು, ಮನೆಯಾಚೆ ಆತ ಎಲ್ಲರೊಂದಿಗೂ ತುಂಬ ಉದಾರವಾಗಿ ನಡೆದುಕೊಳ್ಳಬಹುದು; ತನ್ನ 'ಜಾತೀಯತೆ'ಯನ್ನು ಹೊರಗಣ ಜೀವನದಲ್ಲಿ ಪ್ರಕಟಿಸದೆ ಇರಬಹುದು. ಹೀಗಾಗಿ 'ಜಾತಿ' ಹಾಗೂ 'ಜಾತೀಯತೆ'—ಎನ್ನತಕ್ಕವು ತಮಗೆ ತಾವೆ ಒಳ್ಳೆಯವೂ ಅಲ್ಲ, ಕೆಟ್ಟವೂ ಅಲ್ಲ. ಅವುಗಳನ್ನು ಸಾರ್ವಜನಿಕ ಜೀವನದಲ್ಲಿ ಒಬ್ಬ ವ್ಯಕ್ತಿ ಹೇಗೆ ಬಳಸುತ್ತಾನೆ ಎನ್ನುವುದು ಮುಖ್ಯ. ಆದರೆ 'ಜಾತಿ'ಗಳಲ್ಲಿ ಒಂದು ಶ್ರೇಷ್ಠ ಮತ್ತೊಂದು ಕನಿಷ್ಠ—ಎಂಬ ಭಾವನೆಗಳ ವಿರುದ್ಧ ಮುಖ್ಯವಾಗಿ ಹೋರಾಡಬೇಕಾಗಿದೆ.

**ಪಿ. ಲಂಕೇಶ್**

# ನಮ್ಮ ಮೇಷ್ಟ್ರು ಮತ್ತು ಗೆಳೆಯ ಜಿ.ಎಸ್.ಎಸ್.

ಸುಮಾರು ಇಪ್ಪತ್ತುಮೂರು ವರ್ಷಗಳಿಂದ ನೋಡಿರುವ ಒಬ್ಬ ಮನುಷ್ಯನ ಬಗ್ಗೆ ಇದ್ದಕ್ಕಿದ್ದಂತೆ ಒಂದು ಲೇಖನ ಬರೆಯುವುದು ಕಷ್ಟ. ನೋಡಿರುವುದು ಹೆಚ್ಚಾಗಿರುವುದು ಒಂದು ಕಷ್ಟ, ನೋಡಿದ್ದರೂ ಮನುಷ್ಯರು ಅರ್ಥವಾಗದಿರುವುದು ಇನ್ನೊಂದು ಕಷ್ಟ. ಜಿ. ಎಸ್. ಶಿವರುದ್ರಪ್ಪನವರು ನನಗೆ ಐವತ್ತಮೂರು, ಐವತ್ತನಾಲ್ಕರಲ್ಲಿ ಇಂಟರ್‌ನಲ್ಲಿ ಮೇಷ್ಟ್ರರಾಗಿದ್ದರು; ಅನೇಕ ರೀತಿಗಳಲ್ಲಿ ನನಗೆ ಆಗ ಇದ್ದ ಒಬ್ಬರೇ ಮೇಷ್ಟ್ರರಾಗಿದ್ದರು. ನನಗೆ ಶಿವಮೊಗ್ಗ ಆಗ ದೊಡ್ಡ ನಗರ. ಅವರಿಗೆ ಅದೊಂದು ಚಿಕ್ಕ ಕೊಂಪೆ. ಹೀಗಾಗಿ ಪೇಟೆಯ ಕಡೆ ನಡೆಯುತ್ತಿದ್ದ ನನ್ನನ್ನು ಹಳ್ಳಿಯ ಕಡೆಗೆ ವರ್ಗವಾಗಿ ಬಂದಿದ್ದ ಅವರು ಭೆಟ್ಟಿಯಾದರು. ಇಬ್ಬರಿಗೂ ಇದ್ದ ಮುಗ್ಧ ಆದರ್ಶವಾದ ಮತ್ತು ಸಾಹಿತ್ಯಾಸಕ್ತಿ ನಮ್ಮನ್ನು ಒಂದುಗೂಡಿಸಿತ್ತು. ನಾನಾಗ ಬರೆಯುತ್ತಿರಲಿಲ್ಲ. ಬರೆಯುವವರನ್ನು ಇಷ್ಟಗಲ ಕಣ್ಣಗಲಿಸಿ ಜಗತ್ತಿನ ಆಶ್ಚರ್ಯಗಳೆಂಬಂತೆ ನೋಡುತ್ತಿದ್ದೆ. ಸಾಹಿತ್ಯ ಎಂಬ ತಲೆಬರಹದಲ್ಲಿ ಬಂದದ್ದನ್ನೆಲ್ಲ ಓದುತ್ತಿದ್ದೆ, ಮಾತುಕತೆ ನಡವಳಿಕೆ ಗಾಂಭೀರ್ಯ ಇತ್ಯಾದಿಯಲ್ಲಿ ಲೇಖಕರುಗಳನ್ನು ಅನುಕರಿಸುತ್ತಿದ್ದೆ. ಆ ದಿನಗಳಲ್ಲಿ ನಾನು ಲೇಖಕರು, ಬುದ್ಧಿಜೀವಿಗಳ ಬಗ್ಗೆ ಹುಚ್ಚನಾಗಿದ್ದು ಈಗ ನಗೆ ತರಿಸಬಹುದು. ಆದರೆ ಶಿವರುದ್ರಪ್ಪನವರ ಪಾಠ ಮತ್ತು ಅನ್ಯೋನ್ಯತೆ ನನಗೆ ಬೇಕಾಗಿದ್ದವು. ನಮಗೆ ಅವರು 'ಯಶೋಧರಾ' ಮತ್ತು 'ಗಿರಿಜಾ ಕಲ್ಯಾಣ' ಮಾಡಿದರು. ವರ್ಗವಾಗಿ ಕಾಲೇಜಿಗೆ ಬಂದೊಡನೆ—ಆ ವರ್ಷ ನಮಗೆ ಭಾರತೀಪ್ರಿಯರ 'ರುದ್ರವೀಣೆ' ಪಠ್ಯವಾಗಿದ್ದುದರಿಂದ—ಒಂದು ಗಂಟೆ full ಸಣ್ಣ ಕತೆಯ ಸ್ವರೂಪದ ಬಗ್ಗೆ ಲೆಕ್ಚರ್ ಕೊಟ್ಟರು. ತುಂಬ ಚೆನ್ನಾಗಿತ್ತು. ಅವರು ತುಂಬ ಆತ್ಮೀಯವಾಗಿದ್ದರು, ನಮ್ಮ ಬಗ್ಗೆಯಂತೂ ತುಂಬ ಉದಾರವಾಗಿದ್ದರು. ನಾನವರ ಮನೆಗೆ ಹೋದಾಗಲೆಲ್ಲ ಕಾಫಿ ದೊರೆಯುತ್ತಿತ್ತು ಮತ್ತು ಆಗತಾನೆ ಅವರು ಬರೆದಿದ್ದ ಪದ್ಯಗಳ ವಾಚನವಾಗುತ್ತಿತ್ತು. ಇದು ಎಲ್ಲ ಕವಿಗಳೊಂದಿಗೆ ಆಗುವ ಘಟನೆಗಳಾದ್ದರಿಂದ ಒಂದೆರಡು ಕುತೂಹಲಕರ ಸನ್ನಿವೇಶ ಹೇಳಬಹುದು. (ಅವು ಕೂಡ ಅಷ್ಟೊಂದು ಕುತೂಹಲಕರವಿರಲಾರವು ಎಂಬ ಸಂದೇಹ ನನಗಿದೆ). ನಾನು ಎರಡನೇ ಇಂಟರ್‌ನಲ್ಲಿದ್ದಾಗ ಕಾಲೇಜಿನ ಸಾಹಿತ್ಯ ಸಂಘಕ್ಕೆ ಕಾರ್ಯದರ್ಶಿಯಾಗಿದ್ದೆ. ಆಗ ಅನೇಕ ಜನ ಸಾಹಿತಿಗಳನ್ನು ಆಹ್ವಾನಿಸಿದ್ದೆ. ಕಾರಂತ, ಅ.ನ.ಕೃ, ನಿರಂಜನ, ಬೇಂದ್ರೆ—ಮುಂತಾದವರೆಲ್ಲ

ಬಂದಿದ್ದರು. ಇಡೀ ಕಾಲೇಜಿನಲ್ಲಿ ಮೆರೆದಾಡುತ್ತ ಸಾಹಿತ್ಯದ ಗುಂಪಿನಲ್ಲಿ ಓಡಾಡುತ್ತ ಜಂಬ ಮಾಡುತ್ತಿದ್ದ ನನ್ನ ಬಗ್ಗೆ ಅನೇಕ ಅಧ್ಯಾಪಕರುಗಳಿಗೆ ಬೇಸರವಿತ್ತು. "ಈತ ಈ ಸಲ ಪರೀಕ್ಷೇಲಿ ಪಲ್ಟಿ ಹೊಡೀತಾನೆ" ಎಂದು ಅನೇಕ ಅಧ್ಯಾಪಕರು ಹೇಳಿದ್ದರು ; ಆಗ ಶಿವರುದ್ರಪ್ಪ, "ಇಲ್ಲ ಪಾಸಾಗುತ್ತಾನೆ. ಫಸ್ಟ್‌ಕ್ಲಾಸ್ ಬರುತ್ತಾನೆ" ಎಂದೆಲ್ಲ ವಾದಿಸಿದ್ದರು. ಈ ಅಧ್ಯಾಪಕರುಗಳ ಊಹೆಗೆ ಸರಿಯಾಗಿ ನಾನು ಕೆಮಿಸ್ಟ್ರಿಯಲ್ಲಿ ಸರಿಯಾಗಿ ಮಾಡಲಿಲ್ಲ. ಪ್ರಾಣಿಶಾಸ್ತ್ರದ ಅನೇಕ ವಿವರಗಳು ಪರೀಕ್ಷೆಯಲ್ಲಿ ಮರೆತು ಹೋದವು. ಮೊದಲವರ್ಷದ ಇಂಟರ್‌ನಲ್ಲಿ ಎಂಭತ್ತೆಂಟು ಪರ್ಸೆಂಟ್ ನಂಬರು ತೆಗೆದಿದ್ದ ನಾನು ಎರಡನೆ ವರ್ಷ ಫೇಲಾಗುವುದಾಗಿ ಹೆದರಿದ್ದೆ. ಆದರೆ ಶಿವರುದ್ರಪ್ಪನವರ ವಿಶ್ವಾಸಕ್ಕೆ ಸರಿಯಾಗಿ ಪಾಸಾಯಿತು—ಕೇವಲ ಶೇಕಡ ೫೪ ಪಡೆದು! ಪಾಸಾಗಿದ್ದೇ ತಡ ಪದವಿಕ್ಕುಗಳಿಗೆ ಸೀಟಿಗಾಗಿ ಅರ್ಜಿ ಗುಜರಾಯಿಸಿದೆ. ಕನ್ನಡ, ಇಂಗ್ಲಿಷ್, ಬಾಟನಿ, ಜೂಆಲಜಿಗಳಲ್ಲಿ ಸೀಟ್ ದೊರೆಯಿತು. ಇವುಗಳಲ್ಲಿ ಆರಿಸಿಕೊಳ್ಳಲು ಶಿವರುದ್ರಪ್ಪನವರ ಹಿತವಚನ ಕೇಳಿದೆ. ಅವರು 'ಇಂಗ್ಲಿಷ್ ಆನರ್ಸ್‌ಗೆ ಹೋಗಿ" ಅಂದರು. ಹೋದದ್ದಾಯಿತು. ಆಗ ನನಗೆ ಹತ್ತೊಂಭತ್ತು ವರ್ಷ. ಹೊಸ ಅನುಭವಕ್ಕಾಗಿ ದಾಹಗೊಂಡಿದ್ದ ಕಾಲ. ಬೆಂಗಳೂರಿನ ಬಿಸಿಲು, ಚಳಿ ನನ್ನ ಎಲುಬಿನ ರಸವನ್ನು ಚುರುಕುಗೊಳಿಸಿದವು. ಅದಕ್ಕೆ ತಕ್ಕ ಮಿತ್ರರೂ ಸಿಕ್ಕಿದ್ದರು. ಜೀವನವನ್ನು ನೋಡುವ ಬಗೆಯಲ್ಲಿ ನಾನು ಶಿವರುದ್ರಪ್ಪನವರಿಂದ ದೂರ ಹೋಗತೊಡಗಿದೆ. ಅಷ್ಟರಲ್ಲಿ ಶರ್ಮ, ಅಡಿಗರು ತಮ್ಮ ಪದ್ಯ ಬರೆಯಲು ಯತ್ನಿಸುತ್ತಿದ್ದರು. ನನ್ನ ಅಧ್ಯಾಪಕರಾಗಿದ್ದ ಕೆ. ನರಸಿಂಹಮೂರ್ತಿಯವರು ಎಲಿಯಟ್, ಲೀವೀಸ್, ರಿಚರ್ಡ್ಸ್ ಪಾಠ ಹೇಳುತ್ತಿದ್ದರು. ಈ ಮಧ್ಯೆ ಶಿವರುದ್ರಪ್ಪನವರೊಂದಿಗೆ ನನ್ನ ಸಂಬಂಧ ಮಾತ್ರ ಕಡಿದಿರಲಿಲ್ಲ. ಅವರು ಸ್ವಾಭಾವಿಕವಾಗಿಯೇ ನನ್ನ ನಿಲುವನ್ನು ಅನುಮಾನದಿಂದ ನೋಡುತ್ತಿದ್ದರು. ಹಕ್ಕಿ, ಮರ, ಪೊದೆ, ಚಂದ್ರ, ಉತ್ಸಾಹ, ಪ್ರೇಮದ ಒಂದು ರಾಜ್ಯದಿಂದ ಕಾವ್ಯದೇವಿ ಟೈಂಪೀಸು, ಕಾರು ಲಾರಿಗಳ ಗದ್ದಲಕ್ಕೆ ಕಾಲಿಟ್ಟಂತಿತ್ತು. ನನಗೆ ಶಿವರುದ್ರಪ್ಪ ಸರಳವಾಗಿ ಕಾಣುತ್ತಿದ್ದಂತೆ ಅವರಿಗೆ ನಾನು ಮಾಂಸದಂಗಡಿಯ ಮಾಲೀಕರಂತೆ ಕಾಣುತ್ತಿದ್ದೆನು.

ನಡುವೆ ಕಾಲ ಸರಿದಿದೆ. ಸುಮಾರು ಹತ್ತು ವರ್ಷ ಶಿವರುದ್ರಪ್ಪ ಮತ್ತು ನಾನು ಬಹಳ ಸಲ ಸಂಧಿಸಲಿಲ್ಲ. ನನ್ನ ಪ್ರೇಮಗಳು, ಮದುವೆ, ಗೋಳುಗಳು, ಜಗಳಗಳು, ಬರವಣಿಗೆ ಇತ್ಯಾದಿಯೆಲ್ಲ ನಡೆಯುತ್ತಿದ್ದಾಗ ಶಿವರುದ್ರಪ್ಪನವರಿಗೆ ಏನಾಯಿತು ಎಂದು ಕೂಡ ಯೋಚಿಸಲು ವೇಳೆ ದೊರೆತಿರಲಿಲ್ಲ. ಆಮೇಲೆ ಅವರು ವಿಶ್ವವಿದ್ಯಾನಿಲಯಕ್ಕೆ ಪ್ರೊಫೆಸರ್ ಆಗಿ ಬಂದಾಗಲೇ ಮತ್ತೆ ನಮ್ಮ ಭೇಟಿ.

ನಾನು ಬಲ್ಲ ಅನೇಕ ಮನುಷ್ಯರು ವಿಚಿತ್ರ ರೀತಿಯಲ್ಲಿ ಬದಲಾಗಿದ್ದಾರೆ. ನನ್ನ ಅನೇಕ ಸಹಪಾಠಿಗಳು ತೀರಾ ಸೀಮಿತಗೊಂಡು ನಾನು ಗುರುತುಹಚ್ಚದಷ್ಟು ಕಾಲದ ಹೊಡೆತಕ್ಕೆ ವಿರೂಪಗೊಂಡಿದ್ದಾರೆ. ಆದರೆ ಶಿವರುದ್ರಪ್ಪನವರ ಎಲ್ಲ ನೋವುಗಳು, ಎಲ್ಲ ಕಾಳಜಿಗಳು ಅವರನ್ನು ಅಸುಖಿಯಾಗಿ ಮಾತ್ರವಲ್ಲ, ಮಾನವೀಯವಾಗಿ ಮಾಡಿವೆ.

ಇವರಿಂದ ನನಗೇನೂ ಆಗಬೇಕಾದ್ದಿಲ್ಲ ಮತ್ತು ಅದು ಮುಖ್ಯವಲ್ಲ ಎಂಬ ನಂಬಿಕೆಯಿಂದ ಈ ಮಾತು ಹೇಳುತ್ತಿದ್ದೇನೆ. ನನ್ನ ನಿರೀಕ್ಷೆ ಮೀರಿ ಅವರಿಗೆ ಅನುಭವಗಳಾಗಿವೆ. ಅವರು ತುಂಬ ಸೂಕ್ಷ್ಮಮತಿಗಳು ಮತ್ತು ಬೇಗ ಬೇಸರಗೊಳ್ಳುವವರು. ಆದ್ದರಿಂದ ತಮ್ಮ ಪರದಾಟಗಳ ಬಗ್ಗೆ ಖೇದಗೊಂಡಿದ್ದಾರೆ. ಒಮ್ಮೆ ತುಂಬ ಬೇಸರದಿಂದ ಹೇಳಿದರು, "ನನ್ನ ಬದುಕು ತುಂಬ ಭಾರವಾಗಿದೆ. ನಾನು ಇಷ್ಟೆಲ್ಲ ಹಚ್ಚಿಕೊಳ್ಳಬಾರದಿತ್ತು." ನಾನು ನನ್ನದೇ ಆದ ರೀತಿಯಲ್ಲಿ ನಕ್ಕು ಹೇಳಿದೆ, "ನೀವು ವ್ಯಥೆಪಡಬೇಕಾದ್ದು ಏನೂ ಆಗಿಲ್ಲ. ನೀವು ಮಾಡಿದ್ದು ಸರಿ."

ನಾನು ಬಲ್ಲ ಕೆಲವೇ ಜನ ಪ್ರಾಮಾಣಿಕ, ಜಾಣ ಮನುಷ್ಯರಲ್ಲಿ ಶಿವರುದ್ರಪ್ಪ ಒಬ್ಬರು. ಅವರು ಕನ್ನಡ ಇಲಾಖೆಯ ಮುಖ್ಯಸ್ಥರಾಗಿ ಅನೇಕ ತಪ್ಪು ಮಾಡಬಹುದಿತ್ತು. ಆದರೆ ಪ್ರತಿಯೊಂದು ಕೆಲಸದಲ್ಲೂ ಸರಿ, ತಪ್ಪುಗಳ ಬಗ್ಗೆ ಚಿಂತಿಸಿ ತಮ್ಮ ಪ್ರೀತಿ ಮತ್ತು ಇಲಾಖೆಯ ನಿಯಮಕ್ಕೆ ಬದ್ಧರಾಗಿ ವರ್ತಿಸಿದ್ದಾರೆ. ಆದರೂ ಮೊನ್ನೆ ತಾನೆ ಅವರ ಬಗ್ಗೆ ಕೆಲವು ಪತ್ರಿಕೆಗಳಲ್ಲಿ ಆಪಾದನೆ ಬಂದವು; ಅವರು ಭ್ರಷ್ಟರೆಂಬ ಧೋರಣೆಯಲ್ಲಿ ಕೆಲವರು ಬರೆದರು. ನನಗೆ ಗೊತ್ತಿತ್ತು ಈ ಮನುಷ್ಯ ಪ್ರಾಮಾಣಿಕ ಮಾತ್ರವಲ್ಲ, ನನಗಿಂತಲೂ ಹಣದ ವಿಷಯದಲ್ಲಿ ಬಡವನಾದ, ನನ್ನ ಪರಿಚಿತರಲ್ಲೆಲ್ಲ ಅಧಿಕಾರದ ಬಗ್ಗೆ ತಾತ್ಸಾರವುಳ್ಳ ಮನುಷ್ಯ ಎಂದು. ಇವರು ಅಧಿಕಾರ, ಹಣದ ಬಗ್ಗೆ ವರ್ತಿಸಿದ ಅನೇಕ ಘಟನೆಗಳು ಗೊತ್ತು : ಜತ್ತಿಯವರು ಪ್ರೀತಿಯಿಂದ ಕಳಿಸಿದ ಒಂದು ಆಹ್ವಾನವನ್ನು ಒಪ್ಪಿಕೊಂಡು ಅವರಿಗೆ ಒಪ್ಪುವಂತೆ ತಮ್ಮ ನಿಲುವನ್ನು ಮಾರ್ಪಾಟು ಮಾಡಿಕೊಂಡಿದ್ದರೆ—ಈ ಶಿವರುದ್ರಪ್ಪ ನಮ್ಮಂಥ ಸಣ್ಣಪುಟ್ಟ ವ್ಯಕ್ತಿಗಳ ಜೊತೆಗೆ ಇರಬೇಕಾದ ಅಗತ್ಯವಿರಲಿಲ್ಲ. ಅಷ್ಟೇ ಅಲ್ಲ, ಇಷ್ಟು ಸರಳವಾಗಿ, ನಂಬಿಕೆಗೆ ಯೋಗ್ಯರಾಗಿ, ನಮ್ಮೆಲ್ಲರೊಂದಿಗೆ ಜಗಳವಾಡುತ್ತ ಅನ್ಯೋನ್ಯವಾಗಿ ಮಾತಾಡುತ್ತ ಪರಿಸರದ ಬಗ್ಗೆ ಸ್ಪಂದಿಸುತ್ತ ಪ್ರಾಮಾಣಿಕ ಧೈರ್ಯ ತೋರುತ್ತ ನಮಗೆ ಬೇಕಾದವರಾಗಿ, ಬಡವರಾಗಿ, ಕ್ರಿಯಾಶಾಲಿಗಳಾಗಿ ಇರುತ್ತಲೂ ಇರಲಿಲ್ಲ.

ಜಯಸುದರ್ಶನ

# 'ಮುಕ್ತಪ್ರಜ್ಞೆ'ಯ ಕವಿ ಜಿ. ಎಸ್. ಶಿವರುದ್ರಪ್ಪ

ಸಾವಲ್ಲವೊ ಮರುಳೇ ಇದು
ಸ್ವಸ್ವರೂಪ ಕಾರಣ
ಕೃತಿಯು ಮುಗಿದ ಮೇಲೆ ಕಾಣೊ
ಆಕೃತಿಗಳ ದರ್ಶನ

* * *

ಯಾವತ್ತಿನಿಂದಲೋ ಸುರಿದ ಜಡಿ ಮಳೆ ಇಳಿದು
ಒಳಗಿನ ಕುದಿಗೆ ಹದವಾಗಿ ಮಿದುವಾಗಿ
ಮಲಗಿರುವಾಗ
ಬಾವಿಯ ತೋಡಿ ಯಾತವ ಹೊಡೆವು
ತಂದದ್ದು ಈ ರಾಗ:

—ಶಿವರುದ್ರಪ್ಪ

"ಕಲ್ಪನೆಯ ಮೋಡ ಕರಗಿ ವಾಸ್ತವದ ನೆಲಕಿಳಿದಾಗ ಮುಕ್ತಿ ಈ ಮಣ್ಣಿನಲ್ಲಿ" ಎನ್ನುವ ಜಿ. ಎಸ್. ಶಿವರುದ್ರಪ್ಪನವರು, 'ಈಸಾಡುವ ನೆಲಮುಗಿಲುಗಳ ನಡೂ ಮಧ್ಯೆ ಮರಮರದ ಹಾಸಿಗೆಯಲ್ಲಿ ಮಂದಹಾಸದ ನಿದ್ದೆಯನ್ನೂ' ಬಲ್ಲವರು. 'ಪೋಸ್'ಗಳನ್ನು ತಳೆಯದ, ಮಹತ್ತರ ಶಬ್ದಗಳನ್ನು ಬಳಸದ ಜಿ.ಎಸ್.ಎಸ್. ಅವರ ಪ್ರಮುಖ ಸಾಧನೆ ಪ್ರಾಯಶಃ ಅವರು ತಮ್ಮನ್ನು ತಾವು ಪ್ರಾಂಜಲವಾಗಿ ಒಪ್ಪಿಕೊಂಡಿರುವುದೇ ಆಗಿದೆ. ಎಂತಲೇ ಅವರು ನಿರ್ಭೀತಿಯಿಂದ ಜಗತ್ತನ್ನು ಮತ್ತು ಬದುಕಿನ ಅನಿವಾರ್ಯತೆಯನ್ನು ಒಪ್ಪಿಕೊಳ್ಳಬಲ್ಲರು. ಇಂದಿನ ಅಬ್ಬರಗಳ ನಡುವೆ ಅವರು ತಮ್ಮ ಕಾವ್ಯ–ಜೀವನ ಸರಿತವನ್ನು ನಿರ್ಭಯವಾಗಿ, ಸದ್ದುಗದ್ದಲವಿಲ್ಲದೆ ಸಾಗಿಸಿಕೊಂಡು ಹೋಗಿದ್ದಾರೆ. ಅವರ ನಸುನಗೆಯ, ಹೊಳಪುಗಣ್ಣಿನ, ಸರಳ ಮಾತಿನ ಹಿಂದಿರುವ ಗಂಭೀರವೂ ಸಂಕೀರ್ಣವೂ ಆದ ವ್ಯಕ್ತಿತ್ವವನ್ನು ಅರ್ಥಮಾಡಿಕೊಳ್ಳುವುದು ಸುಲಭವಲ್ಲ.

ಇಂದು ಐವತ್ತರ ಹೊಸ್ತಿಲು (ಜನನ: ಫೆಬ್ರವರಿ ೭, ೧೯೨೬) ದಾಟಿರುವ ಡಾ. ಜಿ. ಎಸ್. ಶಿವರುದ್ರಪ್ಪನವರು ತಮ್ಮನ್ನು 'ಮುಕ್ತಪ್ರಜ್ಞೆ'ಯ ಕವಿ ಎಂದು ಕರೆದು ಕೊಳ್ಳುತ್ತಾರೆ. ದಾರ್ಶನಿಕ ಜಿಡ್ಡು ಕೃಷ್ಣಮೂರ್ತಿ ಅವರ ಜೀವನ ದರ್ಶನವನ್ನು ಶಿವರುದ್ರಪ್ಪನವರು ಮೆಚ್ಚಿಕೊಳ್ಳುತ್ತಾರೆ. ಬದಲಾಗುತ್ತ ಹೋಗುವುದು ಈ ಹಿರಿಕವಿಯ

ಜಾಯಮಾನ. ಈ ಬದಲಾವಣೆ ಹೊರಗಿನ ಪರಿಸರದ ಒತ್ತಡದ ಕಾರಣ ಮಾತ್ರವೇ ಅನಿವಾರ್ಯವಾಗದೆ ಇವರ ಆಂತರ್ಯದಲ್ಲಿ—ಹಸಿರಿನೊಳಗಿಂದ ಹೂವು ಮೂಡಿ ಬರುವ ಹಾಗೆ—ಸಹಜವಾಗಿ ಮೂಡಿ ಬರುವುದು ಜಿ.ಎಸ್.ಎಸ್. ಅವರ ವಿಶೇಷ. ಕುವೆಂಪು ಮತ್ತು ಅಂಬಿಕಾತನಯದತ್ತರ ಪ್ರಖರ ಪ್ರತಿಭಾ ದೀಪಗಳನ್ನು ಸುತ್ತುಹಾಕಿ, ರೆಕ್ಕೆ ಕಳಚಿ ಬಿದ್ದ ಸಾಧಾರಣ ಪ್ರತಿಭೆಯ ಕವಿಗಳೆಷ್ಟೋ ಆಗಿಹೋಗಿದ್ದಾರೆ; ಈಗಲೂ ಇದ್ದಾರೆ. ಈ ಇಬ್ಬರು ದಿಗ್ಗಜ ಕವಿಗಳಿಂದ ಪ್ರಭಾವಿಸಲ್ಪಟ್ಟರೂ (ಅದರಲ್ಲೂ ಕುವೆಂಪು ಅವರು ವೈಯಕ್ತಿಕವಾಗಿ ಕೂಡ ಜಿ.ಎಸ್. ಎಸ್. ಅವರ ಮೇಲೆ ತುಂಬ ಪ್ರಭಾವ ಬೀರಿದ್ದಾರೆ) ಜಿ.ಎಸ್.ಎಸ್. ತಮ್ಮ ಧ್ವನಿಯನ್ನು ಕಂಡುಕೊಳ್ಳುವ ಪ್ರಯತ್ನವನ್ನು ನಿರಂತರವಾಗಿ ನಡೆಸಿದ್ದರು. ಇಂದು ಒಂಭತ್ತು ಕವನ ಸಂಕಲನಗಳು, ಹಲವಾರು ವಿಮರ್ಶನ ಗ್ರಂಥಗಳನ್ನು ಪ್ರಕಟಿಸಿರುವ ಜಿ.ಎಸ್.ಎಸ್. ಅವರ ಪ್ರಾತಿನಿಧಿಕ ಕವನ ಸಂಕಲನ—'ನನ್ನ ನಿನ್ನ ನಡುವೆ' ಈಚೆಗಷ್ಟೇ ಹೊರಬಿದ್ದಿದೆ.

ಸಕಲ ಕ್ರಿಯೇಟಿವ್ ಚಟುವಟಿಕೆಗಳಿಗೆ ಮತ್ತು ರಚನೆಗಳಿಗೆ ಮುಖ್ಯ ಪ್ರೇರಣೆ 'ಕಾಲನ ಭಯ' ಎಂದು ಜಿ.ಎಸ್.ಎಸ್. ಹೇಳುತ್ತಾರೆ. ಮುಂದಿನ ಪೀಳಿಗೆಗಳಿಗೆ ಏನನ್ನಾದರೂ ಬಿಟ್ಟು ಹೋಗಬೇಕೆಂಬ ಹಾಗೂ ತನ್ನ ಅಳಿವಿನ ಅನಂತರವೂ ಉಳಿದು ನಿಲ್ಲುವ ಸ್ವಯಂಕೃತ ವಸ್ತುವನ್ನು ನಿರ್ಮಿಸಿಡುವ ಮಾನವನ ಬಯಕೆಯು ಈ ಕಾಲನ ಭಯವನ್ನು ನಿರಂತರವಾಗಿ ಗೆಲ್ಲುವ ಪ್ರಯತ್ನವಾಗಿದೆ ಎಂದು ಜಿ.ಎಸ್.ಎಸ್. ಹೇಳುತ್ತಾರೆ. ಕಾಲನ ಪ್ರವೃತ್ತಿಯನ್ನು ಎದುರಿಸುವಲ್ಲಿ ಕಾಣಬರುವ ಈ ಧೀಮಂತಿಕೆಯೇ ನಮ್ಮ ಎಲ್ಲ ಕ್ರಿಯಾತ್ಮಕ ಚಟುವಟಿಕೆಗಳಿಗೆ ಸ್ಫೂರ್ತಿ ಎಂಬುದು ಜಿ.ಎಸ್.ಎಸ್. ಅವರ ನಂಬಿಕೆ.

ಕಾಲವನ್ನು ಮೆಟ್ಟಿ ನಿಲ್ಲುವ ಧೀಮಂತಿಕೆ ಮಾನವನ ಒಂದು ವಿಶಿಷ್ಟ ಗುಣ. ಜಿ.ಎಸ್.ಎಸ್. ಅವರ ಚಿಂತನೆಗೆ ಮುಖ್ಯ ಪ್ರೇರಣೆಯಾದರೋ ವ್ಯಕ್ತಿ ವ್ಯಕ್ತಿಗಳ ನಡುವಣ ಸಂಬಂಧಗಳು ಮತ್ತು ವ್ಯಕ್ತಿ ಕಾಲನ ಸಂಬಂಧ. ಅವರ ವೈಯಕ್ತಿಕ ತತ್ತ್ವ ಜ್ಞಾನವು ಇದೀಗ ಅವರಿಗೆ ಮಾನವ ಸಂಬಂಧಗಳನ್ನು—ದೈವೀಕತೆಯ ಹುಡುಕಾಟದ ಹಾಗೂ ಆಧ್ಯಾತ್ಮದ ಬದಲಿಗೆ ಜೀವನದ ಮುಖ್ಯ ಗುರಿಯಾಗಿ—ಇಟ್ಟುಕೊಳ್ಳುವ ನಿಲುವನ್ನು ತಂದುಕೊಟ್ಟಿದೆ. ನವೋದಯ ಕಾವ್ಯಯುಗ ವಿಜೃಂಭಿಸಿದ್ದಾಗ ತಮ್ಮ ಕಾವ್ಯ ಕೃಷಿ ಪ್ರಾರಂಭಿಸಿದ ಜಿ.ಎಸ್.ಎಸ್. ಅವರ ಮೊದಲ ಕವನ ಸಂಕಲನಗಳ ಮೇಲೆ ಇದೇ ನವೋದಯ ಕಾವ್ಯಮಾರ್ಗದ ಭಾವಾತಿರೇಕ, ಆದರ್ಶ ವಾದ ಇವೆಲ್ಲ ದಾಳಿ ನಡೆಸಿವೆ. ಇವನ್ನು ಜಿ.ಎಸ್.ಎಸ್. ಬಲ್ಲರು. ಆದರೆ ೧೯೬೦ರ ಸುಮಾರಿನಲ್ಲಿ ತಮ್ಮ ಸಂವೇದನೆ ಒಂದು ಮಹತ್ತರ ಬದಲಾವಣೆಗೆ ಒಳಗಾಗಿ ಹೆಚ್ಚು ವಸ್ತುನಿಷ್ಠವೂ, ಪ್ರಜ್ಞಾವಂತವೂ, ಸೂಕ್ಷ್ಮವೂ ಆಯಿತೆಂದು ಅವರು ಹೇಳುತ್ತಾರೆ.

ಈ ಬದಲಾವಣೆಯನ್ನು ಅವರು ವ್ಯಕ್ತಿಯಾಗಿ, ಕವಿಯಾಗಿ ಸಮಗ್ರವಾಗಿ ಅನುಭವಿಸಿದರು. ಇದರಿಂದ ಉಂಟಾದ ನೋವೂ ಸಾಧಾರಣವಾದುದೇನೂ ಆಗಿರಲಿಲ್ಲ. ಅದು

ವರೆಗೆ ಯಾವುದು ಜೀವನಕ್ಕೆ ಲಂಗರಾಗಿತ್ತೋ ಅದೇ ಕಳಚಿತು. ದೇವರ ಬಗ್ಗೆ, ಆದರ್ಶಗಳ ಬಗ್ಗೆ ಇದ್ದ ಹಳೇ ನಂಬಿಕೆಗಳ ಗಾಳಿಗೋಪುರ ನುಚ್ಚುನುರಿಯಾಯಿತು. ಅವರ ಈಚಿನ ಕಾವ್ಯದಲ್ಲಿ ಅವರ ಅನುಭವ ಪಡೆದ ಹೊಸ ಸಂವೇದನೆಯು ಹಾಗೂ ವಿಕಸಿತವಾದ ಪ್ರಜ್ಞೆಯ ಅಭಿವ್ಯಕ್ತಿ ಕಾಣುತ್ತದೆ. ನಾವು ಸಿದ್ಧ ತೀರ್ಮಾನಗಳಿಂದ ಬದುಕನ್ನು ನೋಡುವ ಸಂಪ್ರದಾಯ ತೊರೆದು ವಸ್ತುನಿಷ್ಠರಾಗಬೇಕು ಮತ್ತು ಮುಕ್ತಮನಸ್ಸಿನಿಂದ ಎಲ್ಲವನ್ನೂ ವೀಕ್ಷಿಸಬೇಕು ಎಂಬುದು ಜಿ.ಎಸ್.ಎಸ್. ಅವರ ನಿಲುವು.

ಇಂತಹ ಬದಲಾವಣೆಯ ಸಲುವಾಗಿ ಹಳೆಯ ನಿಲುವನ್ನು ತೊರೆಯಬೇಕಾಗಿ ಬಂದುದಕ್ಕೆ ಅವರಿಗೆ ನಾಚಿಕೆಯಾಗಲಿ, ಭಯವಾಗಲಿ ಇಲ್ಲ. ಈ ಕಾರಣ ಅವರು ಎಲ್ಲವನ್ನೂ ಸ್ವೀಕರಿಸುವ, ಸಮಾರೋಪಗೊಳಿಸುವ 'ಸಮನ್ವಯ ಕವಿ' ಎಂಬುದಕ್ಕಿಂತ ಹೆಚ್ಚಾಗಿ ಸಕಲವನ್ನೂ ತೆರೆದ ಮನಸ್ಸಿನಿಂದ ನೋಡುವ 'ಮುಕ್ತಪ್ರಜ್ಞೆ'ಯುಳ್ಳ ಕವಿ ಎಂಬುದು ಸತ್ಯಕ್ಕೆ ಹತ್ತಿರವಾದ ಮಾತಾಗುತ್ತದೆ.

ಬದುಕನ್ನು ವಿಂಗಡಿಸಿ, ವಿಚ್ಛೇದಿಸಿ ನೋಡಬಾರದು; ಸಮಗ್ರ ದೃಷ್ಟಿಯಿಂದ ನೋಡಬೇಕು ಎಂಬುದು ಜಿ.ಎಸ್.ಎಸ್. ಅವರ ತಿಳುವಳಿಕೆ ಹಾಗೂ ಜೀವನ ದರ್ಶನ ಕೂಡ. ಪ್ರಾಯಶಃ ಇದು ಅವರನ್ನು ಅವರ ತಲೆಮಾರಿನ ಕವಿಗಳ ಪೈಕಿ ವಿಶಿಷ್ಟ ಕವಿಯಾಗಿ ಮಾಡುತ್ತದೆ. 'ತೀವ್ರವಾಗಿ ಬದುಕಲು ಯತ್ನಿಸಬೇಕು. ಜೀವನಕ್ಕೆ ನಾವು ನಮ್ಮನ್ನು ಒಪ್ಪಿಸಿಕೊಳ್ಳಬೇಕು' ಎಂದು ಜಿ.ಎಸ್.ಎಸ್. ಪ್ರತಿಪಾದಿಸುತ್ತಾರೆ. ಇದು ಅವರ ಮಟ್ಟಿಗೆ ಹೇಳಿಕೆಯಲ್ಲ, ಕ್ರಿಯೆ ಕೂಡ. ಆದರ್ಶಗಳನ್ನು, ಅತಿರಂಜಿತ ಭಾವನಾತ್ಮಕ ಪ್ರಪಂಚವನ್ನು ತೊರೆದು, ತಮ್ಮ ಮನಸ್ಸಾಕ್ಷಿಯನ್ನು ನಂಬಿಕೊಂಡು ಈಗ—ಆಕಾಶದಲ್ಲಿ ಬೆರಗಿನ ಚಿಹ್ನೆಯಾಗಿ ನಿಂತ ಗೊಮ್ಮಟನಂತೆ ಇರುವ—ಜಿ.ಎಸ್.ಎಸ್. ಅವರ ಮೇಲಿನ ಮಾತು ಅವರ ಕೃತಿಯ, ಬಾಳಿನ ಕಾಣ್ಕೆ.

"೧೯೬೦ರ ಸುಮಾರಿಗೆ ನೀವು ಹೇಳಿದ ಬದಲಾವಣೆ ತೋರಿಬರಲು ಕಾರಣವೇನು ?"

"ನನ್ನ ಧ್ವನಿಯನ್ನು, ಹಾದಿಯನ್ನು ಕಂಡುಕೊಳ್ಳಬೇಕೆಂಬ ತೀವ್ರ ಅಭೀಪ್ಸೆ ನನ್ನಲ್ಲಿ ಮೊಳೆಯಿತು. ಇತರರಿಗೆ ಅಂಟಿಕೊಂಡಿರುವುದು ಬೇಡವಾಯಿತು.

ನವೋದಯದ ಆದರ್ಶ, ಭಾವುಕತೆಗಳನ್ನು ದಾಟಿ, 'ಮುಕ್ತಪ್ರಜ್ಞೆ'ಯನ್ನು ಕಂಡುಕೊಳ್ಳುತ್ತಿರುವ ಜಿ.ಎಸ್.ಎಸ್. ಅವರಿಗೆ 'ಕಾಡ ಮೂಲಕವೆ ಪಥ ಆಗಸಕ್ಕೆ' ಎಂಬುದೂ 'ನಕ್ಷತ್ರಕ್ಕೆ ಕತ್ತಲಲ್ಲೇ ದಾರಿ' ಎಂಬುದೂ ಬದುಕಿನಲ್ಲಿ ಸಾಬೀತಾದ ಸತ್ಯಗಳು. ಅವರ ಪಾಂಥ ಪ್ರವೃತ್ತಿಗೆ ಈಗಿನ ನವ್ಯಮಾರ್ಗ ಕೂಡ ಹೊಸದಾಗಿ ಕಾಣುತ್ತಿಲ್ಲ. ತಮ್ಮ ಅಭಿವ್ಯಕ್ತಿಗೆ ಯಾವ ಮಾರ್ಗ ಸೂಕ್ತವೋ ಅದನ್ನು ಬಳಸಲು ಹಿಂಜರಿಯುವುದಿಲ್ಲ. ಇಷ್ಟೇ ಅಲ್ಲ, ಇದೀಗ ಮುಕ್ತಕಾವ್ಯ (ಫ್ರೀ ವರ್ಸ್)ವನ್ನು ಅವರು ಕಥನ ಕವನದ ಬರವಣಿಗೆಗೆ ಅಳವಡಿಸಿಕೊಳ್ಳಲು ಯತ್ನಿಸುತ್ತಿದ್ದಾರೆ.

'ಇರುವೆಯೊಂದು ತನ್ನ ಮರಿಗೆ ನೀರೊಳೀಜುಕಲಿಸಲೆಂದು ತೊರೆಯ ಬಳಿಗೆ ಹೋಯಿತು ಎಂದು (೧೯೩೯) ತಮ್ಮ ಮೊದಲಪದ್ಯದ ಮೊದಲ ಸಾಲುಗಳನ್ನು ಬರೆದ ಜಿ. ಎಸ್. ಎಸ್.

ಇಂದು 'ಬೇಡ ನನಗೆ ಸಿದ್ಧಾಂತಗಳ ರಾದ್ಧಾಂತ, ನನಗಿಲ್ಲ ಇದೇ ಸರಿ, ಇಷ್ಟೇ ಸರಿ ಎನ್ನುವ ಪಂಥ.' ನಾ ಬಲ್ಲೆ ಇವು ಎಲ್ಲ ಏರುವೆಯ ಒಂದೊಂದು ಹಂತ ಎನ್ನುವ ಸಮತೂಕವನ್ನು ಗಳಿಸಿಕೊಂಡಿರುವುದು ಸುಲಭದ ಸಾಧನೆಯೇನಲ್ಲ. ನವೋದಯ ಪ್ರಭಾವ ಪ್ರಖರವಾಗಿದ್ದಾಗ ಹಿರಿಯ ದಿಗ್ಗಜ ಕವಿಗಳ ಪ್ರಭಾವವನ್ನು ಒಪ್ಪಿಕೊಂಡೂ, ಅವರ ಅನುಕರಣೆಯನ್ನು ತಪ್ಪಿಸಿಕೊಳ್ಳಲು ಸಾಧ್ಯವಾದುದು ನಿಜವಾದ ಕೆಲವೇ ಪ್ರತಿಭಾಶಾಲಿಗಳಿಗೆ ಮಾತ್ರ. ಇಂತಹವರಲ್ಲಿ ಜಿ.ಎಸ್.ಎಸ್. ಮುಖ್ಯರು. ಇಂದು ನವ್ಯಮಾರ್ಗದಲ್ಲೂ ಬರೆಯುವ ಇವರು ನವ್ಯಕಾವ್ಯ ಈಗಿನ ಸಂದರ್ಭದಲ್ಲಿ ಅಗತ್ಯವೆನಿಸಿದರೂ ೧೯೫೦ರ ದಶಕದಲ್ಲಿ (ಇಂಗ್ಲಿಷ್ ಕಾವ್ಯದಲ್ಲಿ ಹಿಂದೆ ಕಂಡುಬಂದ ಬದಲಾವಣೆಯಿಂದ ಪ್ರಭಾವಿತರಾದವರು), ನವ್ಯವನ್ನು ಅವಸರವಸರವಾಗಿ ಕನ್ನಡ ಕಾವ್ಯಕ್ಕೆ ಅಳವಡಿಸಲೆತ್ನಿಸಿದರು ಎಂದೂ ಹೇಳುತ್ತಾರೆ.

ಕನ್ನಡದ ಪ್ರಥಮ ಶ್ರೇಣಿಯ ಕವಿಗಳ ಸಾಲಿನಲ್ಲಿರುವ ಜಿ.ಎಸ್.ಎಸ್. ಅವರ ಕಾವ್ಯದ ಬಗ್ಗೆ ಆಗಬೇಕಾದಷ್ಟು ವಿಮರ್ಶೆ ಆಗದಿರುವುದು ಎದ್ದು ಕಾಣುವ ಕೊರತೆಯಾಗಿದೆ. ಪ್ರಾಯಶಃ ಸಾಹಿತ್ಯಿಕರಂಗದಲ್ಲಿ ಬೀಡುಬಿಟ್ಟಿರುವ ಗುಂಪುಗಾರಿಕೆ ಇದಕ್ಕೆ ಒಂದು ಕಾರಣವಾಗಿರಬೇಕು. ಸ್ವಂತ ಜಿ.ಎಸ್.ಎಸ್. ಯಾವ ಪಂಗಡಕ್ಕೂ ಅಥವಾ ಗುಂಪಿಗೂ ಸೇರಿಲ್ಲದಿರುವುದರಿಂದ ಪ್ರಾಯಶಃ ಅವರ ಕಾವ್ಯ ನಮ್ಮ ಬಹುತೇಕ ಪ್ರತಿಭಾವಂತ ಆದರೆ ಗುಂಪುಗಾರಿಕೆಯ ವಿಮರ್ಶಕರ ಆಸ್ಥೆ ಕೆರಳಿಸಿರಲಿಕ್ಕಿಲ್ಲ. ಆದರೆ ಜಿ.ಎಸ್.ಎಸ್. ಹೇಳುತ್ತಾರೆ: "ಸುದೈವದಿಂದ ನಾನು ಇದನ್ನೆಲ್ಲ 'ಸೀರಿಯಸ್ಸಾಗಿ' ತೆಗೆದುಕೊಳ್ಳುವುದಿಲ್ಲ".

ಜಿ.ಎಸ್.ಎಸ್ ಅವರು ಸಹಜವಾಗಿ ಕವಿ. ಅವರ ವೈಯಕ್ತಿಕ ಜೀವನದಲ್ಲಿ ಮತ್ತು ಕಾವ್ಯದಲ್ಲಿ ಈ ಸಹಜತೆ ಬೇರೂರಿರುವುದರಿಂದ ಅವರಿಗೆ ಕವಿಯಾಗಿರುವುದು ಒಂದು ವಿಶೇಷವೆಂದು ತೋರುವುದಿಲ್ಲ. ಈ ಕಾರಣದಿಂದಲೇ ಅವರು 'ಹುಂಕಾರ' ಕವಿ ಅಲ್ಲ. ಜನರನ್ನು ಬಡಿದೆಬ್ಬಿಸುವ ಕ್ರಾಂತಿಗೆ ತುಡಿಯುವ ಧ್ಯೇಯ ಅವರದಲ್ಲ. ಈ ಜನಸಾಮಾನ್ಯರಲ್ಲಿ ತಾವು ಒಬ್ಬರು ಎಂದೊಪ್ಪಿಕೊಂಡು, ತಮ್ಮ ಕಾವ್ಯಪ್ರತಿಭೆಯ ಮೂಲಕ ಜೀವನವನ್ನು ಇಡಿಯಾಗಿ ಕಾಣಲು ಸತತ ಪ್ರಯತ್ನ ಮಾಡುತ್ತಿರುವವರು ಜಿ.ಎಸ್.ಎಸ್.

ಐವತ್ತರ ಹರೆಯವನ್ನು ಈಗಷ್ಟೇ ದಾಟಿರುವ ಜಿ.ಎಸ್.ಎಸ್. ಅವರ ಮುಂದಿನ ಕಾವ್ಯಮಾರ್ಗ ಸದ್ಯಕ್ಕೆ ಅಸ್ಪಷ್ಟ. ಬದುಕಿಗೆ ಹಿಂದೆ ಇದ್ದ ಭಾವುಕತೆ, ಆದರ್ಶಗಳ ಊರುಗೋಲು ಇಂದು ಕವಿಯ ಪ್ರಯತ್ನದ ಮೂಲಕ ಕಳಚಿಬಿದ್ದಿರುವಾಗ ಅವರ ಸದ್ಯದ ನಿಲುವೇನು? ಅದು ನಿಲುವು ಎಂದು ಕರೆಯಲಾಗದ ಒಂದು ನಿಲುವು: ತೆರೆದ ಮನಸ್ಸು, ಬದುಕಿಗೆ ನಿಗದಿತವಾಗಿರುವ ವಿಷಣ್ಣತೆ ಅವರನ್ನು ವ್ಯಾಪಿಸಿದೆ. 'ಈ ವಿಷಣ್ಣ ಸ್ಥಿತಿಯನ್ನು ನಾನು ಒಪ್ಪಿಕೊಳ್ಳುತ್ತೇನೆ' ಎಂದವರು ಹೇಳುತ್ತಾರೆ. ಪುಸ್ತಕದಲ್ಲಿ ನಾಗರಿಕತೆಯ ಬೆಳವಣಿಗೆ ನಮ್ಮ 'ಇಂಡಿವಿಜ್ಯುಯಾಲಿಟಿ'ಯನ್ನು ಕ್ರಮೇಣ ಕಸಿದುಕೊಳ್ಳುತ್ತಿರುವುದು ನಮ್ಮ ಕೈಗಾರಿಕಾ ಸಮಾಜದ ಒಂದು ದುರಂತ ಎಂದು ಜಿ.ಎಸ್.ಎಸ್.

ಭಾವಿಸುತ್ತಾರೆ. ಈ ದುರಂತವನ್ನು ಒಪ್ಪಿಕೊಳ್ಳುವ ಆತ್ಮಸ್ಥೈರ್ಯವೂ ಅವರಿಗಿದೆ. ಬದುಕಿನ ಮೂಲಭೂತ ವಿಷಣ್ಣತೆ ಹಾಗೂ 'ಇಂಡಿವಿಜ್ಯುಯಾಲಿಟಿ'ಯ ನಿರ್ನಾಮ ದುರಂತದ ಮಧ್ಯೆ ಜಿ.ಎಸ್.ಎಸ್. ಎಲ್ಲಕ್ಕಿಂತ ಹೆಚ್ಚಾಗಿ ಮಾನವ ಸಂಬಂಧಗಳಿಗೆ ಮಹತ್ವ ಕೊಡುತ್ತಾರೆ. ಈ ಮಾನವ ಸಂಬಂಧಗಳೇ ಬದುಕಿನ ವಿಷಣ್ಣತೆಗೆ ಉತ್ತರ ನೀಡಲು ಹಾಗೂ 'ಇಂಡಿವಿಜ್ಯುಯಾಲಿಟಿ'ಯ ಪುನಃಸ್ಥಾಪನೆ ಮಾಡಲು ನೆರವಾಗಬಹುದು ಎಂದು ಅವರು ಭಾವಿಸಿದಂತಿದೆ.

ತಮ್ಮ ನಿಲುವು, ದರ್ಶನ ಇವಾವುದರ ಬಗೆಗೂ ಜಿ. ಎಸ್. ಎಸ್. ಅವರು 'ಡಾಗ್ಮೆಟಿಕ್' ಆಗಿಲ್ಲದಿರುವುದು ಅವರ ಸತ್ವಪೂರ್ಣ ವ್ಯಕ್ತಿತ್ವದ ಲಕ್ಷಣವಾಗಿದೆ. ಅವರು ಸ್ನೇಹಶೀಲರು, ತೆರೆದ ಮನಸ್ಸಿನ ಧೀರರು, ತಮ್ಮ ಜೀವನ ದರ್ಶನದ ಬಗ್ಗೆ ಅತ್ಯಂತ ಮುಕ್ತವಾದ ನೋಟ ಇರಿಸಿಕೊಂಡವರು. ಅವರ ಅನೇಕ ಕವನಗಳಲ್ಲಿ ನಮ್ಮ ಜನರ ದೈನಂದಿನ ನೋವು-ನಲಿವುಗಳ ಚಿತ್ರಣವೇ ಹಾಸುಹೊಕ್ಕಾಗಿವೆ. ಅವರ ಕವನಗಳು ಕೆಲವು ವೇಳೆ ತುಂಬ ಸರಳ, ವಾಚ್ಯ ಎಂಬ ಆರೋಪವೂ ಇದೆ. ಆದರೆ ಕ್ಲಿಷ್ಟತೆಯು ಸಲುವಾಗಿಯೇ ಕ್ಲಿಷ್ಟತೆಗೆ ಮಾರುಹೋಗಿ, 'ಜಾಣ' ಅನ್ನಿಸಿಕೊಳ್ಳುವ ಬಯಕೆ ಅವರಿಗಿಲ್ಲ.

ಒಬ್ಬ ಕವಿಯಾಗಿ ಹೇಗೋ ಹಾಗೆ ವ್ಯಕ್ತಿಯಾಗಿ ಜಿ.ಎಸ್. ಎಸ್. ಅವರ ಸಾಧನೆ ಮಹತ್ವದ್ದು. ಪ್ರಸಕ್ತ 'ಬೆಂಗಳೂರು ವಿಶ್ವವಿದ್ಯಾಲಯ'ದ 'ಕನ್ನಡ ಅಧ್ಯಯನ ಕೇಂದ್ರ'ದ ನಿರ್ದೇಶಕರಾಗಿರುವ ಪ್ರೊ. ಶಿವರುದ್ರಪ್ಪನವರು ಜನವನ್ನು ಬಯಸುವವರು, ಜನಕ್ಕೆ ಬೇಕಾದವರು. ಎಲ್ಲ ಪಂಥಗಳನ್ನೂ ಧಿಕ್ಕರಿಸಿ ನಿಲ್ಲುವ, ಸತ್ಯದ ಅನ್ವೇಷಣೆಯಲ್ಲಿ ಆದರ್ಶವನ್ನು ತೊರೆದು ನಿಲ್ಲುವ ಸಾಹಸಿಗಳು. 'ದಾರಿ ನೂರಾರಿವೆ ಬೆಳಕಿನರಮನೆಗೆ ಎಂದು ಬರೆದು ತಮ್ಮ ದಾರಿಯನ್ನು ತಾವೇ ನಿರ್ಮಿಸಿಕೊಳ್ಳಲೆತ್ನಿಸುತ್ತಿರುವ ಅನ್ವೇಷಿಗಳು.

ಜಿ.ಎಸ್.ಎಸ್. ಅವರ ಇದುವರೆಗಿನ ಕಾವ್ಯ ಸಾಧನೆಯ ಹಿನ್ನೆಲೆಯಲ್ಲಿ ಅವರ ಮುಂದಿನ ಕಾವ್ಯಮಾರ್ಗ ತುಂಬ ಕುತೂಹಲಕಾರಿಯಾದುದು. ಬದುಕಿನಲ್ಲಿ ದುರ್ಭರ ಬಡತನವನ್ನು, ಅನೇಕ ಸಂಕಟಗಳನ್ನು ಉಂಡಿರುವ ಅವರು ನಂಜುಗಳನ್ನು ನುಂಗಿಯೂ ಅಜೇಯರಾಗಿದ್ದಾರೆ. ಬಹುಮುಖ ಪ್ರತಿಭೆಯ ಈ ಕವಿಗೆ ಸಮಗ್ರ ಜೀವನ ಪ್ರಯಾಣ ಹಾಗೂ ಕಾವ್ಯಸಾಧನೆ ಇವುಗಳು 'ತನ್ನ ತಾನೇ ಸೃಜಿಸಿ ತನ್ನ ತಾನೇ ಕೊಲುವ ಲೀಲೆಗಳ ಮಣಿಯೊಳಗೆ ಉದ್ಧಾರತಂತು'ವಿನ ವಿಕಾಸ ಪವಾಡ. ಯಾವ ತತ್ತ್ವದ, ತರ್ಕದ, ಅಭಿಪ್ರಾಯದ ಹಂಗಿಲ್ಲದೆ, ಮಾನವ-ನೆಲ, ಮಾನವ-ಕಾಲ-ಮಾನವ-ಮಾನವ ಸಂಬಂಧಗಳ ಸಕಲ ವಿನ್ಯಾಸಗಳನ್ನೂ ಸೂಕ್ಷ್ಮವಾಗಿ ನಿರುಕಿಸುತ್ತ ನಡೆದಿರುವ ಜಿ.ಎಸ್.ಎಸ್. ಅವರ ಬದುಕು ಮತ್ತು ಕಾವ್ಯ ಅವರ ಜೀವನ ಸಂದೇಶವೂ ಆಗಿದೆ ಎನ್ನಬಹುದು. ಇದೀಗ ತಮ್ಮ ಚಿಂತನೆ-ವಿಚಾರಗಳಲ್ಲಿ ಹೊಸ ಆಯಾಮವು ಆವಿರ್ಭವಿಸಿರುವಾಗ ಜಿ.ಎಸ್.ಎಸ್. ಮುಂದೆ ಎಂತಹ ಕಾವ್ಯ ನೀಡಲಿದ್ದಾರೆ ಎಂಬುದು ಆಸಕ್ತಿದಾಯಕ. ತಮ್ಮ ಕಾವ್ಯದ ಬಗ್ಗೆ ಯಾವ ಅತಿರೇಕದ ಭ್ರಮೆಗಳನ್ನೂ ಜಿ.ಎಸ್.ಎಸ್. ಇಟ್ಟುಕೊಂಡವರಲ್ಲ.

ತೂಗಾಡುವ ಕಿರೀಟಗಳಿಗೆ ತಕ್ಕಂತೆ
ತಲೆಯ ಆಕಾರಗಳನ್ನು ಬದಲಾಯಿಸುತ್ತ
ಪರದಾಡುವುದು ನನಗೆ ಅಭ್ಯಾಸವಿಲ್ಲ.
ಹೇಗೋ ನನ್ನ ಪಾಡಿಗೆ ನಾನು ಬದುಕುತ್ತೇನೆ;
ಇದ್ದಷ್ಟು ನೆಲವ ಉತ್ತು ಬಿತ್ತಿ ನೀರೆರೆದು
ಮಲಗಿರುವ ಬೀಜಗಳ ಕಣ್ಣು ತೆರೆಸುತ್ತೇನೆ.
ನಾಳೆ ಈ ಸಸಿಗಳೆಲ್ಲ ವಟವೃಕ್ಷವಾಗಿ
ಸಾವಿರ ಜನಕ್ಕೆ ನೆರಳಾದಾವೆಂಬ ಮಹದಾಸೆ ಇರದಿದ್ದರೂ
ಒಂದೆರಡಾದರೂ ಬೀಜವಾಗುವಂಥ ಹಣ್ಣು
ಬಿಟ್ಟಾವೆಂದು ನಂಬಿ ಕಾಯುತ್ತೇನೆ...

ಎಂಬುದು ಜಿ.ಎಸ್.ಎಸ್. ಅವರ ನಿರಾಡಂಬರವಾದ ನಿಲುವು. 'ಬತ್ತಲಾಗದೆ ಬಯಲು ಸಿಕ್ಕದಿಲ್ಲಿ' ಎಂಬುದು ಅವರಿಗೆ ಗೊತ್ತು. 'ಬಸವಣ್ಣನವರಿಗೆ' ಅವರು ಬರೆದ ಕೆಳಗಿನ ಸಾಲುಗಳು ಅವರ ಕಾವ್ಯಕ್ಕೂ ಅನ್ವಯ:

ಇರಬಹುದು ನಿನಗಿಂತ ದೊಡ್ಡವರು. ಅನುಭಾವ-
ದಲ್ಲಿ ಮೇಲೇರಿ ಬಯಲಾದವರು; ಇರಬಹುದು
ನಿನಗಿಂತಲೂ ದೊಡ್ಡ ತ್ಯಾಗಿಗಳು, ವಿರಾಗಿಗಳು.
ಇರಲಾರರೆಂದೇ ತೋರುತಿದೆ ನಿನ್ನಂತೆ ನಿನ್ನೊಳಗಿ-
ನಂಕುಡೊಂಕುಗಳನ್ನು ಕಂಡುಕೊಂಡವರು; ಇರ-
ಲಾರರೆಂದೇ ತೋರುತಿದೆ ನಿನ್ನಂತೆ ಒಳಗು ಹೊರಗು-
ಗಳನ್ನು ಮುಚ್ಚುಮರೆಯಿಲ್ಲದೆಯೆ ದಿನವೂ ಬಿಚ್ಚಿಟ್ಟು,
ಒಗೆದು ಮಡಿ ಮಾಡಿ, ಇಷ್ಟದೈವದ ಗುಡಿಗೆ ನಡೆ
ಮಡಿಯಾಗಿ ಹಾಸಿದವರು...ಹೀಗಾಗಿ ಮಾತೆಲ್ಲ
ಮುತ್ತಿನ ಹಾರ...ಇಲ್ಲಿ ಸಂದದ್ದು ಅಲ್ಲಿಯೂ ಸಲುವಂತೆ
ಬದುಕಿದವ ನೀನು...

ಮತ್ತು ಬದುಕುತ್ತಿರುವ ಜಿ. ಎಸ್. ಎಸ್. ಅವರ ಕಾವ್ಯಕ್ಕೆ ಬಯಲೇ ಆಲಯ.

(ಲೇಖನದಲ್ಲಿ ಉದ್ಧರಿಸಲಾಗಿರುವ 'ಕಾಡು ಮೂಲಕವೆ ಪಥ ಆಗಸಕ್ಕೆ' ಮತ್ತು 'ಬತ್ತಲಾಗದೆ ಬಯಲು ಸಿಕ್ಕದಿಲ್ಲಿ' ಎಂಬ ಸಾಲುಗಳು ಗೋಪಾಲಕೃಷ್ಣ ಅಡಿಗರ ಪದ್ಯಗಳಿಂದ ಆಯ್ದವು. 'ನಕ್ಷತ್ರಕ್ಕೆ ಕತ್ತಲಲ್ಲೇ ದಾರಿ' ಎಂಬ ಸಾಲು ಈ ಲೇಖನದ ಲೇಖಕನ ಪದ್ಯದ ಒಂದು ಸಾಲು. ಉಳಿದೆಲ್ಲ ಪದ್ಯಗಳ ಸಾಲುಗಳು ಜಿ.ಎಸ್.ಎಸ್. ಅವರ ಕವನಗಳಿಂದ ಆಯ್ದವು.)

## ಡಾ|| ಜಿ.ಎಸ್.ಎಸ್. ಅವರ ಜೀವನದ ಮಹತ್ತ್ವದ ಘಟನೆಗಳು

### ಜನನ

1926 ಫೆಬ್ರವರಿ ಏಳು—ಈಸೂರು, ಶಿವಮೊಗ್ಗಾ ಜಿಲ್ಲೆ
(ತಂದೆ: ಜಿ. ಶಾಂತವೀರಪ್ಪ, ತಾಯಿ: ವೀರಮ್ಮ)

### ವಿದ್ಯಾಭ್ಯಾಸ

1949 ಬಿ.ಎ ಆನರ್ಸ್. ಪ್ರಥಮ ದರ್ಜೆಯಲ್ಲಿ ಪ್ರಥಮ ವರ್ಗ (ಎರಡು ಸುವರ್ಣ ಪದಕಗಳು ಹಾಗೂ ಒಂದು ಬಹುಮಾನ)

1953 ಎಂ.ಎ. ಪ್ರಥಮ ದರ್ಜೆ, ತರಗತಿಗೆ ಪ್ರಥಮ (ಎರಡು ಸುವರ್ಣ ಪದಕಗಳು ಹಾಗೂ ಒಂದು ಬಹುಮಾನ)

1960 ಪಿ.ಎಚ್‌ಡಿ. 'ಸೌಂದರ್ಯ ಸಮೀಕ್ಷೆ' ಎಂಬ ಮಹಾಪ್ರಬಂಧಕ್ಕೆ. ನಿರ್ದೇಶಕರು: ಡಾ. ಕೆ. ವಿ. ಪುಟ್ಟಪ್ಪ.

### ಪ್ರಕಟಣೆಗಳು

(ಅ) ಕವನ ಸಂಗ್ರಹಗಳು

1950 ಸಾಮಗಾನ
1953 ಚೆಲುವು ಒಲವು
1959 ದೇವಶಿಲ್ಪ
1959 ದೀಪದ ಹೆಜ್ಜೆ
1961 ಕಾರ್ತೀಕ
1961 ತೀರ್ಥವಾಣಿ
1963 ಅನಾವರಣ
1966 ತೆರೆದ ದಾರಿ
1972 ಗೋಡೆ
1973 ನನ್ನ ನಿನ್ನ ನಡುವೆ

(ಆ) ಗದ್ಯ ಕೃತಿಗಳು

1956 ಕರ್ಮಯೋಗಿ
1961 ವಿಮರ್ಶೆಯ ಪೂರ್ವ ಪಶ್ಚಿಮ
1965 ಸೌಂದರ್ಯ ಸಮೀಕ್ಷೆ
1966 ಪರಿಶೀಲನ
1969 ಗತಿಬಿಂಬ

1973 ಮಾಸ್ಕೋದಲ್ಲಿ ೨೨ ದಿನ
1975 ಕನ್ನಡ ಸಾಹಿತ್ಯ ಸಮೀಕ್ಷೆ
1976 ಮಹಾಕಾವ್ಯಸ್ವರೂಪ
1976 ನವೋದಯ

## ಅಧ್ಯಾಪನ

1949–1963 ಕನ್ನಡ ಅಧ್ಯಾಪಕ : ಮೈಸೂರು ವಿಶ್ವವಿದ್ಯಾಲಯ
1963–1965 ರೀಡರ್ ಮತ್ತು ಕನ್ನಡ ವಿಭಾಗದ ಮುಖ್ಯಸ್ಥ : ಉಸ್ಮಾನಿಯಾ ವಿಶ್ವವಿದ್ಯಾಲಯದ ಆಹ್ವಾನದ ಮೇರೆಗೆ—ಹೈದರಾಬಾದಿನಲ್ಲಿ
1965–1966 ರೀಡರ್ ಮತ್ತು ವಿಭಾಗದ ಮುಖ್ಯಸ್ಥ, ಮಹಾರಾಜಾ ಕಾಲೇಜು, ಮೈಸೂರು
1966–1970 ರೀಡರ್, ಬೆಂಗಳೂರು ವಿಶ್ವವಿದ್ಯಾಲಯ
1970ರಿಂದ ಪ್ರಾಧ್ಯಾಪಕ ಮತ್ತು ನಿರ್ದೇಶಕರು, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ.

## ಇತರೆ

1963 ತುಮಕೂರಿನಲ್ಲಿ (ಸಿದ್ಧಗಂಗಾ) ನಡೆದ ೪೪ನೆ ಕನ್ನಡ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಯ ಅಧ್ಯಕ್ಷ
1963 ದೆಹಲಿಯ ರಾಷ್ಟ್ರೀಯ ಕವಿಮೇಳದಲ್ಲಿ ಕರ್ನಾಟಕದ ಪ್ರತಿನಿಧಿ
1972 ಸೆಪ್ಟೆಂಬರ್ ಭಾರತ ಹಾಗೂ ಸೋವಿಯೆಟ್ ಸಾಂಸ್ಕೃತಿಕ ವಿನಿಮಯ ಯೋಜನೆಯಲ್ಲಿ, ರಷ್ಯಾದಲ್ಲಿ ಪ್ರವಾಸ
1973 'ಮಾಸ್ಕೋದಲ್ಲಿ ೨೨ ದಿನ' ಎಂಬ ಕೃತಿಗೆ, ಸೋವಿಯೆಟ್ ಲ್ಯಾಂಡ್ ನೆಹರೂ ಪ್ರಶಸ್ತಿ.

# ಈ ಸಂಪುಟದ ಲೇಖಕರು

1 ಚೆನ್ನವೀರ ಕಣವಿ, ನಿರ್ದೇಶಕರು, ಪ್ರಸಾರಾಂಗ ವಿಸ್ತರಣ ಮತ್ತು ಪ್ರಕಟನಾ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೩.

2 ಶ್ರೀ ಶಿವಕುಮಾರಸ್ವಾಮಿಗಳು, ಸಿದ್ಧಗಂಗಾ ಮಠ, ತುಮಕೂರು.

3 ಡಾ|| ಕೆ. ವಿ. ಪುಟ್ಟಪ್ಪ, 'ಉದಯರವಿ', ವಿ. ವಿ. ಮೊಹಲ್ಲಾ, ಮೈಸೂರು ೨.

4 ಡಾ|| ದ. ರಾ. ಬೇಂದ್ರೆ, ೧೩, 'ಶ್ರೀನಾಥ', ಸಾಧನಕೇರಿ, ಧಾರವಾಡ ೮.

5 ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್, ೪೯, ೨ನೇ ಅಡ್ಡರಸ್ತೆ, ಗವೀಪುರಂ ಬಡಾವಣೆ, ಬೆಂಗಳೂರು ೧೯.

6 ಡಾ|| ಆರ್. ಸಿ. ಹಿರೇಮಠ, ಕುಲಪತಿಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೩.

7 ಡಾ|| ವಿ. ಕೃ. ಗೋಕಾಕ್, ೫೨೫, ರಾಜಮಹಲ್ ವಿಲಾಸ ಬಡಾವಣೆ, ಬೆಂಗಳೂರು

8 ಶ್ರೀ ಸ. ಸ. ಮಾಳವಾಡ, 'ಪ್ರಶಾಂತ', ಕಲ್ಯಾಣನಗರ, ಧಾರವಾಡ.

9 ಡಾ|| ಪು. ತಿ. ನರಸಿಂಹಾಚಾರ್, ೭೮, ೨ನೇ ಮೇನ್, ಜಯಲಕ್ಷ್ಮೀಪುರಂ, ಮೈಸೂರು ೧೨.

10 ಶ್ರೀ ಕೆ. ಎಸ್. ನರಸಿಂಹಸ್ವಾಮಿ, ೨೮೭, ೧೭ನೇ ಮೇನ್, ನಾಲ್ಕನೆ 'ಟಿ' ಬ್ಲಾಕ್, ಜಯನಗರ, ಬೆಂಗಳೂರು ೧೧.

11 ಶ್ರೀ ಎಂ. ವಿ. ಸೀತಾರಾಮಯ್ಯ, ೫೪, ೩ನೇ ಅಡ್ಡರಸ್ತೆ, ಗವೀಪುರಂ ಬಡಾವಣೆ, ಬೆಂಗಳೂರು ೧೯.

12 ಶ್ರೀ ವಿ. ಎಂ. ಇನಾಂದಾರ್, ೪೫, ೬ನೇ ಮೇನ್, ಮಲ್ಲೇಶ್ವರಂ, ಬೆಂಗಳೂರು.

13 ಪ್ರೊ. ಕೆ. ಬಿ. ಪ್ರಭುಪ್ರಸಾದ, ಮುಖ್ಯಸ್ಥರು, ಇಂಗ್ಲೀಷ್ ವಿಭಾಗ, ಸರ್ಕಾರಿ ಕಲಾ ಕಾಲೇಜು, ತುಮಕೂರು.

14 ಡಾ|| ನ. ಸುಬ್ರಹ್ಮಣ್ಯಂ, ಮುಖ್ಯಸ್ಥರು, ಕನ್ನಡ ವಿಭಾಗ, ಮಹಾರಾಣಿ ಕಲಾ ಕಾಲೇಜು, ಬೆಂಗಳೂರು.

15 ಶ್ರೀ ಎಚ್. ದೇವೀರಪ್ಪ, ೫೨, 'ಹರಿಹರ', ಕಾರ್ಡ್‌ರೋಡ್, ವಿಜಯನಗರ, ಬೆಂಗಳೂರು ೪೦.

16 ಡಾ|| ಎಂ. ಚಿದಾನಂದಮೂರ್ತಿ, ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಕೇಂದ್ರ, 'ಜ್ಞಾನ ಭಾರತಿ', ಬೆಂಗಳೂರು ೫೬.

17 ಡಾ|| ಎಸ್. ಎಂ. ವೃಷಭೇಂದ್ರಸ್ವಾಮಿ, ನಿರ್ದೇಶಕರು, ಪಠ್ಯಪುಸ್ತಕ ನಿರ್ದೇಶನಾಲಯ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೩.

18 ಶ್ರೀ ಜಿ. ಗುಂಡಣ್ಣ, ಪ್ರಾಧ್ಯಾಪಕರು ಕನ್ನಡ ವಿಭಾಗ, ಮಹಾರಾಣಿ ಕಾಲೇಜು, ಮೈಸೂರು.

19 ಶ್ರೀ ಜಿ. ಬ್ರಹ್ಮಪ್ಪ, ಮಹದೇಶ್ವರ ಸರ್ಕಾರಿ ಕಾಲೇಜು, ಕೊಳ್ಳೇಗಾಲ.

20 ಡಾ॥ ಶಂಕರ ಮೊಕಾಶಿ ಪುಣೇಕರ, ಪ್ರಾಧ್ಯಾಪಕರು, ಇಂಗ್ಲೀಷ್ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೩.

21 ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರಿ, ರೀಡರ್, ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು ೬.

22 ಡಾ॥ ತಂಗಿರಾಲ ವೆಂಕಟಸುಬ್ಬಾರಾವು, ಮುಖ್ಯಸ್ಥರು, ತೆಲುಗು ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ, 'ಜ್ಞಾನಭಾರತಿ', ಬೆಂಗಳೂರು ೫೬.

23 ಡಾ॥ ಎನ್. ವಿ. ವಿಮಲ, ಕನ್ನಡ ಅಧ್ಯಯನ ಕೇಂದ್ರ, 'ಜ್ಞಾನಭಾರತಿ', ಬೆಂಗಳೂರು ೫೬.

24 ಶ್ರೀಮತಿ ಸಿ. ಎಸ್. ವಿಜಯಲಕ್ಷ್ಮಿ, ಅಧ್ಯಾಪಕಿ, ಎಂ.ಇ.ಎಸ್ ಕಾಲೇಜ್, ಮಲ್ಲೇಶ್ವರಂ, ಬೆಂಗಳೂರು.

25 ಶ್ರೀ ಸುಮತೀಂದ್ರ ನಾಡಿಗ, ಕರ್ನಾಟಕ ಪಬ್ಲಿಷಿಂಗ್ ಹೌಸ್, ಗಾಂಧಿಬಜಾರ್, ಬೆಂಗಳೂರು.

26 ಶ್ರೀ ಎಂ. ಎನ್. ವ್ಯಾಸರಾವ್, ಇಂಡಿಯನ್ ಬ್ಯಾಂಕ್, ಕೆಂಪೇಗೌಡ ರಸ್ತೆ, ಬೆಂಗಳೂರು.

27 ಡಾ॥ ರಂ. ಶ್ರೀ. ಮುಗಳಿ, ನಿವೃತ್ತ ಕನ್ನಡ ಪ್ರಾಧ್ಯಾಪಕರು, ೯೫-ಬಿ, ಒಂದನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು ೧೦.

28 ಶ್ರೀ ಎಲ್. ಎಸ್. ಶೇಷಗಿರಿರಾವ್, ಇಂಗ್ಲೀಷ್ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ, 'ಜ್ಞಾನಭಾರತಿ', ಬೆಂಗಳೂರು ೫೬.

29 ಪ್ರೊ. ಕ. ವೆಂ. ರಾಜಗೋಪಾಲ್, ಮುಖ್ಯಸ್ಥರು, ಕನ್ನಡ ವಿಭಾಗ, ಎಂ.ಇ.ಎಸ್ ಕಾಲೇಜ್, ಮಲ್ಲೇಶ್ವರಂ, ಬೆಂಗಳೂರು.

30 ಶ್ರೀ ರಾಘವೇಂದ್ರ ಖಾಸನೀಸ್, ಸಹ ಗ್ರಂಥಪಾಲಕರು, ಬೆಂಗಳೂರು ವಿಶ್ವವಿದ್ಯಾಲಯ ಗ್ರಂಥಾಲಯ, 'ಜ್ಞಾನಭಾರತಿ', ಬೆಂಗಳೂರು ೫೬.

31 ಶ್ರೀಮತಿ ಎಂ. ಕೆ. ವಿಜಯಭಾರತಿ ರಾಂ, ೩೬೩, 'ಪ್ರೇಮಗಂಗಾ', ೧೬ನೇ ಮೇನ್, ನಾಲ್ಕನೆಯ 'ಟಿ' ಬ್ಲಾಕ್, ಜಯನಗರ, ಬೆಂಗಳೂರು ೧೧.

32 ಶ್ರೀ ಎಚ್. ಎಸ್. ಮಾಧವರಾವ್, ಅಧ್ಯಾಪಕರು, ಕನ್ನಡ ವಿಭಾಗ, ನ್ಯಾಷನಲ್ ಕಾಲೇಜ್, ಬಸವನಗುಡಿ, ಬೆಂಗಳೂರು ೪.

33 ಶ್ರೀ ದೊಡ್ಡರಂಗೇಗೌಡ, ಅಧ್ಯಾಪಕರು, ಎಸ್.ಎಲ್.ಎನ್. ಕಾಲೇಜು, ಕೋಟೆ, ಬೆಂಗಳೂರು.

34 ಡಾ॥ ಪ್ರಭುಶಂಕರ, ಕನ್ನಡ ಪ್ರಾಧ್ಯಾಪಕರು, ಬನಾರಸ್ ಹಿಂದೂ ವಿಶ್ವವಿದ್ಯಾಲಯ, ಬನಾರಸ್.

35 ಶ್ರೀ ಎಚ್. ವಿ. ಶ್ರೀನಿವಾಸಶರ್ಮ, ಅಧ್ಯಾಪಕರು, ಕನ್ನಡ ವಿಭಾಗ, ಎಂ.ಇ.ಎಸ್. ಕಾಲೇಜು, ಮಲ್ಲೇಶ್ವರಂ, ಬೆಂಗಳೂರು.

36 ಶ್ರೀ ವಸಂತ ಕುಷ್ಟಗಿ, ಧಾರವಾಡ.

37 ಶ್ರೀ ಜಿ. ಎಸ್. ಕಾಪ್ಸೆ, ಅಧ್ಯಾಪಕರು, ಕನ್ನಡ ವಿಭಾಗ, ಕರ್ನಾಟಕ ಕಾಲೇಜು, ಧಾರವಾಡ.

38 ಶ್ರೀ ಆರ್. ಜಿ. ಕುಲಕರ್ಣಿ, ಮುಖ್ಯಸ್ಥರು, ಕನ್ನಡ ವಿಭಾಗ, ಶ್ರೀ ಸತ್ಯಸಾಯಿ ಕಾಲೇಜು, ಕಾಡುಗೋಡಿ ಪೋಸ್ಟ್, ಬೆಂಗಳೂರು ಜಿಲ್ಲೆ.

39 ಶ್ರೀ ಟಿ. ಎಸ್. ನಾಗರಾಜಶೆಟ್ಟಿ, ಅಧ್ಯಾಪಕರು, ಕನ್ನಡ ವಿಭಾಗ, ಕಲ್ಪತರು ಕಾಲೇಜು, ತಿಪಟೂರು.

40 ಶ್ರೀಮತಿ ಎನ್. ವಿ. ಭಾಗ್ಯಲಕ್ಷ್ಮಿ, ಕನ್ನಡ ಅಭಿವೃದ್ಧಿ ನಿರ್ದೇಶನಾಲಯ, ನೃಪತುಂಗ ರಸ್ತೆ, ಬೆಂಗಳೂರು.

41 ಡಾ|| ಎಸ್. ಎಲ್. ಭೈರಪ್ಪ, ತತ್ವಶಾಸ್ತ್ರದ ಉಪಪ್ರಾಧ್ಯಾಪಕರು, ರೀಜನಲ್ ಕಾಲೇಜ್ ಆಫ್ ಎಜುಕೇಶನ್, ಮೈಸೂರು ೬.

42 ಡಾ|| ಕೆ. ಕೃಷ್ಣಮೂರ್ತಿ, ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು, ಸಂಸ್ಕೃತ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೩.

43 ಶ್ರೀ ಕೆ. ವಿ. ನಾರಾಯಣ, ಅಧ್ಯಾಪಕರು, ಕನ್ನಡ ಅಧ್ಯಯನ ಕೇಂದ್ರ, 'ಜ್ಞಾನಭಾರತಿ' ಬೆಂಗಳೂರು ೫೬.

44 ಡಾ|| ಪಿ. ವಿ. ನಾರಾಯಣ, ಮುಖ್ಯಸ್ಥರು ಕನ್ನಡ ವಿಭಾಗ, ವಿಜಯಾ ಕಾಲೇಜು, ಬೆಂಗಳೂರು.

45 ಶ್ರೀ ಬಸವರಾಜ ಕಲ್ಗುಡಿ, ಸಂಶೋಧನ ಸಹಾಯಕರು, ಕನ್ನಡ ಅಧ್ಯಯನ ಕೇಂದ್ರ, 'ಜ್ಞಾನಭಾರತಿ', ಬೆಂಗಳೂರು ೫೬.

46 ಡಾ|| ಶ್ರೀರಂಗ, ೨೮, ೬ನೇ ಮೇನ್, ಮಲ್ಲೇಶ್ವರಂ, ಬೆಂಗಳೂರು ೮.

47 ಶ್ರೀ ಕಿ.ರಂ. ನಾಗರಾಜ, ಅಧ್ಯಾಪಕರು, ಕನ್ನಡ ಅಧ್ಯಯನ ಕೇಂದ್ರ, 'ಜ್ಞಾನಭಾರತಿ', ಬೆಂಗಳೂರು ೫೬.

48 ಶ್ರೀಮತಿ ಉಷಾಕಿರಣ್, ಕನ್ನಡ ಸಂಶೋಧನ ಸಹಾಯಕರು, ಕೃಷಿ ವಿಶ್ವವಿದ್ಯಾನಿಲಯ, ಹೆಬ್ಬಾಳ್, ಬೆಂಗಳೂರು.

49 ಶ್ರೀ ಜಿ. ಎಚ್. ನಾಯಕ್, ಅಧ್ಯಾಪಕರು, ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು ೬.

50 ಶ್ರೀ ಸಿ. ವೀರಣ್ಣ, ಅಧ್ಯಾಪಕರು, ಕನ್ನಡ ಅಧ್ಯಯನ ಕೇಂದ್ರ, 'ಜ್ಞಾನಭಾರತಿ', ಬೆಂಗಳೂರು ೫೬.

51 ಶ್ರೀ ಹು. ಕಾ. ಜಯದೇವ್, ರೀಡರ್, ಕನ್ನಡ ಅಧ್ಯಯನ ಕೇಂದ್ರ, 'ಜ್ಞಾನಭಾರತಿ', ಬೆಂಗಳೂರು ೫೬.

52 ಡಾ|| ಎಂ. ಎಂ. ಕಲ್ಬುರ್ಗಿ, ರೀಡರ್, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವ ವಿದ್ಯಾಲಯ ಧಾರವಾಡ ೩.

53 ಶ್ರೀ ಎನ್. ಬಸವಾರಾಧ್ಯ, ಉಪನಿರ್ದೇಶಕರು, ಸಂಪಾದನಾ ವಿಭಾಗ, ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು ೬.

54 ಶ್ರೀ ವೇಣುಗೋಪಾಲ ಸೊರಬ, ಮುಖ್ಯಸ್ಥರು, ಇಂಗ್ಲಿಷ್ ವಿಭಾಗ, ರೂರಲ್ ಕಾಲೇಜು, ಕನಕಪುರ, ಬೆಂಗಳೂರು ಜಿಲ್ಲೆ.

55 ಶ್ರೀ ಎಚ್. ಎಸ್. ರಾಘವೇಂದ್ರರಾವ್, ಕನ್ನಡ ಅಧ್ಯಾಪಕರು, ನ್ಯಾಷನಲ್ ಕಾಲೇಜು, ಜಯನಗರ, ಬೆಂಗಳೂರು.

56 ಶ್ರೀ ಆರ್. ರಾಚಪ್ಪ, ರೀಡರ್ ಮತ್ತು ಕನ್ನಡ ವಿಭಾಗದ ಮುಖ್ಯಸ್ಥರು, ಶ್ರೀ ಜಗದ್ಗುರು ರೇಣುಕಾಚಾರ್ಯ ಕಾಲೇಜು, ಬೆಂಗಳೂರು.

57 ಶ್ರೀ ಸಿ. ಯು. ಮಂಜುನಾಥ್, ಕನ್ನಡ ಅಧ್ಯಾಪಕರು, ಶ್ರೀ ಜಗದ್ಗುರು ರೇಣುಕಾಚಾರ್ಯ ಕಾಲೇಜು, ಬೆಂಗಳೂರು.

58 ಶ್ರೀ ಕಾಳೇಗೌಡ ನಾಗವಾರ, ಕನ್ನಡ ಅಧ್ಯಯನ ಕೇಂದ್ರ, 'ಜ್ಞಾನಭಾರತಿ', ಬೆಂಗಳೂರು ೫೬.

59 ಶ್ರೀ ಕೃಷ್ಣ ಪರಮೇಶ್ವರ ಭಟ್ಟ, ಅಧ್ಯಾಪಕರು, ಕನ್ನಡ ಅಧ್ಯಯನ ಕೇಂದ್ರ, 'ಜ್ಞಾನ ಭಾರತಿ', ಬೆಂಗಳೂರು ೫೬.

60 ಶ್ರೀ ಡಿ. ಆರ್. ನಾಗರಾಜ್, ಸಂಶೋಧನ ಸಹಾಯಕರು, ಕನ್ನಡ ಅಧ್ಯಯನ ಕೇಂದ್ರ, 'ಜ್ಞಾನಭಾರತಿ', ಬೆಂಗಳೂರು ೫೬.

61 ಶ್ರೀ ಬರಗೂರು ರಾಮಚಂದ್ರಪ್ಪ, ಅಧ್ಯಾಪಕರು, ಕನ್ನಡ ಅಧ್ಯಯನ ಕೇಂದ್ರ, 'ಜ್ಞಾನ ಭಾರತಿ', ಬೆಂಗಳೂರು ೫೬.

62 ಶ್ರೀ ಅ. ರಾ. ಮಿತ್ರ, ರೀಡರ್ ಹಾಗೂ ಕನ್ನಡ ವಿಭಾಗದ ಮುಖ್ಯಸ್ಥರು, ಸರ್ಕಾರಿ ಕಾಲೇಜು, ಮಡಕೇರಿ.

63 ರಾಮದಾಸ್, ಕನ್ನಡ ಅಧ್ಯಾಪಕರು, ಪೂರ್ಣಪ್ರಜ್ಞ ಕಾಲೇಜು, ಉಡುಪಿ.

64 ಶ್ರೀ ಡಿ. ರಘುನಾಥರಾವ್, ಕನ್ನಡ ಅಧ್ಯಾಪಕರು, ವಿಜಯಾ ಕಾಲೇಜು, ಮುಲ್ಕಿ (ದ.ಕ).

65 ಶ್ರೀ ಸೋಮಶೇಖರ, ಇಮ್ರಾಪೂರ, ಕನ್ನಡ ಅಧ್ಯಾಪಕರು, ಕನ್ನಡ ಅಧ್ಯಯನ ಪೀಠ, ಧಾರವಾಡ ೩.

66 ಶ್ರೀ ಡಿ. ಲಿಂಗಯ್ಯ, ಕನ್ನಡ ವಿಭಾಗದ ಮುಖ್ಯಸ್ಥರು, ವಿಶ್ವೇಶ್ವರಪುರಂ ಕಾಲೇಜು, ಬೆಂಗಳೂರು.

67 ಶ್ರೀ ಟಿ. ಶ್ರೀನಿವಾಸರಾಜು, ಕನ್ನಡ ವಿಭಾಗದ ಮುಖ್ಯಸ್ಥರು, ಕ್ರೈಸ್ಟ್ ಕಾಲೇಜ್, ಬೆಂಗಳೂರು.

68 ಶ್ರೀ ಎಚ್. ಎಸ್. ವೆಂಕಟೇಶಮೂರ್ತಿ, ಕನ್ನಡ ವಿಭಾಗ, ಸೈಂಟ್ ಜೋಸೆಫ್ ಕಾಲೇಜ್, ಬೆಂಗಳೂರು.

69 ಶ್ರೀ ಟಿ. ಎಸ್. ದಕ್ಷಿಣಾಮೂರ್ತಿ, ಕನ್ನಡ ಅಧ್ಯಾಪಕರು, ಸರಕಾರಿ ಜೂನಿಯರ್ ಕಾಲೇಜ್, ತುಮಕೂರು.

70 ಡಾ. ಎನ್. ವಿಜಯಲಕ್ಷ್ಮಿ, ೧೭, (ಎಂ.ಎಚ್.ಬಿ) ಮಹಾದೇವಪುರ ರಸ್ತೆ, ಮೈಸೂರು ೭.

71 ಪ್ರೊ. ಬಿ. ಸಿ. ಜವಳಿ, ಕನ್ನಡ ಅಧ್ಯಯನ ಪೀಠ, ಧಾರವಾಡ ೩.

72 ಡಾ. ಎಸ್. ವಿದ್ಯಾಶಂಕರ, ಅಧ್ಯಾಪಕರು, ಕನ್ನಡ ಅಧ್ಯಯನ ಕೇಂದ್ರ, 'ಜ್ಞಾನಭಾರತಿ', ಬೆಂಗಳೂರು ೫೬.

73 ಶ್ರೀಮತಿ ಆರ್. ಪೂರ್ಣಿಮಾ, ೨೭೬, V ಮೇಯಿನ್, ಎನ್. ಆರ್. ಕಾಲೋನಿ, ಬೆಂಗಳೂರು ೧೯.

74 ರಾ. ಶೇಷಶಾಸ್ತ್ರಿ, ಎಲ್. ೪೫, ಟ್ಯಾಂಕ್ ಬಂಡ್ ರಸ್ತೆ, ಕಲಾಸಿಪಾಳ್ಯಂ, ಬೆಂಗಳೂರು ೨.

75 ಡಾ|| ವಿ. ಶಿವಾನಂದ, ಅಧ್ಯಾಪಕರು, ಕನ್ನಡ ವಿಭಾಗ, ಸ್ನಾತಕೋತ್ತರ ಕೇಂದ್ರ, ಗುಲ್ಬರ್ಗ.

76 ಶ್ರೀ ಎಸ್. ಶಿವಣ್ಣ, ಸಂಪಾದಕರು, ಹಸ್ತಪ್ರತಿ ವಿಭಾಗ, ಕನ್ನಡ ಅಧ್ಯಯನ ಕೇಂದ್ರ, 'ಜ್ಞಾನಭಾರತಿ', ಬೆಂಗಳೂರು ೫೬.

77 ಶ್ರೀ ಎಸ್. ಉಮಾಪತಿ, ಕನ್ನಡ ಅಧ್ಯಾಪಕರು, ಎ. ಆರ್. ಜಿ ಕಾಲೇಜು, ದಾವಣಗೆರೆ ೪.

78 ಶ್ರೀ ಜಿ. ಎಸ್. ಭಟ್, ಸಂಶೋಧನ ಸಹಾಯಕರು, ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು.

79 ಶ್ರೀ ಶ್ರೀನಿವಾಸ್, ಸಂಪಾದಕರು 'ಶೂದ್ರ' ಪತ್ರಿಕೆ, ಬೆಂಗಳೂರು.

80 ಶ್ರೀ ಪಿ. ಲಂಕೇಶ್, ಇಂಗ್ಲಿಷ್ ವಿಭಾಗ, 'ಜ್ಞಾನಭಾರತಿ', ಬೆಂಗಳೂರು ೫೬.

81 ಶ್ರೀ ಜಯಸುದರ್ಶನ, ಬೆಂಗಳೂರು.

"ಜಡೆ" ಕವನದ ಉತ್ತರಾರ್ಧ
ಕವಿ ಜಿ. ಎಸ್. ಎಸ್. ರವರ
ಸ್ವಹಸ್ತಾಕ್ಷರದಲ್ಲಿ

